# ಶ್ರೀ ಹರಿಕಥಾಮೃತಸಾರ

ಪದ್ಮನಾಭದಾಸರಿಂದ ರಚಿತವಾದ

ಭಾವಪ್ರಕಾಶಿಕೆ ಎಂಬ ವ್ಯಾಖ್ಯಾನ ಸಹಿತ.



ಎರಡನೆಯ ಭಾಗ.

ಪ್ರಕಾಶಕರು,

ಎಂ ಮೂರ್ತಿರಾವ್,

" ಶ್ರೀಹರಿಕೃಪಾ " ಮಲ್ಲೇಶ್ವರ, ಬೆಂಗಳೂರು.

[ ಬೆಲೆ. ರೂ. ೪ ೦ ೦.

|| ಶ್ರೀ ||

# ಹರಿಕಥಾಮೃತಸಾರ

## ದತ್ತ ಸ್ವಾತಂತ್ರ್ಯ ಯೆಂಬ ೧೬ ನೆಯ ಸಂಧಿ ಪ್ರಾರಂಭ

ಈ ಸಂಧಿಯಲ್ಲಿ ಜೀವನಿಗೆ ಕರ್ತೃತ್ವವೇ ಇಲ್ಲದಿದ್ದರೆ ಪುಣ್ಯಪಾಪ ಲೇಪವೂ ಇಲ್ಲದಿರಬೇಕಾಗಿದ್ದಿತು. ಕರ್ತೃತ್ವವಿದ್ದರೆ ಸರ್ವ ಕರ್ತೃ ವಿಷ್ಣು ಎಂಬ ವಾಕ್ಯಕ್ಕೆ ವಿರೋಧ ಬರುವುದು ಈ ವಿಧ ಸಂಶಯುವನ್ನು ಪರಿಹಾರ ಮಾಡುವದಕ್ಕಾಗಿ ಪರಮಾತ್ಮನು ಜೀವನಿಗೆ ಕೊಟ್ಟ ಅಲ್ಪವಾದ ದತ್ತ ಸ್ವಾತಂತ್ರ್ಯದಿಂದ "ಜೀವೋಪಿ ಕರ್ತಾ" ಎಂದು ಬ್ರಹ್ಮಸೂತ್ರ ಭಾಷ್ಯದಲ್ಲಿ ಹೇಳಿದಂತೆ ಪರಾಧೀನ ಕರ್ತೃತ್ವವು ಜೀವನಿಗೆ ಉಂಟೆಂದು ಸೂಚಿಸುತ್ತಾ ತತ್ಸಂಬಂಧವಾದ ಕೆಲವು ತತ್ವವಿಚಾರಗಳನ್ನು ಹೇಳುತ್ತಾರೆ

**ಹರಿಕಥಾಮೃತಸಾರಗುರುಗಳ ||ಪ||**

**ಕಾರುಣಿಕ ಹರಿ ತನ್ನೊಳಿಪ್ಪಾ**
**ಪಾರ ಸ್ವಾತಂತ್ರ್ಯಯ ಗುಣವಿ ನಾ**
**ನೂರು ತೆಗೆದು ಸಪಾದ ಆರೊಂದಧಿಕ ಅರವತ್ತು ||**
**ನಾರಿಗಿತ್ತ ದ್ವಿಷೋಡಶಾಧಿಕ**
**ನೂರು ಪಾದತ್ರಯುವ ತನ್ನ ಶ**
**ರೀರದೊಳಗೀಪರಿ ವಿಭಾಗವಮಾಡಿ ತ್ರಿಪದಾಹ್ವ ||**

ಪದ್ಯಾರ್ಥ.—ಕಾರುಣಿಕ= ಕರುಣಾಳುವಾದ ಹರಿ= ಶ್ರಿ ಪರಮಾತ್ಮನು, ತನ್ನೊಳಿಪ್ಪ= ತನ್ನೊಳಗಿರುವ ಅಪಾರ ಸ್ವಾತಂತ್ರ್ಯಗುಣದಿ= ಅಪರಿಮಿತವಾದ ಸ್ವಾತಂತ್ರ್ಯ ಗುಣಗಳಲ್ಲಿ, ನಾನೂರು ತೆಗೆದು= ೪೦೦ ರನ್ನು ತೆಗೆದು ಸಪಾದ ಆರೊಂದಧಿಕ ಅರವತ್ತು= ಪಾದ= ಕಾಲು, ಆರೊಂದಧಿಕ= ೬+೧= ೭, ಅರವತ್ತು= ೬೦, ಏಳೂಕಾಲು ಹೆಚ್ಚಾದ ಅರವತ್ತು ಎಂದರೆ ೬೭| ಭಾಗಗಳನ್ನು. ನಾರಿಗಿತ್ತ= ತನ್ನ ಪತ್ನಿಯಾದ ಲಕ್ಷ್ಮಿದೇವಿಯುರಿಗೆ ಕೊಟ್ಟನು ದ್ವಿಶೋಡಶಾಧಿಕ ನೂರುಪಾದತ್ರಯ ೨×೧೬= ೩೨ಹೆಚ್ಚಾದ ನೂರು ಮತ್ತು ಪಾದತ್ರಯ= (|||)ಮುಕ್ಕಾಲು

ಅಂದರೆ ೧೩೨||| ತನ್ನ ಶರೀರದೊಳಗೆ= ಲೋಕದಲ್ಲಿ ಕರ್ಮಗಳನ್ನು ಮಾಡು ಸುವುದಕ್ಕೆ ಸಾಕಾಗುವಷ್ಟು ತನ್ನ ದೇಹದೊಳಗೆ ಇಟ್ಟುಕೊಂಡನು. ತ್ರಿಪದಾಹ್ವಾ= ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರು ಅಂಶಗಳಿಂದ ಜಗತ್ತನ್ನು ವ್ಯಾಪಿಸಿಕೊಂಡಿರುವುದರಿಂದ ತ್ರಿಪಾದನಾಮಕನಾದ ಶ್ರೀ ಹರಿಯು, ಈ ಪರಿ= ಮೇಲೆ ಹೇಳಿದ ರೀತಿಯಾಗಿ ವಿಭಾಗವ ಮಾಡಿದ

ತಾತ್ಪರ್ಯ : - ಮಹಾ ಕರುಣಾಳುವಾದ ಶ್ರೀ ಪರಮಾತ್ಮನು ತನ್ನೊಳಗಿರುವ ಅಪರಿಮಿತವಾದ ಸ್ವಾತಂತ್ರ್ಯ ಗುಣಗಳಲ್ಲಿ, ಸೃಷ್ಟ್ಯಾದಿ ಜಗತ್ಕಾರ್ಯವನ್ನು ಮಾಡುವುದಕ್ಕಾಗಿ ೪೦೦ ಭಾಗೆ ಸ್ವಾತಂತ್ರ್ಯವನ್ನು ಮಾತ್ರ ಬೇರೆ ತೆಗೆದು ಅದರಲ್ಲಿ (೬೭|) ಅರವತ್ತೇಳೂಕಾಲು ಭಾಗಗಳನ್ನು ಲಕ್ಷ್ಮೀದೇವಿಯರಿಗಿತ್ತು (೧೩೨|||) ನೂರಮೂವತ್ತೆರಡೂಮುಕ್ಕಾಲು ಭಾಗವನ್ನು ತಾನು ಇಟ್ಟುಕೊಂಡನು. ಈ ಪ್ರಕಾರ ೪೦೦ ಭಾಗಗಳಲ್ಲಿ ೨೦೦ ಭಾಗಗಳನ್ನು ಲಕ್ಷ್ಮೀನಾರಾಯಣರು ಇಟ್ಟುಕೊಂಡು ಉಳಿದ ೨೦೦ ಭಾಗಗಳನ್ನು ಬ್ರಹ್ಮದೇವರು ಮೊದಲು ಸಕಲ ಪ್ರಾಣಿಗಳಿಗೂ ಹಂಚಿರುವನು. ಒಬ್ಬ ಮನುಷ್ಯನು ಅತ್ಯಲ್ಪವಾದ ಒಂದು ಕೆಲಸವನ್ನು ಮಾಡಬೇಕಾದರೆ ತನ್ನಲ್ಲಿರುವ ಯಾವಚ್ಛಕ್ತಿಯನ್ನೂ ಉಪಯೋಗಿಸಬೇಕಾಗುವುದಿಲ್ಲ. ಯೋಗ್ಯತೆ ಮೀರಿದ ಕೆಲಸವನ್ನು ಮಾಡಬೇಕಾದರೆ ಮಾತ್ರ ತನಗಿರುವ ಎಲ್ಲಾ ಶಕ್ತಿಯನ್ನೂ ಉಪಯೋಗಿಸಬೇಕಾಗುವುದು. ಹಾಗೆ ಶ್ರೀ ಪರಮಾತ್ಮನಿಗೆ ಈ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ನಿಯಮನ ಜ್ಞಾನಾಜ್ಞಾನಾದಿ ಅಷ್ಟ ಕರ್ತೃತ್ವ ಕಾರ್ಯವನ್ನು ತಾನು ಮಾಡಬೇಕಾದರೆ ಅದೊಂದು ದೊಡ್ಡ ಕಾರ್ಯವಲ್ಲ, ಕೇವಲ ಅಲ್ಪಕಾರ್ಯವು ಇಷ್ಟು ಕಾರ್ಯ ಮಾಡುವದಕ್ಕೋಸ್ಕರ ತನ್ನ ಶಕ್ತಿಯಲ್ಲಿ ಎಲ್ಲಾ ಬೇಕಾಗುವುದಿಲ್ಲ. ತನಗಿರುವ ಸ್ವಾತಂತ್ರ್ಯಾದಿ ಗುಣಗಳು ಅಪರಿಮಿತ. ಈ ಕರ್ಮಗಳಿಗೆ ಬೇಕಾಗುವುದು ಸ್ವಲ್ಪವಾದ ಪರಿಮಿತಿ ಉಳ್ಳ ಸ್ವಾತಂತ್ರ್ಯ. ಆದ್ದರಿಂದ ಅಪರಿಮಿತ ಸ್ವಾತಂತ್ರ್ಯ ಗುಣಗಳ ಪೈಕಿ ೪೦೦ ಭಾಗವಿದ್ದರೆ ಎಲ್ಲಾ ಜಗದ್ವ್ಯಾಪಾರಗಳಿಗೂ ಸಾಕಾಗುವದೆಂದು ನಿಶ್ಚಯಿಸಿ ಅಷ್ಟೇ ಭಾಗಗಳನ್ನು ತೆಗೆದು ಅವುಗಳಲ್ಲಿ ಲಕ್ಷ್ಮೀಸಮೇತ ತಾನು ಮಾಡಬೇಕಾದ ಕಾರ್ಯಗಳಿಗೆ ೨೦೦ ಭಾಗಗಳನ್ನು ಇಟ್ಟುಕೊಂಡನು ಸಾತ್ವಿಕಾದಿ ಜೀವರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಗತಿ ಹೊಂದಬೇಕಾದರೆ ಅವರವರು

ಯತ್ಕಿಂಚಿತ್ತಾದರೂ ಕರ್ಮಗಳನ್ನು ಮಾಡಬೇಕು. ಮತ್ತು ಅವರು ಆ ಫಲಗಳನ್ನನುಭವಿಸಬೇಕೆಂದು ನಿಶ್ಚಯಿಸಿ ಅದರಂತೆಯೆ ತನ್ನ ಪ್ರತಿಬಿಂಬರಾದ ಬ್ರಹ್ಮಾದಿ ಸಕಲ ಚೇತನರಿಗೂ ೨೦೦ ಭಾಗಗಳನ್ನು ಕೊಟ್ಟನು ಎಂದು ತಾತ್ಪರ್ಯ. ತ್ರಿಪದಾಹ್ವ= ಎಂಬಲ್ಲಿ ಪಾದ ಶಬ್ದಕ್ಕೆ ಅಂಶ ಎಂದು ಅರ್ಥವನ್ನು ಭಾಗವತ ದ್ವಿತೀಯಸ್ಕಂಧದ ವ್ಯಾಖ್ಯಾನದಲ್ಲಿ ಮಾಡಿರುವರು "ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಎಂಬ ಪುರುಷಸೂಕ್ತ ವಾಕ್ಯದಿಂದ ಈ ಪ್ರಪಂಚ ಆದ್ಯಂತವೂ ತ್ರಿಪಾದನಾಮಕ ಪರಮಾತ್ಮನಿಗೆ ಒಂದು ಪಾದವು ಅಂದರೆ ಪರಮಾತ್ಮನ ಒಂದಂಶವೆಂದರ್ಥ. "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ" ಎಂಬ ಗೀತಾವಾಕ್ಯದಂತೆ ಅಂಶ ಎಂದರೆ ಪ್ರತಿಬಿಂಬನೆಂದರ್ಥ ಅವಶಿಷ್ಟ ಎರಡು ಪಾದಗಳು. ಶ್ವೇತದ್ವೀಪ, ಅನಂತಾಸನ ವೈಕುಂಠಾದಿಗತ ನಾರಾಯಣಾದಿ ರೂಪಗಳು, ರಾಮಕೃಷ್ಣಾದ್ಯವತಾರರೂಪಗಳು ಇವುಗಳಿಗೆ ಸ್ವಾಂಶವೆಂದು ಹೆಸರು ನರ, ಪ್ರದ್ಯುಮ್ನ, ಸಾಂಬ, ಲಕ್ಷ್ಮಣ ಮೊದಲಾದವರಲ್ಲಿರುವ ಅಂಶರೂಪಕ್ಕೆ ಭಿನ್ನಾಂಶವೆಂದು ಹೆಸರು ಈ ಪ್ರಕಾರ ಮೂರು ಅಂಶರೂಪಗಳಿಂದ ಜಗತ್ಕಾರ್ಯಗಳನ್ನು ಮಾಡಿಸುವುದಕ್ಕೆ ೪೦೦ ಸ್ವಾತಂತ್ರ್ಯ ಭಾಗಗಳಿಗಿಂತಲೂ ಹೆಚ್ಚು ಬೇಕಾಗುವುದಿಲ್ಲ ಆದ್ದರಿಂದ ಅಷ್ಟನ್ನು ಮಾತ್ರ ತೆಗೆದುಕೊಂಡನೆಂಬ ಭಾವ ||೮||

ಅವತಾರಿಕೆ :—ಉಳಿದ ೨೦೦ ಭಾಗಗಳಲ್ಲಿ ಯಾವಯಾವ ಜೀವರಿಗೆ ಎಷ್ಟೆಷ್ಟು ಕೊಟ್ಟಿರುವನೆಂಬುವುದನ್ನು ಹೇಳುತ್ತಾರೆ—

ಸತ್ಯಲೋಕಾಧಿಪನೊಳಗೆ ಐ
ವತ್ತೆರಡು ಪವಮಾನನೊಳು ನಾ
ಲ್ವತ್ತು ವೇಂಟಧಿಕ ಶಿವನೊಳಗಿಟ್ಟ ಇಪ್ಪತ್ತು ||
ಚಿತ್ತಜೇಂದ್ರರೊಳೈದಧಿಕ ದಶ
ತತ್ವಾಭಿಮಾನಿಗಳೆನಿಪಸುರರೊಳು
ಹತ್ತು ಈರೈದಖಿಳ ಜೀವರೊಳಿಟ್ಟ ಸಿರಿವಲ್ಲ್ಯಾ ||

ಪದ್ಯಾರ್ಥ :—ಸತ್ಯಲೋಕಾಧಿಪನೊಳಗೆ= ಬ್ರಹ್ಮದೇವರಲ್ಲಿ, ಐವತ್ತೆರಡು= ೫೨, ಪವಮಾನನೊಳು= ವಾಯುದೇವರೊಳು, ನಾಲ್ವತ್ತು,

ಮೇಲೆಂಟಧಿಕ= ೪೮ ಭಾಗಗಳು, ಶಿವನೊಳು= ರುದ್ರದೇವರೊಳಗೆ, ಇಪ್ಪತ್ತು ಭಾಗಗಳು, ಚಿತ್ರಜೇಂದ್ರರೊಳು=ಮನ್ಮಥ ಮತ್ತು ಇಂದ್ರ ರೊಳಗೆ, ಐಗಧಿಕ ದಶ=೧೫ ಭಾಗಗಳು, ತತ್ವಾಭಿಮಾನಿಗಳೆನಿಪ ಸುರ ರೊಳು=ತತ್ವಾಭಿಮಾನಿ ದೇವತೆಗಳೊಳಗೆ, ೧೦ ಭಾಗಗಳು, ನಿರವದ್ಯ= ನಿರ್ದುಷ್ಟನಾದ ಶ್ರೀಹರಿಯು,ಅಖಿಳ ಜೀವರೊಳು=ಎಲ್ಲಾ ಪ್ರಾಣಿಗಳಲ್ಲೂ ಈರೈದು=(೨×೫) ೧೦ ಭಾಗಗಳು, ಈ ಪ್ರಕಾರ ಭಾಗಗಳನ್ನು ಮಾಡಿ, ಇಟ್ಟ= ಇಟ್ಟಿರುವನು.

ತಾತ್ಪರ್ಯ :— ಬ್ರಹ್ಮದೇವರಲ್ಲಿ ೫೨ ಭಾಗಗಳನ್ನು. ವಾಯುದೇವ ರಲ್ಲಿ ೪೮ ಭಾಗಗಳನ್ನು ರುದ್ರದೇವರಲ್ಲಿ ೨೦ಭಾಗಗಳನ್ನು ಇಂದ್ರ ಮತ್ತು ಮನ್ಮಥರಲ್ಲಿ ೧೫. ತತ್ವಾಭಿಮಾನಿ ದೇವತೆಗಳಲ್ಲಿ ೧೦ ಭಾಗಗಳನ್ನು, ಮಿಕ್ಕ ಎಲ್ಲಾ ಜೀವರೊಳಗೆ ೧೦ ಭಾಗಗಳನ್ನು ಇಟ್ಟನು. ||೨||

**ಕಲಿ ಮೊದಲುಗೊಂಡಖಿಳ ದಾನವ**
**ರೊಳಗೆ ನಾಲ್ವತ್ತೈದು ಈಪರಿ**
**ತಿಳಿದುಪಾಸನೆ ಮಾಡು ಮರಿಯದೆ ಪರಮ ಭಕುತಿಯಲಿ ||**
**ಇಳೆಯೊಳಗೆ ಸಂಚರಿಸು ಲಕುಮಿ**
**ನಿಲಯನಾಳಾನೆಂದು ಸರ್ವ ಸ್ಥಳ**
**ಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ||**

ಪದ್ಯಾರ್ಥ :-- ಕಲಿ ಮೊದಲುಗೊಂಡು, ಅಖಿಳ ದಾನವರೊಳಗೆ= ಎಲ್ಲಾ ದೈತ್ಯರಲ್ಲಿ, ನಾಲ್ವತ್ತೈದು=೪೫ ಭಾಗಗಳನ್ನು ಇಟ್ಟನು: ಈ ಪರಿ ತಿಳಿದು, ಮರಿಯದೆ, ಪರಮ ಭಕುತಿಯಲಿ, ಉಪಾಸನೆ ಮಾಡು= ಶ್ರೀ ಪರಮಾತ್ಮನನ್ನು ಚಿಂತಿಸು, ಇಳೆಯೊಳಗೆ=ಭೂಮಿಯಲ್ಲಿ, ಲಕುಮಿ ನಿಲಯನ=ಶ್ರೀನಿವಾಸನ, ಆಳು ಆನೆಂದು=ಭೃತ್ಯನು ನಾನೆಂದು, ಸಂಚ ರಿಸು. ಶ್ರೀ ಹರಿಯು, ಗೆಳೆಯನಂದದಲಿ=ಸಖನಂತೆ, ಸಂತೈಸುತಿಪ್ಪನು =ಸಮಾಧಾನಗೊಳಿಸುವನು

ತಾತ್ಪರ್ಯ :—ಕಲಿ ಮೊದಲಾದ ದಾನವರಲ್ಲಿ ೪೫ ಭಾಗಗಳನ್ನು ಇಟ್ಟಿರುವನು ಇದರ ಹಿಂದಿನ ಪದ್ಯದಲ್ಲಿ ಹೇಳಿದ ಪ್ರಕಾರ, ಬ್ರಹ್ಮ ದೇವರು ಮೊದಲು ಎಲ್ಲಾ ಜೀವರಲ್ಲೂ ಇಟ್ಟ ಸ್ವಾತಂತ್ರ್ಯ ಭಾಗಗಳ

ಒಟ್ಟು ೧೫೫ . ಈ ಪದ್ಯದಲ್ಲಿ ಹೇಳಿದ ಪ್ರಕಾರ ಕಲಿ ಮೊದಲಾದವರಲ್ಲಿ ೪೫ ಭಾಗಗಳು; ಅಂತು ೨೦೦ ಭಾಗಗಳು. ಹೀಗೆ ಪರಮಾತ್ಮನೊಳಗೂ ಜೀವರೊಳಗೂ ಒಟ್ಟು ಸೇರಿಸಿ (೪೨೦) ನಾನೂರು ಭಾಗಗಳೆಂದು ತಿಳಿದು, ಮರಿಯದೆ ಪರಮ ಭಕ್ತಿಯಿಂದ ಉಪಾಸನೆ ಮಾಡು. ಪರಮಾತ್ಮನು ನನಗೆ ಸ್ವಾಮಿ; ನಾನು ಅವನಿಗೆ ಭೃತ್ಯನು ಎಂದು ಚಿಂತಿಸುತ್ತಾ ಭೂಮಿಯಲ್ಲಿ ಸಂಚರಿಸು. ಶ್ರೀಹರಿಯು ಸ್ನೇಹಿತನಂತೆ ನಿನ್ನನ್ನು ರಕ್ಷಿಸುವನು. ಈ ವಿಷಯದಲ್ಲಿ ವಿಷ್ಣುರಹಸ್ಯ ೨೧ ನೆಯ ಅಧ್ಯಾಯದಲ್ಲಿ '' ಸ್ವಾಸ್ಮಿನ್ನರ್ಧ ಸ್ವತಂತ್ರತ್ವಂ ಸಮಾಧಾಯ ತದರ್ಧಕಂ || ವಿಭಜ್ಯಶತಧಾ ಭೂಯೋಽಷ್ಟಾ ಚತ್ವಾರಿಂಶ ದಂಶಕಾನ್ ||೩೨|| ಪ್ರಾಣೇ ಸ್ವಾತಂತ್ರ್ಯ ಮಾಧಾಯ ದ್ವಿಪಂಚಾಶತ್ತುವೇಧಸಿ || ಪಾದಂ ಚತುರ್ಥಂ ಶತಧಾ ವಿಭಜ್ಯ ದಶಭಾಗಕಾನ್ ||೩೩|| ಜೀವೇ ಸ್ವಾತಂತ್ರ್ಯಮಾಧಾಯ ತತೋವಿಂಶತಿ ಭಾಗಕಾನ್ || ಅಹಂಕಾರಾತ್ಮಕೇ ರುದ್ರೇತಥಾ ಬುದ್ಧಿ ಸಿಧಾಯಚ ||೩೪|| ಮನೋದೇವೇತತಃ ಶಕ್ರೇಭಾಗಾನ್ಪಂಚದಶೈವತು || ತತ್ವದೇವೇ ದಶಾಂಶಾಂಶ್ಚ ಸ್ವಾತಂತ್ರ್ಯಂ ನಿದಧೇಪರಿಃ||೩೫|| ಪಂಚಚತ್ವಾರಿಂಶದಂ ಶಾನ್ಕಲಿ ಮುಖ್ಯೇಷ್ವಧಾತ್ಸ್ವಯಂ || ವಿಷ್ಣೋಃ ಪರೋನಚಾನ್ಯೋಸ್ತಿ ಸ್ವತಂತ್ರಃ ಕೋಪಿಚೇತನಃ ||೩೬||'' ಇತ್ಯಾದಿ ವಾಕ್ಯಗಳು ಮೇಲೆ ಹೇಳಿದ ವಾಕ್ಯಗಳಿಗೆ ಆಧಾರವಾಗಿರುವವು. ಪದ್ಯಾರ್ಥವೇ ಶ್ಲೋಕಗಳಲ್ಲೂ ಇರುವುದರಿಂದ ಇದರರ್ಥವನ್ನು ಬೇರೆ ಬರೆಯುವ ಆವಶ್ಯಕವಿಲ್ಲ. ದಾಸರಾಯರು ೨೦೦ ಭಾಗಗಳಲ್ಲಿ ಶ್ರೀಲಕ್ಷ್ಮೀದೇವಿಯವರಿಗೆ ೬೭| ಭಾಗಗಳನ್ನು ಕೊಟ್ಟು ತಾನು ೧೩೨||| ಭಾಗಗಳನ್ನು ಇಟ್ಟುಕೊಂಡನೆಂದು ಹೇಳಿರುವರು. ೬೭|, ೧೩೨||| ಎಂಬ ಸಂಖ್ಯೆಗಳಲ್ಲಿರುವ ಕಾಲು ಮುಕ್ಕಾಲು ಎಂಬ ವಿಭಾಗಗಳೇನು ಎಂಬುದು ವಿಷ್ಣುರಹಸ್ಯದ ವಾಕ್ಯದಿಂದ ಪರಿಹಾರವಾಗುವದು. ಪರಮಾತ್ಮನು ೪೦೦ ಭಾಗ ಸ್ವಾತಂತ್ರ್ಯವನ್ನು ತೆಗೆದು ಅದರಲ್ಲಿ ಅರ್ಧವನ್ನು ತಾನು ಇಟ್ಟುಕೊಂಡು ಉಳಿದ ಅರ್ಧವಾದ ಒಂದು ನೂರರಲ್ಲಿ ಬ್ರಹ್ಮದೇವರಿಗೆ ೫೨, ವಾಯುದೇವರಿಗೆ ೪೮ ಹೀಗೆ ಇಬ್ಬರಿಗೆ ಕೊಟ್ಟನು. ಉಳಿದ ನೂರನ್ನು ಮೇಲಿನ ಪದ್ಯಾರ್ಥಗಳಲ್ಲಿ ಹೇಳಿದಂತೆ ರುದ್ರದೇವರಿಗೆ ೨೦, ಇಂದ್ರ ಕಾಮರಿಗೆ ೧೫, ಸಕಲ ಜೀವರಿಗೆ ೧೦, ಕಲ್ಯಾದಿಗಳಿಗೆ ೪೫,ಹೀಗೆ ೧೦೦ ಭಾಗಗಳನ್ನು ಕೊಟ್ಟನು. ತಾನು ಇಟ್ಟುಕೊಂಡಿದ್ದ

ಅರ್ಧವಾದ ೨೦೦ ಭಾಗಗೆಳನ್ನು ಮೂರು ಭಾಗಮಾಡಿದನು. " ತೌವಿಧಾಯತ್ರಿಧತ್ರಿಂಶಂ ಮಾಯಾಯೈಪ್ರದದೌಸ್ವಯಂ|ಶೇಷಭಾಗದ್ವಯಂ ಸ್ವಸ್ಮಿಸ್ಸ್ಥಾಪಯತ್ಸ ನಿಜೇಚ್ಛಯಾ " ಎಂಬ ವಾಕ್ಯದಿಂದ ಆ ಎರಡುನೂರನ್ನು ಮೂರು ಭಾಗಗೆಳಾಗಿ ಮಾಡಿದರೆ ಭಾಗ ಒಂದಕ್ಕೆ ೬೬ ರಂತೆ ಮೂರು ಭಾಗಗೆಳಿಗೆ ೧೯೮ ಭಾಗಗಳಾದವು. ಮೂರರಲ್ಲಿ ಒಂದು ಭಾಗವನ್ನು ಲಕ್ಷ್ಮೀದೇವಿಯರಿಗೆ ಕೊಟ್ಟನು, ಅಂದರೆ ೬೬ ಭಾಗಗೆಳನ್ನು ಲಕ್ಷ್ಮೀದೇವಿಯರಿಗೆ ಇತ್ತನು; ಉಳಿದ ಎರಡು ಭಾಗಗೆಳನ್ನು ಅಂದರೆ ೧೩೨ಭಾಗಗೆಳನ್ನು ತಾನು ಇಟ್ಟುಕೊಂಡನು ಆದರೂ ೨೦೦ ರಲ್ಲಿ ೧೯೮ ಹೋದರೆ ಇನ್ನೂ ೨ ಭಾಗಗೆಳು ಉಳಿದವು. ಆ ಎರಡರಲ್ಲಿ ತನ್ನೊಂದಿಗೆ ಸುಖಾನುಭವದ ಸ್ವಾತಂತ್ರ್ಯಕ್ಕಾಗಿ ಒಂದೂಕಾಲು ಭಾಗವನ್ನು ಲಕ್ಷ್ಮೀದೇವಿಯರಿಗೆ ಕೊಟ್ಟು ಉಳಿದಮುಕ್ಕಾಲು ಭಾಗವನ್ನು ತಾನೇ ಇಟ್ಟುಕೊಂಡನು. ಆದ್ದರಿಂದ ಲಕ್ಷ್ಮೀದೇವಿಯರಲ್ಲಿ ಒಟ್ಟು ೬೭| ಭಾಗವು ಪರಮಾತ್ಮನಲ್ಲಿ ೧೩೨||| ಭಾಗಗೆಳೂ ಆದವೆಂದು ತಾತ್ಪರ್ಯ ||೩||

ಅವತಾರಿಕೆ :—ದತ್ತ ಸ್ವಾತಂತ್ರ್ಯವನ್ನು ದೃಷ್ಟಾಂತದಿಂದ ವಿವರ ಮಾಡುತ್ತಾರೆ—

ಅವನಿಪ ಸ್ವಾಮಿತ್ವಧರ್ಮವ
ಸ್ವವಶಮಾತ್ಯರಿಗಿತ್ತು ತಾವು
ತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ ||
ಕವಿಭಿರೀಡಿತ ತನ್ನ ಕಳೆಗಳ
ದಿವಿಜ ದಾನವ ಮಾನವರೊಳಿ
ಟ್ಟವಿರತ ಗುಣತ್ರಯುಜ ಕರ್ಮವ ಮಾಡಿಮಾಡಿಸುವ

ಪದ್ಯಾರ್ಥ :—ಅವನಿಪ= ಭೂಪತಿಯು (ರಾಜನು) ಸ್ವಾಮಿತ್ವ ವರ್ಮಧ= ತನ್ನೊಳಗಿರುವ ಪ್ರಭುತ್ವದ ಅಧಿಕಾರಗಳನ್ನು ಸ್ವವಶ= ತನ್ನ ಸ್ವಾಧೀನದಲ್ಲಿರುವ, ಅಮಾತ್ಯರಿಗಿತ್ತು= ಮಂತ್ರಿಗಳಿಗಿತ್ತು, ತಾ= ತಾನು, ಮತ್ತೆ, ಅವರ ಮುಖದಲಿ= ಅವರ ಕಡೆಯಿಂದ,ರಾಜಕಾರ್ಯವ ಮಾಡಿಸುವ ತೆರದಿ, ಕವಿಭಿರೀಡಿತ= ಜ್ಞಾನಿಗಳಿಂದ ಸ್ತುತ್ಯನಾದ ಶ್ರಿಹರಿಯು, ತನ್ನ ಕಳೆಗಳ= ತನ್ನ ಸ್ವಾತಂತ್ರ್ಯಾದಿ ಶಕ್ತಿಯ ಲೇಶಾಂಶಗಳನ್ನು, ದಿವಿಜ = ದೇವತೆ

ಗಳು, ದಾನವ= ದೈತ್ಯರುಗಳು, ಮಾನವರೊಳು= ಮನುಷ್ಯರುಗಳಲ್ಲಿ, ಇಟ್ಟು, ಅವಿರತ= ಕ್ಷಣಬಿಡದೆ, ಗುಣತ್ರಯಜ= ಗುಣತ್ರಯ ಸಂಬಂಧವಾದ, ಕರ್ಮವ= ಕರ್ಮಗಳನ್ನು ಮಾಡಿ, ಮಾಡಿಸುವ ||೪||

ತಾತ್ಪರ್ಯ—ಮಹಾರಾಜನು, ಗ್ರಾಮಾಧಿಕಾರಿ, ದೇಶಾಧಿಕಾರಿ ಮೊದಲಾದವರನ್ನು ಯೇರ್ಪಡಿಸಿ, ನೀವು ಇಂತಹಾ ಕಾರ್ಯಗಳನ್ನು ಮಾಡಬೇಕೆಂದು ಆಜ್ಞೆಕೊಟ್ಟು ಅವರ, ಕಡೆಯಿಂದ ರಾಜಕಾರ್ಯಗಳನ್ನು ಮಾಡಿಸುತ್ತ ಅವರು ಮಾಡಿದ ಕಾರ್ಯಗಳನ್ನು ಅನುಮೋದಿಸುವನು. ವಿಷ್ಣುರಹಸ್ಯ ೨೧ ನೆಯ ಅಧ್ಯಾಯದಲ್ಲಿ “ ಬ್ರಹ್ಮಾಣಂಚ ತಥಾಪ್ರಾಣಂ ತಥಾನ್ಯಾಸ್ತತ್ವದೇವತಾಃ || ದೇಹೇನಿಯೋಜಯಾಂ ಚಕ್ರೇ ತಥಾಕಲ್ಯಾದಿಕಾಸುರಾನ್ ||೨೭|| ಸ್ವಾತಂತ್ರ್ಯಂವ್ಯಭಜನ್ತೇಷು ತಥಾಜೀವೇಷು ಭಾಗಶಃ || ೨೮ || ಯಥಾರಾಜಾನಿಜಾಮಾತ್ಯಾನ್ ದತ್ವಾಸ್ವಾತಂತ್ರ್ಯಮಾತ್ಮನಃ ಕಾರ್ಯೆನಿಯೋಜ್ಯ ತತ್ರತ್ಯಾನ್ ಗುಣದೋಷಾಂಶ್ಚ ಪೃಚ್ಛತಿ|| ತತ್ತತ್ಕಾರ್ಯಕೃತೌ ಶಕ್ತಿಃ ಸ್ವಾತಂತ್ರ್ಯಂಹಿಪರಂಸ್ಮೃತಂ || ೨೯ || ಶಕ್ತ್ಯಾಸ್ವ ದತ್ತಯಾಮಾತ್ಯೈಃ ಕೃತೇಕಾರ್ಯೇಸತುಷ್ಯತಿ || ಸತ್ಯಾಂ ಶಕ್ತೌ ಕಾರ್ಯನಾಶೋ ಸ್ವಾಜ್ಞಾಮುಲ್ಲಂಘ್ಯವರ್ತತೆ ||೩೦| ಕುಪಿತ್ವಾ ದಂಡಯೇ ದೇವಂ ಯಥಾಕ್ರೀಡತ್ಯಯಂಹರಿಃ ||೩೧||

ಇದರರ್ಥ— ಜೀವರುಗಳಿಂದ ಅವರವರ ಯೋಗ್ಯತಾನುಸಾರ ಕರ್ಮಗಳನ್ನು ಮಾಡಿಸುವದಕ್ಕಾಗಿ ಜೀವರುಗಳಿಗೆ ಸ್ಥೂಲದೇಹಗಳನ್ನು ಕೊಡಿಸಿ ಬ್ರಹ್ಮದೇವರು, ವಾಯುದೇವರು ಮತ್ತು ತತ್ವಾಭಿಮಾನಿದೇವತೆಗಳು, ಕಲಿ ಮೊದಲಾದ ದೈತ್ಯರು ಇವರೆಲ್ಲರನ್ನೂ ಆ ಜೀವರ ಸ್ಥೂಲದೇಹದಲ್ಲಿರುವಂತೆ ಮಾಡಿ, ಈ ಬ್ರಹ್ಮಾದಿಗಳಿಗೂ ಜೀವರಿಗೂ ಕಲಿ ಮೊದಲಾದವರಿಗೂ ಅವರವರ ಯೋಗ್ಯತಾನುಸಾರ ತನ್ನ ಸ್ವಾತಂತ್ರ್ಯವನ್ನು ಹಂಚಿಕೊಟ್ಟು ಕಾರ್ಯಗಳನ್ನು ಮಾಡುವಂತೆಯೂ ಮಾಡಿಸುವಂತೆಯೂ ಮಾಡಿದನು. ಅದು ಹೇಗೆಂದರೆ ಮಹಾರಾಜನು ತನ್ನ ಮಂತ್ರಿ ಮೊದಲಾದವರಿಗೆ ಅವರವರ ಯೋಗ್ಯತಾನುಸಾರವಾಗಿ ಸ್ವಾತಂತ್ರ್ಯವನ್ನು ಹಂಚಿಕೊಟ್ಟು ಅಲ್ಲಲ್ಲಿ ಆ ಕಾರ್ಯಗಳನ್ನು ಮಾಡಿಸುವನು ಅಂದರೆ ಸರ್ವದೇಶಕ್ಕೂ ಒಬ್ಬನನ್ನು ಅಧಿಪತಿಯನ್ನಾಗಿ ಮಾಡಿ, ಅವನ ಸ್ವಾಧೀನದಲ್ಲಿ ದೇಶಾಧಿಪತಿಗಳು ಇರುವಂತೆ

ಮಾಡುವನು. ದೇಶಾಧಿಪತಿಗಳ ಸ್ವಾಧೀನದಲ್ಲಿ ಪುರಾಧಿಪತಿ, ಅವನ ಕೆಳಗೆ ಗ್ರಾಮಾಧಿಪತಿ ಹೀಗೆ ಅವರವರುಗಳಿಗೆ ಅಧಿಕಾರಗಳನ್ನು ಕೊಟ್ಟು ಗ್ರಾಮಾಧಿಕಾರಿಯು ತನ್ನ ಕಾರ್ಯಗಳನ್ನು ಸರಿಯಾಗಿ ನಡಿಸುತ್ತಾನೆಯೋ ಇಲ್ಲವೋ ಎಂಬ ವಿಷಯುವನ್ನು ಪುರಾಧಿಪತಿಯು ನೋಡಿ ಅವನು ತನಗೆ ಇರುವ ಸ್ವಾತಂತ್ರ್ಯಶಕ್ತಿಯನ್ನು ಮೀರದೆ ಸರಿಯಾಗಿ, ವಂಚನೆಯಿಲ್ಲದೆ ಕಾರ್ಯ ಮಾಡಿದ್ದರೆ ಅವನಿಗೆ ಸಂಬಳಗಳನ್ನು ಹೆಚ್ಚು ಮಾಡುವದಕ್ಕೂ ಕೆಲಸವನ್ನು ಸರಿಯಾಗಿ ಮಾಡದಿದ್ದರೆ ಅವನನ್ನು ಶಿಕ್ಷಿಸುವದಕ್ಕೂ ಸಹ ಪುರಾಧಿಪತಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವನು. ಪುರಾಧಿಪತಿಯುನ್ನು ಶಿಕ್ಷಿಸುವದಕ್ಕೂ ಅನುಮೋದಿಸುವದಕ್ಕೂ ದೇಶಾಧಿಪತಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವನು. ಸರ್ವದೇಶಾಧಿಪತಿಗೆ ಇವರೆಲ್ಲರಮೇಲೂ ತಣಿಕೆಮಾಡಿ ದಂಡನಾದಿಗಳನ್ನೋ ಅನುಮೋದಿಸುವುದೋ ಈ ಅಧಿಕಾರವು ಇರುವುದು. ಅವನಿಗೆ ಮೇಲೆ ಮಂತ್ರಿಯು ಅವನನ್ನು ತನ್ನ ಸ್ವಾಧೀನದಲ್ಲಿ ಮಹಾರಾಜನಿಟ್ಟುಕೊಂಡು ಈ ರೀತಿಯಾಗಿ ರಾಜಕಾರ್ಯವನ್ನು ನಡೆಸುವನು . ಇದರಂತೆ ಪರಮಾತ್ಮನು ಬ್ರಹ್ಮಾದಿದೇವತೆಗಳಿಗೂ, ತತ್ವೇಶರಿಗೂ ಜೀವರಿಗೂ, ಕಲಿ ಮೊದಲಾದವರಿಗೂ ಸ್ವಾತಂತ್ರ್ಯವನ್ನು ಕೊಟ್ಟು ಅವರವರ ಯೋಗ್ಯತಾನುಸಾರವಾಗಿ ರಾಜನು ಮೊದಲನೆಯ ತರಗತಿ ಶಿಕ್ಷಾಧಿಕಾರಿ, ಎರಡನೆಯ ತರಗತಿ ಅಧಿಕಾರಿ ಯೆಂದು ಭಾಪಿಸಿ ( District Magistrate, 1st class Magistrate, IInd class Magistrate) ಇವರುಗಳಿಗೆ ತಾರತಮ್ಯ ಪ್ರಕಾರ ಶಿಕ್ಷಾದಿಗಳನ್ನು ವಿಧಿಸಲು ಅಧಿಕಾರವನ್ನು ಕೊಟ್ಟಿರುವಂತೆ, ಬ್ರಹ್ಮದೇವರಿಗೆ ೫೨ ಸ್ವಾತಂತ್ರ್ಯ ಭಾಗವನ್ನು, ರುದ್ರದೇವರಿಗೆ ೨೦, ಇಂದ್ರದೇವರಿಗೆ ೧೫, ಹೀಗೆ ಸ್ವಾತಂತ್ರ್ಯವನ್ನು ಕೊಟ್ಟಿರುವನು ಈಗ ಲೋಕದಲ್ಲಿ ಕೆಲವರಿಗೆ ಒಬ್ಬ ಅಪರಾಧಿಯನ್ನು ಆಯುಷ್ಯದವರೆಗೂ ಶಿಕ್ಷಿಸುವ ಅಧಿಕಾರವು ಇರುವದು ಕೆಲವರಿಗೆ ಮೂರು ವರ್ಷಕಾಲ ಶಿಕ್ಷಿಸುವ ಅಧಿಕಾರವೂ, ಕೆಲವು ಅಧಿಕಾರಿಗಳಿಗೆ ೬ ತಿಂಗಳು ಮಾತ್ರ ಅಪರಾಧಿಗೆ ಶಿಕ್ಷೆಯನ್ನು ವಿಧಿಸಬಹುದು ಎಂದು ರಾಜರು ಸ್ವಾತಂತ್ರ್ಯವನ್ನು ಕೊಟ್ಟಿರುವಂತೆ ಬ್ರಹ್ಮಾದಿದೇವತೆಗಳಿಗೂ ತಾರತಮ್ಯ ಪ್ರಕಾರ ಸ್ವಾತಂತ್ರ್ಯವನ್ನು ಹೆಚ್ಚಿಸಿರುವನು ಬ್ರಹ್ಮವಾಯುಗಳ ಸ್ವಾಧೀನದಲ್ಲಿ ರುದ್ರಾದಿಗಳು, ಅವರ ಸ್ವಾಧೀನದಲ್ಲಿ ತತ್ವೇಶರು. ಕಲಿಗೆ

ದೈತ್ಯರ ಮೇಲಿನ ಸರ್ವಾಧಿಕಾರವು ಇರುವದು. ಈ ದೇವತೆಗಳು ಕಲಿ ಮೊದಲಾದ ದೈತ್ಯರು, ಇವರ ಸ್ವಾಧೀನದಲ್ಲಿ ಸಾಮಾನ್ಯ ಜೀವರೆಲ್ಲರೂ ಇರುವರು ಪುಣ್ಯ ಮಾಡಿಸಲು ದೇವತೆಗಳು, ಪಾಪಮಾಡಿಸಲು ದೈತ್ಯರು, ಹೀಗೆ ಜೀವರು ತಮ್ಮ ತಮ್ಮ ಯೋಗ್ಯತಾನುಸಾರ ದೇವದೈತ್ಯರು ಮಾಡಿಸುವ ಪುಣ್ಯಪಾಪಾದಿಗಳನ್ನು ಮಾಡಬೇಕು. ಪರಮಾತ್ಮನು ಪುಣ್ಯ ಪಾಪಾದಿಗಳನ್ನು ಮಾಡಿಸುವ ಸ್ವಾತಂತ್ರ್ಯವನ್ನು ತತ್ವೇಶರಾದ ದೇವತೆಗಳಿಗೂ ದೈತ್ಯರಿಗೂ ಸಹ ಕೊಟ್ಟಿರುವನು. 'ಯೇನವಿನಾತೃಣಮಪಿನಚಲತಿ" ಎಂಬ ನ್ಯಾಯದಿಂದ ಬ್ರಹ್ಮಾದಿದೇವತೆಗಳಿಗಾದರೂ ಪರಮಾತ್ಮನನ್ನು ಹೊರತು ತೃಣವನ್ನು ಚಲನಮಾಡಿಸುವ ಶಕ್ತಿಯು ಇರುವುದಿಲ್ಲ. ಇವರೆಲ್ಲರಿಗೂ ಅವರವರ ಯೋಗ್ಯತಾನುಸಾರವಾಗಿ ಇಚ್ಛಾ ಶಕ್ತಿಯು ಮಾತ್ರ ಇರುವುದು. ಅದನ್ನು ಪ್ರತಿಕ್ಷಣದಲ್ಲೂ ಪರಮಾತ್ಮನೇ ಇದ್ದು ಉದ್ಬೋಧನೆ ಮಾಡುತ್ತಿರುವನು. ಸ್ವಾತಂತ್ರ್ಯವಿದ್ದರು ಇಚ್ಛಾಮಾತ್ರ ಶಕ್ತಿಯೇ ಹೊರತು ಕಾರ್ಯಮಾಡುವ ಶಕ್ತಿಯು ಯಾರಿಗೂ ಇಲ್ಲ. ತತ್ವೇಶರಲ್ಲಿದ್ದು ಇಂದ್ರಿಯಗಳಿಂದ ಆಗಬಹುದಾದ, ನೋಡಿಸುವುದು, ಕೇಳಿಸುವುದು, ಮೊದಲಾದ ಕಾರ್ಯವನ್ನು ಮಾಡಿಸುವನು. ಜೀವರೊಳಗಿದ್ದು ಮಾಡುವನು. ಹೀಗೆ ಸರ್ವ ಸ್ವತಂತ್ರನು ಒಬ್ಬನೇ ಹೊರತು ಮತ್ತಾರೂ ಸ್ವತಂತ್ರ ಕರ್ತರು ಇಲ್ಲ. ಎಂದು ಹೇಳಿರುವರು. ಇದರಂತೆ ಪರಮಾತ್ಮನು ದೇವತೆಗಳು, ದಾನವರು, ಮಾನವರು ಇವರುಗಳಲ್ಲಿ ತನ್ನ ಸ್ವಾತಂತ್ರ್ಯವನ್ನು ಅವರವರ ಯೋಗ್ಯತಾನುಸಾರ ಹಂಚಿಟ್ಟು ಸಾತ್ವಿಕ, ರಾಜಸ, ತಾಮಸ ಸಂಬಂಧವಾದ ಕರ್ಮಗಳನ್ನು ಮಾಡಿ ಮಾಡಿಸುವನು. ||೪||

ದೈತ್ಯರು ಮಾಡುವ ಪುಣ್ಯಗಳನ್ನು ದೇವತೆಗಳಿಗೆ ಮತ್ತು ಭಕ್ತಜನರಿಗೆ ಕೊಟ್ಟು ಉದ್ಧರಿಸುವನೆಂದು ಹೇಳುತ್ತಾರೆ:—

ಪುಣ್ಯಪಾಪಗಳೀತೆರದಿ ಕಾ
ರುಣ್ಯಸಾಗರ ದೇವದಾನವ
ಮಾನವರೊಳಿಟ್ಟವರ ಫಲವ್ಯತ್ಯಾಸವನೆಮಾಡಿ ||
ಬನ್ನಬಡಿಸುವ ಭಕ್ತಿಹೀನರ
ಸನ್ನುತ ಸುಕರ್ಮ ಫಲಗಳ ತೆಗೆದು ಪ್ರ
ಪನ್ನರಿಗೆ ಕೊಟ್ಟವರ ಸುಖಬಡಿಸುವನು ಸುಭುಜಾಹ್ವ ||

ಪದ್ಯಾರ್ಥ:— ಕಾರುಣ್ಯಸಾಗರ=ಕರುಣಾಸಮುದ್ರನಾದ ಶ್ರೀ ಪರಮಾತ್ಮನು, ಈ ತೆರದಿ=ಈ ಪ್ರಕಾರವಾಗಿ, ಪುಣ್ಯಪಾಪಗ್ಗಳ, ದೇವದಾನವ ಮಾನವರೊಳು=ದೇವತೆಗಳು, ದಾನವರು, ಮನುಷ್ಯರು ಇವರಲ್ಲಿ ಇಟ್ಟು ಅವರ ಫಲವ್ಯತ್ಯಾಸವನೆಮಾಡಿ=ದೇವತೆಗಳಿಗೆ ಪುಣ್ಯಫಲವನ್ನೂ, ದಾನವರಿಗೆ ಪಾಪಫಲವನ್ನೂ ಮಾನವರಿಗೆ ಮಿಶ್ರಫಲವನ್ನೂ ಹೀಗೆ ಫಲವ್ಯತ್ಯಾಸವನ್ನು ಮಾಡಿ, ಭಕ್ತಿಹೀನರ=ಭಕ್ತಿ ಇಲ್ಲದವರನ್ನು ಬನ್ನಬಡಿಸುವ=ಕ್ಲೇಶಪಡಿಸುವನು, ಸನ್ನುತ=ಸಜ್ಜನವಂದ್ಯನು, ಸುಕರ್ಮಫಲಗಳ ತೆಗೆದು=ದಾನವರು ಮಾಡುವ ಪುಣ್ಯಕರ್ಮದ ಫಲವನ್ನು ತೆಗೆದು, ಪ್ರಪನ್ನರಿಗೆ=ತನ್ನನ್ನು ಮೊರೆಹೊಕ್ಕವರಿಗೆ ಕೊಟ್ಟು ಸುಭುಜಾಹ್ವ=ಉತ್ಕೃಷ್ಟಸಾರಭೋಕ್ತನೆನಿಸುವ ಶ್ರೀಹರಿಯು, ಅಥವಾ ಮಹಾ ಬಾಹ-ವೆನಿಸುವ ಶ್ರೀ ಪರಮಾತ್ಮನು, ಅವರ=ತನ್ನ ಭಕ್ತರನ್ನು, ಸುಖಪಡಿಸುವನು.

ತಾತ್ಪರ್ಯ:—ಕರುಣಾಸಮುದ್ರನಾದ ಶ್ರೀಹರಿಯು ದೇವತೆಗಳಿಂದ ಪುಣ್ಯವನ್ನು ದಾನವರಿಂದ ಪಾಪವನ್ನು, ಮಾನವರಿಂದ ಪುಣ್ಯಪಾಪಗಳನ್ನು ಮಾಡಿಸಿ, ಫಲದಲ್ಲಿ ದೇವತೆಗಳಿಗೆ, ಮನುಷ್ಯೋತ್ತಮರಿಗೆ ಮುಕ್ತಿಯನ್ನು ದಾನವರಿಗೆ ತಮಸ್ಸನ್ನು, ಮನುಷ್ಯರಿಗೆ ಮಿಶ್ರಲೋಕವನ್ನು ಕೊಡಿಸುವನು ಅಭಕ್ತರಾದ ದಾನವರು ಮಾಡುವ ಯಜ್ಞದಾನಾದಿ ಫಲಗಳನ್ನು ತೆಗೆದು ದೇವತೆಗಳಿಗೆ ಕೊಡಿಸುವನು. ದೇವತೆಗಳು ಮಾಡುವ ಪಾಪಗಳನ್ನು ದೈತ್ಯರಿಗೆ ಕೊಡಿಸುವನು. ಇದರಿಂದ ಪರಮಾತ್ಮನಿಗೆ ವೈಷಮ್ಯಬಾರದೆ ಅಂದರೆ ದೇವತೆಗಳಲ್ಲಿ ಅಸುರಾವೇಶವಿದ್ದಾಗ ದೇವತೆಗಳು ದೈತ್ಯರ ಪ್ರೇರಣೆಯಿಂದಲೇ ಪಾಪಗಳನ್ನು ಮಾಡುವರು ಆದ್ದರಿಂದ ಆ ಫಲವನ್ನು ದೈತ್ಯರಿಗೇ ಕೊಡಿಸುವನು. ದೈತ್ಯರು ಪುಣ್ಯವನ್ನು ಮಾಡಿದರೂ ಒಳಗಿರುವ ದೇವತೆಗಳ ಪ್ರೇರಣೆಯಿಂದಲೇ ಮಾಡುವರು ಆದ್ದರಿಂದ ಆ ಪುಣ್ಯಫಲವನ್ನು ದೇವತೆಗಳಿಗೇ ಕೊಡಿಸುವನು ದೇವತೆಗಳಿಗೆ ಕೆಲವುಕಾಲ ಕಷ್ಟ ಕಂಡು ಬಂದರೂ ಅದು ದೈತ್ಯಾವೇಶದಿಂದ ದೇವತೆಗಳ ಶರೀರ ಪ್ರವಿಷ್ಟರಾದ ದೈತ್ಯರಿಗೆ ಆಗುವವು. ಅಸುರರಿಗೆ ಸುಖಕಾಣುವದು ದೇವಾವೇಶದಿಂದಾಗುವದೆಂದು ಭಾಗವತ ಏಕಾದಶಸ್ಕಂಧದಲ್ಲಿ ಹೇಳಿರುವರು "ತೇಷಾಂ ದುಃಖಾದಿಕಂಕಿಂಚಿತ್ ಅಸುರಾವೇಶತೋಭವೇತ್ || ಅಸುರಾಣಾಂಸುಖಾದ್ಯಾಶ್ಚದೇವಾವೇಶಾದುದೀರಿತಾಃ || ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾ

ಗುವದು. ಆದ್ದರಿಂದ ಪರಮಾತ್ಮನಿಗೆ ವೈಷಮ್ಯಾದಿಗುಣಗಳು ಎಂದಿಗೂ ಇಲ್ಲವೆಂದು ಸಿದ್ಧಾಂತ. ಇದಲ್ಲದೆ ದೈತ್ಯರ ಪುಣ್ಯಭಾಗಗಳನ್ನು ದೇವತೆಗಳಿಗೆ ಮಾತ್ರವೇ ಕೊಡುತ್ತಾನೆಂತಲ್ಲ, ಭಕ್ತರಿಗೆಲ್ಲರಿಗೂ ಕೊಡುವನು. ವಿಷ್ಣು ರಹಸ್ಯದಲ್ಲಿ (ಅಧ್ಯಾಯ ೨೧) "ಪುಣ್ಯಕರ್ಮಸಹಾಯಾಯೇ ಪುಣ್ಯಾತ್ಮಾನಸ್ತುಯೇನರಾಃ || ದೈತ್ಯಭಾಗಗತಾತ್ಪುಣ್ಯಾತ್ ತೇಭ್ಯೋಶಂದದತೇಹರಿಃ || ಪಾಪಕರ್ಮಸಹಾಯಾಯೇ ಪಾಪಾತ್ಮಾನಸ್ತುಯೇನರಾಃ || ದೇವಭಾಗಗತಾತ್ಪಾಪಾತ್ತೇಭ್ಯೋಂಶಂದದತೇಹರಿಃ" || ಪುಣ್ಯಕರ್ಮಗಳಿಗೆ ಸಹಾಯ ಮಾಡುವವರಿಗೂ ಪುಣ್ಯಾತ್ಮರಾಗಿರುವ ಮನುಷ್ಯರಿಗೂ ದೈತ್ಯರಲ್ಲಿರುವ ಪುಣ್ಯಭಾಗಗಳ ಫಲಾಂಶವನ್ನು ಕೊಡುವನು, ಪಾಪಕರ್ಮಕ್ಕೆ ಸಹಾಯಮಾಡುತ್ತಾ ಪಾಪಸ್ವಭಾವವುಳ್ಳವರಿಗೆ ದೇವತೆಗಳಲ್ಲಿರುವ ಪಾಪಭಾಗ ಫಲವನ್ನು ಕೊಡುವನು ಎಂದು ಹೇಳಿರುವರು ಅದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುವರು ||೫||

ಅವತಾರಿಕೆ:—ಮೇಲೆ ಹೇಳಿದುದನ್ನೇ ವಿಶದಮಾಡುತ್ತಾರೆ.

**ಮಾಣಿಕವ ಕೊಂಡಂಗಡಿಯೊಳಜಿ**
**ವಾನಕೊಟ್ಟಾ ಪುರುಷನ ಸಮಾ**
**ಧಾನ ಮಾಡುವತೆರದಿ ದೈತ್ಯರು ನಿತ್ಯದಲಿ ಮಾಳ್ಪ ||**
**ದಾನಯಜ್ಞಾದಿಗಳ ಫಲ ಯಜ**
**ಮಾನತಾನಪಹರಿಸಿ ಅಸಮೀ**
**ಚೀನಸುಖಗಳ ಕೊಟ್ಟಸುರರ ಮತ್ತರನಮಾಳ್ಪ ||**

ಪದ್ಯಾರ್ಥ:—ಅಂಗಡಿಯೊಳು ಯಜಮಾನನು, ಮಾಣಿಕವಕೊಂಡು=ಒಬ್ಬ ಮೂರ್ಖನಿಂದ ಮಾಣಿಕ್ಯವನ್ನು ತೆಗೆದುಕೊಂಡು, ಅದಕ್ಕೆ ಪ್ರತಿಫಲವಾಗಿ=ಬದುಲಾಗಿ, ಅಜಿವಾನ=(ಓಮು) ಅಜಿವಾನವೆಂಬಲ್ಪ ಪದಾರ್ಥವನ್ನು ಕೊಟ್ಟು, ಸಮಾಧಾನಮಾಡುವ ತೆರದಿ, ದೈತ್ಯರು=ರಾಕ್ಷಸರು, ನಿತ್ಯದಲಿ ಮಾಳ್ಪ ದಾನ ಯಜ್ಞಾದಿಗಳ, ಫಲ=ಫಲವನ್ನು, ಯಜಮಾನ=ಪರಮಾತ್ಮನು, ತಾನು ಅಪಹರಿಸಿ, ಅಸಮೀಚೀನಸುಖಗಳ=ಅಲ್ಪವಾದ ವಿಷಯಾದಿ ಭೋಗಗಳನ್ನು ಕೊಟ್ಟು, ಅಸುರರ=ಆ ರಾಕ್ಷಸರನ್ನು ಮತ್ತರನ=ಮದಾಂಧರನ್ನಾಗಿ, ಮಾಳ್ಪ=ಮಾಡುವನು.

ತಾತ್ಪರ್ಯ:—ಮೂರ್ಖಪುರುಷನು ಸರಿಯಾದ ತಿಳಿವಳಿಕೆ ಇಲ್ಲದವನು ತನ್ನಲ್ಲಿರುವ ಮಾಣಿಕ್ಯದ ಯೋಗ್ಯತೆಯನ್ನರಿಯದೆ ಅಂಗಡಿಯಲ್ಲಿ ಕೊಡಲು ಆ ಅಂಗಡಿಯ ಯಜಮಾನನು ಇವನನ್ನು ಮೋಸಗೊಳಿಸಿ ಸ್ವಲ್ಪ ಓಮವನ್ನು (ಅಜಿವಾನವನ್ನು) ಕೈಯ್ಯಲ್ಲಿ ಕೊಟ್ಟು ಸಮಾಧಾನಪಡಿಸಿದರೆ ಹೇಗೋ ಹಾಗೆ ಪರಮಾತ್ಮನು ಅಭಕ್ತರು ಈ ಪ್ರಪಂಚದ ಸುಖರೂಪವಾದ ಅಲ್ಪ ಫಲಾಪೇಕ್ಷೆಯಿಂದ ಮಾಡುವ ಯಾಗ ದಾನಾದಿ ಕರ್ಮಗಳಿಗಾಗುವ ಉತ್ತಮ ಫಲವನ್ನು ಅವರೊಳಗಿರುವ ದೇವತೆಗಳಿಗೆ ಕೊಟ್ಟು ದೈತ್ಯರಿಗೆ ಅವರು ಬೇಡುವ ತುಚ್ಛವಾದ ವಿಷಯಾದಿಭೋಗವನ್ನೋ ಸ್ವರ್ಗಾದಿಗಳನ್ನೋ ಅಲ್ಪಕಾಲದವರೆಗೂ ಕೊಡುವನು. ಇದರಿಂದ ಅಂಗಡಿಯವನು ಮೋಸ ಮಾಡಿದಂತೆ ಪರಮಾತ್ಮನು ಮೋಸಮಾಡುವವನೆಂದು ಶಂಕಿಸಬಾರದು. ಈ ಸಂಶಯವನ್ನು ಮೇಲಿನ ಪದ್ಯದಲ್ಲೇ ಪರಿಹಾರ ಮಾಡಿರುತ್ತೆ. ದೇವತಾಪ್ರೇರಣೆಯಿಂದ ಇವರು ಈ ಕರ್ಮಗಳನ್ನು ಮಾಡುವದರಿಂದ ಆ ಫಲವು ದೇವತೆಗಳಿಗೆ ಸೇರುವದು ನ್ಯಾಯವೆಂದರ್ಥ. ಇವರೇ ಯಾಗಾದಿಗಳನ್ನು ನಿಷ್ಕಾಮುಕರಾಗಿ ಮಾಡಿದರೆ ಮಾಣಿಕ್ಯದಂತೆ ಶ್ರೇಷ್ಟವಾದ ಮುಕ್ತಿಗೆ ಸಾಧನವಾಗುತ್ತಿತ್ತು. ಕಾಮ್ಯ ಫಲಾಪೇಕ್ಷೆಯಿಂದ ಮಾಡಿದರೆ ಅಜಿವಾನದಂತೆ ಅಲ್ಪ ಫಲವೇ ಬರುವುದು ಆ ಫಲವನ್ನು ಅಸುರರೊಳಗಿರುವ ದೇವತೆಗಳೇ ಅನುಭವಿಸುವರೆಂದು ಮೇಲಿನ ಶ್ಲೋಕದಲ್ಲಿ ಉದಹರಿಸಿದ ತಾತ್ಪರ್ಯದಿಂದ ವ್ಯಕ್ತವಾಗುವದು. ವಿಷ್ಣುರಹಸ್ಯದಲ್ಲಿ "ದೈತ್ಯಾನಾಂ ತತ್ರ ನೈವಾಸ್ತಿ ಪುಣ್ಯಕರ್ಮವಿಭಾಗತಃ || ಪುಣ್ಯಭಾಗಂ ಹರತ್ಯೇಷಾಂ ಸ್ವಯಮೇವ ಜನಾರ್ದನಃ" ||೪೮|| ದೈತ್ಯರುಗಳಿಗೆ ಪುಣ್ಯದಲ್ಲಿ ಭಾಗವಿಲ್ಲ. ಅವರ ಪುಣ್ಯಭಾಗವನ್ನು ಪರಮಾತ್ಮನೇ ಅವರಿಗಿಲ್ಲದಹಾಗೆ ಮಾಡುತ್ತಾನೆ. ಎಂದು ಹೇಳಿರುವರು. ಈ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ತಂದಿರುತ್ತಾರೆ ||೬||

ಅವತಾರಿಕೆ:—ಭಗವದ್ಭಕ್ತರಿಗೆ ಜ್ಞಾನಭಕ್ತ್ಯಾದಿಗಳು ದಿನೇ ದಿನೇ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಗುವವೆಂದು ಹೇಳುತ್ತಾರೆ.

**ಏಣಲಾಂಛನ ನಮಲ ಕಿರಣಕ್ರ**
**ಮೇಣ ವೃದ್ಧಿಯನೈದಿ ಲೋಕರ**
**ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ ||**

ವೈನತೆಯಾಂ ಸಗನವುೂರ್ತಿ
ಧ್ಯಾನಉಳ್ಳ ಮುಹಾತ್ಮರಿಗೆ ಸು
ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವಕೊಡುತಿಹವು ||

ಪದ್ಯಾರ್ಥ:—ಏಣಲಾಂಛನನ=ಜಿಂಕೆಯ ಗುರುತುಳ್ಳ ಚಂದ್ರನ, ಅಮಲಕಿರಣ=ನಿರ್ಮಲವಾದ ಕಿರಣವು, ಕ್ರಮೇಣ=ಶುಕ್ಲಪಕ್ಷದಲ್ಲಿ ದಿನಕ್ರಮವಾಗಿ, ವೃದ್ಧಿಯನೈದಿ=ವೃದ್ಧಿಯನ್ನು ಹೊಂದುತ್ತ ಲೋಕರ=ಲೋಕದಲ್ಲಿರುವ ಜನರನ್ನು, ಕಾಣಗೊಡದಿಹ=ಕಣ್ಣಿಗೆ ಕಾಣಗೊಡಿಸದೆ ಇರುವ ಕತಲೆಯು ಭಂಗಿಸುವ ತೆರದಂತೆ=ನಾಶಮಾಡುವಂತೆ, ವೈನತೇಯಾಂಸಗನ=ಗರುಡನ ಹೆಗಲಮೇಲೆ ಶೋಭಿಸುವ ಶ್ರೀಪರಮಾತ್ಮನ ಮೂರ್ತಿಯ ಧ್ಯಾನವುಳ್ಳ=ಧ್ಯಾನಾಸಕ್ತರಾದ, ಮುಹಾತ್ಮರಿಗೆ ಸುಜ್ಞಾನಭಕ್ತ್ಯಾದಿಗಳು ವರ್ಧಿಸಿಸುಖವ ಕೊಡುತಿಹವು

ತಾತ್ಪರ್ಯ:—ಶುಕ್ಲಪಕ್ಷದಲ್ಲಿ ಚಂದ್ರನ ಕಳೆಗಳು ದಿನಕ್ಕೆ ದಿನಕ್ಕೆ ಹೆಚ್ಚುತ್ತಾ ಬಂದು ಪ್ರಕಾಶವು ಅಧಿಕವಾಗಿ ಲೋಕದಲ್ಲಿ ಜನರು ಕತ್ತಲೆಯಲ್ಲಿ ಕಾಣಲಶಕ್ಯವಾದ ಪದಾರ್ಥಗಳನ್ನು ತನ್ನ ಪ್ರಕಾಶದಿಂದ ಕಾಣುವಂತೆ ಮಾಡುವದು ಅದರಂತೆ ಪರಮಾತ್ಮನ ಭಕ್ತರು ಮಾಡುವ ಧ್ಯಾನಾದಿಗಳು ಹೆಚ್ಚುತ್ತ ಹೆಚ್ಚುತ್ತ ಪರಮಾತ್ಮನು ಹೃದಯಾಕಾಶದಲ್ಲಿ ಹೆಚ್ಚು ಪ್ರಕಾಶವನ್ನು ತೋರುವನು. ಅದರಿಂದ ಇವರ ಅಜ್ಞಾನಾಂಧಕಾರವು ಪರಿಹಾರವಾಗಿ ಜ್ಞಾನ ಭಕ್ತಿ ಮೊದಲಾದವು ವೃದ್ಧಿಯಾಗುವದು ಈ ಉಪಮಾನದಲ್ಲಿ ಪರಮಾತ್ಮನನ್ನು ಚಂದ್ರನಂತೆ ತಿಳಿಯಬೇಕು ಭಕ್ತರು ಮಾಡುವ ಧ್ಯಾನಾದಿಗಳೆ ಶುಕ್ಲಪಕ್ಷದ ಕಳೆಗಳು ಇದರಿಂದ ಅವರ ಹೃದಯದಲ್ಲಿ ಭಗವತ್ಕಳಾ ವಿಶೇಷವು ಹೆಚ್ಚುವುದು ಅದರಿಂದ ಅಜ್ಞಾನವೆಂಬ ಕತ್ತಲು ಪರಿಹಾರವಾಗಿ ಜ್ಞಾನಭಕ್ತಿ ವೃದ್ಧಿಯಾಗುವದೆಂಬ ಭಾವ ||೭||

ಅವತಾರಿಕೆ:—ನಾವು ಪುಣ್ಯಪಾಪಗಳನ್ನು ಪರಮಾತ್ಮನಿಗೆ ಸಮರ್ಪಿಸಿದರೆ ಪರಮಾತ್ಮನು ನಮ್ಮನ್ನು ರಕ್ಷಿಸುತ್ತಾನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ.

ಜನಪನರಿಕೆಯು ಚೋರ ಪೊಳಲೊಳು
ಧನವ ಕದ್ದೊಯ್ದೀ ಯುಲವನವ
ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವತೆರದಿ ||

ಅನುಚಿತೋಚಿತ ಕರ್ಮಗಳ ಕೃಷ್ಣಾ
ರ್ಪಣವೆನಲು ಕೈಕೊಂಡು ತನ್ನರ
ಮನೆಯೊಳಿಟ್ಟಾನಂದಬಡಿಸುವ ಮಾಧವಾನತರ ||

ಪದ್ಯಾರ್ಥ:– ಜನಪನ=ಜನರನ್ನು ಪಾಲಿಸುವ ರಾಜನ, ಅರಿಕೆಯು=ತಿಳಿವಳಿಕೆಗೆ ಬಂದ, ಚೋರ=ಕಳ್ಳನು, ಪೊಳಲೊಳು=ತನ್ನ ಪಟ್ಟಣದೊಳಗೆ, ಕದ್ದೊಯ್ದ=ಕದ್ದು ತಂದ, ಧನವ=ಹಣವನ್ನು, ಈಯಲು=ರಾಜನಲ್ಲಿ ಒಪ್ಪಿಸಿ ಕ್ಷಮೆಬೇಡಿದರೆ ಅವನ=ಆ ಚೋರನ, ಅವಗುಣಗಳ=ಕೆಟ್ಟಕೆಲಸವನ್ನು, ಎಣಿಸದೆ=ಗಣನೆಗೆತಾರದೆ ಪೊರೆವ=ರಕ್ಷಿಸುವನು, ಕೊಡದಿರೆ=ಹಣವನ್ನು ರಾಜನಲ್ಲಿ ಒಪ್ಪಿಸದಿದ್ದರೆ, ಶಿಕ್ಷಿಸುವ, ತೆರದಿ=ಇದರಂತೆ, ಅನುಚಿತ=ಉಚಿತವಲ್ಲದ, (ಮಾಡಬಾರದೆಂದು ಶಾಸ್ತ್ರದಲ್ಲಿ ನಿಷಿದ್ಧವಾದ ಕರ್ಮಗಳು) ಉಚಿತಕರ್ಮ=ಮಾಡಬೇಕೆಂದು ವಿಧಿಸಿರುವ ಕರ್ಮಗಳು ಅಂದರೆ ಒಟ್ಟು ಪಾಪಪುಣ್ಯಕರ್ಮಗಳನ್ನು, ಕೃಷ್ಣಾರ್ಪಣವೆನಲು=ಭಕ್ತಿಯಿಂದಲೂ ಪಶ್ಚಾತ್ತಾಪದಿಂದಲೂ ಭಗವಂತನಿಗರ್ಪಿಸಿ ಕ್ಷಮೆಬೇಡಿದರೆ ಕೈಕೊಂಡು=ಸ್ವೀಕರಿಸಿ, ಮಾಧವ=ಲಕ್ಷ್ಮೀಪತಿಯಾದ ಶ್ರೀ ನಾರಾಯಣನು, ಆನತರ=ಬಹು ವಿನಯದಿಂದ ಬೇಡಿಕೊಳ್ಳುವರನ್ನು, ತನ್ನ ಅರಮನೆಯೊಳಗಿಟ್ಟು ಆನಂದಬಡಿಸುವ

ತಾತ್ಪರ್ಯ:—ಊರೊಳಗೆ ಕಳ್ಳತನಮಾಡಿದ ಕಳ್ಳನು ಇವನು ಕಳ್ಳನೆಂದು ರಾಜನ ತಿಳಿವಳಿಕೆಗೆ ಬಂದ ಕೂಡಲೆ ತಾನು ಕಳ್ಳತನ ಮಾಡಿ ತಂದ ದ್ರವ್ಯಗಳನ್ನು ವಂಚಿಸದೆ ರಾಜನ ಮುಂದಿರಿಸಿ “ಪ್ರಭೋ! ನಾನು ಕುಟುಂಬಿ, ದರಿದ್ರದೋಷದಿಂದ ಇಂತಹ ಕಾರ್ಯವನ್ನು ಮಾಡಿಬಿಟ್ಟೆನು ನನ್ನ ಅಪರಾಧವನ್ನು ಕ್ಷಮಿಸಿ, ನನ್ನನ್ನುದ್ಧರಿಸಬೇಕೆಂದು ಬೇಡಿಕೊಂಡರೆ, ರಾಜನು ಕರುಣದಿಂದ ಅವನ ಅಪರಾಧವನ್ನು ಮನ್ನಿಸಿ ಅವನನ್ನು ರಕ್ಷಿಸುವನು. ಕಳ್ಳನು ನಿಜವನ್ನು ಹೇಳದೆ ಕದ್ದ ಪದಾರ್ಥಗಳನ್ನು ಮರೆಮಾಡಿದ್ದರೆ ಅವನನ್ನು ಶಿಕ್ಷಿಸುವನು. ಇದರಂತೆ ನಾವು ಮಾಡುವ ಪುಣ್ಯಪಾಪಗಳು ಪರಮಾತ್ಮನ ತಿಳಿವಳಿಕೆಗೆ ಬಾರದೆ ಇರುವವೆ? ನಮ್ಮ ಯೋಗ್ಯತಾನುಸಾರ ನಮ್ಮೊಳಗಿದ್ದು ಮಾಡಿಸುವವನೇ ಅವನು ಇಂತಹ ಕರ್ಮಗಳನ್ನು ತಾನೇ ಮಾಡಿದುದಾಗಿ ತಿಳಿದು ಪರಮಾತ್ಮನಿಗೆ ಒಪ್ಪಿಸದಿದ್ದರೆ ಶಿಕ್ಷಿಸುವನು. ಹಾಗಲ್ಲದೆ ಪರಮ ಭಕ್ತಿಯಿಂದ ಅಸ್ವತಂತ್ರನಾದ ನಾನು ಮಾಡಿ

ದುದು ನಿನ್ನ ಪ್ರೇರಣೆಯಿಂದಲೇ ಮಾಡಿರುವೆನು, ನೀನು ಅನುಗ್ರಹವೋ ನಿಗ್ರಹವೋ ಯಾವುದು ಮಾಡುವುದಕ್ಕೂ ಸ್ವತಂತ್ರನು ಎಂದು ಪ್ರಾರ್ಥಿಸಿ ವಿನಯದಿಂದ ನಾವು ಮಾಡಿದ ಪುಣ್ಯಪಾಪಗಳೆಲ್ಲವನ್ನು ಪರಮಾತ್ಮನಿಗೆ ಅರ್ಪಿಸಿದರೆ ಕರುಣಾಸಮುದ್ರನಾದ ಹರಿಯು ನಮ್ಮ ಪಾಪಗಳನ್ನು ಭಸ್ಮಮಾಡಿ ಪುಣ್ಯಗಳನ್ನು ಇಮ್ಮಡಿ ಮಾಡಿ ಅದಕ್ಕೆ ಫಲರೂಪವಾಗಿ ತನ್ನಂತಃಪುರದಲ್ಲಿಟ್ಟು ತನ್ನ ರೂಪವನ್ನು ಅಭಿವ್ಯಕ್ತಿ ಮಾಡಿಸಿ ಕೊಡುವನು ||೮||

ಅವತಾರಿಕೆ:—ಅನ್ನಾದಿ ನಾಮಗಳಿಂದ ಪರಮಾತ್ಮನು ಜೀವರನ್ನು ರಕ್ಷಿಸುವನೆಂದು ಹೇಳುತ್ತಾರೆ—

ಅನ್ನದನ್ನಾದನ್ನನಾಮಕ
ಮುನ್ನೆ ಪೇಳ್ದ ಪ್ರಕಾರ ಜೀವರೊ
ಳನ್ನ ರೂಪಪ್ರವೇಶಗೈದವರವರ ವ್ಯಾಪಾರ ||
ಬನ್ನಪಡದಲೆ ಮಾಡಿ ಮಾಡಿಸಿ
ಧನ್ಯರಿವರಹುದೆಂದೆನಿಸಿ ತ್ರೈ
ಗುಣ್ಯವರ್ಜಿತತತ್ತದಾಹ್ವಯನಾಗಿ ಕರೆಸುವನು ||

ಪದ್ಯಾರ್ಥ:—ಅನ್ನದ=ಅನ್ನವನ್ನು ಕೊಡುವವನು, ಅನ್ನಾದ=ಅನ್ನವನ್ನು ಭಕ್ಷಿಸುವವನು, ಅನ್ನ=ಸ್ವಯಂ ಅನ್ನರೂಪನು, ನಾಮಕ=ಈ ಕಾರಣಗಳಿಂದ, ಅನ್ನದ, ಅನ್ನಾದ, ಅನ್ನ ಎಂಬ ಹೆಸರುಗಳಿಂದ, ಮುನ್ನೆ ಪೇಳ್ದಪ್ರಕಾರ=ಇದರ ಹಿಂದೆ ೧೪ನೆಯ ಸಂಧಿಯಲ್ಲಿ ಹೇಳಿದ ಪ್ರಕಾರವಾಗಿ, ಜೀವರೊಳು, ತನ್ನ ರೂಪಪ್ರವೇಶಗೈದು=ತನ್ನರೂಪಗಳಿಂದ ಪ್ರವೇಶಮಾಡಿ, ಅವರವರ ವ್ಯಾಪಾರ=ಆಯಾಜೀವರು ಮಾಡುವ ಕಾರ್ಯಗಳನ್ನು, ಬನ್ನಪಡದಲೆ=ಲೇಶಾಯಾಸವಿಲ್ಲದೆ, ಮಾಡಿ, ಮಾಡಿಸಿ, ಇವರು=ಈ ಜೀವರು ಧನ್ಯರಹುದು, ಯೆಂದೆನಿಸಿ, ತ್ರೈಗುಣ್ಯವರ್ಜಿತ=ಸತ್ವಾದಿಪ್ರಾಕೃತ ಗುಣರಹಿತನಾದ ಪರಮಾತ್ಮನು, ತತ್ತದಾಹ್ವಯನಾಗಿ=ಆಯಾ ಹೆಸರಿನಿಂದ, ಕರೆಸುವನು.

ತಾತ್ಪರ್ಯ:—‹‹ಅನ್ನಂದದಾತೀತಿ ಅನ್ನದಃ'' ಎಂಬ ನಿರ್ವಚನದಿಂದ ಅನ್ನವನ್ನು ಕಲ್ಪಿಸುವವನಾದುದರಿಂದ ಅನ್ನದನೆಂದು ಹೆಸರು. ‹‹ಅನ್ನಮತ್ತೀತಿ ಅನ್ನಾದಃ'' ಅನ್ನವನ್ನು ಭಕ್ಷಿಸುವವನಾದುದರಿಂದ ಅನ್ನಾದನು.

ತೈತ್ತಿರೀಯ ಉಪನಿಷತ್ತಿನಲ್ಲಿ "ಅದ್ಯತೇತ್ತಿಚ ಭೂತಾನಿ, ತಸ್ಮಾದನ್ನಂತದುಚ್ಯತೆ ಇತಿ" ಎಂದು ನಿರ್ವಚನ ಮಾಡಿರುವರು. ಅದರ ಪ್ರಕಾರ, "ಅದ್ಯತ ಇತ್ಯನ್ನಂ; ಸರ್ವಮತ್ತೀತ್ಯನ್ನಂ" ಪ್ರಪಂಚದಲ್ಲಿ ತಾನು ಅನ್ನರೂಪದಿಂದ ಚೇತನರಿಗೆ ಉಪಜೀವ್ಯನಾಗಿರುವುದರಿಂದಲೂ, ಅನ್ನನೆಂದು ಹೆಸರು, ಪ್ರಳಯಕಾಲದಲ್ಲಿ ಎಲ್ಲಾ ಪ್ರಪಂಚವನ್ನೂ ನುಂಗುವುದರಿಂದ ಅನ್ನನೆಂದು ಹೆಸರು. ಆದ್ದರಿಂದ ಹೀಗೆ ಅನ್ನಾದ, ಅನ್ನದ, ಅನ್ನ ಎಂಬ ಹೆಸರುಗಳಿಂದ ಹಿಂದೆ ಪಿತೃಗಣ ಸಂಧಿಯಲ್ಲಿ ಸಪ್ತಾನ್ನ ಪ್ರಕರಣದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಹೇಳಿರುವರು. ಮತ್ತು ಅಭ್ಯಾಸಕ್ಕೋಸ್ಕರ ಇಲ್ಲಿ ಸಂಕೋಚವಾಗಿಯೂ ಸೂಚಿಸಿರುವರು. ಸಪ್ತಾನ್ನ ಪ್ರಕರಣದಲ್ಲಿ ಹೇಳಿರುವಂತೆ ಜೀವರೊಳಗೆ ರೂಪಾಂತರಗಳಿಂದ ಪ್ರವೇಶಮಾಡಿ ಅವರವರು ಮಾಡಬೇಕಾದ ಕೃತ್ಯಗಳನ್ನು ಸ್ವಲ್ಪವಾದರೂ ಆಯಾಸವಿಲ್ಲದೆ ತಾನು ಮಾಡಿ ಅವರಿಂದ ಮಾಡಿಸುವನು. ಪರಮಾತ್ಮನು ರಾಜನಲ್ಲೂ, ಭೃತ್ಯನಲ್ಲೂ, ಭಾಗ್ಯವಂತನಲ್ಲೂ ದರಿದ್ರನಲ್ಲೂ, ಕುರೂಪಿಸುರೂಪಿಗಳಲ್ಲಿದ್ದು ತಾನು ಪ್ರಾಕೃತ ಗುಣರಹಿತನಾದರೂ, ಪ್ರಾಕೃತರಲ್ಲಿ ವಾಸಮಾಡುವುದರಿಂದ, ರಾಜನೆಂತಲೂ, ಭೃತ್ಯನೆಂತಲೂ, ಭಾಗ್ಯವಂತ ಮೊದಲಾದ ಹೆಸರಿನಿಂದ ಕರೆಸಿಕೊಂಡು ರಾಜ, ಭೃತ್ಯ ಮೊದಲಾದ ಹೆಸರನ್ನು ಜೀವರಿಗೆ ಕೊಡಿಸುವನು. ||೯||

ಅವತಾರಿಕೆ:—ಎಂಟನೆಯ ಪದ್ಯದಲ್ಲಿ ಪುಣ್ಯ ಪಾಪ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿದರೆ ಪರಮಾತ್ಮನು ಸ್ವೀಕರಿಸಿ ರಕ್ಷಿಸುವನೆಂದು ಹೇಳಿದ್ದರು. ಚಿದಾನಂದ ಸ್ವರೂಪನಾದ ಪರಮಾತ್ಮನಲ್ಲಿ ಜೀವರು ಮಾಡಿದ ಪಾಪಕರ್ಮಗಳನ್ನೊಪ್ಪಿಸಿದರೆ ಪರಮಾತ್ಮನ ಆನಂದಕ್ಕೆ ಕಳಂಕ ತಟ್ಟುವದೋ ಏನೋ ಯಂಬ ಮಂದ ಜನರ ಸಂಶಯುವನ್ನು ಸದೃಷ್ಟಾಂತವಾಗಿ ಪರಿಹರಿಸುತ್ತಾರೆ.

ಸಲಿಲ ಬಿಂದುಪಯೋಬ್ಧಿಯೊಳು ಬೀ
ಳಲು ವಿಕಾರವನೈದ ಬಲ್ಲದೆ
ಜಲವು ತದ್ರೂಪವ ನೈದುವದೆಲ್ಲ ಕಾಲದಲಿ ||
ಕಲಿಮಲಾಪಹ ಸರ್ಪಿಸುವ ಸ

ತ್ಕುಲಜರ ಕುಕರ್ಮಗಳು ತಾನಿ
ಷ್ಕಲುಷ ಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು ||

ಪದ್ಯಾರ್ಥ:—ಸಲಿಲಬಿಂದು=ನೀರಿನ ತೊಟ್ಟುಗಳು, ಪಯೋಬ್ಧಿಯೊಳು=ಕ್ಷೀರ ಸಮುದ್ರದಲ್ಲಿ, ಬೀಳಲು,ವಿಕಾರವನೈದಬಲ್ಲದೆ=ಆ ಕ್ಷೀರ ಸಮುದ್ರದಲ್ಲಿರುವ ಕ್ಷೀರವು ವಿಕಾರಹೊಂದುವದೆ?ಜಲವು=ನೀರುಮಾತ್ರ, ತದ್ರೂಪವನೈದುವದು=ಕ್ಷೀರರೂಪವನ್ನು ಹೊಂದುವದು. ಎಲ್ಲ ಕಾಲದಲಿ=ಎಂದೆಂದಿಗೂ, ಕಲಿಮಲಾಪಹನ=ಕಲಿಯುಗೆ ಸಂಬಂಧವಾದ ಪಾಪಗಳನ್ನು ಪರಿಹರಿಸುವ ಶ್ರಿಹರಿಯನ್ನು ಅರ್ಚಿಸುವ=ಪೂಜಿಸುವ, ಸತ್ಕುಲಜರ ಕುಕರ್ಮಗಳು=ಸಜ್ಜನರ ಪಾಪಗಳು, ತಾ=ತಾವು, ನಿಷ್ಕಲುಷ ಕರ್ಮಗಳಾಗಿ=ಶುದ್ಧವಾದ ಕರ್ಮರೂಪವಾಗಿ, ಪುರುಷಾರ್ಥಗಳ, ಕೊಡುತಿಹವು.

ತಾತ್ಪರ್ಯ:—ಕ್ಷೀರಸಮುದ್ರದಲ್ಲಿ ನೀರನ ತೊಟ್ಟು ಬಿದ್ದರೆ ಹಾಲಿಗೆ ಹೆಪ್ಪು ಕೊಟ್ಟರೆ ವಿಕಾರ ಹೊಂದಿ ಮೊಸರು ಆಗುವಂತೆ, ಕ್ಷೀರ ಸಮುದ್ರದ ಕ್ಷೀರವು ಏನಾದರೂ ವಿಕಾರ ಹೊಂದಿ ಕೆಡುವುದೆ? ಎಂದಿಗೂ ಇಲ್ಲ. ಈ ನೀರಿನ ತೊಟ್ಟು ಮಾತ್ರ ಕ್ಷೀರದಲ್ಲಿ ಸೇರಿ ತಾನೂ ಕ್ಷೀರವೇ ಆಗುವದು. ವಿಷ್ಣುರಹಸ್ಯ ೨೧ನೆಯ ಅಧ್ಯಾಯ "ಕ್ಷೀರಾಬ್ಧೌಪತಿತಂ ತೋಯಂಯಥಾಕ್ಷೀರತ್ವಮಶ್ನುತೇ || ಜೀವಕರ್ಮಸುಖಂತದ್ವದ್ಧಾರಾವಾನಂದತಾಂಪ್ರಜೇತ್||" ಕ್ಷೀರಸಮುದ್ರದಲ್ಲಿ ಬಿದ್ದ ಉದಕವು ಹೇಗೆ ಕ್ಷೀರತ್ವವನ್ನೇ ಹೊಂದುವದೋ ಹಾಗೆ, ಪರಮಾತ್ಮನಲ್ಲಿ ಸಮರ್ಪಿಸಿದ ಜೀವನ ಕರ್ಮವು ಆನಂದ ಸ್ವರೂಪವೇ ಆಗುವದು ಯೆಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುತ್ತಾರೆ. ಜೀವನು ಮಾಡುವಕರ್ಮಗಳನ್ನು ಪರಮಾತ್ಮನಿಗರ್ಪಿಸಿ ಸದಾ ಪರಮಾತ್ಮನೇ ಗತಿಯೆಂದು ನಂಬಿ ಅವನನ್ನು ಆರಾಧಿಸಿದರೆ ಇವನು ಸಮರ್ಪಿಸಿದ ಕುಕರ್ಮವು ಕ್ಷೀರ ಸಮುದ್ರದಲ್ಲಿ ಬಿದ್ದ ಉದಕ ಬಿಂದುವಿನಂತೆ ಪರಮಾನಂದ ಸ್ವರೂಪವನ್ನು ಹೊಂದುವದು. ಆದ್ದರಿಂದ ಈ ಭಕ್ತನಿಗೆ ಶ್ರೀಹರಿಯು ಪ್ರೀತನಾಗಿ ಪುರುಷಾರ್ಥಗಳನ್ನು ಕೊಟ್ಟು ಉದ್ಧರಿಸುವನು. ||೧೦||

ಅವತಾರಿಕೆ:—ಪರಮಾತ್ಮನನ್ನು ಸರ್ವಪ್ರಕಾರ ಭಜಿಸುವವನನ್ನು ತಾಯಿಯು ಮಗುವನ್ನು ರಕ್ಷಿಸುವಂತೆ ಪ್ರೀತಿಸುವನೆಂದು ಹೇಳುತ್ತಾರೆ—

ಮೊಗದೊಳಗೆ ಮೊಗವಿಟ್ಟು ಮುದ್ದಿಸಿ
ಮಗುವಿನಂ ಬಿಗಿದಪ್ಪಿ ಸ್ನೇಹದಿ
ತೆಗೆದು ತನ್ನಯ ಸ್ತನಗಳುಣಿಸುವ ಜನನಿಯಂದದಲಿ
ಅಗಣಿತಾತ್ಮನು ತನ್ನ ಪಾದಾ
ಬ್ಜಗಳ ಧೇನಿಪ ಭಕ್ತಜನರಿಗೆ
ಪ್ರಕಟಗನು ತಾನಾಗಿ ಸೌಖ್ಯಗಳೀವ ಸರ್ವತ್ರ ||

ಪದ್ಯಾರ್ಥ:—ಮೊಗದೊಳಗೆ=ಮಗುವಿನ ಮುಖದೊಳಗೆ, ಮೊಗ ವಿಟ್ಟು=ತಾಯಿಯು ತನ್ನ ಮುಖವನ್ನಿಟ್ಟು ಮುದ್ದಿಸಿ, ಮಗುವಿನಂ= ಮಗುವನ್ನು, ಬಿಗದಪ್ಪಿ=ತಬ್ಬಿಕೊಂಡು, ಸ್ನೇಹದಿ, ತೆಗೆದು=ಎತ್ತಿ, ತನ್ನಯ, ಸ್ತನಗಳುಣಿಸುವ=ಮೊಲೆಯನ್ನು ಕುಡಿಸುವ,ಜನನಿಯಂದದಲಿ= ತಾಯಿಯಂತೆ, ಅಗಣಿತಾತ್ಮನು=ಅಸಂಖ್ಯಾ ಗುಣರೂಪ ಸ್ವರೂಪನಾದ ಪರಮಾತ್ಮನು, ತನ್ನ ಪಾದಾಬ್ಜಗಳ=ತನ್ನ ಪಾದಕಮಲಗಳನ್ನು. ಧೇನಿಪ ಭಕ್ತಜನರಿಗೆ=ಭಜನೆಮಾಡುವ ಭಕ್ತಜನರಿಗೆ ಪ್ರಕಟಗನು, ತಾನಾಗಿ= ರಾಮಕೃಷ್ಣಾದಿರೂಪಗಳಿಂದ ಪಾಂಡವಾದಿಗಳಿಗೆ ಪ್ರತ್ಯಕ್ಷನಾಗಿದ್ದು ಅವ ರನ್ನುದ್ಧರಿಸಿದಂತೆ, ಪ್ರತ್ಯಕ್ಷ ಪರೋಕ್ಷಗಳಲ್ಲಿ ರೂಪಾಂತರಗಳಿಂದ ದರ್ಶನ ವನ್ನಿತ್ತು, ಸರ್ವತ್ರ=ಎಲ್ಲಾ ಸ್ಥಳಗೆಳಲ್ಲೂ, ಸೌಖ್ಯಗಳೀವ=ಸುಖವನ್ನುಂ ಟುಮಾಡುವನು.

ತಾತ್ಪರ್ಯ:—ತಾಯಿಯಾದವಳು ಮಗುವಿನಲ್ಲಿ ವಾತ್ಸಲ್ಯದಿಂದ ಅದನ್ನೆತ್ತಿ ಮುದ್ದಾಡಿ, ಸ್ತನ್ಯಪಾನಮಾಡಿಸಿ ಸಂರಕ್ಷಿಸುವಂತೆ ಪರ ಮಾತ್ಮನು ತನ್ನ ಭಕ್ತರಲ್ಲಿ ಅಂತಹ ವಾತ್ಸಲ್ಯದಿಂದ, ಧ್ಯಾನಮಾಡುವವರ ಹೃದಯಾಕಾಶದಲ್ಲಿ ಅಪರೋಕ್ಷದಲ್ಲಿ ಕಾಣಿಸಿಕೊಂಡು ಮುಕ್ತಿಯಲ್ಲಿ ಸದಾ ತನ್ನ ಸಮೀಪದಲ್ಲಿಟ್ಟುಕೊಂಡು ಸುಖವನ್ನು ಕೊಟ್ಟು ಸಂರಕ್ಷಿಸುವನು. ತಾಯಿಯು ಮಗುವನ್ನು ಮುದ್ದಿಸಿ ಸ್ತನ್ಯಪಾನಮಾಡಿಸಿದ ವಿಷಯದಲ್ಲಿ "ನಹಿದೃಷ್ಟಾಂತೇ ಸರ್ವಂಸಾಮಾನ್ಯಂ" ಎಂಬ ನ್ಯಾಯದಿಂದ ದೃಷ್ಟಾಂತ ದಲ್ಲಿ ಸರ್ವಸಾಮ್ಯ ಕೂಡುವುದಿಲ್ಲ. ತಾಯಿಗೆ ಮಗುವನ್ನು ಮುದ್ದಿಟ್ಟು ಸ್ತನ್ಯಪಾನಮಾಡಿಸುವಾಗ ಎಷ್ಟು ವಾತ್ಸಲ್ಯ (ಪ್ರೀತಿ) ಇರುವುದೋ, ಅಷ್ಟು ವಾತ್ಸಲ್ಯವನ್ನು ಭಕ್ತವತ್ಸಲನೆಂಬ ಬಿರುದಾಂಕಿತನಾದ ಶ್ರೀಹರಿಯು ಭಕ್ತರಲ್ಲಿ ಮಾಡುವನೆಂಬ ವಿಷಯದಲ್ಲಿ ಉಪಮಾನವೆಂದು ತಿಳಿಯಬೇಕು.

ಕವಿಗಳು ಕಾವ್ಯಗಳಲ್ಲಿ ಚಂದ್ರಮುಖಿಯೆಂದು ಸ್ತ್ರೀಯನ್ನು ವರ್ಣಿಸುವುದುಂಟು. ಚಂದ್ರನಿಗೆ ಕಣ್ಣಿಲ್ಲ, ಮೂಗಿಲ್ಲ, ಹಾಗೆ ಚಂದ್ರಮಂಡಲದ ಉಪಮಾನವನ್ನು ಮುಖಮಂಡಲಕ್ಕೆ ಕೊಟ್ಟರೆ ಆ ಮುಖವು ಚನ್ನಾಗಿದೆಯೆಂದು ಯಾರೂ ಹೇಳುವುದಿಲ್ಲ. ಚಂದ್ರಿಕೆಯಲ್ಲಿ ನಾವು ಕೂತಿರುವಾಗೆ ಪೂರ್ಣಚಂದ್ರಮಂಡಲವನ್ನು ನೋಡಿ ಒಂದು ವಿಧವಾದ ಆನಂದವನ್ನನುಭವಿಸುವೆವು ಅಂತಹ ಚಂದ್ರನಲ್ಲಿರುವ ಆಹ್ಲಾದ ಗುಣವು ಯಾವ ಸ್ತ್ರೀಯಲ್ಲಿರುವುದೊ ಅಂದರೆ ಯಾವಸ್ತ್ರೀಯ ಮುಖವನ್ನು ನೋಡುತ್ತಿದ್ದರೆ,ತೃಪ್ತಿಯಿಲ್ಲದೆ ಮತ್ತೂ ನೋಡುತ್ತಿರಬೇಕೆಂದಿರುವುದೋ ಅಂತಹ ಸ್ತ್ರೀಯನ್ನು ಚಂದ್ರಮುಖಿಯೆಂದು ವರ್ಣಿಸುವರು. ಅದರಂತೆ ಇಲ್ಲಿಯೂ ವಾತ್ಸಲ್ಯ ವಿಷಯದಲ್ಲಿ ತಾಯಿಯ ಉಪಮಾನವು. ಹಾಗಾದರೆ ತಾಯಿಯಂತೆ ಅಂದರೆ ಸಾಕಾಗಿತ್ತು. ಮುಖದೊಳಗೆ ಮುಖವನ್ನಿಟ್ಟು ಮುದ್ದಿಸಿ ಮೊಲೆಯನುಣಿಸುವ ತೆರದಿ ಎಂದು ಇಷ್ಟೇಕೆ ಹೇಳಿದರೆಂದರೆ, ಸಾಮಾನ್ಯವಾಗಿ ಮಕ್ಕಳಾಡುತ್ತಿರುವಾಗ ತಾಯಿಯು ತನ್ನ ಮನೆಯ ಕೆಲಸವನ್ನು ಮಾಡಿಕೊಳ್ಳುತ್ತಿದ್ದರೆ ಅಷ್ಟು ಪ್ರೀತಿಯು ವ್ಯಕ್ತವಾಗುವುದಿಲ್ಲ. ಆ ಮಗುವು ಹಸಿವಿನಿಂದ ಸ್ತನ್ಯಪಾನಕ್ಕಾಗಿ ತನ್ನಲ್ಲಿಬರಲು ಆ ಸಮಯದಲ್ಲಿ ವಿಶೇಷವಾದ ಪ್ರೀತಿಯು ಹುಟ್ಟಿ ಸ್ತನದಲ್ಲಿ ಕ್ಷೀರವು ಸ್ರವಿಸುವುದು ಆ ಸಮಯದಲ್ಲಿ ತಾಯಿಗೆ ಮಗುವಿನಲ್ಲಿ ಯೆಂತಹ ಪ್ರೀತಿಯು ಇರುವುದೋ ಅಂತಹ ಪ್ರೀತಿಯನ್ನು ಪರಮಾತ್ಮನು ತನ್ನ ಭಕ್ತರಲ್ಲಿ ಸರ್ವದಾ ಮಾಡುವನೆಂದು ತೋರಿಸುವುದಕ್ಕೆ ಈ ದೃಷ್ಟಾಂತವನ್ನು ಹೇಳಿರುವರೆಂದು ತಿಳಿಯಬೇಕು. ||೧೧||

ಶ್ರೀ ಪರಮಾತ್ಮನು ಜೀವರ ಯೋಗ್ಯತೆಯನ್ನನುಸರಿಸಿ ಅನಾಯಾಸವಾಗಿ ಸೃಷ್ಟಿಯನ್ನು ಮಾಡಿ ಸರ್ವ ಕಾಲದಲ್ಲೂ ಪಾಲಿಸುವನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ.

**ತೋಟಿಗನು ಭೂಮಿಯೊಳು ಬೀಜವ**
**ನಾಟಬೇಕೆಂದೆನುತ ಹಿತದಲಿ**
**ಮೋಟೆಯಿನ್ನೀರೆತ್ತಿಸಸಿಗಳ ಸಂತೈಸುವಂತೆ ||**
**ಪಾಟುಬಡದಲೆ ಜಗದಿ ಜೀವರ**
**ಘೋಟಕಾಸ್ಯನು ಸೃಜಿಸಿ ಯೋಗ್ಯತೆ**
**ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ ||**

ಪದ್ಯಾರ್ಥ:—ತೋಟಿಗನು=ತೋಟ ಮಾಡುವವನು,ಭೂಮಿಯೊಳು, ಬೀಜವ, ನಾಟಬೇಕೆಂದೆನುತ=ಬಿತ್ತಬೇಕೆಂಬ ಇಚ್ಛೆಯಿಂದ, ಹಿತದಲಿ= ಶ್ರದ್ಧೆಯಿಂದ, ಮೋಟೆಯಿನ್ನೀರೆತ್ತಿ=ಕಪಿಲೆ ಮೊದಲಾದ ನೀರೆತ್ತುವ ಸಾಮಗ್ರಿಯಸಹಾಯದಿಂದ ನೀರೆತ್ತಿ,ಸಸಿಗಳ=ಹುಟ್ಟಿದ ಅಥವಾ ನಾಟದ ಎಳೇ ಪೈರನ್ನು, ಸಂತೈಸುವಂತೆ=ತೃಪ್ತಿಬಡಿಸುವಂತೆ, ಪಾಟುಬಡದಲೆ= ಆಯಾಸವಿಲ್ಲದೆ, ಜಗದಿ=ಜಗತ್ತಿನಲ್ಲಿ, ಜೀವರ=ಪ್ರಾಣಿಗಳನ್ನು, ಘೋಟ ಕಾಸ್ಯನು=ಹಯಗ್ರೀವ ರೂಪವನ್ನು ಧರಿಸಿದ್ದ ಶ್ರೀ ಪರಮಾತ್ಮನು, ಸೃಜಿಸಿ=ಸೃಷ್ಟಿಸಿ, ಸರ್ವಕಾಲದಲಿ, ಯೋಗ್ಯತೆ ದಾಟಗೊಡದಲೆ=ಜೀವರ ಯೋಗ್ಯತೆಯನ್ನು ಮೀರದಂತೆ, ಅಂದರೆ ಅವರವರ ಯೋಗ್ಯತಾನುಸಾರ ವಾಗಿ ಸಲಹುತಿಪ್ಪನು=ಸಂರಕ್ಷಿಸುವನು.

ತಾತ್ಪರ್ಯ:—ತೋಟವನ್ನು ಮಾಡುವವನು ಭೂಮಿಯನ್ನು ಹದ ಮಾಡಿ ಬೀಜವನ್ನು ಬಿತ್ತಿ ಕಪಿಲೆ ಮೊದಲಾದವುಗಳ ಸಹಾಯದಿಂದ ನೀರು ಚೆಲ್ಲಿ ಹುಟ್ಟಿದ ಸಸಿಗಳನ್ನು ವೃದ್ಧಿಮಾಡಿ ಸಂರಕ್ಷಣೆ ಮಾಡುವಂತೆ, ಪರಮಾತ್ಮನು ಜೀವರನ್ನು ಸೃಷ್ಟಿಸಿ ಸಂರಕ್ಷಿಸುವನು. ತೋಟಿಗನು ಭೂಮಿಯ ಯೋಗ್ಯತೆಯನ್ನನುಸರಿಸಿ ಬೀಜವನ್ನು ಚೆಲ್ಲಿ, ಸಸಿಗಳ ಜಾತಿ ಯನ್ನನುಸರಿಸಿ, ಭತ್ತದ ಸಸಿಗೇಗೆ ಸಮೃದ್ಧಿಯಾಗಿ ನೀರು ಯಾವಾಗಲೂ ನಿಲ್ಲಿಸುವುದು, ಕೆಲವು ಸಸಿಗಳಿಗೆ ೪ ದಿವಸಗಳಿಗೊಮ್ಮೆ, ಕೆಲವು ಸಸಿಗಳಿಗೆ ೮ದಿವಸಗಳಿಗೊಮ್ಮೆ, ಕೆಲವು ಧಾನ್ಯಗಳಿಗೆ ನೀರು ಚೆಲ್ಲದೆ ಮಳೆನೀರಿನಿಂದಲೆ, ಹೀಗೆ ಸಸಿಯ ಯೋಗ್ಯತೆಯನ್ನನುಸರಿಸಿ ನೀರು ಚೆಲ್ಲಿ ಸಸಿಗಳನ್ನು ಸಂರಕ್ಷಿ ಸುವಂತೆ ಪರಮಾತ್ಮನು ಜೀವರ ಯೋಗ್ಯತೆಯನ್ನನುಸರಿಸಿ, ದೇವಮಾ ನವಾದಿ ಯೋನಿಗಳಲ್ಲಿ ಹುಟ್ಟಿಸಿ ಯಾವಯಾವ ಜೀವರನ್ನು ಯಾವಯಾವ ರೀತಿಯಲ್ಲಿ ಸಂರಕ್ಷಿಸಬೇಕೋ ಆ ಪ್ರಕಾರ ಮಾಡುವನು. ತೋಟ ಮಾಡು ವವನಿಗೆ ನೀರು ಮೊದಲಾದವು ಚೆಲ್ಲಿ ಸಸಿಗಳನ್ನು ರಕ್ಷಿಸುವುದರಿಂದ ಬಹಳ ಆಯಾಸವಾಗುವುದು ಹಾಗೆ ಪರಮಾತ್ಮನಿಗೆ ಸೃಷ್ಟ್ಯಾದಿಕಾರ್ಯಗಳಲ್ಲಿ ಆಯಾಸವಾಗುವುದೇನೋ ಅಂದರೆ ಪಾಟುಬಡದಲೆ ಎಂಬ ಪದದಿಂದ ಆ ಸಂಶಯವನ್ನು ಪರಿಹರಿಸಿರುವರು. ಆದರೆ ತೋಟಿಗನು ಮಾಡುವುದು ಮುಂದಿನ ಫಲಾಪೇಕ್ಷೆಯಿಂದ, ಪರಮಾತ್ಮನು ನಿರಪೇಕ್ಷೆಯಿಂದಲೇ ಮಾ

ಡುವನು. ಆದುದರಿಂದಲೇ ಪರಮಾತ್ಮನು ಸರ್ವೋತ್ತಮನು. ಕರುಣಾ ಸಮುದ್ರನು ಎಂಬ ತಾತ್ಪರ್ಯ. ||೧೨||

ಅವತಾರಿಕೆ:—ಪರಮಾತ್ಮನು ಸರ್ವತ್ರ ವ್ಯಾಪ್ತನಾಗಿ ನಮ್ಮನ್ನುದ್ಧರಿಸುವುದಕ್ಕಾಗಿ ಕಾದಿರಲು ಅವನನ್ನು ಬಿಟ್ಟು ಕಾಮ್ಯ ಫಲಾಪೇಕ್ಷೆಯಿಂದ ಅನ್ಯ ದೇವತೆಗಳನ್ನು ಭಜಿಸುವವರು ಮೂರ್ಖರೆಂದು ಸದೃಷ್ಟಾಂತವಾಗಿ ಹೇಳುತ್ತಾರೆ:—

ಭೂಮಿಯೊಳು ಜಲವಿರೆ ತೃಷಾರ್ತನು
ತಾ ಮರೆದು ಮೊಗವೆತ್ತಿ ಏಣ್ದೆಶೆ
ವ್ಯೋಮಮಂಡಲದೊಳಗೆ ಕಾಣದೆ ಪುಡುಕುವಂದದಲಿ ||
ಶ್ರೀಮನೋರಮ ಸರ್ವರಂತ
ರ್ಯಾಮಿಯಾಗಿರೆ ತಿಳಿಯಲರಿಯದೆ
ಭ್ರಾಮಕರು ಭಜಿಸುವರು ಭಕುತಿಯಲನ್ಯ ದೇವತೆಯ ||

ಪದ್ಯಾರ್ಥ:—ಭೂಮಿಯೊಳು ಜಲವಿರೆ, ತೃಷಾರ್ತನು=ಬಾಯಾರಿಕೆಯುಳ್ಳ ಮನುಷ್ಯನು, ತಾ=ತಾನು ಮರೆದು=ಮರತು, ಹುಡುಕದೆ, ಮೊಗವೆತ್ತಿ=ಮುಖವನ್ನೆತ್ತಿ, ವ್ಯೋಮಮಂಡಲದೊಳಗೆ=ಆಕಾಶದೊಳಗೆ ಏಣ್ದೆಶೆ=೮ ದಿಕ್ಕುಗಳಲ್ಲೂ, ಕಾಣದೆ=ನೀರನ್ನು ಕಾಣದೆ ಪುಡುಕುವಂದದಲಿ=ಹುಡುಕುವಂತೆ, ಶ್ರೀಮನೋರಮ=ರಮಾದೇವಿಯರ ಮನಸ್ಸನ್ನಪಹರಿಸುವ ರೂಪಗುಣಗಳುಳ್ಳ ಶ್ರೀಪರಮಾತ್ಮನು, ಸರ್ವರಂತರ್ಯಾಮಿಯಾಗಿರೆ=ಪ್ರತಿಒಬ್ಬರ ಹೃದಯಕಮಲದಲ್ಲಿದ್ದರೂ, ತಿಳಿಯಲರಿಯದೆ=ಅದನ್ನು ತಿಳಿದುಕೊಳ್ಳುವ ಉಪಾಯವನ್ನು ತಿಳಿಯದೆ, ಭ್ರಾಮಕರು=ಭ್ರಾಂತಿಯುಳ್ಳವರು, ಅನ್ಯದೇವತೆಯ=ಉಚ್ಛಿಷ್ಟಗಣಪತಿ ಮೊದಲಾದ ಇತರ ದೇವತೆಗಳನ್ನು, ಭಕುತಿಯಲಿ ಭಜಿಸುವರು.

ತಾತ್ಪರ್ಯ:—ಭೂಮಿಯಮೇಲೆ ಕೆರೆಭಾವಿಗಳಲ್ಲಿ ನೀರು ತುಂಬಿರುವುದನ್ನು, ಕೇಳಿ ತಿಳಿದುಕೊಳ್ಳುವ ಯೋಗ್ಯತೆ ಇಲ್ಲದೆ ಮೂರ್ಖನು ಭ್ರಾಂತಿಯಿಂದ ಭೂಮಿಯಲ್ಲಿ ನೀರನ್ನು ಹುಡುಕುವದು ಬಿಟ್ಟು ಆಕಾಶದಲ್ಲಿ ೮ ದಿಕ್ಕುಗಳಲ್ಲಿ ಎಲ್ಲಾದರೂ ನೀರಿರುವುದೇನೋ ಯೆಂದು ತಲೆ ಮೇಲಕ್ಕೆತ್ತಿ ನೋಡಿದರೆ ಪ್ರಯೋಜನವೇನು? ಆಕಾಶದಲ್ಲಿ ನೀರು ದೊರೆಯು

ವುದೆ? ಹಾಗೆಯೇ ಜಗತ್ಪ್ರಭುವಾದ ಸ್ವಾಮಿಯು ಸರ್ವವ್ಯಾಪ್ತನಾಗಿ ಭಕ್ತರನ್ನುದ್ಧರಿಸಲು ಪ್ರತಿ ಒಬ್ಬರ ಹೃದಯಾಕಾಶದಲ್ಲಿಯೂ ಕಾದಿರಲು, ಅಲ್ಪವಾದ ವಿಷಯಾದಿ ಭೋಗಗಳನ್ನು ಅಪೇಕ್ಷಿಸುತ್ತಾ ಸ್ವತಂತ್ರನಾದ ಪರಮಾತ್ಮನನ್ನು ಬಿಟ್ಟು ಉಚ್ಛಿಷ್ಟ ಗಣಪತಿ ಮೊದಲಾದ ಅನ್ಯದೇವತೆಯನ್ನು ಭಜಿಸುವರು. ಆದರಿಂದಾಗುವ ಫಲವೇನು. ಆಗಲೂ ಅನ್ಯದೇವತೆಗಳ ಅಂತರ್ಯಾಮಿಯಾಗಿದ್ದು ಪರಮಾತ್ಮನೇ ವರವನ್ನು ಕೊಡುವವನು. ಪರಮಾತ್ಮನನ್ನೇ ಭಜಿಸಿದರೆ ಶಾಶ್ವತಫಲವು ಬರುವದೆಂಬ ತಾತ್ಪರ್ಯ. ||೧೩||

ಅವತಾರಿಕೆ:—ಪರಮಾತ್ಮನನ್ನು ಭಜಿಸುವುದರಿಂದ ಮೂರು ಪ್ರಕಾರಫಲವಾಗುವುದು. ಅದರಲ್ಲಿ ಮುಖ್ಯ ಫಲವು ವೈಕುಂಠವೆಂದು ಹೇಳುತ್ತಾರೆ.

**ಮುಖ್ಯಫಲ ವೈಕುಂಠ ಮುಖ್ಯಾ**
**ಮುಖ್ಯಫಲವು ಮಹರಾದಿಲೋಕಾ**
**ಮುಖ್ಯಫಲವೈಷಿಕವೆಂದರಿದತಿಭಕುತಿಯಿಂದ ||**
**ರಕ್ಕಸಾರಿಯ ಭಜಿಸುತಲಿ ನಿ**
**ರ್ದುಃಖನಾಗುನಿರಂತರದಿ ಪೊರೆ**
**ವೊಕ್ಕ ವರ ಬಿಡಭಕ್ತವತ್ಸಲ ಭಾರತೀಶಪಿತಾ ||**

ಪದ್ಯಾರ್ಥ:—ಮುಖ್ಯಫಲ=ಭಗವಂತನಾರಾಧನೆಯಿಂದ ನಾವು ಹೊಂದಬೇಕಾದ ಫಲಗಳಲ್ಲಿ ಮುಖ್ಯವಾದುದು, ವೈಕುಂಠ=ವೈಕುಂಠ ಲೋಕವನ್ನು ಸೇರುವುದು ಮುಖ್ಯಾಮುಖ್ಯಫಲ=ಮುಖ್ಯವೂ ಅಲ್ಲ. ಅಮುಖ್ಯವೂ ಅಲ್ಲ ಮಧ್ಯಮ ಫಲವು ಮಹರಾದಿಲೋಕ=ಮಹರ್ಲೋಕ, ಜನೋಲೋಕ ಮೊದಲಾದ ಲೋಕವನ್ನು ಹೊಂದುವುದು,ಅಮುಖ್ಯಫಲ= ಅಮುಖ್ಯವಾದ ಫಲವು, ವೈಷಿಕವು=ವಿಷಯ ಸುಖವನ್ನು ಹೊಂದುವದು, ಎಂದರಿತು=ಎಂದು ತಿಳಿದುಕೊಂಡು, ಅತಿ ಭಕುತಿಯಿಂದ=ಹೆಚ್ಚಾದ ಭಕ್ತಿಯಿಂದ, ರಕ್ಕಸಾರಿಯ=ರಾಕ್ಷಸರ ಶತ್ರುವಾದ ಪರಮಾತ್ಮನನ್ನು, ಭಜಿಸುತಲಿ=ಭಜನೆ ಮಾಡುತ್ತ, ನಿರ್ದುಃಖನಾಗು=ಶಾಶ್ವತವಾದ ದುಃಖ ರಹಿತವಾದ ವೈಕುಂಠವನ್ನು ಹೊಂದು,ಭಕ್ತರಲ್ಲಿ ಪ್ರೀತಿವುಳ್ಳ ಭಾರತೀಶ=

ಪಿತಾ= ಭಾರತೀಪತಿಯಾದ ಮುಖ್ಯ ಪ್ರಾಣದೇವರ ತಂದೆಯಾದ ಶ್ರೀಹರಿಯು, ನಿರಂತರಕೆ= ಅವಿಚ್ಛಿನ್ನವಾಗಿ, ಮೊರೆಪೊಕ್ಕವರ ಬಿಡ= ರಕ್ಷಿಸದೆ ಬಿಡನು. ||೧೪||

ತಾತ್ಪರ್ಯ:—ಫಲಗಳಲ್ಲಿ ಮುಖ್ಯ ಫಲವೆಂತಲೂ, ಮುಖ್ಯಾಮುಖ್ಯವೆಂತಲೂ, ಅಮುಖ್ಯವೆಂತಲೂ ಮೂರು ಪ್ರಕಾರಗಳುಂಟು. ಅವುಗೆಳಲ್ಲಿ ಶಾಶ್ವತಸುಖವನ್ನು ಕೊಡುವುದು ವೈಕುಂಠಲೋಕವು, ಇದೇ ಮುಖ್ಯ ಫಲವು. ಈ ಫಲವನ್ನು ಪಡೆಯಬೇಕಾದರೆ ನಿಷ್ಕಾಮದಿಂದ ಪರಮಾತ್ಮನನ್ನು ಅವಿಚ್ಛಿನ್ನಭಕ್ತಿಯಿಂದ ಭಜಿಸಬೇಕು. ಪರಮಾತ್ಮನ ಮಧ್ಯಮ ಭಕ್ತರಿಗೆ ಮುಖ್ಯಾಮುಖ್ಯವಾದ ಮಹರ್ಲೋಕ, ಜನೋಲೋಕ, ತಪೋಲೋಕ,ಸತ್ಯಲೋಕ ಮೊದಲಾದ ಲೋಕಗಳು ದೊರೆಯುವವು. ಈ ಲೋಕಗಳಿಗೆ ಹೋದವರು ಶಾಪಾದಿಗಳಿಂದ ಮತ್ತೂ ಭೂಲೋಕಕ್ಕೆ ಬರುವ ಸಂಭವ ಉಂಟು. ಆದರೂ ಸ್ವರ್ಗಾದಿಗಳಂತೆ ಪುಣ್ಯಕ್ಷೀಣವಾಗಿ ಭ್ರಷ್ಟರಾಗಿ ಕೆಳಗೆ ಬರುವುದಿಲ್ಲ, ಮೇಲಿಂದ ಮೇಲೆ ಮುಕ್ತಲೋಕಕ್ಕೆ ಹೋಗಿ ಮುಕ್ತಿಕಾಲದಲ್ಲಿ ಬ್ರಹ್ಮನಿಂದ ಕೂಡಿ ಮುಕ್ತರಾಗುವರು. ಯದ್ಯಪಿ ಮುಕ್ತರಾಗುವವರೆಲ್ಲರಿಗೂ ಬ್ರಹ್ಮದೇವರೊಂದಿಗೇನೆ ಮುಕ್ತಿಯು. ಆದರೂ ಮೊದಲೇ ಸಾಧನಪೂರ್ತಿಯಾಗಿ ವೈಕುಂಠಕ್ಕಾಗಿ ಹೊರಟವರು ಬ್ರಹ್ಮಲೋಕದಲ್ಲಿದ್ದರೂ ಮುಕ್ತಿಯಲ್ಲಿದ್ದಂತೆ ಸುಖವನ್ನನುಭವಿಸುತ್ತಾ ಕಾಲವನ್ನು ನಿರೀಕ್ಷಿಸುತ್ತಿರುವರು. ಮಹರಾದಿಲೋಕಕ್ಕೆ ಹೋಗುವವರು ಹಾಗಲ್ಲ ಆ ಕಾಲಕ್ಕೆ ಸರಿಯಾಗಿ ಬ್ರಹ್ಮಲೋಕವನ್ನು ಸೇರಿ ಮುಕ್ತರಾಗುವರು. ಈ ಮಧ್ಯದಲ್ಲಿ ಭೂಮಿಗೆ ಬರುವ ಸಂಭವವೂ ಉಂಟು, ಕೇವಲ ಅಮುಖ್ಯ ಫಲವು ಸ್ವರ್ಗಲೋಕ, ಅಥವಾ ಭೂಮಿಯಲ್ಲಿ ವಿಷಯಾದಿ ಭೋಗಗಳನ್ನು ಅನುಭವಿಸುವುದು, ಇವೆರಡು ಕೇವಲ ನಶ್ವರವಾದುವು. ಪುಣ್ಯವಿರುವವರೆಗೂ ಸ್ವರ್ಗವನ್ನನುಭವಿಸುವರು. ಪುಣ್ಯಕ್ಷೀಣವಾಗಲು ಭ್ರಷ್ಟರಾಗುವರು. ಈ ವಿಷಯದಲ್ಲಿ ಶಾಂಡಿಲ್ಯತತ್ವದ ವಾಕ್ಯ— "ಅಧಮಾತ್ಸ್ವರ್ಗಲೋಕಾದಿರ್ಮಧ್ಯಮಾದ್ಬ್ರಹ್ಮಣಃಪದಂ || ಉತ್ತಮಾನ್ಮೋಕ್ಷಮಾಪ್ನೋತಿ ಪ್ರಸಾದಾಚ್ಚಕ್ರಪಾಣಿನಃ ||" ಶ್ರೀಪರಮಾತ್ಮನ ಅಧಮಪ್ರಸಾದದಿಂದ ಭೂಲೋಕದಲ್ಲಿ ವಿಷಯ ಸುಖಾನುಭವವಾಗಲಿ ಅಥವ ಸ್ವರ್ಗಾದಿಗಳಾಗಲಿ ಪ್ರಾಪ್ತವಾಗುವದು. ಮಧ್ಯಮ ಪ್ರಸಾದದಿಂದ ಮಹ

ಲೋಕ ಮೊದಲು ಸತ್ಯಲೋಕದವರೆಗೂ ಇರುವ ಯಾವುದಾದರೂ ಒಂದು ಲೋಕದಲ್ಲಿ ವಾಸಮಾಡುವರು. ಪರಮಾತ್ಮನ ಉತ್ತಮ ಪ್ರಸಾದವನ್ನು ಹೊಂದಿದವರು ಮೋಕ್ಷವನ್ನು ಸೇರುವರು ಎಂದಿರುವುದು. ಇದೇ ಅಭಿಪ್ರಾಯವನ್ನೆ ದಾಸರಾಯರು ಇಲ್ಲಿ ಹೇಳಿರುವರು. ಪರಮಾತ್ಮನು ಭಕ್ತವತ್ಸಲನು. ನೀನೇ ಗತಿಯೆಂದು ಮರೆಹೊಕ್ಕವರನ್ನು ಎಂದಿಗೂ ಬಿಡನು. ಆದ್ದರಿಂದ ನೀನು ಪರಮಾತ್ಮನನ್ನು ಭಜಿಸಿ ಉತ್ತಮ ಪ್ರಸಾದವನ್ನು ಪಡೆದು ಮುಖ್ಯಫಲವಾದ ಮುಕ್ತಿಯನ್ನು ಹೊಂದಿ ಸ್ವರೂಪ ಸುಖವನ್ನನುಭವಿಸು ಎಂಬ ಅಭಿಪ್ರಾಯ ||೧೪||

ಅವತಾರಿಕೆ:—ಭಾಗವತಾದಿ ಪುರಾಣಗಳಲ್ಲಿಯೂ ಮಾಸಮಾಹಾತ್ಮ್ಯಗಳಲ್ಲಿಯೂ ಕರ್ಮಗಳಿಗೆ ಫಲವನ್ನು ಹೇಳಿರುವರು. "ಸ್ವರ್ಗಕಾಮೋ ಯಜೇತ" ಸ್ವರ್ಗಾಪೇಕ್ಷೆಯುಳ್ಳವನು ಯಾಗವನ್ನು ಮಾಡಬೇಕೆಂದು ಶ್ರುತಿಯಿರುವುದು. ಹೀಗಿರಲು ಫಲವನ್ನಪೇಕ್ಷಿಸದೆ ಮಾಡುವ ಕರ್ಮಗಳು ಮುಕ್ತಿಯನ್ನು ಕೊಡುವವೆಂದು ಏಕೆ ಹೇಳಿದರೆಂಬುದನ್ನು ವಿವರಿಸುತ್ತಾರೆ

**ವ್ಯಾಧಿಯಿಂ ಪೀಡಿತ ಶಿಶುವಿಗೆ ಗು**
**ಡೋದಕವ ನೆರದದಕೆ ಔಷಧಿ**
**ತೇದುಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ ||**
**ಬಾದರಾಯಣ ಭಕ್ತಜನಕೆ ಪ್ರ**
**ಸಾದರೂಪಕನಾಗಿ ಭಾಗವ**
**ತಾದಿಯಲಿ ಪೇಳಿದನು ಧರ್ಮಾರ್ಥಗಳ ಫಲವೆಂದು ||**

ಪದ್ಯಾರ್ಥ:—ವ್ಯಾಧಿಯಿಂ=ರೋಗದಿಂದ, ಪೀಡಿತ=ಪೀಡಿಸಲ್ಪಟ್ಟ, ಶಿಶುವಿಗೆ=ಮಗುವಿಗೆ ಗುಡೋದಕವನೆರೆದು=ರುಚಿ ಹುಟ್ಟಿಸಿ ಸಮಾಧಾನಪಡಿಸುವುದಕ್ಕಾಗಿ, ಬೆಲ್ಲದನೀರನ್ನು=ಪಾನಕ ಕೊಟ್ಟು, ಅದಕೆ =ಆ ಪಾನಕಕ್ಕೆ, ಔಷಧಿ=ಔಷಧಿಯನ್ನು, ತೇದು=ಗಂಧದಂತೆ ಕಲ್ಲಿನ ಮೇಲೆ ತೆಗೆದು ಪಾನಕದಲ್ಲಿ ಸೇರಿಸಿ, ಕುಡಿಸುವ ತಾಯಿಯೋಪಾದಿಯಲಿ, ಸರ್ವಜ್ಞ=ಸರ್ವಜ್ಞರಾದ, ಬಾದರಾಯಣ=ಬದರೀ ವೃಕ್ಷಗಳನ್ನಾಶ್ರಯಿಸಿದ್ದುದರಿಂದ ಬಾದರಾಯಣ ಶಬ್ದವಾಚ್ಯರಾದ ವೇದವ್ಯಾಸ ದೇವರು, ಭಕ್ತಜನಕೆ, ಪ್ರಸಾದರೂಪಕನಾಗಿ=ಅನುಗ್ರಹವನ್ನು ಮಾಡುವುದಕ್ಕಾಗಿ,

ಭಾಗವತಾದಿಯಲಿ, ಧರ್ಮಾರ್ಥಗಳೆ ಫಲವೆಂದು=ಕಾಮ್ಯ ಫಲಾಪೇಕ್ಷೆ ಯಿಂದ ಕರ್ಮಗಳನ್ನು ಮಾಡಿದರೆ ಅದರಿಂದ ಧರ್ಮ ಅರ್ಥ ಮೊದಲಾದ ಪುರುಷಾರ್ಥಗಳು ಸಿದ್ಧಿಸುವವೆಂದು ಪೇಳಿದರು.

ತಾತ್ಪರ್ಯ:—ಲೋಕದಲ್ಲಿ ತಾಯಿಯಾದವಳು ಮಕ್ಕಳಿಗೆ ಬಂದಿರುವ ರೋಗವನ್ನು ಪರಿಹಾರಮಾಡುವುದಕ್ಕಾಗಿ ಔಷಧವನ್ನು ಹಾಕಬೇಕಾದರೆ, ಆ ಮಕ್ಕಳು ಆ ಔಷಧವನ್ನು ಕುಡಿಯಲು ಒಪ್ಪದೆ ಅಳುತ್ತಿದ್ದರೆ, ಆಗ ಆ ಮಕ್ಕಳ ಕೈಯ್ಯಲ್ಲಿ ಸ್ವಲ್ಪ ಬೆಲ್ಲವನ್ನು ಕೊಟ್ಟು "ಇಗೋ ಈ ಔಷಧವನ್ನು ಕುಡಿದುಬಿಡು ಈ ಬೆಲ್ಲವನ್ನು ತಿನ್ನಬಹುದು" ಎಂದು ಸಮಾಧಾನಪಡಿಸಿ ಕೈಯ್ಯಲ್ಲಿ ಬೆಲ್ಲವನ್ನು ಕೊಟ್ಟು ಔಷಧವನ್ನು ಕುಡಿಸುವಳು. ಆದರೆ ಬೆಲ್ಲದಿಂದ ರೋಗಶಾಂತಿಯೆ? ಅಥವಾ ಔಷಧವನ್ನು ತೆಗೆದುಕೊಂಡರೆ ಬೆಲ್ಲವನ್ನು ಕೊಡುತ್ತೇನೆಂದು ಹೇಳಿದ ತಾಯಿಯ ಅಭಿಪ್ರಾಯವು ಔಷಧವನ್ನು ಕುಡಿದುದಕ್ಕೆ ಫಲವು ಬೆಲ್ಲವನ್ನು ತಿನ್ನುವುದು ಯೆಂಬುವದೆ? ಎರಡೂ ಅಲ್ಲ. ಹಟಮಾಡುವ ಮಕ್ಕಳಿಗೆ ರುಚಿ ತೋರಿಸುವದೇ ತಾಯಿಯ ಅಭಿಪ್ರಾಯ, ಔಷಧದಿಂದ ಆಗುವ ಫಲ ರೋಗಶಾಂತಿ. ಇದರಂತೆ ನಿಷ್ಕಾಮನಾಗಿ ಭಕ್ತಿಯಿಂದ ಪರಮಾತ್ಮನನ್ನು ಭಜಿಸುವುದೇ ಸಂಸಾರವೆಂಬ ರೋಗಕ್ಕೆ ಔಷಧವು. ಅದರಲ್ಲಿ ಆಸಕ್ತಿಯಿಟ್ಟು ಇರುವ ಬಾಲಕರಂತಿರುವ, ಯೋಗ್ಯರಾದ ಅಧಿಕಾರಿಗಳಿಗೆ ಮೊಟ್ಟಮೊದಲು, ರುಚಿಹುಟ್ಟಿಸುವುದಕ್ಕಾಗಿ ಕರ್ಮಕ್ಕೆ ಫಲವನ್ನು ಹೇಳಿರುವರೇ ಹೊರತು ಫಲಾಪೇಕ್ಷೆಯಿಂದಲೇ ಕರ್ಮಗಳನ್ನು ಮಾಡಬೇಕೆಂಬ ಉದ್ದೇಶ್ಯವು ವೇದವ್ಯಾಸದೇವರದಲ್ಲ. ಭಾಗವತ ದ್ವಾದಶಸ್ಕಂಧದ ಕಡೆಯ ಭಾಗದಲ್ಲಿ, ಭಾಗವತ ಶ್ರವಣಮಾಡಿದರೆ "ಘೃತಕುಲ್ಯಾಃ ಪಯಃಕುಲ್ಯಾಃ ಮದುಕುಲ್ಯಾಶ್ಚ ತತ್ಫಲಂ" ತುಪ್ಪದ ದೋಣಿಗಳು, ಹಾಲಿನ ದೋಣಿಗಳು ಜೇನು ತುಪ್ಪದ ದೋಣಿಗಳು ಇವನ ಮನೆಯಲ್ಲಿ ಆಗುವವು. ಕುಲ್ಯ ಅಂದರೆ ದೇವಖಾತವೆಂದು ಬೆಟ್ಟ ಮೊದಲಾದವುಗಳ ಅಡಿವಾರದಲ್ಲಿ, ಶಿಡಿಲು ಮೊದಲಾದಕಾರಣಗಳಿಂದ ತಾನಾಗಿ ಆಗಿರುವ ಡೊಣೆಗಳಿಗೆ ಹೆಸರು. ಹಾಗೆ ಹಾಲು ಮೊದಲಾದ ದೋಣಿಗಳು ಭಾಗವತ ಶ್ರವಣಮಾಡುವವನ ಮನೆಯಲ್ಲಿ ಆಗುವವೆಂದು ಹೇಳಿರುವರು. ಅಂದರೆ ಅಂತಹ ಮಹದೈಶ್ವರ್ಯ ಬರುವದೆಂದು ತಾತ್ಪರ್ಯ. ಮತ್ತು ನಾರಾಯಣ ವರ್ಮಾದಿ ಮಂತ್ರಗ

ಳನ್ನು ಜಪಿಸಿದರೆ, " ರಾಜದಸ್ಯುಗ್ರಹಾದಿಭ್ಯೋವ್ಯಾಧ್ಯಾಭ್ಯಶ್ಚ ಕಶ್ಚನ" ಅವನಿಗೆ ರಾಜನಿಂದಾಗಲಿ, ಚೋರನಿಂದಾಗಲಿ ನವಗ್ರಹಗಳಿಂದಾಗಲಿ, ರೋಗಗಳಿಂದಾಗಲಿ ಅಂತು ಯಾವವಿಧವಾದ ಪೀಡೆಯು ಆಗುವದಿಲ್ಲವೆಂದು ಹೇಳಿರುವರು. ಹೀಗೆ ಹೇಳಿರುವ ವೇದವ್ಯಾಸದೇವರ ಅಭಿಪ್ರಾಯವು ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡಬೇಕೆಂಬುವದೇ ಆಗಲಿ, ಈ ಕರ್ಮಗಳಿಗೆ ಇಷ್ಟೇ ಫಲವೆಂದಾಗಲಿ ಅಲ್ಲ. ಅಲ್ಪಾಧಿಕಾರಿಗಳನ್ನು ಉದ್ದೇಶ ಮಾಡಿ ಹೀಗೆ ಹೇಳಿರುವರು, ಇವೇ ಕರ್ಮಗಳನ್ನೇ ಭಗವತ್ಪ್ರೀತಿಗೋಸ್ಕರ ಮಾಡಿದರೆ ಅದರ ಫಲ ಮುಕ್ತಿಯೆಂದು ತಿಳಿಯಬೇಕು. ಗೀತೆಯಲ್ಲಿ "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಕರ್ಮಮಾಡುವುದರಲ್ಲಿ ಮಾತ್ರ ನಿನಗೆ ಅಧಿಕಾರವೇ ಹೊರತು ಫಲವನ್ನು ಅಪೇಕ್ಷಿಸುವುದರಲ್ಲಿ ನಿನಗೆ ಅಧಿಕಾರವಿಲ್ಲವೆಂದು ಅರ್ಜುನನಿಗೆ ಶ್ರೀ ಕೃಷ್ಣನೇ ಹೇಳಿರುವನು. ಈ ಕಾರಣಗಳಿಂದ ಫಲಗಳನ್ನು ಹೇಳಿರುವುದು ರುಚಿತೋರಿಸುವುದಕ್ಕೆಂದು ತಿಳಿದು ಫಲಾಪೇಕ್ಷೆಯನ್ನು ಬಿಟ್ಟು ಭಗವತ್ಪ್ರೀತಿಗೋಸ್ಕರ ಕರ್ಮಗಳನ್ನು ಮಾಡಿ ಮುಕ್ತಿಯನ್ನು ಪಡೆಯಬೇಕು ||೧೫||

ಅವತಾರಿಕೆ:—ಸಂಸಾರವು ಮತ್ತೊಬ್ಬರು ಸುಖಪಡುವುದನ್ನು ದೂರದಿಂದ ನೋಡುವಾಗ ರಮಣೀಯವಾಗಿ ಕಾಣುವುದು, ಸಂಸಾರದಲ್ಲಿ ಹೊಕ್ಕರೆ ಬಹಳ ಕಷ್ಟವಾಗಿ ಕಾಣುವದೆಂದು ಸದೃಷ್ಟಾಂತವಾಗಿ ಹೇಳುತ್ತಾರೆ —

**ದೂರದಲ್ಲಿಹ ಪರ್ವತ ಘನಾ**
**ಕಾರ ತೋರ್ಪದು ನೋಳ್ಪ ಜನರಿಗೆ**
**ಸಾರ ಗೈಯಲು ಸರ್ಪ ವ್ಯಾಘ್ರಗಳಿಂದೆ ಭಯವಿಹುದು॥**
**ಘೋರತರ ಸಂಸಾರ ಸೌಖ್ಯಾ**
**ಸಾರ ತರವೆಂದರಿದು ನಿಶ್ಯ ರ**
**ಮಾ ರಮಣನಾರಾಧಿಸುವರದರಿಂದೆ ಬಲ್ಲವರು॥**

ಪದ್ಯಾರ್ಥ:—ದೂರದಲ್ಲಿಹ=ದೂರದಲ್ಲಿರುವ, ಪರ್ವತ=ಬೆಟ್ಟವು. ಘನಾಕಾರ=ಮೇಘದಂತೆ ನುಣುಪಾದ ಆಕಾರ ಉಳ್ಳದ್ದಾಗಿ, ನೋಳ್ಪ ಜನರಿಗೆ, ತೋರ್ಪುದು=ಕಾಣುವುದು, ಸಾರಗೈಯಲು=ಸಮೀಪಕ್ಕೆ

ಹೋಗಿನೋಡಲು, ಸರ್ಪ=ಹಾವುಗಳು, ವ್ಯಾಘ್ರಗಳಿಂದ=ಹುಲಿಗಳಿಂದ ಕೂಡಿ, ಭಯವಿಷದು=ಭಯಂಕರವಾಗಿರುವದು, ಹಾಗೆಯೇ, ಘೋರ ತರ ಸಂಸಾರಸೌಖ್ಯ=ಅನುಭವಿಸಲು ಅಶಕ್ಯವಾದ ಭಯಂಕರವಾದ ಸಂ ಸಾರ ಸೌಖ್ಯವನ್ನು,ಅಸಾರತರವೆಂದರಿದು=ನಿಷ್ಪ್ರಯೋಜನವಾದುದೆಂದು ತಿಳಿದು, ಅದರಿಂದ=ಆ ಕಾರಣದಿಂದಲೆ ಬಲ್ಲವರು=ಜ್ಞಾನಿಗಳು, ರಮಾರಮಣನ= ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನನ್ನು, ಆರಾಧಿ ಸುವರು= ಪೂಜಿಸುವರು.

ತಾತ್ಪರ್ಯ:—"ದೂರತಃ ಪರ್ವತೋರಮ್ಯಃ" ಎಂಬಂತೆ ಪರ್ವತ ವನ್ನು ದೂರದಿಂದ ನೋಡಿದರೆ, ಮೇಘವಿದ್ದಂತೆ ನುಣುಪಾಗಿಯೂ, ರಮ ಣೀಯವಾಗಿಯೂ ಕಾಣುವುದು. ಹತ್ತಿರದಲ್ಲಿ ಹೋಗಿ ನೋಡಿದರೆ ಸರ್ಪ, ಹುಲಿ, ಮೊದಲಾದ ದುಷ್ಟಪ್ರಾಣಿಗಳಿಂದ ಕೂಡಿ ಭಯಂಕರವಾಗಿ ಇರು ವುದು, ಅದರಂತೆ ಸಂಸಾರದಲ್ಲೂ ದೊಡ್ಡ ಮಹಡಿಯ ಮನೆಯನ್ನು ಕಟ್ಟಿಕೊಂಡು ಹಂಸ ತೂಲಿಕಾ ಮೊದಲಾದವುಗಳಲ್ಲಿ ಸುಖಪಡುತ್ತಾ ಹೆಂಡರು ಮಕ್ಕಳೊಂದಿಗಿರುವವರನ್ನು ನೋಡಿ ಇವರು ಸಂಸಾರದಲ್ಲಿ ಎಷ್ಟು ಸುಖದಿಂದಿರುವರು ಎಂದು ಭ್ರಾಂತಿಗೊಂಡು ನಾವು ಅವರಂತೆ ಸುಖಪಡ ಬೇಕೆಂಬ ಭ್ರಾಂತಿಯಿಂದ ಸಂಸಾರದಲ್ಲಿ ತಗಲಿಕೊಂಡು ನಾನಾಪ್ರಕಾರ ದುಃಖಾನುಭವಕಾಲದಲ್ಲಿ ಜನ್ಮ ಜನ್ಮಕ್ಕೂ ಸಂಸಾರವು ಬೇಡವೆಂದು ತೋರುವುದು. ಅದ್ದರಿಂದ ಜ್ಞಾನಿಗಳು ಅಸಾರತರವಾದ ಈ ಸಂಸಾರ ದಲ್ಲಿ ಪರಮಾತ್ಮನ ಆರಾಧನೆ ಒಂದೇ ಸಾರವಾದುದೆಂದು ತಿಳಿದು ಶ್ರೀ ರಮಾರಮಣನನ್ನು ಆರಾಧಿಸುತ್ತಿರುವರು ||೧೬||

ಅವತಾರಿಕೆ:—ಅಸ್ವತಂತ್ರನಾದ ಮನುಷ್ಯನು ತಾನು ಸ್ವತಂತ್ರ ದಿಂದ ಕರ್ಮಗಳನ್ನು ಮಾಡುತ್ತೇನೆಂದು ಭಾವಿಸಿ ದಾನ ಧರ್ಮಾದಿಗಳನ್ನು ಮಾಡಿದರೆ, ಆ ಫಲಗಳೆಲ್ಲವು ಹಸಿ (ಸುಡದೆ ಇರುವ) ಗಡಿಗೆಯಲ್ಲಿನ ನೀರಿನಂತೆ ಎಲ್ಲವೂ ವ್ಯರ್ಥವಾಗಿ ಹೋಗುವದೆಂದು ಹೇಳುತ್ತಾರೆ—

**ಕೆಸರ ಘಟಗಳ ಮಾಡಿ ಬೇಶಿಕೆ**
**ಬಿಸಲೊಳಿಟ್ಟೊಣಗಿಸಿದರದು ಘನ**
**ರಸವ ತುಂಬಲುಬಹುದೆ ಸರ್ವಸ್ವತಂತ್ರ ತಾನೆಂಬಾ||**

ಪಶುಪನರ ನೇನೇನು ಮಾಳ್ಪ
ನಶನ ದಾನ ಸ್ನಾನ ಕರ್ಮಗ
ಳೊಸರಿ ಪೋಪವು ಬರಿದೇ ದೇಹಾಯಾಸವನೆ ಕೊಟ್ಟು||

ಪದ್ಯಾರ್ಥ:—ಕೆಸರ ಘಟಗಳ= ಮಣ್ಣಿನ ಕೆಸರಿನಿಂದ ಗಡಿಗೆಗಳನ್ನು ಮಾಡಿ, ಬೇಶಿಕೆ ಬಿಸಲೊಳು= ಗ್ರೀಷ್ಮಋತುವಿನ ಬಿಸಿಲಿನೊಳಗೆ ಅವುಗಳನ್ನು ಇಟ್ಟು, ಒಣಗಿಸಿದರೆ, ಅದು= ಅದರೊಳಗೆ, ಘನರಸವ= ಘನತರ ನೀರು ಮೊದಲಾದ ದ್ರವ ವಸ್ತುಗಳನ್ನು, ತುಂಬಲುಬಹುದೆ= ತುಂಬಲಾದೀತೆ? ಅದರಂತೆಯೇ ಸರ್ವ ಸ್ವತಂತ್ರ ತಾನೆಂಬ= ನಾನೇ ಎಲ್ಲಾ ಕೆಲಸಗಳನ್ನು ಮಾಡುತ್ತೇನೆಂಬ ಪಶುಪನು= ದನಕಾಯುವನಂತಿರುವ ಮೂರ್ಖಪುರುಷನು, ಯೇನೇನು ಮಾಳ್ಪ= ಯಾವ ಯಾವ ಕಾರ್ಯಗಳನ್ನು ಮಾಡುವನೋ ಅಂತಹ, ಅನಶನ= ಉಪವಾಸ,ದಾನ, ಸ್ನಾನ ಮೊದಲಾದ ಕರ್ಮಗಳು, ಬರಿದೆ, ದೇಹಾಯಾಸವನೆ, ಕೊಟ್ಟು= ಸುಮ್ಮನೆ ದೇಹಶ್ರಮ ಮಾತ್ರ ಉಂಟುಮಾಡಿ, ಒಸರಿಪೋಪವು= ಹೊರ ಹೊರಟು ಹೋಗಿಬಿಡುವವು

ತಾತ್ಪರ್ಯ:—ಮಣ್ಣಿನಿಂದ ಘಟವನ್ನು ಮಾಡಿ ಬಿಸಲಿನೊಳಗೆ ಒಣಗಿಸಿ ನೀರು ತುಂಬಿದರೆ ಅದರಲ್ಲಿನ ನೀರೆಲ್ಲವೂ ಸೋರಿಹೋಗುವುದು. ಅದೇ ಘಟವನ್ನು ಚನ್ನಾಗಿ ಸುಟ್ಟು, ನೀರು ತುಂಬಿದರೆ ನಿಲ್ಲುವದು. ಅದರಂತೆ ದೇಹವೆಂಬ ಘಟದಲ್ಲಿರುವ ಪುರುಷನು, ತಾನೇ ಸ್ವತಂತ್ರದಿಂದ ಕರ್ಮಮಾಡುತ್ತೇನೆಂದರೆ ಈ ದೇಹವು ಹುಟ್ಟಿದ್ದು ಹುಟ್ಟಿದಂತೆಯೇ ಇದ್ದು ಮಾಡಿದ ಪುಣ್ಯವೆಲ್ಲವೂ ನಿಷ್ಫಲವಾಗಿ ಹೋಗಿಬಿಡುವುದು. ಘಟವನ್ನು ಬೆಂಕಿಯಲ್ಲಿ ಸುಟ್ಟಂತೆ, ಶರೀರಕ್ಕೆ, ಭಗವಂತನೇ ಸ್ವತಂತ್ರ ಕರ್ತನು, ಸರ್ವೋತ್ತಮನು ಎಂಬ ಜ್ಞಾನವೇ ಅಗ್ನಿಪ್ರಾಯವು. ಅದರಿಂದ ಸುಟ್ಟ ಘಟವು ಹೇಗೆ ನೀರನ್ನು ಹೊರಗೆ ಬಿಡಲಾರದೋ ಹಾಗೆ ದೇಹವು ಮಾಡಿದ ಪುಣ್ಯವನ್ನು ಹೊರಗೆ ಬಿಡದೆ ಕಾಪಾಡುವದು. ಆದ್ದರಿಂದ ಸ್ವತಂತ್ರ ಕರ್ತನು ಪರಮಾತ್ಮನು ಎಂದು ಮಾಡಿದ ಪುಣ್ಯಪಾಪಗಳನ್ನು ಪರಮಾತ್ಮನಿಗೆ ಸಮರ್ಪಿಸದೆ, ತಾನೇ ಸ್ವತಂತ್ರ ಕರ್ತನೆಂದು ಭಾವಿಸುವ ಪಶುಪ್ರಾಯನಾದ ಮನುಷ್ಯನು ಮಾಡುವ ಸ್ನಾನ ದಾನಾದಿಕರ್ಮಗಳೆಲ್ಲ ಬರೆ ದೇಹಾಯಾಸಮಾಡಿ ನಿಷ್ಫಲವಾಗುವದೆಂಬ ಭಾವ ||೧೭||

ಅವತಾರಿಕೆ:—ವೈಷ್ಣವರಿಗೆ ಮುಖ್ಯವಾದುವು ವಿಷ್ಣು ದೀಕ್ಷಾ. ಇವು ಅಂತರ, ಬಾಹ್ಯ ಎಂದು ಎರಡು ಪ್ರಕಾರ, ಅವುಗಳ ಲಕ್ಷಣವನ್ನು ಮೂರು ಪದ್ಯಗಳಿಂದ ಹೇಳುತ್ತಾ ಈ ಪದ್ಯದಿಂದ ಆಂತರ ದೀಕ್ಷೆಯನ್ನು ಹೇಳುತ್ತಾರೆ.

ಎರಡು ದೀಕ್ಷೆಗಳಿಹವು ಬಾಹ್ಯಾಂ
ತರವೆನಿಪ ನಾಮದಲಿ ಬುಧರಿಂ
ದರಿತು ದೀಕ್ಷಿತನಾಗು ದೀರ್ಘ ದ್ವೇಷಗಳ ಬಿಟ್ಟು ||
ಹರಿಯೆ ಸರ್ವೋತ್ತಮ ಕ್ಷರಾಕ್ಷರ
ಪುರುಷ ಪೂಜಿತಪಾದ ಜನ್ಮಾ
ದ್ಯರ ವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ||

ಪದ್ಯಾರ್ಥ:—ಬಾಹ್ಯ= ಹೊರಗಿನ ದೀಕ್ಷೆ, ಅಂತರ= ಒಳಗಿನ ದೀಕ್ಷೆ, ಯೆನಿಪ ನಾಮದಲಿ=ಎಂಬ ಹೆಸರುಗಳಿಂದ, ಎರಡು ದೀಕ್ಷೆಗಳು, ಇಹವು= ಇರುವವು, ಬುಧರಿಂದ= ಜ್ಞಾನಿಗಳಿಂದ, ಅರಿತು= ಈ ದೀಕ್ಷೆಗಳ ಕ್ರಮವನ್ನು ತಿಳಿದು, ದೀಕ್ಷಿತನಾಗು= ದೀಕ್ಷೆಗಳನ್ನು ಅನುಸರಿಸು, ದೀರ್ಘದ್ವೇಷಗಳ ಬಿಟ್ಟು= ಯಾರಲ್ಲೂ ದೀರ್ಘದ್ವೇಷವನ್ನು ಮಾಡದೆ, ಹರಿಯೇ ಸರ್ವೋತ್ತಮ=ರಮಾ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು, ಕ್ಷರಾಕ್ಷರ ಪುರುಷ ಪೂಜಿತಪಾದ= ಕ್ಷರ= ಬ್ರಹ್ಮಾದಿ ಸಕಲ ಜೀವರು, ಅಕ್ಷರ= ರಮಾದೇವಿಯರು, ಪುರುಷ= ಇಂತಹ ಕ್ಷರಾಕ್ಷರ ಪುರುಷ ಸಂಕೇತವುಳ್ಳ ರಮಾ ಬ್ರಹ್ಮಾದಿಗಳಿಂದ, ಪೂಜಿತ ಪಾದ= ಪೂಜಿತವಾದ ಪಾದ ಕಮಲವುಳ್ಳವನು, ಜನ್ಮಾದಿ= ಹುಟ್ಟುವಿಕೆ ಮೊದಲಾದ, ಅರವಿದೂರ= ದೋಷ ವಿದೂರನು. (ದೋಷಗಳು ಇಲ್ಲದವನು) ಸುಖಾತ್ಮ= ಸುಖ ಸ್ವರೂಪನು, ಸರ್ವಗನು= ಸರ್ವತ್ರವಾಸಮಾಡುವವನು, ಎಂದು ಸ್ಮರಿಸುತಿರು.

ತಾತ್ಪರ್ಯ:—ವೈಷ್ಣವರಿಗೆ ಮುಖ್ಯವಾದುದು ದೀಕ್ಷಾಸ್ವೀಕಾರವು. ವಿಷ್ಣುದೀಕ್ಷೆಯನ್ನು ಸ್ವೀಕರಿಸದವನು ವೈಷ್ಣವನಾಗುವುದಿಲ್ಲ. ವಿಷ್ಣುರಹಸ್ಯ ೭ ನೆಯ ಅಧ್ಯಾಯ—"ಸರ್ವಾಸಾಮಪಿ ದೀಕ್ಷಾಣಾಂ ವಿಷ್ಣು ದೀಕ್ಷಾಧಿಕಾಮತಾ | ಯತಃಸರ್ವೇಶ್ವರೋವಿಷ್ಣುರ್ದೇವಾನಾಮಪಿ

ದೇವತಾ ||೫೩|| ಯಸ್ಯಸ್ಯಾ ದ್ವೈಷ್ಣವೀದೀಕ್ಷಾ ಸರ್ವೈರ್ಮಾನ್ಯಃ ಸದೀಕ್ಷಿತಃ || ಅವಜಾನಾತಿ ಯಸ್ತ್ವಂತು ಸೋಽವಜಾನಾತಿ ಕೇಶವಂ ||೫೫|| ಅಂಕಿತಂ ಶಂಖಚಕ್ರಾ ದ್ಯೈರ್ವಿಷ್ಣು ದೀಕ್ಷಾನ್ವಿತಂ ನರಂ|| ಯೋನಿಂದತಿ ವಿಮೂಢಾತ್ಮಾ ಸದ್ವೇಷ್ಟಾ ವಿಷ್ಣು ಮೇವಹಿ||೫೭|| ನೀಚ ವರ್ಣೋಽಪಿಯೋ ವಿಷ್ಣು ದೀಕ್ಷಾವಾನ್ ಸಹಿಬಂಧುವತ್ || ವಿನಾಪ್ಯಣಾಮಂ ಮಾನ್ಯಃಸ ರಾಮಕೃಷ್ಣಾದಿ ನಾಮಭಿಃ ||೫೮|| ಉಚ್ಚ ವರ್ಣೋಽಪಿ ಯೋ ವಿಪ್ರೋ ವೇದ ವೇದಾಂಗ ಪಾರಗಃ || ಸದಾಚಾರ ರತೋಽಪಿಸ್ಯಾ ದ್ವಿಷ್ಣುದೀಕ್ಷಾವಿವರ್ಜಿತಃ ||೫೯|| ಸಚೋರವದ್ಬಹಿಷ್ಕಾರ್ಯಸ್ತ್ರ ಸ್ಮೈದತ್ತಂಚ ನಿಷ್ಫಲಂ || ಪಾತ್ರಂ ಹಿ ಪರಮಂಪ್ರೋಕ್ತಂ ಹವ್ಯಕವ್ಯಾದಿತಃಸದಾ ||೬೦|| ಯಸ್ಯಸ್ಯಾ ಧ್ವೈಷ್ಣವೀದೀಕ್ಷಾದತ್ತಂ ಭವತಿ ಚಾಕ್ಷಯಂ|| '' ಲೋಕದಲ್ಲಿ ಅನ್ಯದೇವತೆಗಳನ್ನು ಉಪಾಸನೆ ಮಾಡುತ್ತಾ ಆ ದೀಕ್ಷೆಗಳನ್ನು ಸ್ವೀಕರಿಸುವವರು ಅನೇಕರುಂಟು. ಶೈವದೀಕ್ಷಾ ಮೊದಲಾದ ಎಲ್ಲಾ ದೀಕ್ಷೆಗಳಿಗಿಂತಲೂ ವಿಷ್ಣು ದೀಕ್ಷೆಯು ಶ್ರೇಷ್ಠವಾದುದು. ಅದೇಕೆಂದರೆ ಬ್ರಹ್ಮಾದಿ ಸಕಲ ದೇವತೆಗಳಿಗೂ ವಿಷ್ಣುವು ಸ್ವಾಮಿಯಾಗಿರುವನು. ದೇವತೆಗಳಿಗೆಲ್ಲಾ ದೇವತೆಯೆಂದೆನಿಸುವನು. ಆದ್ದರಿಂದ ವಿಷ್ಣು ದೀಕ್ಷೆಯು ಉತ್ತಮವಾದುದು. ಯಾವನಿಗೆ ವಿಷ್ಣುದೀಕ್ಷೆಯು ಇರುವುದೋ ಆತನು ಸರ್ವಮಾನ್ಯನು. ಅವನನ್ನು ಯಾರಾದರೂ ಅವಮಾನ ಮಾಡಿದರೆ ವಿಷ್ಣುವನ್ನೇ ಅವಮಾನಮಾಡಿದಂತಾಗುವುದು. ನೀಚವರ್ಣನಾದರೂ ಯಾವನು ವಿಷ್ಣು ದೀಕ್ಷೆಯುಳ್ಳವನೋ ಅವನನ್ನು ಬಂಧುವಂತೆ ಭಾವಿಸಬೇಕು. ಅಂತಹವನಿಗೆ ನಮಸ್ಕಾರ ಮಾತ್ರ ಮಾಡಬಾರದು—ರಾಮ ಕೃಷ್ಣಾದಿ ಹೆಸರುಗಳಿಂದ ಅವನನ್ನು ಗೌರವಪಡಿಸಬೇಕು ಉತ್ತಮ ಜಾತಿಯಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿ ವೇದ ವೇದಾಂಗಗಳಲ್ಲಿ ಪಾರಂಗತನಾಗಿ, ಸದಾಚಾರ ಸಂಪನ್ನನಾಗಿದ್ದರೂ, ವಿಷ್ಣು ದೀಕ್ಷೆಯನ್ನು ಸ್ವೀಕರಿಸದಿದ್ದರೆ, ಅವನನ್ನು ಚೋರನನ್ನು ಹೇಗೋ ಹಾಗೆ ಹೊರಗೆ ಹಾಕಬೇಕು. ಅವನಿಗೆ ಯಾವ ದಾನಾದಿಗಳನ್ನು ಕೊಟ್ಟರೂ ನಿಷ್ಫಲವೇ ಆಗುವುದು. ಯಾವನು ವೈಷ್ಣವದೀಕ್ಷೆ ಉಳ್ಳವನೋ ಅವನೇ ಸತ್ಪಾತ್ರನು. ಹವ್ಯಕವ್ಯಾದಿಗಳನ್ನು ಮಾಡುವಾಗ ಈತನಿಗೆ ಸ್ವಲ್ಪಕೊಟ್ಟರೂ, ಅದು ಅಕ್ಷಯವಾಗುವುದು. ಎಂಬಿವೇ ಮೊದಲಾದ ವಾಕ್ಯಗಳಿಂದ ವಿಷ್ಣು ದೀಕ್ಷೆಗೆ ಮಹಾ ಮಹಿಮೆ

ಯನ್ನು ಹೇಳಿರುವರು. ಈ ವಿಷ್ಣುದೀಕ್ಷೆಯಲ್ಲಿ ಬಾಹ್ಯದೀಕ್ಷೆಯೆಂತಲೂ ಆಂತರ ದೀಕ್ಷೆಯೆಂತಲೂ ಎರಡು ಪ್ರಕಾರ. ವಿಷ್ಣುರಹಸ್ಯದ ಮೇಲಿನ ಅಧ್ಯಾಯದಲ್ಲಿ "ದೀಕ್ಷಾಹಿ ದ್ವಿವಿಧಾಪ್ರೋಕ್ತಾ ಬಾಹ್ಯಾಭ್ಯಂತರ ಭೇದತಃ ಜ್ಞಾನಿನಾ ಮುಭಯಂತತ್ರ ಬಾಹ್ಯೋವ್ಯಾಜ್ಞಾನಿನಾಂ ಭವೇತ್ ||೩೯|| ಅಯಂ ಸರ್ವೇಷ್ಟದಾತಾ ಮೇ ಸರ್ವಾನಿಷ್ಟ ನಿವಾರಕಃ || ಸರ್ವೋತ್ಕೃಷ್ಟೋ ಯಮೇವೈಕಸ್ತದೀಯೋ ಹಂಸಮೇಪತಿಃ ||೪೦|| ಇತಿ ಜ್ಞಾನಂ ನಿಶ್ಚಿತಂ ಯತ್ಸಾದೀಕ್ಷಾಭ್ಯಂತರಾಮತಾ ||" ದೀಕ್ಷೆಯಲ್ಲಿ ಬಾಹ್ಯ ಆಭ್ಯಂತರವೆಂದು ಎರಡು ಪ್ರಕಾರಗಳುಂಟು. ಜ್ಞಾನಿಗಳಿಗೆ ಈ ಎರಡು ವಿಧ ದೀಕ್ಷೆಯೂ ಉಂಟು. ಅಜ್ಞಾನಿಗಳಿಗೆ ಅಂದರೆ ಸಣ್ಣ ಮಕ್ಕಳು ಮೊದಲಾದವರಿಗೆ ಬಾಹ್ಯದೀಕ್ಷೆಯು ಇದ್ದೇ ಇರಬೇಕು. ಇವುಗಳಲ್ಲಿ ಅಭ್ಯಂತರ ದೀಕ್ಷೆಯು ಯಾವುದೆಂದರೆ, ಶ್ರೀ ಪರಮಾತ್ಮನು ನನಗೆ ಸರ್ವೇಷ್ಟವನ್ನು ಕೊಡುವವನು, ಸಕಲವಾದ ಅನಿಷ್ಟಗಳನ್ನು ನಿವೃತ್ತಿ ಮಾಡುವವನು ಪರಮಾತ್ಮನೊಬ್ಬನೇ ಸರ್ವೋತ್ತಮನು; ನಾನು ಯಾವಾಗಲೂ ಅವನ ಅಧೀನನು; ನನಗೆ ಅವನು ಸ್ವಾಮಿಯು ಎಂಬ ಜ್ಞಾನವು ನಿಶ್ಚಯವಾಗಿ (ಸಂಶಯವಿಲ್ಲದೆ) ಇರುವುದೇ ಅಭ್ಯಂತರ ದೀಕ್ಷೆಯು ಎಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುತ್ತಾರೆ. ಹರಿಯೇ ಸರ್ವೋತ್ತಮನು; ಕ್ಷರಾಕ್ಷರ ಪುರುಷರಾದ ಬ್ರಹ್ಮಾದಿಗಳಿಂದ ಪೂಜಿತವಾದ ಪಾದಕಮಲಗಳುಳ್ಳವನು. ಜನನ ಮರಣಾದಿ ದೋಷವಿಲ್ಲದವನು ಆನಂದಸ್ವರೂಪನು, ಸರ್ವತ್ರ ವಾಸಮಾಡುವವನು ಎಂದು ತಿಳಿದು ಸರ್ವದಾ ಉಪಾಸನೆಯನ್ನು ಮಾಡುವುದೇ ಆಂತರ ದೀಕ್ಷೆ. ||೧೮||

ಅವತಾರಿಕೆ : —ಮತ್ತೂ ಆಭ್ಯಂತರ ದೀಕ್ಷೆಯನ್ನೇ ಹೇಳುತ್ತಾರೆ—

ಹೇಯ ವಸ್ತುಗಳಿಲ್ಲ ವೋಪಾ  
ದೇಯ ವಸ್ತುಗಳಿಲ್ಲ ನ್ಯಾಯಾ  
ನ್ಯಾಯ ಧರ್ಮಗಳಿಲ್ಲ ದ್ವೇಷಾಸೂಯೆ ಮೊದಲಿಲ್ಲ |  
ತಾಯಿತಂದೆಗಳಿಲ್ಲ ಕಮಲ ದ  
ಲಾಯತಾಕ್ಷಗೆ ಯೆನಲು ಈಸೋ  
ಕಾಯಿಯಂದದಿ ಮುಣಗಗೊಡದೆ ಭವಾಬ್ಧಿ ದಾಟಿಸುವ||

ಪದ್ಯಾರ್ಥ :—ಕಮಲದಳಾಯತಾಕ್ಷಗೆ=ಕಮಲ ದಳಗಳಂತೆ ವಿಸ್ತಾರವಾದ ನೇತ್ರಗಳುಳ್ಳ ಶ್ರೀ ಪರಮಾತ್ಮನಿಗೆ, ಹೇಯವಸ್ತುಗಳಿಲ್ಲ

=ಯಾವ ವಸ್ತುವು ನಮ್ಮಲ್ಲಿರುವುದರಿಂದ ನಮಗೆ ಬಹಳ ದುಃಖಕರವಾಗಿ ಕಾಣುವುದೋ ಅದು ಕಳೆದುಹೋದರೆ ಸಾಕೆಂದು ತೋರುವುದೋ ಅಂತಹ ವಸ್ತುಗಳು ಪರಮಾತ್ಮನಿಗೆ ಇರುವುದಿಲ್ಲ. ಉಪಾದೇಯ ವಸ್ತುಗಳಿಲ್ಲ= ಯಾವ ವಸ್ತುಗಳು ಇದ್ದರೇನೆ ಸುಖವೆಂದು ತೋರುವುದೋ ಅಂತಹ ವಸ್ತುಗಳೂ ಇಲ್ಲ. ನ್ಯಾಯಾನ್ಯಾಯಧರ್ಮಗಳಿಲ್ಲ=ಇದು ನ್ಯಾಯ ಇದು ಅನ್ಯಾಯ ಎಂಬ ಧರ್ಮಭೇದಗಳೂ ಇಲ್ಲ ದ್ವೇಷಾಸೂಯೆ ಮೊದಲಿಲ್ಲ= ಒಬ್ಬರಲ್ಲಿ ದ್ವೇಷ ಮತ್ತೊಬ್ಬರಲ್ಲಿ ಹೊಟ್ಟೆಯಕಿಚ್ಚು ಮೊದಲೇ ಇಲ್ಲ. ತಾಯಿತಂದೆಗಳಿಲ್ಲ=ಈತನಿಗೆ ತಾಯಿತಂದೆಗಳಿಲ್ಲ, ಯೆನಲು=ಎಂದು ಪಾಸನೆ ಮಾಡಲು, ಈಸೋರೆಕಾಯಿಯಂದದಿ=ಸೋರೆಕಾಯಿಯಂತೆ, ಮುಣಗಗೊಡದೆ=ನೀರೊಳಗೆ ಮುಣಿಗಿಸದೆ ಸೋರೆಕಾಯಿಯು ಹೇಗೆ ತೇಲಿಸುವುದೋ ಹಾಗೆ, ಭವಾಬ್ಧಿ=ಸಂಸಾರಸಮುದ್ರವನ್ನು, ದಾಟಿಸುವ.

ತಾತ್ಪರ್ಯ :—ಸಂಸಾರದಲ್ಲಿ ಜನರಿಗೆ ಪ್ರಬಲವಾದ ದುಃಖಗಳು ಎರಡುಂಟು. ಭಾಗವತ ಸಪ್ತಮಸ್ಕಂಧದಲ್ಲಿ "ಯಸ್ಮಾತ್ಪ್ರಿಯಾಪ್ರಿಯ ವಿಯೋಗ ಸಯೋಗ ಜನ್ಮಶೋಕಾಗ್ನಿನಾ ಸಕಲ ಯೋನಿಷು ದಹ್ಯ ಮಾನಃ" ಯಾವ ವಸ್ತು ನಮಗೆ ಬಹಳ ಪ್ರಿಯಕರವೋ ಯಾವ ವಸ್ತು ವನ್ನು ಬಿಟ್ಟು ನಾವು ಕ್ಷಣವಾದರೂ ಇರಲು ಸಾಧ್ಯವಿಲ್ಲವೆಂದು ಭಾವಿಸಿರು ವೆವೋ ಅಂತಹ ವಸ್ತುವೇ ನಮ್ಮನ್ನು ಬಿಟ್ಟು ತೊಲಗೋಣವು ಮತ್ತು ಯಾವ ವಸ್ತುವನ್ನು ನಾವು ಬಹಳ ಹೇಯವೆಂದು ತಿಳಿದು ಈ ಪದಾರ್ಥವು ನಮ್ಮಲ್ಲಿ ಎಂದಿಗೂ ಬರದಂತೆ ಮಾಡಬೇಕೆಂದಿರುವೆವೋ ಆ ವಸ್ತುವು ನಮ್ಮನ್ನು ಬಿಡುವಂತಿಲ್ಲದಿರುವುದು ಇವೆರಡಕ್ಕಿಂತಲೂ ದುಃಖಕರವಾ ದುದು ಯಾವುದು? ಪರಮಾತ್ಮನು ಜಗತ್ಕುಟುಂಬಿಯಾದರೂ ಇದು ಬೇಕಾದ ವಸ್ತು, ಇದು ಬೇಡದ ವಸ್ತು ಎಂಬ ಭಾವನೆಯೇ ಆತನಿಗೆ ಇಲ್ಲ. ಮತ್ತು ಇದು ನ್ಯಾಯ, ಇದು ಅನ್ಯಾಯವೆಂಬ ಭಾವನೆಯೂ ಇಲ್ಲ. "ಯೇದೋಷಾಇತರತ್ರಾಪಿತೇಗುಣಾಃ ಪರಮೇಮತಾಃ" ಎಂಬ ನ್ಯಾಯದಿಂದ ಇತರ ಜನರಲ್ಲಿ ಯಾವುದು ದೋಷವೆಂದು ಕಂಡುಬರು ವುದೋ ಅದು ಪರಮಾತ್ಮನಲ್ಲಿ ಗುಣವಾಗಿಯೇ ಕಾಣುವುದು ಎಂದು ಹೇಳಿ ರುವರು. ಪರಮಾತ್ಮನಿಗೆ ಒಬ್ಬನಲ್ಲಿ ದ್ವೇಷವಿಲ್ಲ ; ಒಬ್ಬನಮೇಲೆ ಹೊಟ್ಟೆ ಕಿಚ್ಚಿಲ್ಲ, ತಂದೆ ತಾಯಿಗಳಿಲ್ಲ. ಹೀಗೆ ತಿಳಿದು ಉಪಾಸನೆ ಮಾಡುವುದೂ

ಒಂದು ಅಂತರ ದೀಕ್ಷೆಯು. ಈ ರೀತಿಯಾಗಿ ಉಪಾಸನೆಯನ್ನು ಮಾಡಿದರೆ ಒಣ ಸೋರೆಕಾಯಿಯನ್ನು ಸೊಂಟಕ್ಕೆ ಕಟ್ಟಿಕೊಂಡು ನೀರೊಳಗೆ ಯೀಸುವವನನ್ನು ಆ ಸೋರೆಕಾಯಿಯು ಮುಣಗಗೊಡದೆ ಹೇಗೆ ತೇಲಿಸುವುದೋ ಹಾಗೆ ಶ್ರೀಪರಮಾತ್ಮನು ಅಂತರ ದೀಕ್ಷೆಯಿಂದ ತನ್ನನ್ನು ಉಪಾಸನೆ ಮಾಡುವವರನ್ನು ಸಂಸಾರ ಸಮುದ್ರದಲ್ಲಿ ಮುಣಗಗೊಡಿಸದೆ ತೇಲಿಸಿ ಉದ್ಧರಿಸುವನು ||೧೯||

ಅವತಾರಿಕೆ :—ಬಾಹ್ಯಾಂತರಗಳೆಂಬ ಎರಡು ದೀಕ್ಷೆಗಳನ್ನು ಹೇಳುತ್ತಾರೆ—

ಮಂದನಾದರು ಸರಿಯೆ ಗೋಪೀ
ಚಂದನ ಶ್ರೀಮುದ್ರೆಗಳ ನಲು
ವಿಂದ ಧರಿಸುತ ಶ್ರೀ ತುಲಸಿ ಪದುಮಾಕ್ಷಸರಗಳನು ।
ಕಂಧರದ ಮಧ್ಯದಲಿ ಧರಿಸಿ ಮು
ಕುಂದ ಶ್ರೀ ಭೂರಮಣ ತ್ರಿಜಗ
ದ್ವಂದ್ಯ ಸರ್ವಸ್ವಾಮಿ ಮಮಕುಲದೈವವೆನೆ ಪೊರೆವ ||

ಪದ್ಯಾರ್ಥ :—ಮಂದನಾದರು ಸರಿಯೆ=ಅಜ್ಞಾನಿಯಾದರೂ ಸರಿಯೆ, ಗೋಪೀಚಂದನ ಶ್ರೀಮುದ್ರೆಗಳ, ನಲುವಿಂದ=ಸಂತೋಷದಿಂದ, ಧರಿಸುತ=ಧಾರಣೆ ಮಾಡುತ್ತಾ, ಶ್ರೀ ತುಳಸಿ ಪದುಮಾಕ್ಷ ಸರಗಳನು, ಕಂಧರದ=ಕತ್ತಿನ, ಮಧ್ಯದಲಿ, ಧರಿಸಿ, ಮುಕುಂದ=ಮೋಕ್ಷಪ್ರದನಾದ, ಶ್ರೀ ಭೂ ರಮಣ=ಶ್ರೀದೇವಿ ಮತ್ತು ಭೂದೇವಿಯರಿಗೆ, ಪತಿಯೆ, ತ್ರಿಜಗದ್ವಂದ್ಯ=ಮೂರುಲೋಕದ ಜನರಿಂದಲೂ ವಂದ್ಯನೆ, ಸರ್ವಸ್ವಾಮಿ=ಸಕಲ ಜಗತ್ತಿಗೂ ಸ್ವಾಮಿಯಾದವನೆ, ಮಮ ಕುಲದೈವವೆನೆ=ನನ್ನ ಕುಲದೈವವೆ, ಯೆನೆ=ಈಪ್ರಕಾರ ಧ್ಯಾನಮಾಡಲು=ಚಿಂತಿಸಲು, ಪೊರೆವ=ರಕ್ಷಿಸುವನು

ತಾತ್ಪರ್ಯ :—ಅಜ್ಞಾನಿಯಾದರೂ ವಿಷ್ಣುದೀಕ್ಷೆಯನ್ನು ಸ್ವೀಕರಿಸಬೇಕು. "ನಾಮಚಿನ್ಹಾದಿ ನಾ ದೇಹೇ ವನ್ಹಿನಾವಾಮೃದಾಂಕನಂ || ಸಾಬಾಹ್ಯಾಪ್ರೋಚ್ಯತೇದೀಕ್ಷಾ ಹ್ಯಜ್ಞಾನಾಂಜ್ಞಾನಿನಾಮಪಿ || ಶಿಶವಃ ಪಶವೋನ್ಯಾನಿಪಾತ್ರಾಣ್ಯಾಭರಣಾನಿಚ ||೪೨|| ರಥಧ್ವಜ ಪತಾಕಾದಿ ಸರ್ವಮಜ್ಞಾನ ಮುಚ್ಯತೇ || ಏತೇಷಾಂಹಿಮದೀಯತ್ವ ಜ್ಞಾಪನಾಯ ಲಿಖೇ

ತ್ಸ್ವಯಂ ||'' ಗೋಪೀಚಂದನದಿಂದ ೧೨ ಊರ್ಧ್ವ ಪುಂಡ್ರಗಳನ್ನು ಧರಿಸಿ, ಮೇಲೆ ಶಂಖ, ಚಕ್ರ, ಗದಾ, ಪದ್ಮ, ನಾರಾಯಣ ಮುದ್ರೆಗಳನ್ನು ಧರಿಸುವುದು ಮತ್ತು ತಪ್ತ ಮುದ್ರಾಧಾರಣೆಯನ್ನು ಮಾಡಿಕೊಳ್ಳುವದು ಇವುಗಳು ಬಾಹ್ಯ ದೀಕ್ಷೆಗಳು. ಈ ದೀಕ್ಷೆಗಳು ಅಜ್ಞಾನಿಗಳಿಗೂ, ಜ್ಞಾನಿಗಳಿಗೂ ಸಮವಾದುವು. ಆದುದರಿಂದ ಎಲ್ಲರೂ ಧರಿಸಬೇಕು. ಅಜ್ಞಾನಿಗಳೆಂದರೆ ಸಣ್ಣ ಮಕ್ಕಳು, ಪಶುಗಳು, ಅಡಿಗೆ ಮಾಡುವ ಪಾತ್ರೆಗಳು, ಮನೆಯಲ್ಲಿರುವ ಗಡಿಗೆ ಮಡಕೆ ಮೊದಲಾದವು, ಒಡವೆಗಳು, ರಥ, ಧ್ವಜ, ಪತಾಕಾದಿ ಎಲ್ಲಾ ಪದಾರ್ಥಗಳೂ ಅಜ್ಞಾನಿಗಳಲ್ಲಿ ಸೇರುವವು. ಈ ವಸ್ತುಗಳಮೇಲೆ ಇವೆಲ್ಲವೂ ಭಗವತ್ಸಂಬಂಧಿಗಳೆಂದು ತೋರಿಸುವುದಕ್ಕಾಗಿ ದ್ವಾದಶನಾಮಗಳನ್ನು, ಮುದ್ರೆಗಳನ್ನು ತಾನೇ ಹಚ್ಚಬೇಕು. ಅದರಂತೆ ಅವುಗಳಮೇಲೆ ಯಾವಾಗಲೂ ವಿಷ್ಣುದೀಕ್ಷೆಯನ್ನು ಪ್ರಕಟನಪಡಿಸುವುದಕ್ಕಾಗಿ ಚನ್ನಾಗಿ ಕಾಣುವಂತೆಯೂ ಸ್ಥಿರವಾಗಿ ಇರುವಂತೆಯೂ ಸುಣ್ಣದಿಂದಲೋ ಬಣ್ಣದಿಂದಲೋ ಗುರ್ತು ಮಾಡಬೇಕೆಂಬ ತಾತ್ಪರ್ಯ. ಮೇಲಿನ ವಿಷ್ಣುರಹಸ್ಯ ವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ದಾಸರಾಯರು ಇಲ್ಲಿ ಈ ರೀತಿ ಹೇಳಿರುವರು. ಹೀಗೆ ಗೋಪೀಚಂದನ ಮುದ್ರೆಗಳನ್ನು ಧರಿಸಿ ಕಂಠದಲ್ಲಿ ತುಳಸೀಮಣಿ ಮಾಲೆಯನ್ನು ಪದ್ಮಾಕ್ಷದ ಸರವನ್ನು ಧರಿಸಿದರೆ ಬಾಹ್ಯದೀಕ್ಷೆಯನ್ನು ಧರಿಸಿದಂತಾಯಿತು. ತದನಂತರ ಮುಕುಂದ, ಮೂರುಲೋಕವಂದ್ಯ, ಸರ್ವಸ್ವಾಮಿ ನಮ್ಮ ಕುಲದೈವವೆ ಎಂದು ಉಪಾಸನೆ ಮಾಡುವುದು ಆಂತರ ದೀಕ್ಷೆ. ಇವೆರಡರಿಂದ ದೀಕ್ಷಿತನೆಂದೆನಿಸಿದವನನ್ನು ಶ್ರೀ ಪರಮಾತ್ಮನು ರಕ್ಷಿಸುವನೆಂದು ತಾತ್ಪರ್ಯ ||೨೦||

ಅವತಾರಿಕೆ :—ಜೀವನು ಭ್ರಾಂತಿಯಿಂದ ಬಿಂಬರೂಪಿಯಾದ ಪರಮಾತ್ಮನು ಮಾಡಿಸುವುದನ್ನು ತಾನು ಮಾಡಿದುದಾಗಿ ತಿಳಿದುಕೊಳ್ಳುವನೇ ಹೊರತು ನಿಜವಾಗಿ ಯಾವಾಗಲೂ ಜೀವನು ಸ್ವತಂತ್ರನಲ್ಲ, ಅಸ್ವತಂತ್ರನೆಂದು ಸ್ಥಾಪಿಸುತ್ತಾರೆ :—

**ಪ್ರಾಯ ಧನಮದದಿಂದ ಜನರಿಗೆ**
**ನಾಯಕಪ್ರಭುವೆಂಬೆ ಪೂರ್ವದಿ**
**ತಾಯಿ ಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯರಲೈ||**
**ಕಾಯ ನಿನ್ನನು ಬಿಟ್ಟುಪೋಗಲು**

ರಾಯ ನೀನೆಂಬೋ ಪ್ರಭುತ್ವ ಪ
ಲಾಯನವನೈದಿತು ಸಮೀಪದಲಿದ್ದರದು ತೋರು ||

ಪದ್ಯಾರ್ಥ :—ಪ್ರಾಯ=ಯೌವನ, ಧನ, ಇವೆರಡರ ಮದದಿಂದ, ಜನರಿಗೆ, ನಾಯಕ=ನಾನು ರಕ್ಷಕನು, ಪ್ರಭು=ನಾನು ಧೊರೆಯು ಯೆಂಬೆ=ಎನ್ನುವೆ, ಪೂರ್ವದಿ=ಇದಕ್ಕೆ ಹಿಂದೆ, ತಾಯಿಪೊಟ್ಟೆಯೊಳಿರಲು =ತಾಯಿಯ ಗರ್ಭದಲ್ಲಿರುವಾಗ, ಪ್ರಭುವೆಂದು ಏಕೆ ಕರೆಯರಲ್ಪೈ= ನೀನೇ ಪ್ರಭುವಾದುದು ನಿಜವಾದರೆ ಗರ್ಭದಲ್ಲಿರುವಾಗ ನಿನ್ನ ಪ್ರಭುತ್ವವು ಎಲ್ಲಿಗೆ ಹೋಗಿದ್ದಿತು? ಕಾಯ ನಿನ್ನನು ಬಿಟ್ಟುಪೋಗಲು=ದೇಹವು ನಿನ್ನನ್ನು ಬಿಟ್ಟುಹೋದಮೇಲೆ, ರಾಯನೀನೆಂಬೊ ಪ್ರಭುತ್ವ, ಪಲಾಯ ನವನೈದಿತು=ಓಡಿಹೋಯಿತು, ಅದು=ಆ ಪ್ರಭುತ್ವವು ಸಮೀಪದಲ್ಲಿದ್ದರೆ ತೋರು.

ತಾತ್ಪರ್ಯ :—ಲೋಕದಲ್ಲಿ ಜನರು ಯೌವನ ಮತ್ತು ಧನ ಇವೆರ ಡರ ಮದದಿಂದ ನಾನು ಎಲ್ಲರನ್ನೂ ಪೋಷಿಸುತ್ತಿರುವೆನು. ನಾನು ಧೊರೆ ಯೆಂದು ಹೇಳಿಕೊಳ್ಳುತ್ತಿರುವರು. ನಾನು ಪ್ರಭುವೆಂದು ಹೇಳುವವ ರನ್ನು ಈ ಸ್ಥೂಲದೇಹವನ್ನು ನೋಡಿ ಪ್ರಭುವೆನ್ನುವರೊ? ಅಥವಾ ಜೀವ ವನ್ನೋ? ದೇಹಕ್ಕೆ ಪ್ರಭುತ್ವ ಕೊಟ್ಟರೆ ತಾಯಿಯ ಗರ್ಭದಲ್ಲಿ ಈ ಶರೀರ ಪೂರ್ಣವಾದಾಗಲೂ, ಮಗುವಾಗಿದ್ದ ಕಾಲದಲ್ಲೂ ಇದೇ ಶರೀರವಿದ್ದಿ ತಷ್ಟೆ? ಆಗೇಕೆ ಪ್ರಭುವೆಂದು ಯಾರೂ ಹೇಳುವುದಿಲ್ಲ? ಭಾಗವತ ಪ್ರಥಮ ಸ್ಕಂಧದಲ್ಲಿ " ಕಾಲಕರ್ಮಗುಣಾಧೀನೋ ದೇಹೋಯಂ ಪಾಂಚಭೌತಿಕಃ || ಕಥಮನ್ಯಾಂಸ್ತು ಗೋಪಾಯೇತ್ಸರ್ಪಗ್ರಸ್ತೋ ಯಥಾಪರಂ " ಎಂದು ಹೇಳಿದಂತೆ ಶರೀರವು ಪ್ರಭುವಾದುದೇ ನಿಜವಾದರೆ ಕಾಲಾಂತರದಲ್ಲಿ ಕಣ್ಣು ಕಿವಿ ಮೊದಲಾದ ಇಂದ್ರಿಯಗಳು ನಮ್ಮನ್ನೇಕೆ ಬಿಡುವುದು ನಮ್ಮ ಪ್ರಭುತ್ವವು ಅವುಗಳ ಮೇಲೆ ಏಕಿಲ್ಲ? ಶರೀರವು ನಮ್ಮನ್ನೇಕೆ ಬಿಟ್ಟು ಹೋಗುವುದು? ಆದ್ದರಿಂದ ಈ ಶರೀರವು ಕಾಲ, ಕರ್ಮ, ಗುಣಗಳು ಇವುಗಳ ಅಧೀನದಲ್ಲಿರುವ ಪಂಚಭೂತಸಂಬಂಧವಾದುದು. ಇಂತಹ ಶರೀರದಿಂದ ನಾವು ಮತ್ತೊಬ್ಬರನ್ನು ರಕ್ಷಿಸುತ್ತೇವೆಂದು ಹೇಳುವದು ಒಂದು ಹಾವಿನ ಬಾಯಲ್ಲಿ ಸಿಕ್ಕಿರುವ ಕಪ್ಪೆಯು ಮತ್ತೊಂದು ಹಾವಿನ ಬಾಯಲ್ಲಿ ಸಿಕ್ಕಿರುವ ಕಪ್ಪೆಯನ್ನು ರಕ್ಷಿಸುತ್ತೇನೆಂದು ಪ್ರಯತ್ನ ಮಾಡು

ವದು ಹೇಗೋ ಹಾಗಾಗುವದೆಂದು ಭಾಗವತ ಶ್ಲೋಕದ ತಾತ್ಪರ್ಯ. ಆದ್ದರಿಂದ ಪ್ರಭುತ್ವವು ದೇಹಕ್ಕಲ್ಲವೆಂದು ಹೇಳಿದಂತಾಯಿತು. ಮತ್ತೆ ಜೀವವನ್ನೇ ಪ್ರಭುವೆಂದು ಹೇಳುತ್ತೇವೆಂದರೆ, ಈ ಶರೀರವು ಜೀವವನ್ನ ಬಿಟ್ಟು ಹೋದಮೇಲೆ ಜೀವನ ಪ್ರಭುತ್ವವು ಎಲ್ಲಿರುವದು? ಆದ್ದರಿಂದ ಜೀವನು ಪ್ರಭುವಲ್ಲ; ದೇಹವು ಪ್ರಭುವಲ್ಲ; ಮತ್ತೇನನ್ನು ಹೇಳಬೇಕು ದೇಹವುಳ್ಳ ಜೀವನು ಅಂದರೆ ದೇಹಿಯೇ ಪ್ರಭುವೆಂದು ಹೇಳಬೇಕು. ಆ ದೇಹಿಗಾದರು ಬಾಲ್ಯ ವಾರ್ಧಿಕ್ಯ ದೆಶೆಗಳಲ್ಲಿ ಪ್ರಭುತ್ವ ಬರುವುದೆ? ಇಲ್ಲ, ಹಿಂದೂ ಇಲ್ಲ; ಮುಂದೂ ಇಲ್ಲ. ಈ ಮಧ್ಯದಲ್ಲಿ ನಮ್ಮೊಳಗಿದ್ದು ಬಿಂಬರೂಪಿಯಾದ ಪರಮಾತ್ಮನು ಮಾಡಿಸುವ ಪ್ರಭುತ್ವವನ್ನು ಯೌವ ನಾದಿ ಮದಗಳಿಂದ ತಾನು ಪ್ರಭುವೆಂದು ಹೇಳುವರು. ಭಾಗವತ ದಶಮ ಸ್ಕಂಧ ಉತ್ತರಾರ್ಧದಲ್ಲಿರುವ ಮುಚಕುಂದ ಸ್ತುತಿಯಲ್ಲಿ ಮುಚಕುಂದ ರಾಜನು ಹೇಳಿರುವದೆಂತೆನೆ :—"ಪುರಾರಥೈರ್ಹೇಮ ಪರಿಷ್ಕೃತೈಶ್ಚರ ನ್ಮತಂಗಜೈರ್ವಾ ನರದೇವಸಂಜ್ಞಿತಃ ॥ ಸಏವ ಕಾಲೇನ ದುರತ್ಯಯೇನವೈ ಕಳೇಬರೋವಿಟ್ ಕ್ರಿಮಿಃಭಸ್ಮ ಸಂಜ್ಞಿತಃ" ಪೂರ್ವದಲ್ಲಿ ಬಂಗಾರಮಯ ವಾದ ದಿವ್ಯ ರಥಗಳಲ್ಲಿ ಅಥವಾ ಆನೆಗಳ ಮೇಲೆ ಮೆರೆಯುತ್ತಾ ಯಾವನು ರಾಜಾಧಿರಾಜನೆಂದು ಹೊಗಳಿಸಿಕೊಳ್ಳುತ್ತಿರುವನೋ ಅದೇ ಮಹಾರಾಜನೇ ದಾಟಲಶಕ್ಯವಾದ ಕಾಲದಿಂದ ಅಯುಷ್ಯವು ಕ್ಷೀಣವಾಗಿ ರಾಜನೆಂಬ ಬಿರುದುಳ್ಳ ಆ ಶರೀರವನ್ನು ಬಿಟ್ಟಕೂಡಲೆ ಆ ರಾಜ ಶರೀರದಲ್ಲಿರುವ ರಾಜ ತ್ವವು ಹೋಗಿ, ವಿಟ್ ಅಂದರೆ ಅಮೇಧ್ಯ, ಕ್ರಿಮಿ, ಅಥವಾ ಭಸ್ಮವೆನಿಸು ವನು. ಶರೀರವನ್ನು ಭಸ್ಮಮಾಡದೆ ಬಿಟ್ಟುಬಿಟ್ಟರೆ, ನರಿ ನಾಯಿಗಳು ತಿಂದು ಕಡೆಗೆ ಮಲರೂಪವಾಗಿ ಪರಿಣಮಿಸುವುದು. ಅಥವಾ ಹುಳುವು ರೂಪವಾಗಿ ಪರಿಣಮಿಸುವುದು. ಸುಟ್ಟರೆ ಭಸ್ಮವಾಗಿ ಪರಿಣಮಿಸುವುದು. ಆ ಕಾಲದಲ್ಲಿ ನಮ್ಮ ರಾಜತ್ವವು ಎಲ್ಲಿ ಹೋಯಿತು ಎಂದು ಮುಚಕುಂದ ರಾಜನ ವಾಕ್ಯ. ಆದ್ದರಿಂದ ಪ್ರಭುತ್ವಾದಿ ಶಬ್ದಗಳು ಅಂತರ್ಯಾಮಿಯಾದ ಪರಮಾತ್ಮನಿಗೆ ಸಲ್ಲುವುದೇ ಹೊರತು ದೇಹಿಗಳಿಗೆ ಎಂದಿಗೂ ಆ ಶಬ್ದವು ಬರುವುದಿಲ್ಲವೆಂದು ತಾತ್ಪರ್ಯ ॥೧೯॥

ಅವತಾರಿಕೆ :—ಸರ್ವ ಜಗತ್ತಿಗೂ ಪ್ರಭುವಾದ ಸ್ವತಂತ್ರನಾದ ಪರ ಮಾತ್ಮನಿಗೂ,ದಾಸನೂ,ಅಸ್ವತಂತ್ರನೂ ಆದ ತನಗೂ ಅಭೇದವನ್ನು ಕಲ್ಪಿಸಿ

ಕೊಂಡು ಪರಮಾತ್ಮನೇ ತಾನೆಂದು ಉಪಾಸನೆ ಮಾಡುವವನು ಮೂರ್ಖನೆಂದು ಹೇಳುತ್ತಾರೆ—

ವಾಸುದೇವನ್ಯೆಕಪ್ರಕಾರದಿ
ಈಶನೆನಿಸುವ ಬ್ರಹ್ಮ ರುದ್ರ ಶ
ಚೀಶ ಮೊದಲಾದಮರರೆಲ್ಲರು ದಾಸರೆನಿಸುವರು ||
ಈ ಸುಮಾರ್ಗವ ಬಿಟ್ಟು ಸೋಹ ಮು
ಪಾಸನೆಯ ಗೈವ ನರದೇಹ ಜ
ದೈಶಿಕ ಕ್ಲೇಶಗಳು ಬರಲದನೇಕೆ ಬಿಡಿಸಿಕೊಳ ||

ಪದ್ಯಾರ್ಥ :—ವಾಸುದೇವನು=ವಾಸುದೇವಾತ್ಮಕ ಶ್ರೀ ಪರಮಾತ್ಮನು, ಏಕಪ್ರಕಾರದಿ=ಒಂದೇರೀತಿಯಾಗಿ, ಈಶನೆನಿಸುವ=ಈಶ್ವರನೆನಿಸುವನು. ಬ್ರಹ್ಮ, ರುದ್ರ, ಶಚೀಶ=ಶಚಿಪತಿಯಾದ ಇಂದ್ರದೇವರು, ಮೊದಲಾದ ಅಮರರೆಲ್ಲರು=ದೇವತೆಗಳೆಲ್ಲರು, ದಾಸರೆನಿಸುವರು. ಈ ಸುಮಾರ್ಗವ=ಹೀಗೆ ಉಪಾಸನೆ ಮಾಡುವ ಸನ್ಮಾರ್ಗವನ್ನು ಬಿಟ್ಟು, ಸೋಹಮುಪಾಸನೆಯ=ಆ ಪರಮಾತ್ಮನೇ ನಾನೆಂದು ಉಪಾಸನೆಯನ್ನು, ಗೈವ=ಮಾಡುವ, ನರ=ಮನುಷ್ಯನು, ದೇಹಜ=ದೇಹಸಂಬಂಧವಾದ, ಮತ್ತು ದೈಶಿಕ=ದೇಶಸಂಬಂಧವಾದ,ಕ್ಲೇಶಗಳು=ದುಃಖಗಳು, ಬರಲು, ಅದನು=ಆ ದುಃಖಗಳನ್ನು ಏಕೆ, ಬಿಡಿಸಿಕೊಳ=ಬಿಡಿಸಿಕೊಳ್ಳನು

ತಾತ್ಪರ್ಯ :—ಭಾಗವತ ಏಕಾದಶಸ್ಕಂಧ ಎರಡನೆಯ ಅಧ್ಯಾಯ ತಾತ್ಪರ್ಯದಲ್ಲಿ "ಪೂರ್ಣತ್ವಾದಾತ್ಮ ಶಬ್ದೋಕ್ತಃ ಕಶ್ಚಿತ್ಸರ್ವ ನರೋತ್ತಮಃ|| ಸೋಪಿ ನಾರಾಯಣೋನಾನ್ಯಃ ಸಚ ಸರ್ವೇಷು ಸಂಸ್ಥಿತಃ|| ತದ್ವಶಾ ಇತರೇಸರ್ವೇ ಶ್ರೀ ಬ್ರಹ್ಮೇಶ ಪುರಸ್ಸರಾಃ || ಇತಿ ಪಶ್ಯತಿ ಯೋ ಬುದ್ಧ್ಯಾ ಸತುಭಾಗವತೋತ್ತಮಃ" ಪೂರ್ಣಗುಣಾತ್ಮಕನಾದುದರಿಂದ ಆತ್ಮನೆಂದು ಹೆಸರುಳ್ಳವನು, ಅವನು ಸರ್ವಪ್ರಾಣಿಗಳಿಗೂ ಉತ್ತಮನು. ಅವನಾರೆಂದರೆ ನಾರಾಯಣನೇ ಹೊರತು ಮತ್ತಾರೂ ಅಲ್ಲ ಅವನೇ ಎಲ್ಲರ ಅಂತರ್ಯಾಮಿ ಯಾಗಿರುವನು. ಲಕ್ಷ್ಮೀದೇವಿಯರು, ಬ್ರಹ್ಮ ರುದ್ರಾದಿ ಸಕಲದೇವತೆಗಳು ಅವನ ಅಧೀನರಾಗಿರುತ್ತಿರುವರು ಎಂದು ಯಾವನು ಉಪಾಸನೆ ಮಾಡುವನೋ ಅವನೇ ಭಾಗವತೋತ್ತಮನು ಯೆಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ ದಾಸರಾಯರು ಇಲ್ಲಿ ಹೇಳಿರುವರು.

ಪರಮಾತ್ಮನೊಬ್ಬನೇ ಸರ್ವೇಶ್ವರನು. ಬ್ರಹ್ಮ ರುದ್ರೇಂದ್ರಾದಿ ದೇವತೆಗಳೆಲ್ಲರೂ ಆ ಪರಮಾತ್ಮನಿಗೆ ಕಿಂಕರರು. ಎಂದುಪಾಸನೆಯನ್ನು ಮಾಡುವದೇ ಸದುಪಾಸನೆಯು. ಇಂತಹ ಉಪಾಸನೆಯನ್ನುಬಿಟ್ಟು "ಸೋಹಂ" ಅವನೇ ನಾನುಯೆಂದು ಉಪಾಸನೆಯನ್ನು ಮಾಡುವವನು ತಮೋಯೋಗ್ಯನು. ಪರಮಾತ್ಮನೇ ಜೀವನೆಂದು ಹೇಳುವದು ಸುಳ್ಳಾದರೆ ಮಿಥ್ಯೋಪಾಸನೆಯಿಂದ ತಮಸ್ಸಾಗಲಿ! ಅದು ನಿಜವಾದರೆ ಬಾಧಕವೇನು ? ಅಂದರೆ ಎಂದಿಗೂ ಅದು ನಿಜವಾಗುವುದಿಲ್ಲವೆಂದು ದೇಹಜಯೆಂಬ ವಾಕ್ಯಗಳಿಂದ ತೋರಿಸುತ್ತಾರೆ ನಿಜವಾಗಿ ನಾವೇ ಪರಮಾತ್ಮನಾದರೆ ಆನಂದ ಸ್ವರೂಪನಾದ ಪರಮಾತ್ಮನಿಗೆ ದುಃಖವಾವದು ! ಮನುಷ್ಯರಿಗೆ ದೇಹಸಂಬಂಧವಾದ ಹೊಟ್ಟೆಶೂಲೆ ಮೊದಲಾದವು, ಕಣ್ಣು ಕಾಣದೆ ಹೋಗುವದು ಮೊದಲಾದ ದುಃಖಗಳೇ ಆಗಲಿ, ಕಾಲಸಂಬಂಧವಾದ ಶೀತೋಷ್ಣ ಮೊದಲಾದ ದುಃಖಗಳೇ ಆಗಲಿ ಬಂದಾಗ ಅದನ್ನೇಕೆ ಅನುಭವಿಸಬೇಕು. ತಾನೇ ಈಶ್ವರನಾದಮೇಲೆ, ಆ ದುಃಖಗಳು ತನ್ನನ್ನು ಬಾಧಿಸದೆ ಅವುಗಳಿಂದ ಬಿಡಿಸಿಕೊಳ್ಳಬಹುದಷ್ಟೆ ? ಆಶಕ್ತಿಯು ಇವನಿಗಿಲ್ಲದಮೇಲೆ ಇವನು ಈಶ್ವರನು ಹೇಗಾಗುವನು ಆದ್ದರಿಂದ ಜೀವನು ಈಶ್ವರನೆಂದು ಎಂದಿಗೂ ಹೇಳಲಾಗದೆಂಬ ಭಾವ ||೨೨||

ಅವತಾರಿಕೆ :—ಜೀವನಿಗೆ ಈಶತ್ವವು ಬರುವ ಸಂಭವವೇ ಇಲ್ಲವೆಂದು ತೋರಿಸುವುದಕ್ಕಾಗಿ ಜೀವನಿಗೂ ಪರಮಾತ್ಮನಿಗೂ ಇರುವ ವೈಲಕ್ಷಣ್ಯವನ್ನು ತೋರಿಸುತ್ತಾರೆ :—

ಆ ಪರಬ್ರಹ್ಮನಲಿ ತ್ರಿಜಗ
ದ್ವ್ಯಾಪಕತ್ವ ನಿಯಾಮಕತ್ವ
ಸ್ಥಾಪಕತ್ವ ವಶತ್ವ ಈಶತ್ವಾದಿ ಗುಣಗಳಿಗೆ ||
ಲೋಪವಿಲ್ಲೇಕಪ್ರಕಾರ ಸ್ವ
ರೂಪವೆನಿಪವು ಸರ್ವಕಾಲದಿ
ಪೋಪವಲ್ಲವು ಜೀವರಿಗೆ ದಾಸತ್ವಖೋಪಾದಿ ||

ಪದ್ಯಾರ್ಥ :—ಆ ಪರಬ್ರಹ್ಮನಲಿ=ಪರಮಾತ್ಮನಾಮಕ ಶ್ರೀ ನಾರಾಯಣನಲ್ಲಿ, ತ್ರಿಜಗದ್ವ್ಯಾಪಕತ್ವ=ಮೂರು ಲೋಕವನ್ನು ವ್ಯಾಪಿಸಿಕೊಂಡು ಇರುವಿಕೆ, ನಿಯಾಮಕತ್ವ=ಪ್ರೇರಿಸುವಿಕೆ, ಸ್ಥಾಪಕತ್ವ=ಹಿಂದುಸ್ಥಿತಿಯಲ್ಲಿ

ನಿಲ್ಲಿಸುವಿಕೆ, ವಶತ್ವ=ಜನರನ್ನು ತನ್ನ ಸ್ವಾಧೀನಪಡಿಸಿಕೊಳ್ಳುವಿಕೆ, ಈ ಶತ್ವಾದಿ=ಪ್ರಭುವಾಗಿರುವಿಕೆ ಮೊದಲಾದ, ಗುಣಗಳಿಗೆ ಲೋಪವಿಲ್ಲ. ಏಕ ಪ್ರಕಾರ =ಒಂದೇರೀತಿಯಾಗಿ, ಈ ಗುಣಗಳೆಲ್ಲವು ಸ್ವರೂಪವೆನಿಪವು= ಪರಮಾತ್ಮನಿಗೆ ಸ್ವರೂಪ ಭೂತವಾಗಿರುವವು ಸರ್ವಕಾಲದಿ. ಜೀವರಿಗೆ ದಾಸತ್ವದೋಪಾದಿ ಜೀವರಿಗೆ ದಾಸತ್ವವು ಹೇಗೆ ಹೋಗದೋ ಹಾಗೆ ಪೋಪವಲ್ಲವು=ಹೋಗತಕ್ಕವುಗಳಲ್ಲ.

ತಾತ್ಪರ್ಯ :—ಜೀವನಿಗೆ ಯಾವಾಗಲೂ ಇಲ್ಲದ ಗುಣಗಳು ಪರ ಮಾತ್ಮನಲ್ಲಿ ಇರುವವು ಅವು ಯಾವುವೆಂದರೆ—ಪರಮಾತ್ಮನು ಮೂರು ಲೋಕದ ಒಳಗೂ ಹೊರಗೂ ಸಹ ವ್ಯಾಪಿಸಿಕೊಂಡಿರುವನು ಬ್ರಹ್ಮಾದಿ ಜೀವರಿಗೆ ತ್ರಿಜಗದ್ವ್ಯಾಪಕತ್ವವಿದ್ದರೂ, ಸ್ವತಂತ್ರ ವ್ಯಾಪಕರಲ್ಲ. ಅಸ್ವತಂ ತ್ರರು, ನಿಯಾಮಕತ್ವ ಬ್ರಹ್ಮಾದಿಗಳಲ್ಲಿದ್ದರೂ ಭಗವದಧೀನರಾಗಿ ಭಗವಂ ತನಪ್ಪಣೆಯಂತೆ ಅವನು ಕೊಟ್ಟ ಶಕ್ತಿಯಿಂದಲೇ ನಿಯಾಮಕರಾಗಿರು ವರು. ಪರಮಾತ್ಮನು ಸ್ವತಂತ್ರ ನಿಯಾಮಕನು. ಬ್ರಹ್ಮಾದಿ ಸಕಲ ಚೇತನರನ್ನು ನೀವು ಹೀಗೆಯೇ ಇರಬೇಕೆಂದು ತನ್ನ ವಶದಲ್ಲಿಟ್ಟುಕೊಂಡು ಯಾರಯಾರ ಯೋಗ್ಯತೆ ಎಷ್ಟೊ ಅಷ್ಟರಒಳಗೆ ಅವರು ಇರುವಂತೆ ಮಾಡಿ ರುವನು, ಈ ಅಧಿಕಾರವು ಯಾವಜೀವರಿಗೂ ಇಲ್ಲ. ಸರ್ವೇಶ್ವರನು ಪರಮಾ ತ್ಮನು. ಇಂತಹ ಪರಮಾತ್ಮನ ಗುಣಗಳು ಶಶ್ವದೇಕಪ್ರಕಾರವಾಗಿರು ವವು. ಜೀವನೇ ಪರಮಾತ್ಮನಾಗಿದ್ದರೆ ಈ ಗುಣಗಳು ಅವನಲ್ಲಿ ಯಾವಾ ಗಲೂ ಇರಬೇಕಾಗಿದ್ದಿತು. ಹಾಗಿಲ್ಲ. ಜೀವನು ಯಾವಾಗಲೂ ಅಪೂ ರ್ಣನು, ಜೀವನಿಗೆ ದಾಸತ್ವವು ಹೇಗೆ ನಿತ್ಯವೋ ಹಾಗೆ ಪರಮಾತ್ಮನಿಗೆ ಪ್ರಭುತ್ವಾದಿ ಗುಣಗಳು ನಿತ್ಯವು, ಇಂತಹ ಸ್ವಾಮಿಯು ನಾನೇ ಎಂದು ಉಪಾಸನೆ ಮಾಡಿದರೆ ಅವನಿಗೆ ದುಃಖಕರವಾದ ತಮಸ್ಸೇ ಪ್ರಾಪ್ತವಾಗು ವುದು— ॥ ೨೩ ॥

ಅವತಾರಿಕೆ:—ಮತ್ತೂ ಜೀವವಿಲಕ್ಷಣ ಪರಮಾತ್ಮನು ಎಂಬ ಭಾವನೆಯಿಂದ ಪರಮಾತ್ಮನ ಗುಣಗಳನ್ನು ವರ್ಣಿಸುತ್ತಾರೆ:—

ನಿತ್ಯನೂತನ ನಿರ್ವಿಕಾರ ಸು
ಹೃತ್ತಮ ಪ್ರಣವಸ್ಥವರ್ಣೋ

ತ್ಪತ್ತಿಕಾರಣ ವಾಙಮನೋಮಯ ಸಾಮಗಾನರತ ||
ದತ್ತ ಕಪಿಲ ಹಯಾಸ್ಯರೂಪದಿ
ಪೃಥಕ್ ಪೃಥಕ್ ಜೀವರೊಳಿದ್ದು ಪ್ರ
ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ ||

ಪದ್ಯಾರ್ಥ:—ನಿತ್ಯನೂತನ= ನಿತ್ಯದಲ್ಲೂ ನೋಡುತ್ತಿರುವ ಲಕ್ಷ್ಮೀ ಮೊದಲಾದವರಿಗೆ ಸಹ ಪ್ರತಿಕ್ಷಣದಲ್ಲೂ ಹೊಸಬನಾಗಿಯೇ ಕಾಣುವನು. ನಿರ್ವಿಕಾರ-ವಿಕಾರ ಶೂನ್ಯನು. ಸುಹೃತ್ತಮ-ಪ್ರಾಣಕ್ಕೆ ಸಮವಾದ ಪ್ರಿಯ ಬಾಂಧವನು, ಪ್ರಣವಸ್ಥ-ಓಂಕಾರದಲ್ಲಿರುವ, ವರ್ಣ-ಅ, ಉ, ಮ, ಎಂಬ ವರ್ಣಗಳ, ಉತ್ಪತ್ತಿ ಕಾರಣ. ವಾಙ್ಮನೋಮಯ= ವಾಙ್ಮಯ, ಮನೋಮ ಯನೆನಿಸುವನು, ಸಾಮಗಾನರತ= ಸಾಮಗಾನಪ್ರಿಯನು, ದತ್ತಾತ್ರೇಯ ಕಪಿಲ, ಹಯಾಸ್ಯ-ಹಯಗ್ರೀವ, ರೂಪದಿ-ರೂಪಗಳಿಂದ, ಪೃಥಕ್ ಪೃಥಕ್ = ಪ್ರತ್ಯೇಕ ಪ್ರತ್ಯೇಕವಾಗಿ ಜೀವರೊಳಿದ್ದು, ಅವರವರ, ಯೋಗ್ಯತೆ= ಸ್ವರೂಪಯೋಗ್ಯತೆಗಳನ್ನು, ಕರ್ಮವ= ಪ್ರಾರಬ್ಧ ಕರ್ಮಗಳನ್ನು. ಅನುಸರಿಸಿ, ಪ್ರವರ್ತಿಸುವನು= ಮಾಡಬೇಕಾದುದನ್ನು ಮಾಡಿ ಮಾಡಿಸುವನು.

ತಾತ್ಪರ್ಯ:—ಶ್ರೀ ಪರಮಾತ್ಮನು ನಿತ್ಯದಲ್ಲೂ ಹೊಸಬನು, "ನಿತ್ಯಂನಿರೀಕ್ಷ್ಯಮಾಣಾನಾಂಯದ್ಯಪಿದ್ವಾರಕೌಕಸಾಂ || ನವಿತೃ ಪ್ಯಂತಿಹಿದೃಶಃ" ದ್ವಾರವತಿಯಲ್ಲಿರುವವರು ನಿತ್ಯದಲ್ಲಿ ಶ್ರೀಕೃಷ್ಣನನ್ನು ನೋಡುತ್ತಿದ್ದರೂ ಮತ್ತೂ ಹೊಸಬನಾಗಿಯೇ ಕಾಣುತ್ತಿರುವುದರಿಂದ ಎಷ್ಟು ನೋಡುತ್ತಿದ್ದರೂ ಆ ನೋಟಕರ ಕಣ್ಣುಗಳು ತೃಪ್ತಿಹೊಂದವು ಯೆಂದು ಭಾಗವತ ಪ್ರಥಮಸ್ಕಂಧದಲ್ಲಿ ಹೇಳಿರುವರು ಆದ್ದರಿಂದ ಪರ ಮಾತ್ಮನು ನಿತ್ಯನೂತನನು. ಇಂತಹ ಗುಣವು ಮತ್ತಾವ ಜೀವರಿಗುಂಟು ಮತ್ತು ನಿರ್ವಿಕಾರನು. ಸ್ಥೂಲ ಶರೀರಗಳಲ್ಲಿ ಬಾಲ್ಯಯೌವನ ವೃದ್ಧಾಪ್ಯ ದೆಶಾ ಮೊದಲಾದವು ಬರುತ್ತಾ ಬರುತ್ತಾ ಶರೀರಗಳು ವಿಕಾರಹೊಂದು ವವು. ಅಂತಹವಿಧವಾದ ವಿಕಾರವು ಶ್ರೀಪರಮಾತ್ಮನ ಯಾವ ರೂಪಗೆ ಳಿಗೂ ಯಾವ ದೇಹಗಳಿಗೂ ಬರುವುದಿಲ್ಲ. ಆದ್ದರಿಂದ ಪರಮಾತ್ಮನು ನಿರ್ವಿಕಾರನು. ಸುಹೃತ್ತಮನು ಅಂದರೆ "ನಿತ್ಯಂಪ್ರಾಣ ಸಮಃಸುಹೃತ್" ಎಂಬ ವಾಕ್ಯದಂತೆ ನಿತ್ಯದಲ್ಲೂ ತನ್ನ ಪ್ರಾಣಕ್ಕೆ ಸಮನೆಂದು ಯಾರನ್ನು ಭಾವಿಸುವನೋ ಅವನೇ ಸುಹೃತ್‌ಯಂಬುವನು. ಪರಮಾತ್ಮನು ಪ್ರಾಣ

ಕ್ಕಿಂತಲೂ ಹೆಚ್ಚು ಪ್ರಿಯ ವಿಷಯನಾದುದರಿಂದ ಸುಹೃತ್ತಮನೆಂದರು. ಪ್ರಣವದ ' ಓಂ ' ಎಂಬ ಅಕ್ಷರದಲ್ಲಿ, ಅ, ಉ. ಮ ಎಂಬ ಮೂರು ವರ್ಣಗಳು ಸೇರಿರುವವು. ಇವು ಮೂರು ಮೊಟ್ಟ ಮೊದಲು ಪರಮಾತ್ಮ ನಿಂದ ಹುಟ್ಟಿದವು. ವಾಙ್ಮಯ ಮನೋಮಯನೆಂದರೆ ಸರ್ವ ಜೀವ ರೊಳಿದ್ದು ವಾಙ್ಮನೋವ್ಯಾಪಾರಗಳನ್ನು ಮಾಡಿಸುವವನು. ವೇದಾ ನಾಂಸಾಮವೇದೋಸ್ಮಿಯಂಬಗೀತಾ ವಾಕ್ಯದಿಂದ ವೇದಗಳೆಲ್ಲವೂ ಭಗವತ್ಪರವೇ ಆದರೂ ವಿಶೇಷವಾಗಿ ಸಾಮವೇದದಲ್ಲಿ ಭಗವನ್ಮಹಿಮೆ ಹೆಚ್ಚಿಗೆ ಇರುವುದು. ಆದ್ದರಿಂದ ಸಾಮಗಾನರತ ಅಂದರು. ದತ್ತಾತ್ರೇಯ ಕಪಿಲ ಹಯಗ್ರೀವರೂಪಗಳಿಂದ ಪ್ರತಿಯೊಂದು ಜೀವರೊಳಗೂ ಇದ್ದು ಅವರವರ ಸ್ವರೂಪ ಯೋಗ್ಯತೆಯನ್ನೂ ಪ್ರಾರಬ್ಧ ಕರ್ಮಗಳನ್ನೂ ಅನುಸರಿಸಿ ಅವರಿಂದ ಆಗಬೇಕಾದ ಕಾರ್ಯಗಳನ್ನು ಮಾಡಿ ಮಾಡಿಸುವನು, ಈ ಗುಣ ಗಳಲ್ಲಿ ಯಾವ ಗುಣವಾದರೂ ಜೀವನಲ್ಲಿರುವುದೆ ? ಜೀವನು ಪರಮಾತ್ಮ ನಾಗುವುದೆಂತು ? ಇದು ಎಂದೂ ಅಸಂಭವವೆಂದು ತಾತ್ಪರ್ಯ || ೨೪ ||

**ಶ್ರುತಿಗಳಾತನ ಮಾತು ವಿಮಲ**
**ಸ್ಮೃತಿಗಳಾತನ ಶಿಕ್ಷೆ ಜೀವ**
**ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳುತಿಹವು||**
**ಇತರ ಕರ್ಮಗಳೆಲ್ಲ ಲಕುಮಿಾ**
**ಪತಿಗೆ ಪೂಜೆಗಳೆಂದು ಸ್ಮರಿಸುತ**
**ಚತುರ ವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ ||**

ಪದ್ಯಾರ್ಥ :—ಶ್ರುತಿಗಳು ಆತನ ಮಾತು=ಪರಮಾತ್ಮನ ವಾಕ್ಯ ಗಳು,ವಿಮಲ=ನಿಷ್ಕಲ್ಮಷವಾದ,ಸ್ಮೃತಿಗಳು=ಪುರಾಣವಾಕ್ಯಗಳು, ಆತನ ಶಿಕ್ಷೆ=ಅಪ್ಪಣೆಯು, ಜೀವಪ್ರತತಿ=ಜೀವ ಸಂಘಗಳು, ಪ್ರಕೃತಿಗಳೆರಡು= ಪ್ರಕೃತಿ ಇವೆರಡು, ಪ್ರತಿಮೆಗಳೆನಿಸಿಕೊಳುತಿಹವು. ಇತರ ಕರ್ಮಗಳೆಲ್ಲ= ನಡಿಯುವ ಮಿಕ್ಕ ಎಲ್ಲಾ ಕಾರ್ಯಗಳು, ಲಕುಮಿಾಪತಿಗೆ=ಲಕ್ಷ್ಮೀಪತಿ ಯಾದ ಶ್ರೀ ನಾರಾಯಣನಿಗೆ, ಪೂಜೆಗಳೆಂದು ಸ್ಮರಿಸುತ, ಸ್ವಪ್ನದಲಿ= ಸ್ವಪ್ನದಲ್ಲಾದರೂ, ಚತುರ್ವಿಧ ಪುರುಷಾರ್ಥಗಳ=ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ವಿಧ ಪುರುಷಾರ್ಥಗಳನ್ನು ಬೇಡದಿರು.

ತಾತ್ಪರ್ಯ :—ಶೃತಿಗಳೆಲ್ಲವು ಭಗವಂತನ ವಾಕ್ಯವೆಂದು ತಿಳಿ! ಪುರಾಣ ವಾಕ್ಯಗಳೆಲ್ಲವು ಪರಮಾತ್ಮನ ಅಪ್ಪಣೆಯೆಂಡು ತಿಳಿಯಬೇಕು. ಜೀವಶರೀರಗಳು ಮತ್ತು ಪ್ರಕೃತಿ ಇವೆರಡು ಪರಮಾತ್ಮನ ಪ್ರತಿಮೆಗಳೆಂದು ಭಾವಿಸು. ನೀನು ಮಾಡುವ ಎಲ್ಲಾ ಕರ್ಮಗಳನ್ನೂ ಪರಮಾತ್ಮನ ಪೂಜೆಗಳೆಂದು ತಿಳಿದು ಪರಮಾತ್ಮನಿಗೆ ಅರ್ಪಿಸುತ್ತಿರು. ಧರ್ಮಾದಿ ನಾಲ್ಕು ವಿಧ ಪುರುಷಾರ್ಥಗಳನ್ನು ಸ್ವಪ್ನದಲ್ಲಾದರೂ ಬೇಡದಿರು. ನಿಷ್ಕಾಮುಕನಾಗಿ ಕರ್ಮಗಳನ್ನು ಮಾಡಬೇಕೆಂಬ ತಾತ್ಪರ್ಯ ||೨೫||

ಅವತಾರಿಕೆ :—ಪರಮಾತ್ಮನು ತನ್ನ ಭಕ್ತರ ಸೇವಾನುಗುಣವಾಗಿ ಫಲವನ್ನು ಕೊಡುತ್ತಾನೆಂದು ಹೇಳುತ್ತಾರೆ—

**ಭೂತಳಾಧಿಪನಾಜ್ಞಾಧಾರಕ**
**ದೂತರಿಗೆ ಸೇವಾನುಸಾರದಿ**
**ವೇತನವ ಕೊಟ್ಟವರ ಸಂತೋಷಿಸುವ ತೆರನಂತೆ**
**ಮಾತರಿಶ್ವಪ್ರಿಯನು ಪರಮ**
**ಪ್ರೀತಿಪೂರ್ವಕ ಸದ್ಗುಣಂಗಳ**
**ಗಾಥಕರ ಸಂತೋಷಬಡಿಸುವ ಇಹಪರಂಗಳಲಿ ||**

ಪದ್ಯಾರ್ಥ:— ಭೂತಳಾಧಿಪ=ಭೂಮಂಡಲಕ್ಕಧಿಪನಾದ ಮಹಾರಾಜನು,ಆಜ್ಞಾಧಾರಕ ದೂತರಿಗೆ=ಅಪ್ಪಣೆಯನ್ನು ಮೀರದೆ ಕಾರ್ಯಗಳನ್ನು ಮಾಡುತ್ತಿರುವ ದೂತರಿಗೆ, ಸೇವಾನುಸಾರದಿ, ವೇತನವ=ಸಂಬಳವನ್ನು, ಕೊಟ್ಟು, ಅವರ, ಸಂತೋಷಿಸುವ ತೆರನಂತೆ=ಹೇಗೆ ಸಂತೋಷಪಡಿಸುವನೋ ಹಾಗೆ, ಮಾತರಿಶ್ವಪ್ರಿಯನು=ವಾಯು ದೇವರಿಗೆ ಮುಖ್ಯಪ್ರಿಯನಾದ, ಅಥವಾ ವಾಯುದೇವರಲ್ಲಿ ಪ್ರೀತಿಯುಳ್ಳ, ಶ್ರೀಹರಿಯು ಪರಮ ಪ್ರೀತಿಪೂರ್ವಕ, ಸದ್ಗುಣಂಗಳ, ಗಾಥಕರ=ಕೊಂಡಾಡುತ್ತಿರುವ ಭಕ್ತರನ್ನು, ಇಹಪರಂಗಳಲ್ಲಿ=ಈ ಲೋಕದಲ್ಲೂ ಪರಲೋಕದಲ್ಲೂ ಸಹ ಸಂತೋಷಪಡಿಸುವನು

ತಾತ್ಪರ್ಯ :—ಮಹಾರಾಜನ ದೂತರು ರಾಜನಪ್ಪಣೆಯನ್ನು ಮೀರದೆ ತಮಗೆ ಕೊಟ್ಟಿರುವ ಕೆಲಸವನ್ನು ರಾಜನು ಮೆಚ್ಚುವಂತೆ ಮಾಡುತ್ತಿದ್ದರೆ ರಾಜನು ಅವರ ಕೆಲಸಕ್ಕೆ ಮೆಚ್ಚಿ ಅದಕ್ಕೆ ತಕ್ಕಂತೆ ಸಂಬಳವನ್ನು ಕೊಟ್ಟು ಅವರನ್ನು ಸಂತೋಷ ಪಡಿಸುವಂತೆ, ವಾಯುದೇವರಿಗೆ ಪ್ರೀತಿ

ವಿಷಯನಾದ ಶ್ರೀ ಹರಿಯು ತನ್ನ ಚರಿತ್ರೆಗಳನ್ನು ಪಾಡುತ್ತಾ ಶ್ರುತಿಸ್ಮೃತಿಗಳೆಂಬ ಭಗವದಾಜ್ಞೆಗೆ ಬದ್ಧನಾಗಿ ಕರ್ಮಗಳನ್ನು ಮಾಡುತ್ತಾ ಮಾಡಿದ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುತ್ತಿದ್ದರೆ ಪ್ರೀತನಾಗಿ ಅವನ ಸೇವೆಗೆ ಮೆಚ್ಚಿ ಇಹಪರಂಗಳಲ್ಲಿ ಸುಖವನ್ನಿತ್ತು ಸಂರಕ್ಷಣೆ ಮಾಡುವನು ||೨೬||

ಅವತಾರಿಕೆ :— ಪರಮಾತ್ಮನ ಭಕ್ತರು ಮಾಡುವ ಅಧರ್ಮವೂಸಹ ಪುಣ್ಯವೇ ಆಗುವದು. ಆತನ ದ್ವೇಷಿಗಳು ಮಾಡುವ ಪುಣ್ಯವೂಸಹ ಪಾಪವೇ ಆಗುವದೆಂದು ಸದೃಷ್ಟಾಂತವಾಗಿ ಹೇಳುತ್ತಾರೆ :—

**ದೀಪ ದಿವದಲಿ ಕಂಡರಾದಡೆ**
**ಲೋಪಗೈಸುವರಾಕ್ಷಣ ಹರಿ ಸ**
**ಮೀಪದಲ್ಲಿರೆ ನಂದನಾಮಸುನಂದವೆನಿಸುವವೂ ||**
**ಔಪಚಾರಿಕವಲ್ಲ ಸುಜನರ**
**ಪಾಪಕರ್ಮವು ಪುಣ್ಯವೆನಿಪುದು**
**ಪಾಪಿಗಳ ಸತ್ಪುಣ್ಯಕರ್ಮವು ಪಾಪವೆನಿಸುವುದು ||**

ಪದ್ಯಾರ್ಥ :—ದಿವದಲಿ=ಹಗಲುಕಾಲದಲ್ಲಿ ದೀಪ=ಮನೆಗಳಲ್ಲಿ ದೀಪಗಳು ಉರಿಯುತ್ತಿರುವುದನ್ನು, ಕಂಡರಾದಡೆ=ಮನೆಯವರು ನೋಡಿದರಾದರೆ, ಆಕ್ಷಣ=ಕಂಡತಕ್ಷಣದಲ್ಲೆ, ಲೋಪಗೈಸುವರು=ಆರಿಸಿಬಿಡುವರು. ಅವೇ ದೀಪಗಳು, ಹರಿ ಸಮೀಪದಲ್ಲಿರೆ=ದೇವರಮನೆಯಲ್ಲಿಟ್ಟರಲು, ನಂದನಾಮ=ನಂದಾದೀಪವೆಂಬ ಹೆಸರಿನಿಂದ, ಸುನಂದವೆನಿಸುವವು=ಆನಂದಕರವೆನಿಸುವವು. ಇದು, ಔಪಚಾರಿಕವಲ್ಲ=ಉಪಚಾರದಮಾತಲ್ಲ. ಸುಜನರ=ಭಗವದ್ದಾಸರು ಮಾಡಿದ ಪಾಪಕರ್ಮವು, ಪುಣ್ಯವೆನಿಪುದು=ಪುಣ್ಯಕರ್ಮದ ಫಲವನ್ನೇಕೊಡುವದು ಪಾಪಿಗಳ=ಭಗವದ್ವೇಷಿಗಳ ಸತ್ಪುಣ್ಯಕರ್ಮವು=ಉತ್ತಮವಾದ ಪುಣ್ಯಕರ್ಮವು, ಪಾಪವೆನಿಸುವುದು=ಪಾಪಫಲವನ್ನೇಕೊಡುವದು

ತಾತ್ಪರ್ಯ :—ಹಗಲುಕಾಲದಲ್ಲಿ ಮನೆಯೊಳಗೆ ದೀಪವು ಉರಿಯುತ್ತಿದ್ದುದನ್ನು ಮನೆಯವರು ಕಂಡರೆ ತಕ್ಷಣ ಅದನ್ನು ಆರಿಸಿಬಿಡುವರು. ಅಂತಹ ದೀಪಗಳನ್ನು ದೇವರ ಮನೆಯಲ್ಲಿ ಇಟ್ಟದ್ದರೆ ನಂದಾದೀಪಗಳೆಂದು 'ಹೆಸರಿಟ್ಟು ನೋಡಿ ಆನಂದಪಡುವರು. ಇದರಂತೆ ಪರಮಾ

ತ್ಮನೇ ತಾನೆಂದು ಸ್ವತಂತ್ರ ಕರ್ತೃತ್ವವನ್ನು ಅವಲಂಬಿಸಿ ಮಾಡಿದಪುಣ್ಯವು ಹಗಲುಕಾಲದಲ್ಲಿ ಮನೆಯಲ್ಲಿರುವ ದೀಪದಂತೆ ಹಾನಿಹೊಂದುವುದು. ಪುಣ್ಯವು ಲೋಪವಾಗಿ ಅದರ ಪ್ರತಿಯಾಗಿ ಪಾಪಸಂಭವಿಸುವುದು. ಇದರಂತೆ ಭಗವದ್ಭಕ್ತರು ಮಾಡುವ ಪಾಪಗಳೂಕೂಡ ಪರಮಾತ್ಮನು ಸ್ವತಂತ್ರನು, ನನಗೆ ಪ್ರಭುವು, ನಾನು ಅತನ ದಾಸನು ನಾನು ಪರಾಧೀನನುಎಂಬ ಜ್ಞಾನದಿಂದ ಅವುಗಳನ್ನು ಪರಮಾತ್ಮನಲ್ಲಿ ಒಪ್ಪಿಸಲು ಹಗಲುದೀಪವು ಪರಮಾತ್ಮನ ಸನ್ನಿಧಾನದಲ್ಲಿರಲು ಹೇಗೆ ನಂದಾದೀಪವೆಂದು ಕರೆಸುತ್ತಾ ಆನಂದಕರವಾಗುವದೋ ಹಾಗೆ ಪಾಪಗಳೆಲ್ಲಾ ಭಸ್ಮವಾಗಿ ಪುಣ್ಯಫಲವನ್ನೇ ಕೊಡುವುವು. ಈ ದೃಷ್ಟಾಂತದಲ್ಲಿ ದೀಪವು ಪುಣ್ಯಕರ್ಮಕ್ಕೆ ಉಪಮಾನವು. ಹಗಲುಕಾಲವು ದೀಪಕ್ಕೆ ವಿರುದ್ಧವಾದುದು. ಹರಿದ್ವೇಷಿಗಳು ಹಗಲು ಕಾಲಕ್ಕೆಸಮರು. ಅವರುಮಾಡಿದ ಪುಣ್ಯವು ಹಗಲುಕಾಲದ ದೀಪವು ನಾಶಹೊಂದುವಂತೆ ಹೊಂದುವದು. ಆದೇ ಹಗಲುಕಾಲದ ದೀಪವು ಭಗವತ್ಸನ್ನಿಧಾನದಲ್ಲಿದ್ದರೆ ಶುಭವಾಗುವದು, ಅದರಂತೆ ಭಗವದ್ಭಕ್ತರು ಮಾಡಿದಪಾಪವು ಹಗಲಿನ ನಂದಾದೀಪದಂತೆ ಭಗವದನುಗ್ರಹ ವಿಶೇಷದಿಂದ ಪುಣ್ಯವಾಗುವದೆಂದು ತಾತ್ಪರ್ಯ : ಮಹಾಭಾರತ ತಾತ್ಪರ್ಯ ನಿರ್ಣಯ ಮೊದಲನೆಯ ಅಧ್ಯಾಯ ( ಶ್ಲೋಕ ೧೦೮ ) ರಲ್ಲಿ "ಧರ್ಮೋಭವತ್ಯಧರ್ಮೋಪಿಕೃತೋಭಕ್ತೈಸ್ತವಾಚ್ಯುತ ಪಾಪಂಭವತಿ ಧರ್ಮೋಪಿ ಯೋನಭಕ್ತೈಃ ಕೃತೋಹರೆ" ಯೆಂದು ಹೇಳಿರುವುದನ್ನೇ ಈ ಪದ್ಯದಲ್ಲಿ ಹೇಳಿರುವರು ||೨೭||

ಅವತಾರಿಕೆ :—ಸಚ್ಛಾಸ್ತ್ರ ಶ್ರವಣವೇ ಭಗವದನುಗ್ರಹಕ್ಕೆ ಮುಖ್ಯ ಸಾಧನವೆಂದು ಹೇಳುತ್ತಾರೆ:—

ಧನವ ಸಂಪಾದಿಸುವ ಪ್ರದ್ರಾ
ವಣಿಕರಂದದಿ ಕೋವಿದರ ಮನೆ
ಮನೆಗಳಲಿ ಸಂಚರಿಸು ಶಾಸ್ತ್ರಶ್ರವಣಗೋಸುಗದೀ ||
ಮನನಗೈದುಪದೇಶಿಸುತದು
ರ್ಜನರ ಕೂಡಾಡದಿರು ಸ್ವಪ್ನದಿ
ಪ್ರಣತಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ ||

ಪದ್ಯಾರ್ಥ:—ಧನವಸಂಪಾದಿಸುವ=ವ್ಯಾಪಾರವನ್ನುಮಾಡಿ ಲಾಭ ದ್ರವ್ಯವನ್ನು ಪಡೆಯಬೇಕೆಂಬ ಇಚ್ಛೆಯುಳ್ಳ, ಪ್ರದ್ರಾವಣಿಕರಂದದಿ=

ವರ್ತಕರಂತೆ, ಕೋವಿದರ=ಜ್ಞಾನಿಗಳ, ಮನೆಮನೆಗಳಲ್ಲಿ, ಶಾಸ್ತ್ರಶ್ರವಣ ಗೋಸುಗದೀ=ಸಚ್ಛಾಸ್ತ್ರ ಶ್ರವಣಮಾಡುವದಕ್ಕೋಸ್ಕರ, ಸಂಚರಿಸು. ಮನನಗೈದು=ಶ್ರವಣಮಾಡಿದುದನ್ನು ಮನಸ್ಸಿನಲ್ಲಿ ನೆನಪುಮಾಡಿಕೊಳ್ಳುತ್ತ, ಉಪದೇಶಿಸುತ=ಸಜ್ಜನರಿಗೆ ಅದನ್ನು ಉಪದೇಶಮಾಡುತ್ತ, ದುರ್ಜನರಕೂಡ, ಸ್ವಪ್ನದಿ=ಸ್ವಪ್ನದಲ್ಲೂಕೂಡ ಆಡದಿರು=ಈ ವಿಷಯ ಗಳನ್ನು ಹೇಳದಿರು. ಅವರ ಸಹವಾಸವನ್ನೂ ಸಹ ಮಾಡದಿರು. ಪ್ರಣತ ಕಾಮದ=ನಮಸ್ಕಾರ ಮಾಡುವವರಿಗೆ ಇಷ್ಟಾರ್ಥವನ್ನು ಪೂರೈಸುವ ಪರ ಮಾತ್ಮನು, ಇಹಪರಂಗಳಲಿ, ಸೌಖ್ಯಗಳ ಕೊಡುವ

ತಾತ್ಪರ್ಯ :— ವರ್ತಕನು ವ್ಯಾಪಾರಮಾಡಿ ಹೆಚ್ಚು ಲಾಭವನ್ನು ಪಡೆಯುವುದಕ್ಕೋಸ್ಕರ ಆ ರಹಸ್ಯವನ್ನು ತಿಳಿದಿರುವ ವರ್ತಕರ ಮನೆಮನೆಗಳಿಗೆ ತಿರುಗಿ ಯಾವಸ್ಥಳಗಳಲ್ಲಿ ಸರಕುಗಳು ಮಾರುವದೆಂಬುವುದನ್ನು ತಿಳಿದು ಕೊಂಡು ಆ ಸ್ಥಳಗಳಿಗೆಹೋಗಿ ವ್ಯಾಪಾರಗಳನ್ನುಮಾಡಿ ಲಾಭವನ್ನು ಸಂಪಾದಿಸುವನು. ಅದರಂತೆಯೇ ಭಗವದ್ಭಕ್ತರು ಸಚ್ಛಾಸ್ತ್ರಶ್ರವಣವೆಂಬ ಲಾಭವನ್ನು ಪಡೆಯುವುದಕ್ಕೋಸ್ಕರ ಸಜ್ಜನರ ಮನೆಮನೆಗಳಿಗೆ ತಿರುಗಿ ಅಲ್ಲಿ ಸಾಧುಗಳಾದ ಜ್ಞಾನಿಗಳು ದೊರಕಿದಲ್ಲಿ ಅವರಿಗೆ ಸೇವಾರೂಪವಾದ ಧಾನ್ಯಗಳನ್ನು ಮಾರಿ ಕಥಾಶ್ರವಣವೆಂಬ ಲಾಭವನ್ನು ಪಡೆಯಬೇಕೆಂಬ ತಾತ್ಪರ್ಯ. ವರ್ತಕರು ಲಾಭವನ್ನು ಸಂಪಾದನೆಮಾಡಿ ಆ ಲಾಭದ್ರವ್ಯವು ಎಷ್ಟು, ಅಸಲುಎಷ್ಟು ಇವುಗಳನ್ನು ಏಕಾಂತವಾಗಿಕೂತು ಗಣನೆಮಾಡಿ ಲಾಭದ್ರವ್ಯವನ್ನು ಹೆಂಡತಿ ಮಕ್ಕಳ ಪೋಷಣೆಗೆ ಉಪಯೋಗಪಡಿಸುವರು. ಅವರಂತೆ ಕಥಾಶ್ರವಣವೆಂಬ ಲಾಭವನ್ನು ಸಂಪಾದನೆಮಾಡಿ ಅದನ್ನು ಏಕಾಂತದಲ್ಲಿ ಕೂತುಮನನಮಾಡಿ ತನ್ನ ಬಂಧುಜನರಂತಿರುವ ಭಕ್ತಜನರಿಗೆ ಉಪದೇಶರೂಪವಾಗಿ ಹಂಚಬೇಕು. ಲಾಭಾಂಶವನ್ನು ವರ್ತಕರು ಹೇಗೆ ತಮ್ಮವರುಹೊರತು ಪರರಿಗೆ ಕೊಡರೋ ಹಾಗೆ ತಮ್ಮವರಾದ ಭಕ್ತರಿಗೆ ಉಪದೇಶ ಮಾಡಬೇಕೇ ಹೊರತು ಪರಕೀಯರಂತಿರುವ ದುಷ್ಟರುಗಳಿಗೆ ಉಪದೇಶ ಮಾಡಬಾರದೆಂದು ತಾತ್ಪರ್ಯ. ಸಜ್ಜನರ ಸಂಗದಿಂದಲೇ ಕಥಾಶ್ರವಣವಾಗಬೇಕು. ಭಾಗವತ ತೃತೀಯಸ್ಕಂಧದಲ್ಲಿ ದೇವಹೂತಿಗೆ ಕಪಿಲೋಪದೇಶ ಘಟ್ಟದಲ್ಲಿ "ಸತಾಂಪ್ರಸಂಗಾನ್ಮಮ ವೀರ್ಯಸಂಪದೋ ಭವಂತಿ ಹೃತ್ಕರ್ಣರಸಾಯನಾಃ ಕಥಾಃ" ಸಜ್ಜನರ ಸಹವಾಸದಿಂದ

ನನ್ನ ಪರಾಕ್ರಮಗಳಿಂದ ಕೂಡಿದ, ಮನಸ್ಸಿಗೂ ಕಿವಿಗಳಿಗೂ ಆನಂದಕರವಾದ ರಸಾಯನ ರೂಪವಾದಕಥೆಗಳು ದೊರೆಯುವವುಎಂದು ಹೇಳಿರುವರು. ದ್ವಾದಶಸ್ಕಂಧದಲ್ಲಿ "ಅವಿಸ್ಮೃತಿ ಶ್ರೀಧರ ಪಾದಪದ್ಮಯೋರ್ಗುಣಾನುವಾದ ಶ್ರವಣಾದಿ ಭಿರ್ಹರೇಃ" ಪರಮಾತ್ಮನ ಗುಣವನ್ನು ಅನುವಾದ ಮಾಡುವುದರಿಂದಲೂ, ಶ್ರವಣಮಾಡುವುದರಿಂದಲೂ ಪರಮಾತ್ಮನನ್ನು ಯಾವಾಗಲೂ ಮರಿಯದೆ ಇರುವಿಕೆಯು ಆಗುವುದು. "ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ ಕ್ಷಿಣೋತ್ಯಭದ್ರಾಣಿ ಶಮಂತನೋತಿಚ" ಆ ಪರಮಾತ್ಮನ ಅವಿಸ್ಮೃತಿಯು ( ಮರಿಯದೆ ಇರುವಿಕೆಯು ) ಅಮಂಗಳವನ್ನೆಲ್ಲಾ ಪರಿಹಾರಮಾಡಿ ಉತ್ತಮಗತಿಯನ್ನು ಕೊಡುವುದುಎಂದು ಹೇಳಿರುವರು. ಆದ್ದರಿಂದ ದಾಸರಾಯರು ಸಜ್ಜನಸಂಗಕ್ಕಾಗಿ ಮನೆ ಮನೆತಿರುಗಿ ಕಥಾಶ್ರವಣಮಾಡಿ ಮನನಮಾಡಿ ಸಾಧುಜನರಿಗೆ ಉಪದೇಶಮಾಡಿದರೆ ಇಹಪರದಲ್ಲೂ ಸುಖವಾಗುವದೆಂದು ಹೇಳಿರುವರು ||೨೮||

ಅವತಾರಿಕೆ :—ಸಂಸಾರಕ್ಕೆ ಮುಖ್ಯಸಾಧನವಾದ ಮೂರು ವಿಧ ಭ್ರಮೆಗಳನ್ನು ಬಿಟ್ಟು ಭಗವದಾರಾಧನೆ ಮಾಡೆಂದು ಹೇಳುತ್ತಾರೆ :—

**ಕಾರಕಕ್ರಿಯ ದ್ರವ್ಯ ವಿಭ್ರಮ**
**ಮೂರುವಿಧ ಜೀವರಿಗೆ ಬಹುಸಂ**
**ಸಾರಕವು ಕಾರಣವೆನಿಸುವವೆಲ್ಲಕಾಲದಲಿ ||**
**ದೂರ ಓಡಿಸಿ ಭ್ರಾಮಕತ್ರಯ**
**ಮೂರಿಗೊಳಗಾಗದಲೆ ಸರ್ವಾ**
**ಧಾರಕನ ಚಿಂತಿಸುತಲಿರು ಸರ್ವತ್ರಮರಿಯದಲೆ ||**

ಪದ್ಯಾರ್ಥ :—ಕಾರಕ=ಕಾರಕಭ್ರಮೆಎಂತಲ್ಲೂ, ಕ್ರಿಯ=ಕ್ರಿಯ ಭ್ರಮೆಎಂತಲೂ, ದ್ರವ್ಯ=ದ್ರವ್ಯಭ್ರಮೆಎಂತಲೂ, ಮೂರುವಿಧ=ಮೂರು ವಿಧವಾದ, ವಿಭ್ರಮ=ವಿಶೇಷವಾದ ಭ್ರಮೆಗಳು ಇರುವವು. ಜೀವರಿಗೆ, ಎಲ್ಲಕಾಲದಲಿ, ಸಂಸಾರಕ್ಕೆ, ಬಹು=ಬಹಳವಾಗಿ, ( ಮುಖ್ಯವಾಗಿ ) ಕಾರಣವೆನಿಸುವವು. ಭ್ರಾಮಕತ್ರಯ=ಈ ಮೂರುವಿಧವಾದ ಭ್ರಮೆಗಳೆಂಬ, ಮೂರಿಗೆ, ಒಳಗಾಗದಲೆ, ದೂರ ಓಡಿಸಿ, ಸರ್ವತ್ರ ಮರಿಯದಲೆ, ಸರ್ವಾಧಾರಕನ=ಸ್ವತಂತ್ರಕರ್ತನಾದ, ಸರ್ವರಿಗೂ ಆಧಾರಭೂತನಾದ, ಶ್ರೀ ಹರಿಯನ್ನು, ಚಿಂತಿಸುತಲಿರು.

ತಾತ್ಪರ್ಯ:—ಸಂಸಾರದಲ್ಲಿ ನಾನಾ ವಿಧವಾದ ದುಃಖಗಳನ್ನು ಕೊಡಿಸುವುದಕ್ಕೂ, ಪುನಃಪುನಃ ಸಂಸಾರದಲ್ಲಿ ಲೋಲಾಡುವಂತೆ ಮಾಡುವುದಕ್ಕೂ ಕಾರಕಭ್ರಮೆ, ಕ್ರಿಯಾಭ್ರಮೆ, ದ್ರವ್ಯಭ್ರಮೆ ಎಂಬ ಮೂರು ವಿಧ ಭ್ರಮೆಗಳು ಕಾರಣವಾಗಿರುವವು. ಇದರರ್ಥವನ್ನು ಪುರಂದರದಾಸಾರ್ಯರು ತಾವು ಮಾಡಿದ ಸುಳಾದಿಯಲ್ಲಿ ವಿವರಿಸಿರುವರು. ಅದೆಂತೆನೆ : "ನಾನೇವೆ ಕರ್ತನೆಂಬೊ ಕಾರಕಭ್ರಮವಯ್ಯ। ದೈನಂದಿನದಿ ಕರಣ ಕಾರ್ಯ ಮಾಡುವದೆಂಬೊ ಕ್ರೀಯಾದ ಭ್ರಮವಯ್ಯ। ಆನಪೂರ್ವಕ ಧನ ದಾರಾಪತ್ಯರೆನಗೆ ಆನೀಸಿಕೊಡುವಾರು ಸತ್ಪಥವೆಂಬಂಥ ದ್ರವ್ಯ ವಿಭ್ರಮವಯ್ಯ। ಸಾನುರಾಗಾದಿ ಎನ್ನ ಬಹುಬಾಧೆಪಡಿಸುತಿದೆ। ನೀನಾಗಿ ಬಿಡಿಸುತ್ತಾ ತವ ಧ್ಯಾನ ನೀಡಯ್ಯ ದೀನಜನಮಂದಾರ ಪುರಂದರ ವಿಠ್ಠಲಾನೆ ಅನಮಿಸಿ ಬೇಡುವೆ ನಿನ್ನ ಪಾದಯುಗಳಕ್ಕೆ" ಎಂದು ದಾಸಾರ್ಯರ ಸುಳಾದಿಯು. ಇದರಿಂದ ಏರ್ಪಡುವ ಅರ್ಥವೇನೆಂದರೆ—ನಾನೇ ನನ್ನ ಹೆಂಡರು ಮಕ್ಕಳನ್ನು ಪೋಷಿಸುತ್ತಿರುವೆನು ಎಂಬ ಸ್ವತಂತ್ರ ಕರ್ತೃತ್ವಾಭಿಮಾನವೆ ಕಾರಕಭ್ರಮೆಯು; ನನ್ನ ಕಣ್ಣುಗಳೇ ನೋಡುವವು; ನನ್ನ ಕಿವಿಯೇ ಕೇಳುವುದು ಎಂದು ಇಂದ್ರಿಯಗಳಿಗೆ ಸ್ವತಂತ್ರ ಕರ್ತೃತ್ವವನ್ನು ಊಹಿಸುವುದೇ ಕ್ರಿಯೆಯ ಭ್ರಮೆಯು. ನಮ್ಮ ದೇಹ, ಹೆಂಡರು ದ್ರವ್ಯ ಮೊದಲಾದವುಗಳೆ ನಮಗೆ ಸುಖಸಾಧನವೆಂದುತಿಳಿಯುವುದೇ ದ್ರವ್ಯಭ್ರಮೆಯು. ಇಂತಹ ಮೂರುವಿಧ ಭ್ರಮೆಗಳೇ ಸಂಸಾರದಲ್ಲಿ ನಾನಾಪ್ರಕಾರ ಕ್ಲೇಶವನ್ನು ಕೊಡಿಸುವುದಕ್ಕೂ, ಪುನಃ ಪುನಃ ಸಂಸಾರದಲ್ಲಿ ತಗಲಿಸಿ ಕಷ್ಟಪಡಿಸುವುದಕ್ಕೂ ಕಾರಣವಾಗಿರುವವು. ಆದ್ದರಿಂದ ಇಂತಹ ಭ್ರಾಮಕತ್ರಯವನ್ನು ದೂರದಲ್ಲಿ ಓಡಿಸಬೇಕು. ಈ ಮೂರುವಿಧಭ್ರಮೆಗಳು ದೊಡ್ಡ ಮಾರಿಯಂತೆ ನಮ್ಮನ್ನು ಹಿಂಸಿಸುವವು ಅವುಗಳಿಗೆ ಒಳಗಾಗದೆ, ಸರ್ವಾಧಾರಕನಾದ ಶ್ರೀ ಪರಮಾತ್ಮನನ್ನು ಅವಿಚ್ಛಿನ್ನವಾಗಿ ಸರ್ವಕಾಲದಲ್ಲಿಯೂ, ಸರ್ವಸ್ಥಳಗಳಲ್ಲಿಯೂ ಚಿಂತಿಸುತ್ತಿರಬೇಕೆಂಬ ತಾತ್ಪರ್ಯ. ||೨೯||

ಅವತಾರಿಕೆ:—ಮೇಲೆ ಹೇಳಿದ ಸ್ವತಂತ್ರ ಕರ್ತೃತ್ವಾದಿಗಳು ಭ್ರಮೆ ಎಂಬುವುದನ್ನು ಸಕಾರಣವಾಗಿ ಸ್ಥಾಪಿಸುತ್ತಾರೆ:—

**ಕರಣಕರ್ಮವ ಮಾಡಿದರೆ ವಿ**
**ಸ್ಮರಣೆಕಾಲದಿ ಮಾತುಗಳಿಗು**

ತ್ತರವ ಕೊಡದಲೆ ಸುಮ್ಮನಿಪ್ಪನು ಜಾಗರಾವಸ್ಥೆ ||
ಕರುಣಿಸಲು ವ್ಯಾಪಾರ ಮಾಡುವ
ಬರಲು ನಾಲ್ಕಾವಸ್ಥೆಗಳ ಪರಿ
ಹರಿಸಿಕೊಳನೇತಕೆ ಸ್ವತಂತ್ರನು ತಾನೆಯೆಂಬುವನು ||

ಪದ್ಯಾರ್ಥ — ಕರಣ = ಇಂದ್ರಿಯಗಳೆ, ಕರ್ಮವ ಮಾಡಿದರೆ, ವಿಸ್ಮರಣೆಕಾಲದಲ್ಲಿ = ಎಚ್ಚರವಿಲ್ಲದಕಾಲದಲ್ಲಿ ( ನಿದ್ರೆಯಲ್ಲಿ ) ಮಾತುಗಳಿಗೆ = ಹತ್ತಲಿದ್ದು ಒಬ್ಬನು ಮಾತನಾಡುತ್ತಿದ್ದರೆ ಆ ಮಾತುಗಳಿಗೆ, ಉತ್ತರವ ಕೊಡದಲೆ, ಸುಮ್ಮನಿಪ್ಪನು. ಜಾಗರಾವಸ್ಥೆ = ಎಚ್ಚರವಾಗಿರುವಿಕೆಯನ್ನು, ಕರುಣಿಸಲು = ಭಗವಂತನು ಕರುಣಿಸಲು, ( ಭಗವದನುಗ್ರಹದಿಂದ ಯೆಚ್ಚರವಾಗಲು, ) ವ್ಯಾಪಾರಮಾಡುವ = ಇಂದ್ರಿಯಜನ್ಯಕಾರ್ಯಗಳನ್ನು ಅಂದರೆ, ಕೇಳಿದುದಕೆ ಉತ್ತರವನ್ನು ಕೊಡುವುದು, ಏಳುವುದು. ಕೂಡುವುದು, ಮೊದಲಾದ ಕಾರ್ಯಗಳನ್ನು ಮಾಡುವನು ನಾಲ್ಕಾವಸ್ಥೆಗಳು = ಜಾಗ್ರದವಸ್ಥೆ ( ಎಚ್ಚರದಲ್ಲಿರುವಿಕೆ ) ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ ( ಒಳ್ಳೆನಿದ್ರೆಯಲ್ಲಿರುವಿಕೆ) ಮೂರ್ಛೆ ಮೊದಲಾದ ೪ಅವಸ್ಥೆಗಳು, ಬರಲು, ಸ್ವತಂತ್ರನು ತಾನೆ ಎಂಬುವನು. ಬಿಡಿಸಿಕೊಳನೇತಕೆ = ಆ ಅವಸ್ಥೆಗಳಿಗೊಳಗಾಗದೆ ಏತಕ್ಕಿರಬಾರದು ?

ತಾತ್ಪರ್ಯ :— ಇಂದ್ರಿಯಗಳೇ ಸ್ವತಂತ್ರವಾಗಿ ಕರ್ಮಗಳನ್ನು ಮಾಡುವುದಾದರೆ, ನಿದ್ರೆಮಾಡುತ್ತಿರುವಾಗಲೂ ಕಣ್ಣು; ಕಿವಿ, ಮೊದಲಾದ ಇಂದ್ರಿಯಗಳು ಇದ್ದೇ ಇರುವುವಷ್ಟೆ ! ಆ ಸಮಯದಲ್ಲಿ ಯಾರಾದರೂ ಏನಾದರೂ ಕೇಳಿದರೆ ನಿದ್ರೆ ಮಾಡುತ್ತಿರುವವನ ಕಿವಿಗಳೇಕೆ ಕೇಳವು ? ಬಾಯಿಯು ಉತ್ತರವನ್ನೇಕೆ ಕೊಡಲೊಲ್ಲದು ? ಎಚ್ಚರವಾಗಿದ್ದಾಗ ಮಾತ್ರ ಪ್ರಶ್ನೋತ್ತರಾದಿಗಳು ನಡಿಯುತ್ತವೆ, ಆದ್ದರಿಂದ ಸ್ವತಂತ್ರ ಶಕ್ತಿಯು ಇಂದ್ರಿಯಗಳಿಗಿಲ್ಲವೆಂದು ಹೇಳಿದಂತಾಯಿತು. ಸ್ವತಂತ್ರನು ತಾನೇ ಆಗಿದ್ದರೆ ತನ್ನನ್ನು ಮೀರಿ ಬರುವ ನಿದ್ರೆಯನ್ನಾಗಲಿ. ನಿದ್ರೆ ಮಾಡುತ್ತಿರುವಾಗ ತಾನಾಗಿ ಎಚ್ಚರವಾಗುವುದೇ ಆಗಲಿ, ಮೂರ್ಛೆಬರುವುದು, ಸ್ವಪ್ನ ಬೀಳುವುದು ಇವೇ ಮೊದಲಾದವುಗಳನ್ನು ತನ್ನಿಚ್ಛೆಯಿಂದ ತಾನೇಕೆ ಬಿಡಿಸಿಕೊಳ್ಳಬಾರದು ? ಅಂದರೆ, ನಮಗೆ ಬೇಕಾದಾಗ ನಿದ್ರೆಯು ಬರಲಿ ! ನಮ್ಮನ್ನರಿಯದೆ ನಿದ್ರೆಯು ಬರುವುದೇಕೆ ? ನಾವೇ ಸ್ವ

ತಂತ್ರರಾದ ಮೇಲೆ ನಮ್ಮ ಇಚ್ಛೆಗೆ ಬಂದಾಗ ನಾವು ಏಳಬೇಕಲ್ಲದೆ, ನಮ್ಮನ್ನರಿಯದೆ ತಾನಾಗಿ ಎಚ್ಚರವೇಕೆ ಆಗಬೇಕು ? ನಮಗೆ ಬೇಕಾದರೆ ಸ್ವಪ್ನ ಬೀಳಲಿ ! ತಾನಾಗಿ ಸ್ವಪ್ನವೇಕೆ ಬೀಳಬೇಕು ? ನಮಗಿಷ್ಟವಿಲ್ಲದ ಮೂರ್ಛೆ ಮೊದಲಾದ ರೋಗಗಳು ನಮಗೆ ಬಾರದಂತೇ ನಾವೇಕೆ ಅವುಗಳನ್ನು ತಡೆಯಬಾರದು ? ಮೃತ್ಯುವಾದರೂ ನಮಗೇಕೆ ಬರಬೇಕು ? ಇವುಗಳೆಲ್ಲವು ನಮ್ಮ ಪರಾಧೀನತೆಯನ್ನು ಸ್ಪಷ್ಟಪಡಿಸುವವು. ಹೀಗಿದ್ದರೂ ನಾವೇ ಸ್ವತಂತ್ರ ಕರ್ತರು ; ನಮ್ಮ ಇಂದ್ರಿಯಗಳೇ ಕರ್ಮಗಳನ್ನು ಮಾಡುತ್ತವೆ ; ಎಂದು ಹೇಳಿದರೆ ಇದು ಭ್ರಾಂತಿಯಲ್ಲವೆ ? ಭ್ರಾಂತಿಯೆಂದು ಸ್ವತಃ ಸಿದ್ಧವಾಯಿತೆಂಬ ತಾತ್ಪರ್ಯ ॥ ೩೦ ॥

ಅವತಾರಿಕೆ:—ಈ ವರೆವಿಗೂ ದಾಸಾರ್ಯರು ಹೇಳಿದ ಪ್ರಕರಣವನ್ನು ಮುಗಿಸುತ್ತಾ ಇದರ ಶ್ರವಣ ಪಠನೆಯು ಮಹಾ ಫಲವನ್ನು ಕೊಡುವುದೆಂದು ಹೇಳುತ್ತಾರೆ—

ಯುಕ್ತಿ ಮಾತುಗಳಲ್ಲ ಶ್ರುತಿಸ್ಮೃ  
ತ್ಯುಕ್ತಮಾತುಗಳಿವು ವಿಚಾರಿಸೆ  
ಮುಕ್ತಿಗಿವು ಸೋಪಾನವೆನಿಪವು ಪ್ರತಿಪ್ರತೀಪದವು ॥  
ಭಕ್ತಿಪೂರ್ವಕ ಪಠಿಸುವವರಿಗೆ  
ವ್ಯಕ್ತಿಕೊಡುವ ಸ್ವರೂಪಸುಖಪ್ರವಿ  
ವಿಕ್ತರನ ಮಾಡುವನು ಭವಭಯದಿಂದ ಬಹುರೂಪ ॥

ಪದ್ಯಾರ್ಥ:—ಇವು=ಈ ಮೇಲೆ ಹೇಳಿದ ವಿಷಯಗಳು, ಯುಕ್ತಿ ಮಾತುಗಳಲ್ಲ=ಬರೇ ನಮ್ಮ ಯುಕ್ತಿಗಳಿಂದ ಹೇಳಿದ ಮಾತುಗಳಲ್ಲ. ಶ್ರುತಿಸ್ಮೃತ್ಯುಕ್ತ ಮಾತುಗಳಿವು=ವೇದಗಳಲ್ಲೂ, ಪುರಾಣಗಳಲ್ಲೂ ಹೇಳಿರುವ ಮಾತುಗಳೇ ಇವು. ವಿಚಾರಿಸೆ=ವಿಚಾರಮಾಡಿ ನೋಡಿದರೆ, ಪ್ರತಿಪ್ರತೀ ಪದವು=ಈ ಗ್ರಂಥದಲ್ಲಿರುವ ಪ್ರತಿಯೊಂದು ಪದವು ಮುಕ್ತಿಗೆ ಸೋಪಾನವೆನಿಪುವು=ಮುಕ್ತಿಗೆ ಮೆಟ್ಲು ಎನಿಸುವುವು. ಬಹುರೂಪ =ಬಹುರೂಪಿಯಾದ ಶ್ರೀ ಹರಿಯು, ಭಕ್ತಿ ಪೂರ್ವಕ ಪಠಿಸುವವರಿಗೆ= ಈ ಗ್ರಂಥವನ್ನು ಭಕ್ತಿಪೂರ್ವಕವಾಗಿ ಪಠಿಸುವವರಿಗೆ, ಸ್ವರೂಪ ಸುಖ= ಮುಕ್ತಿಯಲ್ಲಿ ಸ್ವರೂಪ ಸುಖವನ್ನು, ವ್ಯಕ್ತಿ ಕೊಡುವ=ಅಭಿವ್ಯಕ್ತಿಮಾಡುವನು. ಇಹದಲ್ಲಿ, ಭವಭಯದಿಂದ=ಸಂಸಾರಭಯದಿಂದ, ಪ್ರವಿವಿಕ್ತ

ರನು ಮಾಡುವನು=ಪ್ರತ್ಯೇಕ ಮಾಡುವನು. (ಸಕಲವು ಪರಮಾತ್ಮನದು. ತನ್ನ ದೇಹ ಗೇಹಾದಿಗಳೆಲ್ಲವು ಪರಮಾತ್ಮನವು ಎಂಬ ಜ್ಞಾನವನ್ನು ಕೊಡುವನು.)

ತಾತ್ಪರ್ಯ:—ಈ ಸಂಧಿಯಲ್ಲಿ ಹೇಳಿರುವ ದತ್ತಸ್ವಾತಂತ್ರ್ಯ ವಿಷಯಗಳು, ವಿಷ್ಣುದೀಕ್ಷೆಯ ಸ್ವೀಕಾರ, ಇವುಗಳನ್ನು ಸಂಬಂಧಿಸಿದ ಕೆಲವು ತತ್ವಗಳೂ ಇವೆಲ್ಲವು ಬರೀ ನಮ್ಮ ಯುಕ್ತಿಗಳಿಂದ ಊಹಿಸಿ ಹೇಳಿದ ಮಾತುಗಳಲ್ಲ. ಶ್ರುತಿಗಳಲ್ಲೂ, ವಿಷ್ಣುರಹಸ್ಯ ಮೊದಲಾದ ಸ್ಮೃತಿಗಳಲ್ಲೂ, ಇರುವದನ್ನೇ ತೆಗೆದು ಹೇಳಿರುವ ವಾಕ್ಯಗಳಿವು. ಈ ಗ್ರಂಥವನ್ನು ಆಮೂಲಾಗ್ರವಾಗಿ ವಿಚಾರಮಾಡಿ ನೋಡಿದರೆ, ಅದರಲ್ಲಿರುವ ಪ್ರತಿಒಂದುಪದವು ಮುಕ್ತಿಸ್ಥಾನವೆಂಬ ವೈಕುಂಠಕ್ಕೆ ಹೋಗಲಿಕ್ಕೆ ಒಂದೊಂದು ಮೆಟ್ಲಾಗಿರುವುದು: ದೇಹೇಂದ್ರಿಯಾದಿಗಳಲ್ಲಿ ವ್ಯಾಪ್ತನಾಗಿ ಬಹುರೂಪದಿಂದ ವಾಸಮಾಡುತ್ತಿರುವ ಶ್ರೀಹರಿಯು ಈ ಗ್ರಂಥವನ್ನು ಶ್ರವಣ ಪಠನ ಮಾಡುವವರನ್ನು ಇಹದಲ್ಲಿ ಸಂಸಾರದಿಂದ ಬೇರ್ಪಡಿಸಿ ಅವರಿಗೆ ಮುಕ್ತಿಯಲ್ಲಿ ಸ್ವರೂಪಾನಂದವನ್ನು ಅಭಿವ್ಯಕ್ತಿಮಾಡಿಕೊಡುವನು. ॥ ೩೧ ॥

ಅವತಾರಿಕೆ :—ಈ ಗ್ರಂಥವು ಜ್ಞಾನಿಗಳಿಗೆ ಮಾತ್ರ ರುಚಿಸುವುದಲ್ಲದೆ, ಅಜ್ಞಾನಿಗಳಿಗೆ ರುಚಿಸಲಾರದೆಂದು ಹೇಳುತ್ತಾರೆ—

**ಶ್ರೀನಿವಾಸನ ಸುಗುಣಮಣಿಗಳ**
**ಪ್ರಾಣಮತವಯುನಾಖ್ಯ ಸೂತ್ರದಿ**
**ಪೋಣಿಸಿದ ಮಾಲಿಕೆಯು ವಾಙ್ಮನರೀಶಗರ್ಪಿಸಿದ ॥**
**ಜ್ಞಾನಿಗಳ ದೃಗ್ವಿಷಯ ವಹದ**
**ಜ್ಞಾನಿಗಳಿಗಸಹ್ಯ ತೋರ್ಪುದು**
**ವಾಣಿಕವ ಮರ್ಕಟನಕೈಯೊಳು ಕೊಟ್ಟತೆರದಂತೆ ॥**

ಪದ್ಯಾರ್ಥ :—ವಾಙ್ಮನರೀಶಗೆ=ವಾಕ್ಯಕ್ಕೂ, ಮನಸ್ಸಿಗೂ ಅಭಿಮಾನಿಗಳಾದ, ಉಮಾ ರುದ್ರರಿಗೆ=ಈಶ್ವರನಾದ ಪರಮಾತ್ಮನಿಗೆ, ಅರ್ಪಿಸಿದ=ಸಮರ್ಪಣೆ ಮಾಡಿದ, ಶ್ರೀನಿವಾಸನ=ಲಕ್ಷ್ಮೀದೇವಿಯರನ್ನು ತನ್ನ ವಕ್ಷಸ್ಥಳದಲ್ಲಿ ಇಟ್ಟುಕೊಂಡಿರುವ ಶ್ರೀ ಪರಮಾತ್ಮನ, ಸುಗುಣ=ಉತ್ತಮವಾದ ಗುಣಗಳೆಂಬ, ಮಣಿಗಳ=ಮಾಣಿಕ್ಯಗಳನ್ನು, ಪ್ರಾಣಮತ=

ವಾಯುದೇವರ ಮತದ (ಮಧ್ವ ಮತದ) ವಯುನಾಖ್ಯ=ಜ್ಞಾನವೆಂಬ ಸೂತ್ರದಿ=ಧಾರದಿಂದ, ಪೋಣಿಸಿದ, ಮಾಲಿಕೆಯು, ಜ್ಞಾನಿಗಳ, ದೃಗ್ವಿಷಯ=ದೃಷ್ಟಿಗೆ ಗೋಚರವು, ಅಹದು=ಆಗುವುದು. (ಇದು ಉತ್ತಮ ಗ್ರಂಥವೆಂದು ಗೋಚರಿಸುವುದು) ಮಾಣಿಕವ, ಮರ್ಕಟನ ಕೈಯೊಳು=ಕೋತಿಯ ಕೈಯೊಳಗೆ, ಕೊಟ್ಟ ತೆರನಂತೆ=ಕೊಟ್ಟರೆ ಕಚ್ಚಿನೋಡಿ ರಸವಿಲ್ಲವೆಂದು ಹೇಗೆ ಬಿಸಾಡುವುದೋ ಹಾಗೆ, ಅಜ್ಞಾನಿಗಳಿಗೆ, ಅಸಹ್ಯತೋರ್ಪುದು=ನಿಸ್ಸಾರವಾಗಿ ಕಾಣುವುದು.

ತಾತ್ಪರ್ಯ :—ಶ್ರೀಮನ್ಮಧ್ವಮತದ ಜ್ಞಾನವೆಂಬ ಸೂತ್ರದಲ್ಲಿ, ಪರಮಾತ್ಮನ ಉತ್ಕೃಷ್ಟವಾದ ಗುಣಗಳೆಂಬ ಮಣಿಗಳನ್ನು ಪೋಣಿಸಿ ಮಾಲೆಯನ್ನು ರಚಿಸಿ, ಈ ಮಾಲೆಯನ್ನು ವಾಕ್ಯಕ್ಕು ಮನಸ್ಸಿಗೂ ಅಧಿಪತಿಗಳಾದ ಉಮಾ ರುದ್ರರಿಗೆ ಈಶ್ವರನಾದ ಶ್ರೀ ಪರಮಾತ್ಮನಿಗೆ ಅರ್ಪಿಸಿರುವೆನು. ಅಂದರೆ, ಶೃತಿ ಸ್ಮೃತಿಗಳಲ್ಲಿರುವ ರಹಸ್ಯಾರ್ಥಗಳು ಜನರಿಗೆ ಗೊತ್ತಾಗದೆ, ಗ್ರಂಥಗಳಲ್ಲಿ ಪರಸ್ಪರ ವಿರುದ್ಧಾರ್ಥಗಳಿರುವುದರಿಂದ ಸಜ್ಜನರು ಸಂಶಯಗ್ರಸ್ತರಾಗಿರಲು, ಭಗವದಾಜ್ಞಾಪ್ರಕಾರ ವಾಯುದೇವರು ಮಧ್ವಾಚಾರ್ಯರೆಂಬ ಹೆಸರಿನಿಂದ ಅವತರಿಸಿ ಯಥಾರ್ಥ ಜ್ಞಾನವನ್ನು ಹೊರಪಡಿಸಿದರು. ಆದ್ದರಿಂದ ಶಾಸ್ತ್ರದಲ್ಲಿ ನಿಸ್ಸಂಶಯ ಜ್ಞಾನವಾಗಬೇಕಾದರೆ, ಮಧ್ವ ಮತದಿಂದಲೇ ಆಗಬೇಕು. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ದಾಸಾರ್ಯರು ಹೀಗೆ ಹೇಳಿರುವರು. ಪರಮಾತ್ಮನ ಗುಣಗಳು ಶೃತಿ ಸ್ಮೃತಿಗಳಲ್ಲಿ ಮಣಿಗಳಂತೆ ಪ್ರತ್ಯೇಕಪ್ರತ್ಯೇಕವಾಗಿರುವವು ಅವುಗಳನ್ನು ಮಧ್ವಮತ ಸಿದ್ಧಾಂತವೆಂಬ ಧಾರದೊಳಗೆ ಪೋಣಿಸಿ ಇರುವೆನು. ಅಂದರೆ ಮಧ್ವಾಚಾರ್ಯರ ಶಾಸ್ತ್ರಗಳನ್ನನುಸರಿಸಿ ಭಗವಂತನ ಗುಣಗಳನ್ನು ವರ್ಣಿಸಿ ಇರುವೆನು ಎಂಬ ಭಾವ. ಇಂತಹ ಮಾಲೆಯ ಮಹಿಮೆಯನ್ನು ತಿಳಿಯಬೇಕಾದರೆ ಜ್ಞಾನಿಗಳಿಗೆ ಮಾತ್ರ ಸಾಧ್ಯವೇ ಹೊರತು ಅಜ್ಞಾನಿಗಳಿಗೆ ಆಗಲಾರದು, ಹೇಗೆಂದರೆ, ಕೋತಿಯ ಕೈಯಲ್ಲಿ ಮಾಣಿಕ್ಯವನ್ನು ಕೊಟ್ಟರೆ ಅದರ ಯೋಗ್ಯತೆಯು ಕೋತಿಗೆ ಗೊತ್ತೆ? ಆ ಮಾಣಿಕ್ಯವನ್ನು ಕಚ್ಚಿನೋಡಿ ಅದರಲ್ಲಿ ಯಾವ ವಿಧವಾದ ರಸವನ್ನೂ ಕಾಣದೆ ಬಿಸಾಡುವುದು. ಅದರಂತೆ ಅಜ್ಞಾನಿಗಳಿಗೆ ಇದರಲ್ಲಿರುವ ಭಗವನ್ಮಹಿಮೆಯು ಹೇಗೆ ಗೊತ್ತಾದೀತು? ಇದರಲ್ಲೇನು ಸ್ತ್ರೀ ವರ್ಣನೆಯೆ? ಶೃಂಗಾರರಸವೆ? ಅಥವಾ ಇದೇ

ನಾದರೂ ಕಿವಿಗೆ ಇಂಪಾದ ಕಾದಂಬರಿಯೆ? ಅಜ್ಞಾನಿಗಳಿಗೆ (ದುರ್ಜನರಿಗೆ) ಬೇಕಾದ ವಿಷಯಗಳು ಇದರಲ್ಲಾವುದೂ ಇಲ್ಲವಾದುದರಿಂದ ಇದನ್ನು ತಿರಸ್ಕಾರ ಮಾಡುವರೆಂಬ ತಾತ್ಪರ್ಯ ॥ ೩೨ ॥

ಅವತಾರಿಕೆ :—ಶ್ರೀ ಪರಮಾತ್ಮನು ತನ್ನ ಭಕ್ತರನ್ನು ಸರ್ವಪ್ರಕಾರದಿಂದಲೂ ರಕ್ಷಿಸುವನೆಂದು ಹೇಳುತ್ತಾರೆ—

ಶ್ರೀವಿಧೀರವಿಪಾಹಿಪೇಶ ಶ
ಚೀವರಾತ್ಮಭವಾರ್ಕ ಶಶಿ ದಿ
ಗ್ದೇವರ್ಷಿ ಗಂಧರ್ವ ಕಿನ್ನರ ಸಿದ್ಧಸಾಧ್ಯಗಣ ॥
ಸೇವಿತಪದಾಂಭೋಜ ತತ್ಪಾ
ದಾವಲಂಬಿಗಳಾದ ಭಕ್ತರ
ಕಾವಕರುಣಾಸಾಂದ್ರ ಲಕ್ಷ್ಮೀಹೃತ್ಕುಮುದ ಚಂದ್ರ

ಪದ್ಯಾರ್ಥ :—ಶ್ರೀ=ಲಕ್ಷ್ಮೀದೇವಿಯರು, ವಿಧಿ=ಬ್ರಹ್ಮದೇವರು, ಈರ=ವಾಯುದೇವರು, ವಿಪ=ಪಕ್ಷಿಶ್ರೇಷ್ಠನಾದ ಗರುಡ, ಅಹಿಪ=ಸರ್ಪಶ್ರೇಷ್ಠನಾದ ಶೇಷದೇವರು, ಈಶ=ರುದ್ರದೇವರು, ಶಚೀವರ=ಶಚೀಪತಿಯಾದ ಇಂದ್ರದೇವರು, ಆತ್ಮಭವ=ಪರಮಾತ್ಮನ ಮನಸ್ಸಿನಿಂದ ಜನಿಸಿದ ಮನ್ಮಥ, ಅರ್ಕ=ಸೂರ್ಯ, ಶಶಿ=ಚಂದ್ರ, ದಿಗ್ದೇವ=ದಿಗ್ದೇವತೆಗಳು, ಋಷಿ=ಋಷಿಗಳು, ಗಂಧರ್ವ, ಕಿನ್ನರ, ಸಿದ್ಧ, ಸಾಧ್ಯಗಣ ಇವರುಗಳಿಂದ, ಸೇವಿತ ಪದಾಂಭೋಜ=ಸೇವಿತವಾದ ಪಾದಕಮಲಗಳುಳ್ಳ, ಕರುಣಾಸಾಂದ್ರ=ಕರುಣಾಪೂರ್ಣನಾದ, ಲಕ್ಷ್ಮೀ ಹೃತ್ಕುಮುದಚಂದ್ರ=ಲಕ್ಷ್ಮೀ=ಲಕ್ಷ್ಮೀದೇವಿಯರ, ಹೃತ್=ಮನಸ್ಸೆಂಬ, ಕುಮುದ=ಕುಮುದ ಪುಷ್ಪಕ್ಕೆ, ಚಂದ್ರ=ಚಂದ್ರನಂತಿರುವ, ಶ್ರೀ ನಾರಾಯಣನು, ತತ್ಪಾದಾವಲಂಬಿಗಳಾದ=ಮೇಲೆ ಹೇಳಿದ ಲಕ್ಷ್ಮೀ ಬ್ರಹ್ಮ ವಾಯು ಮೊದಲಾದ ದೇವತೆಗಳ ಪಾದಗಳನ್ನು. ತಾರತಮ್ಯಪ್ರಕಾರ ಆಶ್ರಯಿಸಿರುವವರು ಯಾರೋ ಅಂತಹ ತನ್ನ ಭಕ್ತರನ್ನು, ಕಾವ=ರಕ್ಷಿಸುವನು.

ತಾತ್ಪರ್ಯ :—ಲಕ್ಷ್ಮೀ, ಬ್ರಹ್ಮ, ವಾಯು, ಗರುಡ, ಶೇಷ, ರುದ್ರ, ಇಂದ್ರ, ಕಾಮ, ಸೂರ್ಯ, ಚಂದ್ರ, ದಿಗ್ದೇವತೆಗಳು, ಋಷಿಗಳು, ಗಂಧರ್ವರು, ಕಿನ್ನರರು, ಸಿದ್ಧರು, ಸಾಧ್ಯರು ಮೊದಲಾದವರಿಂದ ಸೇವಿತವಾದ

ಪಾದಕಮಲಗಳುಳ್ಳ ಶ್ರೀ ಪರಮಾತ್ಮನು ತಾರತಮ್ಯಪ್ರಕಾರ ಮೇಲೆ ಹೇಳಿದ ದೇವತೆಗಳನ್ನು ಸ್ಮರಿಸುತ್ತಾ ತನಲ್ಲಿ ಭಕ್ತಿ ಮಾಡುವವರಾರೋ ಅವರನ್ನು ಸಂರಕ್ಷಿಸುವನು. ದೇವತೆಗಳನ್ನು ಉಪೇಕ್ಷೆ ಮಾಡುವವರನ್ನು ಪರಮಾತ್ಮನು ತನ್ನ ಭಕ್ತರನ್ನಾಗಿ ಮಾಡುವುದಿಲ್ಲ. ಈ ವಿಷಯ ದಲ್ಲಿ ಭಾಗವತ ಏಕಾದಶಸ್ಕಂಧ ೨ನೆಯ ಅಧ್ಯಾಯದ ತಾತ್ಪರ್ಯದಲ್ಲಿ "ಅರ್ಚಾಯಾಮೇವ ಸಂಸ್ಥಿತಂ || ವಿಷ್ಣುಂಜ್ಞಾತ್ವಾ ತದನ್ಯತ್ರ ನೈವ ಜಾನಾತಿ ಯಃ ಪುಮಾನ್ || ತಾರತಮ್ಯಂಚ ತದ್ಭಕ್ತೇರ್ನಜಾನಾತಿಕಥಂ ಚನ|| ಅವಜಾನಂಶ್ಚ ತದ್ಭಕ್ತಾನಾತ್ಮನೋ ಭಕ್ತಿದರ್ಪತಃ|| ಉಪೇಕ್ಷಕೋಪಿ ವಾತೇಷು ನಸ್ಮರೇದಥವಾಪಿತಾನ್ || ತೇತು ಭಕ್ತಾಧಮಾಃ ಪ್ರೋಕ್ತಾಃ ಸ್ವರ್ಗಾದಿಫಲ ಭೋಗಿನಃ ತೈರ್ವಿಘ್ನಿತಾ ಅಧೋಯಾಂತಿ ತದ್ಭಕ್ತಾನಾ ಮುಪೇಕ್ಷಕಾಃ || ಕುರ್ಯು ರ್ವಿಷ್ಣಾವಪಿ ದ್ವೇಷಂ ದೇವ ದೇವಾವಮಾನಿ ನಃ || ಪೂಜಿತಾ ವಿಷ್ಣು ಭಕ್ತಿಂಚ ನಾವಜ್ಞೇಯಾಸ್ತತಃ ಸುರಾಃ || ಉಪೇ ಕ್ಷಕಸ್ತು ದೇವಾನಾಂ ಭಕ್ತಿನಾಶಂ ಸ್ವಯಂಹರಿಃ || ಕರೋತಿ ತೇನ ವಿಭ್ರಷ್ಟಾಃ ಸಂಸರಂತಿ ಪುನಃ ಪುನಃ || ಆಧೋವಾಯಾಂತಿ ವಿದ್ವೇಷಾತ್ ಪೂಜ್ಯಾ ದೇವಾಸ್ತತಃ ಸದಾ || ಯಸ್ತಾನ್ ದ್ವೇಷ್ಟಿಸತಂ ದ್ವೇಷ್ಟಿ ಯಸ್ತಾ ನನು ಸಚಾನುತಂ|| ಐಕಾತ್ಮ್ಯಮಾಗತಂ ವಿದ್ಧಿ ದೇವೈಸ್ತದ್ಭಕ್ತಿ ಪೂರಿತೈಃ|| ಉಪೇಕ್ಷಕಸ್ತು ದೇವಾನಾಂ ಯದ್ಯೈವ ನಿರಯೋಪಗಃ || ತದಾತು ಕಿಮು ವಕ್ತವ್ಯ ಮುಪೇಕ್ಷಾಯಾಂ ಜನಾರ್ದನೇ || ವಿಷ್ಣೋರುಪೇಕ್ಷಕಂ ಸ ರ್ವೇವಿದ್ವಿಷಂತ್ಯಧಿಕಂ ಸುರಾಃ || ಪತತ್ಯವಶ್ಯಂ ತಮಪಿ ಹರಿಣಾ ತ್ರೈಷ್ಟ ಪಾತಿತಃ || ಇತ್ಯಾದಿ" ಅಧಮ ಭಕ್ತರ ಲಕ್ಷಣವನ್ನು ಹೇಳುತ್ತಾರೆ:--ಪರ ಮಾತ್ಮನು ಸರ್ವತ್ರ ವ್ಯಾಪ್ತನಾಗಿರುವುದನ್ನು ತಿಳಿಯದೆ ಯಾವ ಪುರು ಷನು ಪ್ರತಿಮೆಗಳಲ್ಲಿ ಮಾತ್ರವೇ ಪರಮಾತ್ಮನಿರುವನೆಂದು ತಿಳಿದು ಪೂಜಿಸು ತ್ತಿರುವನೋ; ಮತ್ತು ಭಕ್ತರಾದ ದೇವತೆಗಳಲ್ಲಿ ತಾರತಮ್ಯವನ್ನು ಯಾವನು ತಿಳಿಯುವದಿಲ್ಲವೋ, ತಾನು ಭಕ್ತನೆಂಬ ಅಹಂಕಾರದಿಂದ ಉತ್ತಮರಾದ ದೇವತೆಗಳನ್ನು ಯಾವ ಪುರುಷನು ಅವಮಾನ ಮಾಡು ವನೋ, ಅಥವಾ ಅವರನ್ನು ಸ್ಮರಣೆಮಾಡದೆ ಯಾವನು ಉಪೇಕ್ಷೆ ಮಾಡು ವನೋ ಇಂತಹವನು ಅಧಮ ಭಕ್ತನೆನಿಸುವನು. ಇವನಿಗೆ ಸ್ವರ್ಗಾದಿ ಗಳು ಮಾತ್ರ ಲಭ್ಯವಾಗುವುವು. ದೇವತೆಗಳನ್ನು ಉಪೇಕ್ಷೆ ಮಾಡುವ

ವರು, ಸತ್ಕಾರ್ಯವನ್ನು ಮಾಡುವಾಗ ದೇವತೆಗಳಿಂದ ವಿಘ್ನಮಾಡಿಸಿಕೊಳ್ಳಲ್ಪಟ್ಟು ನರಕಾದಿಗಳನ್ನು ಹೊಂದುವರು. ದೇವತೆಗಳನ್ನು ಅವಮಾನಮಾಡುವವರು ಒಂದು ಸಮಯದಲ್ಲಿ ಪರಮಾತ್ಮನಲ್ಲೂ ದ್ವೇಷಮಾಡುವರು. ದೇವತೆಗಳನ್ನು ಪೂಜಿಸಿದರೆ ಅವರು ವಿಷ್ಣುಭಕ್ತಿಯನ್ನು ಕೊಡಿಸುವರು. ಆದ್ದರಿಂದ ದೇವತೆಗಳನ್ನು ಎಂದಿಗೂ ಅವಮಾನಮಾಡಬಾರದು. ದೇವತೆಗಳನ್ನು ಯಾರು ಉಪೇಕ್ಷೆಮಾಡುವರೋ, ಅವರು ಭಗವದ್ಭಕ್ತರಾದರೂ ಅವರ ಭಕ್ತಿಯನ್ನು ಪರಮಾತ್ಮನೇ ನಾಶಮಾಡುವನು. ಅದರಿಂದ ಪುನಃ ಪುನಃ ಅವರು ಸಂಸಾರದಲ್ಲಿ ತಿರುಗಾಡುತ್ತಿರುವರು. ಅಥವಾ ಅದಕ್ಕಿಂತಲೂ ಅಧೋಗತಿಯನ್ನು ಹೊಂದುವರು ಆದ್ದರಿಂದ ದೇವತೆಗಳನ್ನು ಸರ್ವದಾ ಪೂಜಿಸಬೇಕು. ಯಾರು ದೇವತೆಗಳನ್ನು ದ್ವೇಷಿಸುವರೋ ಅವರು ಪರಮಾತ್ಮನನ್ನೂ ದ್ವೇಷಿಸುವರು. ಯಾರು ದೇವತೆಗಳಲ್ಲಿ ಭಕ್ತಿ ಮಾಡುವರೋ ಅವರು ಪರಮಾತ್ಮನಲ್ಲೂ ಭಕ್ತಿಮಾಡುವರು. ಭಕ್ತಿಯನ್ನಾಗಲಿ ದ್ವೇಷವನ್ನಾಗಲಿ ಮಾಡುವ ವಿಷಯದಲ್ಲಿ ಭಕ್ತರನ್ನೂ ಪರಮಾತ್ಮನನ್ನೂ ಏಕರೀತಿಯಾಗಿ ಭಾವಿಸಬೇಕು. ದೇವತೆಗಳನ್ನು ಉಪೇಕ್ಷಿಸಿದ ರೇನೆ ನರಕ ಪ್ರಾಪ್ತಿಯೆಂದ ಮೇಲೆ, ಪರಮಾತ್ಮನನ್ನೇ ಉಪೇಕ್ಷೆಮಾಡಿದರೆ ಅಧೋಗತಿಯೆಂದು ಹೇಳುವದೇನು. ದೇವತಾವಮಾನದಿಂದ, ದೇವತೆಗಳೂ, ಅವರಂತರ್ಯಾಮಿ ಪರಮಾತ್ಮನೂ ಸಹ ಇವರನ್ನು ತಮಸ್ಸಿನಲ್ಲಿ ಹಾಕುವರು. ಎಂಬಿವೆ ಮೊದಲಾದ ವಿಷಯಗಳನ್ನು ಹೇಳಿರುವರು ಆದ್ದರಿಂದ ದಾಸಾರ್ಯರು, ಬ್ರಹ್ಮಾದಿ ದೇವತೆಗಳಿಂದ ಪೂಜಿತವಾದ ಪಾದಕಮಲವುಳ್ಳ ಶ್ರೀ ಹರಿಯು "ತತ್ಪಾದಾವಲಂಬಿಗಳಾದ ಭಕ್ತರ," ಆ ದೇವತೆಗಳ ಪಾದಸೇವೆಯಲ್ಲಿ ನಿರತರಾದ ಭಕ್ತರನ್ನು ಕಾವನೆಂದು ಹೇಳಿರುವರು. ತಾರತಮ್ಯಪ್ರಕಾರ ದೇವತೆಗಳನ್ನು ನಿತ್ಯದಲ್ಲೂ ಸ್ಮರಿಸುತ್ತಾ ಅವರಂತರ್ಯಾಮಿ ಪರಮಾತ್ಮನನ್ನು ಪೂಜಿಸಿದರೆ ಅಂತಹ ಭಕರನ್ನು ಪರಮಾತ್ಮನು ಉದ್ಧಾರಮಾಡುವನೆಂಬ ತಾತ್ಪರ್ಯ. ॥ ೩೩ ॥

**ಆದರ್ಶವಗತಾಕ್ಷ ಭಾಷಾ**<br>
**ಭೇದದಿಂದಲಿ ಕರೆಯಲದನು ನಿ**<br>
**ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ॥**<br>
**ಮಾಧವನಗುಣಪೇಳ್ವ ಪ್ರಾಕೃತ**

ವಾದರೆಯುಸರಿ ಕೇಳಿ ಪರಮಾ
ಹ್ಲಾದ ಬಡದಿಪ್ಪರೆ ನಿರಂತರ ಬಲ್ಲ ಕವಿಜನರು ||

ಪದ್ಯಾರ್ಥ :—ಆದರ್ಶವ=ಕನ್ನಡಿಯನ್ನು, ಗತಾಕ್ಷ=ಗತ=ಹೋದ, ಅಕ್ಷ=ಸಂಸ್ಕೃತ ದೃಷ್ಟಿಯುಳ್ಳ ಅಂದರೆ, ಸಂಸ್ಕೃತ ಜ್ಞಾನವಿಲ್ಲದ ಪುರುಷನು, ಭಾಷಾಭೇದದಿಂದಲಿ=ಸಂಸ್ಕೃತವಲ್ಲದ ಇತರ ಭಾಷೆಯಿಂದ, ಅದನು=ಆ ಕನ್ನಡಿಯನ್ನು, ಕರೆಯಲು, ನಿಷೇಧಗೈದು=ನಿಷೇಧ ಮಾಡಿ, ಅವಲೋಕಿಸದೆ=ನೋಡಿಕೊಳ್ಳದೆ, ವಿವೇಕಿಗಳು, ಬಿಡುವರೆ ! ಅಥವಾ, ಗತಾಕ್ಷ=ಸಂಸ್ಕೃತವನ್ನು ತಿಳಿದು ಅದರಲ್ಲಿ ಅಭಿಮಾನ ಉಳ್ಳ ಒಬ್ಬ ಕುರುಡನು, ಭಾಷಾಭೇದದಿಂದ=ಕನ್ನಡ ಭಾಷೆಯಿಂದ, ನಿಷೇಧಗೈದು ಕರೆಯಲು, ಆದರ್ಶವೆಂದು ಸಂಸ್ಕೃತದಲ್ಲಿ ಹೇಳದೆ ಈ ಪುರುಷನು ಕನ್ನಡಿಯೆಂದು ಪ್ರಾಕೃತದಲ್ಲಿ ಹೇಳಿಬಿಟ್ಟನು ; ಆದ್ದರಿಂದ ಕನ್ನಡಿಯು ನಿಷಿದ್ಧವಾಯಿತೆಂದು ದೂಷಿಸಲು, ಅದನು=ಆ ಕನ್ನಡಿಯನ್ನು, ಅವಲೋಕಿಸದೆ=ನೋಡಿಕೊಳ್ಳದೆ, ವಿವೇಕಿಗಳು, ಬಿಡುವರೆ ! ಅದರಂತೆ, ಮಾಧವನ=ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ, ಗುಣ=ಗುಣಗಳನ್ನು, ಪೇಳ್ವ=ವರ್ಣಿಸುವ ಗ್ರಂಥವು, ಪ್ರಾಕೃತವಾದರೆಯು ಸರಿ, ಬಲ್ಲ ಕವಿಜನರು=ಈ ಗ್ರಂಥದ ಯೋಗ್ಯತೆಯನ್ನು ತಿಳಿದ ಜ್ಞಾನಿಗಳು, ನಿರಂತರ=ನಿತ್ಯದಲ್ಲೂ, ಕೇಳಿ, ಆಹ್ಲಾದಬಡದಿಪ್ಪರೆ=ಸಂತೋಷಪಡದೆ ಇರುವರೆ !

ತಾತ್ಪರ್ಯ :—ಸಂಸ್ಕೃತದಲ್ಲಿ ಕನ್ನಡಿಗೆ ಆದರ್ಶವೆಂದು ಹೇಳುವರು. ಸಂಸ್ಕೃತದಲ್ಲಿ ಪಂಡಿತನಾದ ಮತ್ತು ಸಂಸ್ಕೃತದಲ್ಲಿ ಅಭಿಮಾನ ಉಳ್ಳ ಒಬ್ಬ ಕುರುಡನು, ತನಗೆ ಕನ್ನಡಿಯ ಉಪಯೋಗವು ಇಲ್ಲದ್ದರಿಂದ ಈ ಆದರ್ಶವನ್ನು ಪ್ರಾಕೃತದಿಂದ ಕನ್ನಡಿಯೆಂದು ಮತ್ತೊಬ್ಬನು ಹೇಳಿಬಿಟ್ಟನು; ಇದು ನಿಷಿದ್ಧವಾಯಿತು. ಇದನ್ನು ನೋಡಿಕೊಳ್ಳಬಾರದೆಂದು ದೂಷಿಸಿದರೆ, ವಿವೇಕಿಗಳು, ಈ ಕುರುಡನು ಕನ್ನಡಿಯನ್ನು ನಿಷೇದ ಮಾಡಿರುವನು, ಆದ್ದರಿಂದ ನಾವು ನೋಡಿಕೊಳ್ಳಬಾರದೆಂದು ಕನ್ನಡಿಯನ್ನು ನೋಡಿಕೊಳ್ಳದೆ ಬಿಡುವರೆ ! ಎಂದಿಗೂ ಬಿಡಲಾರರು ಇದರಂತೆ ಈ ಪ್ರಾಕೃತ ಗ್ರಂಥದ ಯೋಗ್ಯತೆಯು ಗೊತ್ತಿಲ್ಲದ ಯಾವನೋ ಒಬ್ಬ ಸಂಸ್ಕೃತ ಪಂಡಿತನು ಇದು ಪ್ರಾಕೃತವೆಂದು ದೂಷಿಸಿದರೂ, ಇದರ ಯೋಗ್ಯ

ತೆಯನ್ನು ತಿಳಿದ ಜ್ಞಾನಿಗಳು, ಇದರಲ್ಲಿರುವ ಭಗವನ್ಮಹಿಮೆಯನ್ನು ಕೇಳಿ ಆನಂದ ಪಡದೆ ಇರುವರೆ ! ಪ್ರಾಕೃತ ಭಾಷೆಯೇ ನಿಷೇಧವೆಂದು ಹಿಂದಿನ ಜ್ಞಾನಿಗಳು ಯಾರೂ ಹೇಳಲಿಲ್ಲ. ಭಾಗವತ ಏಕಾದಶಸ್ಕಂಧ ೨೭ ನೇ ಅಧ್ಯಾಯದಲ್ಲಿ " ಸ್ತವೈರುಚ್ಚಾವಚೈಃ ಶ್ರೌತ್ರೈಃ ಪುರಾಣೈಃ ಪ್ರಾಕೃತೈರಪಿ " ಉತ್ತಮವಾದ ಶ್ರುತಿಗಳು, ಪುರಾಣಗಳು ಇವುಗಳಲ್ಲಿ ಹೇಳಿರುವ ಅಂದರೆ ಪುರುಷಸೂಕ್ತ ಮೊದಲಾದವುಗಳಿಂದಲೂ, ಜಿತಂತೇಸ್ತೋತ್ರ ಮೊದಲಾದ ಪುರಾಣವಾಕ್ಯಗಳಿಂದಲೂ ಮತ್ತು ಪ್ರಾಕೃತ ಭಾಷೆಯಿಂದ ರಚಿತವಾದ ಸ್ತೋತ್ರಗಳಿಂದಲೂ, ಅಥವಾ ಪ್ರಾಕೃತ ಭಾಷೆಯಿಂದ ತನ್ನ ಇಚ್ಛಾನುಸಾರವಾಗಿ ಪರಮಾತ್ಮನನ್ನು ಸ್ತೋತ್ರ ಮಾಡಬೇಕೆಂದು ಹೇಳಿರುವರು. ಆದ್ದರಿಂದ ಭಗವದ್ಗುಣಗಳಿಂದ ಕೂಡಿದ ಗ್ರಂಥವು ಪ್ರಾಕೃತವಾದರೂ ಅದು ನಿಷೇಧವಾಗದು ಸಂಸ್ಕೃತವಾದರೂ ಭಗವನ್ಮಹಿಮೆಯನ್ನು ಹೇಳದಿರುವ ಯಾವ ಗ್ರಂಥವೂ ಮಾನ್ಯವಲ್ಲವೆಂದು ತಾತ್ಪರ್ಯ. ||೩೪||

ಅವತಾರಿಕೆ :– ಅದೇ ವಿಷಯವನ್ನೇ ವಿವರಿಸುತ್ತಾರೆ—

ಭಾಸ್ಕರನ ಮಂಡಲವ ಕಂಡು ನ
ಮಸ್ಕರಿಸಿ ಮೋದಿಸದೆ ದ್ವೇಷದಿ
ತಸ್ಕರನು ನಿಂದಿಸಲು ಕುಂದಹುದೆ ದಿವಾಕರಗೆ ||
ಸಂಸ್ಕೃತವಿದಲ್ಲೆಂದು ಕುಹಕ ತಿ
ರಸ್ಕರಿಸಲೇನಹುದು ಭಕ್ತಿ ಪು
ರಸ್ಕರದಿ ಕೇಳ್ವರಿಗೆ ವಲಿವನು ಪುಷ್ಕರಾಕ್ಷ ಸದಾ ||

ಪದ್ಯಾರ್ಥ :— ಭಾಸ್ಕರನ=ಸೂರ್ಯನ, ಮಂಡಲವ ಕಂಡು, ನಮಸ್ಕರಿಸಿ=ನಮಸ್ಕಾರಮಾಡಿ, ಮೋದಿಸದೆ=ಸಂತೋಷಪಡದೆ ದ್ವೇಷದಿ, ತಸ್ಕರನು=ಕಳ್ಳನು, ತಾನು ಕಳ್ಳತನ ಮಾಡುವುದಕ್ಕೆ ಪ್ರತಿಬಂಧಕವಾಯಿತೆಂಬ ದ್ವೇಷದಿಂದ, ನಿಂದಿಸಲು, ದಿವಾಕರಗೆ=ಸೂರ್ಯನಿಗೆ, ಕುಂದಹುದೆ =ದೋಷ ಬರುವುದೇ ! ಇದರಂತೆ, ಕುಹಕ=ಕಪಟಿಯು, ಇದು=ಈ ಗ್ರಂಥವು, ಸಂಸ್ಕೃತವಲ್ಲೆಂದು,ತಿರಸ್ಕರಿಸಲು, ಏನಹುದು=ಈ ಗ್ರಂಥಕ್ಕೆ ದೋಷವೇನು ? ಭಕ್ತಿಪುರಸ್ಕರದಿ, ಕೇಳ್ವರಿಗೆ, ಪುಷ್ಕರಾಕ್ಷ=ಕಮಲನೇತ್ರ

ನಾದ ಶ್ರೀ ಹರಿಯು, ಸದಾ=ಸರ್ವಕಾಲದಲ್ಲೂ, ಒಲಿವನು=ಪ್ರಸನ್ನನಾಗುವನು.

ತಾತ್ಪರ್ಯ:—ಕಳ್ಳನು ತಾನು ಮಾಡುವ ಕಳ್ಳತನಕ್ಕೆ ಸೂರ್ಯನು ವಿಘ್ನನೆಂದು ಭಾವಿಸಿ ಸೂರ್ಯನಿಗೆ ನಮಸ್ಕಾರವನ್ನೂ ಪೂಜೆಯನ್ನೂ ಮಾಡದಿದ್ದರೆ ಸೂರ್ಯನಿಗೆ ದೋಷವೇನು! ಇದರಂತೆ ಕಪಟಿಗಳಾದ ಕೆಲವರು ಅಸೂಯೆಯಿಂದ ಈ ಗ್ರಂಥವು ಸಂಸ್ಕೃತವಲ್ಲವೆಂದು ದೂಷಿಸಿದರೆ, ಗ್ರಂಥಕ್ಕೆ ಲೋಪವೇನು? ಶ್ರೀ ಪರಮಾತ್ಮನು, ಭಕ್ತಿಯಿಂದ ಈ ಗ್ರಂಥವನ್ನು ಶ್ರವಣ ಪಠನ ಮಾಡುವವರಿಗೆ ಪ್ರಸನ್ನನಾಗಿ ಅವರನ್ನುದ್ಧರಿಸುವನು ||೩೫||

ಪತಿತನಕಪಾಲದೊಳು ಭಾಗೀ
ರಥಿಯ ಜಲವಿರೆ ಪೇಯವೆನಿಪುದೆ
ಇತರ ಕವಿ ನಿರ್ಮಿತ ಕುಕಾವ್ಯಾಶ್ರಾವ್ಯ ಬುಧರಿಂದ ||
ಕೃತಿಪತಿ ಕಥಾನ್ವಿತವೆನಿಪ ಪ್ರಾ
ಕೃತವೆ ತಾ ಸಂಸ್ಕೃತವೆನಿಸಿ ಸ
ದ್ಗತಿಯನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ ||

ಪದ್ಯಾರ್ಥ:—ಪತಿತನ=ಭ್ರಷ್ಟನಾಗಿದ್ದು ಮೃತನಾದವನ,ಕಪಾಲದೋಳ್=ಕಪಾಲದ ಕರಟದೊಳಗೆ, ಭಾಗೀರಥಿಯ=ಗಂಗೆಯ,ಜಲವಿರೆ=ನೀರಿರಲು, ಪೇಯವೆನಿಪುದೆ=ಕುಡಿಯಲು ಯೋಗ್ಯವಾಗುವುದೆ! ಇಲ್ಲ. ಅದರಂತೆ ಇತರ ಕವಿನಿರ್ಮಿತ=ಇತರರಾದ ಸಂಸ್ಕೃತ ಕವಿಗಳಿಂದಲೇ ಆದರೂ, ನಿರ್ಮಿತ=ರಚಿಸಲ್ಪಟ್ಟ, ಕುಕಾವ್ಯ=ಕಾದಂಬರಿಗಳು, ಸಂಸ್ಕೃತವಾದರೂ, ಬುಧರಿಂದ=ಜ್ಞಾನಿಗಳಿಂದ, ಅಶ್ರಾವ್ಯ=ಕೇಳಲು ಯೋಗ್ಯವಲ್ಲ: ಕೃತಿಪತಿ=ಕೃತಿನಾಮಕರಾದ ಶ್ರೀ ಲಕ್ಷ್ಮೀದೇವಿಯರ ಪತಿಯಾದ ಪ್ರದ್ಯುಮ್ನನಾಮಕ ಪರಮಾತ್ಮನ, ಕಥಾನ್ವಿತವೆನಿಪ=ಚರಿತ್ರೆಗಳಿಂದ ಕೂಡಿದ ಗ್ರಂಥವೆನಿಸುವ, ಪ್ರಾಕೃತವೆ=ಪ್ರಾಕೃತ ಕಾವ್ಯವೆ, ತಾ=ತಾನು ಸಂಸ್ಕೃತವೆನಿಸಿ, ಭಕ್ತಿಪೂರ್ವಕ, ಕೇಳಿ ಪೇಳ್ವರಿಗೆ, ಸದ್ಗತಿಯನೀವುದು=ಉತ್ತಮವಾದ ಗತಿಯನ್ನು ಕೊಡುವುದು.

ತಾತ್ಪರ್ಯ:—ಭಾಗೀರಥಿಯ ಉದಕವು ಸ್ನಾನಪಾನಾದಿಗಳಿಗೆ ಯೋಗ್ಯವಾದುದೇ ಆದರೂ ಆ ಉದಕವು ಪತಿತ ಚಂಡಾಲಾದಿಗಳ

ಕಪಾಲಾಸ್ಥಿಯಲ್ಲಿ ನಿಂತಿರಲು ಅದು ಪಾನಕ್ಕೆ ಯೋಗ್ಯವಾಗುವುದೆ? ಇಲ್ಲಿ ದಾಸಾರ್ಯರು ಸಾಧಾರಣವಾಗಿ ಕಪಾಲದೋಳ್ ಅಂದರೆ ಸಾಕಾಗಿತ್ತು. ಪತಿತನೆಂಬ ವಿಶೇಷಣವೇಕೆ ಹಾಕಿದರು? ಅಸ್ಥಿಗಳಲ್ಲಿ ಪತಿತನ ಅಸ್ಥಿಯೆಂತಲೂ, ಬ್ರಾಹ್ಮಣರ ಅಸ್ಥಿಯೆಂತಲೂ, ಭೇದ ಉಂಟೆ? ಎಂದು ಶಂಕಿಸಬಹುದು. ಅವುಗಳಲ್ಲೂ ಭೇದಗಳುಂಟು ಭಾಗವತ ಷಷ್ಠ ಸ್ಕಂಧದ ನಾರಾಯಣವರ್ಮ ಪ್ರಕರಣದಲ್ಲಿ, "ಇಮಾಂ ವಿದ್ಯಾಂ ಪುರಾ ಕಶ್ಚಿತ್ಕೌಶಿಕೋಧಾರಯರ್ದ್ವಿಜಃ || ಯೋಗಧಾರಣಯಾಸ್ವಾಂಗಂಜಹೌ ಸ ಮರುಧನ್ವನಿ || ತಸ್ಯೋಪರಿವಿಮಾನೇನ ಗಂಧರ್ವಪತಿರೇಕದಾ || ಯಯೌ ಚಿತ್ರರಥಃ ಸ್ತ್ರೀಭಿರ್ವೃತೋಯತ್ರ ದ್ವಿಜಕ್ಷಯಃ || ಸಾಂಗನೋನ್ಯಪತತ್ಸದ್ಯಃ ಸವಿಮಾನೋಹ್ಯವಾಕ್ಶಿರಾಃ|| ವಿದ್ಯಾಮಿಮಾಂಧಾರಯತೋ ವೃತಸ್ಯಾಸ್ಥಿ ವಿಲಂಘನಾತ್ || ಸವಾಲಖಿಲ್ಯ ವಚನಾದಸ್ಥೀನ್ಯಾದಾಯ ವಿಸ್ಮಿತಃ || ಪ್ರಾಸ್ಯ ಪ್ರಾಚೀ ಸರಸ್ವತ್ಯಾಂ ಸ್ನಾತ್ವಾಧಾಮಸ್ವಮನ್ವಗಾತ್" ಹಿಂದಕ್ಕೆ ಕೌಶಿಕನೆಂಬ ಒಬ್ಬ ಬ್ರಾಹ್ಮಣನು ನಾರಾಯಣ ವರ್ಮವನ್ನು ಜಪಿಸುತ್ತಿದ್ದು, ಯೋಗಾಭ್ಯಾಸದಿಂದ ನೀರಿಲ್ಲದ ಪ್ರದೇಶದಲ್ಲಿ ದೇಹವನ್ನು ಬಿಟ್ಟದ್ದನು. ಒಂದಾನೊಂದು ದಿವಸ ಚಿತ್ರರಥನೆಂಬ ಒಬ್ಬ ಗಂಧರ್ವ ರಾಜನು ಹೆಂಗಸರ ಗುಂಪುಗಳಿಂದ ಕೂಡಿ, ವಿಮಾನಾರೂಢನಾಗಿ, ಈ ಬ್ರಾಹ್ಮಣನು ವೃತನಾಗಿದ್ದ ಪ್ರದೇಶನ್ನು ದಾಟಿಕೊಂಡು ಹೋದನು. ಈ ನಾರಾಯಣವರ್ಮವೆಂಬ ಮಂತ್ರವನ್ನು ಜಪಿಸುತ್ತಿದ್ದ ವೃತನಾದಬ್ರಾಹ್ಮಣನ ಅಸ್ಥಿಯನ್ನು ಉಲ್ಲಂಘನ ಮಾಡಿಹೋದ ದೋಷದಿಂದ, ಹೆಣ್ಣು ಗುಂಪೊಂದಿಗೆ ವಿಮಾನದಿಂದೊಡಗೂಡಿ ತಲೆಕೆಳಕಾಗಿ ಬಿದ್ದುಬಿಟ್ಟನು. ತದನಂತರ ಆ ಪ್ರಾಂತದಲ್ಲಿ ವಾಸಮಾಡುತ್ತಿದ್ದ ವಾಲಖಿಲ್ಯ ಋಷಿಗಳಿಂದ ಈ ವಿಷಯಗಳನ್ನು ತಿಳಿದು ಆಶ್ಚರ್ಯಚಕಿತನಾಗಿ, ಅವರ ಅಪ್ಪಣೆಯ ಮೇರೆಗೆ ಆ ಅಸ್ಥಿಗಳನ್ನು ಪ್ರಾಚೀ ಸರಸ್ವತಿಯಲ್ಲಿ ಹಾಕಿ ಸ್ನಾನಮಾಡಿ ಬಂದಮೇಲೆ ವಿಮಾನವು ಪೂರ್ವದಂತೆ ಹೊರಟಿತು. ವಿಮಾನದಲ್ಲಿ ಕೂತುಕೊಂಡು ಮೊದಲಿನಂತೆ ತನ್ನ ಮನೆಗೆ ಹೋಗಿ ಸೇರಿದನು ಎಂದು ಹೇಳಿರುವರು. ಹೀಗೆ ಅಸ್ಥಿಗಳಿಗೂ ಕೂಡ ಮಹಿಮೆ ಇರುವದ್ದರಿಂದ ಪತಿತನ ಅಸ್ಥಿಯೆಂದು ದಾಸಾರ್ಯರು ಹೇಳಿದರು. ಈ ಪ್ರಕಾರ, ಭಾಗೀರಥಿಯು ಉತ್ತಮವಾದರೂ ಕಪಾಲದ ಅಸ್ಥಿಯಲ್ಲಿ ನಿಂತ ಪ್ರಯುಕ್ತ ಹೇಗೆ ನಿಷಿದ್ಧವೊ ಹಾಗೆ

ಸಂಸ್ಕೃತವಾದರೂ ಸ್ತ್ರೀವರ್ಣನಾದಿಗಳಿಂದ ಯುಕ್ತವಾದ ಕಾದಂಬರಿ ನಾಟಕಾದಿಗಳು ಜ್ಞಾನಿಗಳಿಂದ ಅಶ್ರಾವ್ಯವು. "ಗಂಗಾಸಂಗೇನ ನೈರ್ಮಲ್ಯಂ ರಥ್ಯಾದ್ಭಿರ್ಲಭ್ಯತೇ ಯಥಾ" ‖ ಎಂಬ ತತ್ವಪ್ರಕಾಶಿಕೆಯ ವಾಕ್ಯದಂತೆ ಬೀದಿಯಲ್ಲಿ ಹರಿಯುತ್ತಿರುವ ಮೊಹರಿಯ ನೀರು ಗಂಗೆಯೊಳಗೆ ಸೇರಲು ಹೇಗೆ ಶುದ್ಧವಾಗುವುದೋ ಹಾಗೆ ಗ್ರಂಥವು ಪ್ರಾಕೃತವಾದರೂ ಭಗವದ್ಗುಣಗಳಿಂದ ಕೂಡಿದರೆ ಗ್ರಾಹ್ಯವಾಗುವುದು. ಗಂಗೋದಕದಂತೆ ಸಂಸ್ಕೃತವಿದ್ದರೂ ಮಹತ್ತರವಾದ ದೋಷವುಳ್ಳ ಕಪಾಲದಲ್ಲಿ ನಿಂತರೆ ಅದು ನಿಷಿದ್ಧವಾಗುವಂತೇ ಸಂಸ್ಕೃತವೂ ನಿಷಿದ್ಧವಾಯಿತು. ಮೊಹರಿಯ ನೀರು ನಿಷಿದ್ಧವಾದರೂ ಗಂಗಾನದಿಯಲ್ಲಿ ಬೀಳುವುದರಿಂದ ಈ ಅಶುದ್ಧವಾದ ನೀರು ಸಹ ಶುದ್ಧವಾಗುವದು. ಇದರಂತೆ ಪ್ರಾಕೃತ ಭಾಷೆಯು ಮೊಹರಿಯ ನೀರಿನಂತೆ ಅಶುದ್ಧವಾದರೂ ಅದು ಮಹಾನದಿಯಂತಿರುವ ವಿಷ್ಣುವಿನ ಮಹಿಮೆಯನ್ನು ಹೇಳುವುದರಿಂದ ಸಂಸ್ಕೃತದಂತೆ ಶುದ್ಧವಾಯಿತೆಂಬ ತಾತ್ಪರ್ಯ. ಆದ್ದರಿಂದ ಈ ಗ್ರಂಥವನ್ನು ಶ್ರವಣ ಪಠನ ಮಾಡುವವರಿಗೆ ಉತ್ತಮ ಗತಿಯಾಗುವುದು ‖೩೬‖

ಅವತಾರಿಕೆ :—ಮೇಲಿನ ಪದ್ಯಗಳಲ್ಲಿ ಈ ಕಾವ್ಯವನ್ನು ಬಹಳ ಶ್ಲಾಘನೆ ಮಾಡಿ ಇದನ್ನು ದೂಷಿಸುವವರು ಕುಹಕರೆಂದು ಹೇಳಿದ್ದರಿಂದ ದಾಸಾರ್ಯರಿಗೆ ಪ್ರಾಪ್ತವಾದ ಅಹಂಕಾರ ಶಂಕೆಯನ್ನು ಪರಿಹರಿಸಿಕೊಳ್ಳುತ್ತಾ ಸ್ವಾಹಂಕಾರ ಖಂಡನ ಪೂರ್ವಕ ಸಂಧಿಯನ್ನು ಉಪಸಂಹಾರ ಮಾಡುತ್ತಾರೆ.

ವೇದಶಾಸ್ತ್ರ ಸಯುಕ್ತಿಗ್ರಂಥಗ
ಳೋದಿಕೇಳ್ದವನಲ್ಲ ಸಂತತ
ಸಾಧುಗಳ ಸಹವಾಸಸಲ್ಲಾಪಗಳು ಮೊದಲಿಲ್ಲ ‖
ಮೋದತೀರ್ಥಾರ್ಯರಮತಾನುಗ
ರಾದವರ ಕರುಣದಲಿ ಪೇಳ್ದಿರ
ಮಾಧವ ಜಗನ್ನಾಥ ವಿಠ್ಠಲ ತಿಳಿಸಿದದರೊಳಗೆ ‖ ೩೭

ಪದ್ಯಾರ್ಥ :—ವೇದಶಾಸ್ತ್ರ ಸಯುಕ್ತಿ ಗ್ರಂಥಗಳ= ವೇದಗಳು, ಶಾಸ್ತ್ರಪದದಿಂದ ಭಾರತಾದಿಗಳು, ಯುಕ್ತಿಶಾಸ್ತ್ರವೆಂದರೆ ತರ್ಕ ಮೊದಲಾ

ದವು ; ಇಂಥಹಾ ಗ್ರಂಥಗಳನ್ನು, ಓದಿಕೇಳ್ದವನಲ್ಲ= ಸ್ವತಂತ್ರದಿಂದ ನಾನೇ ಓದಿದವನೂ, ಕೇಳಿದವನೂ ಅಲ್ಲ. ನನ್ನೊಳಗ್ಗೆ ಪರಮಾತ್ಮನಿದ್ದು ಓದಿ ಕೇಳಿದವನಾದುದರಿಂದ ಅಂತರ್ಯಾಮಿ ಪರಮಾತ್ಮನೇ ವಿದ್ವಾಂಸನೆಂಬ ತಾತ್ಪರ್ಯ. ಸಂತತ= ಸರ್ವಕಾಲದಲ್ಲೂ ಸಾಧುಗಳ, ಸಹವಾಸ, ಸಲ್ಲಾಪಗಳು= ಸದ್ವಿಷಯವಾದ ಮಾತುಕಥೆಗಳು, ಇಂತಹವು ಮೊದಲಿಲ್ಲ. ಮೋದತೀರ್ಥಾರ್ಯರ= ಶ್ರೀಮದಾನಂದ ತೀರ್ಥಾರ್ಯರ, ಮತಾನುಗರಾದವರ= ಮತವನ್ನನುಸರಿಸಿ ಇರುವವರ, ಕರುಣದಲಿ= ಕೃಪೆಯಿಂದ, ರಮಾಧವ= ರಮಾಪತಿಯಾದ, ಜಗನ್ನಾಥ ವಿಠ್ಠಲ= ಜಗನ್ನಾಥ ವಿಠ್ಠಲಾತ್ಮಕ ಶ್ರೀಪರಮಾತ್ಮನು, ತಿಳಿಸಿದದರೊಳಗೆ ಎಷ್ಟರಮಟ್ಟಿಗೆ ತಿಳಿಸಿಕೊಟ್ಟಿರುವನೋ ಅಷ್ಟರೊಳಗೆ, ಅಂದರೆ ಪರಮಾತ್ಮನು ನನ್ನೊಳಗಿದ್ದು ನುಡಿಸಿದಷ್ಟು, ಪೇಳ್ದೆ= ಹೇಳಿರುವೆನು ೩೭

ತಾತ್ಪರ್ಯ :—ವೇದ ಮೊದಲಾದ ಶಾಸ್ತ್ರಗ್ರಂಥಗಳನ್ನಾಗಲಿ, ಯುಕ್ತಿಶಾಸ್ತ್ರಗಳನ್ನಾಗಲಿ (ತರ್ಕ ಮೊದಲಾದವು) ನಾನು ಓದಿದವನೂ ಕೇಳಿದವನೂ ಅಲ್ಲ. ಅಥವಾ ಅಂತಹ ಜ್ಞಾನಿಗಳ ಸಹವಾಸದಲ್ಲಿದ್ದು ಇಂತಹ ಸದ್ವಿಷಯಗಳ ಪ್ರಸ್ತಾಪಗಳು ನಡಿಸಿದವನೂ ಅಲ್ಲ. ಹಾಗಾದರೆ, ಈ ಕವಿತಾಶಕ್ತಿಯು ಬಂದ ಬಗೆ ಹೇಗೆ ಎಂದರೆ, ಶ್ರೀಮನ್ಮಧ್ವ ಮತಾವಲಂಬಿಗಳ ಕರುಣಾಬಲದಿಂದ, ಶ್ರೀಜಗನ್ನಾಥ ವಿಠ್ಠಲನು ನನ್ನೊಳಗಿದ್ದು ನುಡಿಸಿದಷ್ಟು ಹೇಳಿರುವೆನು ಹೀಗೆ ಹೇಳಿದ ಮಾತ್ರದಿಂದ ದಾಸಾರ್ಯರು ಜ್ಞಾನಿಗಳಲ್ಲವೆಂದಲ್ಲ. ಅವರ ಪಾಂಡಿತ್ಯವು ಅವರ ಜೀವನ ಚರಿತ್ರೆಯಿಂದಲೂ, ಅವರು ರಚಿಸಿದ ಗ್ರಂಥದಿಂದಲೂ ಗೊತ್ತಾಗುವುದು. ಆದರೆ ಈ ಪಾಂಡಿತ್ಯವು, ಅಂತರ್ಯಾಮಿಯಾದ ಪರಮಾತ್ಮನದೆಂಬ ಭಾವನೆಯಿಂದ ಸ್ವಾಹಂಕಾರ ಖಂಡನಕ್ಕೋಸ್ಕರ ಹೀಗೆ ಹೇಳಿರುವರೆಂದು ಭಾವಿಸಬೇಕು.

ಎಂಬಲ್ಲಿಗೆ ಹರಿಕಥಾಮೃತಸಾರದ ಭಾವಪ್ರಕಾಶಿಕೆಯಲ್ಲಿ ದತ್ತ ಸ್ವಾತಂತ್ರ್ಯವೆಂಬ ೧೬ ನೆಯ ಸಂಧಿಯು ಸಮಾಪ್ತಮಾದುದು.



# ಹರಿಕಥಾಮೃತಸಾರ

## ಸ್ವಗತ ಸ್ವಾತಂತ್ರ್ಯ ಸಂಧಿ (೧೬ನೆಯದು) ಪ್ರಾರಂಭ

ಸಂಧಿ ಸೂಚನೆ:—

**ಸ್ವಗತಸ್ವಾತಂತ್ರ್ಯಗುಣವ ಹರಿ**
**ತೆಗೆದುಬ್ರಹ್ಮಾದ್ಯರಿಗೆ ಕೊಟ್ಟುದ**
**ಭೃಗುಮುನಿಪ ಹೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ ||**

ಪದ್ಯಾರ್ಥ :—ಸ್ವಗತಸ್ವಾತಂತ್ರ್ಯಗುಣವ= ತನ್ನೊಳಗೆ ಇರುವ ಸ್ವಾತಂತ್ರ್ಯಗುಣವನ್ನು, ಹರಿ= ಶ್ರೀಹರಿಯು, ತೆಗೆದು, ಬ್ರಹ್ಮಾದ್ಯರಿಗೆ= ಬ್ರಹ್ಮದೇವರು ಮೊದಲಾದವರಿಗೆ. ಕೊಟ್ಟುದ= ಕೊಟ್ಟುದದನು, ಭೃಗುಮುನಿಪ= ಭೃಗುಋುಷಿಗಳು, ಇಂದ್ರದ್ಯುಮ್ನಕ್ಷಿತಿಪನಿಗೆ= ಇಂದ್ರದ್ಯುಮ್ನ ರಾಜನಿಗೆ, ಪೇಳಿದನು.

ತಾತ್ಪರ್ಯ:—ಈ ಸಂಧಿಯಲ್ಲಿ ಹೇಳಿರುವ ವಿಷಯವನ್ನು ಈ ಪದ್ಯದಲ್ಲಿ ಸೂಚಿಸಿರುವುದರಿಂದ ಸಂಧಿ ಸೂಚನೆಯೆಂದು ಇದಕ್ಕೆ ಹೆಸರು. ಪೂರ್ವ ಸಂಧಿಯಲ್ಲಿ ಸ್ವಾತಂತ್ರ್ಯವನ್ನು ಹಂಚಿಕೊಟ್ಟ ವಿಷಯವನ್ನು ಹೇಳಿದ್ದರೂ '' ಪುನಃ ಪುನಃ ಕಥಾಂಬ್ರೂಯುಃ ಅಭ್ಯಾಸಾದುತ್ತಮಂ ಫಲಂ'' ಎಂಬ ನ್ಯಾಯದಿಂದ ದಾರ್ಢ್ಯ ಜನನಕ್ಕಾಗಿ ೨ ಸಲ, ೩ ಸಲ ಹೇಳುವುದರಿಂದ ಮನನವಾಗುವುದು ಅದರಿಂದ ಫಲವು ಹೆಚ್ಚಿಗೆ ಬರುವುದೆಂದು ಅದೇ ಸ್ವಾತಂತ್ರ್ಯ ವಿಭಾಗವಿಷಯವನ್ನೇ ಈ ಸಂಧಿಯಲ್ಲೂ ಹೇಳುತ್ತಾರೆ; ಆದರೆ ಸ್ವಾತಂತ್ರ್ಯ ವಿಭಾಗವಿಷಯವನ್ನು ದಾಸಾರ್ಯರು ತಮ್ಮ ಯುಕ್ತಿಯಿಂದ ಹೇಳಿರುವರೆ? ಅಥವಾ ಮತ್ತಾರಾದರೂ ಯಾರಿಗಾದರೂ ಹೇಳಿ ಉಪದೇಶ ಪರಂಪರಾ ಬಂದಿರುವುದೆ ಎಂಬ ಶಂಕೆಯನ್ನು ನಿವೃತ್ತಿ ಮಾಡುತ್ತಾರೆ. ಭೃಗುಮುನಿಪ ಎಂಬ ವಾಕ್ಯದಿಂದ:—ಈ ವಿಷಯುವನ್ನು ಭೃಗುಋುಷಿಗಳು ಇಂದ್ರದ್ಯುಮ್ನ ರಾಜನಿಗೆ ಉಪದೇಶ ಮಾಡಿರುವುದಾಗಿ, ವಿಷ್ಣು ರಹಸ್ಯದಲ್ಲಿ ಹೇಳಿರುವರು. ಆ ಭೃಗುಮುನಿಗಳು ಉಪದೇಶ ಮಾಡಿರುವುದನ್ನೇ ನಾವು ಇಲ್ಲಿ ಹೇಳುತ್ತೇವೆಂದು ದಾಸಾರ್ಯರು ಈ ಪದ್ಯದಲ್ಲಿ ಹೇಳಿರುತ್ತಾರೆ.

ಪರಮ ವಿಷ್ಣು ಸ್ವತಂತ್ರ ಮಾಯಾ
ತರುಣಿ ವಕ್ಷಸ್ಥಳವಾಸಿಯು
ಸರಸಿಜೋದ್ಭವ ಪ್ರಾಣರೀರ್ವರು ಸಚಿವರೆನಿಸುವರು ||
ಸರ್ವ ಕರ್ಮಗಳಲ್ಲಿ ತತ್ಪ್ರಿಯ
ರುರಗಭೂಷಣ ಹಂಕೃತಿತ್ರಯ
ಕರೆಸುವವಮರೇಂದ್ರಾರ್ಕಮುಖರಿಂದ್ರಿಯಪರೆನಿಸುವರು ||

ಪದ್ಯಾರ್ಥ ;—ವಿಷ್ಣು=ಶ್ರೀ ಪರಮಾತ್ಮನು, ಪರಮ=ಎಲ್ಲರ ಕಿಂತಲೂ ಉತ್ತಮನಾದ, ಸ್ವತಂತ್ರ=ಸ್ವತಂತ್ರ ಉಳ್ಳವನು. ಮಾಯಾ =ಮಾಯಾನಾಮಕರಾದ, ತರುಣಿ = ನಿತ್ಯದಲ್ಲೂ ಯೌವನಶೀಲರಾದ ಲಕ್ಷ್ಮೀದೇವಿಯರು, (ಪ್ರಕೃತಿಯು) ವಕ್ಷಸ್ಥಳ ನಿವಾಸಿಯು=ಪರಮಾತ್ಮನ ವಕ್ಷಸ್ಥಳದಲ್ಲಿ ವಾಸಮಾಡುವವರು. ಸರಸಿಜೋದ್ಭವ=ಪರಮಾತ್ಮನ ನಾಭೀಕಮಲದಿಂದ ಜನಿಸಿದ ಬ್ರಹ್ಮದೇವರು, ಪ್ರಾಣರು=ಮುಖ್ಯ ಪ್ರಾಣದೇವರು, ಈರ್ವರು=ಇವರಿಬ್ಬರೂ, ಸಚಿವರೆನಿಸುವರು=ಮುಖ್ಯ ಮಂತ್ರಿಗಳೆನಿಸುವರು. ಸರ್ವ ಕರ್ಮಗಳಲ್ಲಿ=ತಾನು ಮಾಡಿಸುವ ಎಲ್ಲಾ ಕರ್ಮಗಳಲ್ಲೂ, ತತ್ಪ್ರಿಯರು=ಪರಮಾತ್ಮನಿಗೆ ಅತ್ಯಂತ ಪ್ರಿಯರಾದವರು. ಅಹಂಕೃತಿತ್ರಯ=ವೈಕಾರಿಕ, ತೈಜಸ, ತಾಮಸವೆಂಬ ಮೂರು ವಿಧ ಅಹಂಕಾರಗಳಿಗೆ, ಅಭಿಮಾನಿಗಳೆಂದು, ಕರೆಸುವ, ಉರಗಭೂಷಣ= ಸರ್ಪಭೂಷಣರಾದ ರುದ್ರದೇವರು, ಅಮರೇಂದ್ರ=ದೇವೇಂದ್ರನು, ಅರ್ಕ =ಸೂರ್ಯನು, ಮುಖರು=ಇವರೇ ಮೊದಲಾದವರು, ಇಂದ್ರಿಯಪರೆನಿಸುವರು=ಇಂದ್ರಿಯಾಭಿಮಾನಿಗಳೆಂದೆನಿಸಿಕೊಳ್ಳುವರು.

ತಾತ್ಪರ್ಯ :—ವಿಷ್ಣುರಹಸ್ಯ ೩೦ನೆಯ ಅಧ್ಯಾಯದಲ್ಲಿ ಇಂದ್ರದ್ಯುಮ್ನ ರಾಜನಿಗೆ ಭೃಗು ಋಷಿಗಳು ಉಪದೇಶ ಮಾಡಿದ ವಾಕ್ಯವನ್ನೇ ಇಲ್ಲಿ ಹೇಳಿರುತ್ತಾರೆ—" ಭೃಗುರುವಾಚ || ಸ್ವತಂತ್ರಃ ಪರಮೋ ವಿಷ್ಣುಃ ಮಾಯಾ ತಸ್ಯಾಂಗಸಂಗಿನೀ || ಬ್ರಹ್ಮಾಪ್ರಾಣಶ್ಚ ಸಚಿವೌ ಸರ್ವಕರ್ಮಸುತತ್ಪ್ರಿಯೌ ||೧|| ತ್ರಿವಿಧಾಹಂಕೃತಿಃ ಸಾಕ್ಷಾದ್ರುದ್ರೋಽಪಿ ಸಚಿವಃ ಸ್ಮೃತಃ ||ಮನಸೋಽಧಿಪತಿಃ ಶಕ್ರೋಽರ್ಕಾದ್ಯಾ ಇಂದ್ರಿಯ ದೇವತಾಃ ||೨||' ಈ ಶ್ಲೋಕಾರ್ಥವನ್ನೇ ದಾಸಾರ್ಯರು ಮೇಲಿನ ಪದ್ಯದಲ್ಲಿ ಹೇಳಿರುವರು. ಶ್ರೀ ವಿಷ್ಣು ಪರಮ ಸ್ವತಂತ್ರನು. ಪರಮಾತ್ಮನ ವಕ್ಷಸ್ಥಳನಿವಾಸಿಯು

ಮಾಯಾ ಎಂಬ ಹೆಸರುಳ್ಳ ರಮಾದೇವಿಯರು. ಬ್ರಹ್ಮದೇವರು, ಪ್ರಾಣ ದೇವರು ಇವರಿಬ್ಬರೂ ಮುಖ್ಯ ಮಂತ್ರಿಗಳು. ಮತ್ತು ಎಲ್ಲಾ ಕಾರ್ಯಗಳನ್ನು ಮಾಡುವುದರಲ್ಲೂ ಇವರಿಬ್ಬರೂ ಪರಮಾತ್ಮನಿಗೆ ಅತ್ಯಂತ ಪ್ರಿಯರು. ಮೂರು ವಿಧವಾದ ವೈಕಾರಿಕ, ತೈಜಸ, ತಾಮಸವೆಂಬ ಅಹಂಕಾರಕ್ಕೆ ಅಭಿಮಾನಿಯಾದ ರುದ್ರದೇವರೂ ಕೂಡ ಮಂತ್ರಿಯೇ, ಈತನು ಮನಸ್ಸಿಗೆ ಅಧಿಪತಿಯು, ಇಂದ್ರನೂ, ಸೂರ್ಯಾದಿಗಳೂ ಮಿಕ್ಕ ಇಂದ್ರಿಯಗಳಿಗೆ ಅಭಿಮಾನಿಗಳು || ||

ಈ ದಿವೌಕಸರಂತೆ ಕಲಿ ಮೊದ
ಲಾದ ದೈತ್ಯರು ಸರ್ವ ದೇಹದಿ
ತೋದಕರು ತಾವಾಗಿ ವ್ಯಾಪಾರಗಳ ಮಾಡುವರು ||
ವೇಧನಂದದಿ ಕಲಿಯಹಂಕಾ
ರಾಧಿಪಾಧಮ ಮಧುಕುಕೈಟಭ
ಕ್ರೋಧಿ ಶಂಬರ ಮುಖರು ಮನಸಿಗೆ ಸ್ವಾಮಿ ಎನಿಸುವರು

ಪದ್ಯಾರ್ಥ :—ಈ ದಿವೌಕಸರಂತೆ=ಮೇಲೆ ಹೇಳಿದ ಬ್ರಹ್ಮಾದಿ ದೇವತೆಗಳಂತೆ, ಕಲಿ ಮೊದಲಾದ ದೈತ್ಯರು ಸರ್ವ ದೇಹದಿ=ಎಲ್ಲಾ ಪ್ರಾಣಿಗಳ ಶರೀರದಲ್ಲೂ, ತೋದಕರು=ಪ್ರೇರಕರು, ತಾವಾಗಿ, ವ್ಯಾಪಾರಗಳ=ಮಾಡಬೇಕಾದ ಪಾಪಕರ್ಮಗಳನ್ನು ಮಾಡುವರು. ವೇಧನಂದದಿ=ಬ್ರಹ್ಮದೇವರಂತೆ, ಕಲಿಯು (ಬ್ರಹ್ಮದೇವರು ಹೇಗೆ ದೇವೋತ್ತಮರೊ ಹಾಗೆ ಕಲಿಯು ದೈತ್ಯೋತ್ತಮನೆಂದರ್ಥ.) ಮತ್ತು ಅಹಂಕಾರಾಧಿಪ=ಅಹಂಕಾರಕ್ಕೆ ಅಭಿಮಾನಿಯು. ಅಧಮ=ಅಧಮನಾದ, ಮಧು=ಮಧು ಎಂಬ ದೈತ್ಯನು, ಕು=ಕುತ್ಸಿತನಾದ, ಕೈಟಭ=ಕೈಟಭನೆಂಬ ಅಸುರನೂ, ಕ್ರೋಧಿ=ಮಹಾ ಕೋಪಿಷ್ಟರಾದ, ಶಂಬರಮುಖರು =ಶಂಬರಾಸುರ ಮೊದಲಾದವರು ಮನಸ್ಸಿಗೆ, ಸ್ವಾಮಿಯೆನಿಸುವರು=ಅಭಿಮಾನಿಗಳೆನಿಸುವರು.

ತಾತ್ಪರ್ಯ :—ವಿಷ್ಣುರಹಸ್ಯ-"ಏವಮೇವಹಿ ಕಲ್ಯಾದ್ಯಾಃ ಸರ್ವದೇಹೇಷು ಸಂಸ್ಥಿತಾಃ || ಬ್ರಹ್ಮವಚ್ಚ ಕಲಿಸ್ತೇಷಾ ಮಧಿಕೊಹಂಕೃತಿಃ ಸ್ಮೃತಃ ||೩|| ಮಧುಕೈಟಭ ಮುಖ್ಯಾಶ್ಚ ಶಂಬರಾದ್ಯಾ ಮನೋಧಿಗಾಃ." ಮೇಲೆ ಹೇಳಿದಂತೆ ಬ್ರಹ್ಮಾದಿ ದೇವತೆಗಳು ಹೇಗೆ ಸರ್ವ ಪ್ರಾಣಿಗಳಲ್ಲೂ

ಇದ್ದು ಇಂದ್ರಿಯಾಭಿಮಾನಿಗಳಾಗಿರುವರೆಷ್ಟೇ ಅದರಂತೆ ಕಲಿ ಮೊದಲಾದ ದೈತ್ಯರೂ ಸಹ ಸರ್ವ ಪ್ರಾಣಿಗಳ ದೇಹಗಳಲ್ಲೂ ಇದ್ದು ಪಾಪಪ್ರೇರಕರಾಗಿ ಪಾಪಕರ್ಮಗಳನ್ನು ಮಾಡಿಸುವರು ದೇವತೆಗಳಲ್ಲಿ ಬ್ರಹ್ಮದೇವರು ಹೇಗೆ ಶ್ರೇಷ್ಟರೋ ಹಾಗೆ ದೈತ್ಯರಲ್ಲಿ ಕಲಿಯು ಶ್ರೇಷ್ಟನು. ಇವನು ಅಹಂಕಾರಾಭಿಮಾನಿಯು. ಅಧಮರಾದ ಮಧು ಕೈಟಭರು ಶಂಬರಾಸುರ ಮೊದಲಾದವರು ಮನೋಭಿಮಾನಿಗಳು. ವಿಷ್ಣುರಹಸ್ಯದ ಶ್ಲೋಕಾರ್ಥವು ಪದ್ಯಾರ್ಥವು ಒಂದೇ ಆಗಿರುವದರಿಂದ ಪ್ರತ್ಯೇಕವಾಗಿ ಬರೆಯಬೇಕಾಗಿಲ್ಲ ||೩||

ದೇವತೆಗಳೋಪಾದಿ ನಿತ್ಯದೊ
ಳೀವಮಾದಿ ಸ್ವನಾಮದಿಂದಲಿ
ಯಾವದಿಂದ್ರಿಯಗಳೊಳು ವ್ಯಾಪಾರಗಳ ಮಾಡುವರು||
ಸೇವಕರ ಸೇವಾನುಗುಣ ಫಲ
ವೀವ ನೃಪನಂದದಲಿ ತನ್ನ ಸ್ವ
ಭಾವ ಸ್ವಾತಂತ್ರ್ಯ ವಿಭಾಗವ ಮಾಡಿಕೊಟ್ಟ ಹರಿ ||

ಪದ್ಯಾರ್ಥ :—ದೇವತೆಗಳೋಪಾದಿ= ತತ್ವಾಭಿಮಾನಿ ದೇವತೆಗಳಂತೆ, ನಿತ್ಯದೊಳು, ಏವಮಾದಿ=ಇವೇ ಮೊದಲಾದ, (ಮೇಲೆ ಹೇಳಿದ ಕಲಿ, ಮಧು ಕೈಟಭ ಮೊದಲಾದ) ಸ್ವನಾಮದಿಂದಲಿ= ತಮ್ಮ ತಮ್ಮ ಹೆಸರುಗಳಿಂದ, ಯಾವದಿಂದ್ರಿಯಗಳೊಳು= ಎಲ್ಲಾ ಇಂದ್ರಿಯಗಳಲ್ಲೂ, ವ್ಯಾಪಾರಗಳ ಮಾಡುವರು= ಇದ್ದು ಆಯಾ ಇಂದ್ರಿಯಗಳಿಂದ ಆಗುವ ಪಾಪಕೃತ್ಯಗಳನ್ನು ಮಾಡುವರು ಸೇವಕರ ಸೇವಾನುಗುಣ= ಸೇವಕರು ಮಾಡುವ ಕೆಲಸಗಳ ಯೋಗ್ಯತೆಯನ್ನನುಸರಿಸಿ, ಫಲವೀವ= ಅವರವರಿಗೆ ಕೆಲಸಗಳನ್ನು ಕೊಟ್ಟು ಆ ಕೆಲಸಗಳನ್ನು ಮಾಡಿಸಿಕೊಂಡು ಅದಕ್ಕೆ ತಕ್ಕ ಸಂಬಳಾದಿಗಳನ್ನು ಕೊಡುವ, ನೃಪನಂದದಲಿ= ರಾಜನಂತೆ, ತನ್ನ ಸ್ವಭಾವ= ಪರಮಾತ್ಮನಿಗೆ ಸ್ವಭಾವವಾಗಿರುವ,ಸ್ವಾತಂತ್ರ್ಯ= ಸ್ವಾತಂತ್ರ್ಯವನ್ನು, ಹರಿ= ಪರಮಾತ್ಮನು, ವಿಭಾಗವ ಮಾಡಿಕೊಟ್ಟ.

ತಾತ್ಪರ್ಯ :—ವಿಷ್ಣುರಹಸ್ಯ—ಅನ್ಯೇಪಿದೇವದ್ದೈತ್ಯಾಸ್ತು ತತ್ತದಿಂದ್ರಿಯಮಾನಿನಃ ||೪|| ಸ್ವತಂತ್ರೋಽಪಿ ಹರಿಃಸೃಷ್ಟ್ವಾ ಸ್ವಸ್ವಾತಂತ್ರ್ಯಮನೇಕಧಾ || ವಿಭಜ್ಯಾದಾನ್ನೃಪ ಇವ ಸರ್ವಕಾರ್ಯೇಷು ಲೀಲಯಾ ||೫||

ತತ್ರತ್ರಾಸ್ವತಂತ್ರ್ಯಯೋಗೇನ ಫಲಭಾಕ್‌ಸಪ್ರಜಾಯತೆ ॥" ಇನ್ನೂ ಇತರರಾದ ದೇವ ದೈತ್ಯರುಗಳು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಅಭಿಮಾನಿಗಳಾಗಿರುವರು. ರಾಜನು ಸೇವಕರ ಯೋಗ್ಯತಾನುಸಾರವಾಗಿ, ದೇಶಾಧಿಕಾರ, ಗ್ರಾಮಾಧಿಕಾರ ಮೊದಲಾದ ಕೆಲಸವನ್ನು ಕೊಟ್ಟು, ಅವರಿಂದ ತಾನು ಮಾಡಬೇಕಾದ ಕೆಲಸವನ್ನು ಮಾಡಿಸಿ, ಅವರವರ ಯೋಗ್ಯತಾನುಸಾರವಾಗಿ ಸಂಬಳ ಮೊದಲಾದವುಗಳನ್ನು ಕೊಡುವಂತೆ, ಪರಮಾತ್ಮನು ಸರ್ವಸ್ವತಂತ್ರನಾದರೂ ತನ್ನೊಳಗಿರುವ ಸ್ವಾತಂತ್ರ್ಯವನ್ನು ಸೃಷ್ಟಿ ಕಾಲದಲ್ಲಿ ಬ್ರಹ್ಮಾದಿ ದೇವತೆಗಳಿಗೂ, ಕಲಿ ಮೊದಲಾದ ದೈತ್ಯರಿಗೂ ಕೊಟ್ಟರುವನು. ಪರಮಾತ್ಮನು ಕೊಟ್ಟ ಸ್ವಾತಂತ್ರ್ಯದಿಂದ ಅವರುಗಳು ಪ್ರಾಣಿಗಳಲ್ಲಿದ್ದು ಪುಣ್ಯಪಾಪಾದಿಗಳನ್ನು ಮಾಡಿಸುತ್ತಾ ತಮ್ಮ ಯೋಗ್ಯತಾನುಸಾರವಾದ ಸುಖದುಃಖಾದಿಗಳನ್ನು ಅನುಭವಿಸುವರು ॥೩॥

ಅವತಾರಿಕೆ :—ಸ್ವಾತಂತ್ರ್ಯವನ್ನು ವಿಭಾಗ ಮಾಡಿದ ಪ್ರಕಾರವನ್ನು ಹೇಳುತ್ತಾರೆ—

**ಅಗಣಿತ ಸ್ವಾತಂತ್ರ್ಯಯವ ನಾಲ್**
**ಬಗೆ ವಿಭಾಗವಮಾಡಿ ಒಂದನು**
**ತೆಗೆದು ದಶವಿಧಗೈಸಿ ಪಾದರೆ ಪಂಚಪ್ರಾಣನಲಿ ॥**
**ಮೊಗಚತುಷ್ಟಯನೋಳ್ ಸಪಾದೈ**
**ದುಗುಣವಿರಸಿದ ಮತ್ತೆ ದಶವಿಧ**
**ಯುಗಳ ಗುಣವನುಮಾಡಿ ಯೆರಡು ಸದಾಶಿವನೊಳಿಟ್ಟ॥**

ಪದ್ಯಾರ್ಥ :—ಅಗಣಿತ=ಲೆಖ್ಖವಿಲ್ಲದ, ಸ್ವಾತಂತ್ರ್ಯಯವ=ಸ್ವತಂತ್ರ್ಯಗುಣವನ್ನು, ನಾಲ್ಬಗೆ=೪ ಬಗೆಯಾಗಿ, ವಿಭಾಗವಮಾಡಿ, ಒಂದನು ತೆಗೆದು=ಒಂದು ಭಾಗವನ್ನು ತೆಗೆದುಕೊಂಡು, ದಶವಿಧಗೈಸಿ=ಹತ್ತು ಭಾಗಗಳನ್ನಾಗಿ ಮಾಡಿ, ಪಾದರೆ ಪಂಚ=ಕಾಲುಕಮ್ಮಿ ಐದನ್ನು ಅಂದರೆ (೪|||) ನಾಲ್ಕೂಮುಕ್ಕಾಲು ಭಾಗಗಳನ್ನು, ಪ್ರಾಣನಲಿ=ಮುಖ್ಯ ಪ್ರಾಣದೇವರಲ್ಲೂ, ಮೊಗಚತುಷ್ಟಯನೋಳ್=ಚತುರ್ಮುಖ ಬ್ರಹ್ಮದೇವರಲ್ಲಿ, ಸಪಾದೈದು=(೫|) ಐದೂಕಾಲು ಭಾಗಗಳುಳ್ಳ, ಗುಣ=ಸ್ವಾತಂತ್ರ್ಯ ಗುಣಗಳನ್ನು, ಇರಸಿದ=ಇಟ್ಟನು. ಮತ್ತೆ ಯುಗಳಗುಣವನು=ಎರಡನೆಯ ಭಾಗದ ಸ್ವಾತಂತ್ರ್ಯ ಗುಣವನ್ನು, ದಶವಿಧ=೧೦ ಭಾಗಗಳನ್ನಾಗಿ,

ಮಾಡಿ, ಎರಡು=೨ ಭಾಗಗಳನ್ನು, ಸದಾಶಿವನೊಳು=ರುದ್ರದೇವರಲ್ಲಿ, ಇಟ್ಟ=ಇಟ್ಟನು.

ತಾತ್ಪರ್ಯ :—ಶ್ರೀ ಪರಮಾತ್ಮನು ತನ್ನಲ್ಲಿರುವ, ಅಗಣಿತವಾದ ಸ್ವಾತಂತ್ರ್ಯಗುಣಗಳನ್ನು ೪ ಭಾಗ ಮಾಡಿ, ಅದರಲ್ಲಿ ಒಂದು ಭಾಗವನ್ನು ತೆಗೆದು ಅದನ್ನು ೧೦ ಭಾಗ ಮಾಡಿದನು ಆ ಹತ್ತರಲ್ಲಿ (೪||।) ನಾಲ್ಕೂ ಮುಕ್ಕಾಲು ಭಾಗಗಳನ್ನು ಮುಖ್ಯ ಪ್ರಾಣದೇವರಲ್ಲೂ, (೫|) ಐದೂಕಾಲು ಭಾಗಗಳನ್ನು ಬ್ರಹ್ಮದೇವರಿಗೂ ಕೊಟ್ಟನು. ಎರಡನೆಯ ಒಂದು ಭಾಗವನ್ನು ೧೦ ಭಾಗ ಮಾಡಿ ಅದರಲ್ಲಿ ಅಹಂಕಾರಾತ್ಮಕ ರುದ್ರದೇವರಿಗೆ ಎರಡು ಭಾಗಗಳು ಕೊಟ್ಟನು. ಈ ವಿಷಯದಲ್ಲಿ ವಿಷ್ಣುರಹಸ್ಯದ ವಾಕ್ಯ "ಸ್ವಸ್ವಾತಂತ್ರ್ಯ ಚತುರ್ಥಾಂಶಂ ದಶಧಾವ್ಯಭಜದ್ಧರಿಃ ||೬|| ಪಾದೋನ ಪಂಚಕಂ ಪ್ರಾಣೇಸಪಾದಂ ಬ್ರಹ್ಮಣೇ ದದೌ || ದ್ವಿತೀಯೇತು ಚತುರ್ಥಾಂಶೇ ದಶಧೈವ ವಿಭಾಜಿತೆ ೭|| ದ್ವಾವೇವಾಂಶಾವಹಂಕಾರೆ" ಎಂಬೀ ಶ್ಲೋಕಾರ್ಥವನ್ನೆ ದಾಸಾರ್ಯರು ಈ ಪದ್ಯದಲ್ಲಿ ಹೇಳಿರುವರು. ಈ ಪದ್ಯದಲ್ಲಿ "ಪಾದರೆ ಪಂಚಪ್ರಾಣನಲಿ" ಎಂಬ ಪದಕ್ಕೆ ಅರ್ಥ ಮಾಡುವಾಗ ಒಬ್ಬ ವ್ಯಾಖ್ಯಾನಕರ್ತರು, ಪಾದ ಅಂದರೆ ಹತ್ತರಲ್ಲಿ ಪಾದ ೨|| ಎಂತಲೂ ಅರೆ ಅಂದರೆ ಅದರಲ್ಲಿ ಅರ್ಧ ೧|. ಅಂತು ೩||| ಭಾಗಗಳನ್ನು ಪಂಚಪ್ರಾಣರಿಗೆ ಕೊಟ್ಟರೆಂದು ವ್ಯಾಖ್ಯಾನ ಮಾಡಿರುವರು. ಹಾಗೆ ಮಾಡಿದರೆ ವಿಷ್ಣುರಹಸ್ಯದ ವಾಕ್ಯಕ್ಕೆ ವಿರೋಧ ಬರುವುದು ವಿಷ್ಣುರಹಸ್ಯದಲ್ಲಿ— "'ಪಾದೋನ ಪಂಚಕಂ ಪ್ರಾಣೇ' ಒಂದು ಪಾದ ಕಮ್ಮಿ ೫ ಭಾಗಗಳನ್ನು ಅಂದರೆ ೪||| ನಾಲ್ಕೂಮುಕ್ಕಾಲು ಭಾಗಗಳನ್ನು ಪ್ರಾಣದೇವರಿಗೆ ಕೊಟ್ಟನೆಂದು ಹೇಳಿರುವರು. ಇದಲ್ಲದೆ ಸ್ವಾತಂತ್ರ್ಯವನ್ನು ೪ ಭಾಗ ಮಾಡಿ ಅದರಲ್ಲಿ ಮೊದಲನೆಯ ೧ ಭಾಗವನ್ನು ೧೦ ಭಾಗ ಮಾಡಿದನು; ಅದರಲ್ಲಿ ೪||| ಭಾಗ ಪ್ರಾಣದೇವರಿಗೆ, ೫| ಭಾಗ ಬ್ರಹ್ಮದೇವರಿಗೆ. ಅಂತು ೧೦ ಭಾಗಗಳೆಂದು ಹೇಳಿರುವರು ಎರಡನೆಯ ೧ ಭಾಗವನ್ನು ೧೦ಭಾಗ ಮಾಡಿ ರುದ್ರಾದಿಗಳಿಗೆ ಕೊಟ್ಟಿರುವನು. ಉಳಿದ ಎರಡು ಭಾಗಗಳನ್ನು ಮೂರು ಭಾಗ ಮಾಡಿ ಒಂದು ಭಾಗವನ್ನು ರಮಾದೇವಿಯರಿಗೆ ಕೊಟ್ಟು ಎರಡು ಭಾಗಗಳನ್ನು ತಾನು ಇಟ್ಟುಕೊಂಡನೆಂದು ವಿಷ್ಣುರಹಸ್ಯದಲ್ಲೂ ಹೇಳಿರುವರು. ಮತ್ತು ದಾಸಾರ್ಯರೂ ಸಹ ಹಾಗೇ ಹೇಳಿರುವರು.

ವಾಯುದೇವರಿಗೆ ೩||| ಭಾಗ, ಬ್ರಹ್ಮದೇವರಿಗೆ ೫| ಅಂತು ೯ ಭಾಗಗಳಾದವು. ಒಂದು ಭಾಗ ಉಳಿಯಿತು ; ಹೀಗೆ ಹೇಳುವುದಕ್ಕೆ ಆಧಾರವಿಲ್ಲ. ಇದಲ್ಲದೆ ಹಿಂದಿನ ಸಂಧಿಯಲ್ಲಿ ಪರಮಾತ್ಮನು ತನ್ನ ಸ್ವಾತಂತ್ರ್ಯದಲ್ಲಿ ೪೦೦ ಭಾಗಗಳನ್ನು ತೆಗೆದು ೪ಭಾಗ ಮಾಡಿ ಒಂದು ೧೦೦ ಭಾಗಗಳಲ್ಲಿ ವಾಯುದೇವರಿಗೆ ೪೮ ಭಾಗಗಳನ್ನೂ, ಬ್ರಹ್ಮದೇವರಿಗೆ ೫೨ ಭಾಗಗಳನ್ನೂ ಕೊಟ್ಟನೆಂದು ಹೇಳಿರುವರು. ಪೂರ್ವಸಂಧಿಯಲ್ಲಿ ಹೇಳಿದ ೪೦೦ ರನ್ನೇ ಇಲ್ಲಿ ೪ ಭಾಗವೆಂದು ಸುಲಭ ಮಾಡುವುದಕ್ಕಾಗಿ ಹೇಳಿದರು. ಅಲ್ಲಿ ಭಾಗ ೧ಕ್ಕೆ ೧೦೦ ಆದವು. ಇಲ್ಲಿ ೧ನ್ನು ೧೦ ಮಾಡಿದರೆಂದು ಹೇಳಿದರು. ಇದರಿಂದ ಈ ಸಂಧಿಯಲ್ಲಿ ಹೇಳಿದ ೧ಕ್ಕೆ ಆ ಸಂಧಿಯಲ್ಲಿ ೧೦ ಹೇಳಿದಂತಾಯಿತು. ಈ ಸಂಧಿಯ ಪ್ರಕಾರ ವಾಯುದೇವರಿಗೆ ೪|||. ಬ್ರಹ್ಮದೇವರಿಗೆ ೫|. ಇವೆರಡನ್ನು ಪೂರ್ವ ಸಂಧಿಯ ಪ್ರಕಾರ ೧೦ ರಿಂದ ಗುಣಾಕಾರ ಮಾಡಿದರೆ. ಅದೇ ಲೆಖ್ಖ ಸರಿಹೋಗುವದು ಹೇಗೆಂದರೆ—
೪||| ಕ್ಕೆ ೪×೧೦=೪೦, ಹತ್ತರ ಮುಕ್ಕಾಲು ೭|| ಅಂತು ೪೭|| ಆಗಬೇಕಾಗಿತ್ತು. ಇನ್ನು ಅರ್ಧ ಕೂಡಿಸಿ ೪೮ ಭಾಗಗಳನ್ನು ವಾಯುದೇವರಿಗೆ ಕೊಟ್ಟನು. ಬ್ರಹ್ಮದೇವರಿಗೆ ಕೊಟ್ಟ ಭಾಗ ಇಲ್ಲಿ ೫|. ಅಲ್ಲಿ ೫೨. ೫×೧೦=೫೦. ಹತ್ತರ ಕಾಲು ೨||, ಅಂತು ೫೨|| ಆಗಬೇಕಾಗಿತ್ತು. ಇದರಲ್ಲಿ (||) ಅರ್ಧವನ್ನು ವಾಯುದೇವರಿಗೆ ಸೇರಿಸಿ ೫೨ನ್ನು ಬ್ರಹ್ಮದೇವರಿಗೆ ಕೊಟ್ಟಿರುವನು. ಇದರಂತೆ ಮುಂದಿನ ಪದ್ಯದಲ್ಲಿ ರುದ್ರದೇವರಿಗೆ ಎರಡು ಭಾಗವೆಂದು ಹೇಳಿರುವರು ಹಿಂದಿನ ಸಂಧಿಯಲ್ಲಿ ೨೦ ಎಂದು ಹೇಳಿರುವರು. ಇಂದ್ರನಿಗೆ ೧||ಗೆ ೧೫. ತತ್ವೇಶರಿಗೆ ೧ಭಾಗಕ್ಕೆ ೧೦ ಭಾಗ. ಸಕಲ ಜೀವರಿಗೆ ೧ =೧೦. ಕಲ್ಯಾದಿಗಳಿಗೆ ಇಲ್ಲಿ ೪||, ಅಲ್ಲಿ ೪೫. ಹೀಗೆ ಪೂರ್ವ ಸಂಧಿಗೂ ಇಲ್ಲಿಗೂ ನೋಡಿದರೆ ೧ಕ್ಕೆ ೧೦ ಭಾಗವೆಂದು ಸ್ಪಷ್ಟವಾಗುತ್ತದೆ. ಈ ಕಾರಣಗಳಿಂದ ವಾಯುದೇವರಿಗೆ ೪||| ಬ್ರಹ್ಮದೇವರಿಗೆ ೫| ಎಂಬು ಹೇಳಿದ ವಿಷ್ಣುರಹಸ್ಯದ ವಾಕ್ಯಗಳಿಗೆ ಈ ಅರ್ಥವು ಸರಿಹೋಗುತ್ತದೆ. ಹೀಗೆ ಮಾಡದೆ ೩||| ಭಾಗ ವಾಯುದೇವರಿಗೆ ಎಂದು ಮಾಡಿದರೆ ಪೂರ್ವ ಸಂಧಿಯ ಲೆಖ್ಖದ ಪ್ರಕಾರ ೩೮ ಆಗಬೇಕಾಗುತ್ತೆ. ಹಾಗೆ ಮಾಡದೆ ವಾಯುದೇವರಿಗೆ ೪೮ ಭಾಗವೆಂತಲೂ, ಬ್ರಹ್ಮದೇವರಿಗೆ ೫೨ ಭಾಗವೆಂತಲೂ, ದತ್ತಸ್ವಾತಂತ್ಯಸಂಧಿಯ ೨ನೆಯ

ಪದ್ಯ-'ಸತ್ಯಲೋಕಾಧಿಪನೊಳಗೆ ಐವತ್ತೆರಡು ಪವಮಾನನೊಳು ನಾಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟ ಇಪ್ಪತ್ತು' ಎಂಬ ಪದ್ಯದಿಂದ ದಾಸಾರ್ಯರು ಸ್ಪಷ್ಟವಾಗಿ ಹೇಳಿರುವರು. ವಿಷ್ಣುರಹಸ್ಯದಲ್ಲೂ ಇದೇ ವಾಕ್ಯವಿರುವುದು ಈ ವಾಕ್ಯಗಳಿಗೆ ವಿರೋಧ ಬರುವುದು. ಇದಲ್ಲದೆ "ಪಾದರೆ ಪಂಚ ಪ್ರಾಣನಲಿ" ಎಂಬ ವಾಕ್ಯದಲ್ಲಿ ಪ್ರಾಣಾಪಾನಾದಿ ಪಂಚಪ್ರಾಣರಿಗೆ ೩||| ಭಾಗವನ್ನು ಕೊಟ್ಟರೆಂದು ಹೇಳುವುದು ಸರಿಯಲ್ಲವೆಂಬುವುದಕ್ಕೆ ಮತ್ತೊಂದು ಕಾರಣವೂ ಉಂಟು. ಏನೆಂದರೆ—ವಿಷ್ಣುರಹಸ್ಯ ವಾಕ್ಯದಿಂದಲೂ, ದತ್ತಸ್ವಾತಂತ್ರ್ಯಸಂಧಿಯ ವಾಕ್ಯದಿಂದಲೂ, ಮುಖ್ಯ ಪ್ರಾಣದೇವರಿಗೆ ಪಾದೋನ ಪಂಚ ಭಾಗಗಳನ್ನು ಕೊಟ್ಟನೆಂದು ಸ್ಪಷ್ಟವಾಗಿ ಹೇಳಿರುವರು. ಪಂಚಪ್ರಾಣರೆಂಬುವುದಕ್ಕೆ ಆಧಾರವಿಲ್ಲ. ಇದಲ್ಲದೆ ಪಂಚಪ್ರಾಣರಿಗೆ ೩||| ಭಾಗವೆಂಬುವುದೆ ದಾಸರಾಯರ ಅಭಿಪ್ರಾಯವಾಗಿದ್ದರೆ, ಪಾದರೆ ಪಂಚಪ್ರಾಣರಲಿ ಎಂದು ಬಹುವಚನವಿರಬೇಕಾಗಿತ್ತು, ಪ್ರಾಣನಲಿ ಎಂಬ ಏಕವಚನದಿಂದ ಪಾದರೆ ಪಂಚ, ಪ್ರಾಣನಲಿ ಎಂದು ಬೇರೆ ಪದ ಮಾಡುವುದೆ ನ್ಯಾಯವಾಗಿ ಕಾಣುತ್ತದೆ. ಪಾದರೆ ಪಂಚ ಅಂದರೆ ಪಾದ ಕಮ್ಮಿ ೫ ಅಂದರೆ ೪||| ಎಂಬರ್ಥವು ಸಿದ್ಧವಾಗುವುದು. ಹೀಗೆ ಅರ್ಥ ಮಾಡುವುದರಿಂದ ವಿಷ್ಣುರಹಸ್ಯ, ದಾಸರ ವಾಕ್ಯ ಇವೆರಡೂ ಸರಿಹೋಗುತ್ತವೆ. ವಿಷ್ಣುರಹಸ್ಯದಲ್ಲಿ ಹೇಳಿದುದನ್ನೇ ಈ ಸಂಧಿಯಲ್ಲಿ ಹೇಳಿದ್ದೇವೆಂದು ಸಂಧಿಯ ೧೪ನೆಯ ಪದ್ಯದಲ್ಲಿ "ಇನಿತು ವಿಷ್ಣುರಹಸ್ಯದೋಳ್ ಭೃಗುಮುನಿಪ" ಎಂದು ಹೇಳಿರುವರು. ಈ ವಾಕ್ಯದಿಂದ ವಿಷ್ಣುರಹಸ್ಯದ ವಾಕ್ಯವೇ ಇದಕ್ಕೆ ಆಧಾರವೆಂದು ಸ್ಪಷ್ಟವಾಗುವುದು. ಹೀಗಿರಲು ಅದಕ್ಕೆ ವಿರುದ್ಧವಾಗಿ ದಾಸಾರ್ಯರ ವಾಕ್ಯವಿರಲಾರದೆಂಬುವದೆ ಈ ಅರ್ಥಕ್ಕೆ ಮುಖ್ಯಾಧಾರವೆಂದು ತಿಳಿಯಬೇಕು. ||೪||

ಪಾಕಶಾಸನ ಕಾಮರೊಳು ಸಾ
ರ್ಥೈಕವಿಟ್ಟ ದಶೇಂದ್ರಿಯರಸ ದಿ
ವೌಕಸಾದ್ಯರೊಳೊಂದು ಯಾವಜ್ಜೀವರೊಳೊಂದು ||
ನಾಲ್ಕುವರೆ ಕಲ್ಯಾದಿ ದೈತ್ಯಾ
ನೀಕಕಿತ್ತನು ಎರಡು ತ್ರಿವಿಧ ವಿ
ವೇಕಗೈಸಿಂದಿರೆಗೆ ಒಂದೆರಡಾತ್ಮ ತನ್ನೊಳಗೆ ||

ಪದ್ಯಾರ್ಥ :—ಪಾಕಶಾಸನ ಕಾಮರೊಳು=ಇಂದ್ರ ಮನ್ಮಥರಲ್ಲಿ ಸಾರ್ಧೈಕವ=(೧||) ಒಂದೂವರೆ ಭಾಗವ, ಇಟ್ಟ. ದಶೇಂದ್ರಿಯರಸ ದಿವೌಕಸಾದ್ಯರೊಳು=ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು ಹೀಗೆ ೧೦ ಇಂದ್ರಿಯಾಧಿಪರಾದ ದೇವತೆ ಮೊದಲಾದವರಲ್ಲಿ, ಒಂದು= ಒಂದು ಭಾಗವನ್ನೂ, ಯಾವಜ್ಜೀವರೊಳು=ಎಲ್ಲಾ ಜೀವರಲ್ಲೂ, ಒಂದು =ಒಂದು ಭಾಗವನ್ನೂ, ಕಲ್ಯಾದಿ=ಕಲಿ ಮೊದಲಾದ, ದೈತ್ಯಾನೀಕಕೆ= ದೈತ್ಯರ ಸಮೂಹಕ್ಕೆ, ನಾಲ್ಕೂವರೆ=೪। ಭಾಗವನ್ನು ಇತ್ತನು. ಎರಡು =ಉಳಿದ ಎರಡು ಭಾಗಗಳನ್ನು, ತ್ರಿವಿಧ ವಿವೇಕಗೈಸಿ=ಮೂರು ವಿಧ ವಾಗಿ ಭಾಗಿಸಿ, ಆತ್ಮ=ಪರಮಾತ್ಮನು, ಇಂದಿರೆಗೆ ಲಕ್ಷ್ಮೀದೇವಿಯರಿಗೆ, ಒಂದು=ಒಂದು ಭಾಗವನ್ನು, ಕೊಟ್ಟು, ಎರಡು=ಎರಡು ಭಾಗಗಳನ್ನು, ತನ್ನೊಳಗೆ ಇಟ್ಟುಕೊಂಡನು.

ತಾತ್ಪರ್ಯ :—ಎರಡನೆಯ ೧ ಭಾಗವನ್ನು ೧೦ ಭಾಗ ಮಾಡಿ ೨ ಭಾಗಗಳನ್ನು ರುದ್ರದೇವರಿಗೆ ಕೊಟ್ಟನೆಂದು ಪೂರ್ವ ಪದ್ಯದಲ್ಲಿ ಹೇಳಿದ್ದರು ಮಿಕ್ಕ ೮ ಭಾಗಗಳನ್ನು ಹಂಚಿದ ವಿವರವನ್ನು ಇಲ್ಲಿ ಹೇಳುತ್ತಾರೆ— ಇಂದ್ರ ಮನ್ಮಥರಿಗೆ ೧|| ಭಾಗ, ತತ್ವೇಶರಿಗೆ ೧ ಭಾಗ, ಯಾವಜ್ಜೀವರಿಗೆ ಒಂದು ಭಾಗ ಹಂಚಿ ಉಳಿದ ೪|| ಭಾಗಗಳನ್ನು ಕಲಿ ಮೊದಲಾದ ದೈತ್ಯ ರಿಗೆ ಕೊಟ್ಟನು ಹೀಗೆ ಸ್ವತಂತ್ರದ ೪ರಲ್ಲಿ ೧ ಭಾಗವನ್ನು ಬ್ರಹ್ಮ ವಾಯು ಗಳಿಗೂ, ಮತ್ತೊಂದು ಭಾಗವನ್ನು ದೇವತೆಗಳು, ಮನುಷ್ಯರು, ಕಲಿ ಮೊದಲಾದ ದೈತ್ಯರಿಗೂ ಕೊಟ್ಟನು ಈ ರೀತಿಯಲ್ಲಿ ಎರಡು ಭಾಗಗಳು ಹೋದರೆ ಇನ್ನು ಎರಡು ಭಾಗಗಳುಳಿದವು. ಆ ಎರಡು ಭಾಗಗಳನ್ನು ಮೂರಾಗಿ ಭಾಗಿಸಿ ೧ ಭಾಗವನ್ನು ರಮಾದೇವಿಯರಿಗೆ ಕೊಟ್ಟು ಎರಡು ಭಾಗವನ್ನು ತಾನು ಇಟ್ಟುಕೊಂಡನು. ಇದರಲ್ಲಿ ಸ್ವಲ್ಪ ವಿಶೇಷವಿರು ವುದು. ಏನೆಂದರೆ—ಹಿಂದಿನ ಸಂಧಿಯಲ್ಲಿ ಸ್ವಾತಂತ್ರ್ಯ ವಿಭಾಗವನ್ನು ಹೇಳುವಾಗ ೪೦೦ಭಾಗಗಳನ್ನು ತೆಗೆದು ಬ್ರಹ್ಮಾದಿಗಳಿಗೆ ೧೦೦, ರುದ್ರಾದಿ ಗಳಿಗೆ, ಕಲಿ ಮೊದಲಾದವರಿಗೆ ಸೇರಿಸಿ ೧೦೦. ಹೀಗೆ ೨೦೦ ಹೋದರೆ ಉಳಿದ ೨೦೦ರಲ್ಲಿ ೬೬| ಭಾಗವನ್ನು ರಮಾದೇವಿಯರಿಗೆ ಕೊಟ್ಟು ತಾನು ೧೩೨||| ಭಾಗಗಳನ್ನು ಇಟ್ಟುಕೊಂಡನೆಂದು ಹೇಳಿರುವರು. ೨೦೦ರನ್ನು

ಮೂರು ಭಾಗ ಮಾಡಿದರೆ ಭಾಗ೧ಕ್ಕೆ ೬೬ರಂತೆ ೬೬×೩=೧೯೮ ಆದವು. ೬೬ ರಮಾದೇವಿಯರಿಗೆ ಕೊಟ್ಟು ತಾನು ೧೩೨ ಭಾಗಗಳನ್ನಿಟ್ಟುಕೊಂಡನು ಅಂತು ೧೯೮ ಭಾಗಗಳಾದವು. ಉಳಿದ ಎರಡರಲ್ಲಿ ತನ್ನ ಅಂಗಸಂಗ ಹೊಂದುವ ಯೋಗ್ಯತೆ ರಮಾದೇವಿಯರಿಗೆ ಬರುವುದಕ್ಕಾಗಿ ೧| ಭಾಗವನ್ನು ಆಕೆಗೆ ಕೊಟ್ಟು ||| ಮುಕ್ಕಾಲು ಭಾಗವನ್ನು ತಾನು ಇಟ್ಟುಕೊಂಡನೆಂದು ಆ ಸಂಧಿಯಲ್ಲಿ ಹೇಳಿರುವರು. ಇಲ್ಲಿ ಅದರಂತೆ ೨ನ್ನು ೩ ಭಾಗ ಮಾಡಬೇಕು ಈ ಭಾಗವನ್ನು ಸುಲಭವಾಗಿ ತಿಳಿಸುವುದಕ್ಕಾಗಿ ಕೆಳಗೆ ಕಂಡಂತೆ ಭಾಗಿಸಲ್ಪಡುತ್ತೆ. ೨ ಭಾಗವನ್ನು ಮೂರು ಭಾಗ ಮಾಡಬೇಕಾದರೆ ಭಾಗ ೧ಕ್ಕೆ ೧೦ ಆಣೆ ೮ ಕಾಸಿನ ಭಾಗ ಬೀಳುವುದು. ಈ ಲೆಖ್ಖದಂತೆ, ೧೦ ವೀಸ ೮ ಕಾಸಿನ ಭಾಗ ರಮಾದೇವಿಯರಿಗೂ, ೧|— ಒಂದೂ ಕಾಲೇವೀಸ ಅಂದರೆ (೧-೫-೪) ೧ ರೂಪಾಯಿ ಐದು ಆಣೆ ೪ ಕಾಸಿನ ಭಾಗ ಪರಮಾತ್ಮನಿಗೆ ಆಗಬೇಕಾಗಿತ್ತು. ಅದರಲ್ಲಿ ತನ್ನ ಅಂಗಸಂಗದ ಯೋಗ್ಯತೆ ಬರುವುದಕ್ಕಾಗಿ ೧೦ಆಣೆ ೮ಕಾಸಿನ ಭಾಗಕ್ಕೆ ಬದಲು ೧೧ವೀಸ ಭಾಗವನ್ನು ರಮಾದೇವಿಯರಿಗೆ ಕೊಟ್ಟು ತಾನು ಒಂದೂಕಾಲೇವೀಸಭಾಗ ಅಂದರೆ ೧ ರೂಪಾಯಿ ೫ ಆಣೆ ಭಾಗವನ್ನು ಇಟ್ಟುಕೊಂಡನೆಂದು ತಿಳಿಯಬೇಕು. ಇದೇ ಅರ್ಥವನ್ನೇ ವಿಷ್ಣುರಹಸ್ಯದಲ್ಲಿ '' ಸಾರ್ಧೈಕಂಚಿತ್ತ ದ್ವೈವತೇ || ಭಗವಾನ್ ಪ್ರದದಾವಿಂದ್ರೇ ಏಕಮೇವೇಂದ್ರಿಯಾಧಿಪೆ ||೮|| ಏವಮೇವದದೌಜೀವೇ ದ್ವೈತ್ಯೇಭ್ಯಃ ಸಾರ್ಧಚಾತುರಾನ್ || ಅಥದ್ವೌತು ತುರೀಯಾಂಶೌ ಸ್ವಾತಂತ್ರ್ಯಸ್ಯಾವಶೇಷಿತೌ ||೯|| ತೌವಿಧಾಯತ್ರಿಧಾತ್ಯ್ಯಂಶಂ ಮಾಯಾಯ್ಯೈಪ್ರದದೌಸ್ವಯಂ || ಶೇಷಂ ಭಾಗದ್ವಯಂ ಸ್ವಸ್ಮಿನ್ ಸ್ಥಾಪಯೇತ್ಸನಿಜೇಚ್ಛಯಾ ||೧೦|| '' ಎಂಬ ಶ್ಲೋಕಗಳಿಂದ ಹೇಳಿರುವರು ||೫||

ಈ ವಿಧದಿ ಸ್ವಾತಂತ್ರ್ಯಯತ್ವವ
ದೇವಮಾನವ ದಾನವರೊಳು ರ
ಮಾವಿನೋದಿ ವಿಭಾಗಮಾಡಿಟ್ಟಲ್ಲಿ ರಮಿಸುವನು ||
ಮೂವರೊಳಗಿದ್ದವರ ಕರ್ಮವ
ತಾವಿಕಾರವ ಗೈಸದಲೆ ಕ
ಲ್ಪಾವಸಾನಕೆ ಕೊಡುವನಾಯಾಸವರವರಗತಿಯ ||

ಪದ್ಯಾರ್ಥ.—ಈ ವಿಧದಿ=ಮೇಲಿನ ಪದ್ಯಗಳಲ್ಲಿ ಹೇಳಿದ ರೀತಿಯಾಗಿ, ಸ್ವಾತಂತ್ರಿಯತ್ವವ=ತನ್ನೊಳಗಿರುವ ಸ್ವಾತಂತ್ರ್ಯವನ್ನು, ದೇವ, ಮಾನವ, ದಾನವ ರೊಳು=ದೇವತೆಗಳು, ಮನುಷ್ಯರುಗಳು, ದೈತ್ಯರುಗಳು ಇವರುಗಳಲ್ಲಿ, ರಮಾವಿನೋದಿ=ರಮಾದೇವಿಯರ ಮನಸ್ಸಿಗೆ ಆನಂದವನ್ನು ಕೊಡುವ ಶ್ರೀಹರಿಯು, ವಿಭಾಗಮಾಡಿಟ್ಟು, ಅಲ್ಲಿ=ಆ ದೇವ ಮಾನವ ದಾನವರೊಳಿದ್ದು, ರಮಿಸುವನು. ಅವರ ಕರ್ಮವ=ಅವರು ಮಾಡಬೇಕಾದಕರ್ಮಗಳನ್ನು, ತಾ=ತಾನು, ವಿಕಾರವಗೈಸದಲೆ=ವ್ಯತ್ಯಾಸಮಾಡದೆ ಅನಾಯಾಸ=ಲೇಶಮಾತ್ರವೂ ಆಯಾಸಪಡದೆ, ಕಲ್ಪಾವಸಾನಕೆ= ಈ ಬ್ರಹ್ಮಕಲ್ಪದ ಅವಸಾನಕಾಲದಲ್ಲಿ, ಅವರವರ ಗತಿಯ= ದೇವತೆಗಳಿಗೂ, ದೈತ್ಯರಿಗೂ, ಮನುಷ್ಯರಿಗೂ ಅವರವರ ಯೋಗ್ಯತಾನುಸಾರವಾದ ಗತಿಯನ್ನು, ಕೊಡುವ

ತಾತ್ಪರ್ಯ:—ಈ ಪ್ರಕಾರ ಪರಮಾತ್ಮನು, ತನ್ನೊಳಗಿರುವ ಸ್ವಾತಂತ್ರ್ಯವನ್ನು ದೇವತೆಗಳಿಗೂ, ಮಾನವರಿಗೂ ದಾನವರಿಗೂ ಹಂಚಿಕೊಟ್ಟು, ತಾನೂ ಅವರೊಳಗಿದ್ದು, ಅವರವರು ಮಾಡಬೇಕಾದ ಕರ್ಮಗಳನ್ನು ತಾ-ಮಾಡಿ ಮಾಡಿಸುವನು. ಪರಮಾತ್ಮನಿಂದ ದತ್ತವಾದ ಸ್ವಾತಂತ್ರ್ಯದಿಂದ ಅಮುಖ್ಯ ಪ್ರೇರಕರಾದ ದೇವದೈತ್ಯರು, ಜೀವರೊಳಗಿದ್ದು ಮಾಡಿಸುವ ಪುಣ್ಯಪಾಪಕರ್ಮಗಳಿಗೆ ತಕ್ಕ ಫಲವನ್ನು ಅನುಭವಿಸುವರು ಅಂದರೆ, ಪುಣ್ಯಪ್ರೇರಕರಾದ ದೇವತೆಗಳು ಪುಣ್ಯಫಲವನ್ನೂ ಪಾಪಪ್ರೇರಕರಾದ ದೈತ್ಯರು ಪಾಪಕರ್ಮದ ಫಲವನ್ನೂ ಅನುಭವಿಸುವರು ಮಧ್ಯಮರಾದ ಜೀವರು ಪುಣ್ಯಪಾಪಗಳೆರಡರ ಫಲವನ್ನು ಕಿಂಚಿತ್ಕಿಂಚಿತ್ ಅನುಭವಿಸುವರು. ಬ್ರಹ್ಮಕಲ್ಪಾವಸಾನದಲ್ಲಿ ಅವರವರ ಕರ್ಮಾನುಸಾರವಾಗಿ ದೇವತೆಗಳಿಗೂ ಮನುಷ್ಯೋತ್ತಮರಿಗೂ, ಮುಕ್ತಿಯನ್ನು ಮಧ್ಯಮ ಮನುಷ್ಯರಿಗೆ ಸುಖದುಃಖ ಮಿಶ್ರವಾದ ನಿತ್ಯಸಂಸಾರವನ್ನೂ. ದೈತ್ಯರಿಗೆ ಅಂಧಂತಮಸ್ಸನ್ನು ಕೊಡಿಸುವನು. ವಿಷ್ಣುರಹಸ್ಯದಲ್ಲಿ "ಯದಿಂದ್ರಿಯೇಣ ಯತ್ಕುರ್ವನ್ ಪುಣ್ಯಂ ಪಾಪಂಚ ದೃಶ್ಯತೆ || ತಸ್ಯತತ್ತತ್ಸ್ವತಂತ್ರತ್ವಾತ್ ಫಲಭಾಜೋಽಖಿಲಾಹಿತೆ" ಯಾವ ಇಂದ್ರಿಯಗಳಿಂದ ಪುಣ್ಯಪಾಪ ಮೊದಲಾದ ಕರ್ಮಗಳನ್ನು ಮಾಡುವರೋ ಆಯಾ ಕರ್ಮಫಲಕ್ಕೆ ಅಯಾ ಇಂದ್ರಿಯಾಭಿಮಾನಿಗಳಾದ

ದೇವದೈತ್ಯರು ಭಾಗಿಗಳಾಗುವರು. ಪರಮಾತ್ಮನು ಕೊಟ್ಟ ಸ್ವತಂತ್ರ್ಯದಿಂದ ದೇವ-ದೈತ್ಯರೇ ಪುಣ್ಯಪಾಪಗಳನ್ನು ಮಾಡಿಸುವುದರಿಂದ ಆಯಾಫಲಗಳನ್ನು ಅವರವರೇ ಅನುಭವಿಸಬೇಕು. ಇದೇ ಅರ್ಥವನ್ನೆ ಏಕಾದಶಸ್ಕಂಧ ತಾತ್ಪರ್ಯದಲ್ಲಿ ವಿಸ್ತಾರಮಾಡಿರುತ್ತಾರೆ:—"ಜೀವಾಭಿಮಾನಿನಶ್ಚೈವ ತ್ರಿವಿಧಾಃ ಸಂಪ್ರಕೀರ್ತಿತಾಃ || ಜೀವಮಾನ್ಯುತ್ತಮೋಬ್ರಹ್ಮಾಮಧ್ಯಮಃ ಸ್ವಯಃ ಮೇವತು || ಅಧಮಃಕಲಿರುದ್ದಿಷ್ಟಸ್ತತ್ರಮಧ್ಯಮನೀಚಯೋಃ || ಮೃತಿಜನ್ಮಕ್ಷುಧಾದುಃಖಪ್ರಭೃತ್ಯಖಿಳಮೇವತು || ನೋತ್ತಮಸ್ಯತುಜೀವಸ್ಯದೇಹಾದೇಷ್ಟಕಥಂಚನ || ಜನ್ಮಾದಿಕೃತದುಃಖಂತುದೇಹಮಾನ್ಯಸುರಸ್ಯತತ್ || ಸುಪ್ತಾದ್ಯಪ್ಯಯಜಂದುಃಖಮಸುರೇಂದ್ರಿಯಮಾನಿನಃ || ಕ್ಷುನ್ನಿಮಿತ್ತಂತು ಯದ್ದುಃಖಂ ಪ್ರಾಣಮಾನ್ಯ ಸುರಸ್ಯ ತತ್ || ಭಯತರ್ಷಾದಿಜಂದುಃಖಂ ಮನೋಮಾನ್ಯ ಸುರಸ್ಯಚ || ಜೀವಮಾನ್ಯ ಸುರಸ್ಯ ಸ್ಯಾತ್ಸರ್ವಂ ತತ್ಸಮುದಾಯತಃ || ಏವಮೇವ ಸುಖಂ ದೇವೇಷೂಭಯಂ ಮಧ್ಯಮೇಷುಚ|| ಇತ್ಯಾದಿ'' ಜೀವಾಭಿಮಾನಿಗಳು ಮೂರು ಪ್ರಕಾರ ಇರುವರು. ಉತ್ತಮರು ಬ್ರಹ್ಮದೇವರು. ಮಧ್ಯಮ ಜೀವಾಭಿಮಾನಿಯು ಪುರಂಜನನೆಂಬ ರಾಜನೋರ್ವನು; ಮತ್ತು ಸ್ವಯಂಜೀವನು. ಅಧಮನು ಕಲಿಯು. ಇವರಲ್ಲಿ ಜನನ ಮರಣ, ಹಶಿವೆ ಮೊದಲಾದ ದುಃಖಗಳೆಲ್ಲವು ಮಧ್ಯಮಜೀವಾಭಿಮಾನಿಗೂ ಅಧಮ ಜೀವಮಾನಿಗಳಿಗೆ ಮಾತ್ರವೇ ಹೊರತು ಉತ್ತಮ ಜೀವಮಾನಿಗಳಿಗಿಲ್ಲ. ಜನನಾದಿಗಳಿಂದಾಗುವ ದುಃಖವು ದೇಹಮಾನಿಯಾದ ದೈತ್ಯನಿಗೆ, ಮರಣಾದಿಗಳಿಂದಾಗುವ ದುಃಖವು ಇಂದ್ರಿಯಮಾನಿಯಾದ ದೈತ್ಯರಿಗೆ, ಹಶಿವೆಯಿಂದಾಗುವ ದುಃಖವು ಪ್ರಾಣಮಾನಿ ದೈತ್ಯನಿಗೆ; ಭಯ, ಆಶಾದಿಗಳಿಂದಾಗುವ ದುಃಖವು ಮನೋಭಿಮಾನಿ ದೈತ್ಯನಿಗೆ; ನಾನು ನೀಚನಾದೆ; ನನಗಿಂತಲೂ ಅವರು ಚೆನ್ನಾಗಿರುವರಲ್ಲ ಎಂದು ಸಂಕಟಪಡುವ ದುಃಖವು ಚಿತ್ತಮಾನಿ ದೈತ್ಯನಿಗೆ; ಜೀವಮಾನಿಯಾದ ದೈತ್ಯನಿಗೆ ಸಮುದಾಯದಲ್ಲಿ ಎಲ್ಲಾ ದುಃಖವು ಉಂಟು ಇದರಂತೆ ದೇವತೆಗಳಿಗೆ ಆಯಾ ಇಂದ್ರಿಯ ಜನ್ಯ ಸುಖಗಳು ಆಯಾ ಇಂದ್ರಿಯಾಭಿಮಾನಿಗಳಿಗಾಗುವವು. ಮಧ್ಯಮರಾದ ಜೀವರಿಗೆ ಪುಣ್ಯದಲ್ಲೂ ಪಾಪದಲ್ಲೂ ಸಹ ಭಾಗವುಂಟು. ಎಂದು ಹೇಳಿರುವರು ಆ ಅಭಿಪ್ರಾಯವನ್ನೇ ದಾಸಾರ್ಯರು ಈ ಪದ್ಯದಲ್ಲಿ ಸಂಕೋಚವಾಗಿ ಹೇಳಿರುವರು. ||೬||

ಆಲಯಗಳೊಳಗಿಪ್ಪ ದೀಪ
ಜ್ವಾಲೆ ವರ್ತಿಗಳನುಸರಿಸಿ ಜನ
ರಾಳಿಗಳಿಗೊಪ್ಪುವ ತೆರದಿ ಹರಿತೋರ್ಪ ಸರ್ವತ್ರ ||
ಕಾಲಕಾಲದಿ ಶ್ರೀಧರಾದು
ರ್ಗಾಲಲನೆಯರ ಕೂಡಿ ಸುಖಮಯ
ಲೀಲೆಗೈಯಲು ತ್ರಿಗುಣಕಾರ್ಯಗಳಹವು ಜೀವರಿಗೆ ||

ಪದ್ಯಾರ್ಥ:—ಆಲಯಗಳೊಳಗೆ=ಮನೆಗಳಲ್ಲಿ, ಇಪ್ಪ = ಇರುವ, ದೀಪಜ್ವಾಲೆ=ದೀಪದಪ್ರಕಾಶವು, ವರ್ತಿಗಳನು=ಬತ್ತಿಗಳನ್ನು ಅನುಸ ರಿಸಿ=ಅನುಸಾರವಾಗಿ, ಜನರ, ಆಳಿಗಳಿಗೆ=ಕಣ್ಣುಗಳಿಗೆ ಒಪ್ಪುವತೆರದಿ= ಶೋಭಿಸುವಂತೆ, ಹರಿ=ಶ್ರೀಹರಿಯು,ಸರ್ವತ್ರ=ಎಲ್ಲ ಪ್ರದೇಶದಲ್ಲೂ, ತೋರ್ಪ = ಕಾಣಿಸಿಕೊಳ್ಳುವನು. ಸುಖಮಯ=ಸುಖಸ್ವರೂಪನಾದ, ಪರಮಾತ್ಮನು, ಶ್ರೀಧರಾದುರ್ಗಾಲಲನೆಯರಕೂಡಿ=ಶ್ರೀದೇವಿ, ಭೂದೇವಿ ದುರ್ಗಾದೇವಿಯರೆಂಬ ಭಾರ್ಯೆಯರಿಂದೊಡಗೂಡಿ,ಕಾಲಕಾಲದಿ, ಲೀಲೆ ಗೈಯ್ಯಲು=ಕ್ರೀಡಿಸುತ್ತಿರಲು (ದೇಹಗಳಲ್ಲಿದ್ದು ಅವರವರು ಮಾಡ ಬೇಕಾದ ಕಾರ್ಯಗಳನ್ನು ಮಾಡಿಸುತ್ತಾ ಕ್ರೀಡಿಸುತ್ತಿರಲು) ಜೀವರಿಗೆ ತ್ರಿಗುಣಕಾರ್ಯಗಳು=ಸತ್ವರಜಸ್ತಮೋಗುಣಸಂಬಂಧವಾದ ಪುಣ್ಯ, ಪುಣ್ಯ ಪಾಪಮಿಶ್ರ ಪಾಪಕರ್ಮಗಳೆಂಬ ಮೂರು ವಿಧವಾದ ಕರ್ಮಗಳು, ಅಹವು =ಅವರವರ ಯೋಗ್ಯತಾನುಸಾರವಾಗಿ ಆಗುವವು.

ತಾತ್ಪರ್ಯ:—ಮನೆಗಳಲ್ಲಿ ಎಣ್ಣೆಯನ್ನು ಬತ್ತಿಯನ್ನು ಹಾಕಿ ದೀಪ ವನ್ನು ಹಚ್ಚಿದರೆ ಆ ಬತ್ತಿಯು ಸಣ್ಣದಾಗಿದ್ದರೆ ದೀಪದ ಕಾಂತಿಯು ಕಮ್ಮಿ ಯಾಗಿರುವುದು. ೧೦ ಬತ್ತಿಗಳನ್ನು ಹಾಕಿ ದೀಪವನ್ನು ಉರಿಸಿದರೆ ಜ್ವಾಲೆ ಯು ಹೆಚ್ಚಾಗಿರುವುದು. ಹೀಗೆ ಮನೆಗಳಲ್ಲಿ ದೀಪಗಳ ಪ್ರಕಾಶವು ಬತ್ತಿ ಗಳನ್ನನುಸರಿಸಿ ಹೆಚ್ಚು ಕಮ್ಮಿಯಾಗಿ ಒಪ್ಪುವಂತೆ ಈ ಜೀವರ ದೇಹದ ಹೃದಯ ಕಮಲವೆಂಬ ಮನೆಯಲ್ಲಿ ಪರಮಾತ್ಮನು ಅವರವರ ಯೋಗ್ಯತಾ ನುಸಾರವಾಗಿ ದೀಪದಂತೆ ಶೋಭಿಸುವನು. ಈ ಉಪಮಾನದಲ್ಲಿ ಜೀವರ ಯೋಗ್ಯತೆಯೇ ಬತ್ತಿ, ಆ ಯೋಗ್ಯತಾನುಸಾರವಾಗಿ ಭಗವತ್ಸ್ವರೂಪವು ಹೃದಯಾಕಾಶದಲ್ಲಿ ಶೋಭಿಸುವುದು. ಬತ್ತಿಯನ್ನನುಸರಿಸಿ ದೀಪದಕಾಂ ತಿಯು ಹೆಚ್ಚು ಕಮ್ಮಿಯಾಗುವುದೇ ಹೊರತು, ದೀಪದಲ್ಲಿ ಹೇಗೆ ಭೇದ

ಏಲ್ಲವೊ, ಹಾಗೆ ಪರಮಾತ್ಮನು ಕೆಲವರ ದೇಹದಲ್ಲಿ ಅತ್ಯಂತ ಪ್ರಕಾಶನಾಗಿಯೂ, ಕೆಲವರ ಶರೀರಗಳಲ್ಲಿ ಸಾಧಾರಣ ಪ್ರಕಾಶ ಉಳ್ಳವನಾಗಿಯೂ ಅವರವರ ಯೋಗ್ಯತಾನುಸಾರವಾಗಿ ಕಾಣುವನು. ಜೀವರುತ್ರಿವಿಧರು ಈ ಮೂರುವಿಧ ಜೀವರಲ್ಲೂ, ತ್ರಿಗುಣಕಾರ್ಯಗಳು ಆಗುತ್ತವೆ ಸಾತ್ವಿಕರು ರಾಜಸ ತಾಮಸ ಕಾರ್ಯಗಳನ್ನೂ ಮಾಡುವರು ರಾಜಸರು ಸಾತ್ವಿಕ ತಾಮಸ ಕರ್ಮಗಳನ್ನೂ ಮಾಡುವರು ತಾಮಸರೂ, ಸಾತ್ವಿಕ ರಾಜಸ ಕರ್ಮಗಳನ್ನು ಮಾಡುವರು. ಆದರೆ ಸಾತ್ವಿಕರು ಮಾಡುವ ತಾಮಸ ಕರ್ಮಗಳು ಶಾಶ್ವತವಾಗಿ ಅಂಧಂತಮಸ್ಸಿಗೆ ಸಾಧನವಾದ ಭಗವನ್ನಿಂದಾದಿ ಕರ್ಮಗಳಲ್ಲ. ತಾಮಸರು ಮಾಡುವ ಸಾತ್ವಿಕ ಕರ್ಮವಾದರೂ ಮುಕ್ತಿ ಸಾಧನಕರ್ಮಗಳಲ್ಲ. ಸಾತ್ವಿಕರು, ತಾಮಸರು ಮಾಡುವ ಪಾಪಪುಣ್ಯಗಳು ತಮ್ಮ ತಮ್ಮ ಯೋಗ್ಯತೆಯನ್ನು ಮೀರಿ ಮಾಡಿದ ಪುಣ್ಯ ಪಾಪಗಳ್ನು ನಾಶಮಾಡುವುದಕ್ಕೂ, ಸ್ವರ್ಗ ನರಕಾದಿಗಳನ್ನನುಭವಿಸುವುದಕ್ಕೆ ಮಾತ್ರ ಸಾಧನವಾಗುವುವು. ಅಂದರೆ ಸಾತ್ವಿಕರು ಪಾಪಗಳನ್ನು ಮಾಡಿದರೂ, ಪಶ್ಚಾತ್ತಾಪ ಉಳ್ಳವರಾಗಿ ಆ ಪಾಪಗಳನ್ನು ಪರಮಾತ್ಮನಿಗರ್ಪಿಸಿ ಭಕ್ತಿಯಿಂದ ಬೇಡಿಕೊಂಡು ಆ ಪಾಪಗಳನ್ನು ಕಳೆದುಕೊಳ್ಳುವರು ಅಥವಾ ಕೆಲವು ಪಾಪಗಳು ತಮ್ಮ ಯೋಗ್ಯತೆಯನ್ನು ಮೀರಿ ಪುಣ್ಯಗಳನ್ನು ಮಾಡಿದ್ದರೆ, ಆ ಪುಣ್ಯಗಳನ್ನು ಮಾತ್ರ ಹಾನಿ ಮಾಡುವುವು. ಹೀಗೆ ಸಾತ್ವಿಕರು ಮಾಡಿದ ಪಾಪವು ಇಷ್ಟರಲ್ಲೇ ಪರ್ಯವಸಾನ ಹೊಂದುವುದು. ಇದರಂತೆ ತಾಮಸರು ಮಾಡುವ ಪುಣ್ಯಗಳೂ ಕೂಡ ಅವರು ಮಾಡಿದ ಪಾಪ ಕರ್ಮಗಳು ತಮ್ಮ ಯೋಗ್ಯತೆಗೆ ಮಿಂಚಿದ್ದರೆ ಆ ಪಾಪವನ್ನು ಪರಿಹರಿಸಿ ಅವರ ಯೋಗ್ಯತೆಗೆ ಎಷ್ಟು ಪಾಪವಿರಬೇಕೋ ಅಷ್ಟು ಪಾಪಗಳೇ ಉಳಿಯುವವು. ಅಥವಾ ಭೂಮಿಯಲ್ಲಿ ಸ್ವಲ್ಪ ಹೆಚ್ಚಿನ ಸುಖವನ್ನನುಭವಿಸಬಹುದು. ಕೆಲವುಕಾಲ ಸ್ವರ್ಗವನ್ನೂ ಅನುಭವಿಸಬಹುದು. ಇಷ್ಟೇ ಹೊರ್ತು ಮುಕ್ತಿಗೆ ಸಾಧನವು ಎಂದಿಗೂ ಆಗುವಂತಿಲ್ಲ. ಆದರೆ ಸಾತ್ವಿಕ ತಾಮಸಾದಿಗಳಿಗೆ ಭೇದವೇನೆಂದರೆ ಸಾತ್ವಿಕರಿಗೆ ಪುಣ್ಯಭಾಗ ಹೆಚ್ಚಾಗಿ ಪಾಪ ಅಲ್ಪವಾಗಿರುವುದು, ತಾಮಸರಿಗೆ ಪಾಪ ಬಹಳವಾಗಿಯು, ಪುಣ್ಯ ಸ್ವಲ್ಪವಾಗಿಯೂ ಇರುವುದು ರಾಜಸರಿಗೆ ಎರಡು ಸಮವಾಗಿರುವುದೆಂಬ ಭಾವ. ಹೀಗೆ ಜೀವರು ತ್ರಿವಿಧ

ಕರ್ಮಗಳನ್ನು ಮಾಡಬೇಕಾದರೆ ಸತ್ವ ರಜಸ್ತಮೋಗುಣಾತ್ಮಕರಾದ ಶ್ರೀಭೂದುರ್ಗಾದೇವಿಯರಿಂದೊಡಗೂಡಿ ಪರಮಾತ್ಮನು, ಜೀವರ ದೇಹ ದೊಳಗಿದ್ದು ಸತ್ವಗುಣಕಾರ್ಯವನ್ನು ಮಾಡಿಸುವುದಕ್ಕೆ ಶ್ರೀ ದೇವಿಯರನ್ನೂ ರಜೋ ಗುಣಕಾರ್ಯವನ್ನು ಮಾಡಿಸುವುದಕ್ಕೆ ಭೂದೇವಿಯರನ್ನು ತಮೋ ಗುಣಕಾರ್ಯಗಳನ್ನು ಮಾಡಿಸುವುದಕ್ಕೆ ದುರ್ಗಾದೇವಿಯರನ್ನು ಕಾರಣರ ನ್ನಾಗಿ ಮಾಡಿ, ಈ ಮೂವರಿಂದ ಕೂಡಿ ಆಯಾ ಜೀವರಿಂದ ಆಯಾ ಕರ್ಮ ಗಳನ್ನು ಮಾಡಿಸುತ್ತಾ ಕ್ರೀಡಿಸುತ್ತಿರುವನು ॥ ೭ ॥

ಇಂದ್ರಿಯಗಳಿಂಮಾಳ್ಪ ಕರ್ಮ
ದ್ವಂದ್ವಗಳ ತನಗರ್ಪಿಸಲು ಗೋ
ವಿಂದ ಪುಣ್ಯವಕೊಂಡು ಪಾಪವ ಭಸ್ಮವನೆಮಾಳ್ಪ ॥
ಇಂದಿರೇಶನ ಭಕ್ತಜನರನ
ನಿಂದಿಸುವರೊಳಗಿಪ್ಪ ಪುಣ್ಯವ
ತಂದು ತನ್ನವಗೀವ ಪಾಪಗಳವರಿಗುಣಿಸುವನು ॥

ಪದ್ಯಾರ್ಥ :- ಇಂದ್ರಿಯಗಳಿಂ=ಕಣ್ಣು ಕಿವಿ ಮೊದಲಾದ ಇಂದ್ರಿ ಯಗಳಿಂದ, ಮಾಳ್ಪ=ಮಾಡುವ, ಕರ್ಮದ್ವಂದ್ವಗಳ=ಪುಣ್ಯ ಪಾಪ ರೂಪ ಗಳಾದ ಎರಡು ವಿದ ಕರ್ಮಗಳನ್ನು, ತನಗರ್ಪಿಸಲು=ಪರಮಾತ್ಮನಿಗರ್ಪಿ ಸಲು, ಗೋವಿಂದ, ಪುಣ್ಯವಕೊಂಡು=ಪುಣ್ಯವನ್ನು ಸ್ವೀಕರಿಸಿ, ಪಾಪವ, ಭಸ್ಮವನೆ ಮಾಳ್ಪ=ಬೂದಿಯನ್ನಾಗಿ ಮಾಡುವನು. ಇಂದಿರೇಶನ=ಲಕ್ಷ್ಮೀ ಪತಿಯಾದ ಶ್ರೀಹರಿಯ, ಭಕ್ತಜನರನ=ಭಕ್ತರನ್ನು, ನಿಂದಿಸುವರೊಳಗೆ, ಇಪ್ಪ=ಇರುವ ಪುಣ್ಯವ=ಪುಣ್ಯವನ್ನು, ತನ್ನವಗೆ=ತನ್ನ ಭಕ್ತನಿಗೆ, ಈವ=ಕೊಡುವನು, ಪಾಪಗಳ=ಪಾಪಗಳನ್ನು, ಅವರಿಗೆ ಉಣಿಸು ವನು.

ತಾತ್ಪರ್ಯ :—ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಂದ ಮಾಡುವ ಪುಣ್ಯ ಪಾಪಕರ್ಮಗಳನ್ನು ಪರಮಾತ್ಮನಿಗರ್ಪಿಸಿದರೆ ಪರಮಾತ್ಮನು ಪುಣ್ಯ ವನ್ನು ಸ್ವೀಕರಿಸಿ ಪಾಪವನ್ನು ಭಸ್ಮಮಾಡುವನು. ಮತ್ತು, ತನ್ನ ದ್ವೇಷ ವನ್ನೂ ತನ್ನ ಭಕ್ತರ ದ್ವೇಷವನ್ನೂ ಮಾಡುವ ಪಾಪಿಗಳು ಏನಾದರೂ ಪುಣ್ಯಮಾಡಿದ್ದರೂ ಆ ಪುಣ್ಯವನ್ನು ತೆಗೆದು ತನ್ನ ಭಕ್ತರಿಗೆ ಹಂಚುವನು, ಪಾಪಗಳನ್ನು ಆ ಪಾಪಿಗಳೇ ಅನುಭವಿಸುವಂತೆ ಮಾಡುವನು. ಅಲ್ಲದೆ

ತನ್ನ ಭಕ್ತರು ಮಾಡುವ ಪಾಪಗಳನ್ನು, ತನ್ನಲ್ಲೂ ತನ್ನ ಭಕ್ತರಾದ ಬ್ರಹ್ಮಾದಿಗಳಲ್ಲೂ ದ್ವೇಷ ಮಾಡುವ ಪಾಪಿಗಳಿಗೆ ಕೊಡುವನು. ವಿಷ್ಣುರಹಸ್ಯದಲ್ಲಿ " ಗೃಹ್ಣಾತಿಚಹರಿಃಪುಣ್ಯಂ ಪಾಪಂ ಭಸ್ಮೀಕರೋತಿಚ || ಸ್ವಸ್ಯಚ ದ್ರೋಹಿಣಃ ಕಿಂಚಿತ್ ಪಾಪಾಂಶಂ ಪ್ರದದಾತಿಸಃ ||೧೩|| ತಥೈವ ನಿಜ ಭಕ್ತಾನಾಂ ಬ್ರಹ್ಮಾದೀನಾಂಚಯೇ ದ್ರುಹಃ || ತೇಭ್ಯ ಏವಹಿ ತತ್ಪಾಪ ವಿಭಾಗಂ ಪ್ರದದಾತ್ಯಜಃ ||೧೪|| ಪಾಪಕರ್ಮಣಿಯೇಪಿಸ್ಯುಃ ಸಹಾಯಾಃ ಪಾಪರೂಪಿಣಃ || ಯಥಾಪರಾಧಂ ತೇಭ್ಯೋಪಿ ಪಾಪಾನಾಂ ವಿಭಜತ್ಯಸೌ || ೧೫ || ದೈತ್ಯಭಾಗಗತಂ ಪುಣ್ಯಂ ತಥಾಭಾಗಂ ದದಾತಿಚ || ಪುಣ್ಯಕರ್ಮ ಸಹಾಯಾಯೇ ತೇಷಾಮಥಚಯೇ ನರಾಃ || ೧೬ || " ಎಂದು ಹೇಳಿರುವ ವಾಕ್ಯಗಳೆ ಇದಕ್ಕೆ ಆಧಾರವು || ೮ ||

ಹೊತ್ತುಹೊತ್ತಿಗೆ ಪಾಪಕರ್ಮ ಪ್ರ
ವರ್ತಕರ ನಿಂದಿಸದೆ ತನಗಿಂ
ದುತ್ತಮರ ಗುಣಕರ್ಮಗಳ ಕೊಂಡಾಡದಲೆ ಇಪ್ಪ ||
ಮರ್ತ್ಯರಿಗೆ ಗೋಬ್ರಾಹ್ಮಣ ಸ್ತ್ರೀ
ಹತ್ಯ ಮೊದಲಾದಖಿಳ ದೋಷಗ
ಳಿತ್ತಪನು ಸಂದೇಹಬಡಿಸಲ್ಲಖಿಳ ಶಾಸ್ತ್ರಮತ ||

ಪದ್ಯಾರ್ಥ :—ಹೊತ್ತುಹೊತ್ತಿಗೆ= ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಪಾಪಕರ್ಮ ಪ್ರವರ್ತಕರ= ಪಾಪಕರ್ಮಗಳನ್ನು ಮಾಡುತ್ತಿರುವ ದುಷ್ಟರನ್ನು, ನಿಂದಿಸದೆ, ತನಗಿಂದುತ್ತಮರ= ತನ್ನಕಿಂತಲೂ ಜ್ಞಾನದಲ್ಲೂ, ವಿದ್ಯೆಯಲ್ಲೂ, ಅಥವಾ ಭಗವದ್ಭಕ್ತಿಯಲ್ಲೂ ಉತ್ತಮರಾದವರ, ಗುಣಕರ್ಮಗಳ= ಗುಣಗಳನ್ನು ಅವರ ಚರಿತ್ರೆಗಳನ್ನು ಕೊಂಡಾಡದೆ, ಇಪ್ಪ= ಇರುವ, ಮರ್ತ್ಯರಿಗೆ= ಮನುಷ್ಯರಿಗೆ, ಗೋಬ್ರಾಹ್ಮಣಸ್ತ್ರೀಹತ್ಯಾ= ಗೋಹತ್ಯಾ, ಬ್ರಹ್ಮಹತ್ಯಾ ಸ್ತ್ರೀಹತ್ಯ ಮೊದಲಾದ ಅಖಿಳ ದೋಷಗಳ, ಇತ್ತಪನು= ಕೊಡುವನು. ಸಂದೇಹಬಡಿಸಲ್ಲ= ಈ ವಿಷಯದಲ್ಲಿ ಸಂದೇಹಪಡಬೇಕಾದುದು ಇಲ್ಲ. ಇದು ಅಖಿಳಶಾಸ್ತ್ರಮತ= ಇದು ಸಕಲಶಾಸ್ತ್ರ ಸಂಮತವಾದ ವಿಷಯವು

ತಾತ್ಪರ್ಯ :—ಪ್ರಾತಃಕಾಲಾದಿಗಳಲ್ಲಿ ಸಂಧ್ಯಾವಂದನೆಯು ಹೇಗೆ ನಿತ್ಯಕರ್ಮವೋ ಹಾಗೆ, ತಮೋಯೋಗ್ಯರಾದ ಭಗವದ್ವೇಷಿಗಳನ್ನು ದೂಷಿ

ಸುವುದೂ, ಭಕ್ತರನ್ನು ಕೊಂಡಾಡುವುದೂ ಕೂಡ ಕರ್ತವ್ಯ ಕರ್ಮವು. ಹಾಗೆ ಯಾವ ಪುರುಷನು ಮಾಡುವದಿಲ್ಲವೋ ಅವನಿಗೆ, ಸ್ತ್ರೀಹತ್ಯ, ಗೋಹತ್ಯ, ಬ್ರಹ್ಮಹತ್ಯ ಮೊದಲಾದ ದೋಷಗಳನ್ನು ಪರಮಾತ್ಮನು ಕೊಡುವನು. ಈ ವಿಷಯದಲ್ಲಿ ಸಂದೇಹವೆಪಡಬೇಕಾದುದಿಲ್ಲ. ಇದು ಶಾಸ್ತ್ರ ಸಮ್ಮತವು '' ಅಥಚಯೇ ನರಾಃ ॥ ೧೫ ॥ ದೈತ್ಯನಿಂದಾಂನಕುರ್ವಂತಿ ತೇಪಿತತ್ಫಲಭಾಗಿನಃ'ಎಂಬ ವಿಷ್ಣುರಹಸ್ಯ ವಾಕ್ಯವು ಇದಕ್ಕೆ ಆಧಾರವು॥೯

ತನ್ನ ಸ್ವಾತಂತ್ರ್ಯ ಗುಣಗಳ ಹಿ
ರಣ್ಯ ಗರ್ಭಾದ್ಯರಿಗೆ ಕಲಿಮುಖ
ದಾನವರ ಸಂತತಿಗೆ ಅವರಧಿಕಾರವನು ಸರಿಸಿ ॥
ಪುಣ್ಯಪಾಪಗಳೀವ ಬಹು ಕಾ
ರುಣ್ಯಸಾಗರ ನಲ್ಪಶಕ್ತಿಗ
ಳುಣ್ಣಲರಿಯದೆ ಇರಲು ಉಣಗಲಿಸಿದನು ಸರ್ವರಿಗೆ ॥

ಪದ್ಯಾರ್ಥ :—ತನ್ನ ಸ್ವಾತಂತ್ರ್ಯ ಗುಣಗಳ, ಹಿರಣ್ಯಗರ್ಭಾದ್ಯರಿಗೆ=ಬ್ರಹ್ಮದೇವರು ಮೊದಲಾದ ದೇವತೆಗಳಿಗೆ, ಕಲಿಮುಖ ದಾನವರ ಸಂತತಿಗೆ=ಕಲಿ ಮೊದಲಾದ ದೈತ್ಯರ ವಂಶದವರಿಗೆ, ಕೊಟ್ಟು, ಅವರಧಿಕಾರವನುಸರಿಸಿ=ಅವರವರ ಯೋಗ್ಯತೆಯನ್ನನುಸರಿಸಿ ಪುಣ್ಯಪಾಪಗಳೀವ =ಪುಣ್ಯಪಾಪಗಳ ಫಲವನ್ನು ಕೊಡುವನು. ಬಹು ಕಾರುಣ್ಯಸಾಗರನು= ಬಹು ಕರುಣಾಸಮುದ್ರನಾದ ಶ್ರೀಹರಿಯು, ಅಲ್ಪಶಕ್ತಿಗಳು=ಅತ್ಯಣು ರೂಪರಾಗಿ ಯಾವ ವಿಧವಾದ ಫಲವನ್ನಾದರೂ ಅನುಭವಿಸುವ ಶಕ್ತಿ ಇಲ್ಲದಿರುವ ಜೀವರು, ಉಣ್ಣಲರಿಯದೆ ಇರಲು=ಫಲವನ್ನು ಭೋಗಿಸಲು ಅರಿಯದಿರಲು, ಸರ್ವರಿಗೆ=ಸರ್ವಪ್ರಾಣಿಗಳಿಗೂ, ಉಣಗಲಿಸಿದನು=ಫಲವನ್ನು ಅನುಭವಿಸುವಂತೆ ಮಾಡಿದನು.

ತಾತ್ಪರ್ಯ :—ಮೇಲೆ ಹೇಳಿದಂತೆ ಬ್ರಹ್ಮಾದಿ ದೇವತೆಗಳಿಗೂ ಕಲಿ ಮೊದಲಾದ ದೈತ್ಯರಿಗೂ. ತನ್ನ ಸ್ವಾತಂತ್ರ್ಯ ಗುಣಗಳನ್ನು ಅವರವರ ಯೋಗ್ಯತಾನುಸಾರವಾಗಿ ಹಂಚಿಕೊಟ್ಟು ಆಶಕ್ತಿಯಿಂದ ಅವರವರು ಮಾಡುವ ಪುಣ್ಯಪಾಪಾದಿಗಳನ್ನು ಅನುಸರಿಸಿ ಅವರವರಿಗೆ ಯೋಗ್ಯತಾನುಸಾರವಾದ ಫಲಗಳನ್ನುಣಿಸುವನು. ಕರುಣಾ ಸಮುದ್ರನಾದ ಹರಿಯು, ಅತ್ಯಣುರೂಪಉಳ್ಳ ಅಲ್ಪಶಕ್ತಿಯುಳ್ಳ ಜೀವರಿಗೆ ಯಾವ ವಿಧವಾದ ಭೋಗೆ

ಶಕ್ತಿಯು ಇಲ್ಲದಿರಲು ಅಂತಹವರಿಗೆ ಶಕ್ತಿಯನ್ನು ಕೊಟ್ಟು ಫಲಗಳನ್ನು ಉಣುವಂತೆ ಮಾಡಿದನು. ||೧೦||

ಸತ್ಯವಿಕ್ರಮ ಪುಣ್ಯ ಪಾಪಸ
ಮಸ್ತರಿಗೆ ಕೊಡಲೋಸುಗದಿ ನಾ
ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ||
ಅತ್ಯಲ್ಪ ಪರಮಾಣುವಿಗೆ ಸಾ
ಮರ್ಥ್ಯವನು ತಾಕೊಟ್ಟು ಸ್ಥೂಲ ಪ
ದಾರ್ಥಗಳನುಂಡುಣಿಪ ಸರ್ವದ ಸರ್ವ ಜೀವರಿಗೆ ||

ಪದ್ಯಾರ್ಥ—ಸತ್ಯವಿಕ್ರಮ = ಅಮೋಘವಾದ ಪರಾಕ್ರಮವುಳ್ಳ ಶ್ರೀಹರಿಯು, (ವ್ಯರ್ಥವಾಗದ ಸಾಮರ್ಥ್ಯಉಳ್ಳವನು) ಸಮಸ್ತರಿಗೆ= ಸಕಲ ಪ್ರಾಣಿಗಳಿಗೂ, ಪುಣ್ಯಪಾಪ=ಪುಣ್ಯಪಾಪಗಳನ್ನು ಕೊಡಲೋಸುಗೆ =ಕೊಡುವುದಕ್ಕಾಗಿ ನಾಲ್ವತ್ತು ಭಾಗವ ಮಾಡಿ=ತನ್ನ ಸ್ವಾತಂತ್ರ್ಯ ವನ್ನು ೪೦ ಭಾಗಮಾಡಿ, ಲೇಶಾಂಶವನ್ನು ಅದರಲ್ಲಿ ಒಂದು ಭಾಗವನ್ನು, ಜನಕೆ=ಜೀವರಿಗೆ, ಈವ=ಕೊಡುವನು. ಅತ್ಯಲ್ಪ ಪರಮಾಣುವಿಗೆ= ಬಹು ಅಲ್ಪವಾದ ಪರಮಾಣು ಸ್ವರೂಪರಾದ ಜೀವರಿಗೆ, ಸಾಮರ್ಥ್ಯವನು, ತಾ ಕೊಟ್ಟು, ಸ್ಥೂಲ ಪದಾರ್ಥಗಳು=ಪುಣ್ಯಪಾಪಗಳಿಗೆ ಫಲರೂಪವಾದ ಭೋಗಗಳನ್ನು ಅಂದರೆ, ಭೋಜನಪಾನಾದಿಗಳು ಸ್ತ್ರೀಯಾದಿ ಭೋಗಗಳು ಇವೇ ಮೊದಲಾದ ಸ್ಥೂಲ ಪದಾರ್ಥಗಳ ಭೋಗಗಳನ್ನು, ಉಂಡು= ತಾನುಂಡು, ಸರ್ವದಾ, ಸರ್ವಜೀವರಿಗೆ, ಉಣಿಪ=ಉಣಿಸುವನು.

ತಾತ್ಪರ್ಯ:—ಸತ್ಯ ಪರಾಕ್ರಮನಾದ ಶ್ರೀಹರಿಯು, ಸಕಲ ಪ್ರಾಣಿ ಗಳಿಗೂ ಪುಣ್ಯಪಾಪದ ಫಲಗಳನ್ನು ಕೊಟ್ಟು ಅವರವರು ತಮ್ಮ ತಮ್ಮ ಯೋಗ್ಯತಾನುಸಾರ ಫಲಗಳನ್ನು ಅನುಭವಿಸುವದಕ್ಕಾಗಿ ತನ್ನ ಸ್ವಾತಂತ್ರ್ಯ ವನ್ನು ೪೦ ಭಾಗಗಳಾಗಿ ಮಾಡಿ ೧ ಭಾಗವನ್ನು ಜೀವರಿಗೆ ಕೊಟ್ಟಿರುವನು. ದತ್ತ ಸ್ವಾತಂತ್ರ್ಯ ಸಂಧಿಯಲ್ಲಿ ೪೦೦ ಭಾಗಗಳಲ್ಲಿ ೧೦ ಭಾಗಗಳೆಂದು ಹೇಳಿರುವರು ಈ ಸಂಧಿಯಲ್ಲಿ ೧೦ಕ್ಕೆ ೧ ರಂತೆ ೪೦ ರಲ್ಲಿ ೧ ಅಂಶವೆಂದು ಹೇಳಿರುವರು ೪೦೦ ರಲ್ಲಿ ೧೦ ಭಾಗವೆಂದರೂ, ೪೦ ರಲ್ಲಿ ೧ ಭಾಗ ವೆಂದರೂ ಅಭಿಪ್ರಾಯ ಒಂದೇ ಆಗಿರುತ್ತೆ. ವಿಷ್ಣುರಹಸ್ಯದಲ್ಲಿ “ ಏವಂ ಪುಣ್ಯಸ್ಯ ಪಾಪಸ್ಯ ಚತ್ವಾರಿಂಶತ್ತಮಂ ಲವಂ ಪ್ರಾಪ್ನೋತಿ ಜೀವಸ್ತೇನೈವ

ಪೂರ್ಣೋಯಂ ಭವತಿಧ್ರುವಂ || ಅಲ್ಪಶಕ್ತಿತ್ವತೋಲ್ಪಂಚ ಪುಣ್ಯಂ ಪಾಪಂ ಪ್ರಜಾಯತೆ || ೧೭ || '' ಜೀವರಿಗೆ ಇರುವ ೪೦ ರಲ್ಲಿ ೧ ಭಾಗ ಸ್ವಾತಂತ್ರ್ಯ ಶಕ್ತಿಯಿಂದ ಈ ದೇಹಗಳಲ್ಲಿ ತತ್ವಾಭಿಮಾನಿಗಳಾದ ದೇವ ದೈತ್ಯರು ಇದ್ದು ಮಾಡಿಸುವ ಪುಣ್ಯಪಾಪಾದಿಗಳಿಗೆ ಆ ದೇವ ದೈತ್ಯರುಗಳು ಭಾಗಿಗಳಾಗಿ ೪೦ ರಲ್ಲಿ ೧ ಅಂಶವನ್ನು ಮಾತ್ರ ಜೀವರು ಅನುಭವಿಸುವರು. ಜೀವರು ಅಷ್ಟಕ್ಕೆ ಪೂರ್ಣರಾಗುವರು. ಅಲ್ಪ ಶಕ್ತಿಯುಳ್ಳವರಾದುದ ರಿಂದ ಅಲ್ಪವಾದ ಪುಣ್ಯಪಾಪಗಳೇ ಇವರಿಗೆ ಪೂರ್ಣವೆನಿಸುವುದು ಎಂದು ಹೇಳಿರುವರು. ಈ ಪ್ರಕಾರ ಜೀವರು ಸ್ಥೂಲದೇಹದಿಂದ ಮಾಡುವ ಪುಣ್ಯ ಪಾಪ ಕರ್ಮಗಳಿಗೆ ಕರ್ಮ ಪ್ರೇರಕರಾದ ತತ್ವೇಶರಲ್ಲಿ ದೇವತೆಗಳು ಪುಣ್ಯಫಲವನ್ನು, ದೈತ್ಯರು ಪಾಪ ಫಲವನ್ನು ಅನುಭವಿಸುವರು. ಜೀವ ರಿಗೆ ೪೦ ರಲ್ಲಿ ೧ ಅಂಶ ಮಾತ್ರವೇ ಪ್ರಾಪ್ತಿಯಾಗುವುದು ಅಂದರೆ ಈ ಶರೀರದಿಂದ ನಾವು ಮಾಡುವ ಪುಣ್ಯ ಪಾಪಕ್ಕೆ ಫಲರೂಪವಾದ ಸುಖ ದುಃಖಗಳಲ್ಲಿ ೪೦ ರಲ್ಲಿ ೧ ಅಂಶ ಸುಖದುಃಖಗಳನ್ನು ಮಾತ್ರ ನಾವು ಅನು ಭವಿಸುತ್ತೇವೆಂದು ಭಾವ. ಹೀಗೆ ಅತ್ಯಂತ ಪರಮಾಣು ಸ್ವರೂಪರಾದ ಜೀವರಿಗೆ ಕರುಣಾ ಸಮುದ್ರನಾದ ಶ್ರೀಹರಿಯು ಸ್ಥೂಲ ದೇಹವನ್ನು ಕೊಟ್ಟು ಪುಣ್ಯಕ್ಕೂ ಪಾಪಕ್ಕೂ ಫಲರೂಪವಾದ ಸುಖದುಃಖಗಳನ್ನು ಸ್ಥೂಲ ಪದಾರ್ಥಗಳ ಸಂಬಂಧದಿಂದ ಅನುಭವಿಸುವಂತೇ ಮಾಡುವನು. ಜೀವನ ಪರಿಮಾಣವು ಕುದುರೆಯ ಬಾಲದ ಕೊನೆ ಕೂದಲನ್ನು ಸಹಸ್ರ ವಾಗಿ ಶೀಳಿ ಮತ್ತು ಅದನ್ನು ಸಹಸ್ರ ತುಣುಕು ಮಾಡಿದರೆ ಕಡೆಗೆ ಉಳಿ ಯುವಷ್ಟು ಸೂಕ್ಷ್ಮರೂಪವೆಂದು ಹೇಳಿರುವರು. ಇಂತಹಾ ಜೀವರಿಗೆ ಪುಣ್ಯ ಫಲವನ್ನು ಅನುಭವಿಸುವಾಗ ಮಿಷ್ಟಾನ್ನ ಭೋಜನ ಮಾಡುವುದು ಸ್ತ್ರೀ ಯಾದಿ ಭೋಗಗಳನ್ನನುಭವಿಸುವುದು ಇವೇ ಮೊದಲಾದ ಸ್ಥೂಲ ಪದಾರ್ಥಗಳ ಭೋಗವು ಆಗ ಬೇಕಾದರೆ ಜೀವರಿಗೆ ಸಾಧ್ಯವೆ? ಪರ ಮಾತ್ಮನು ಇಂತಹಾ ಶಕ್ತಿಯನ್ನೂ ಸ್ಥೂಲದೇಹವನ್ನೂ ಕೊಟ್ಟು, ತತ್ವೇಶ ರನ್ನು ಅಲ್ಲಿಟ್ಟು, ಅವರೊಳಗೆ ತಾನಿದ್ದು ಆ ಕರ್ಮಗಳನ್ನು ಮಾಡಿ, ಮಾ ಡಿಸಿ, ಫಲವನ್ನು ತಾನುಂಡು ಜೀವರಿಗುಣಿಸುವನು. ಆದ್ದರಿಂದಲೆ ಪರ ಮಾತ್ಮನು ಕರುಣಾಸಮುದ್ರನೆರಿದರು. || ೧೧ ||

ಸರ್ವಜೀವರೊಳಿದ್ದು ಪುಣ್ಯಪಾಪಕರ್ಮಗಳನ್ನು ಮಾಡಿ ಮಾಡಿಸಿ ಉಂಡುಣಿಪ ಎಂದು ಪೂರ್ವಪದ್ಯದಲ್ಲಿ ಹೇಳಿದ್ದರಿಂದ, ಈ ದೇಹ ಸಂಬಂಧ ದಿಂದ ಪರಮಾತ್ಮನಿಗೆ ಸುಖದುಃಖ ಲೇಪ ಉಂಟೋ ಏನೋ ಎಂದು ಶಂಕೆಬಂದೀತೆಂದು ಈ ಪದ್ಯದಿಂದ ಸದೃಷ್ಟಾಂತ್ತವಾಗಿ ಆ ಶಂಕೆಯನ್ನು ಪರಿಹರಿಸುತ್ತಾರೆ:—

ತಿಮಿರ ತರಣಿಗಳೇಕದೇಶದಿ
ಸಮನಿಸಿಪ್ಪವೆ ಎಂದಿಗಾದರು
ಭ್ರಮಣಛಳಿ ಬಿಸಲಂಜಕೆಗಳುಂಟೇನೋ ಪರ್ವತಕೆ ||
ಅಮಿತಜೀವರೊಳಿದ್ದು ಲಕುಮೀ
ರಮಣವ್ಯಾಪಾರಗಳನೆ ಮಾಡುವ
ಕಮಲಪತ್ರ ಸರೋವರಗಳೊಳಿಪ್ಪ ತೆರನಂತೆ ||೧೨ ||

ಪದ್ಯಾರ್ಥ :—ತಿಮಿರತರಣಿಗಳು=ತಿಮಿರ = ಕತ್ತಲೆಯು, ತರ ಣಿ= ಸೂರ್ಯನು ಇವೆರಡು ಏಕ ದೇಶದಿ=ಒಂದೇ ಸ್ಥಳದಲ್ಲಿ, ಸಮನಿಸಿ= ಸಮಾನವಾಗಿ, ಎಂದಿಗಾದರು, ಇಪ್ಪವೆ=ಇರುವವೆ ; ಭ್ರಮಣ=ಚಲಿಸು ವುದು=ಛಳಿ, ಬಿಸಿಲು ಇವುಗಳ, ಅಂಜಿಕೆಗಳು, ಪರ್ವತಕೆ, ಉಂಟೇನೊ ! ಅಮಿತ ಜೀವರೊಳು=ಮಿತಿಯಿಲ್ಲದ ಜೀವರೊಳಗೆ, ಕಮಲಪತ್ರ=ತಾ ವರೆ ಎಲೆಯು, ಸರೋವರಗಳೊಳು, ಇಪ್ಪತೆರನಂತೆ=ಹೇಗೆ ನಿರ್ಲಿಪ್ತವಾ ಗಿರುವುದೋ ಹಾಗೆ, ಇದ್ದು=ನಿರ್ಲಿಪ್ತನಾಗಿದ್ದು, ಲಕುಮೀರಮಣ= ಲಕ್ಷ್ಮೀಪತಿಯು, ವ್ಯಾಪಾರಗಳ=ಕರ್ಮಗಳನ್ನು, ಮಾಳ್ಪ=ಮಾಡು ವನು.

ತಾತ್ಪರ್ಯ:—ಸೂರ್ಯನೂ, ಕತ್ತಲೆಯು ಹೇಗೆ ಒಂದೇಸ್ಥಳದಲ್ಲಿ ಇರು ವುದು ಅಸಂಭವವೋ, ಹಾಗೆ ಸಚ್ಚಿದಾನಂದ ಸ್ವರೂಪನಾದ ಹರಿಗೆ ಇತರ ಪ್ರಾಣಿಗಳ ದೇಹಸಂಬಂಧದಿಂದ,ದುಃಖಲೇಪವು ಅಸಂಭವವು. ಪರ್ವತಕ್ಕೆ ಚಲನ ಭಯವಾಗಲಿ, ಬಿಸಿಲು ಛಳಿ ಮೊದಲಾದವು ಹೇಗೆ ಇಲ್ಲವೋ ಹಾಗೆ ಜಗದೀಶ್ವರನಾದ ಪರಮಾತ್ಮನಿಗೆ ಸುಖದುಃಖಾದಿ ಸಂಬಂಧಗಳು ಎಂದಿಗೂ ಇಲ್ಲ. ಮತ್ತೂ, ಎಲ್ಲರ ದೇಹದೊಳಗೂ ಇದ್ದು ಕರ್ಮಗ ಳನ್ನು ಮಾಡುತ್ತಿದ್ದರೂ ಕಮಲ ಪತ್ರದಂತೆ ನಿರ್ಲಿಪ್ತನಾಗಿ ಇರುವನು.

ಈ ಪದ್ಯದಲ್ಲಿ ಮೂರು ಉಪಮಾನಗಳನ್ನು ಕೊಟ್ಟಿರುವರು. ಸೂರ್ಯನು ಹೇಗೆ ಕತ್ತಲನ್ನು ಎಂದಿಗೂ ಕಾಣನೋ ಹಾಗೆ ಪರಮಾತ್ಮನು ಆನಂದ ಸ್ವರೂಪನಾದುದರಿಂದ ದುಃಖಲೇಶವನ್ನಾದರೂ ಎಂದಿಗೂ ಕಾಣನೆಂಬ ವಿಷಯದಲ್ಲಿ ಮೊದಲನೆಯ ಉಪಮಾನವು. ಛಳಿ ಬಿಸಿಲು ಮೊದಲಾದವು ಪರ್ವತವನ್ನು ದುಃಖಪಡಿಸಲು ಹೇಗೆ ಸಾಧ್ಯವಲ್ಲವೊ, ಹಾಗೆ ಜೀವ ಕೃತಪುಣ್ಯಪಾಪಗಳು ಪರಮಾತ್ಮನನ್ನು ಏನೇನೂ ಮಾಡದೆಂಬ ವಿಷಯ ದಲ್ಲಿ ಎರಡನೆಯ ಉಪಮಾನವು. ಕಮಲಪತ್ರವು ನೀರೊಳಗಿದ್ದರೂ ಹೇಗೆ ನೀರು ಅದರ ಮೇಲೆ ನಿಲ್ಲದೋ ಹಾಗೇ ಪರಮಾತ್ಮನು ದೇಹದೊಳಗಿ ದ್ದ್ದೂ ನಿರ್ಲಿಪ್ತನಾಗಿರುವನೆಂದು ಮೂರನೆಯ ಉಪಮಾನವು || ೧೩ ||

ಅಂಬುಜೋದ್ಭವ ಮುಖ್ಯಸುರಕಲಿ
ಶಂಬರಾದಿ ಸಮಸ್ತದೈತ್ಯಕ
ದಂಬಕನುದಿನ ಪುಣ್ಯಪಾಪ ವಿಭಾಗವನೆ ಮಾಡಿ ||
ಅಂಬುಧಿಯ ಜಲವನು ಮಹಾಘಟ
ಬಿಂಬರಿತು ತುಂಬುವ ತೆರದಿ ಪ್ರತಿ
ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲವೀವ ||

ಪದ್ಯಾರ್ಥ :—ಅಂಬುಜೋದ್ಭವಮುಖ್ಯಸುರ = ಬ್ರಹ್ಮದೇವರು ಮೊದಲಾದ ದೇವತೆಗಳು, ಕಲಿಶಂಬರಾದಿ ಸಮಸ್ತದೈತ್ಯಕದಂಬಕೆ=ಕಲಿ, ಮತ್ತು ಶಂಬರಾಸುರ ಮೊದಲಾದ ದೈತ್ಯ ಸಮೂಹಕ್ಕೆ ಅನುದಿನ=ಪ್ರತಿ ದಿವಸದಲ್ಲೂ, ಪುಣ್ಯಪಾಪವಿಭಾಗವನೆ ಮಾಡಿ, ಅಂಬುಧಿಯ ಜಲವನು= ಸಮುದ್ರೋದಕವನ್ನು, ಮಹಾಘಟ=ದೊಡ್ಡದಾದ ಕೊಡ ಮೊದಲಾದವು ಬಿಂಬರಿತು=ತನ್ನ ಆಕಾರಕ್ಕೆ ತಕ್ಕ ಹಾಗೆ, ತುಂಬುವ ತೆರದಿ=ತುಂಬು ವಂತೆ ಪ್ರತಿಬಿಂಬರೊಳು, ಪ್ರತಿಬಿಂಬರಾದ ಜೀವರೊಳಗೆ, ತಾನಿದ್ದು, ಯೋಗ್ಯತೆಯಂತೆ=ಅವರವರ ಯೋಗ್ಯಾತಾನುಸಾರವಾಗಿ, ಫಲವೀವ= ಫಲವನ್ನು ಕೊಡುವನು.

ತಾತ್ಪರ್ಯ:—ಬ್ರಹ್ಮದೇವರು ಮೊದಲಾದ ದೇವತೆಗಳಿಗೂ ಕಲಿ ಮೊದಲಾದ ದೈತ್ಯಸಮೂಹಕ್ಕೂ, ಸಮುದ್ರದಲ್ಲಿ ಯಥೇಷ್ಟವಾಗಿ ನೀರಿ

ದ್ದರೂ, ಕೊಡ ಚೊಂಬು ಮೊದಲಾದ ಪಾತ್ರೆಗಳಲ್ಲಿ ನೀರು ತುಂಬಿದರೆ ಆ ಪಾತ್ರೆಗಳ ಯೋಗ್ಯತಾನುಸಾರ ಹೇಗೆ ನೀರು ತುಂಬುವುದೋ ಹಾಗೆ ಪ್ರತಿದಿವಸಗಳಲ್ಲೂ ಜನರು ಮಾಡುವ ಪುಣ್ಯಪಾಪಗಳನ್ನು ಭಾಗಮಾಡಿ ಅವರವರ ಯೋಗ್ಯತಾನುಸಾರವಾಗಿ ಅವರವರಿಗೆ ಫಲವನ್ನು ಕೊಡುವನು. ಪಾತ್ರೆಗಳು ನೀರಿದ್ದಸ್ಥಳಕ್ಕೆ ತಾವಾಗಿ ಹೋಗಿ ನೀರು ತುಂಬಿಕೊಳ್ಳುವುದಿಲ್ಲ. ಒಬ್ಬ ಪುರುಷನು ಕೊಡ ಮೊದಲಾದುವುಗಳನ್ನು ತೆಗೆದುಕೊಂಡು ಸಮುದ್ರಕ್ಕೆ ಹೋಗಿ ಆ ಪಾತ್ರೆ ಹಿಡಿಯುವಷ್ಟು ನೀರು ತುಂಬುವನು. ಅದರಂತೆ ಪುಣ್ಯಪಾಪಗಳು ಸಮುದ್ರೋದಕದಂತೆ ಅಪಾರವಾಗಿರುವುದು. ಪರಮಾತ್ಮನು ಘಟದಂತಿರುವ ಜೀವರ ಯೋಗ್ಯತೆಯನ್ನರಿತು ಪುಣ್ಯಪಾಪ ಫಲವನ್ನು ಕೊಡುವನು. "ಸ್ವಯೋಗ್ಯೆ ಜಲಮಾದತ್ತೆ ಸಮುದ್ರಾದುದ್ಧೃತೋಘಟಃ" ತಾವತ್ವೈವಭವೇತ್ಪೂರ್ಣ ಏವಮತ್ರ ನಿದರ್ಶನಂ || ಎಂಬ ವಿಷ್ಣುರಹಸ್ಯವಾಕ್ಯವು ಇದಕ್ಕೆ ಆಧಾರವು. || ೧೩ ||

ಈ ಸಂಧಿಯಲ್ಲಿ ಹೇಳಿರುವ ವಿಷಯಗಳೆಲ್ಲವೂ ಕೇವಲ ಸೊಂತ ವಾಕ್ಯಗಳಲ್ಲ. ವಿಷ್ಣುರಹಸ್ಯದಲ್ಲಿ ಹೇಳಿರುವುದನ್ನು ಇಲ್ಲಿ ಉದಾಹರಿಸಿರುತ್ತೇವೆಂದು ಹೇಳುತ್ತಾರೆ:—

ಇನಿತು ವಿಷ್ಣುರಹಸ್ಯದೊಳು ಭೃಗು
ಮುನಿಪಇಂದ್ರದ್ಯುಮ್ನಗರುಪಿದ
ದನುಬುಧರುಕೇಳುವುದು ನಿತ್ಯದಿ ಮತ್ಸರವ ಬಿಟ್ಟು
ಅನುಚಿತೋಕ್ತಿಗಳಿದ್ದರೆಯು ಸರಿ
ಗಣನೆ ಮಾಡದಿರೆಂದು ವಿದ್ವ
ಜ್ಜನಕೆ ವಿಜ್ಞಾಪನೆಯಮಾಡುವೆ ವಿನಯಪೂರ್ವಕದಿ ||

ಪದ್ಯಾರ್ಥ:—ಇನಿತು=ಈ ಪ್ರಕಾರವಾಗಿ; ವಿಷ್ಣುರಹಸ್ಯದೊಳು, ಭೃಗುಮುನಿಪ=ಭೃಗು ಎಂಬ ಮುನೀಶ್ವರನು, ಇಂದ್ರದ್ಯುಮ್ನಗೆ=ಇಂದ್ರದ್ಯುಮ್ನ ರಾಜನಿಗೆ, ಅರುಪಿದದನು=ಹೇಳಿದುದನ್ನು, ಬುಧರು=ಜ್ಞಾನಿಗಳು, ನಿತ್ಯದಿ, ಮತ್ಸರವ ಬಿಟ್ಟು ಕೇಳುವದು ಅನುಚಿತೋಕ್ತಿಗಳು=ಇದರಲ್ಲಿ ಏನಾದರೂ ಅನುಚಿತವಾದ ವಾಕ್ಯಗಳು, ಇದ್ದರೆಯು

ಸರಿ, ಗಣನೆ ಮಾಡದಿರಿ=ಲಕ್ಷ್ಯದಲ್ಲಿಡಬೇಡಿರಿ ! ಎಂದು ವಿನಯಪೂರ್ವಕದಿ ವಿಜ್ಞಾಪನೆಯ ಮಾಡುವೆ

ತಾತ್ಪರ್ಯ:—ಈ ಸಂಧಿಯಲ್ಲಿ ನಾವು ಪೇಳಿದ ವಿಷಯುಗಳೆಲ್ಲವೂ, ವಿಷ್ಣುರಹಸ್ಯ ೩೦ ನೆಯ ಅಧ್ಯಾಯದಲ್ಲಿ ಭೃಗುಋಷಿಗಳು ಇಂದ್ರದ್ಯುಮ್ನ ರಾಜನಿಗೆ ಉಪದೇಶಮಾಡಿರುವ ವಿಷಯುಗಳೆ ಹೊರತು ನಮ್ಮ ಸ್ವೊಂತವಾಕ್ಯವಲ್ಲ. ಆದ್ದರಿಂದ ಜ್ಞಾನಿಗಳು ಹೊಟ್ಟೆಯು ಕಿಚ್ಚನ್ನು ಮಾಡದೆ ನಿತ್ಯದಲ್ಲೂ ಇದನ್ನು ಕೇಳತಕ್ಕದ್ದು. ನಾನು ಹೇಳಿದುದರಲ್ಲಿ ಏನಾದರೂ ಅನುಚಿತವಾದ ಮಾತುಗಳಿದ್ದರೂ ಭಗವನ್ಮಹಿಮೆಯೆಂಬ ಗುಣಗಳನ್ನು ತೆಗೆದುಕ್ಕೊಂಡು ದೋಷವನ್ನು ಲಕ್ಷೀಕರಿಸಬಾರದೆಂದು ವಿನಯ ಪೂರ್ವಕವಾಗಿ ವಿಜ್ಞಾಪನೆಮಾಡಿಕೊಂಡಿರುವೆನು ಎಂದು ದಾಸರಾಯರು ದೊಡ್ಡವರಲ್ಲಿ ವಿನೀತರಾಗಿರಬೇಕೆಂದು ಶಿಷ್ಯಶಿಕ್ಷಾರ್ಥವಾಗಿ ಹೇಳಿರುವರೇ ಹೊರತು ಈ ಗ್ರಂಥದಲ್ಲಿ ಅನುಚಿತವಾದ ವಾಕ್ಯಗಳಿವೆಯೆಂದರ್ಥವಲ್ಲ. “ ಇನಿತು ವಿಷ್ಣುರಹಸ್ಯದೊಳು ಭೃಗುಮುನಿಪ ಇಂದ್ರದ್ಯುಮ್ನಗರುಪಿದದನು ” ಎಂಬ ವಾಕ್ಯದಿಂದ, ವಿಷ್ಣುರಹಸ್ಯ ದೊಳಗಿನ ಭೃಗು ಋಷಿಯುು ಇಂದ್ರದ್ಯುಮ್ನನಿಗೆ ಹೇಳಿದ ವಿಷಯುವನ್ನು ಇಲ್ಲಿ ಹೇಳಿರುವವೆಂದು ದಾಸಾರ್ಯರು ಹೇಳಿರುವುದರಿಂದ ಇದಕ್ಕೆ ಮೂಲವುವಿಷ್ಣುರಹಸ್ಯವೆಂದು ಸ್ಪಷ್ಟವಾಗುವದು. ಆದರಂತೆ ವಿಷ್ಣುರಹಸ್ಯ ೩೦ ನೆಯ ಅಧ್ಯಾಯದಲ್ಲಿ ಭೃಗಋಷಿಗಳಿಗೂ ಇಂದ್ರದ್ಯುಮ್ನನಿಗೂ ಸಂವಾದ ರೂಪವಾಗಿ ಇವೇ ವಿಷಯುಗಳೇ ಹೇಳಿರುವರು. ಆ ಶ್ಲೋಕಗಳೇ ಈ ಸಂಧಿಯ ತಾತ್ಪರ್ಯದಲ್ಲಿ ಬರೆಯಲ್ಪಟ್ಟವೆ. ಆವರೆ ಒಬ್ಬ ವ್ಯಾಖ್ಯಾನಕರ್ತರು “ ಭೃಗುಮುನಿಪ ಇಂದ್ರದ್ಯುಮ್ನಗೆ ” ಎಂಬ ಸ್ಥಳದಲ್ಲಿ, ಭೃಗುಮುನಿಪ ಎಂದರೆ ಭೃಗುವಂಶಕ್ಕೆ ಅಧಿಪರಾದ ಪರಶುರಾಮದೇವರು ಇಂದ್ರದ್ಯುಮ್ನನಿಗೆ ಉಪದೇಶ ಮಾಡಿದರೆಂದು ಅರ್ಥಮಾಡಿರುತ್ತಾರೆ. ಮುನಿಪ ಶಬ್ದಕ್ಕೆ ಋಷೀಶ್ವರನೆಂದರ್ಥ, ಭೃಗುಋಷೀಶ್ವರರೆಂದು ಮಾಡಿದರೆ ವಿಷ್ಣುರಹಸ್ಯವಾಕ್ಯಕ್ಕೆ ಸರಿಹೋಗುತ್ತದೆ. ಪರಶುರಾಮದೇವರೆಂದು ಅರ್ಥಮಾಡಬೇಕಾದರೆ ಇದಕ್ಕಾಧಾರ ಹುಡುಕ ಬೇಕಾಗಿದೆ. ವಿಷ್ಣುರಹಸ್ಯ ೨೮ ನೆಯ ಅಧ್ಯಾಯ ಮೊದಲು ೩೪ ವರೆಗೂ ಭೃಗುಋಷಿಗಳಿಗೂ ಇಂದ್ರದ್ಯುಮ್ನರಾಜನಿಗೂ ಸಂವಾದ ಕಥೆಗಳು ಇರುವವು ಅದರಲ್ಲಿ ೩೦ ನೆಯ

ಅಧ್ಯಾಯದ ಕಥೆ ಇದು ವಿಷ್ಣುರಹಸ್ಯವನ್ನು ನೋಡಿ ಉಪದೇಶ ಮಾಡಿದವರು ಭೃಗು ಋಷಿಯೋ, ಪರಶುರಾಮರೊ ಎಂಬುವುದನ್ನು ಗೊತ್ತುಮಾಡಿ ಕೊಳ್ಳತಕ್ಕದ್ದು. ॥ ೧೪॥

ಸಂಧಿಯನ್ನು ಮುಗಿಸುತ್ತಾ ಭಗವಂತನನ್ನು ಸ್ತುತಿಸುತ್ತಾರೆ.

ವೀತಭಯ ವಿಶ್ವೇಶ ವಿಧಿಪಿತ
ಮಾತುಳಾಂತಕ ಮಧ್ವವಲ್ಲಭ
ಭೂತ ಭಾವನ ನಂತ ಭಾಸ್ಕರ ತೇಜ ಮಹರಾಜ ॥
ಗೌತಮನ ಮಡದಿಯನು ಕಾಯ್ದ
ನಾಥರಕ್ಷಕ ಗುರುತಮ ಜಗ
ನ್ನಾಥ ವಿಠ್ಠಲ ತನ್ನ ನಂಬಿದ ಭಕ್ತರನು ಪೊರೆವ ॥

ಪದ್ಯಾರ್ಥ:—ವೀತಭಯ=ಭಯರಹಿತನು; ವಿಶ್ವೇಶ=ಪ್ರಪಂಚಕ್ಕೆ ಅಧಿಪತಿಯು; ವಿಧಿಪಿತ=ಬ್ರಹ್ಮದೇವರ ತಂದೆಯು, ಮಾತುಳಾಂತಕ=ಸೋದರಮಾವನಾದ ಕಂಸನನ್ನು ಕೊಂದವನು; ಮಧ್ವವಲ್ಲಭ=ಮಧ್ವಾಚಾರ್ಯರಿಗೆ ಅತ್ಯಂತ ಪ್ರೀತಿವಿಷಯನು; ಭೂತಭಾವನ=ಪ್ರಾಣಿಗಳ ರಕ್ಷಕನು, ಅನಂತಭಾಸ್ಕರತೇಜ=ಅನಂತಸೂರ್ಯಪ್ರಕಾಶವುಳ್ಳವನು, ಮಹರಾಜ=ಬ್ರಹ್ಮಾದಿದೇವತೆ ಮೊದಲಾದ ಸಕಲ ಪ್ರಪಂಚಕ್ಕೂ ಅರಸನು, ಗೌತಮನ ಮಡದಿಯನು ಕಾಯ್ದ=ಗೌತಮರ ಪತ್ನಿಯಾದ ಅಹಲ್ಯೆಯನ್ನು ರಕ್ಷಿಸಿದ (ಇಂದ್ರದೇವರ ಸಂಗದಿಂದ ಪತಿಯಾದ ಗೌತಮರ ಶಾಪಕ್ಕೊಳಗಾಗಿ ಕಲ್ಲಾಗಿದ್ದವಳನ್ನು ರಾಮಾವತಾರದಲ್ಲಿ ತನ್ನ ಪಾದಸ್ಪರ್ಶದಿಂದ ಸ್ತ್ರೀಯನ್ನಾಗಿ ಮಾಡಿ ರಕ್ಷಿಸಿದ) ಅನಾಥರಕ್ಷಕನು, ಗುರುತಮ=ಮುಖ್ಯ ಗುರುಗಳು, ವಾಯುದೇವರು ಅವರಿಗೂ ಸಹ ಗುರುವಾದುದರಿಂದ ಗುರುತಮನೆಂದರು, ಜಗನ್ನಾಥ ವಿಠ್ಠಲ=ಇಂತಹ ನಮ್ಮ ಅಂಕಿತಮೂರ್ತಿಯಾದ ಜಗನ್ನಾಥ ವಿಠ್ಠಲನಾಮಕನಾದ ಶ್ರೀಹರಿಯು ತನ್ನ ನಂಬಿದ ಭಕ್ತರನು, ಪೊರೆವ=ರಕ್ಷಿಸುವನು.

(ತಾತ್ಪರ್ಯವು ಸ್ಪಷ್ಟವಾಗಿರುವುದು)

ಇಂತೀ ಹರಿಕಥಾಮೃತಸಾರ ಭಾವಪ್ರಕಾಶಿಕೆಯಲ್ಲಿ ಸ್ವಗತಸ್ವಾತಂತ್ರ್ಯವೆಂಬ ೧೭ನಯ ಸಂಧಿಯು ಸಮಾಪ್ತವಾದುದು.

ಶ್ರೀ ಕೃಷ್ಣಾರ್ಪಣಮಸ್ತು.

# ಹರಿಕಥಾಮೃತಸಾರ

## ಕ್ರೀಡಾವಿಲಾಸ ಸಂಧಿಎಂಬ ೧೮ನೆಯದು ಪ್ರಾರಂಭ

ಹಿಂದಿನ ದತ್ತ ಸ್ವಾತಂತ್ರ್ಯ, ಸ್ವಗತಸ್ವಾತಂತ್ರ್ಯವೆಂಬ ಎರಡು ಸಂಧಿಗಳಲ್ಲಿ ಸರ್ವಸ್ವತಂತ್ರನಾದ ಪರಮಾತ್ಮನು ತನ್ನ ಸ್ವಾತಂತ್ರ್ಯವನ್ನು ಭಾಗಿಸಿ ಬ್ರಹ್ಮಾದಿಗಳಿಗೆ ಕೊಟ್ಟು ತಾನು ಒಳಗಿದ್ದು ಕಾರ್ಯಗಳನ್ನು ಮಾಡಿಸಿ ಅವರವರ ಯೋಗ್ಯತಾನುಸಾರ ಫಲಕೊಡುತ್ತಾನೆಂದು ಹೇಳಿದ್ದರೂ, ಸ್ವತಂತ್ರನು ಪರಮಾತ್ಮನು; ಪರತಂತ್ರನು ಜೀವನೆಂಬುವ ಜ್ಞಾನವು ಮುಕ್ತಿಗೆ ಅತ್ಯಾವಶ್ಯಕವಾದುದರಿಂದ ವಿಷ್ಣುರಹಸ್ಯದ ೨೧ ಮತ್ತು ೩೦ ನೆಯ ಅಧ್ಯಾಯಗಳಲ್ಲಿ ವಿಶೇಷವಾಗಿಯೂ, ಮತ್ತು ಕೆಲವು ಅಧ್ಯಾಯ ಗಳಲ್ಲಿ ಸ್ವಲ್ಪ.ಸ್ವಲ್ಪವಾಗಿಯೂ ಹೇಳಿರುವರು. ‘ಪುನಃ ಪುನಃ ಕಥಾಂ ಬ್ರೂಯುಃ ಅಭ್ಯಾಸಾದುತ್ತಮಂಫಲಂ’’ ಎಂಬ ವಾಕ್ಯಾನುಸಾರವಾಗಿ ಪುನಃ ಪುನಃ ಕಥೆಯನ್ನು ಹೇಳುವುದರಿಂದ ಮನನವಾಗಿ ಫಲಾಧಿಕ್ಯವಾಗುವುದೆಂ ಬುವುದೇ ಅದರ ಉದ್ದೇಶ. ಅದೇ ಪ್ರಕಾರ ದಾಸಾರ್ಯರು ವಿಷ್ಣುರಹಸ್ಯಾ ದಿಗಳ ಆಧಾರದಮೇಲೆ ಹಿಂದೆ ಎರಡು ಸಂಧಿಗಳಲ್ಲಿ ಹೇಳಿದ ಭಾಗವನ್ನೇ ಈ ಸಂಧಿಯಲ್ಲಿ ವಿಸ್ತರಿಸುತ್ತಾರೆ; ‘‘ಆವೃತ್ತಿರಸಕೃದುಪದೇಶಾತ್’’ ಎಂಬ ಸೂತ್ರವಾಕ್ಯದಂತೆ ೨, ೩ ಆವೃತ್ತಿಗಳಲ್ಲಿ ಉಪದೇಶಮಾಡುವ ಶಿಷ್ಟಾಚಾ ರವು ಇರುವುದರಿಂದಲೂ, ಇದು ಉಪದೇಶಯೋಗ್ಯವಾದುದರಿಂದಲೂ, ಈ ವಿಷಯವನ್ನು ಮೂರು ಸಂಧಿಗಳಲ್ಲಿ ಹೇಳಿರುತ್ತಾರೆಂದು ತಿಳಿಯಬೇಕು.

ವಿಶೇಷಸೂಚನೆ:—ಸಂಧಿಗಳ ಕ್ರಮಗಳಲ್ಲಿ, ಕಮಲಾಪತಿದಾಸರ ವರು ಮಾಡಿರುವವ್ಯಾಖ್ಯಾನ, ಬಾಲಬೋಧಾಕ್ಷರದಲ್ಲಿ ಛಾಪಿಸಿರುವ ಪುಸ್ತ ಕದಲ್ಲಿ ೧೭ನೆಯದು ದತ್ತಸ್ವಾತಂತ್ರ್ಯ ಸಂಧಿಯನ್ನಾಗಿಯು; ೨೯ ಸ್ವಗತ ಸ್ವಾತಂತ್ರ್ಯಸಂಧಿ; ೨೬ ಕ್ರೀಡಾವಿಲಾಸ(ಸರ್ವಸ್ವಾತಂತ್ರ್ಯಸಂಧಿ) ಸಂಧಿ ಯನ್ನಾಗಿ ತೆಗೆದುಕ್ಕೊಂಡಿರುವರು. ಹಾಗೆ ಮಾಡಿರುವದರಿಂದ ಗುಣವೇ ನೆಂದರೆ, ಒಂದು ಸಲ ಹೇಳಿದ ದತ್ತಸ್ವಾತಂತ್ರ್ಯ ವಿಷಯವನ್ನು ಮತ್ತೊಂ

ದುಸಲ ಹೇಳಬೇಕಾದರೆ ೧೦ ಸಂಧಿಯನ್ನು ಬಿಟ್ಟು ಮತ್ತೊಂದುಸಲ ಹೇಳುವದರಿಂದ ೧೦ ಸಂಧಿಗೆ ಹಿಂದೆ ಓದಿದ ಭಾಗವು ನೆನಪಿಗೆ ಬಾರದೆ ಹೋಗುವುದೆಂದು ಮನನಕ್ಕಾಗಿ ಮತ್ತೊಂದುಸಲ ಮತ್ತು ಸ್ವಲ್ಪ ಸಂಧಿಗಳಾದ ಮೇಲೆ ಮತ್ತೊಂದುಸಲ ಹೇಳುವ ಶಿಷ್ಟಾಚಾರವಿರುವುದು. ವಿಷ್ಣುರಹಸ್ಯದಲ್ಲಿ ಮೂರು ಸ್ಥಳಗಳಲ್ಲಿ ಹೇಳಿರುವರು. ಆದರೆ ಶೇರಿದ ಹಾಗೆ ಒಂದೇ ಸ್ಥಳದಲ್ಲಿ ಹೇಳಲಿಲ್ಲ, ೧೨ನೆಯ ಅಧ್ಯಾಯದಲ್ಲಿ ಒಂದುಸಲ, ೨೧ನೆಯ ಅಧ್ಯಾಯದಲ್ಲಿ ಮತ್ತೂ ೩೦ನೆಯ ಅಧ್ಯಾಯದಲ್ಲಿ ದತ್ತಸ್ವಾತಂತ್ರ್ಯ ವಿಷಯುವನ್ನು ಹೇಳಿರುವರು. ಭಾಗವತಭಾರತಾದಿಗಳಲ್ಲೂ ಸಹ ಒಂದೇ ಕಥೆಯನ್ನು ೩-೪ ಸಲ ಹೇಳಿರುವರು. ಭಾಗವತದಲ್ಲಿ ಸೃಷ್ಟಿ ಪ್ರಕರಣವನ್ನು ಒಂದೇ ರೀತಿಯಾಗಿ ದ್ವಿತೀಯ ಸ್ಕಂಧದಲ್ಲಿ ಒಂದು ಸಲ ತೃತೀಯಸ್ಕಂಧದಲ್ಲಿ ಒಂದು ಸಲ ಹೇಳಿರುವರು. ವರ್ಣಾಶ್ರಮಧರ್ಮವನ್ನು ಸಪ್ತಮ ಸ್ಕಂಧದಲ್ಲಿ ಒಂದು ಸಲ, ಏಕಾದಶಸ್ಕಂಧದಲ್ಲಿ ಒಂದು ಸಲ ಹೇಳಿರುವರು ಇದರಂತೆ ಭಾರತ, ರಾಮಾಯಣ ಮೊದಲಾದ ಎಲ್ಲಾ ಗ್ರಂಥಗಳಲ್ಲೂ ಇಂತಹ ಪ್ರಸಕ್ತಿ ಇರುವುದು. ಒಂದು ಕಥೆಯನ್ನು ಒಂದೇ ಸ್ಥಳದಲ್ಲಿ ಎರಡು ಮೂರು ಸಲ ಮಾತ್ರ ಯಾವ ಗ್ರಂಥದಲ್ಲೂ ಹೇಳಿದುದಾಗಿ ಕಾಣಲಿಲ್ಲ. ಅದೇ ಪ್ರಕಾರ ದಾಸಾರ್ಯರೂ ಸಹ ೧೭-೨೬-೨೯ ಸಂಧಿಗಳಲ್ಲಿ ದತ್ತಸ್ವಾತಂತ್ರ್ಯ ವಿಷಯುವನ್ನು ಹೇಳಿದರೆಂದರೆ ಶಿಷ್ಟಾಚಾರಕ್ಕೆ ಸರಿ ಹೋಗುತ್ತದೆ. ಶ್ರೀಮತ್ಸಂಕರ್ಷಣ ಒಡೆಯರವರ ವ್ಯಾಖ್ಯಾನದ ಛಾಪಾ ಪುಸ್ತಕದ ರೀತ್ಯಾ ೧೬-೧೭-೧೮ ಈ ಮೂರು ಸಂಧಿಗಳಲ್ಲಿ ಸ್ವಾತಾತ್ರ್ಯ ವಿಷಯುಗಳನ್ನು ಹೇಳಿರುವುದರಿಂದ ಹೇಳಿದುದನ್ನೇ ಮತ್ತೂ ಹೇಳಿದುದಾಗಿ ಪುನರುಕ್ತಿಯಾಗಿ ಕಾಣುವುದು ಈಗ ನಾವು ಛಾಪಿಸುವ ಪುಸ್ತಕದಲ್ಲಿ ಶ್ರೀ ಸಂಕರ್ಷಣ ಒಡೆಯರ ವ್ಯಾಖ್ಯಾನ ಪುಸ್ತಕವನ್ನನುಸರಿಸಿ ಸಂಧಿ ಕ್ರಮ ಛಾಪಿಸಿರುತ್ತೇವೆ. ಸುಜ್ಞರು ಉಚಿತದಂತೆ ಗ್ರಹಣ ಮಾಡತಕ್ಕದ್ದು.

ಶ್ರೀನಿವಾಸನ ಚರಿತೆಗಳ ಪರ
ಮಾನುರಾಗದಿ ಬೆಸಗೊಳಲು ಮುನಿ
ಶೌನಕಾದ್ಯರಿಗರುಪಿದನು ಸೂತಾರ್ಕ್ಯದಯದಿಂದ ||

ಪದ್ಯಾರ್ಥ:—ಶ್ರೀನಿವಾಸನ=ಲಕ್ಷ್ಮೀದೇವಿಯರನ್ನು ವಕ್ಷಸ್ಥಳದಲ್ಲಿಟ್ಟುಕೊಂಡಿರುವ ಪರಮಾತ್ಮನ, ಚರಿತೆಗಳ, ಪರಮಾನುರಾಗದಿ=ಪರಮ ಭಕ್ತಿಯಿಂದ, ಬೆಸಗೊಳಲು=ಪೇಳಬೇಕೆಂದು ಕೇಳಿಕೊಳ್ಳಲು, ಸೂತಾರ್ಯ=ಸೂತಪುರಾಣೀಕರು, ದಯದಿಂದ, ಶೌನಕಾದ್ಯರಿಗೆ=ಶೌನಕಾದಿ ಋಷಿಗಳಿಗೆ ಅರುಪಿದನು=ಹೇಳಿರುವರು.

ತಾತ್ಪರ್ಯ:—ಶೌನಕಾದಿ ಋಷಿಗಳಿಗೆ ಸೂತಪುರಾಣೀಕರು ಹೇಳಿರುವ ವಿಷ್ಣುರಹಸ್ಯದಲ್ಲಿರುವ ವಿಷಯಗಳನ್ನೇ ಈ ಸಂಧಿಯಲ್ಲಿ ಹೇಳಿರುತ್ತೇವೆಂದು ಈ ಅರ್ಧಪದ್ಯದಲ್ಲಿ ಸೂಚಿಸಿರುತ್ತಾರೆ. ಆದ್ದರಿಂದ ಈ ಪದ್ಯಕ್ಕೆ ಸಂಧಿ ಸೂಚನೆಯೆಂದು ಹೆಸರು.

"ಯೇನ ವಿನಾತೃಣಮಪಿನಚಲತಿ" ಎಂಬಂತೆ ಪರಮಾತ್ಮನನ್ನು ಹೊರತು ಒಂದು ತೃಣವು ಅಳಗಾಡುವುದಿಲ್ಲವೆಂದು ತಿಳಿಸುತ್ತಾರೆ.

ಪಚನ ಭಕ್ಷಣ ಗಮನ ಭೋಜನ
ವಚನ ಮೈಥುನ ಶಯನ ವೀಕ್ಷಣ
ಅಚಲನಾಚಲನ ಪ್ರಯತ್ನವು ಸಾಧ್ಯವೆ ಜನಕೆ ||
ಶುಚಿಸದನ ದಯದಿಂದೆ ಜೀವರ
ನಿಚಯದೊಳು ತಾನಿಂತು ಮಾಡುವ
ಉಚಿತನೋಚಿತ ಕರ್ಮಗಳನೆಂದರಿದು ಕೊಂಡಾಡು||

ಪದ್ಯಾರ್ಥ:—ಪಚನ=ಪಕ್ವಮಾಡುವುದು, ಭಕ್ಷಣ=ತಿನ್ನುವುದು, ಗಮನ=ಓಡಾಡುವುದು, ಭೋಜನ=ಉಣ್ಣುವುದು, ವಚನ=ಮಾತಾಡುವದು, ಮೈಥುನ, ಶಯನ=ಮಲಗುವದು, ವೀಕ್ಷಣ =ನೋಡುವುದು, ಅಚಲನ=ಚಲಿಸದೆ ಇರುವುದು, ಚಲನ=ಚಲಿಸುವುದು ಇವುಗಳನ್ನು ನಡಿಸುವುದು, ಜನಕೆ=ಜನಗಳಿಗೆ, ಸಾಧ್ಯವೆ! ಇಲ್ಲ. ಶುಚಿಸದನ =ಮುಖ್ಯಪ್ರಾಣಾಂತರ್ಯಾಮಿಯಾದ, ಶ್ರೀ ಪರಮಾತ್ಮನು ದಯದಿಂದ, ಜೀವರನಿಚಯದೊಳು=ಜೀವಸಂಘದೊಳು, ತಾನಿಂತು, ಉಚಿತ =ಮಾಡಬೇಕಾದ ಕರ್ಮಗಳು, ಅನುಚಿತ=ಮಾಡಬಾರದ ಕರ್ಮಗಳು, ಮಾಡುವ = ಮಾಡುವನು, ಎಂದರಿದು=ಹೀಗೆ ತಿಳಿದು ಕೊಂಡಾಡು =ಸ್ತುತಿಸು. || ೧ ||

ತಾತ್ಪರ್ಯ:—ಪರಮಾತ್ಮನ ಅನುಗ್ರಹ ಹೊರತು ಜೀವನಿಗೆ ಒಂದು ತೃಣವನ್ನಾದರೂ ಅಲ್ಲಾಡಿಸುವ ಶಕ್ತಿಯು ಇರುವದಿಲ್ಲ ವಿಷ್ಣುರಹಸ್ಯ ೨೧ ನೆಯ ಅಧ್ಯಾಯದಲ್ಲಿ ಪಚನಂಗಮನಂ ಭಕ್ಷ್ಯಂ ಭುಕ್ತಿರಿತ್ಯಾದಿ ಕರ್ಮಸು ‖ ೧೭ ‖ ದೃಶ್ಯತೇಯತ್ನಸಾಧ್ಯತ್ವಂ ದೈವಂ ತತ್ರಾಪಿ ಚಿಂತಯೇತ್ ‖ ಪದಾರ್ಥಗಳನ್ನು ಪಕ್ವಮಾಡುವುದು, ಓಡಾಡುವುದು ; ತಿನ್ನುವುದು ; ಭೋಗಿಸುವುದು ಮೊದಲಾದ ಕರ್ಮಗಳಲ್ಲಿ ಪ್ರಾಣಿಗಳ ಪ್ರಯತ್ನವು ಕಾಣುವುದು. ಆದರೆ ಅದು ನಿಜವಲ್ಲ. ಅವೆಲ್ಲವೂ ದೈವ ಪ್ರೇರಣೆಯಿಂದಲೆ ಆಗುವವೆಂದು ತಿಳಿಯಬೇಕು. ಎಂದು ಹೇಳಿರುವರು. ಮತ್ತು ೧೨ ನೆಯ ಅಧ್ಯಾಯದಲ್ಲಿ “ ಸರ್ವವಸ್ತುಷು ಯಾಶಕ್ತಿಃ ಸಾಮದೀಯೈವನಾನ್ಯಥಾ ‖ ಮಯ್ಯೈವದತ್ತಂ ಸ್ವಾತಂತ್ರ್ಯಂ ಕೇವಲೇಷ್ವಪಿಸರ್ವಸು ‖ ತಾವನ್ಮಾತ್ರೇಣ ಸಂಮುಗ್ಧಾಃ ಸ್ವಾತಂತ್ರ್ಯಂ ಮನ್ಯತೇನಿಜಂ ‖ ೨೨‖ ಸ್ವಾತಂತ್ರ್ಯೇಪಹತೇಪಶ್ಚಾ ಜ್ಞಾನಂತಿಪರತಂತ್ರ್ಯತಾಂ ‖ ಜ್ಞಾನಿನೋಪಿಹಿಮನ್ಯಂತೆ ಮನ್ಮಾಯಾ ಮುಷ್ಟಚೇತನಾಃ ‖೨೩‖ ಸ್ವಾತಂತ್ರ್ಯಂಸ್ವಶರೀರಾದೌಕಿ ಮುಜ್ಞಾನವಿವರ್ಜಿತಾಃ ‖ ತ್ವಾಮಾರಭ್ಯ ತೃಣಂ ಯಾವಜ್ಜಗತ್ಸ್ಥಾವರ ಜಂಗಮಂ ‖ ೨೪ ‖ ಮಮಶಕ್ತಿಂವಿನಾ ಬ್ರಹ್ಮಸ್ಪಂದಿತುಂ ನೈವಶಕ್ಯತೆ ” (ಬ್ರಹ್ಮದೇವರನ್ನು ಕುರಿತು ಹಯಗ್ರೀವ ದೇವರ ಉಪದೇಶ) ಎಲೈ ಬ್ರಹ್ಮ ! ಸರ್ವಪ್ರಾಣಿಗಳಲ್ಲಿ ಯಾವ ಶಕ್ತಿಗಳು ಇರುವವೋ ಅವೆಲ್ಲವೂ ನನ್ನ ಶಕ್ತಿಯೆಂದು ತಿಳಿ ! ಯಾವ ಕೆವಸಕ್ಕೂ ಕೈಲಾಗದ ಸಾಮಾನ್ಯಪ್ರಾಣಿಗಳಿಗೂ ಕೂಡ ನಾನು ಸ್ವಾತಂತ್ರ್ಯವನ್ನು ಕೊಟ್ಟು ಕರ್ಮಗಳನ್ನು ಮಾಡಿಸುವೆನು. ಜನರು ಅದನ್ನರಿಯದೆ ಮೋಹದಿಂದ ತಾವೇ ಸ್ವತಂತ್ರವಾಗಿ ಕಾರ್ಯಗಳನ್ನು ಮಾಡುವುದಾಗಿ ತಿಳಿದುಕೊಳ್ಳುವರು. ತಾವು ಸ್ವತಂತ್ರವಾಗಿ ಕಾರ್ಯಕ್ಕೆ ಪ್ರಾರಂಭಿಸಿ ಕಾರ್ಯವು ಸಾಗದಿದ್ದರೆ ಆಗ ತಾವು ಪರತಂತ್ರರೆಂದು ತಿಳಿದು ಕೊಳ್ಳುತ್ತಾರೆ ಎಂತಹಾ ಜ್ಞಾನಿಗಳೂ ಕೂಡ ಕಾರ್ಯಗಳನ್ನು ಮಾಡುವಾಗ ನನ್ನ ಮಾಯೆಯಿಂದ ಮೋಹಿತರಾಗಿ, ತಾವು ಸ್ವತಂತ್ರ್ಯರೆಂದು ತಿಳಿಯುತ್ತಾರೆ. ಹೀಗಿರಲು ಇನ್ನು ಅಜ್ಞಾನಿಗಳ ಪಾಡೇನು ! ಬ್ರಹ್ಮ ! ನೀನು ಮೊದಲು ತೃಣಜೀವರ ಪರ್ಯಂತ ಸ್ಥಾವರಜಂಗಮಾತ್ಮಕವಾದ ಈ ಜಗತ್ತಿಗೆ ನನ್ನ ಶಕ್ತಿ ಹೊರತು ಚಲಿಸುವ ಶಕ್ತಿಯೂ ಕೂಡ ಇಲ್ಲವೆಂದು ತಿಳಿ ! ಎಂದು

ಹೇಳಿರುವರು. ಆ ಅಭಿಪ್ರಾಯವನ್ನೇ ಈ ಪದ್ಯದಲ್ಲಿ ಹೇಳುತ್ತಾರೆ. ಪದಾರ್ಥಗಳನ್ನು ಪಕ್ವಮಾಡುವಾಗ, ಅಗಿದು ತಿನ್ನುವಾಗ, ಓಡಾಡುವಾಗ, ಭೋಜನಮಾಡುವಾಗ, ಮಾತಾಡುವಾಗ, ಸ್ತ್ರೀಯಾದಿ ಭೋಗಗಳನ್ನನುಭವಿಸುವಾಗ, ನೋಡುವಾಗ ಚಲನಾ ಚಲನಾದಿ ಒಂದೊಂದು ವಿಷಯದಲ್ಲೂ ನಾನು ತಿಂದೆನು ; ನಾನು ನಡೆದೆನು ; ನಾನು ಮಲಗಿದೆನು ಎಂದು ಸ್ವತಂತ್ರ ಬುದ್ಧಿಯನ್ನು ಜನರು ಮಾಡುತ್ತಾರೆ. ಅಲ್ಪರಾದ ಜೀವರಿಗೆ ಈ ಪ್ರಯತ್ನವು ಸಾಧ್ಯವೆ ! ಪರಮಾತ್ಮನಾದ ನಾನು ತಮ್ಮೊಳಗಿದ್ದು ಮಾಡುವುದನ್ನರಿಯದೆ ತಾವೇ ಮಾಡುತ್ತೇವೆಂದು ಭ್ರಾಂತಿಯಿಂದ ತಿಳಿದುಕ್ಕೊಳ್ಳುವರು ಶುಚಿಸದನನೆಂದರೆ ಶುಚಿಯೆಂದು ವಾಯುದೇವರಿಗೆ ಹೆಸರು ಅವರೇ ಮನೆಯೆಂದರೆ, ವಾಯುದೇವರ ಅಂತರ್ಯಾಮಿಯಾಗಿರುವನೆಂಬ ತಾತ್ಪರ್ಯ ಇಂತಹ ಪರಮಾತ್ಮನು ಕರುಣದಿಂದ ಎಲ್ಲರಲ್ಲೂ ಇದ್ದು ಸಕಲ ಪುಣ್ಯಪಾಪಾದಿ ಕರ್ಮಗಳನ್ನು ಮಾಡಿ ಮಾಡಿಸುತ್ತಾನೆಂದು ತಿಳಿದು ಪರಮಾತ್ಮನನ್ನು ಸ್ತುತಿಸಬೇಕೆಂದು ತಾತ್ಪರ್ಯ. ॥ ೧ ॥

ವಿಷ್ಟರಶ್ರವ ದೇಹದೊಳಗಪ್ರ
ವಿಷ್ಟನಾಗಿ ನಿರಂತರದಿ ಬಹು
ಚೇಷ್ಟೆಗಳ ಮಾಡುತಿರೆ ಕಂಡು ಸಜೀವಿ ಎನುತಿಹರು ॥
ಹೃಷ್ಟರಾಗುವರವರ ನೋಡಿ ಕ
ನಿಷ್ಟರೆಲ್ಲರು ಸೇವೆ ಮಾಳ್ಪರು
ಬಿಟ್ಟಕ್ಷಣದಲಿ ಕುಣಪನೆಂದರಿದುಪೇಕ್ಷಿಪರು ॥೧೨॥

ಪದ್ಯಾರ್ಥ: – ವಿಷ್ಟರಶ್ರವ = ವಿಷ್ಟರ = ವ್ಯಾಪ್ತವಾದ, ಶ್ರವ = ಕೀರ್ತಿಯುಳ್ಳ, ಶ್ರೀಹರಿಯು, ದೇಹದೊಳಗೆ, ಪ್ರವಿಷ್ಟನಾಗಿ, ನಿರಂತರದಿ, ಬಹುಚೇಷ್ಟೆಗಳ = ನಾನಾ ಬಗೆಯಾದ ಕರ್ಮಗಳನ್ನು, ಮಾಡುತಿರೆ, ಕಂಡು = ಜನರು ನೋಡಿ ಸಜೀವಿ = ಪ್ರಾಣವುಳ್ಳವನು, ಎನುತಿಹರು, ಅವರ ನೋಡಿ = ಬದುಕಿರುವ ಜನರನ್ನು ನೋಡಿ, ಕನಿಷ್ಟರೆಲ್ಲರು = ಅವರ ಕೈ ಕೆಳಗಿರುವ ಹೆಂಡರು ಮಕ್ಕಳು ದಾಸಜನ ಮೊದಲಾದವರು, ಹೃಷ್ಟರಾಗುವರು = ಸಂತೋಷಪಡುವರು. ಸೇವೆಮಾಳ್ಪರು, ಬಿಟ್ಟಕ್ಷಣದಲಿ = ಪರಮಾತ್ಮನು ದೇಹವನ್ನು ಬಿಟ್ಟಕ್ಷಣದಲ್ಲಿ, ಕುಣಪನೆಂದರಿದು = ಶವವೆಂದು ತಿಳಿದು, ಉಪೇಕ್ಷಿಪರು = ತಿರಸ್ಕಾರಮಾಡುವರು.

ತಾತ್ಪರ್ಯ:— ಶ್ರೀ ಪರಮಾತ್ಮನು ದೇಹದೊಳಗಿದ್ದು ನಾನಾವಿಧ ಕರ್ಮಗಳನ್ನು ಮಾಡಿಸುತ್ತಿದ್ದರೆ, ಇವನು ಭಾಗ್ಯವಂತನು ವಿದ್ಯಾವಂತನೆಂದು ಆದರದಿಂದ ಹೆಂಡರು ಮಕ್ಕಳು ಸೇವಕ ಜನರು ಮೊದಲಾದವರು ಉಪಚರಿಸುತ್ತಿರುವರು. ಯಾವಾಗ ಪರಮಾತ್ಮನು ದೇಹವನ್ನು ಬಿಡುವನೋ ಆಗಲೆ ಇವನು ಮೃತನಾದನೆಂದು ತಿಳಿದು ಹೆಂಡರು ಮಕ್ಕಳು ಸಹ ಇವನನ್ನು ನೋಡಲು ಹೆದರುವರು. ಆದ್ದರಿಂದ ಸ್ವತಂತ್ರನು ಪರಮಾತ್ಮನೇ ಹೊರತು ಜೀವನಲ್ಲವೆಂಬ ತಾತ್ಪರ್ಯ ॥ ೨ ॥

ಪರಮಾತ್ಮನು ಸೃಷ್ಟ್ಯಾದಿಗಳನ್ನು ಮಾಡುವುದು ಜೀವನ ಉದ್ಧಾರಕ್ಕೋಸ್ಕರವೇ ಹೊರತು ಸ್ವಪ್ರಯೋಜನಕ್ಕಲ್ಲವೆಂದು ಹೇಳುತ್ತಾರೆ.

ಕ್ರೀಡೆಗೋಸುಗ ಅವರವರಗತಿ
ನೀಡಲೋಸುಗ ದೇಹಗಳ ಕೊ
ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮೇಶಾದ್ಯರೊಳುಪೊಕ್ಕು॥
ಮಾಡುವನು ವ್ಯಾಪಾರ ಬಹುವಿಧ
ಮೂಢದೈತ್ಯರೊಳಿದ್ದು ಪ್ರತಿದಿನ
ಕೇಡುಲಾಭಗಳಿಲ್ಲ ನಿದನರಿ ಯಾವಕಾಲದಲಿ ॥ ೩ ॥

ಪದ್ಯಾರ್ಥ:— ಕ್ರೀಡೆಗೋಸುಗ= ಪರಮಾತ್ಮನು ತನ್ನ ಲೀಲೆಗೋಸ್ಕರವೂ, ಅವರವರ ಗತಿನೀಡಲೋಸುಗ= ಜೀವರಿಗೆ ಅವರವರ ಯೋಗ್ಯತಾನುಸಾರ ಕರ್ಮಗಳನ್ನು ಮಾಡಿಸಿ ಅವರವರಿಗೆ ತಕ್ಕ ಗತಿಯನ್ನು ಕೊಡುವುದಕ್ಕೋಸ್ಕರವೂ, ದೇಹಗಳ ಕೊಟ್ಟು, ಸ್ವೇಚ್ಛೆಯಲ್ಲಿ= ತನ್ನ ಇಚ್ಛೆಯಿಂದಲೆ, ಬ್ರಹ್ಮೇಶಾದ್ಯರೊಳು= ಬ್ರಹ್ಮರುದ್ರಾದಿ ದೇವತೆಗಳಲ್ಲಿ ಪೊಕ್ಕು = ಪ್ರವಿಷ್ಟನಾಗಿ ಮೂಢದೈತ್ಯರೊಳಿದ್ದು = ಪಾಪಿಗಳಾದ ಕಲಿ ಮೊದಲಾದ ದೈತ್ಯರೊಳಗಿದ್ದು, ಬಹುವಿಧ, ವ್ಯಾಪಾರ= ಇಂದ್ರಿಯಗಳಿಂದ ಮಾಡುವ ಕರ್ಮಗಳನ್ನು, ಮಾಡುವನು. ಕೇಡು ಲಾಭಗಳು= ಪರಮಾತ್ಮನಿಗೆ ಸುಖ ದುಃಖಗಳು, ಯಾವಕಾಲದಲಿ= ಯಾವ ಕಾಲದಲ್ಲೂ, ಇಲ್ಲ. ಇದನು, ಅರಿ = ತಿಳಿ.

ತಾತ್ಪರ್ಯ :—ಜೀವರಿಗೆ ಸ್ಥೂಲದೇಹವನ್ನು ಕೊಡುವುದಕ್ಕೆ ಸೃಷ್ಟಿ ಎಂದು ಹೆಸರು. ಪೂರ್ಣಕಾಮನಾದ ಸ್ವಾಮಿಗೆ ಈ ಸೃಷ್ಟಿಯಿಂದೇನೂ

ಪ್ರಯೋಜನವಿಲ್ಲ. ಇದೊಂದು ಲೀಲೆಯು. ಕರುಣಾಳುವಾದ ಶ್ರೀ ಹರಿಯು ಜೀವರ ಯೋಗ್ಯತಾನುಸಾರ ಗತಿಯನ್ನು ಕೊಡಿಸುವುದಕ್ಕಾಗಿಯೇ ಅವರಿಗೆ ಸ್ಥೂಲದೇಹವನ್ನು ಕೊಟ್ಟು, ತತ್ವೇಶರಾದ ಬ್ರಹ್ಮಾದಿ ದೇವತೆಗಳು, ಕಲಿ ಮೊದಲಾದ ದೈತ್ಯರು ಇವರುಗಳಲ್ಲಿದ್ದು, ಜೀವರು ಮಾಡಬೇಕಾದ ಪುಣ್ಯಪಾಪಾದಿ ಕರ್ಮಗಳ ಮಾಡಿಸಿ ಅವರವರಿಗೆ ತಕ್ಕ ಗತಿಯನ್ನು ಕೊಡುವನು. ಇದರಿಂದ ಪರಮಾತ್ಮನಿಗೆ ಲಾಭವೂ ಇಲ್ಲ. ನಷ್ಟವೂ ಇಲ್ಲ. ॥ ೩ ॥

ಅಕ್ಷರೇಡ್ಯನು ಬ್ರಹ್ಮವಾಯು
ತ್ರ್ಯಕ್ಷಸುರಪ ಸುರಾದಿಗಳಾ
ಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ॥
ಅಕ್ಷಯನು ಸತ್ಯಾತ್ಮಕನು ಪರಾ
ಪೇಕ್ಷೆಯಿಲ್ಲದೆ ಸರ್ವರೊಳಗೆ ವಿ
ಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪ ॥ ೪ ॥

ಪದ್ಯಾರ್ಥ :—ಅಕ್ಷರೇಡ್ಯನು = ಅಕ್ಷರನಾಮಕರಾದ ರಮಾದೇವಿಯರಿಂದ ಸ್ತುತ್ಯನಾದ ಶ್ರೀಹರಿಯು, ಬ್ರಹ್ಮ=ಬ್ರಹ್ಮದೇವರು, ವಾಯು= ವಾಯುದೇವರು, ತ್ರ್ಯಕ್ಷ= ಮುಕ್ಕಣ್ಣನಾದ ರುದ್ರದೇವರು, ಸುರಪ=ದೇವೇಂದ್ರನು, ಸುರಾದಿಗಳ=ಮತ್ತು ಇತರ ದೇವತೆಗಳಿಗೆ, ಅಧ್ಯಕ್ಷನಾಗಿ, ಎಲ್ಲರೊಳು ಇದ್ದು, ಪರಾಪೇಕ್ಷೆಯಿಲ್ಲದೆ ವ್ಯಾಪಾರ ಮಾಡುತಿಹ, ಅಕ್ಷಯನು=ನಾಶರಹಿತನು, ಸತ್ಯಾತ್ಮಕ=ಸತ್ಯಸ್ವರೂಪನು ಸರ್ವರೊಳಗೆ. ವಿಲಕ್ಷಣನು ತಾನಾಗಿ, ಲೋಕವ ರಕ್ಷಿಸುತಲಿಪ್ಪ.

ತಾತ್ಪರ್ಯ—ಅಕ್ಷರನಾಮಕರಾದ ಲಕ್ಷ್ಮೀದೇವಿಯರಿಂದ ಸ್ತುತ್ಯನಾದ, ನಾಶರಹಿತನಾದ, ಉತ್ತಮಾನಂದಜ್ಞಾನಾತ್ಮಕನಾದ ಶ್ರೀಹರಿಯು, ಪರಾಪೇಕ್ಷೆಯಿಲ್ಲದೆ ಬ್ರಹ್ಮರುದ್ರಾದಿ ಸಮಸ್ತ ದೇವತೆಗಳಲ್ಲೂ ಇದ್ದು ಸಕಲ ಕರ್ಮಗಳನ್ನು ಮಾಡುವನು. ಅಂದರೆ ಬ್ರಹ್ಮದೇವರೊಳಗಿದ್ದು ಸೃಷ್ಟಿಮಾಡುವನು. ರುದ್ರದೇವರಲ್ಲಿದ್ದು ಸಂಹಾರಮಾಡುವನು. ಇಂದ್ರನೊಳಗಿದ್ದು ಸ್ವರ್ಗವನ್ನು ಪಾಲಿಸುವನು. ಹೀಗೆ ಸ್ವತಂತ್ರನಾಗಿ ಎಲ್ಲರಲ್ಲಿ ಇದ್ದರೂ ಜಗದ್ವಿಲಕ್ಷಣನಾಗಿ ಸರ್ವ ಜಗತ್ತನ್ನು ರಕ್ಷಿಸುವನು ॥ ೪ ॥

ಪರಮಾತ್ಮನು ಸ್ತ್ರೀಯರಲ್ಲಿ ಸ್ತ್ರೀರೂಪನಾಗಿದ್ದು ಕಾರ್ಯಗಳನ್ನು ಮಾಡುತ್ತಾನೆಂದು ಹೇಳುತ್ತಾರೆ.

**ಶ್ರೀ ಸರಸ್ವತಿ ಭಾರತೀಗಿರಿ**
**ಜಾಶಚೀರತಿ ರೋಹಿಣೀ ಸಂ**
**ಜ್ಞಾಶತರೂಪಾದ್ಯಖಿಳ ಸ್ತ್ರೀಯರೊಳು ಸ್ತ್ರೀರೂಪ ||**
**ವಾಸವಾಗಿದ್ದೆಲ್ಲರಿಗೆ ವಿ**
**ಶ್ವಾಸ ತನ್ನವರಲ್ಲಿ ಕೊಟ್ಟಭಿ**
**ಲಾಷೆಗಳ ಪೂರೈಸುತಿಪ್ಪನು ಯೋಗ್ಯತೆಯನರಿತು ||**

ಪದ್ಯಾರ್ಥ:—ಶ್ರೀ= ಲಕ್ಷ್ಮೀದೇವಿಯರು, ಸರಸ್ವತಿ, ಭಾರತೀ, ಗಿರಿಜಾ = ಪಾರ್ವತೀ, ಶಚೀ, ರತೀ, ರೋಹಿಣೀ=ಚಂದ್ರನ ಹೆಂಡತಿ, ಸಂಜ್ಞಾ =ಸೂರ್ಯನ ಹೆಂಡತಿ, ಶತರೂಪಾ=ಸ್ವಾಯಂಭುವ ಮನುವಿನ ಹೆಂಡತಿ, ಇವರೇ ಮೊದಲಾದ, ಅಖಿಳ ಸ್ತ್ರೀಯರೊಳು, ಸ್ತ್ರೀರೂಪ= ಸ್ತ್ರೀರೂಪದಿಂದ, ವಾಸವಾಗಿದ್ದು, ಎಲ್ಲರಿಗೆ, ತನ್ನವರಲ್ಲಿ ತಾರತಮ್ಯ ಪ್ರಕಾರ ತನ್ನ ಭಕ್ತರಲ್ಲಿ, ವಿಶ್ವಾಸಕೊಟ್ಟು. ಯೋಗ್ಯತೆಯನರಿತು = ಅವರವರ ಯೋಗ್ಯತೆಯನ್ನು ತಿಳಿದು, ಅಭಿಲಾಷೆಗಳ, ಪೂರೈಸುತಿಪ್ಪನು.

ತಾತ್ಪರ್ಯ:—ಲಕ್ಷ್ಮೀ ಸರಸ್ವತೀ ಮೊದಲಾದ ಸಕಲ ಸ್ತ್ರೀಯರಲ್ಲೂ, ಸ್ತ್ರೀರೂಪದಿಂದ ಪರಮಾತ್ಮನೇ ಇದ್ದು ತನ್ನಾಮದಿಂದ ಸ್ತುತ್ಯನಾಗಿ, ತಾರತಮ್ಯಪ್ರಕಾರ ಲಕ್ಷ್ಮೀದೇವಿಯರಲ್ಲಿ ಸರಸ್ವತೀ ಮೊದಲಾದವರಿಗೆ ಭಕ್ತಿಯೂ, ಅವರಲ್ಲಿ ಪಾರ್ವತೀ ಮೊದಲಾದವರಿಗೆ ಭಕ್ತಿಯೂ, ಹೀಗೆ ಪರಸ್ಪರ ಭಗವದ್ಭಕ್ತರಲ್ಲಿ ವಿಶ್ವಾಸವನ್ನು ಹುಟ್ಟಿಸಿ, ಅವರವರ ಅಭಿಲಾಷೆಗಳನ್ನು ಅವರವರ ಯೋಗ್ಯತಾನುಸಾರ ಇಹಪರಂಗಳಲ್ಲಿ ಪೂರೈಸುವನು. ||

**ಕೋಲುಕುದುರೆಯುಮಾಡಿ ಆಡುವ**
**ಬಾಲಕರ ತೆರನಂತೆ ಲಕ್ಷ್ಮೀ**
**ಲೋಲ ಸ್ವಾತಂತ್ರ್ಯಯುಗುಣ ಬ್ರಹ್ಮಾದ್ಯರೊಳಗಿಟ್ಟು||**
**ಲೀಲೆಗೈವನು ತನ್ನವರಿಗನು**
**ಕೂಲನಾಗಿದ್ದೆಲ್ಲ ಕಾಲದಿ**
**ಖೂಳರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ||**

ತಾತ್ಪರ್ಯ :—ಹುಡುಗರು ಕೋಲುಗಳನ್ನು ಕುದುರೆಯನ್ನಾಗಿ ಮಾಡಿಕ್ಕೊಂಡು ಅದನ್ನು ತಮ್ಮ ಕಾಲುಮಧ್ಯದಲ್ಲಿಟ್ಟುಕ್ಕೊಂಡು ಕುದುರೆಯನ್ನು ಹೊಡೆಯುವಂತೆ ಹೊಡೆಯುತ್ತಾ ತಾವೇ ಅದನ್ನು ಶೆಳದುಕ್ಕೊಂಡು ಓಡುತ್ತಿರುವರು. ಅದರಲ್ಲಿ ಆ ಕೋಲು ಕುದುರೆಗೆ ಎಷ್ಟು ಸ್ವಾತಂತ್ರ್ಯವಿರುವುದೋ ಅಷ್ಟೇ ಸ್ವತಂತ್ರ್ಯ ಜೀವರಿಗೆ ಇರುವದು. ಕೋಲನ್ನು ಕುದುರೆಯನ್ನಾಗಿ ಮಾಡಿಕ್ಕೊಂಡವರೂ ಇವರೆ, ಕೂತವರೂ ಇವರೆ, ಹೊಡೆಯುವವರೂ ಇವರೆ ; ಶೆಳದುಕ್ಕೊಂಡು ಓಡುವವರೂ ಇವರೆ ಆಗಿ ಹುಡುಗರು ಹೇಗೆ ಆಟವಾಡುವರೋ ಅದರಂತೆ ಬ್ರಹ್ಮಾದಿ ಸಕಲ ಜೀವರಿಗೂ ತನ್ನ ಸ್ವಾತಂತ್ರ್ಯ ಗುಣಗಳನ್ನು ಕೊಟ್ಟು ಪೂಜ್ಯನೂ, ಪೂಜಕನೂ ತಾನೇ ಆಗಿ ಕ್ರೀಡಿಸುತ್ತಿರುವನು. ತಾನು ಒಬ್ಬರಿಗೆ ಗೋಚರಿಸದೆ ಭಕ್ತರಿಗೆ ಅನುಕೂಲನಾಗಿಯೂ, ದ್ವೇಷಿಗಳಿಗೆ ಪ್ರತಿಕೂಲನಾಗಿಯೂ ಇರುವನು. ||

ಅವತಾರಿಕೆ :—ಮೇಲಿನ ಪದ್ಯದಲ್ಲಿ ಪರಮಾತ್ಮನು ಭಕ್ತರಿಗೆ ಅನುಕೂಲನಾಗಿಯೂ, ದ್ವೇಷಿಗಳಿಗೆ ಪ್ರತಿಕೂಲನಾಗಿಯೂ ಇರುವನೆಂದು ಹೇಳಿದ್ದರಿಂದ ಪ್ರಾಪ್ತವಾದ ವೈಷಮ್ಯವನ್ನು ಪರಿಹರಿಸುತ್ತಾರೆ—

ಸೌಪರ್ಣಿವರವಹನ ನಾನಾ
ರೂಪನಾಮದಿ ಕರೆಸುತವರ ಸ
ಮೀಪದಲ್ಲಿದ್ದಖಿಳ ವ್ಯಾಪಾರಗಳ ಮಾಡುವನು ||
ಪಾಪಪುಣ್ಯಗಳೆರಡು ಅವರ ಸ್ವ
ರೂಪಗಳನನುಸರಿಸಿ ಉಣಿಪ ಪ
ರೋಪಕಾರಿ ಪರೇಶ ಪೂರ್ಣಾನಂದ ಜ್ಞಾನಘನ ||

ಪದ್ಯಾರ್ಥ :—ಸೌಪರ್ಣಿವರವಹನ=ಸೌಪರ್ಣಿದೇವಿಗೆ ಪತಿಯಾದವನು ಗರುಡನು; ಅಂತಹ ಗರುಡನನ್ನು ವಾಹನವನ್ನಾಗಿ ಮಾಡಿಕ್ಕೊಂಡಿರುವವನು, ಪರೋಪಕಾರಿಯಾದ, ಪರೇಶ=ಸರ್ವೋತ್ತಮನಾದ, ಪೂರ್ಣಾನಂದ ಜ್ಞಾನಘನ= ಪೂರ್ಣಾನಂದ ಜ್ಞಾನಸ್ವರೂಪನಾದ ಶ್ರೀ ಪರಮಾತ್ಮನು, ನಾನಾರೂಪನಾಮದಿ= ಬ್ರಹ್ಮ ರುದ್ರ ಸರಸ್ವತೀ ಭಾರತೀ ಕಲಿ ಶಂಬರ ಮೊದಲಾದ ನಾಮಗಳಿಂದ ಕರೆಸುತ, ಅವರ ಸಮೀಪದಲ್ಲಿದ್ದು= ಅವರೊಳಗಿದ್ದು, ಅಖಿಳ ವ್ಯಾಪಾರಗಳ ಮಾಡುವನು. ಪಾಪ

ಪುಣ್ಯಗಳೆರಡು, ಅವರ= ದೇವ ದೈತ್ಯ ಮನುಷ್ಯಾದಿಗಳ, ಸ್ವರೂಪಗಳ ನ್ನನುಸರಿಸಿ, ಉಣಿಪ.

ತಾತ್ಪರ್ಯ ;— ಗರುಡವಾಹನನೂ, ಸರ್ವೋತ್ತಮನೂ, ಪೂರ್ಣಾನಂದ ಜ್ಞಾನಾತ್ಮಕನೂ ಆದ ಹರಿಯು ಪುರುಷರಲ್ಲೂ, ಸ್ತ್ರೀಯರಲ್ಲೂ, ದೇವ ದೈತ್ಯ ಮನುಷ್ಯಾದಿಗಳಲ್ಲೂ ಇದ್ದು ನಾನಾವಿಧ ಕರ್ಮಗಳನ್ನು ತಾನು ಮಾಡಿ ಮಾಡಿಸುವನು ಪುಣ್ಯಪಾಪಗಳ ಫಲವನ್ನು ಮಾತ್ರ ಆ ಜೀವರ ಯೋಗ್ಯತಾನುಸಾರವೇ ಕೊಡುವನು. ಆದ್ದರಿಂದ ಪರಮಾತ್ಮನಿಗೆ ವೈಷಮ್ಯಾದಿಗಳು ಇಲ್ಲವೆಂಬ ಭಾವ. ಈ ವಿಷಯಗಳನ್ನು ಹಿಂದೆ ಅನೇಕ ಸ್ಥಳಗಳಲ್ಲಿ ವಿವರ ಮಾಡಿರುತ್ತೆ ||೭||

ಅವತಾರಿಕೆ —ಭಗವನ್ಮಹಿಮೆಯನ್ನು ಭಗವದ್ಭಕ್ತರು ಬಲ್ಲರೇ ಹೊರತು ಮಿಕ್ಕವರು ತಿಳಿಯಲಾರರೆಂದು ಹೇಳುತ್ತಾರೆ—

ಅಹರ ನಿದ್ರಾ ಮೈಥುನಗಳ ಹ
ರಹ ಬಯಿಸಿ ಬಳಲುವ ಲಕ್ಷ್ಮೀ
ಮಹಿತನ ಮಹಾಮಹಿಮೆಗಳನೆಂತರಿವ ನಿತ್ಯದಲಿ ||
ಅಹಿಕಸೌಖ್ಯವ ಮರೆದು ಮನದಲಿ
ಗ್ರಹಿಸಿ ಶಾಸ್ತ್ರಾರ್ಥಗಳ ಪರಮೋ
ತ್ಸಹದಿ ಕೊಂಡಾಡುತಲಿ ಮೈಮರಿದವರಿಗಲ್ಲದಲೆ ||

ಪದ್ಯಾರ್ಥ—ನಿತ್ಯದಲಿ, ಅಹಿಕಸೌಖ್ಯವ=ಭೋಜನ ಪಾನ ಸ್ತ್ರೀ ಭೋಗ ಮೊದಲಾದ ಈ ಪ್ರಪಂಚದ ಸುಖಗಳನ್ನು, ಮರೆದು=ಉಪೇಕ್ಷಿಸಿ, ಮನದಲಿ, ಶಾಸ್ತ್ರಾರ್ಥಗಳ ಗ್ರಹಿಸಿ, ಪರಮೋತ್ಸಾಹದಿ, ಕೊಂಡಾಡುತಲಿ, ಮೈಮರಿದವರಿಗಲ್ಲದಲೆ=ಭಗವನ್ಮಹಿಮೆಯಲ್ಲಿ ಚಿತ್ತವನ್ನಿಟ್ಟು ಮೈಮೇಲೆ ಎಚ್ಚರವಿಲ್ಲದೆ ಇರುವವರಿಗಲ್ಲದೆ, ಅಹರ=ಆಹಾರ, ನಿದ್ರಾ, ಮೈಥುನಗಳ, ಅಹರಹ=ಪ್ರತಿದಿವಸಗಳಲ್ಲೂ, ಬಯಿಸಿ=ಅಪೇಕ್ಷಿಸುತ್ತಾ, ಬಳಲುವ=ಲೋಲಾಡುತ್ತಿರುವವನು, ಲಕ್ಷ್ಮೀಮಹಿತನ=ಲಕ್ಷ್ಮೀದೇವಿಯರಿಂದ ಪೂಜ್ಯನಾದ ಪರಮಾತ್ಮನ ಮಹಾಮಹಿಮೆಗಳನ್ನು. ಎಂತರಿವ= ಹೇಗೆ ತಿಳಿಯುವನು.

ತಾತ್ಪರ್ಯ—ಯಾವ ಪುರುಷನು ಕ್ಷಣಿಕವಾದ ಐಹಿಕ ಸುಖವನ್ನು ಸುಖವೆಂದು ಭಾವಿಸದೆ, ಪರಮಾತ್ಮನಲ್ಲಿ ದೃಢತರವಾದ ಭಕ್ತಿಯಿಂದ

ಶಾಸ್ತ್ರಾರ್ಥಗಳನ್ನು ಶ್ರವಣಮಾಡಿ, ಮನನ ಮಾಡುತ್ತಾ, ಧ್ಯಾನಮಾಡುತ್ತ ಪರಮಾತ್ಮನನ್ನು ಕೊಂಡಾಡುತ್ತಿರುವನೋ ಅವನಿಗೆ ಪರಮಾತ್ಮನ ಮಹಿಮೆಯು ಗೊತ್ತಾಗುವುದೇ ಹೊರತು, ಆಹಾರ, ನಿದ್ರೆ, ಸ್ತ್ರೀಭೋಗ ಮೊದಲಾದ ಕ್ಷಣಿಕ ಸುಖವನ್ನೇ ಸರ್ವದಾ ಅಪೇಕ್ಷಿಸುತ್ತಾ, ಸಂಸಾರಲೋಲುಪರಾದವರಿಗೆ ಭಗವನ್ಮಹಿಮೆಯು ಗೊತ್ತಾಗುವುದೆಂತು ! ಎಂದಿಗೂ ಗೊತ್ತಾಗದೆಂಬ ಭಾವ ||೭||

ಅವತಾರಿಕೆ :—ಮೋಕ್ಷಪ್ರದನಾದ ಪರಮಾತ್ಮನನ್ನು ಬಿಟ್ಟು ಅನ್ಯ ದೇವತೆಯನ್ನು ಭಜನೆ ಮಾಡುವವರಿಗೆ ಎಂದಿಗೂ ಮುಕ್ತಿಸುಖವು ದೊರೆಯುವುದಿಲ್ಲವೆಂದು ಹೇಳುತ್ತಾರೆ

ಬಂಧಮೋಕ್ಷ ಪ್ರದನಜ್ಞಾನವು
ಮಂದಮತಿಗಳಿಗೆಂತು ದೊರೆವುದು
ಬಿಂದುಮಾತ್ರ ಸುಖಾನುಭವ ಪರ್ವತಕೆ ಸಮದುಃಖ ||
ಎಂದು ತಿಳಿಯದಲನ್ಯದೈವಗ
ಳಿಂದ ಸುಖವಾಪೇಕ್ಷಿಸುವರು ಮು
ಕುಂದ ನಾರಾಧನೆಯ ಬಿಟ್ಟವಗುಂಟೆ ಮುಕ್ತಿಸುಖ ||

ಪದ್ಯಾರ್ಥ :—ಬಂಧಮೋಕ್ಷಪ್ರದನ = ಜೀವರಿಗೆ ಬಂಧನವನ್ನೂ ಮೋಕ್ಷವನ್ನೂ ಕೊಡುವ, ಶ್ರೀ ಪರಮಾತ್ಮನ ಸಂಬಂಧವಾದ, ಜ್ಞಾನವು, ಮಂದಮತಿಗಳಿಗೆ ದೊರೆವುದು, ಎಂತು ! (ವಿಷಯ ಭೋಗಗಳಲ್ಲಿ) ಬಿಂದು ಮಾತ್ರ ಸುಖಾನುಭವ, ಪರ್ವತಕೆಸಮದುಃಖ ; ಎಂದು ತಿಳಿಯದಲೆ, ಅನ್ಯದೈವಗಳಿಂದ ಸುಖವ ಅಪೇಕ್ಷಿಸುತ್ತಾ ಮುಕುಂದನ, ಆರಾಧನೆಯ ಬಿಟ್ಟವರಿಗೆ ಮುಕ್ತಿ ಸುಖವುಂಟೆ ! ಎಂದಿಗೂ ಇಲ್ಲ.

ತಾತ್ಪರ್ಯ :—ಸರ್ವಪ್ರಾಣಿಗಳನ್ನು ಸಂಸಾರದಲ್ಲಿ ತಗಲಿಸುವುದಕ್ಕೂ ಸಂಸಾರದಿಂದ ಬಿಡುಗಡೆ ಮಾಡಿ ಮುಕ್ತಿಯನ್ನು ಕೊಡುವುದಕ್ಕೂ ಪರಮಾತ್ಮನು ಸಮರ್ಥನೇ ಹೊರತು, ಮತ್ತಾರಿಗೂ ಈ ಅಧಿಕಾರವು ಇಲ್ಲ. ಇಂತಹ ಪರಮಾತ್ಮನ ವಿಷಯುಕವಾದ ಜ್ಞಾನವು, ಅಲ್ಪಮತಿಗಳಿಗೆ ದೊರಕುವದೆಂತು ! ಇವರು ಅನ್ಯದೇವತೆಗಳನ್ನು ಭಜಿಸಿ, ಸಂಪತ್ತನ್ನು ಆಯುಷ್ಯವನ್ನು ಬೇಡಿ, ಕೃತಾರ್ಥರು ನಾವೆಂದು ಭಾವಿಸುವರು. ಈ ಸಂಸಾರದಲ್ಲಿ

ಕುವ ವಿಷಯಭೋಗವನ್ನು ಯೋಚಿಸಿ ನೋಡಿದರೆ, ಅದು ಬಿಂದುಮಾತ್ರ ಸುಖವು ದುಃಖವು ಬೆಟ್ಟದಂತೆ ಇರುವುದು. 'ಕುರ್ವರ್ ದುಃಖ ಪ್ರತೀಕಾರಂ ಸುಖವನ್ಮನ್ಯತೇಗೃಹೇ' ಎಂಬ ಭಾಗವತ ವಾಕ್ಯದಂತೆ, ದುಃಖ ಪರಿಹಾರಕ್ಕೆ ಪ್ರಯತ್ನಪಡುತ್ತಾ, ನಾನೇ ಸುಖೀ ಎಂದು ಭಾವಿಸುವವನು ಇಂತಹಾ ಅತ್ಯಲ್ಪಸುಖಕ್ಕಾಗಿ ಅನ್ಯದೇವತೆಗಳನ್ನು ಭಜಿಸುವನು. ಮೋಕ್ಷಪ್ರದನಾದ ಪರಮಾತ್ಮನನ್ನು ಭಜಿಸದೆ ಇರುವವನಿಗೆ ಮೋಕ್ಷಸುಖವೆಲ್ಲಿಯದು ! ಎಂದಿಗೂ ಇಲ್ಲವೆಂಬ ಭಾವ ॥ ೯ ॥

ರಾಜತನ್ನಾಮಾತ್ಯ ಕರುಣದಿ
ನೈಜ ಜನರಿಗೆ ಕೊಟ್ಟು ಕಾರ್ಯನಿ
ಯೋಜಿಸುತ ಮಾನಾಪಮಾನವ ಮಾಳ್ಪತೆರನಂತೆ ॥
ಶ್ರೀಜನಾರ್ದನ ಸಕಲರೊಳಗಪ
ರಾಜಿತನು ತಾನಾಗಿ ಸರ್ವಪ್ರ
ಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ॥

ಪದ್ಯಾರ್ಥ :—ರಾಜ= ಅರಸನು, ತನ್ನ, ಅಮಾತ್ಯ= ಮಂತ್ರಿತ್ವ (ಸ್ವಾತಂತ್ರ್ಯ)ವನ್ನು, ಕರುಣದಿ, ನೈಜಜನರಿಗೆ= ತನ್ನ ಜನರಿಗೆ, ಕೊಟ್ಟು, ಕಾರ್ಯ= ಕಾರ್ಯಗಳನ್ನು ಮಾಡಲು, ನಿಯೋಜಿಸುತ = ಅಪ್ಪಣೆಯನ್ನು ಕೊಡುತ್ತಾ, ಮಾನಾಪಮಾನವ= ಅವರು ಮಾಡಿದ ಕಾರ್ಯಾಕಾರ್ಯಗಳನ್ನನುಸರಿಸಿ, ಮಾನಾಪಮಾನವ, ಮಾಳ್ಪತೆರನಂತೆ, ಶ್ರೀ ಜನಾರ್ದನ, ಸಕಲರೊಳಗೆ (ಇದ್ದು) ಅಪರಾಜಿತನು= ಎಂದಿಗೂ ಯಾರಿಂದಲೂ ಸೋಲದವನು, ತಾನಾಗಿ, ಫಲಕೆ ಗುರಿಮಾಡಿ = ಜೀವರನ್ನು ಫಲಕ್ಕೆ ಭಾಗಿಗಳನ್ನಾಗಿ ಮಾಡಿ, ಸರ್ವಪ್ರಯೋಜನವ= ಸಕಲವಾದ ಪುಣ್ಯ ಪಾಪಕರ್ಮಗಳನ್ನು, ಮಾಡಿಸುತ, ಮಾಡುವ

ತಾತ್ಪರ್ಯ :—ರಾಜನು ಮಂತ್ರಿತ್ವ ಮೊದಲಾದ ಸ್ವಾತಂತ್ರ್ಯ ಅಧಿಕಾರಗಳನ್ನು ತನ್ನ ಭೃತ್ಯರಿಗೆ ಕೊಟ್ಟು ಕಾರ್ಯಗಳನ್ನು ಮಾಡುವಂತೆ ಅವರಿಗೆ ಅಪ್ಪಣೆಯನ್ನಿತ್ತು, ಅವರು ಮಾಡಿದ ಕಾರ್ಯವು ಮನಸ್ಸಿಗೆ ತೃಪ್ತಿಕರವಾಗಿದ್ದರೆ, ಅವರಿಗೆ ಬಹುಮಾನವನ್ನೂ, ಕಾರ್ಯವು ಕೆಟ್ಟದ್ದರೆ, ಅವಮಾನವನ್ನು ಮಾಡುವಂತೆ, ಶ್ರೀ ಪರಮಾತ್ಮನು ಬ್ರಹ್ಮಾದಿಗಳಿಗೆ ಸ್ವಾತಂತ್ರ್ಯವನ್ನು ಕೊಟ್ಟು ಅವರೊಳಗಿದ್ದು (ಅಮೋಘ ಪರಾಕ್ರಮ ಉಳ್ಳವನಾಗಿ), ಅವರ

ವರ ಯೋಗ್ಯತಾನುಸಾರ ಕರ್ಮಗಳನ್ನು ಮಾಡಿಸಿ ಕರ್ಮಗಳಿಗೆ ತಕ್ಕ ಸುಖ ದುಃಖ ಮಾನಾವಮಾನ ಮೊದಲಾದ ಫಲಗಳನ್ನು ಕೊಡುವನು. ಈ ಪದ್ಯ ಮೊದಲು ೧೪ನೆಯ ಪದ್ಯದವರೆಗೂ ಇರುವ ವಿಷಯಗಳು ೯೬ನೆಯ ದತ್ತ ಸ್ವಾತಂತ್ರ್ಯ ಸಂಧಿಯ ವ್ಯಾಖ್ಯಾನದಲ್ಲಿ ವಿಷ್ಣುರಹಸ್ಯದ ಪ್ರಮಾಣಸಹಿತ ವಾಗಿ ವಿವರಿಸಲ್ಪಟ್ಟದೆ. ॥ ೧೦ ॥

ವಾಸುದೇವ ಸ್ವತಂತ್ರವಸರೋ
ಜಾಸನಾದ್ಯಮರಾಸುರರಿಗೀಯ
ಲೋಸುಗರ್ಧವ ತೆಗದದರೊಳಗರ್ಧವ ಚತುರ್ಭಾಗ ॥
ಗೈಸಿ ಒಂದನು ಶತವಿಧದ್ವಿಪಂ
ಚಾಶತಾಬ್ಜಜಗಷ್ಟಚತ್ವಾ
ರಿಂಶದ ನಿಲನಿಗಿತ್ತು ವಾಣಿ ಭಾರತಿಗರ್ಧ ॥

ಪದ್ಯಾರ್ಥ :—ವಾಸುದೇವ=ಶ್ರೀಮನ್ನಾರಾಯಣನು, ಸ್ವತಂತ್ರವ=ತನ್ನ ಸ್ವಾತಂತ್ರ್ಯವನ್ನು, ಸರೋಜಾಸನಾದಿ=ಕಮಲಾಸನರಾದ ಬ್ರಹ್ಮ ದೇವರು ಮೊದಲಾದ, ಅಮರ= ದೇವತೆಗಳಿಗೂ, ಅಸುರರಿಗೆ= ಕಲಿಮೊದ ಲಾದ ದೈತ್ಯರಿಗೂ, ಈಯಲೋಸುಗೆ,= ಕೊಡುವುದಕ್ಕಾಗಿ, ಅದರೊಳಗೆ = ಸ್ವಾತಂತ್ರ್ಯದೊಳಗೆ, ಅರ್ಧವ= ಅರ್ಧಭಾಗವನ್ನು. ತೆಗೆದು, ಚತು ರ್ಭಾಗ ಗೈಸಿ= ೪ ಭಾಗಗಳನ್ನಾಗಿ ಮಾಡಿ, ಒಂದನ್ನು, ಶತವಿಧಗೈಸಿ= ನೂರುಭಾಗ ಮಾಡಿ, ದ್ವಿಪಂಚಾಶತ= ೫೨ ಭಾಗಗಳನ್ನು, ಅಬ್ಜಜಗೆ= ಬ್ರಹ್ಮದೇವರಿಗೂ, ಅಷ್ಟಚತ್ವಾರಿಂಶತ= ೪೮ ಭಾಗಗಳನ್ನು, ಅನಿಲಗೆ= ವಾಯುದೇವರಿಗೂ, ಇತ್ತು, ವಾಣೀ= ಸರಸ್ವತೀದೇವಿಯರಿಗೂ, ಭಾರತೀ = ಭಾರತೀದೇವಿಯರಿಗೂ, ಅರ್ಧ = ಅವರವರ ಪತಿಗಳ ಭಾಗಗಳಲ್ಲಿ ಅರ್ಧಾರ್ಧವನ್ನು ಕೊಟ್ಟನು.

ತಾತ್ಪರ್ಯ :—ಸರ್ವಸ್ವತಂತ್ರನಾದ ಶ್ರೀ ಪರಮಾತ್ಮನು, ಅಪಾರ ವಾದ ತನ್ನ ಸ್ವಾತಂತ್ರ್ಯ ಗುಣಗಳಲ್ಲಿ ಅರ್ಧಭಾಗವನ್ನು ತೆಗೆದು, ಅದನ್ನು ೪ ಭಾಗಮಾಡಿ, ಅದರಲ್ಲಿ ಒಂದು ಭಾಗವನ್ನು ೧೦೦ ಭಾಗಗಳನ್ನಾಗಿ ಮಾಡಿ, ಅವುಗಳಲ್ಲಿ ೫೨ ಭಾಗಗಳನ್ನು ಬ್ರಹ್ಮದೇವರಿಗೂ, ೪೮ ಭಾಗಗಳನ್ನು ವಾಯುದೇವರಿಗೂ ಕೊಟ್ಟನು. ಆ ಬ್ರಹ್ಮವಾಯುಗಳಿಗೆ ಕೊಟ್ಟ ಭಾಗ ಗಳಲ್ಲಿ ಬ್ರಹ್ಮದೇವರ ಭಾಗದಲ್ಲಿ ಅರ್ಧ ೨೬ ಭಾಗಗಳನ್ನು ಸರಸ್ವತೀದೇವಿ

ಯರಿಗೂ, ವಾಯುದೇವರ ಭಾಗಗಳಲ್ಲಿ ಅರ್ಧ ೨೪ ಭಾಗಗಳನ್ನು ಭಾರತೀ ದೇವಿಯರಿಗೂ ಕೊಟ್ಟನು. ॥ ೧೧ ॥

ದ್ವಿತಿಯಪಾದವ ತೆಗದುಕೊಂಡದು
ಶತವಿಭಾಗವ ಮಾಡಿ ತಾವಿಂ
ಶತಿ ಉಮೇಶನೊಳಿಟ್ಟು ಇಂದ್ರನೊಳೈದಧಿಕ ಹತ್ತು ॥
ರತಿಪನೊಳಗನಿತಿಟ್ಟು ಅಖಿಳದೇ
ವತೆಗಳೊಳಗೀರೈದು ಜೀವಪ್ರ
ತತಿಯೊಳು ದಶವೈದಧಿಕ ನಾಲ್ವತ್ತು ದೈತ್ಯರೊಳು ॥

ಪದ್ಯಾರ್ಥ :—ದ್ವಿತಿಯಪಾದವ=ಎರಡನೆಯ ಕಾಲುಭಾಗವನ್ನು ತೆಗೆದುಕೊಂಡು, ಅದನು, ಶತವಿಭಾಗವ ಮಾಡಿ=೧೦೦ ಭಾಗಗಳನ್ನಾಗಿ ಮಾಡಿ, ತಾ=ತಾನು, ವಿಂಶತಿ=೨೦ ಭಾಗಗಳನ್ನು ಉಮೇಶನೊಳು= ರುದ್ರದೇವರಲ್ಲಿ, ಇಟ್ಟು, ಇಂದ್ರನೊಳು, ಐದಧಿಕ ಹತ್ತು=೧೫ ಭಾಗಗಳನ್ನು, ರತಿಪನೊಳಗೆ=ರತಿಪತಿಯಾದ ಮನ್ಮಥನೊಳಗೆ ಇನಿತಿಟ್ಟು= ಇಂದ್ರನಿಗೆ ಕೊಟ್ಟ ಭಾಗವನ್ನೇ ಇಂದ್ರನ ಕೂಡವೆ ಅನುಭವಿಸುವಂತೆ ಮಾಡಿ, ಅಖಿಳ ದೇವತೆಗಳೊಳು, ಈರೈದು=೧೦ ಭಾಗಗಳನ್ನು, ಜೀವ ಪ್ರತತಿಯೊಳು=ಜೀವರ ಸಂಘಗಳಲ್ಲಿ, ದಶ=೧೦ ಭಾಗಗಳನ್ನು, ಐದಧಿಕ ನಾಲ್ವತ್ತು=೪೫ ಭಾಗಗಳನ್ನು, ದೈತ್ಯರೊಳು=ಕಲಿ ಮೊದಲಾದ ದೈತ್ಯ ರಲ್ಲಿ ಇಟ್ಟನು.

ತಾತ್ಪರ್ಯ :—ಮೊದಲನೆಯ ಕಾಲುಭಾಗವನ್ನು ನೂರುಭಾಗ ಮಾಡಿ ಬ್ರಹ್ಮವಾಯುಗಳಿಗೆ ಕೊಟ್ಟನು. ಎರಡನೆಯ ಪಾದಾಂಶವನ್ನು ೧೦೦ ಭಾಗಮಾಡಿ, ೨೦ ಭಾಗಗಳನ್ನು ರುದ್ರದೇವರಿಗೂ, ಇಂದ್ರ ಮನ್ಮಥ ಇವ ರಿಗೆ ೧೫ ಭಾಗಗಳನ್ನು ಮಿಕ್ಕ ದೇವತೆಗಳಿಗೆ ೧೦ ಭಾಗಗಳನ್ನು, ಎಲ್ಲಾ ಜೀವಸಮುದಾಯಕ್ಕೂ ೧೦ ಭಾಗಗಳನ್ನೂ ಕಲಿ ಮೊದಲಾದ ದೈತ್ಯರಿಗೆ ೪೫ ಭಾಗಗಳನ್ನೂ ಕೊಟ್ಟನು. ॥ ೧೨ ॥

ಕಾರುಣಿಕ ಸ್ವಾತಂತ್ರಿಯತ್ವವ
ಮೂರು ವಿಧಗೈಸೆತಡು ತನ್ನೊಳು
ನಾರಿಗೊಂದನು ಕೊಟ್ಟು ಸ್ವಾತಂತ್ರಿಯವ ಸರ್ವರಿಗೆ ॥

**ಧಾರುಣಿಪ ತನ್ನನುಗರಿಗೆ ವ್ಯಾ**
**ಪಾರ ಕೊಟ್ಟು ಗುಣಾಗುಣಗಳ ವಿ**
**ಚಾರಮಾಡುವ ತೆರದಿ ತ್ರಿಗುಣವ ವ್ಯಕ್ತಿಯನೆ ಮಾಳ್ಪ ||**

**ಪದ್ಯಾರ್ಥ** :— ಕಾರುಣಿಕ = ಕರುಣಾಳುವಾದ ಶ್ರೀಹರಿಯು, ಸ್ವಾತಂತ್ರ್ಯತ್ವವ=ಉಳಿದ ಅರ್ಧ ಸ್ವಾತಂತ್ರ್ಯವನ್ನು, ಮೂರುವಿಧಗೈಸಿ=ಮೂರು ಭಾಗಮಾಡಿ, ಎರಡು ತನ್ನೊಳು=ಎರಡು ಭಾಗಗಳನ್ನು ತಾನು ಇಟ್ಟುಕೊಂಡು ಒಂದನು, ನಾರಿಗೆ=ಪತ್ನಿಯಾದ ಲಕ್ಷ್ಮೀದೇವಿಯರಿಗೆ, ಕೊಟ್ಟನು. ಧಾರುಣಿಪ=ಮಹಾರಾಜನು, ತನ್ನನುಗರಿಗೆ=ತನ್ನ ಭೃತ್ಯಜನರಿಗೆ, ವ್ಯಾಪಾರ ಕೊಟ್ಟು. ಸ್ವತಂತ್ರದಿಂದ ಕೆಲಸಗಳನ್ನು ಮಾಡುವಂತೆ ಅಧಿಕಾರದ ಅಪ್ಪಣೆಯನ್ನು ಕೊಟ್ಟು, ಗುಣಾಗುಣಗಳ=ಅವರು ಮಾಡಿದ ಕಾರ್ಯಗಳ ಗುಣಾವಗುಣಗಳನ್ನು ವಿಚಾರಮಾಡುವ ತೆರದಿ, ತ್ರಿಗುಣವ=ಜೀವರ ಸ್ವಭಾವ ಭೂತವಾದ ಸತ್ವ ರಜಸ್ತಮೋಗುಣಗಳನ್ನು,ವ್ಯಕ್ತಿಯನೆ ಮಾಳ್ಪ ಇವರು ಸಾತ್ವಿಕರು, ಇವರು ರಾಜಸರು, ಇವರು ತಾಮಸರೆಂದು ಅವರು ಮಾಡುವ ಕರ್ಮಗಳಿಂದ ವ್ಯಕ್ತಿಪಡಿಸುವನು.

ತಾತ್ಪರ್ಯ :—ಉಳಿದ ಎರಡು ಭಾಗಗಳನ್ನು ಮೂರು ಭಾಗಗಳನ್ನಾಗಿ ಮಾಡಿ ಎರಡು ತಾನಿಟ್ಟುಕೊಂಡು ಲಕ್ಷ್ಮೀದೇವಿಯರಿಗೆ ಒಂದು ಭಾಗವನ್ನು ಕೊಟ್ಟನು. ಹೀಗೆ ಸ್ವಾತಂತ್ರ್ಯವನ್ನು ಅವರವರಿಗೆ ಹಂಚಿ, ರಾಜನು ಭೃತ್ಯರಿಗೆ ಕೆಲಸವನ್ನು ಮಾಡುವ ಸ್ವಾತಂತ್ರ್ಯವನ್ನು ಕೊಟ್ಟು ಅವರು ಮಾಡಿದ ಕಾರ್ಯಗಳ ಗುಣಾವಗುಣಗಳನ್ನು ವಿಚಾರಮಾಡಿ ಅವರವರ ಕರ್ಮದಿಂದ ಅವರವರ ಯೋಗ್ಯತೆಯನ್ನು ವ್ಯಕ್ತಿಪಡಿಸುವಂತೆ, ಪರಮಾತ್ಮನು ಜೀವರ ಯೋಗ್ಯತೆಯನ್ನು ಅವರಿಂದ ಮಾಡಿಸುವ ಕರ್ಮಗಳಿಂದ ಇವರು ಸಾತ್ವಿಕರು, ಇವರು ರಾಜಸರು, ಇವರು ತಾಮಸರು ಎಂದು ಅವರ ಯೋಗ್ಯತೆಯನ್ನು ವ್ಯಕ್ತಿಪಡಿಸುವನು. || ೧೩ ||

**ಪುಣ್ಯಕರ್ಮಕೆಸಹಾಯವಾಗುವ**
**ಧನ್ಯರಿಗೆ ಕಲ್ಯಾದಿ ದೈತ್ಯರ**
**ಪುಣ್ಯಫಲಗಳನೀವದಿತಿಜರಪಾಪಕರ್ಮಫಲ ||**
**ಅನ್ಯಕರ್ಮವ ಮಾಳ್ಪರಿಗೆ ಅನು**
**ಗುಣ್ಯಜನರಿಗೆ ಕೊಡುವ ಬಹುಕಾ**
**ರುಣ್ಯಸಾಗರ ಈ ತೆರದಿ ಭಕ್ತರನು ಸಂತೈಪ ||**

ಪದ್ಯಾರ್ಥ :—ಪುಣ್ಯಕರ್ಮಕೆಸಹಾಯವಾಗುವ=ಪುಣ್ಯಕರ್ಮಗಳಿಗೆ ಸಹಾಯಮಾಡುವ, ಧನ್ಯರಿಗೆ=ಪುಣ್ಯಪುರುಷರಿಗೆ, ಕಲ್ಯಾದಿ ದೈತ್ಯರ, ಪುಣ್ಯಫಲಗಳನು, ಈವ, ಅದಿತಿಜರ=ದೇವತೆಗಳ, ಪಾಪಕರ್ಮಫಲ=ಪಾಪಕರ್ಮಗಳ ಫಲವನ್ನು, ಅನ್ಯಕರ್ಮವ ಮಾಳ್ಪರಿಗೆ=ಪಾಪಕರ್ಮವನ್ನು ಮಾಡುವವರಿಗೆ, ಅನುಗುಣ್ಯಜನರಿಗೆ=ಸಹಾಯ ಮಾಡುವವರಿಗೆ, ಕೊಡುವ, ಕಾರುಣ್ಯಸಾಗರ, ಈ ತೆರದಿ, ಭಕ್ತರನು,ಸಂತೈಪ.

ತಾತ್ಪರ್ಯ—ಪುಣ್ಯಕರ್ಮಕ್ಕೆ ಸಹಾಯ ಮಾಡುವವರಿಗೆ, ಕಲಿ ಮೊದಲಾದವರು ಮಾಡುವ ಪುಣ್ಯ ಫಲವನ್ನು ಕೊಡುವನು ದೇವತೆಗಳು ಮಾಡುವ ಪಾಪಕರ್ಮ ಫಲವನ್ನು ಪಾಪಮಾಡುವವರಿಗೆ ಸಹಾಯಕರು ಯಾರೋ ಅವರಿಗೆ ಕೊಡುವನು ಈ ಪ್ರಕಾರ ಕರುಣಾಸಮುದ್ರನಾದ ಹರಿಯು, ಭಕ್ತರನ್ನು ಸರ್ವಪ್ರಕಾರ ರಕ್ಷಿಸುವನು ||೧೪||

ಹಿಂದಿನ ಪದ್ಯದಲ್ಲಿ ತಾನು ಕೊಟ್ಟ ಸ್ವಾತಂತ್ರ್ಯದಿಂದ ಜೀವರು ಮಾಡುವ ಕರ್ಮಾನುಸಾರವಾಗಿ ತ್ರಿವಿಧಜೀವರ ಯೋಗ್ಯತೆಯನ್ನು ವ್ಯಕ್ತಿಪಡಿಸುವನೆಂದು ಹೇಳಿದ್ದರು. ಇವರು ಸಾತ್ವಿಕರು, ಇವರು ರಾಜಸರು, ಇವರು ತಾಮಸರೆಂದು ತೋರಿಸಿಕೊಡುವುದಕ್ಕಾಗಿ ೫ ಪದ್ಯಗಳಿಂದ ತ್ರಿವಿಧಜೀವರ ಲಕ್ಷಣವನ್ನು ಹೇಳುತ್ತಾರೆ—

(೧೫ ಮೊದಲು ೧೭ನೆಯ ಪದ್ಯದವರೆಗೂ ೧೭ನೆಯ ಪದ್ಯದ ಕಡೆಯಲ್ಲಿರುವ "ತಮವೆ ವರ್ಧಿಪುದು" ಎಂಬ ಕ್ರಿಯಾಪದದಲ್ಲಿ ಅನ್ವಯವೆಂದು ತಿಳಿಯಬೇಕು.)

ನಿರುಪಮಗೆ ಸರಿಯುಂಟು ಯೆಂದು
ಚ್ಚರಿಸುವವ ತದ್ಭಕ್ತರೊಳು ಮ
ತ್ಸರಿಸುವವಗುಣಗಣಗಳಿಗೆ ಭೇದಗಳ ಪೇಳುವವ ||
ದರಸುದರ್ಶನ ಊರ್ಧ್ವಪುಂಡ್ರವ
ಧರಿಸಿದವರೊಳು ದ್ವೇಷಿಸುವ ಹರಿ

ಚರಿತೆಗಳ ಕೇಳದಲೆ ಲೋಕರ ವಾರ್ತೆ ಕೇಳುವವ ||

ಪದ್ಯಾರ್ಥ—ನಿರುಪಮಗೆ=ಉಪಮಾನ ರಹಿತನಾದ ಪರಮಾತ್ಮನಿಗೆ, ಸರಿಯುಂಟು ಯೆಂದು, ಉಚ್ಚರಿಸುವವ=ಹೇಳುವವನು, ತದ್ಭಕ್ತ

ರೊಳು=ಪರಮಾತ್ಮನ ಭಕ್ತರಲ್ಲಿ, ಮತ್ಸರಿಸುವವ=ಹೊಟ್ಟೆಯುಕಿಚ್ಚು ಪಡುವವನು, ಗುಣಗಳಿಗೆ=ಪರಮಾತ್ಮನ ಆನಂದಾದಿ ಗುಣಸಮೂಹಗಳಿಗೆ, ಭೇದಗಳ ಪೇಳುವವ, ದರ=ಶಂಖ, ಸುದರ್ಶನ=ಚಕ್ರ, ಊರ್ಧ್ವಪುಂಡ್ರವ= ದ್ವಾದಶ ನಾಮುಗಳನ್ನು, ಧರಿಸಿದವರೊಳು, ದ್ವೇಷಿಸುವವ, ಹರಿಚರಿತೆಗಳ ಕೇಳದಲೆ, ಲೋಕರ ವಾರ್ತೆಗಳ= ಲೌಕಿಕ ಸಂಬಂಧವಾದ ಹಾಳು ಹರಟೆಗಳನ್ನು ಕೇಳುವವ ||೧೫||

ಏವಮಾದಿ ದ್ವೇಷಉಳ್ಳ ಕು
ಜೀವರೆಲ್ಲರು ದೈತ್ಯರೆಂಬೊರು
ಕೋವಿದರ ವಿಜ್ಞಾನಕರ್ಮವ ನೋಡಿ ನಿಂದಿಪರು ||
ದೇವದೇವನ ಬಿಟ್ಟು ಯಾವ
ಜ್ಜೀವಪರಿಯಂತರದಿ ತುಚ್ಛರ
ಸೇವೆಯಿಂದುಪಜೀವಿಸುವರ ಜ್ಞಾನಕೊಳಗಾಗಿ ||

ಪದ್ಯಾರ್ಥ :—ಏವಮಾದಿ= ಇವೆ ಮೊದಲಾದ, ದ್ವೇಷಉಳ್ಳ= ದ್ವೇಷಗಳನ್ನು ಮಾಡುತ್ತಿರುವ, ಕುಜೀವರೆಲ್ಲರೂ= ಪಾಪಿಜೀವರೆಲ್ಲರೂ, ದೈತ್ಯರೆಂಬೊರು= ದೈತ್ಯರೆಂದು ಕರಿಸಿಕೊಳ್ಳುವರು ಕೋವಿದರ ವಿಜ್ಞಾನ ಕರ್ಮವ= ಜ್ಞಾನಿಗಳ ವಿಶೇಷವಾದ ಜ್ಞಾನಕರ್ಮಗಳನ್ನು, ನೋಡಿ, ನಿಂದಿಪರು= ನಿಂದಿಸುವರು, ದೇವದೇವನ= ದೇವತೆಗಳಿಗೆ ದೇವನಾದ ಶ್ರೀ ಹರಿಯನ್ನು, ಬಿಟ್ಟು, ಯಾವಜ್ಜೀವ ಪರಿಯಂತರದಿ= ತಾವು ಬದುಕಿರುವವರೆಗೂ, ತುಚ್ಛರ ಸೇವೆಯಿಂದ= ನೀಚರಾದ ತಮೋಯೋಗ್ಯರ ಸೇವೆಯಿಂದ, ಅಜ್ಞಾನಕೊಳಗಾಗಿ, ಉಪಜೀವಿಸುವರು ಮತ್ತು ||೧೬||

ಕಾಮ ಲೋಭ ಕ್ರೋಧ ಮದ ಹಿಂ
ಸಾಮಯಾನೃತದಂಭಕಪಟ ತ್ರಿ
ಧಾಮನವತಾರಗಳ ಭೇದ ಅಪೂರ್ಣ ಸುಖಬದ್ಧಾ ||
ಆಮಿಷನಿವೇದಿತವಭೋಜ್ಯತಿ
ತಾಮಸಾನ್ನವನುಂಬತಾಮನ
ಶ್ರೀಮದಾಂಧರ ಸಂಗದಿಂದಲಿ ತಮನೆ ವರ್ಧಿಪುದು ||

ಪದ್ಯಾರ್ಥ :—ಕಾಮ, ಲೋಭ, ಕ್ರೋಧ= ಕೋಪ, ಮದ, ಹಿಂಸಾಮಯ= ಸರ್ವದಾ ಪ್ರಾಣಿಗಳನ್ನು ಹಿಂಸಿಸುತ್ತಿರುವಿಕೆ, ಅನೃತ=

ಸುಳ್ಳು, ದಂಭಾ, ಕಪಟ ಇವೇ ಮೊದಲಾದ ದೋಷಗಳು; ತ್ರಿಧಾಮನ= ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಸ್ಥಾನಗಳಲ್ಲಿ ಮನೆ ಗಳುಳ್ಳ, ಶ್ರೀ ಪರಮಾತ್ಮನ ಅವತಾರಗಳ ಭೇದ= ರಾಮಕೃಷ್ಣಾದಿ ರೂಪಗಳಲ್ಲಿ ಭೇದಗಳನ್ನು ಹೇಳುವಿಕೆ, ಅಪೂರ್ಣಸುಖ=ಪರಮಾತ್ಮನು ಪೂರ್ಣಸುಖನಲ್ಲವೆನ್ನುವುದು. ಬದ್ಧನೆನ್ನುವುದು. ಆಮಿಷ= ಮಾಂಸ ಮತ್ತು ಆಮಿಷವೆಂದು ಧರ್ಮಶಾಸ್ತ್ರಗಳಲ್ಲಿ ನಿಷೇಧಮಾಡಿರುವ " ಪ್ರಾ ಣ್ಯಂಗೇಚರ್ಣಂ ಚರ್ಮಾಂಬು" ಚಿಪ್ಪುಸುಣ್ಣ, ಚರ್ಮದಲ್ಲಿ ಇಟ್ಟಿರುವ ನೀರು ಮೊದಲಾದವುಗಳನ್ನು ಆಮಿಷವೆಂದುಹೇಳಿರುವರು. ಇಂತಹ ಪದಾ ರ್ಥವನ್ನು ತಿನ್ನುವುದು ತಾಮಸ ಪದಾರ್ಥಗಳು ಅಂದರೆ ಬಿಳಿಯ ಬದ ನೆಯಕಾಯಿ, ಈರುಳ್ಳಿ ಬೆಳ್ಳುಳ್ಳಿ ಮೊದಲಾದ ಪದಾರ್ಥಗಳನ್ನು ತಿನ್ನು ವುದು, ಐಶ್ವರ್ಯದಿಂದ ಮದಾಂಧರಾದ, ತಾಮಸಜನರ ಸಹವಾಸವನ್ನು ಮಾಡುವುದು ಇಂತಹ ಕಾರ್ಯಗಳಿಂದ ತಮವೆ ವರ್ಧಿಪುದು=ತಮೋಗುಣ ವೇ ವೃದ್ಧಿಯಾಗುವುದು.

ತಾತ್ಪರ್ಯ:—೧೫-೧೬-೧೭ ಈ ಮೂರು ಪದ್ಯಗಳ ತಾತ್ಪರ್ಯವೂ ಇಲ್ಲಿ ಬರೆಯಲ್ಪಡುತ್ತೆ:—ತಾಮಸರ ಲಕ್ಷಣವನ್ನು ಈ ಮೂರು ಪದ್ಯ ಗಳಿಂದ ಹೇಳುತ್ತಾರೆ:—ಪರಮಾತ್ಮನಿಗೆ ಸಮರು ಬ್ರಹ್ಮರುದ್ರಾದಿಗ ಳೆಂದು ಹೇಳುವವರು; ಅಥವಾ ಪರಮಾತ್ಮನೇ ತಾನೆಂದು ಹೇಳುವವರು; ಅವನ ಭಕ್ತರಾದ ದೇವತೆಗಳಲ್ಲಿ ಅಸೂಯೆ ಪಡುವವರು, ಪರಮಾತ್ಮನ ಆನಂದಾದಿ ಗುಣಗಳಿಗೂ ಪರಮಾತ್ಮನಿಗೂ ಭೇದವನ್ನು ಹೇಳುವವರು; (೧೨) ದ್ವಾದಶ ಪುಂಡ್ರಗಳನ್ನು ಗೋಪೀ ಚಂದನದಿಂದ ಧರಿಸಿ, ಶಂಖ ಚಕ್ರಾದಿ ಪಂಚಮುದ್ರೆಗಳನ್ನು ದರಿಸಿದ ವೈಷ್ಣವರನ್ನು ನೋಡಿ ದೂಷಿಸುವವರು, ಪರಮಾತ್ಮನ ಚರಿತ್ರೆಗಳನ್ನು ಕೇಳದೆ ಹಾಳು ಹರಟೆಗಳನ್ನು ಕೊಚ್ಚುತ್ತಾ ಕೂತಿರುವವರು, ಇಂತಹವರೆಲ್ಲರನ್ನೂ ದೈತ್ಯ ರೆಂದು ತಿಳಿಯಬೇಕು. ಜ್ಞಾನಿಗಳನ್ನು ನೋಡಿ ಅವರ ಗುಣ ಕರ್ಮ ಗಳನ್ನು ದೂಷಿಸುವವರು, ಪರಮಾತ್ಮನ ಪೂಜಾದಿಗಳನ್ನು ಬಿಟ್ಟು ತಮ್ಮ ಯಾವಜ್ಜೀವವು ನೀಚಜನರ ಸೇವೆಯಿಂದಲೇ ಕಾಲವನ್ನು ಕಳೆಯುವವರು, ಇವರೆಲ್ಲರನ್ನೂ ತಾಮಸರೆಂದು ಭಾವಿಸಬೇಕು. ವಿಷ್ಣುರಹಸ್ಯದಲ್ಲಿ "ದಂಭೋಮಾನೋ ಮದೋಹಿಂಸಾ ಪಾರುಷ್ಯಂ ಕಪಟಾನೃತೇ|| ಜಾಯಂತೆ

ತಮಸೋಽಭಿವೃದ್ಧೆ ಕಲಿಸ್ತತ್ರಾಧಿದೇವತಾ|| ತಾಮಸಾನ್ನಸ್ಯಭೋಗೇನ ತಾಮಸಾನಾಂಚ ಸಂಗತೆ || ತಾಮಸೇನ ಸ್ವಭಾವೇನ ತಮೋವೃದ್ಧಿಃಪ್ರಜಾಯತೆ '' ದಂಭ ಅಭಿಮಾನ ಮೊದಲಾದವು ತಮೋಗುಣವೃದ್ಧಿಗೆ ಕಾರಣವಾಗುವವು. ಅವುಗಳಿಗಧಿಪತಿಯು ಕಲಿಯು. ತಾಮಸಾನ್ನವನ್ನು ಭುಂಜಿಸುವುದೂ ತಾಮಸರ ಸಹವಾಸಮಾಡುವುದು ಇವುಗಳಿಂದ ತಮೋಗುಣವು ವೃದ್ಧಿಯಾಗುವುದು ಎಂದು ಹೇಳಿರುವರು. ಇದೇ ಅರ್ಥವನ್ನೇದಾಸಾರ್ಯರು ಇಲ್ಲಿ ಹೇಳುತ್ತಾರೆ:— ಕಾಮಕ್ರೋಧ ಮೊದಲಾದವು ರಾಮಕೃಷ್ಣಾದಿ ಅವತಾರ ರೂಪಗಳಲ್ಲಿ ಭೇದಗಳನ್ನು ಹೇಳುವುದು, ಪರಮಾತ್ಮನು ಅಪೂರ್ಣ ಸುಖನು; ಬದ್ಧನು ಎಂದು ಹೇಳುವುದು ಮಾಂಸಾದಿಗಳನ್ನೂ ದೇವರ ನೈವೇದ್ಯವಿಲ್ಲದ ಪದಾರ್ಥಗಳನ್ನು ತಿನ್ನುವುದು, ತಾಮಸರಮನೆಯಲ್ಲಿ ಉಣ್ಣುವುದು, ತಾಮಸರ ಸಹವಾಸಮಾಡುವದು ಇವೆಲ್ಲವು ತಮೋಗುಣ ವೃದ್ಧಿಗೆ ಕಾರಣವು. ಈ ಗುಣಗಳುಳ್ಳವರೆಲ್ಲರೂ ತಾಮಸರೆಂದು ತಿಳಿಯಬೇಕು. || ೧೭ ||

ಸಜ್ಜನರ ಲಕ್ಷಣವನ್ನು ಹೇಳುತ್ತಾರೆ.—

ಜ್ಞಾನಭಕ್ತಿವಿರಕ್ತಿವಿನಯಪು
ರಾಣಶಾಸ್ತ್ರಶ್ರವಣ ಚಿಂತನ
ದಾನಶಮದಮ ಯಜ್ಞಸತ್ಯಾಹಿಂಸಭೂತದಯಾ ||
ಧ್ಯಾನಭಗವನ್ನಾಮಕೀರ್ತನ
ಮೌನಜಪತಪವ್ರತಸುತೀರ್ಥ
ಸ್ನಾನ ಮಂತ್ರಸ್ತೋತ್ರವಂದನ ಸಜ್ಜನರ ಗುಣವೂ ||

ಪದ್ಯಾರ್ಥ :— ವಿಶದವಾಗಿರುವುದು.

ತಾತ್ಪರ್ಯ :—ಭಗವದ್ವಿಷಯಕಜ್ಞಾನ, ಪರಮಾತ್ಮನಲ್ಲಿ ಭಕ್ತಿ, ಸಂಸಾರದಲ್ಲಿ ವಿರಕ್ತಿ, ದೊಡ್ಡವರಲ್ಲಿ ವಿನಯ, ಭಾಗವತಾದಿಪುರಾಣಗಳು, ಬ್ರಹ್ಮ ಸೂತ್ರ ಭಾಷ್ಯ ಮೊದಲಾದ ಸಚ್ಛಾಸ್ತ್ರಗಳು, ಇವುಗಳ ಶ್ರವಣ, ಅವುಗಳ ಮನನ, ದಾನಕೊಡುವುದು, ಶಮ ಅಂದರೆ ‹‹ಶಮೋಮನ್ನಿಷ್ಟತಾ ಬುದ್ಧೇಃದಮ ಇಂದ್ರಿಯನಿಗ್ರಹಃ'' ಎಂಬ ಭಾಗವತ ಏಕಾದಶಸ್ಕಂಧದ ವಾಕ್ಯದಂತೆ, ಭಗವನ್ನಿಷ್ಟವಾದ ಬುದ್ಧಿಯು, ಶಮವು. ಇಂದ್ರಿಯ ನಿಗ್ರಹವೇ ದಮವು ಯಾಗಮಾಡುವುದು ಸತ್ಯ ಅಹಿಂಸೆ, ಭೂತದಯೆ,

ಪರಮಾತ್ಮನ ಧ್ಯಾನ, ಭಗವನ್ನಾಮಕೀರ್ತನೆ, ಇತರ ವಿಷಯುವಾದಮಾತು ಗಳಲ್ಲಿ ಮೌನ; ಅಷ್ಟಾಕ್ಷರಾದಿ ಮಹಾಮಂತ್ರಗಳ ಜಪ; ತಪಸ್ಸು ಅಂದರೆ, ಭಗವಂತನ ಆನಂದಾದಿಗುಣಗಳನ್ನು ಆಲೋಚಿಸುವುದು : ವಿಷ್ಣು ಸಂಬಂಧವಾದ ವ್ರತಗಳನ್ನು ವಿಷ್ಣುಪ್ರೀತಿಗಾಗಿ ಮಾಡುವುದು ; ಉತ್ತಮ ವಾದ ತೀರ್ಥಗಳಲ್ಲಿ ಸ್ನಾನಮಾಡುವುದು; ಪುರುಷಸೂಕ್ತಾದಿ ಮಂತ್ರಗ ಳನ್ನು ಪಠಿಸುವುದು; ಸಾಷ್ಟಾಂಗನಮಸ್ಕಾರ ಮಾಡುವುದು ಇವೆಲ್ಲವೂ ಸಾತ್ವಿಕರಾದ ಸಜ್ಜನರ ಸ್ವಭಾವಗುಣಗಳು ||೧೮||

ಅವತಾರಿಕೆ :—ಅಸ್ವತಂತ್ರನಾದ ಜೀವನು ಪರಮಾತ್ಮನು ಕೊಟ್ಟ ಅಲ್ಪ ಸ್ವಾತಂತ್ರ್ಯ ಬಲದಿಂದಲೆ ಶ್ವಾಸಾದಿಗಳನ್ನು ಬಿಡುತ್ತಾ ಬದುಕಿರುವ ನೆಂದು ಹೇಳುತ್ತಾರೆ- -

ಲೇಶಸ್ವಾತಂತ್ರ್ಯಯ ಗುಣವನು ಪ್ರ
ವೇಶಗೈಸಿದ ಕಾರಣದಿ ಗುಣ
ದೋಷಗಳು ತೋರುವವು ಸತ್ವಾಸತ್ವಜೀವರೊಳು ||
ಶ್ವಾಸಭೋಜನ ಪಾನ ಶಯನ ವಿ
ಲಾಸ ಮೈಥುನಗಮನ ಹರ್ಷ
ಕ್ಲೇಶಸ್ವಪ್ನಸುಷುಪ್ತಿ ಜಾಗ್ರತಿಯಹವು ಚೇತನಕೆ ||

ಪದ್ಯಾರ್ಥ—ಲೇಶಸ್ವಾತಂತ್ರಿಯ ಗುಣವನು=ಪರಮಾತ್ಮನ ಸ್ವಾ ತಂತ್ರ್ಯದಲ್ಲಿ ಅಲ್ಪಾಂಶವಾದ ಸ್ವಾತಂತ್ರ್ಯ ಗುಣವನ್ನು, ಪ್ರವೇಶಗೈಸಿದ ಕಾರಣ=ಜೀವರಲ್ಲಿ ಇಟ್ಟ ಕಾರಣದಿಂದ,ಸತ್ವಾಸತ್ವ ಜೀವರೊಳು, ಸಾತ್ವಿಕ ರಾಜಸ ತಾಮಸ ಜೀವರೊಳಗೆ, ಗುಣದೋಷಗಳು=ಪುಣ್ಯ ಪಾಪ ಕರ್ಮ ಗಳ ಸಂಬಂಧವಾದ ಗುಣದೋಷಗಳು, ತೋರುವವು. ಚೇತನಕೆ=ಜೀವ ರಿಗೆ, ಶ್ವಾಸ=ಶ್ವಾಸ ಬಿಡುವುದು, ಭೋಜನ=ಉಣ್ಣುವುದು, ಪಾನ= ಕುಡಿಯುವುದು; ಶಯನ=ಮಲಗುವುದು; ವಿಲಾಸ=ಭಾರ್ಯಾದಿಗಳೊಂ ದಿಗ ಏಕಾಂತಭಾಷಣಾದಿಗಳನ್ನಾಡುವುದು; ಮೈಥುನ=ಭೋಗಿಸುವುದು; ಗಮನ=ನಡೆಯುವುದು;ಹರ್ಷ=ಸಂತೋಷಪಡುವುದು; ಕ್ಲೇಶ=ದುಃಖ ವನ್ನನುಭವಿಸುವುದು; ಸ್ವಪ್ನ=ಸ್ವಪ್ನ ಕಾಣುವುದು; ಸುಷುಪ್ತಿ=ನಿದ್ರೆ ಮಾಡುವುದು, ಜಾಗ್ರತಿ=ಎಚ್ಚರವಾಗುವದು ಮೊದಲಾದವು; ಅಹವು || ಆಗುವವು.

ತಾತ್ಪರ್ಯ :—" ಸ್ವಾತಂತ್ರ್ಯ ಲೇಶದಾನೇನ ಜೀವಃ ಶ್ವಸತಿ ಜೃಂಭತೆ " ಇತ್ಯಾದಿ ವಿಷ್ಣುರಹಸ್ಯದ ೨೧ನೆಯ ಅಧ್ಯಾಯದ ವಾಕ್ಯಾನುಸಾರವಾಗಿ ಶ್ರೀ ಪರಮಾತ್ಮನು ಜೀವರಿಗೆ ಕೊಟ್ಟ ಅಲ್ಪಸ್ವಾತಂತ್ರ್ಯದ ಸಾಮರ್ಥ್ಯದಿಂದಲೇ ಸಾತ್ವಿಕ, ರಾಜಸ, ತಾಮಸ ಜೀವರ ಯೋಗ್ಯತಾನುಸಾರವಾಗಿ ಗುಣದೋಷಗಳು ತೋರುವವು. ಜೀವರು ಶ್ವಾಸ ಬಿಡುವುದು; ಭೋಜನ ಮಾಡುವುದು; ಕುಡಿಯುವುದು; ಮಲಗುವುದು; ಸ್ತ್ರೀಯರೊಂದಿಗೆ ಏಕಾಂತವಾದ ಸರಸಸಲ್ಲಾಪಗಳು, ಭೋಗ ಮೊದಲಾದುವುಗಳನ್ನನುಭವಿಸುವುದು, ನಡೆಯುವುದು, ಹರ್ಷ ಶೋಕಗಳನ್ನನುಭವಿಸುವುದು, ಸ್ವಪ್ನ ಕಾಣುವುದು, ನಿದ್ರೆ ಮಾಡುವುದು, ಎಚ್ಚರವಾಗಿರುವುದು ಮೊದಲಾದ ಎಲ್ಲಾ ಕಾರ್ಯಗಳೂ ಆಗುವವು. ಇವು ಪರಮಾತ್ಮನು ಕೊಟ್ಟ ಸ್ವಾತಂತ್ರ್ಯದಿಂದಲೇ ಆಗುವುದರಿಂದ ಜೀವನು ಸ್ವತಂತ್ರ ಕರ್ತನಲ್ಲವೆಂದು ಭಾವ ||೧೯||

ಅರ್ಧ ತನ್ನೊಳಗಿರಿಸಿ ಉಳಿದೊಂ
ದರ್ಧ ವಿಭಾಗವಗೈಸಿ ವೃಜಿ
ನಾರ್ದನನು ಪೂರ್ವದಲಿ ಸ್ವಾತಂತ್ರ್ಯವ ಕೊಟ್ಟಂತೆ ||
ಸ್ವರ್ಧುನೀಪಿತ ಕೊಡುವವರ ಸುಖ
ವೃದ್ಧಿಗೋಸುಗ ಬ್ರಹ್ಮ ವಾಯು ಕ
ಪರ್ದಿ ಮೊದಲಾದವರೊಳಿರ್ದವರ್ಯೋಗ್ಯತೆಯನರಿತು ||

ಪದ್ಯಾರ್ಥ :—ಅರ್ಧ ತನ್ನೊಳಗಿರಿಸಿ=ತನ್ನ ಸ್ವಾತಂತ್ರ್ಯದ ೪ ಭಾಗಗಳಲ್ಲಿ ಎರಡು ಭಾಗಗಳನ್ನು ತಾನು ಇಟ್ಟುಕೊಂಡು, ಉಳಿದ ಒಂದರ್ಧ, ವಿಭಾಗವಗೈಸಿ=ಭಾಗಗಳನ್ನು ಮಾಡಿ, ವೃಜಿನಾರ್ದನನು= ಕಷ್ಟವನ್ನು ಪರಿಹರಿಸುವ ಶ್ರೀ ಹರಿಯು, ಪೂರ್ವದಲಿ=ಇದರ ಹಿಂದೆ ೧೧-೧೨ನೆಯ ಪದ್ಯಗಳಲ್ಲಿ ವಿವರ ಮಾಡಿದಂತೆ, ಸ್ವಾತಂತ್ರ್ಯವ ಕೊಟ್ಟಂತೆ =ಅವರವರ ಯೋಗ್ಯತಾನುಸಾರ ಸ್ವಾತಂತ್ರ್ಯವನ್ನು ಯಾವರೀತಿಯಿಂದ ಹಂಚಿಕೊಟ್ಟಿರುವನೋ ಅದೇ ರೀತಿಯಾಗಿ, ಸ್ವರ್ಧುನೀಪಿತ=ಗಂಗೆಯನ್ನು ಪಡೆದ ಶ್ರೀಹರಿಯು, ಬ್ರಹ್ಮ ವಾಯು ಕಪರ್ದಿ ಮೊದಲಾದವರೊಳು= ಬ್ರಹ್ಮ ವಾಯು ರುದ್ರ ಮೊದಲಾದ ದೇವತೆಗಳೊಳಗೆ, ಅವರ ಸುಖವೃದ್ಧಿಗೋಸುಗ, ಆ ದೇವತೆಗಳಿಗೆ ಸುಖವನ್ನು ವೃದ್ಧಿ ಮಾಡಿಸುವುದಕ್ಕಾಗಿ, ಇದ್ದು

ಸ್ವತಂತ್ರರೂಪದಿಂದಿದ್ದು, ಅವರ ಯೋಗ್ಯತೆಯನರಿತು=ಬ್ರಹ್ಮಾದಿ ದೇವತೆಗಳ ಯೋಗ್ಯತೆಯನ್ನು ತಿಳಿದು ಅದರಂತೆ, ಕೊಡುವ=ತಾರತಮ್ಯ ಪ್ರಕಾರ ಸುಖವನ್ನು ಕೊಡುವನು.'

ತಾತ್ಪರ್ಯ :—ಈ ಸಂಧಿಯ ೧೧-೨೨ನೆಯ ಪದ್ಯಗಳಲ್ಲಿ ಹೇಳಿದ ಪ್ರಕಾರ ತನ್ನ ಸ್ವಾತಂತ್ರ್ಯದ ಅರ್ಧಾಂಶವನ್ನು ಭಾಗಮಾಡಿ ೫೨, ೪೮, ೨೦, ೧೫, ೧೦ ಈ ಪ್ರಕಾರ ಸ್ವಾತಂತ್ರ್ಯ ಭಾಗಗಳನ್ನು, ಬ್ರಹ್ಮ,ವಾಯು ರುದ್ರ, ಇಂದ್ರ ಮೊದಲಾದವರಿಗೆ ಕೊಟ್ಟು, ಆ ಸ್ವಾತಂತ್ರ್ಯದ ತಾರತಮ್ಯವನ್ನನುಸರಿಸಿ ಅವರೊಳಗಿದ್ದು ಅವರವರ ಯೋಗ್ಯತಾನುಸಾರ ಜ್ಞಾನ ಭಕ್ತಿಗಳನ್ನು ಕೊಡಿಸಿ, ಆ ತಾರತಮ್ಯ ಪ್ರಕಾರವೆ ಮುಕ್ತಿಯಲ್ಲಿ ಆನಂದವನ್ನು ಕೊಡಿಸುವನು ಅಂದರೆ ಬ್ರಹ್ಮದೇವರಿಗೆ ೫೨ ಭಾಗ ಸ್ವಾತಂತ್ರ್ಯವಿದ್ದುದರಿಂದ ಅವರು ಹೆಚ್ಚಿನ ಸಾಧನೆಯನ್ನು ಮಾಡುವರು. ರುದ್ರದೇವರಿಗೆ ೨೦ ಭಾಗಗಳು, ಇಂದ್ರ ಕಾಮರಿಗೆ ೧೫ ಭಾಗಗಳು ಕೊಟ್ಟ ಪ್ರಯುಕ್ತ ಆ ತಾರತಮ್ಯಪ್ರಕಾರ ಅವರವರ ಸಾಧನವಾಗುವವು ಇದರಂತೆಯೇ ಸ್ವಾತಂತ್ರ್ಯ ಭಾಗಗಳನ್ನು ಅನುಸರಿಸಿ ಆನಂದದಲ್ಲೂ ಹೆಚ್ಚು ಕಮ್ಮಿಯಾಗುವುದು ಪರಮಾತ್ಮನ ಸ್ವರೂಪದಲ್ಲಿ ಭೇದವಿಲ್ಲದಿದ್ದರೂ, ಸ್ವತಂತ್ರರೂಪದಿಂದ ಬ್ರಹ್ಮಾದಿಗಳಲ್ಲಿರುವಾಗ ತೇಜೋವಿಶೇಷದಲ್ಲೂ ಜ್ಞಾನಾದಿಗಳನ್ನು ಪ್ರದರ್ಶನ ಮಾಡುವುದರಲ್ಲೂ ಹೇಗೆ ದೀಪದಲ್ಲಿ ಒಂದೇ ಬತ್ತಿ ಹಾಕಿದರೆ ಅದಕ್ಕೆ ತಕ್ಕ ಪ್ರಕಾಶವೂ, ೧೦ ಬತ್ತಿಗಳನ್ನು ಹಾಕಿದರೆ ಅದಕ್ಕೆ ತಕ್ಕ ಪ್ರಕಾಶವೂ ಏರ್ಪಡುವುದೋ ಹಾಗೆಯೇ ಬಲ ಜ್ಞಾನಾದಿಗಳಲ್ಲಿ ತಾರತಮ್ಯವನ್ನು ತೋರ್ಪಡಿಸುತ್ತಾ ಬ್ರಹ್ಮಾದಿಗಳಲ್ಲಿರುವನು ಅದರಂತೆ ಸಾಧನಗಳನ್ನು ಮಾಡಿಸುವನು. ಸಾಧನಾನುಸಾರ ಆನಂದದಲ್ಲಿ ತಾರತಮ್ಯವನ್ನು ಏರ್ಪಡಿಸಿ ಅವರವರ ಯೋಗ್ಯತಾನುಸಾರವಾಗಿಯೇ ಸುಖವನ್ನು ಕೊಡಿಸುವನೆಂಬ ತಾತ್ಪರ್ಯ ||೨೦||

ಹಲಧರಾನುಜ ಮಾಳ್ಪ ಕೃತ್ಯವ
ತಿಳಿಯದಾಹಂಕಾರದಿಂದೆ
ನ್ನುಳಿದು ವಿಧಿಯು ನಿಷೇಧ ಪಾತ್ರರು ಇಲ್ಲವೆಂಬುವಗೆ ||
ಫಲಗಳ ದ್ವಯಕೊಡುವ ದೈತ್ಯರ
ಕಲುಷ ಕರ್ಮವ ಬಿಟ್ಟು ಪುಣ್ಯವ
ಶೆಳೆದು ತನ್ನೊಳಗಿಟ್ಟು ಕ್ರಮದಿಂ ಕೊಡುವ ಭಕ್ತರಿಗೆ ||

ಪದ್ಯಾರ್ಥ :—ಹಲಧರ = ನೇಗಿಲನ್ನು ಧರಿಸಿರುವ ಬಲರಾಮನ, ಅನುಜ=ತಮ್ಮನಾದ ಶ್ರೀಕೃಷ್ಣನು ಮಾಳ್ಪ ಕೃತ್ಯವ= ನಮ್ಮೊಳಗಿದ್ದು ಮಾಡುವ ಕೃತ್ಯಗಳನ್ನು, ತಿಳಿಯದೆ, ಅಹಂಕಾರದಿಂದ, ಎನ್ನುಳಿದು= ನನ್ನನ್ನು ಬಿಟ್ಟು, ವಿಧಿಯು=ಮಾಡಬೇಕಾದ ಕೃತ್ಯವನ್ನು ಮಾಡುವುದಕ್ಕೂ, ನಿಷೇಧ = ಮಾಡಬಾರದ ಕರ್ಮವನ್ನು ಬಿಡುವುದಕ್ಕೂ, ಪಾತ್ರರು= ಅರ್ಹರು, ಇಲ್ಲವೆಂಬುವಗೆ ಫಲಗಳದ್ವಯ=ಎರಡು ವಿಧ ಪಾಪ ಫಲಗಳನ್ನೂ, ಅಂದರೆ, ಭಕ್ತರು ಮಾಡುವ ಪಾಪಕರ್ಮದ ಫಲ ಒಂದು ; ತಾನು ಮಾಡಿದ ಪಾಪಕರ್ಮದ ಫಲ ಒಂದು ಹೀಗೆ ಎರಡು ಭಾಗ ಪಾಪ ಫಲಗಳನ್ನು, ಅಂತಹವರಿಗೆ ಕೊಡುವ. ದೈತ್ಯರ ಕಲುಷ ಕರ್ಮವ ಬಿಟ್ಟು =ದೈತ್ಯರು ಮಾಡುವ ಪಾಪ ಕರ್ಮದ ಫಲವನ್ನು ದೈತ್ಯರ ಭಾಗಕ್ಕೇ ಬಿಟ್ಟು. ಪುಣ್ಯವ=ಅವರು ಮಾಡಿದ ಪುಣ್ಯ ಕರ್ಮವನ್ನು, ಶೆಳೆದು, ತನ್ನೊಳಗಿಟ್ಟು, ತಾನು ಇಟ್ಟುಕೊಂಡು ಕ್ರಮದಿಂ=ಕ್ರಮದಿಂದ, ಭಕ್ತರಿಗೆ ಕೊಡುವ.

ತಾತ್ಪರ್ಯ :—ಶ್ರೀಪರಮಾತ್ಮನು ನಮ್ಮೊಳಗಿದ್ದು ಪುಣ್ಯಪಾಪಾದಿ ಕರ್ಮಗಳನ್ನು ಮಾಡಿಸುವುದನ್ನು ತಿಳಿಯದೆ ಅಹಂಕಾರದಿಂದ ವಿಧಿನಿಷೇಧ ಕಾರ್ಯಗಳನ್ನು ನಾನೇ ಮಾಡುವೆನು ; ಪುಣ್ಯಮಾಡುವವನೂ ಪಾಪಮಾಡುವವನೂ ನಾನೇ ಯೆಂದು ಹೇಳುವವನಿಗೆ ಪರಮಾತ್ಮನು, ಅಂತಹವನು ಮಾಡಿದ ಪಾಪಕರ್ಮದ ಫಲವನ್ನು ಅವನಿಗೇ ಕೊಡುವದಲ್ಲದೆ ಭಕ್ತರು ಮಾಡುವ ಪಾಪಕರ್ಮದ ಫಲವನ್ನೂ ಅವನಿಗೆ ಕೊಡುವನು, ದೈತ್ಯರು ಮಾಡಿದ ಪಾಪಕರ್ಮಗಳನ್ನು ದೈತ್ಯರಲ್ಲೇ ಉಳಿಸಿ, ಅವರು ಮಾಡಿದ ಪುಣ್ಯ ಕರ್ಮಗಳನ್ನು ತಾನು ತೆಗದು ತನ್ನೊಳಗಿಟ್ಟುಕೊಂಡು ಭಕ್ತರಿಗೆ ಕ್ರಮಕ್ರಮವಾಗಿ ಹಂಚಿಕೊಡುವನು ||೨೧||

**ತೋಯಜಾಪ್ತನ ಕಿರಣವೃಕ್ಷ**
**ಛಾಯ ವರ್ತಿಸುವಂತೆ ಕಮಲದ**
**ಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ ||**
**ಹೇಯ ಸದ್ಗುಣ ಕರ್ಮತೋರ್ಪವು**
**ನ್ಯಾಯಕೋವಿದರಿಗೆ ನಿರಂತರ**
**ಶ್ರೀಯರಸೆ ಸರ್ವೋತ್ತಮೋತ್ತಮನೆಂದು ಪೇಳುವರು ||**

ಪದ್ಯಾರ್ಥ:— ತೋಯಜಾಪ್ತನ= ತೋಯಜ= ನೀರಿನಲ್ಲಿಹುಟ್ಟುವ ಕಮಲಕ್ಕೆ, ಆಪ್ತ= ಮಿತ್ರನಾದ ಸೂರ್ಯನ, ಕಿರಣ= ಕಿರಣದಿಂದ, ವೃಕ್ಷ ಛಾಯಾ= ಮರದ ನೆರಳು, ವರ್ತಿಸುವಂತೆ= ಕಂಡು ಬರುವಂತೆ, ಕಮಲ ದಳಾಯತಾಕ್ಷನು = ಕಮಲದಳಗಳಂತೆ ವಿಸ್ತಾರವಾದ ಕಣ್ಣುಗಳುಳ್ಳ ಶ್ರೀಹರಿಯು, ಸರ್ವರೊಳು, ವ್ಯಾಪಿಸಿದ ಕಾರಣದಿ, ನ್ಯಾಯಕೋವಿದರಿಗೆ = ನ್ಯಾಯವನ್ನು ಚೆನ್ನಾಗಿ ತಿಳಿದವರಿಗೆ, ಹೇಯ= ನೀಚವಾದ, ಅಥವಾ ನಿಂದ್ಯವಾದ ಪಾಪಕರ್ಮಗಳು, ಸದ್ಗುಣ= ಉತ್ತಮವಾದ ಪುಣ್ಯಕರ್ಮ ಗಳು, ತೋರ್ಪವು= ಕಂಡುಬರುವವು. ನಿರಂತರ= ನಿತ್ಯದಲ್ಲೂ, ಶ್ರೀಯು ರಸೇ= ಲಕ್ಷ್ಮೀಪತಿಯೇ, ಸರ್ವೋತ್ತಮೋತ್ತಮನೆಂದು= ಸರ್ವೋತ್ತಮ ರಾದ ಬ್ರಹ್ಮಾದಿಗಳಿಗೆ, ಉತ್ತಮನೆಂದು, ಪೇಳುವರು.

ತಾತ್ಪರ್ಯ:— ಸೂರ್ಯನು ಪ್ರಕಾಶಿಸುತ್ತಿದ್ದರೆ ಮರದ ನೆರಳು ಕಾಣುವಂತೆ, ಪರಮಾತ್ಮನು ಸರ್ವತ್ರವ್ಯಾಪ್ತನಾಗಿ ರುವುದರಿಂದಲೇ ಜೀವನ ಪುಣ್ಯ ಪಾಪಾದಿ ಕರ್ಮಗಳು ಕಂಡುಬರುವವು. ಆದ್ದರಿಂದಲೆ ಜ್ಞಾನಿಗಳು ಇಂತಹ ಶ್ರೀ ಲಕ್ಷ್ಮೀಪತಿಯೇ ಬ್ರಹ್ಮದೇವರು ಮೊದಲಾದ ಸಕಲ ದೇವತೆಗಳಿಗೂ ಉತ್ತಮನೆಂದು ಪೇಳುವರು. ||೨೨||

ಮೂಲಕಾರಣ ಪ್ರಕೃತಿ ಎನಿಪಮ<br>
ಹಾಲಕುಮಿ ಎಲ್ಲರೊಳಗಿದ್ದು ಸು<br>
ಲೀಲೆಗೈಯುತ ಪುಣ್ಯಪಾಪಗಳರ್ಪಿಸಲು ಪತಿಗೆ ||<br>
ಪಾಲಗಡಲೊಳು ಬಿದ್ದ ಜಲಕೀ<br>
ಲಾಲವೆನಿಪುದೆ ಜೀವಕೃತ ಕ<br>
ರ್ಮಾಳಿತದ್ವತು ಶುಭವೆ ಎನಿಪುದು ಎಲ್ಲ ಕಾಲದಲಿ ||

ಪದ್ಯಾರ್ಥ :—ಮೂಲಕಾರಣ ಪ್ರಕೃತಿ= ಜಗತ್ತಿಗೆ ಕಾರಣಭೂತ ಳಾದ ಮೂಲಪ್ರಕೃತಿಯೆಂದು, ಎನಿಪ= ಪ್ರಸಿದ್ಧರಾದ, ಮಹಾಲಕುಮಿ ಮಹಾಲಕ್ಷ್ಮೀದೇವಿಯರು, ಎಲ್ಲರೊಳಗಿದ್ದು, ಸುಲೀಲೆಗೈಯುತ= ಪತಿ ಯಾದ ಪರಮಾತ್ಮನೊಂದಿಗೆ ತಾನು ಪ್ರಕೃತಿ ಸಂಬಂಧವಾದ ಸತ್ವಾದಿ ಗುಣಕಾರ್ಯಗಳನ್ನು ಮಾಡಿಸುವುದೇ ಲೀಲೆ, ಇಂತಹಾ ಲೀಲೆಯನ್ನು ಮಾಡುತ್ತಾ, ಪತಿಗೆ= ಪತಿಯಾದ ಪರಮಾತ್ಮನಿಗೆ, ಪುಣ್ಯಪಾಪಗಳರ್ಪಿ ಸಲು, ಜೀವರು ಮಾಡುವ ಪುಣ್ಯಪಾಪಕರ್ಮಗಳನ್ನರ್ಪಿಸಲು, ಪಾಲಗಡ

ಲೊಳು= ಕ್ಷೀರ ಸಮುದ್ರದಲ್ಲಿ, ಬಿದ್ದ ಜಲ= ಬಿದ್ದ ನೀರು, ಕೀಲಾಲವೆನಿಪುದೆ= ನೀರೆಂದು ಎನಿಸುವುದೆ! ಹೇಗೆ ಹಾಲಾಗಿಯೇ ಆಗುವುದೋ ತದ್ವತು=ಅದರಂತೆ, ಎಲ್ಲ ಕಾಲದಲಿ. ಜೀವಕೃತ= ಜೀವರಿಂದ ಮಾಡಲ್ಪಟ್ಟ, ಕರ್ಮಾಳಿ=ಕರ್ಮಸಮೂಹವು, ಶುಭವೆ ಎನಿಪುದು=ಪುಣ್ಯಕರ್ಮಗಳೇ ಆಗುವವು.

ತಾತ್ಪರ್ಯ :—ಜಗತ್ತಿಗೆ ಕಾರಣಭೂತರಾದ, ಮೂಲಪ್ರಕೃತಿಯೆನಿಸುವ ಲಕ್ಷ್ಮೀದೇವಿಯರು, ಪತಿಯೊಂದಿಗೆ ಎಲ್ಲರಲ್ಲೂ ಇದ್ದು, ಪ್ರಕೃತಿ ಸಂಬಂಧವಾದ ಸತ್ವರಜಸ್ತಮೋಗುಣ ಕಾರ್ಯಗಳನ್ನು ಮಾಡಿಸುತ್ತಾ ಅವರವರಿಂದ ಮಾಡಿಸಲ್ಪಟ್ಟ ಪುಣ್ಯಪಾಪಗಳನ್ನು ಪತಿಯಾದ ಪರಮಾತ್ಮನಿಗೆ ಅರ್ಪಿಸುವರು. ಆದರೆ ಜೀವಕೃತ ಪಾಪಕರ್ಮವು ಪರಮಾತ್ಮನಿಗೆ ಅರ್ಪಿಸುವುದರಿಂದ ಪರಮಾತ್ಮನಿಗೆ ಪಾಪಲೇಪದಿಂದ ದುಃಖ ಸಂಬಂಧವಾಗುವುದೆಂಬ ಶಂಕೆಯನ್ನು ದೃಷ್ಟಾಂತದಿಂದ ಪರಿಹರಿಸುತ್ತಾರೆ:— ಕ್ಷೀರಸಮುದ್ರದಲ್ಲಿ ನೀರು ಬಿದ್ದರೆ ಸಮುದ್ರದ ಹಾಲು ಕೆಡುವುದೆ! ಇಲ್ಲ ನೀರು ಮಾತ್ರ ಹಾಲೇ ಆಗುವುದು. ಗಂಗಾದಿ ಮಹಾನದಿಗಳೆಲ್ಲವೂ ಲವಣ ಸಮುದ್ರದಲ್ಲಿ ಶೇರಲು ಸಮುದ್ರದ ನೀರು ಶಿಹಿಯಾಗುವುದೆ! ಮಹಾನದಿಯ ನೀರು ಮಾತ್ರ ಉಪ್ಪಾಗುವುದು. ಅದರಂತೆಯೇ ಕ್ಷೀರಸಮುದ್ರದಲ್ಲಿ ಬಿದ್ದ ನೀರೆಲ್ಲವೂ ಹಾಲೇ ಆಗುವುದು. ಹಾಗೆಯೇ ಪರಮಾತ್ಮನಲ್ಲಿ ಶೇರಿದ ಪಾಪಕರ್ಮಗಳೂ ಸಹ ಶುಭವೇ ಆಗುವವು. ||೨೩||

ಮೇಲೆ ಹೇಳಿದುದನ್ನೇ ವಿವರಿಸುತ್ತಾರೆ—

ಜ್ಞಾನ ಸುಖ ಬಲಪೂರ್ಣ ವಿಷ್ಣುವಿ
ಗೇನುಮಾಳ್ಪವು ತ್ರಿಗುಣಕಾರ್ಯ ಕೃ
ಶಾನುವಿನ ಕ್ರಿಮಿ ಕವಿದು ಭಕ್ಷಿಪುದುಂಟೆ ಲೋಕದೊಳು
ಈ ನಳಿನ ಜಾಂಡವನು ಬ್ರಹ್ಮೇ
ಶಾನಮುಖ್ಯ ಸುರಾಸುರರ ಕಾ
ಲಾನಲನವೋಲ್ ನುಂಗುವವಗೀಪಾಪಗಳ ಭಯವೆ ||

ಪದ್ಯಾರ್ಥ :—ಜ್ಞಾನ ಸುಖ ಬಲಪೂರ್ಣ ವಿಷ್ಣುವಿಗೆ=ಜ್ಞಾನಾನಂದ ಬಲಗಳಿಂದ ಪೂರ್ಣನಾದ ವಿಷ್ಣುವಿಗೆ, ತ್ರಿಗುಣಕಾರ್ಯ=ಪ್ರಾಕೃತವಾದ ಸತ್ವ ರಜಸ್ತಮೋಗುಣ ಕಾರ್ಯಗಳು, ಏನು ಮಾಳ್ಪವು! ಲೋಕ

ದೊಳು. ಕೃಶಾನುವಿನ=ಬೆಂಕಿಯನ್ನು ಕ್ರಿಮಿ ಕವಿದು=ಹುಳುಗಳು ಮುತ್ತಿ ಕೊಂಡು, ಭಕ್ಷಿಪುದುಂಟೆ=ತಿನ್ನುವುದುಂಟೆ! ಈ ನಳಿನಜಾಂಡವನು= ಈ ಬ್ರಹ್ಮಾಂಡವನ್ನೂ, ಬ್ರಹ್ಮೇಶಾನ ಮುಖ್ಯ ಸುರಾಸುರರ=ಬ್ರಹ್ಮ ರುದ್ರ, ಮೊದಲಾದ ದೇವತೆಗಳನ್ನೂ, ಮತ್ತು ದೈತ್ಯರನ್ನೂ. ಕಾಲಾನಲನ ವೋಲ್=ಕಾಲಾಗ್ನಿಯಂತೆ, ನುಂಗುವಗೆ=ನುಂಗುವವನಿಗೆ, ಈ ಪಾಪ ಗಳ ಭಯವೆ! ||೨೪||

ತಾತ್ಪರ್ಯ:—ಸಂಪೂರ್ಣವಾದ ಜ್ಞಾನಾನಂದ ಸ್ವರೂಪನಾದ ಶ್ರೀ ವಿಷ್ಣುವಿಗೆ ಪ್ರಕೃತಿಸಂಬಂಧವಾದ ಸತ್ವರಜಸ್ತಮೋಗುಣಕಾರ್ಯಗಳು ಏನು ಮಾಡುವವು! ಲೋಕದಲ್ಲಿ ಬೆಂಕಿಯನ್ನು ಹುಳುಗಳು ಮುತ್ತಿ ತಿನ್ನುವು ದುಂಟೆ! ಬೆಂಕಿಯಲ್ಲಿ ಬಿದ್ದು ತಾವು ಪ್ರಾಣವನ್ನು ಕಳೆದುಕೊಳ್ಳುವವು. ಅದರಂತೆ ತ್ರಿಗುಣ ಸಂಬಂಧವಾದ ಕರ್ಮಗಳು ಪರಮಾತ್ಮನನ್ನು ಏನು ಮಾಡುವವು! ಕರ್ಮಗಳು ಮಾತ್ರ ಸುಟ್ಟುಹೋಗುವವು ಬ್ರಹ್ಮರುದ್ರ ಮೊದಲಾದ ಸ್ಥಾವರ ಜಂಗಮಾತ್ಮಕವಾದ ಈ ಬ್ರಹ್ಮಾಂಡವನ್ನೇ ಪ್ರಳಯ ಕಾಲದಲ್ಲಿ ಕಾಲಾಗ್ನಿಯಂತೆ ನುಂಗುವ ಶ್ರೀ ಹರಿಗೆ ಈ ಅಲ್ಪವಾದ ಪಾಪ ಗಳ ಭಯವೂ ಉಂಟೆ! ಎಂದಿಗೂ ಇಲ್ಲವೆಂಬ ತಾತ್ಪರ್ಯ ||೨೪||

ಅವತಾರಿಕೆ—ಪರಮಾತ್ಮನು ಆನಂದಸ್ವರೂಪನೆಂಬುವುದು ಶೃತಿ ಸ್ಮೃತಿಸಿದ್ಧವೆಂದು ಹೇಳುತ್ತಾರೆ—

ಮೋದಶಿರ ದಕ್ಷಿಣಪಕ್ಷ ಪ್ರ
ಮೋದ ಉತ್ತರಪಕ್ಷವೆಂದು ಋ
ಗಾದಿ ಶ್ರುತಿಗಳು ಪೇಳುವವು ಆನಂದಮಯ ಹರಿಗೆ ||
ಮೋದವೈಷಿಕ ಸುಖವಿಶೇಷ ಪ್ರ
ಮೋದಪಾರತ್ರಿಕ ಸುಖಪ್ರದ
ನಾದ ಕಾರಣದಿಂದ ಮೋದಪ್ರಮೋದವೆನಿಸುವನು ||

ಪದ್ಯಾರ್ಥ:—ಆನಂದಮಯ=ಆನಂದಸ್ವರೂಪನಾದ ಹರಿಗೆ, ಮೋದ=ಸಂತೋಷವು, ಶಿರ=ತಲೆಯು, ದಕ್ಷಿಣಪಕ್ಷ=ರೆಕ್ಕೆಗೆ ಸಮ ವಾದ ಬಲದ ಭಾಗವು. ಪ್ರಮೋದ=ವಿಶೇಷವಾದ ಆನಂದವು, ಉತ್ತರ ಪಕ್ಷ=ಎಡದ ಭಾಗವು. ಎಂದು, ಋಗಾದಿ ಶೃತಿಗಳು ಪೇಳುವವು. ಮೋದ=ಮೋದವೆಂದರೆ, ವೈಷಿಕ ಸುಖವಿಶೇಷ=ವಿಷಯ ಸಂಬಂಧ

ವಾದ ಸುಖವಿಶೇಷವು. ಪ್ರಮೋದ= ಪ್ರಮೋದವೆಂದರೆ, ಪಾರತ್ರಿಕ ಸುಖ= ಪರಲೋಕದ ಸುಖವು. ಪ್ರದನು= ಇವೆರಡು ವಿಧವಾದ ಸುಖವನ್ನು ಕೊಡುವವನು. ಆದಕಾರಣದಿಂದ ಮೋದಪ್ರಮೋದವೆನಿಸುವನು.

ತಾತ್ಪರ್ಯ :—ಪರಮಾತ್ಮನು ಆನಂದಸ್ವರೂಪನೆಂದು ಶ್ರುತಿಸ್ಮೃತಿ ಸಿದ್ಧವಾಗಿರುವುದು. " ಅಸ್ಯಪ್ರಿಯಮೇವಶಿರಃ | ಮೋದೋದಕ್ಷಿಣಃ ಪಕ್ಷಃ | ಪ್ರಮೋದ ಉತ್ತರಃ ಪಕ್ಷಃ | ಆನಂದ ಆತ್ಮಾ " ಎಂದು ತೈತ್ತರೀಯೋಪನಿಷತ್ತಿನಲ್ಲಿ ಹೇಳಿರುವರು ಮತ್ತು ವಿಷ್ಣುರಹಸ್ಯ ೨೧ನೆಯ ಅಧ್ಯಾಯದಲ್ಲಿ, " ಪ್ರಿಯಮಸ್ಯಶಿರೋ ಮೋದೋ ದಕ್ಷಿಣಃ ಪಕ್ಷ ಉಚ್ಯತೆ| ಪ್ರಮೋದ ಉತ್ತರಃ ಪಕ್ಷ ಆತ್ಮಾನಂದ ಇತೀರಿತಃ | ವಸ್ತುವಿಜ್ಞಾನಜಂ ಸೌಖ್ಯಮಾನಂದ ಇತಿಕೀರ್ತಿತಃ | ಮೋದೋವಿಷಯಜಂ ಸೌಖ್ಯಂ ತತ್ರ ವಸ್ತು ವಿಶೇಷತಃ | ಯತ್ಸ್ಯಾದ್ವಿಶೇಷತಃ ಸೌಖ್ಯಂ ಪ್ರಮೋದಃ ಸಪ್ರಕೀರ್ತಿತಃ | ಉಪಕಾರೇಕೃತೇಯತ್ಸ್ಯಾತ್ಸುಖಂ ತತ್ಪ್ರಿಯ ಉಚ್ಯತೆ " ಎಂದು ಹೇಳಿರುವರು. ಇದೇ ಅರ್ಥವನ್ನೇ ಈ ಪದ್ಯದಲ್ಲಿ ಹೇಳರುತ್ತಾರೆ ; ಆನಂದ ಸ್ವರೂಪನಾದ ಶ್ರೀಹರಿಗೆ ಪ್ರಿಯವೇಶಿರಸ್ಸು, ಮೋದವು ಬಲದಭಾಗವು. ಪ್ರಮೋದವು ಎಡದಭಾಗವು ಆನಂದವೇ ಆತ್ಮ. ಆನಂದವೆಂದರೆ, ವಸ್ತುಗಳ ಜ್ಞಾನದಿಂದಾಗುವ ಸುಖವು. ಪರಮಾತ್ಮನಿಗೆ ಪ್ರಪಂಚದ ಸಕಲ ವಸ್ತುವಿನ ಜ್ಞಾನವಿರುವುದರಿಂದ ಆನಂದಸ್ವರೂಪನೆಂದು ಪ್ರಸಿದ್ಧನಾದನು. ಮೋದವೆಂದರೆ ವಿಷಯಭೋಗದಿಂದಾಗುವ ಸುಖವು. ಪ್ರಮೋದವೆಂದರೆ, ಹೊಸ ವಸ್ತು ಲಾಭದಿಂದಾಗುವ ವಿಶೇಷಸುಖವು. ಈ ಸುಖವು ಪರಲೋಕದಲ್ಲೇ ದೊರಕುವದು. ಆದ್ದರಿಂದ ದಾಸಾರ್ಯರು ಪ್ರಮೋದವೆಂದರೆ ಪಾರತ್ರಿಕಸುಖವೆಂದು ಹೇಳಿರುವರು ಮತ್ತೊಬ್ಬರಿಗೆ ಉಪಕಾರ ಮಾಡುವುದರಿಂದ ಆಗುವ ಸುಖಕ್ಕೆ ಪ್ರಿಯವೆಂದು ಹೆಸರು. ಆನಂದ ಸ್ವರೂಪನಾದ ಪರಮಾತ್ಮನಿಗೆ ಪ್ರಿಯ, ಮೋದ, ಪ್ರಮೋದ, ಮೊದಲಾದವು ಅಂಗಗಳಾಗಿರುವವು. ಹೀಗೆ ಪರಮಾತ್ಮನನ್ನು ತಿಳಿದು ಉಪಾಸನೆ ಮಾಡುವವರಿಗೆ ಪ್ರಿಯ, ಮೋದ, ಪ್ರಮೋದ ಮೊದಲಾದ ಸುಖವನ್ನು ಕೊಡುವುದರಿಂದ ಮೋದ ಪ್ರಮೋದ ಮೊದಲಾದ ಹೆಸರು ಪರಮಾತ್ಮನಿಗೆ ಇರುವುವೆಂಬ ಭಾವ. ||೨೫||

ಪೂರ್ಣಾನಂದ ಸ್ವರೂಪನಾದ ಹರಿಗೆ ನಮ್ಮ ಪುಣ್ಯಾದಿಗಳನ್ನು ಅರ್ಪಿಸುವುದರಿಂದ ಆತನಿಗೆ ಸುಖ ಹೆಚ್ಚುವುದಾಗಲೀ ಅಥವ ಕೊಡದೇ ಇರುವುದರಿಂದ ಸುಖ ಕಮ್ಮಿಯಾಗುವುದಾಗಲಿ ಇಲ್ಲವೆಂದು ಸದೃಷ್ಟಾಂತ ವಾಗಿ ಹೇಳುತ್ತಾರೆ :—

ಎಂದಿಗಾದರು ವೃಷ್ಟಿಯಿಂದವ
ಸುಂಧರೆಯೊಳಿಪ್ಪಖಿಳ ಜಲದಿಂ
ಸಿಂಧುವೃದ್ಧಿಯ ನೈದುವುದೆ ಬಾರದಿರೆ ಬರಿದಹುದೆ ||
ಕುಂದುಕೊರತೆಗಳಿಲ್ಲದಿಹಸ್ವಾ
ನಂದ ಸಂಪೂರ್ಣಸ್ವಭಾವಗೆ
ಬಂದು ಮಾಡುವದೇನು ಕರ್ಮಾಕರ್ಮಜನ್ಯಫಲ ||

ಪದ್ಯಾರ್ಥ :—ಎಂದಿಗಾದರೂ, ವೃಷ್ಟಿಯಿಂದ = ಮಳೆಯಿಂದ, ವಸುಂಧರೆಯೊಳು=ಭೂಮಿಯಲ್ಲಿ, ಇಪ್ಪ=ಇರುವ, ಅಖಿಳಜಲದಿಂ= ಸಕಲ ದೇಶದ ನೀರಿನಿಂದ, ಸಿಂಧು=ಸಮುದ್ರವು, ವೃದ್ಧಿಯನ್ನೈದುವುದೆ= ವೃದ್ಧಿಯನ್ನು ಹೊಂದುವುದೆ ! ಬಾರದಿರೆ=ಮಳೆ ನೀರು ಬಂದು ಸಮುದ್ರ ದಲ್ಲಿ ಶೇರದಿದ್ದರೆ, ಬರಿದಹುದೆ = ನೀರು ಇಲ್ಲದೆ ಬತ್ತಿಹೋಗುವುದೆ ! ಹಾಗೆಯೇ ಕುಂದುಕೊರತೆಗಳಿಲ್ಲದಿಹ=ಯಾವ ವಿಧವಾದ ದೋಷವಾಗಲಿ, ಕೊರತೆಗಳಾಗಲಿ ಇಲ್ಲದಿರುವ, ಸ್ವಾನಂದಪೂರ್ಣಸ್ವಭಾವಗೆ=ತನ್ನ ಆನಂದ ದಿಂದಲೇ ಪೂರ್ಣನಾಗಿರುವ ಸ್ವಭಾವ ಉಳ್ಳ ಶ್ರೀಹರಿಗೆ, ಕರ್ಮಾಕರ್ಮ ಜನ್ಯಫಲ=ಜೀವರುಮಾಡುವ ಪುಣ್ಯಪಾಪಾದಿ ಕರ್ಮಫಲಗಳು, ಬಂದು ಮಾಡುವದೇನು ! ಲಾಭವೂ ಇಲ್ಲ ; ನಷ್ಟವೂ ಇಲ್ಲವೆಂಬ ಭಾವ ||೨೬||

ತಾತ್ಪರ್ಯ :—ಲೋಕದಲ್ಲಿ ಮಳೆ ಬಂದು ಮಹಾನದಿಗಳಲ್ಲಿ ಪೂರ್ಣ ಪ್ರವಾಹ ಬಂದು ಸಮುದ್ರದಲ್ಲಿ ಶೇರಿದ ಪ್ರಯುಕ್ತ ಸಮುದ್ರದ ನೀರು ಹೆಚ್ಚುವುದೇ ಆಗಲಿ, ಶೇರದೆಹೋದರೆ ಸಮುದ್ರವು ನೀರಿಲ್ಲದೆ ಬತ್ತಿ ಹೋಗುವುದೇ ಆಗಲಿ, ಎಂತಿಲ್ಲವೊ, ಅದರಂತೆ, ಆನಂದಸ್ವರೂಪನಾದ ಪರ ಮಾತ್ಮನಿಗೆ, ಜೀವಕೃತ ಪುಣ್ಯ ಪಾಪಫಲಗಳಿಂದ ಆಗುವ ಲಾಭನಷ್ಟ ಗಳೇನೂ ಇಲ್ಲ ! ಇದರಿಂದ ಜೀವರು ತಮ್ಮ ಸಾಧನಕ್ಕಾಗಿ ಪುಣ್ಯಪಾಪ ಗಳನ್ನು ಸಮರ್ಪಣೆ ಮಾಡಬೇಕೇ ಹೊರತು ಪರಮಾತ್ಮನಿಗೇನೂ ಆಗ ಬೇಕಾದುದಿಲ್ಲವೆಂಬ ಭಾವ || ೨೬ ||

"ದ್ವಾಸುಪರ್ಣಾಸಯುಜಾ ಸಖಾಯಾ" ಎಂಬ ಶ್ರುತ್ಯರ್ಥಗರ್ಭಿತವಾದ ವಿಷ್ಣುರಹಸ್ಯೋಕ್ತ ವಿಷಯವನ್ನು ಹೇಳುತ್ತಾರೆ:—

**ದೇಹವೃಕ್ಷದೊಳೆರಡು ಪಕ್ಷಿಗ**
**ಳೀಹವೆಂದಿಗು ಬಿಡದೆ ಪರಮ**
**ಸ್ನೇಹದಿಂದಲಿ ಕರ್ಮಜಫಲಗಳುಂಬ ಜೀವಖಗಾ ॥**
**ಶ್ರೀಹರಿಯು ತಾಸಾರಭೋಕ್ತನು**
**ದ್ರೋಹಿಸುವ ಕಲ್ಯಾದಿ ದೈತ್ಯಸ**
**ಮೂಹಕೀವ ವಿಶಿಷ್ಟಪಾಪಕ್ಲೇಶ ಎಲ್ಲರಿಗೆ ॥**

ಪದ್ಯಾರ್ಥ :— ದೇಹವೃಕ್ಷದೊಳು = ಈ ದೇಹವೆಂಬ ವೃಕ್ಷದಲ್ಲಿ (ಜೀವನ ಸ್ವರೂಪದೇಹದಲ್ಲಿ) ಎರಡು ಪಕ್ಷಿಗಳು = ಜೀವ ಪರಮಾತ್ಮರೆಂಬ ಎರಡು, ಪಕ್ಷಿಗಳು, ಎಂದಿಗೂ, ಬಿಡದೆ, ಪರಮ ಸ್ನೇಹದಿಂದಲಿ, ಇಹವು = ಇರುವವು. ಅವುಗಳಲ್ಲಿ, ಜೀವಖಗ = ಜೀವನೆಂಬ ಪಕ್ಷಿಯು, ಕರ್ಮಜ = ಕರ್ಮಜನ್ಯವಾದ, ಫಲಗಳ, ಉಂಬ = ಭುಂಜಿಸುವನು. (ಪಾಪಪುಣ್ಯಗಳ ಫಲವಾದ ಸುಖದುಃಖಗಳನ್ನು ಅನುಭವಿಸುವನು) ಶ್ರೀಹರಿಯು, ತಾ, ಸಾರಭೋಕ್ತನು = ಶ್ರೀಹರಿಯು ಅದರಲ್ಲಿ ಸಾರಭೂತವಾದ ಪುಣ್ಯಫಲವನ್ನು ಮಾತ್ರ ತಾನು ಸ್ವೀಕರಿಸುವನು. ದ್ರೋಹಿಸುವ = ತನ್ನಲ್ಲಿ ದ್ವೇಷ ಮಾಡುವ, ಕಲ್ಯಾದಿ ದೈತ್ಯಸಮೂಹಕೆ = ಕಲಿ ಮೊದಲಾದ ದೈತ್ಯ ಸಮೂಹಕ್ಕೆ ಸೇರಿದ, ಎಲ್ಲರಿಗೆ, ವಿಶಿಷ್ಟ ಪಾಪಕ್ಲೇಶವ = ಸಮಸ್ತವಾದ ಪಾಪ ಕರ್ಮದ ಫಲವಾದ ಕಷ್ಟಗಳನ್ನು ಈವ = ಕೊಡುವನು.

ತಾತ್ಪರ್ಯ :— ಜೀವರಸ್ವರೂಪದೇಹ ಮತ್ತು ಸ್ಥೂಲದೇಹವೆಂಬಿವೆರಡು ವೃಕ್ಷಪ್ರಾಯವಾಗಿರುವುವು ಅನಾದಿ ಕಾಲದಿಂದಿರುವುದು ಸ್ವರೂಪ ದೇಹವು. ಸ್ಥೂಲದೇಹವು ನಶ್ವರವಾದುದು ದ್ವಾಸುಪರ್ಣಾ ಎಂಬ ಶ್ರುತಿಯಲ್ಲಿ ಅನಾದಿ ಕಾಲವನ್ನು ತೋರಿಸುವುದರಿಂದ ಸ್ವರೂಪ ದೇಹವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ದಾಸರಾಯರೂ ಸಹ ಎಂದಿಗೂ ಬಿಡದೆ ಎಂಬೆರಡು ವಿಶೇಷಣಗಳಿಂದ ಅನಾದಿಕಾಲದ ಲಕ್ಷಣವನ್ನೇ ತೋರಿಸಿರುವರು. ಇದರ ತಾತ್ಪರ್ಯ ಹೀಗೆ:- ಸ್ವರೂಪ ದೇಹವೆಂಬ ವೃಕ್ಷದಲ್ಲಿ ಹೃದಯ ಕಮಲವೆಂಬ ಗೂಡನ್ನು ಕಟ್ಟಿಕೊಂಡು ಅನಾದಿಕಾಲದಿಂದಲೂ ಜೀವ ಪರಮಾತ್ಮರೆಂಬ ಎರಡು ಪಕ್ಷಿಗಳಿರುವವು. ಈ ಪಕ್ಷಿಗಳಲ್ಲಿ

ಜೀವನ ಸ್ಥೂಲದೇಹಸಂಬಂಧದಿಂದ ಮಾಡುವ ಪುಣ್ಯ ಪಾಪಕರ್ಮಗಳ ಫಲಗಳನ್ನು ಜೀವನೆಂಬ ಪಕ್ಷಿಯು ಮಾತ್ರ ಭುಂಜಿಸುವುದು. ಪಕ್ಷಿಗಳು ಹೇಗೆ ಒಂದು ವೃಕ್ಷದಲ್ಲಿ ಹಣ್ಣುಗಳಿಲ್ಲದಿದ್ದರೆ ಮತ್ತೊಂದು ವೃಕ್ಷಕ್ಕೆ ಹೋಗಿ ಆಹಾರವನ್ನು ತೆಗೆದುಕೊಳ್ಳುವುವೊ ಹಾಗೆ ಈ ಸ್ಥೂಲ ದೇಹ ಹೋದರೆ ಮತ್ತೊಂದು ದೇಹವನ್ನು ಹೊಂದಿ ಜಿವನು ಕರ್ಮಫಲವನ್ನನು ಭವಿಸುವನು. ಪರಮಾತ್ಮನೆಂಬ ಪಕ್ಷಿಯು ಮಾತ್ರ ಈ ಕರ್ಮಫಲವನ್ನು ಭುಂಜಿಸುವುದಿಲ್ಲ. ಜೀವರ ಕ್ಷೇಮಕ್ಕಾಗಿ ಪುಣ್ಯಫಲದ ಸಾರವನ್ನು ಮಾತ್ರ ಗ್ರಹಿಸುವನು. ಎಂದು "ದ್ವಾಸುಪರ್ಣಾಸಯುಜಾ" ಎಂಬ ಶ್ರುತಿಯು ಹೇಳುವುದು. ಈ ಶ್ರುತಿಯನ್ನು ದ್ವೈತಮತಕ್ಕೆ ಆಧಾರತ್ವೇನ ಭಾಷ್ಯಾದಿಗಳಲ್ಲಿ ಶ್ರೀಮನ್ಮಧ್ವಾಚಾರ್ಯರು ಉದಾಹರಿಸಿರುವರು. ಏಕೆಂದರೆ ಈ ಶ್ರುತಿಯಲ್ಲಿ ಅನಾದಿಕಾಲದಿಂದಲೂ ಜೀವನೂ ಪರಮಾತ್ಮನೂ ಬೇರೆಯಾಗಿ ಇದ್ದೇ ಇರುವರೆಂತಲೂ, ಜೀವವಿಲಕ್ಷಣ ಪರಮಾತ್ಮನೆಂತಲೂ ಸ್ಪಷ್ಟವಾಗಿ ಹೇಳಿರುವುದು. ಇದರರ್ಥವನ್ನೇ ವಿಷ್ಣುರಹಸ್ಯ ೨೧ನೆಯ ಅಧ್ಯಾಯದಲ್ಲಿ, "ದೇಹವೃಕ್ಷೇಸಮಾಸೀನೌ ಸಖಾಯೌಪಕ್ಷಿಣೌ ಚಿರಂ|| ತಯೋರ್ಮಧ್ಯೇತು ಯೋಜ್ಯಾಯಾಂಸ್ತ್ವಸ್ವಾದ್ವೇವ ಪಿಪ್ಪಲಂ || ಇತಿ ಪ್ರಾಹಶ್ರುತಿಸ್ಸಾಕ್ಷಾತ್ಸಾರ ಭೋಕ್ತಾಹರಿಸ್ತತಃ" ದೇಹವೆಂಬ ವೃಕ್ಷದಲ್ಲಿ ಅನಾದಿಕಾಲವಾಗಿ ಎರಡು ಪಕ್ಷಿಗಳು ಸ್ನೇಹದಿಂದ ವಾಸಮಾಡುತ್ತಿರುವವು. ಇವುಗಳಲ್ಲಿ ಯಾವುದು ಉತ್ತಮ ಪಕ್ಷಿಯೋ ಅಂದರೆ ಪರಮಾತ್ಮನೆಂಬ ಪಕ್ಷಿ ಎಂದರ್ಥ, ಆ ಪಕ್ಷಿಗೆ ಪಿಪ್ಪಲವೆಂಬ ಕರ್ಮಫಲವು ಬಹು ಸ್ವಾದುವಾಗಿರುವದು (ಬಹು ರುಚಿಕರವಾಗಿರುವದು) ಆದ್ದರಿಂದ ಪರಮಾತ್ಮನು ಸಾರಭೋಕ್ತನೆಂದು ಶ್ರುತಿಯು ಹೇಳುವುದೆಂದು ಹೇಳಿರುವರು. ಇರುವ ಎರಡು ಪಕ್ಷಿಗಳಲ್ಲಿ ಒಂದು ಪಕ್ಷಿಗೆ ಆ ಫಲವು ರುಚಿಕರವಾಗಿದ್ದಿತು ಅಂದ ಮೇಲೆ ಮತ್ತೊಂದು ಪಕ್ಷಿಗೆ ರುಚಿಕರವಾಗಿಲ್ಲವೆಂದು ಬೇರೇ ಹೇಳಬೇಕಾದುದೇ ಇಲ್ಲ. ಇದರಿಂದ ಜೀವನು ಪಿಪ್ಪಲವೆಂಬ ಕರ್ಮಫಲವನ್ನು ಅನುಭವಿಸುವನೆಂದು ಸ್ಪಷ್ಟವಾದಂತಾಯಿತು. ಇದೇ ಅರ್ಥವನ್ನೇ ದಾಸಾರ್ಯರು ಈ ಪದ್ಯದಲ್ಲಿ ಹೇಳಿರುತ್ತಾರೆ:—ಪರಮಾತ್ಮನು ಜೀವನೊಂದಿಗೆ ದೇಹದೊಳಗಿದ್ದು ಪುಣ್ಯಪಾಪಕರ್ಮಗಳನ್ನು ಮಾಡಿಸಿ ಶುಭವನ್ನು ತಾನು ಸ್ವೀಕರಿಸಿ ಪುಣ್ಯಫಲವನ್ನು ಯೋಗ್ಯರಾದ ದೇವತೆ

ಗಳಿಗೂ, ಮಿಶ್ರಫಲವನ್ನು ಮನುಷ್ಯರಿಗೂ, ಪಾಪಫಲವನ್ನು ದೈತ್ಯರಿಗೂ ಕೊಡುವನೆಂಬ ತಾತ್ಪರ್ಯ ॥ ೨೭ ॥

ಆನಂದ ಸ್ವರೂಪನಾದ ಹರಿಯು, ಭಕ್ತರಲ್ಲಿರುವ ಪಾಪಗಳನ್ನು ಸ್ವೀಕರಿಸಿ ಭಸ್ಮಮಾಡುವನೆಂದು ಹೇಳುತ್ತಾರೆ.

ದ್ಯುಮಣಿಕಿರಣವ ಕಂಡಮಾತ್ರದಿ
ತಿಮಿರ ಓಡುವ ತೆರದಿ ಲಕ್ಷ್ಮೀ
ರಮಣ ನೋಡಿದಮಾತ್ರದಿಂದಘನಾಶವೈದುವುದು ॥
ಕಮಲಸಂಭವ ಮುಖ್ಯ ಎಲ್ಲಾ
ಸುಮನಸರೊಳಿಹ ಪಾಪರಾಶಿಯು
ನಮರಮುಖನಂದದಲಿ ಭಸ್ಮವ ಮಾಳ್ಪಹರಿತಾನು ॥

ಪದ್ಯಾರ್ಥ :—ದ್ಯುಮಣಿಕಿರಣವ=ಸೂರ್ಯನ ಕಿರಣವನ್ನು, ಕಂಡ ಮಾತ್ರದಿ, ತಿಮಿರ ಓಡುವತೆರದಿ=ಕತ್ತಲು ಓಡುವಂತೆ, ಲಕ್ಷ್ಮೀರಮಣನು, ನೋಡಿದ ಮಾತ್ರದಿಂದ, ಅಘನಾಶವೈದುವುದು=ಪಾಪನಾಶವಾಗುವದು. ಕಮಲ ಸಂಭವ ಮುಖ್ಯ=ಬ್ರಹ್ಮದೇವರು ಮೊದಲಾದ, ಎಲ್ಲಾ ಸುಮನಸರೊಳು=ಎಲ್ಲಾ ದೇವತೆಗಳಲ್ಲಿ, ಇಹ= ಇರುವ, ಪಾಪರಾಶಿಯನು, ಅಮರಮುಖನಂದದಲಿ= ದೇವತೆಗಳಿಗೆ ಮುಖವೆಂದೆನಿಸುವ ಅಗ್ನಿಯಂತೆ, ಹರಿತಾನು, ಭಸ್ಮವಮಾಳ್ಪ.

ತಾತ್ಪರ್ಯ :—' ತಮುಸ್ಸೂರ್ಯಂ ಯಥಾನ್ನೈವ ಪಶ್ಯೇತ್ತ್ವದ್ಧರಿಂನಹಿ ಪಾಪಕರ್ಮನಿರೀಕ್ಷೇತ ದೂರಾದೇವ ವಿನಶ್ಯತಿ ॥ ಬ್ರಹಾದಿ ದೇವ ಭಾಗಾಂಸ್ತು ತೂಲವದ್ದಹತೇಹರಿಃ' ಕತ್ತಲು ಸೂರ್ಯನನ್ನು ಎಂದಿಗೂ ಹೇಗೆ ನೋಡದೋ ಹಾಗೇ ಪಾಪಕರ್ಮವು ಪರಮಾತ್ಮನನ್ನು ನೋಡುವುದೇ ಇಲ್ಲ. ದೂರದಿಂದಲೇ ನಾಶಹೊಂದುವದು. ಬ್ರಹ್ಮಾದಿ ತತ್ವಾಭಿಮಾನಿ ದೇವತೆಗಳು, ಕಲಿ ಮೊದಲಾದ ದೈತ್ಯರಲ್ಲಿದ್ದು ಮಾಡುವ ಪಾಪಗಳನು, ಪರಮಾತ್ಮನು ಅಗ್ನಿಯು ಹಂಜಿಯನ್ನು ಸುಡುವಂತೆ ಸುಟ್ಟುಬಿಡುವನು ಎಂದು ವಿಷ್ಣುರಹಸ್ಯದಲ್ಲಿ ಹೇಳಿರುವರು. ಅದೇ ಅರ್ಥವನ್ನೇ ದಾಸಾರ್ಯರು ಇಲ್ಲಿ ಹೇಳಿರುತ್ತಾರೆ ಬಿಸಲನ್ನು ಕಂಡಕೂಡಲೆ ಕತ್ತಲು ಹೇಗೆ ನಾಶ ವೊಂದುವುದೋ, ಹಾಗೆ ಹರಿಯನ್ನು ಕಂಡಕೂಡಲೆ ಪಾಪವು ನಾಶಹೊಂದು

ವುದು. ಬ್ರಹ್ಮಾದಿಗಳಲ್ಲಿರುವ ಪಾಪಗಳನ್ನು ಅಗ್ನಿಯಂತೆ ಪರಮಾತ್ಮನು ಸುಟ್ಟು ಬೂದಿ ಮಾಡುವನು. || ೨೮ ||

**ಚತುರಶತಭಾಗದಿದಶಾಂಶದೊ**
**ಳಿತರ ಜೀವರಿಗೀವ ಲೇಶವ**
**ದಿತಿಜ ದೇವರ್ಕಳಿಗೆ ಕೊಡುವ ವಿಶಿಷ್ಟ ದುಃಖಸುಖ ||**
**ಮತಿವಿಹೀನಪ್ರಾಣಿಗಳಿಗಾ**
**ಹುತಿಯಸುಖ ಮೃತಿದುಃಖವರಯೋ**
**ಗ್ಯತೆಯನರಿತು ಪಿಪೀಲ ಮಶಕಾದಿಗಳಿಗೀವಹರಿ ||**

ಪದ್ಯಾರ್ಥ :—ಚತುರ ಶತಭಾಗದಿ=೪೦೦ ಭಾಗಗಳಲ್ಲಿ, ದಶಾಂಶದೊಳು=೧೦ ಭಾಗದೊಳಗೆ, ಲೇಶ= ಅಲ್ಪಾಂಶವನ್ನು, ಇತರ ಜೀವರಿಗೆ =ಇರುವುಗುಂಗಾಡು ಮೊದಲಾದ ಜೀವರಿಗೆ, ಈವ = ಕೊಡುವನು. ದಿತಿಜ= ದೈತ್ಯರಿಗೂ, ದೇವರ್ಕಳಿಗೆ=ದೇವತೆಗಳಿಗೂ, ವಿಶಿಷ್ಟ ದುಃಖ ಸುಖ= ಅವರ ಯೋಗ್ಯತಾನುಸಾರ ಹೆಚ್ಚಾದ ದುಃಖವನ್ನು ದೈತ್ಯರಿಗೂ, ಹೆಚ್ಚಾದ ಸುಖವನ್ನು ದೇವತೆಗಳಿಗೂ, ಕೊಡುವ ಹರಿ= ಹರಿಯು, ಮತಿವಹೀನ ಪ್ರಾಣಿಗಳಿಗೆ=ಬುದ್ಧಿ ಇಲ್ಲದ ಪಶು ಮೊದಲಾದ ಪ್ರಾಣಿಗಳಿಗೂ, ಪಿಪೀಲ=ಇರುವುಗಳು, ಮಶಕ=ಗುಂಗಾಡಿಗಳು ಇವೇ ಮೊದಲಾದವುಗಳಿಗೂ, ಆಹುತಿಯ=ಆಹಾರವನ್ನು, ಸುಖ=ಸೌಖ್ಯವನ್ನು, ಮೃತಿ= ಮರಣವನ್ನು, ದುಃಖ=ದುಃಖವನ್ನು ಅವರ ಯೋಗ್ಯತೆಯನರಿತು, ಈವ =ಕೊಡುವನು.

ತಾತ್ಪರ್ಯ :—ಶ್ರೀಪರಮಾತ್ಮನು ತನ್ನ ಸ್ವಾತಂತ್ರ್ಯದ ೪೦೦ ರಲ್ಲಿ ೧೦ ಅಂಶವನ್ನು ಸಕಲ ಜೀವರಿಗೂ ಕೊಟ್ಟಿರುವನು. ಆ ೧೦ ಅಂಶದಲ್ಲಿ ಅಲ್ಪಭಾಗವನ್ನು ಮಾತ್ರ ಪಶುಗಳು ಇರುವು ಗುಂಗಾಡು ಮೊದಲಾದ ಅಜ್ಞಾನಿ ಪ್ರಾಣಿಗಳಿಗೆ ಕೊಟ್ಟಿರುವನು. ದೇವದೈತ್ಯರಿಗೆ ಅಧಿಕವಾದ ಸ್ವಾತಂತ್ರ್ಯವಿರುವುದರಿಂದ ಅಧಿಕವಾದ ಸುಖದುಃಖಗಳನ್ನನುಭವಿಸುವರು. ಅಲ್ಪಪ್ರಾಣಿಗಳಾದ ಪಶು ಪಕ್ಷಿ ಇರುವು ಮೊದಲಾದವುಗಳಿಗೆ ಅವರ ಯೋಗ್ಯತಾನುಸಾರ ಆಹಾರವನ್ನು ಕಲ್ಪಿಸಿ, ಅವುಗಳಿಗೂ ಸುಖ, ದುಃಖ ಜನನಮರಣಾದಿಗಳನ್ನು ಕೊಡಿಸುವನು. ||೨೯|| (ಈ ವಿಷಯಗಳನ್ನು ದತ್ತ ಸ್ವಾತಂತ್ರ್ಯಸಂಧಿಯ ವ್ಯಾಖ್ಯಾನದಲ್ಲಿ ವಿಷ್ಣುರಹಸ್ಯದ ಪ್ರಮಾಣಸಹಿತ ವಿವರಿಸಿರುತ್ತೆ.)

ದೈತ್ಯರಿಗೆ ಕಲಿಯೊಂದಿಗೆ ಅಂಧಂತಮಃಪ್ರಾಪ್ತಿಯು, ದೇವತೆಗಳಿಗೆ ಬ್ರಹ್ಮದೇವರೊಂದಿಗೆ ಮುಕ್ತಿಯು ಆಗುವುದೆಂದು ಹೇಳುತ್ತಾರೆ :—

**ನಿತ್ಯನಿರಯಾಂಧಾಖ್ಯಕೋಪದಿ**
**ಭೃತ್ಯರಿಂದೊಡಗೂಡಿ ಪುನರಾ**
**ವರ್ತಿವರ್ಜಿತ ಲೋಕವೈದುವ ಕಲಿಯು ದ್ವೇಷದಲಿ ||**
**ಸತ್ಯಲೋಕಾಧಿಪ ಚತುರ್ಮುಖ**
**ತತ್ವದೇವರ್ಕಳ ಸಹಿತನಿಜ**
**ಮುಕ್ತಿಯೈದುವ ಹರಿಪದಾಬ್ಜವ ಭಜಿಸಿ ಭಕುತಿಯಲಿ ||**

ಪದ್ಯಾರ್ಥ:—ಕಲಿಯು, ದ್ವೇಷದಲಿ= ಪರಮಾತ್ಮನಲ್ಲಿ ದ್ವೇಷವನ್ನು ಮಾಡಿ, ಭೃತ್ಯರಿಂದೊಡಗೂಡಿ= ತನ್ನ ಅನುಗರಾದ ವಿಪ್ರಚಿತ್ತಿ ಮೊದಲಾದ ದೈತ್ಯರಿಂದೊಡಗೂಡಿ, ಪುನರಾವರ್ತಿವರ್ಜಿತ= ಹೋದರೆ ಮತ್ತೂ ಹಿಂತಿರುಗದ, ನಿತ್ಯನಿರಯ= ನಿತ್ಯವಾದ ಅಂಧಂತಮಸ್ಸೆಂಬ, ಅಂಧಾಖ್ಯಕೂಪದಿ= ಅಂಧಕಾರಮಯವಾದ ಬಾವಿಗಳುಳ್ಳ, ಲೋಕವ= ಲೋಕವನ್ನು, ಐದುವ= ಹೊಂದುವನು. ಸತ್ಯಲೋಕಾಧಿಪ= ಸತ್ಯಲೋಕಕ್ಕೆ ಅಧಿಪತಿಯಾದ, ಚತುರ್ಮುಖ = ನಾಲ್ಕುಮುಖಗಳುಳ್ಳ ಬ್ರಹ್ಮದೇವರು, ತತ್ವದೇವರ್ಕಳಸಹಿತ= ತತ್ವೇಶರಾದ ದೇವತೆಗಳಿಂದೊಡಗೂಡಿ, ಭಕುತಿಯಲಿ ಹರಿಪದಾಬ್ಜವ ಭಜಿಸಿ= ಪರಮಾತ್ಮನ ಪಾದಾರವಿಂದವನ್ನು ಭಜಿಸಿ, ಮುಕ್ತಿಯೈದುವ= ಮುಕ್ತಿಯನ್ನು ಹೊಂದುವರು.

ತಾತ್ಪರ್ಯ:—ಕಲಿಯು, ತನ್ನ ಅನುಗರಾದ ಶಂಬರ, ವಿಪ್ರಚಿತ್ತಿ ಮೊದಲಾದ ದೈತ್ಯರಿಂದೊಡಗೂಡಿ ಪರಮಾತ್ಮನಲ್ಲಿ ದ್ವೇಷವನ್ನು ಮಾಡಿ, ದ್ವಿಪರಾರ್ಧಾವಸಾನವಾದ ಪ್ರಳಯಾರಂಭಕಾಲದಲ್ಲಿ, ಹೋದರೆ ಹಿಂದಿರುಗದ, ಶಾಶ್ವತವಾದ ಲೋಕದೊಳಗಿನ ಅಂಧಂತಮಸ್ಸನ್ನು ಹೊಂದುವನು. ಬ್ರಹ್ಮದೇವರು ತಮ್ಮ ಅನುಗರಾದ ರುದ್ರಾದಿ ದೇವತೆಗಳಿಂದೊಡಗೂಡಿ ಪರಮಾತ್ಮನಲ್ಲಿ ಅವಿಚ್ಛಿನ್ನವಾದ ಭಕ್ತಿಮಾಡಿ, ಅವನ ಪಾದಾರವಿಂದವನ್ನು ಭಜಿಸಿ, ದ್ವಿಪರಾರ್ಧಾವಸಾನದಲ್ಲಿ ಮುಕ್ತಿಯನ್ನು ಹೊಂದುವರು. ಮುಕ್ತಿಯೋಗ್ಯರೆಲ್ಲರಿಗೂ ಪ್ರಳಯಾರಂಭದಲ್ಲಿ ಬ್ರಹ್ಮದೇವರೊಂದಿಗೆ ವಿರಜಾನದಿಯ ಸ್ನಾನದಿಂದ ಲಿಂಗಶರೀರ ಭಂಗವಾಗಿ ಬಹ್ಮದೇವರೊಂದಿಗೆ ಮುಕ್ತಿಯಾಗುವುದು. ಇದರಂತೆ ತಮೋಯೋಗ್ಯರೆಲ್ಲರಿಗೂ ಅದೇ ದ್ವಿಪರಾರ್ಧಾ

ವಸಾನಕಾಲದಲ್ಲಿ ಕಲಿಯೊಂದಿಗೆ ವಾಯುದೇವರ ಗದಾ ಪ್ರಹಾರದಿಂದ ಲಿಂಗಭಂಗವಾಗಿ ಪುನರಾವರ್ತಿ ಇಲ್ಲದ ಲೋಕದಲ್ಲಿ ನಿತ್ಯದುಃಖಮಯ ವಾದ ಅಂಧಂತಮಸ್ಸನ್ನು ಕಲಿಯೊಂದಿಗೇನೇ ಹೊಂದುವರೆಂಬ ತಾತ್ಪರ್ಯ.
|| ೩೦ ||

ನಾವು ಮಾಡುವ ಎಲ್ಲಾ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸ ಬೇಕೆಂದು ಹೇಳುತ್ತಾರೆ

**ವಿಧಿನಿಷೇಧಗಳೆರಡು ಮರಿಯದೆ**
**ಮಧುವಿರೋಧಿಯಪಾದಕರ್ಪಿಸು**
**ಅದಿತಿಮಕ್ಕಳಿಗೀವಪುಣ್ಯವ ಪಾಪದೈತ್ಯರಿಗೆ ||**
**ಸುದರುಶನಧರಗೀಯದಿರೆ ಬಂ**
**ದೊದಗಿವೈವರು ಪುಣ್ಯದೈತ್ಯರು**
**ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ||**

ಪದ್ಯಾರ್ಥ :—ವಿಧಿನಿಷೇಧಗಳೆರಡು= ವಿಧಿನಿಷೇಧಗಳನ್ನು ಆಚರಿ ಸುವುದರಿಂದಲೂ, ಬಿಡುವುದರಿಂದಲೂ ಲಭ್ಯವಾಗುವ ಪುಣ್ಯ ಪಾಪಗ ಳನ್ನು, ಮರಿಯದೇ, ಮಧುವಿರೋಧಿಯ= ಮಧುಸೂಧನನ, ಪಾದಕ ರ್ಪಿಸು. ಅದಿತಿಮಕ್ಕಳಿಗೆ= ಅದಿತಿ ಮಕ್ಕಳಾದ ದೇವತೆಗಳಿಗೆ, ಪುಣ್ಯವ =ಪುಣ್ಯವನ್ನು ಈವ= ಕೊಡುವನು ಪಾಪ= ಪಾಪಕರ್ಮಗಳನ್ನು, ದೈತ್ಯ ರಿಗೆ, ಕೊಡುವನು ಸುದರುಶನಧರಗೆ= ಚಕ್ರಧಾರಿಯಾದ ಪರಮಾತ್ಮನಿಗೆ, ನಿತ್ಯದಲಿ, ಈಯದಿರೆ= ಅರ್ಪಿಸದಿದ್ದರೆ, ದೈತ್ಯರು, ಬಂದೊದಗಿ= ಪುಣ್ಯ ಮಾಡುವಕಾಲಕ್ಕೆ ಸರಿಯಾಗಿ ಬಂದು ಸೇರಿ, ಪುಣ್ಯ= ಪುಣ್ಯವನ್ನು= ಅಧಿ ಪರಿಲ್ಲದ ವೃಕ್ಷಗಳ ಫಲದಂತೆ= ಯಜಮಾನನಿಲ್ಲದ ವೃಕ್ಷಗಳ ಫಲಗಳಂತೆ ಅಂದರೆ ಕಾವಲಿಲ್ಲದ ವೃಕ್ಷದಲ್ಲಿ ಇರುವ ಹಣ್ಣನ್ನು ಪರಕೀಯರು ಕದ್ದು ಕ್ಕೊಂಡು ಹೋಗುವಂತೆ, ವೈವರು= ಅಪಹರಿಸುವರು. || ೩೧ ||

ತಾತ್ಪರ್ಯ :—ವಿಧಿ ಅಂದರೆ ಮಾಡಬೇಕೆಂದು ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳು ನಿಷೇಧವೆಂದರೆ ಶಾಸ್ತ್ರದಲ್ಲಿ ಮಾಡಬಾರದೆಂದು ಹೇಳಿರುವ ಕರ್ಮಗಳು ಇವೆರಡರಲ್ಲಿ ವಿಧಿಯನ್ನು ಆಚರಿಸುತ್ತಾ ನಿಷೇಧವನ್ನು ಬಿಡು ವುದೇ ಪುಣ್ಯಕರ್ಮವು. ನಿಷೇಧವನ್ನು ಆಚರಿಸುವುದು ; ವಿಧಿಯನ್ನು ಬಿಡು ವದು ಪಾಪಕರ್ಮವು. ಇಂತಹಾ ಪುಣ್ಯಪಾಪಗಳೇನು ಮಾಡಿದ್ದರೂ,

ಮರಿಯದೇ ನಿತ್ಯದಲ್ಲೂ ಪರಮಾತ್ಮನ ಪಾದಾರವಿಂದಕ್ಕೆ ಅರ್ಪಿಸಬೇಕು. ಪರಮಾತ್ಮನು ಪುಣ್ಯವನ್ನು ದೇವತೆಗಳಿಗೂ, ಪಾಪಗಳನ್ನು ದೈತ್ಯರಿಗೂ ಹಂಚುವನು. ಪುಣ್ಯವನ್ನು ದೇವತೆಗಳಿಗೆ ಕೊಟ್ಟುಬಿಟ್ಟರೆ ನಮಗೆ ಪುಣ್ಯ ಫಲವೆಲ್ಲಿರುವುದೆಂದು ಯೋಚಿಸಬಾರದು. ಸತ್ಪಾತ್ರದಲ್ಲಿ ಸ್ವಲ್ಪ ದಾನ ಮಾಡಿದರೂ, ಅದು ಅಕ್ಷಯವಾಗುವುದು. ನಾವು ಸಂಪಾದಿಸಿರುವ ಹಣ ವನ್ನು ಮನೆಯಲ್ಲಿ ಇಟ್ಟುಕೊಂಡು ಇದ್ದರೆ ಕಳ್ಳರ ಭಯವಿರುವುದು. ಅದ ಕ್ಕಾಗಿ ಆ ದ್ರವ್ಯವನ್ನು ಬ್ಯಾಂಕು ಮೊದಲಾದ ಕಡೆಯಲ್ಲಿ ಇಟ್ಟದ್ದರೆ ಹೇಗೆ ಬಡ್ಡಿಯೊಂದಿಗೆ ನಮಗೆ ದ್ರವ್ಯವು ಶಿಕ್ಕುವುದೋ ಹಾಗೆಯೇ ಪರಮಾತ್ಮನು ನಾವು ಮಾಡಿದ ಪುಣ್ಯವನ್ನು ಅವನಿಗೆ ಅರ್ಪಿಸುವುದರಿಂದ ಅದನ್ನು ತಾನು ತತ್ವೇಶರಾದ ದೇವತೆಗಳಲ್ಲಿಟ್ಟು ನಮಗೆ ಅದರ ಫಲವನ್ನು ಇಮ್ಮಡಿ ಮಾಡಿ ಕೊಡಿಸುವನು ನಾವು ಪುಣ್ಯವನ್ನು ಪರಮಾತ್ಮನಿಗೆ ಅರ್ಪಿಸದಿದ್ದರೆ ಕಳ್ಳ ರಾದ ದೈತ್ಯರು, ಮನೆಯಲ್ಲಿರುವ ಹಣವನ್ನು ಕಳ್ಳರು ಕದೆಯುವಂತೆ ಅಪ ಹರಿಸುವರು. ಆದ್ದರಿಂದ ಪರಮಾತ್ಮನಿಗರ್ಪಿಸಬೇಕು. ಪಾಪಗಳನ್ನು ಮಾತ್ರ ದೈತ್ಯರಿಗೆ ಪರಮಾತ್ಮನು ಕೊಟ್ಟರೆ ಅಯೋಗ್ಯರಲ್ಲಿ ಕೊಟ್ಟ ಹಣವು ವ್ಯಯವಾಗಿಹೋಗುವಂತೆ ಆ ಪಾಪಗಳೆಲ್ಲಾ ದೈತ್ಯರಪಾಲೇ ಆಗುವವು. ಆದ್ದರಿಂದ ಪುಣ್ಯಪಾಪಗಳೆರಡನ್ನೂ ಪರಮಾತ್ಮನಿಗೆ ಅರ್ಪಣೆ ಮಾಡಬೇ ಕೆಂಬ ತಾತ್ಪರ್ಯ. || ೩೧ ||

ತಿಲಜಕಶ್ಮಲ ತ್ಯಜಿಸಿ ದೀಪವು
ತಿಳಿಯತೈಲವಗ್ರಹಿಸಿಮಂದಿರ
ದೊಳಗೆ ವ್ಯಾಪಿಸಿ ಇಪ್ಪ ಕತ್ತಲೆ ಭಂಗಿಸುವತೆರದಿ ||
ಕಲಿಮೊದಲುಗೊಂಡಖಿಳದಾನವ
ಕುಲಜರನುದಿನವಾಳ್ಪ ಪುಣ್ಯಜ
ಫಲವ ಬ್ರಹ್ಮಾದ್ಯರಿಗೆ ಕೊಟ್ಟಲ್ಲಲ್ಲೆರಮಿಸುವನು ||

ಪದ್ಯಾರ್ಥ :—ತಿಲಜ= ಎಳ್ಳಿನಿಂದ ಹುಟ್ಟುವ (ಎಳ್ಳು ಸಂಬಂಧ ವಾದ) ಕಶ್ಮಲ= ಕಲ್ಮಷವನ್ನು, ದೀಪವು, ತ್ಯಜಿಸಿ= ಬಿಟ್ಟು, ತಿಳಿಯ ತೈಲವ= ತಿಳಿಯಾದ ಎಣ್ಣೆಯನ್ನು ಮಾತ್ರ ಗ್ರಹಿಸಿ= ಎಳೆದುಕೊಂಡು ಮಂದಿರದೊಳಗೆ= ಮನೆಯೊಳಗೆ, ವ್ಯಾಪಿಸಿ ಇಪ್ಪ = ವ್ಯಾಪಿಸಿಕೊಂಡಿ ರುವ, ಕತ್ತಲೆ= ಕತ್ತಲೆಯನ್ನು, ಭಂಗಿಸುವ ತೆರದಿ= ಪರಿಹಾರಮಾಡು

ವಂತೆ, ಕಲಿ ಮೊದಲುಗೊಂಡು. ಅಖಿಳದಾನವ ಕುಲಜರು= ದೈತ್ಯರ ಕುಲದಲ್ಲಿ ಹುಟ್ಟಿದವರೆಲ್ಲರೂ, ಅನುದಿನಮಾಳ್ಪ= ಪ್ರತಿದಿವಸದಲ್ಲೂ ಮಾಡುವ, ಪುಣ್ಯಜಫಲವ= ಪುಣ್ಯಸಂಬಂಧವಾದ ಫಲವನ್ನು, ಬ್ರಹ್ಮಾದ್ಯರಿಗೆ= ಬ್ರಹ್ಮದೇವರು ಮೊದಲಾದ ದೇವತೆಗಳಿಗೆ, ಕೊಟ್ಟು, ಅಲ್ಲಲ್ಲಿ = ಆಯಾ ದೇವತೆಗಳಲ್ಲಿ ಇದ್ದು, ರಮಿಸುವನು= ಆನಂದಪಡುತ್ತಿರುವನು.

ತಾತ್ಪರ್ಯ :—ಪ್ರಣತೆಯಲ್ಲಿ ಎಣ್ಣೆಯನ್ನು ಹಾಕಿ ದೀಪವಿಟ್ಟರೆ ಆ ಎಣ್ಣೆಯಲ್ಲಿರುವ ಗಶಿ ಮೊದಲಾದ ಕಲ್ಮಷವನ್ನು ಆ ಪಾತ್ರೆಯಲ್ಲೇ ಬಿಟ್ಟು ತಿಳಿ ಎಣ್ಣೆಯನ್ನು ಮಾತ್ರ ಗ್ರಹಿಸಿ, ತಾನು ಮನೆಯಲ್ಲೆಲ್ಲಾ ವ್ಯಾಪಿಸಿಕ್ಕೊಂಡು ಆ ಮನೆಯಲ್ಲಿ ವ್ಯಾಪಿಸಿಕ್ಕೊಂಡಿದ್ದ ಕತ್ತಲೆಯನ್ನು ಓಡಿಸಿ, ತಾನೇ ತಾನಾಗಿ ಶೋಭಿಸುವಂತೆ ಶ್ರೀಹರಿಯು, ಕಲಿ ಮೊದಲಾದ ದೈತ್ಯಕುಲದವರು ಮಾಡುವ ಪಾಪರೂಪ ಕಶ್ಮಲವನ್ನು ಅಲ್ಲೇ ಬಿಟ್ಟು ತಿಳಿಯಣ್ಣೆಯಂತಿರುವ ಪುಣ್ಯವನ್ನು ಮಾತ್ರ ಗ್ರಹಿಸಿ ಮನೆಗಳಂತಿರುವ ಬ್ರಹ್ಮಾದಿಗಳಲ್ಲಿ ತಾನು ವ್ಯಾಪ್ತನಾಗಿ, ಅವರುಗಳಲ್ಲಿರುವ ಕತ್ತಲಿಗೆ ಸಮವಾದ ಪಾಪಗಳನ್ನು ನಾಶಗೊಳಿಸಿ ತಾನು ಅಲ್ಲಲ್ಲಿ ಶೋಭಿಸುತ್ತಿರುವನೆಂಬ ಭಾವ. || ೩೨ ||

ಅಗ್ನಿಯು ಹೇಗೆ ಶುದ್ಧಾಶುದ್ಧ ಪದಾರ್ಥಗಳನ್ನು ಭಕ್ಷಿಸಿದರೂ, ಶುದ್ಧನೇ ಆಗಿರುವನೋ, ಹಾಗೆ ಪರಮಾತ್ಮನು, ದೇವತೆಗಳು ತನಗೆ ಅರ್ಪಿಸುವ ಪಾಪಗಳನ್ನು ಭಸ್ಮಮಾಡಿ ತಾನು ಶುದ್ಧನೇ ಆಗಿರುವನೆಂದು ಹೇಳುತ್ತಾರೆ :—

ಈರ್ದಲೆಯುನಿತ್ಯದಲಿ ಮೇಧ್ಯಾ
ಮೇಧ್ಯವಸ್ತುಗಳುಂಡು ಲೋಕದಿ
ಶುದ್ಧಶುಚಿಯೆಂದೆನಿಸಿಕೊಂಬನು ವೇದಸ್ಮೃತಿಗಳೊಳು
ಬುದ್ಧಿಪೂರ್ವಕವಾಗಿ ವಿಬುಧರು
ಶ್ರದ್ಧೆಯಿಂದರ್ಪಿಸಿದ ಕರ್ಮನಿ
ಷಿದ್ಧವಾದರು ಸರಿಯೆ ಕೈಕೊಂಡುದ್ಧರಿಸುತಿಪ್ಪ ||

ಪದ್ಯಾರ್ಥ :— ಈರ್ದಲೆಯು = ಎರಡು ತಲೆಯುಳ್ಳ ಅಗ್ನಿಯು, ನಿತ್ಯದಲಿ, ಮೇಧ್ಯಾಮೇಧ್ಯ ವಸ್ತುಗಳ= ಯೋಗ್ಯಾಯೋಗ್ಯ ಪದಾರ್ಥಗಳನ್ನು, ಉಂಡು= ಭಕ್ಷಿಸಿ, ಲೋಕದಿ ಲೋಕದಲ್ಲಿ, ವೇದಸ್ಮೃತಿಗ

ಳೊಳು = ಶ್ರುತಿಸ್ಮೃತಿಗಳಲ್ಲಿ, ಶುದ್ಧ ಶುಚಿಯೆಂದು, ಅನಿಸಿಕೊಂಬನು. ಬುದ್ಧಿಪೂರ್ವಕವಾಗಿ, ವಿಬುಧರು= ದೇವತೆಗಳು, ಶ್ರದ್ಧೆಯಿಂದ, ಅರ್ಪಿಸಿದ, ಕರ್ಮ= ಕರ್ಮವು, ನಿಷಿದ್ಧವಾದರೂ, ಸರಿಯೆ, ಕೈಕೊಂಡು= ಸ್ವೀಕರಿಸಿ, ಉದ್ಧರಿಸುತಿಪ್ಪ.

ತಾತ್ಪರ್ಯ:—ಅಗ್ನಿಯು ಎರಡು ತಲೆಯುಳ್ಳವನೆಂದು "ಚತ್ವಾರಿ ಶೃಂಗಾತ್ರಯೋಸ್ಯಪಾದಾ ದ್ವೇಶೀರ್ಷೆ" ಎಂಬ ಶ್ರುತಿಯಲ್ಲಿ ಅಗ್ನಿಗೆ ೪ ಕೋಡುಗಳು, ಮೂರು ಪಾದಗಳು, ಎರಡು ತಲೆಗಳೆಂದು ಹೇಳಿರುವರು. ಆದ್ದರಿಂದಲೆ ದಾಸರಾಯರು ಈರ್ದಲೆಯೆಂದು ಹೇಳಿರುವರು. ಇಂತಹಾ ಅಗ್ನಿಯು ಯಾಗಾದಿಗಳಲ್ಲಿ ಆಹುತಿಯನ್ನು ಸ್ವೀಕರಿಸುವನು, ಮತ್ತು ಶವ ದೇಹವನ್ನೂ ಸ್ವೀಕರಿಸುವನು. ಆದರೂ ಅಗ್ನಿಯು ನಿತ್ಯಶುದ್ಧನೆಂದು, ಶ್ರುತಿಗಳಲ್ಲೂ, ಶ್ಮೃತಿಗಳಲ್ಲೂ ಹೇಳಲ್ಪಡುವನು. ಅದರಂತೆ ಪರಮಾತ್ಮನಿಗೆ ದೇವತೆಗಳು ಬುದ್ಧಿಪೂರ್ವಕವಾಗಿ ಭಕ್ತಿಶ್ರದ್ಧೆಯಿಂದ ತಮ್ಮಲ್ಲಿರುವ ಕರ್ಮಗಳನ್ನರ್ಪಿಸಿದರೆ ಪರಮಾತ್ಮನು ಅವು ನಿಷಿದ್ಧಕರ್ಮಗಳೆಂದು ಯೋಚಿಸದೆ ಸ್ವೀಕರಿಸಿ ಅವರನ್ನುದ್ಧರಿಸುವನು. ಆ ಪಾಪಗಳನ್ನು ತಾನು ಭಸ್ಮ ಮಾಡುವನು ಆದ್ದರಿಂದ ಪಾಪಸಂಬಂಧದಿಂದ ಪರಮಾತ್ಮನು ದೋಷಿಯೆಂದೆನಿಸದೆ ನಿತ್ಯಾನಂದಸ್ವರೂಪನೆಂದು ಪ್ರಸಿದ್ಧನಾಗಿರುವನು. ||೩೩||

ಒಡಯರಿದ್ದವನಸ್ಥ ಫಲಗಳ
ಬಡಿದು ತಿಂಬುವರುಂಟೆ ಕಂಡರೆ
ಹೊಡೆದು ಬಿಸಡುವರೆಂಬ ಭಯದಿಂನೋಡಲಂಜುವರು||
ಬಿಡದೆಮಾಡುವ ಕರ್ಮಗಳು ಮನೆ
ಮಡದಿ ಮಕ್ಕಳು ಬಂಧುಗಳು ಕಾ
ರೊಡಲನಾಳ್ಗಳು ಎಂದ ಮಾತ್ರದಿ ಓಡುವುರುದುರಿತು ||

ಪದ್ಯಾರ್ಥ:—ಒಡಯರಿದ್ದ=ಯಜಮಾನನಿಂದ ಪಾಲಿತವಾದ ವನಸ್ಥ= ವನದಲ್ಲಿರುವ, ಫಲಗಳ ಬಡಿದುತಿಂಬುವರುಂಟೆ! ಕಂಡರೆ ಹೊಡದುಬಿಸಡುವರು ಎಂಬ ಭಯದಿಂದ ನೋಡಲಂಜುವರು. ಬಿಡದೆಮಾಡುವಕರ್ಮಗಳು= ನಾವು ಮಾಡುವ ಕರ್ಮಗಳು, ಮನ ಮಡದಿ ಮಕ್ಕಳು ಬಂಧುಗಳು ಇವರೆಲ್ಲರು, ಕಾರೊಡಲನ= ಜಗದುದರನ, ಆಳುಗಳು= ಭೃತ್ಯರು, ಎಂದ ಮಾತ್ರದಿ, ದುರಿತ= ಪಾಪಗಳೆಲ್ಲವು ಓಡುವವು.

ತಾತ್ಪರ್ಯ:—ವನರಕ್ಷಕನೊಬ್ಬನು ವನವನ್ನು ಕಾಯಿದ್ದರೆ, ಜನರು ಆ ವನವನ್ನು ಕಣ್ಣೆತ್ತಿ ನೋಡಲೂ ಸಹ ಅಂಜುವರು. ಕಂಡರೆ ತಮ್ಮನ್ನು ಹೊಡೆಯುವರೆಂದು ಹೆದರಿ ದೂರವಾಗಿ ಹೋಗುವರು. ಅದರಂತೆ ನಾವು ಮಾಡುವ ಕರ್ಮಗಳು ನಮ್ಮ ಹೆಂಡರು ಮಕ್ಕಳು ಮೊದಲಾದವರೆಲ್ಲರೂ ಪರಮಾತ್ಮನ ಭೃತ್ಯರೆಂದು ಭಾವಿಸಿ ಸರ್ವಸಮರ್ಪಣೆ ಮಾಡಿದರೆ ನಮ್ಮ ಶತ್ರುಭೂತವಾದ ಪಾಪಗಳೆಲ್ಲವೂ ಓಡಿಹೋಗುವವು. ||೩೪||

ಜ್ಞಾನಕರ್ಮೇಂದ್ರಿಯಗಳಿಂದೇ
ನೇನುಮಾಡುವ ಕರ್ಮಗಳು ಲ
ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲ ಕಾಲದಲಿ ||
ಪ್ರಾಣಪತಿ ಕೈಕೊಂಡು ನಾನಾ
ಯೋನಿಯೈದಿಸನೊಮ್ಮೆ ಕೊಡದಿರೆ
ದಾನವರು ಶೆಳೆದೊಯ್ವರೆಲ್ಲಾ ಪುಣ್ಯರಾಸಿಗಳ ||

ಪದ್ಯಾರ್ಥ:—ಜ್ಞಾನಕರ್ಮೇಂದ್ರಿಯಗಳಿಂದ=ಜ್ಞಾನೇಂದ್ರಿಯಗಳಿಂದಲೂ, ಕರ್ಮೇಂದ್ರಿಯಗಳಿಂದಲೂ ಏನೇನು ಮಾಡುವ ಕರ್ಮಗಳು=ಯಾವ ಯಾವ ಕರ್ಮಗಳನ್ನು ಮಾಡವೆಯೋ ಆಯಾ ಕರ್ಮಗಳನ್ನು, ಕಾಲಕಾಲದಲಿ, ಲಕ್ಷ್ಮೀನಿವಾಸನಿಗೆ=ಶ್ರೀನಿವಾಸನಿಗೆ ಅರ್ಪಿಸುತಲಿರು. ಪ್ರಾಣಪತಿ=ಪ್ರಾಣೇಶನಾದ ಶ್ರೀ ಹರಿಯು, ಕೈಕೊಂಡು=ಸ್ವೀಕರಿಸಿ, ನಾನಾ ಯೋನಿ=ಅನೇಕ ವಿಧ ಜನ್ಮಗಳನ್ನು ಐದಿಸನು=ಹೊಂದದಂತೆ ಮಾಡುವನು ಒಮ್ಮೆ ಕೊಡದಿರೆ=ಒಂದುವೇಳೆ ಕೊಡದಿದ್ದರೆ, ಎಲ್ಲ ಪುಣ್ಯರಾಶಿಗಳ ದಾನವರು ಶೆಳೆದೊಯ್ವರು=ದೈತ್ಯರು ಅಪಹರಿಸುವರು. ||೩೫||

ತಾತ್ಪರ್ಯ:—ಕಣ್ಣು ಮೊದಲಾದ ಜ್ಞಾನೇಂದ್ರಿಗಳಿಂದಲೂ, ಕೈಕಾಲು ಮೊದಲಾದ ಕರ್ಮೇಂದ್ರಿಯಗಳಿಂದಲೂ ಮಾಡುವ ಎಲಾ ಕರ್ಮಗಳನ್ನು ಕಾಲಕಾಲಗಳಲ್ಲಿ ಪರಮಾತ್ಮನಿಗರ್ಪಿಸುತಲಿರು ಪರಮಾತ್ಮನು ಸ್ವೀಕರಿಸಿ ನಮಗೆ ಪುನರ್ಜನ್ಮವಿಲ್ಲದಂತೆ ಮಾಡುವನು ಇಲ್ಲವಾದರೆ ನಾವು ಮಾಡುವ ಪುಣ್ಯರಾಶಿಗಳನ್ನು ದೈತ್ಯರು ಅಪಹರಿಸುವರು.

ಶಾಸ್ತ್ರಾರ್ಥಗಳನ್ನು ತಿಳಿದವನಾದರೂ ಅಹಂ ಮಮತಾ ಬಿಡದವನು ಪುಣ್ಯ ಕರ್ಮವನ್ನು ಮಾಡಿದರೂ ಪರಮಾತ್ಮನು ಸ್ವೀಕರಿಸನೆಂದು ಹೇಳುತ್ತಾರೆ:—

**ಶ್ರುತಿಸ್ಮೃತ್ಯರ್ಥವ ತಿಳಿದಹಂ**
**ಮತಿವಿಶಿಷ್ಟನು ಕರ್ಮಮಾಡಲು**
**ಪ್ರತಿಗ್ರಹಿಸನವ ಪಾಪಗಳ ಕೊಡುತಿಪ್ಪ ನಿತ್ಯದಲಿ ||**
**ಚತುರದಶಭುವನಾಧಿ ಪತಿಕ್ರತು**
**ಕೃತಕೃತಜ್ಞನಿಯಾಮಕನು ಎನೆ**
**ಮತಿಭ್ರಂಶ ಪ್ರಮಾದಸಂಕಟ ದೋಷಪವಗಿಲ್ಲ ||**

ಪದ್ಯಾರ್ಥ :—ಶ್ರುತಿಯ = ವೇದಾರ್ಥವನ್ನು, ಸ್ಮೃತ್ಯರ್ಥವ= ಪುರಾಣ ವಾಕ್ಯಗಳ ಅರ್ಥಗಳನ್ನು, ತಿಳಿದು, ಅಹಂಮತಿವಿಶಿಷ್ಟನು = ನಾನು ನನ್ನದು ಎಂಬ ಬುದ್ಧಿಯುಳ್ಳವನು, ಕರ್ಮಮಾಡಲು= ಸತ್ಕರ್ಮಗಳನ್ನು ಮಾಡಿದರೂ, ಪ್ರತಿಗ್ರಹಿಸನು= ಪರಮಾತ್ಮನು ಸ್ವೀಕರಿಸನು, ನಿತ್ಯದಲಿ, ಪಾಪಗಳ= ಸಜ್ಜನರು ಮಾಡಿರುವ ಪಾಪಗಳನ್ನು, ಕೊಡುತಿಪ್ಪ=ಇವರಿಗೆ ಕೊಡುತ್ತಿರುವನು ಚತುರದಶಭುವನಾಧಿಪತಿ = ಹದಿನಾಲ್ಕು ಲೋಕ ಗಳಿಗೂ ಅಧಿಪತಿಯಾದ, ಕ್ರತು = ಯಜ್ಞನಾಮಕನಾದ ಶ್ರೀಹರಿಯು, ಕೃತ=ಮಾಡಲ್ಪಟ್ಟ ಸತ್ಕರ್ಮಉಳ್ಳ ಪುರುಷನಿಗೂ, ಕೃತಜ್ಞ= ಈ ಪುರುಷ ನಿಂದ ಉಪಕಾರ ಮಾಡಿಸಿಕೊಳ್ಳಲ್ಪಟ್ಟೆನೆಂದು ತಿಳಿದವನಿಗೂ. ನಿಯಾಮ ಕನು=ಪ್ರೇರಕನು, ಎನೆ=ಎಂದು ಚಿಂತಿಸಿದರೆ, ಮತಿ ಭ್ರಂಶ=ಬುದ್ಧಿ ಕೆಡುವುದು, ಪ್ರಮಾದ= ಅನ್ಯಥಾಜ್ಞಾನ ಹುಟ್ಟುವುದು, ಸಂಕಟ=ತಜ್ಜನ್ಯ ವಾದ ದುಃಖಗಳು ದೋಷವು=ಇವೇ ಮೊದಲಾದ ದೋಷಗಳು ಅವ ಗಿಲ್ಲ.

ತಾತ್ಪರ್ಯ :—ಶ್ರುತಿಗಳು, ಸ್ಮೃತಿಗಳು ಇವುಗಳರ್ಥವನ್ನು ತಾನು ತಿಳಿದು ಪರಕೀಯರಿಗೆ ಬೋಧನೆ ಮಾಡುವ ಶಕ್ತಿಯುಳ್ಳವನಾದರೂ, ತಾನು ತನ್ನದು ಎಂಬಭಿಮಾನವನ್ನು ಬಿಡದಿರುವವನು ಯಾವ ಸತ್ಕರ್ಮ ಗಳನ್ನು ಮಾಡಿದರೂ ಆ ಕರ್ಮಗಳನ್ನು ಸತ್ಕರ್ಮಗಳೆಂದು ಪರಮಾತ್ಮನು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದ ಆ ಪುಣ್ಯ ಕರ್ಮಗಳಿಗೆ ಫಲವಿಲ್ಲ ಮತ್ತೂ ಸಜ್ಜನರಲ್ಲಿ ಇರುವ ಪಾಪಗಳನ್ನು ಮಾತ್ರ ಈತನಿಗೆ ಹಂಚಿಕೊಡುವನು. ಹದಿನಾಲ್ಕು ಲೋಕಗಳಿಗೂ ಧೊರೆಯಾದ, ಯಜ್ಞನಾಮಕನಾದ ಶ್ರೀಹ ರಿಯು, ಸತ್ಕರ್ಮವನ್ನು ಮಾಡುವವರೂ ಮಾಡಿಸುವವರೂ ಇವರೆಲ್ಲರಲ್ಲೂ ನಿಂತು ಮಾಡಿ ಮಾಡಿಸುವನೆಂದು ಉಪಾಸನೆ ಮಾಡುವವರಿಗೆ ಯಾವಾ

ಗೆಲೂ ಬುದ್ಧಿಯು ಕೆಡುವುದಿಲ್ಲ. ಅನ್ಯಥಾಜ್ಞಾನ ಹುಟ್ಟುವುದಿಲ್ಲ ಯಾವ ವಿಧವಾದ ಸಂಕಟವೂ ಬರುವುದಿಲ್ಲ. ಕೃತ—ಕೃತಜ್ಞ ಎಂಬೆರಡು ಪದ ಗಳಿಗೆ ಅರ್ಥ :-ಕೃತ ಅಂದರೆ ಮಾಡಲ್ಪಟ್ಟ ಎಂದರ್ಥ. ಸತ್ಕರ್ಮಗಳನ್ನು ಮಾಡುವವನೆಂಬ ತಾತ್ಪರ್ಯ. ಇಂತಹಾ ಸತ್ಕರ್ಮಗಳನ್ನು ಮಾಡು ವವನು ಪರಮಾತ್ಮನ ಪ್ರೇರಣೆಯಿಂದಲೆ ಮಾಡುವನೆಂದು ತಿಳಿದುಕೊಳ್ಳು ವವನೆ ಕೃತಜ್ಞನೆಂದು ತಿಳಿಯಬೇಕು. ಆ ಜ್ಞಾನವು ಹುಟ್ಟಬೇಕಾದರೂ ಭಗವದನುಗ್ರಹದಿಂದಲೆ ಆಗುವದೆಂದು ತಿಳಿದು ಉಪಾಸನೆ ಮಾಡ ಬೇಕೆಂದು ತಾತ್ಪರ್ಯ. ||೩೬||

ವಾರಿಜಾಸನ ಮುಖ್ಯರಾಜ್ಞಾ
ಧಾರಕರು ಸರ್ವಸ್ವತಂತ್ರರ
ಮಾರಮಣನೆಂದರಿದು ಇಷ್ಟಾನಿಷ್ಟ ಕರ್ಮಫಲ ||
ಸಾರಭೋಕ್ತನಿಗರ್ಪಿಸಲು ಸ್ವೀ
ಕಾರಮಾಡುವ ಪಾಪಫಲಕು
ಬೇರನಾಮಕ ದೈತ್ಯರಿಗೆ ಕೊಟ್ಟವರ ನೋಯಿಸುವ ||

ಪದ್ಯಾರ್ಥ :—ವಾರಿಜಾಸನಮುಖ್ಯರು = ಬ್ರಹ್ಮದೇವರು ಮೊದ ಲಾದವರು, ಆಜ್ಞಾಧಾರಕರು=ಪರಮಾತ್ಮನ ಅಪ್ಪಣೆಯಂತೆ ನಡೆಯು ವವರು. ರಮಾರಮಣನು=ಲಕ್ಷ್ಮೀದೇವಿಯರಿಗೆ ಆನಂದವನ್ನು ಕೊಡಿ ಸುವ ಶ್ರೀ ಪರಮಾತ್ಮನೊಬ್ಬನು ಸರ್ವಸ್ವತಂತ್ರನು ; ಎಂದರಿತು= ಎಂದು ತಿಳಿದು, ಇಷ್ಟಾನಿಷ್ಟ ಕರ್ಮಫಲ=ಪುಣ್ಯ ಪಾಪ ಕರ್ಮಗಳ ಫಲ ಗಳನ್ನು ಸಾರಭೋಕ್ತನಿಗೆ= ಫಲಗಳ ಸಾರವನ್ನು ಭುಂಜಿಸುವ ಶ್ರೀಹರಿಗೆ, ಅರ್ಪಿಸಲು, ಸ್ವೀಕಾರಮಾಡುವನು. ಕುಬೇರನಾಮಕ = ಕುಬೇರನೆಂಬ ಹೆಸರುಳ್ಳ ಶ್ರೀಹರಿಯು. ಪಾಪಫಲ = ಪಾಪಫಲಗಳನ್ನು, ದೈತ್ಯರಿಗೆ ಕೊಟ್ಟು, ಅವರನೋಯಿಸುವನು=ದುಃಖಪಡಿಸುವನು

ತಾತ್ಪರ್ಯ :—ಬ್ರಹ್ಮದೇವರು ಮೊದಲಾದವರೆಲ್ಲರೂ ಪರಮಾತ್ಮನ ವಶದಲ್ಲಿದ್ದು ಅವನ ಅಪ್ಪಣೆಯಂತೆ ನಡೆದುಕೊಳ್ಳುವವರು. ಪರಮಾತ್ಮ ನೊಬ್ಬನೇ ಸರ್ವಸ್ವತಂತ್ರನೆಂದು ತಿಳಿದು ನಾವು ಮಾಡಿದ ಪುಣ್ಯ ಪಾಪ ಕರ್ಮಗಳನ್ನು ಪರಮಾತ್ಮನಿಗರ್ಪಿಸಿದರೆ ಪರಮಾತ್ಮನು ಸ್ವೀಕರಿಸಿ ಪುಣ್ಯ ಫಲದ ಸಾರವನ್ನು ತಾನುಂಡು ತನಗೆ ಅರ್ಪಿಸಿದವರಿಗೆ ಇಮ್ಮಡಿ ಮಾಡಿ

ಕೊಟ್ಟು ಸುಖಪಡಿಸುವನು. ಕುಬೇರನೆಂಬ ಹೆಸರುಳ್ಳ ಪರಮಾತ್ಮನು ತನಗೆ ಅರ್ಪಿಸಿದ ಪಾಪಫಲವನ್ನು ದೈತ್ಯರಿಗೆ ಕೊಟ್ಟು ಅವರನ್ನು ದುಃಖ ಪಡಿಸುವನು. ||೩೭||

ಕುಬೇರನೆಂದು ಪರಮಾತ್ಮನಿಗೆ ಹೆಸರೆಂದು ಪೂರ್ವ ಪದ್ಯದಲ್ಲಿ ಹೇಳಿದ್ದರು. ಆ ಹೆಸರು ಪರಮಾತ್ಮನಿಗೆ ಹೇಗೆ ಬಂತೆಂದರೆ ಅದನ್ನು ನಿರ್ವಚನ ಮಾಡುತ್ತಾ ಪ್ರಸಕ್ತಿಯಿಂದ ಸೂರ್ಯಾದಿ ಪದಗಳನ್ನೂ ಪರಮಾತ್ಮನ ಪರವಾಗಿ ನಿರ್ವಚನ ಮಾಡುತ್ತಾರೆ.

**ಕ್ರೂರದೈತ್ಯರೊಳಿದ್ದು ತಾನೆ**
**ಪ್ರೇರಿಸುವ ಕಾರಣದಿ ಹರಿಗೆ ಕು**
**ಬೇರನೆಂಬೊರು ಎಲ್ಲರೊಳು ನಿರ್ಗತಗತಿಗೆ ನಿರುತ ||**
**ಸೂರಿಗಮ್ಯಗೆ ಸೂರ್ಯನೆಂಬರು**
**ದೂರ ಶೋಕಗೆ ಶುಕ್ಲಲಿಂಗ ಶ**
**ರೀರವಿಲ್ಲದ ಕಾರಣದಲಿ ಅಕಾಯನೆನಿಸುವನು ||**

ಪದ್ಯಾರ್ಥ:— ಕ್ರೂರದೈತ್ಯರೊಳಿದ್ದು, ತಾನೆ=ಪರಮಾತ್ಮನೇಪ್ರೇರಿಸುವಕಾರಣದಿಹರಿಗೆ ಕುಬೇರನೆಂಬುವರು=ಕುಬೇರನೆಂದು ಕರೆಯುವರು. ಎಲ್ಲರೊಳು ನಿರ್ಗತಗತಿಗೆ=ನಿ=ನಿತರಾಂ=ಅತ್ಯಂತವಾಗಿ(ಚೆನ್ನಾಗಿ)ಸರ್ವತ್ರಪ್ರವೇಶಮಾಡುವ ಯೋಗ್ಯತೆಯುಳ್ಳವನಾದುದರಿಂದ ನಿರುತ=ನಿರುತಯೆಂದು ಹರಿಗೆ ಹೆಸರು, ಸೂರಿಗಮ್ಯಗೆ=ಸೂರಿ=ಜ್ಞಾನಿಗಳಿಂದಗಮ್ಯಗೆ=ಪಡೆಯಲ್ಪಡುವ ಸ್ಥಾನಉಳ್ಳವನಾದುದರಿಂದ ಅಥವಾ ಜ್ಞಾನಿಗಳಿಂದ· ತಿಳಿಯಲ್ಪಡುವ ಸ್ವರೂಪ ಉಳ್ಳವನಾದುದರಿಂದ ಸೂರ್ಯನೆಂಬರು=ಸೂರ್ಯನೆಂದು ಹೆಸರಾಗಿರುವುದು. ದೂರಶೋಕಗೆ=ಶೋಕದೂರನಿಗೆ ಅಂದರೆ ಶೋಕವನ್ನು ಎಂದಿಗೂ ಕಾಣದವನೆಂದರ್ಥ. ಆದಕಾರಣ ಶುಕ್ಲ=ಶುಕ್ಲನೆಂಬುವರು, ಲಿಂಗಶರೀರವಿಲ್ಲದ ಕಾರಣದಲಿ, ಅಕಾಯನು=ಶರೀರವಿಲ್ಲದವನೆನಿಸುವನು.

ತಾತ್ಪರ್ಯ:—ಕ್ರೂರರಾದ ದೈತ್ಯರಲ್ಲಿದ್ದು ಪಾಪಗಳನ್ನು ಮಾಡಲು ಪ್ರೇರಿಸುವುದರಿಂದ "ಕುಮತೇರೀರಣಾತ್ ಕುಬೇರಃ" ಎಂಬ ನಿರ್ವಚನದಿಂದ ಹರಿಗೆ ಕುಬೇರನೆಂದು ಹೆಸರು. "ಸೂರಿಗಮ್ಯತ್ವಾತ್ಸೂರ್ಯಃ" ಜ್ಞಾನಿಗಮ್ಯನಾದುದರಿಂದ ಸೂರ್ಯನೆಂದು ಹೆಸರು. "ಶುಕ್ಲಂತಚ್ಛೋಕ

ರಾಹಿತ್ಯಾತ್'' ಎಂಬ ಪ್ರಮಾಣದಿಂದ, ಶೋಕರಹಿತನಾದುದರಿಂದ ಶುಕ್ಲನೆಂದು ಹೆಸರು. ''ಅಕಾಯೋ ಲಿಂಗವರ್ಜನಾತ್'' ಎಂಬ ಪ್ರಮಾಣದಿಂದ ಲಿಂಗಶರೀರವಿಲ್ಲದಕಾರಣ ಅಕಾಯನನ್ನುವರು. ಈಶಾವಾಸ್ಯೋಪನಿಷದ್ಭಾಷ್ಯದ ಆಧಾರದಮೇಲೆ ದಾಸಾರ್ಯರು ಈ ನಿರ್ವಚನವನ್ನು ಮಾಡಿರುವರೆಂದು ತಿಳಿಯಬೇಕು. ||೩೮||

ಸಕಲ ಪಾಪಗಳಿಂದ ಮುಕ್ತನಾಗಬೇಕೆಂಬ ಅಪೇಕ್ಷೆಯುಳ್ಳವನಿಗೆ ಹರಿನಾಮಸ್ಮರಣೆಗಿಂತಲೂ ಬೇರೇ ಸಾಧನವಿಲ್ಲವೆಂದು ಹೇಳುತ್ತಾರೆ.

**ಪೇಳಲೊಶವಲ್ಲದ ಮಹಾಪಾ**
**ಪಾಳಿಗಳ ನೊಂದೇಕ್ಷಣದಿ ನಿ**
**ರ್ಮೂಲಗೈಸಲುಬೇಕು ಎಂಬವಗೊಂದೆ ಹರಿನಾಮ ||**
**ನಾಲಿಗೆಯೊಳುಳ್ಳವಗೆ ಪರಮ ಕೃ**
**ಪಾಳು ಕೃಷ್ಣನು ಕೈಪಿಡಿದು ತ**
**ನ್ನಾಲಯದೊಳಿಟ್ಟನುದಿನದಲಾನಂದಬಡಿಸುವನು ||**

ಪದ್ಯಾರ್ಥ:—ಪೇಳಲೊಶವಲ್ಲದ=ಹೇಳಲು ಸಾಧ್ಯವಲ್ಲದ, ಮಹಾಪಾಪಾಳಿಗಳ=ಮಹಾಪಾಪಪಂಗ್ತಿಗಳನ್ನು (ಸಂಘಗಳನ್ನು) ಒಂದೇಕ್ಷಣದಿ, ನಿರ್ಮೂಲಗೈಸಲುಬೇಕು = ಬೇರಿಲ್ಲದೆ ಮಾಡಬೇಕು, ಎಂಬುವಗೆ=ಎಂದು ಅಪೇಕ್ಷೆಯುಳ್ಳವನಿಗೆ ಹರಿನಾಮ ಒಂದೇ (ಮುಖ್ಯ ಸಾಧನವು) ನಾಲಿಗೆಯೊಳುಳ್ಳವಗೆ=ಈ ಹರಿನಾಮವು ನಾಲಿಗೆಯಲ್ಲಿ ಇರುವವನಿಗೆ ಅಂದರೆ ಹರಿನಾಮಸ್ಮರಣೆಯನ್ನು ಸರ್ವದಾ ಮಾಡುತ್ತಿರುವವನಿಗೆ ಪರಮಕೃಪಾಳು=ಪರಮದಯಾಳುವಾದ ಶ್ರೀಕೃಷ್ಣನು, ಕೈಪಿಡಿದು, ತನ್ನಾಲಯದೊಳು=ವೈಕುಂಠದೊಳಗೆ ಇಟ್ಟು ಅನುದಿನ=ನಿತ್ಯದಲ್ಲೂ ಆನಂದಪಡಿಸುವನು.

ತಾತ್ಪರ್ಯ:—ಇವನು ಇಷ್ಟು ಪಾಪಗಳನ್ನು ಮಾಡಿರುವನೆಂದು ಹೇಳಲುಕೂಡ ಸಾಧ್ಯವಲ್ಲದಷ್ಟುಪಾಪಗಳನ್ನು ಮಾಡಿದ್ದರೂ ಆ ಎಲ್ಲಾ ಪಾಪಗಳೂ ಭಸ್ಮವಾಗಬೇಕೆಂದು ಅಪೇಕ್ಷೆಯಿಂದ ಪಶ್ಚಾತ್ತಾಪವುಳ್ಳವನಾಗಿ ಭಗವನ್ನಾಮವನ್ನು ಬಾಯಿಂದ ಉಚ್ಚರಿಸಿದರೆ, ತಕ್ಷಣದಲ್ಲಿ ಎಲ್ಲಾ ಪಾಪಗಳು ಸುಟ್ಟುಹೋಗುವವು. ಭಾಗವತಷಷ್ಟಸ್ಕಂಧದಲ್ಲಿ ''ಸ್ತೇನಃಸುರಾಪೋಮಿತ್ರಧ್ರುಕ್ ಬ್ರಹ್ಮಹಾಗು

ರುತಲ್ಪಕಃ || ಸ್ತ್ರೀ ರಾಜಪಿತೃಗೋಹಂತಾ ಯೇ ಚ ಪಾತಕಿನೋ ಪರೇ || ಸರ್ವೇಷಾಮಪ್ಯಘವತಾಮಿದಮೇವ ಸುನಿಷ್ಕೃತಂ" ಎಂದು ಹೇಳಿರುವದು. ಬ್ರಹ್ಮಹತ್ಯೆ ಮೊದಲಾದ ಪಂಚ ಮಹಾಪಾತಕಗಳು, ಇನ್ನೂ ಇತರವಾದ ಪಿತೃಹತ್ಯೆ ಮೊದಲಾದ ಎಲ್ಲಾ ಪಾಪಗಳಿಗೂ ನಾರಾಯಣ ಸ್ಮರಣೆಯೇ ಪ್ರಾಯಶ್ಚಿತ್ತವೆಂದು ತಾತ್ಪರ್ಯ. ಆದ್ದರಿಂದ ಯಾವನು ಸರ್ವದಾ ಭಗವನ್ನಾಮೋಚ್ಚಾರಣೆಯನ್ನು ಮಾಡುತ್ತಿರುವನೋ ಅವನನ್ನು ಕೃಪಾಳುವಾದ ಶ್ರೀಪರಮಾತ್ಮನು ಕೈಹಿಡಿದು ತನ್ನ ಲೋಕದಲ್ಲಿ ಮುಕ್ತಸ್ಥಾನದಲ್ಲಿ ಇಟ್ಟು ಸರ್ವದಾ ಶಾಶ್ವತವಾದ ಸುಖವನ್ನು ಕೊಡುವನು.

ಸಂಧಿಯನ್ನು ಉಪಸಂಹಾರ ಮಾಡುತ್ತಾರೆ:—

**ರೋಗಿಯೌಷಧಪಥ್ಯದಿಂದನಿ-**
**ರೋಗಿ ಯೆನಿಸುವತೆರದಿ ಶ್ರೀಮ-**
**ದ್ಭಾಗವತ ಸುಶ್ರವಣಗೈದು ಭವಾಖ್ಯರೋಗವನು ||**
**ನೀಗಿಶಬ್ದಾದ್ಯಖಿಳ ವಿಷಯನಿ-**
**ಯೋಗಿಸು ದಶೇಂದ್ರಿಯವನಿಲನೊಳು**
**ಶ್ರೀಗುರು ಜಗನ್ನಾಥವಿಠಲ ಪ್ರೀತನಾಗುವನು || ೪ ||**

ಪದ್ಯಾರ್ಥ:—ರೋಗಿ—ರೋಗಿಯು, ಔಷಧಪಥ್ಯದಿಂದ ನಿರೋಗಿ ಯೆನಿಸುವ ತೆರದಿ—ಆರೋಗ್ಯವಂತನೆಂದು ಅನ್ನಿಸಿಕೊಳ್ಳುವತೆರದಿ, ಶ್ರೀಮದ್ಭಾಗವತ— ಶ್ರೀಮದ್ಭಾಗವತವನ್ನು, ಸುಶ್ರವಣಗೈದು—ಚೆನ್ನಾಗಿ ಶ್ರವಣಮಾಡಿ, ಭವಾಖ್ಯ ರೋಗವನು—ಸಂಸಾರವೆಂಬ ರೋಗವನ್ನು ನೀಗಿ—ಕಳೆದುಕೊಂಡು, ಶಬ್ದಾದ್ಯಖಿಳ—ಶಬ್ದಸ್ಪರ್ಶ ಮೊದಲಾದ ಸಕಲವಾದ, ದಶೇಂದ್ರಿಯ—ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ಮಾಡುವ, ವಿಷಯ—ವಿಷಯಗಳನ್ನು, ಅನಿಲನೊಳು—ಶ್ರೀ ಭಾರತೀ ರಮಣ ಮುಖ್ಯಪ್ರಾಣದೇವರಲ್ಲಿ, ನಿಯೋಗಿಸು—ಮುಖ್ಯಪ್ರಾಣದೇವರೇ ನನ್ನೊಳಗಿದ್ದು ಮಾಡಿಸಿದರೆಂದು ತಿಳಿದು ಮುಖ್ಯಪ್ರಾಣಾಂತರ್ಗತ ಪರಮಾತ್ಮನಿಗರ್ಪಿಸು. ಶ್ರೀಗುರು—ಸರ್ವಜಗದ್ಗುರುವಾದ, ಶ್ರೀಜಗನ್ನಾಥ ವಿಠ್ಠಲನು, ಪ್ರೀತನಾಗುವನು ||

ತಾತ್ಪರ್ಯ:— ರೋಗದಿಂದ ಕಷ್ಟಪಡುತ್ತಿರುವವನು ಹೇಗೆ ಔಷಧ

ಪಥ್ಯದಿಂದ ರೋಗವನ್ನು ಕಳೆದುಕೊಳ್ಳುವನೋ, ಹಾಗೆ ಸಂಸಾರರೋಗ-ವನ್ನು ಕಳೆದುಕೊಳ್ಳುವುದಕ್ಕೆ ಔಷಧವು ಭಾಗವತ ಶ್ರವಣ. ಅದನ್ನು ಚೆನ್ನಾಗಿಮಾಡಿ ಸಂಸಾರ ರೋಗವನ್ನು ಕಳೆದುಕೊಳ್ಳಬೇಕು. ಜ್ಞಾನೇಂ-ದ್ರಿಯಗಳಿಗೆ ವಿಷಯೀಭೂತವಾದ ಶಬ್ದಸ್ಪರ್ಶಾದಿಗಳಿಂದಲೂ, ಕೈ ಕಾಲು-ಮೊದಲಾದ ಕರ್ಮೇಂದ್ರಿಯಗಳಿಂದಲೂ, ಮಾಡುವ ಕರ್ಮಗಳನ್ನು ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಪರಮಾತ್ಮನಿಗರ್ಪಿಸಲು ಶ್ರೀ ಜಗನ್ನಾಥ ವಿಠ್ಠಲನು ಸುಪ್ರೀತನಾಗುವನು

ಎಂಬಲ್ಲಿಗೆ ಹರಿಕಥಾಮೃತಸಾರ ಭಾವಪ್ರಕಾಶಿಕೆಯಲ್ಲಿ ಕ್ರೀಡಾ ವಿಲಾಸವೆಂಬ ೧೮ ನೆಯ ಸಂಧಿಯು ಸಮಾಪ್ತವಾದುದು.

ಶ್ರೀಕೃಷ್ಣಾರ್ಪಣಮಸ್ತು:—

**ಹ ರಿ ಕ ಥಾ ಮೃ ತ ಸಾ ರ.**

ಕರ್ಮ ವಿಮೋಚನ ಸಂಧಿಯೆಂಬ ೧೯ ನೆಯದು ಪ್ರಾರಂಭ

ಈ ಸಂಧಿಯಲ್ಲಿ ಮನುಷ್ಯರು ಮಾಡುವ ದುಷ್ಕರ್ಮಗಳನ್ನು ಪರಿಹಾರ ಮಾಡಿಕೊಳ್ಳುವುದಕ್ಕೆ ಬೇಕಾದ ಮುಖ್ಯ ಸಾಧನವನ್ನು ಹೇಳುತ್ತಾ ಮೊದಲು ಕರ್ಮವನ್ನುಮಾಡಿಸುವವರ್ಯಾರು? ಯಾವ ರೂಪಗಳಿಂದ ಪರಮಾ-ತ್ಮನು ಕರ್ಮವನ್ನು ಮಾಡಿಸುವನೆಂಬಿವೇ ಮೊದಲಾದ ವಿಷಯಕ ಜ್ಞಾನವು ಅವಶ್ಯಕವಾದುದರಿಂದ ಸಕಲ ಚೇತನರಲ್ಲಿ ವ್ಯಾಪ್ತನಾಗಿರುವ ಭಗವದ್ರೂ-ಪಗಳನ್ನು ಈ ಪದ್ಯದಲ್ಲಿ ಹೇಳುತ್ತಾರೆ:—

**ಹರಿಕಥಾಮೃತಸಾರಗುರು ॥ ಪ ॥**
**ಮೂಲನಾರಾಯಣನು । ಮಾಯಾ**
**ಲೋಲನಂತವತಾರನಾಮಕ**
**ವ್ಯಾಳರೂಪಜಯಾರಮಣನಾವೇಶನೆನಿಸುವನು ॥**
**ಲೀಲೆಗೈವಾನಂತಚೇತನ**
**ಜಾಲದೊಳು ಪ್ರದ್ಯುಮ್ನ ಬ್ರಹಾಂ**
**ಡಾಲಯದ ಒಳಹೊರಗೆ ನೆಲಸಿಹ ಶಾಂತಿಯನಿರುದ್ಧ ॥**

ಪದ್ಯಾರ್ಥ:— ನಾರಾಯಣನು, ಮೂಲ — ಸರ್ವ ಜಗತ್ತಿಗೂ,

ಮೂಲಕಾರಣನು ಮಾಯಾಲೋಲ—ಮಾಯಾನಾಮಕ ಲಕ್ಷ್ಮೀದೇವಿಯಲ್ಲಿ ಆಸಕ್ತನಾದ ವಾಸುದೇವನು, ಅನಂತಪತಾರ ನಾಮಕ— ಅನಂತಾವತಾರಗಳಿಗೆ ಬೀಜಸ್ಥಾನೀಯನು, ವ್ಯಾಳರೂಪ—ಸರ್ಪಾಕಾರನಾದ, ಜಯಾರಮಣನು—ಜಯಾನಾಮಕ ಲಕ್ಷ್ಮೀದೇವಿಯರ ಪತಿಯಾದ ಸಂಕರ್ಷಣನು, ಆವೇಶನೆನಿಸುವನು—ಸಕಲ ಚೇತನರಲ್ಲಿ ಆವಿಷ್ಟನಾದುದರಿಂದ ಆವೇಶನೆಂದೆನಿಸುವನು, ಅನಂತಚೇತನ ಜಾಲದೊಳು— ಅನಂತಾನಂತ ಜೀವಸಂಘದೊಳಗೆ, ಪ್ರದ್ಯುಮ್ನ—ಪ್ರದ್ಯುಮ್ನ ರೂಪಿಯು, ಲೀಲೆಗೈವ—ಕರ್ಮಗಳನ್ನು ಮಾಡಿ ಮಾಡಿಸುತ್ತ ಆಟವಾಡುತ್ತಿರುವನು. ಶಾಂತಿಯನಿರುದ್ಧ—ಶಾಂತೀರಮಣನಾದ ಅನಿರುದ್ಧನು. ಬ್ರಹ್ಮಾಂಡಾಲಯದ—ಬ್ರಹ್ಮಾಂಡವೆಂಬ ಮನೆಯ, ಒಳ ಹೊರಗೆ, ನೆಲಸಿಹ—ವಾಸಮಾಡುತ್ತಿರುವನು. ||೧||

ತಾತ್ಪರ್ಯ:—ಪ್ರಳಯಕಾಲದಲ್ಲಿ ಶ್ರೀಮನ್ನಾರಾಯಣನು, ಲಕ್ಷ್ಮೀಸಮೇತನಾಗಿ ಒಂದೇ ರೂಪದಿಂದ ಇರುವನು. ಅವನೇ ಜಗತ್ತಿಗೆ ಮೂಲ ಕಾರಣನಾಗಿರುವವನು. ಸೃಷ್ಟಿಕಾಲದಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ೪ ರೂಪಗಳನ್ನು ಧರಿಸುವನು. ಈ ೪ ರೂಪಗಳಿಗೂ, ಹೆಂಡತಿಯರಾಗುವುದಕ್ಕಾಗಿ, ಲಕ್ಷ್ಮೀದೇವಿಯರು ಮಾಯಾ, ಜಯಾ, ಕೃತಿ, ಶಾಂತಿಯೆಂದು ೪ ರೂಪಗಳನ್ನು ಧರಿಸಿ ಮೇಲೆ ಹೇಳಿದ ವಾಸುದೇವಾದಿ ೪ ರೂಪಗಳಿಗೆ ಪತ್ನಿಯಾಗುವರು. ಈ ೪ ರೂಪಗಳಲ್ಲಿ ಮಾಯಾಪತಿಯಾದ ವಾಸುದೇವನು, ಅನಂತಾನಂತವಾದ ಭಗವದವತಾರಗಳಿಗೆ ಬೀಜಭೂತನಾದವನು. ಜಯಾ ಪತಿಯಾದ ಸಂಕರ್ಷಣನು, ಶೇಷರೂಪದಿಂದ ಶೇಷಾಂತರ್ಗತನಾಗಿ, ಸಕಲ ಚೇತನರೊಳಗೊ ಪ್ರವಿಷ್ಟನಾಗಿ ಅಂತರೂಪಿ ಎಂದೆನಿಸುವನು. ಕೃತಿಪತಿ ಪ್ರದ್ಯುಮ್ನನು ಸಕಲ ಚೇತನರಲ್ಲಿದ್ದು ನಾನಾವಿಧ ಕರ್ಮಗಳನ್ನು ಮಾಡಿ ಮಾಡಿಸುತ್ತ ಕ್ರೀಡಿಸುತ್ತಿರುವನು. ಬ್ರಹ್ಮಾಂಡದ ಒಳಗೂ ಹೊರಗೂ ಶಾಂತೀಪತಿಯಾದ ಅನಿರುದ್ಧನು ವಾಸವಾಗಿರುವನು. ||೧||

ಐದುಕಾರಣರೂಪ ಇಪ್ಪ
ತ್ತೈದು ಕಾರ್ಯಗಳೆನಿಸುವವು ಆ
ಕೈದುರೂಪದಿರವಿಸುತಿಪ್ಪನು ಈ ಚರಾಚರದೀ ||

**ಭೇದವರ್ಜಿತ ಮೂಜಗಜ್ಜ**
**ನ್ಮಾದಿಕಾರಣಮುಕ್ತಿ ದಾಯಕ**
**ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞಾ ॥ ೨ ॥**

ಪದ್ಯಾರ್ಥ:—ಐದು ಕಾರಣರೂಪ—ಮೇಲೆ ಹೇಳಿದ ನಾರಾಯಣಾದಿ ೫ ರೂಪಗಳು ಜಗತ್ತಿಗೆ ಕಾರಣರೂಪಗಳಾಗಿರುವವು. ಇಪ್ಪತ್ತೈದು ಕಾರ್ಯಗಳೆನಿಸುವವು—ಈ ನಾರಾಯಣಾದಿ ೫ ರೂಪಗಳಲ್ಲಿ ಒಂದೊಂದು ರೂಪದಲ್ಲೂ ೫-೫ ರೂಪಗಳಂತೆ ಅಂದರೆ; ನಾರಾಯಣನಲ್ಲಿ ನಾರಾಯಣ ನಾರಾಯಣ; ನಾರಾಯಣ ವಾಸುದೇವ; ನಾರಾಯಣ ಸಂಕರ್ಷಣ ನಾರಾಯಣ ಪ್ರದ್ಯುಮ್ನ ನಾರಾಯಣಾನಿರುದ್ಧನೆಂದು ೫ ರೂಪಗಳು; ಇದರಂತೆ ವಾಸುದೇವಾದಿ ೪ ರೂಪಗಳಲ್ಲೂ ವಾಸುದೇವ ನಾರಾಯಣ ವಾಸುದೇವ ವಾಸುದೇವ; ವಾಸುದೇವ ಸಂಕರ್ಷಣ; ಇದೇಪ್ರಕಾರ ೫ ರೂಪಗಳಲ್ಲೂ ೫-೫ ರೂಪಗಳಂತೆ ೨೫ ರೂಪಗಳು ಕಾರ್ಯರೂಪವಾದ ಜಗತ್ತಿನಲ್ಲಿ ಕಾರ್ಯರೂಪಗಳಾಗಿರುವವು. ಈಚರಾಚರದಿ— ಈ ಚರಾಚರಾಖ್ಯ ಪ್ರಪಂಚದಲ್ಲಿ ಆರೈದು ರೂಪದಿ— ಕಾರಣರೂಪಗಳು ೫; ಕಾರ್ಯ ರೂಪಗಳು ೨೫; ಹೀಗೆ ೩೦ ರೂಪಗಳಿಂದ ರಮಿಸುತಿಪ್ಪನು—ಸರ್ವತ್ರ ವ್ಯಾಪ್ತನಾಗಿ ಕ್ರೀಡಿಸುತ್ತಿರುವನು. ಭೇದವರ್ಜಿತ—ಈ ರೂಪಗಳಲ್ಲಿ ಒಂದಕ್ಕೊಂದು ಭೇದವಿಲ್ಲದವನು ಮೂಜಗ ಜನ್ಮಾದಿಕಾರಣ—ಈ ಮೂರು ಲೋಕದ ಸೃಷ್ಟ್ಯಾದಿಗಳಿಗೆ ಕಾರಣನು; ಮುಕ್ತಿದಾಯಕ—ಮುಕ್ತಿಯನ್ನು ಕೊಡುವವನು; ಸರ್ವಜ್ಞ—ಸರ್ವವೂ ತಿಳಿದವನು. ಇಂತಹಾ ಸ್ವಾಮಿಯು ಸ್ವೋದರದೊಳಿಟ್ಟು—ತನ್ನ ಉದರದೊಳಗೆ ಇಟ್ಟುಕೊಂಡು ಎಲ್ಲರನು ಸಂತೈಪ—ಸಮಾಧಾನಗೊಳಿಸುವನು ॥ ೨ ॥

ತಾತ್ಪರ್ಯ:—ಮೇಲಿನ ಪದ್ಯದಲ್ಲಿ ಹೇಳಿದ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬೀ ೫ ರೂಪಗಳು ಕಾರಣರೂಪಗಳೆನಿಸುವವು. ಘಟ ಸೃಷ್ಟಿಗೆ ಹೇಗೆ ಮೃತ್ತಿಕೆಯು ಕಾರಣವೋ ಹಾಗೆ ಜಗತ್ಸೃಷ್ಟಿಗೆ ಈ ರೂಪಗಳು ಕಾರಣವು. ನಾರಾಯಣಾದಿ ಒಂದೊಂದು ರೂಪದಲ್ಲೂ ನಾರಾಯಣಾದಿ ೫ ರೂಪಗಳಿದ್ದು ಕಾರ್ಯರೂಪವಾದ ಜಗತ್ತಿನಲ್ಲಿ ಕಾರ್ಯರೂಪಗಳಾಗಿರುವುವು. ಅಂತು ನಾರಾಯಣಾದಿ ೫ ಕಾರಣ ರೂಪಗಳು

ಒಂದೊಂದರೊಳಗೆ ೫-೫ರಂತೆ ಕಾರ್ಯರೂಪಗಳು ೨೫ ಹೀಗೆ ೩೦ ರೂಪಗಳಿಂದ ಪ್ರಪಂಚದಲ್ಲಿ ವ್ಯಾಪ್ತನಾಗಿ ಆನಂದಪಡುತ್ತಿರುವನು. ಆದರೂ ಈ ರೂಪಗಳಿಗೆ ಪರಸ್ಪರ ಭೇದವಿಲ್ಲದಿರುವನು. ಅಂದರೆ ಗುಣಭೇದವಿಲ್ಲವೆಂದರ್ಥ ರೂಪಭೇದಗಳೂ ನಾಮಭೇದಗಳು ಮಾತ್ರ ಉಂಟು. ಬಂಗಾರದಿಂದ ಅನೇಕ ತರಹಾ ಒಡವೆಗಳನ್ನು ಮಾಡಿಸಿದರೆ ಒಡವೆಗಳ ರೂಪಭೇದದಿಂದ ನಾಮಭೇದಗಳು ಮಾತ್ರ ಏರ್ಪಡುವುವೇ ಹೊರತು ಬಂಗಾರದಲ್ಲಿ ಹೇಗ ಭೇದವಿರುವುದಿಲ್ಲವೋ ಹಾಗೆಯೆ, ಮೂಲರೂಪ ಅಂಶರೂಪ ಮೊದಲಾದ ಕಾರಣ ಕಾರ್ಯ ರೂಪಗಳಿಗಾಗಲೀ ರಾಮ, ಕೃಷ್ಣ, ಮತ್ಸ್ಯ, ಕೂರ್ಮ ಮೊದಲಾದ ಅವತಾರ ರೂಪಗಳಲ್ಲಾಗಲೀ ರೂಪಭೇದದಿಂದ ನಾಮಭೇದ ಮಾತ್ರ ವಿರುವವೇ ಹೊರತು ಆನಂದಾದಿಗುಣಗಳಲ್ಲಿ ಪರಸ್ಪರ ಭೇದವಿಲ್ಲವೆಂದು ತಿಳಿಯಬೇಕು. ಸೃಷ್ಟ್ಯಾದಿಕರ್ತನು; ಆದಿಶಬ್ದದಿಂದ ಸಂರಕ್ಷಣ, ಸಂಹಾರ, ಮೊದಲಾದುವುಗಳನ್ನು ತೆಗೆದುಕೊಳ್ಳಬೇಕು. ಮುಕ್ತಿಯನ್ನು ಕೊಡುವವನು ಎಲ್ಲರನ್ನೂ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡು ಪ್ರಳಯಕಾಲದಲ್ಲೂ ಕೂಡ ಜೀವರನ್ನು ರಕ್ಷಿಸುವವನು.

**ಕಾರ್ಯಕಾರಣಕರ್ತೃಗಳೊಳು ಸ್ವ**
**ಭಾರ್ಯರಿಂದೊಡಗೂಡಿ ಕಪಿಲಾ**
**ಚಾರ್ಯಕ್ರೀಡಿಸುತಿಪ್ಪ, ತನ್ನೊಳು ತಾನೆ ಸ್ವೇಚ್ಛೆಯಲೀ ॥**
**ಪ್ರೇರ್ಯನಲ್ಲ ರಮಾಬ್ಜಭವಭವ**
**ರಾರ್ಯರಕ್ಷಿಸಿ ಶಿಕ್ಷಿಸುವನು ಸ್ವ**
**ವೀರ್ಯದಿಂದಲಿ ದಿವಿಜದಾನವ ತತಿಯದಿನದಿನದಿ ॥ ೩ ॥**

ಪದ್ಯಾರ್ಥ:-ಕಾರ್ಯಕಾರಣ ಕರ್ತೃಗಳೊಳು=ಕಾರ್ಯವಸ್ತುಗಳಲ್ಲೂ, ಕರ್ತೃಗಳಲ್ಲೂ, ಸ್ವಭಾರ್ಯರಿಂದೊಡಗೂಡಿ=ತನ್ನ ಹೆಂಡರಿಂದೊಡಗೂಡಿ, ಕಪಿಲಾಚಾರ್ಯ=" ಕಂ ಸುಖಂ ಪಿಬತೀತಿ ಕಪಿಃ ಲಾತೀತಿ ಲಃ ಲೋಕ ಗುರುತ್ವಾದಾಚಾರ್ಯಃ=ಸಚಾಸೌ ಕಪಿಲಾಚಾರ್ಯ" ಎಂಬವ್ಯುತ್ಪತ್ತಿಯಿಂದ ಸುಖವನ್ನು ಪಾನ ಮಾಡುವುದರಿಂದಲೂ, ಸರ್ವರನ್ನು ರಕ್ಷಿಸುವುದರಿಂದಲೂ, ಕಪಿಲನೆಂದು ಹೆಸರು. ಬ್ರಹ್ಮಾದಿಗಳಿಗೂ ಉಪದೇಷ್ಟನಾದುದರಿಂದ ಆಚಾರ್ಯನೆಂದು ಹೆಸರು. ಆದ್ದರಿಂದ ವಿಷ್ಣುಸಹಸ್ರನಾಮದಲ್ಲಿ " ಮಹರ್ಷಿಃ ಕಪಿಲಾಚಾರ್ಯ " ಎಂದು

ಹೇಳಿರುವರು. ಇಂತಹಾ ಪರಮಾತ್ಮನು ತನ್ನೊಳು ತಾನೇ, ಸ್ವೇಚ್ಛೆಯಲಿ= ತನ್ನಿಚ್ಛೆಯಿಂದಲೆ, ಕ್ರೀಡಿಸುತಿಪ್ಪ=ಲೀಲೆಮಾಡುತ್ತಿರುವನು. ತಾನು ಎಲ್ಲರಿ- ಗೂ ಪ್ರೇರಕನೇ ಹೊರತು,ಪ್ರೇರ್ಯನಲ್ಲ=ತಾನುಒಬ್ಬರಿಂದ ಪ್ರೇರ್ಯನಲ್ಲ,ಅಂದರೆ ತನಗೆ ಯಾರೂ ಪ್ರೇರಕರಿಲ್ಲ. ರಮಾಬ್ಜಭವ ಭವರ=ರಮಾ=ರಮಾದೇವಿಯರು ಅಬ್ಜಭವ=ಬ್ರಹ್ಮದೇವರು, ಭವರ=ರುದ್ರದೇವರು ಇವರಿಗೆ ಆರ್ಯ=ಹಿರಿಯ- ವನೆಂದೆನಿಸಿದ, ಶ್ರೀಹರಿಯು, ಸ್ವವೀರ್ಯದಿಂದಲಿ=ತನ್ನ ಸಾಮರ್ಥ್ಯದಿಂದಲೆ, ದಿವಿಜ=ದೇವತೆಗಳು ದಾನವ=ದೈತ್ಯರು ಇವರುಗಳ ತತಿಯ=ಸಮೂಹವನ್ನು, ದಿನದಿನದಿ=ಪ್ರತಿದಿವಸದಲ್ಲೂ ರಕ್ಷಿಸಿ ಶಿಕ್ಷಿಸುವನು, ದೇವಸಂಘವನ್ನು ರಕ್ಷಿಸು- ವನು; ದಾನವಸಂಘವನ್ನು ಶಿಕ್ಷಿಸುವನೆಂಬ ತಾತ್ಪರ್ಯ.

ತಾತ್ಪರ್ಯ:—ಕಾರ್ಯವಾದ ಒಂದೊಂದು ಪದಾರ್ಥಗಳಿಗೂ ಕಾರಣ ಕರ್ತೃಗಳು ಇದ್ದೇ ಇರುವವು. ಘಟವು ಕಾರ್ಯವು ಇದಕ್ಕೆ ಮೃತ್ತಿಕೆಯು ಕಾರಣ; ಅವಾಂತರಕಾರಣ ದಂಡ ಮೊದಲಾದವು; ಕರ್ತಾ ಕುಂಬಾರನು. ಮಕ್ಕಳಿಗೆ ರೇತಸ್ಸು ಕಾರಣ; ಸ್ತ್ರೀ ಅವಾಂತರಕಾರಣ; ಪುರುಷನು ಕರ್ತ; ಹೀಗೆ ಊಹಿಸಿಕೊಳ್ಳಬೇಕು. ಈ ಪ್ರಕಾರ ಕಾರ್ಯವಸ್ತು, ಕಾರಣವಸ್ತು, ಕರ್ತೃಗಳು ಇವುಗಳಲ್ಲಿದ್ದು ಸ್ವೇಚ್ಛೆಯಿಂದ ಶ್ರೀ ಹರಿಯು ರಮಿಸುವನು. ಬ್ರಹ್ಮಾದಿ ಸಕಲರಿಗೂ ಪ್ರೇರಕನು ತಾನೇ; ತನಗೆ ಪ್ರೇರಕರು ಮತ್ತಾ- ರೂ ಇಲ್ಲ. ಲಕ್ಷ್ಮೀ, ಬ್ರಹ್ಮಾ ವಾಯು, ರುದ್ರ ಮೊದಲಾದವರಿಗೆ ಸ್ವಾ- ಮಿಯೆನಿಸಿದ ಶ್ರೀ ಹರಿಯು ದೇವಸಂಘವನ್ನು ರಕ್ಷಿಸುತ್ತಾ ದೈತ್ಯಸಂ- ಘವನ್ನು ಶಿಕ್ಷಿಸುತ್ತಾ ಕ್ರೀಡಿಸುವನು. || ೩ ||

ಶ್ರೀ ಪರಮಾತ್ಮನು ಜಡಚೇತನಾತ್ಮಕ ಪ್ರಪಂಚದಲ್ಲಿ ಸರ್ವತ್ರ ವ್ಯಾಪ್ತನಾಗಿ ಸಕಲ ಕರ್ಮವನ್ನು ಮಾಡುತ್ತಾ ನಿರ್ಲಿಪ್ತನಾಗಿರುವನೆಂದು ಹೇಳುತ್ತಾರೆ:—

**ಈ ಸಮಸ್ತ ಜಗತ್ತಿನೊಳಗಾ-**
**ಕಾಶದೊಳಗಿರುತಿಪ್ಪ ವ್ಯಾಪ್ತಾ-**
**ವೇಶನವತಾರಾಂತರಾತ್ಮಕನಾಗಿ ಪರಮಾತ್ಮ ||**
**ನಾಶರಹಿತ ಜಗತ್ತಿನೊಳಗವ-**
**ಕಾಶದನು ತಾನಾಗಿ ಯೋಗೀ-**

**ಶಾಶಯಸ್ಥಿತ ತನ್ನೊಳಗೆಲ್ಲರನಿಟ್ಟು ಸಲಹುವನು ॥ ೪ ॥**

ಪದ್ಯಾರ್ಥ:— ಈ ಸಮಸ್ತ ಜಗತ್ತಿನೊಳಗೆ=ಈ ಸಕಲ ಪ್ರಪಂಚದೊಳಗಿರುವ ಬ್ರಹ್ಮದೇವರು ಮೊದಲು ತೃಣಜೀವರವರೆಗೂ ಇರುವ ಸರ್ವ ಚೇತನರಲ್ಲೂ, ಘಟಪಟಾದಿ ಸಕಲ ಜಡಗಳಲ್ಲೂ, ಆಕಾಶದೊಳು=ಅವಕಾಶವುಳ್ಳ ಎಲ್ಲಾ ಸ್ಥಳಗಳಲ್ಲೂ, (ಉಪಲಕ್ಷಣದಿಂದ ಜಡವಾದ ಉದಕ ಮೊದಲಾದವುಗಳನ್ನು ತೆಗೆದುಕೊಳ್ಳಬೇಕು.) ಹೀಗೆ ಸರ್ವ ಸ್ಥಳಗಳಲ್ಲೂ, ವ್ಯಾಪ್ತ=ವ್ಯಾಪ್ತರೂಪನಾಗಿಯೂ, ಆವೇಶನು=ಆವೇಶರೂಪನಾಗಿಯೂ, ಅವತಾರ=ಅವತಾರರೂಪನಾಗಿಯೂ, ಅಂತರಾತ್ಮಕನಾಗಿ=ಅಂತರ್ಯಾಮಿ ರೂಪನಾಗಿಯೂ, ನಾಶರಹಿತ=ಜೀವರಂತೆ ಸ್ಥೂಲದೇಹ ನಾಶವಾಗಲಿ, ಲಿಂಗಶರೀರ ನಾಶವಾಗಲಿ ಇಲ್ಲವೆಂದರ್ಥ. ಯೋಗೀಶಾಶಯಸ್ಥಿತ=ಯೋಗಿಗಳ ಹೃದಯಾಕಾಶನಿವಾಸಿಯಾದ ಶ್ರೀ ಪರಮಾತ್ಮನು, ಜಗತ್ತಿನೊಳಗೆ, ಅವಕಾಶದನು ತಾನಾಗಿ=ಸರ್ವಪ್ರಾಣಿಗಳಿಗೂ ವಾಸಮಾಡಲು ಅವಕಾಶ ಕೊಡುವವನು ತಾನಾಗಿ, ಎಲ್ಲರ=ಸಕಲಪ್ರಾಣಿಗಳನ್ನು, ತನ್ನೊಳಗಿಟ್ಟು ಸಲಹುವನು.

ತಾತ್ಪರ್ಯ:— ಉದಕ, ಆಕಾಶ, ಪರ್ವತ ಮೊದಲಾದ ಜಡಗಳಲ್ಲೂ ಬ್ರಹ್ಮದೇವರ ಮೊದಲು ತೃಣಜೀವರವರೆಗೂ ಎಲ್ಲಾ ಚೇತನರುಗಳಲ್ಲೂ ತದ್ರೂಪ ತದಾಕಾರನಾಗಿ ವ್ಯಾಪಿಸಿಕೊಂಡಿರುವ ರೂಪಕ್ಕೆ ವ್ಯಾಪ್ತರೂಪವೆಂದು ಹೆಸರು. ಬಲರಾಮ, ಪ್ರದ್ಯುಮ್ನ, ಸಾಂಬ ಮೊದಲಾದವರಲ್ಲಿ ಪ್ರವಿಷ್ಟವಾದ ಶ್ರೀ ಹರಿಯ ಭಿನ್ನಾಂಶಗಳಿಗೆ ಆವೇಶರೂಪವೆಂದು ಹೆಸರು. ರಾಮ ಕೃಷ್ಣಾದಿಗಳು ಅವತಾರ ರೂಪಗಳು. ಸರ್ವಪ್ರಾಣಿಗಳ ಅಂತರ್ಯಾಮಿರೂಪವು ಅಂತರಾತ್ಮಕವು. ಹೀಗೆ ೪ ಪ್ರಕಾರವಾಗಿ ಈ ಜಗತ್ತಿನಲ್ಲಿ ಸರ್ವತ್ರ ವ್ಯಾಪಿಸಿಕೊಂಡಿರುವನು. ಆದರೂ ಎಲ್ಲರ ಕಣ್ಣಿಗೆ ಗೋಚರನಾಗನು. ಕಣ್ಣಿಗೆಕಾಣದಮೇಲೆ ಇಲ್ಲವೆಂದೇಕೆ ಹೇಳಬಾರದೆಂದರೆ, ಯೋಗೀಶಾಶಯ ಸ್ಥಿತನೆಂದರು. ಯೋಗಿಗಳು ತಮ್ಮ ಹೃದಯಾಕಾಶದಲ್ಲಿ ಪರಮಾತ್ಮನನ್ನು ನೋಡುತ್ತಿರುವರು. ನಾವು ಕಾಣದ ಮಾತ್ರದಿಂದ ಪರಮಾತ್ಮನೇ ಇಲ್ಲವೆಂದು ಹೇಳಬಹುದೇ? ಇಂಡಿಯಾ ದೇಶದ ಚಕ್ರವರ್ತಿಯನ್ನು ನಾವು ನೋಡದಮಾತ್ರದಿಂದ ಚಕ್ರವರ್ತಿಯೇ ಇಲ್ಲವೆಂದು ಹೇಳಲಾದೀತೆ? ನೋಡಿದವರು ಬಹುಜನರಿರುವುದರಿಂದ ಹಾಗೆಹೇಳಲು ಆಗ್ರ-

ವುದಿಲ್ಲ. ಚಕ್ರವರ್ತಿಯನ್ನು ಕಾಣಬೇಕಾದರೆ ಅವನಿಗೆ ತಕ್ಕ ಪ್ರಾಪತ್ಯಗ-
ಳನ್ನು ಯಾವರೀತಿ ಮಾಡಬೇಕೋ ಆದರಂತೆ ಪರಮಾತ್ಮನನ್ನು ಕಾಣವು-
ದಕ್ಕೆ ಬೇಕಾದ ತಪಸ್ಸು ಮೊದಲಾದವುಗಳನ್ನು ಮಾಡಿ ಸಾಧಿಸಬೇಕೆಂದು
ತಾತ್ಪರ್ಯ. ನಾಶ ರಹಿತನೆಂದರೆ ಜೀವರಿಗೂ ನಾಶವಿಲ್ಲ. ಪರಮಾತ್ಮನಿಗೂ
ನಾಶವಿಲ್ಲ. ಪರಮಾತ್ಮನಲ್ಲಿ ವಿಶೇಷವೇನೆಂದರೆ, ಜೀವನಿಗೆ ನಾಶವಿಲ್ಲದಿದ್ದ-
ರೂ ಜೀವರಿಗೆ ಬರತಕ್ಕ ಸ್ಥೂಲ ಶರೀರಗಳಿಗೆ ನಾಶ ಉಂಟು. ಕಡೆಗೆ
ಲಿಂಗ ಶರೀರ ನಾಶವಾಗುವುದು. ಪರಮಾತ್ಮನಿಗೆ ಇಂತಹಾ ನಾಶವೂ ಇಲ್ಲ.
ಪರಮಾತ್ಮನ ಶರೀರಕ್ಕೂ ಪರಮಾತ್ಮನಿಗೂ ಭೇದವಿಲ್ಲ. ಜೀವರಿಗೂ ಜಡ
ದೇಹಗಳಿಗೂ ಭೇದ ಉಂಟು. ಆದ್ದರಿಂದ ಜೀವರಿಗೆ ದೇಹ ನಾಶ ಉಂಟು.
ಪರಮಾತ್ಮನಿಗಿಲ್ಲ. ಇಂತಹಾ ಶ್ರೀಪರಮಾತ್ಮನು ಎಲ್ಲರಿಗೂ ತನ್ನೊಳಗೆ
ವಾಸಮಾಡಲು ಅವಕಾಶ ಕೊಟ್ಟು ಒಳಗಿಟ್ಟುಕೊಂಡು ರಕ್ಷಿಸುವನು.

ಮೇಲೆ ಹೇಳಿದುದನ್ನೇ ವಿಶದ ಮಾಡುತ್ತಾರೆ:—

**ದಾರು ಪಾಷಾಣಗತ ಪಾವಕ**
**ಬೇರೆಬೇರಿಪ್ಪಂತೆ ಕಾರಣ**
**ಕಾರ್ಯಗಳ ಒಳಗಿದ್ದು ಕಾರಣಕಾರ್ಯನೆಂದೆನಿಸೀ ||**
**ತೋರಿಕೊಳ್ಳದೆ ಎಲ್ಲರೊಳು ವ್ಯಾ-**
**ಪಾರ ಮಾಡುವ ಯೋಗ್ಯತೆಗಳನು**
**ಸಾರ ಫಲಗಳನುಣಿಸಿ ಸಂತೈಸುವ ಕೃಪಾಸಾಂದ್ರಾ ||**

ಪದ್ಯಾರ್ಥ:—ದಾರು = ಕಟ್ಟಿಗೆಯೊಳಗೂ, ಪಾಷಾಣಗತ = ಕಲ್ಲುಗಳೊಳಗೂ ಇರುವ, ಪಾವಕ = ಅಗ್ನಿಯು, ಬೇರೆಬೇರಿಪ್ಪಂತೆ, ಪ್ರತ್ಯೇಕ ಪತ್ಯೇಕವಾಗಿರುವಂತೆ, ಕಾರಣ = ಕಾರಣವಸ್ತುಗಳು, ಕಾರ್ಯ-ಗಳ=ಕಾರ್ಯವಸ್ತುಗಳು, ಇವುಗಳ, ಒಳಗಿದ್ದು, ಕಾರಣ ಕಾರ್ಯನೆಂದೆನಿಸಿ= ತಾನೇಕಾರಣನೂ, ಕಾರ್ಯನೂ ಆಗಿ, ಆಯಾ ಹೆಸರಿನಿಂದ ಪ್ರಸಿದ್ಧನಾಗಿ, ತೋರಿಸಿಕೊಳ್ಳದೇ=ಯಾರಿಗೂ ಗೋಚರನಾಗದೆ, ಕೃಪಾಸಾಂದ್ರ=ದಯಾ-ಪೂರ್ಣನಾದ ಶ್ರೀಹರಿಯು, ಎಲ್ಲರೊಳು, ವ್ಯಾಪಾರಮಾಡುವ=ಸಕಲರಲ್ಲೂ ಇದ್ದು ಕರ್ಮಗಳನ್ನು ಮಾಡಿ ಮಾಡಿಸುವನು. ಯೋಗ್ಯತೆಗಳನುಸಾರ=ಅವ-ರವರಯೋಗ್ಯತಾನುಸಾರವಾಗಿ, ಫಲಗಳನ್ನುಣಿಸಿ, ಸಂತೈಸುವನು.

ತಾತ್ಪರ್ಯ:—ಕಾಷ್ಟದಲ್ಲೂ ಕಲ್ಲುಗಳಲ್ಲೂ ಸಹ ಅಗ್ನಿಯು ಇದ್ದೇ ಇರುವನು ಆದರೂ ಎಲ್ಲರಿಗೂ ಕಾಣುವುದಿಲ್ಲ. ಕಾಷ್ಟವನ್ನು ಮಥನ ಮಾಡಿದರೆ ಅಗ್ನಿಯು ಕಾಣುವುದು. ಕಲ್ಲಿನಿಂದ ಕಲ್ಲನ್ನು ಹೊಡೆದರೆ ಬೆಂಕಿ ಬೀಳುವುದು. ಇವುಗಳಲ್ಲಿ ಕಟ್ಟಿಗೆಯು ಕಾರಣವು, ಅಗ್ನಿಯು ಕಾರ್ಯವೂ ಆಗಿರುವುವು. ಇದರಂತೆ ಕಲ್ಲು ಕಾರಣ, ಕಾರ್ಯವು ಅಗ್ನಿ. ಅಗ್ನಿಗಳಿಗೆ ಪರಸ್ಪರ ಬೇಧವಿಲ್ಲ. ಕಾರಣ ವಸ್ತು ಬೇರೆ, ಕಾರ್ಯವಸ್ತು ಬೇರೆಯಾಗಿ ಕಾಣುವುದು. ಕಾಷ್ಟದಲ್ಲಿರುವಗ್ನಿಯು ಕಾಷ್ಟಕ್ಕೆ ಸಂಬಂಧವಿಲ್ಲದೆ ಹೇಗೆ ನಿರ್ಲಿಪ್ತವಾಗಿರುವದೋ ಹಾಗೆ ಪರಮಾತ್ಮನು ಕಾರ್ಯಕಾರಣ ವಸ್ತುಗಳಲ್ಲಿ ನಿರ್ಲಿಪ್ತನಾಗಿರುವನು. ಕಾಷ್ಟದಲ್ಲಿರುವಗ್ನಿಯನ್ನು ಯಾರೂ ಕಾಣುವಂತಿಲ್ಲ. ಮಥನ ಮಾಡಿದರೆ ಗೋಚರಿಸುವದು. ಅದರಂತೆ ಪರಮಾತ್ಮನನ್ನು ಎಲ್ಲರೂ ಕಾಣುವಂತಿಲ್ಲ. ಯೋಗಿಗಳು ಯೋಗರೂಢರಾಗಿ ಹೃದಯಾಕಾಶದಲ್ಲಿ ಕಾಣುವರು. ಈ ಪ್ರಕಾರ ಪ್ರತಿಯೊಂದು ಕಾರಣ ವಸ್ತುವಿನಲ್ಲಿಯೂ ಕಾರ್ಯವಸ್ತುವಿನಲ್ಲಿಯೂ ಸಹ ತದಾಕಾರನಾಗಿ, ತಚ್ಛಬ್ದ ವಾಚ್ಯನಾಗಿದ್ದು ಅವರವರ ಕರ್ಮಗಳನ್ನು ತಾನು ಮಾಡಿ ಅವರಿಂದಲೂ ಮಾಡಿಸುವನು. ಮತ್ತೂ ಆ ಸಂಬಂಧವಾದ ಫಲಗಳನ್ನು ಅವರವರ ಯೋಗ್ಯತಾನುಸಾರ ಅವರಿಗುಣಿಸುವನು. ಆದ್ದರಿಂದಲೇ ಕೃಪಾಸಾಂದ್ರನೆಂದರು. ಜೀವರುದ್ಧಾರಕ್ಕೋಸ್ಕರವೇ ಕರ್ಮಗಳನ್ನು ತಾನು ಮಾಡಿ ಫಲವನ್ನು ಜೀವರಿಗೆ ಉಣಿಸುವುದರಿಂದ ಕರುಣಾ ಪೂರ್ಣನೆಂದು ಹೇಳಿದರು.

ಊರ್ಮಿಗಳವೋಲಿಪ್ಪ ಕರ್ಮಾ
ಕರ್ಮ ಜನ್ಯ ಫಲಾ ಫಲಂಗಳ
ನಿರ್ಮಲಾತ್ಮನು ಮಾಡಿ ಮಾಡಿಸಿ ಉಂಡುಣಿಸುತಿಪ್ಪ ||
ನಿರ್ಮಮ ನಿರಾಮಯ ನಿರಾಶ್ರಯ
ಧರ್ಮವಿದ್ಧರ್ಮಾತ್ಮ ಧರ್ಮಗ
ದುರ್ಮತಿ ಜನರೊಲ್ಲನಪ್ರತಿಮಲ್ಲ ಶ್ರೀನಲ್ಲಾ ||೬||

ಪದ್ಯಾರ್ಥ:—ಊರ್ಮಿಗಳವೋಲಿಪ್ಪ – ಸಮುದ್ರದ ಅಲೆಗಳಂತೆ ಒಂದರ ಹಿಂದೆ ಒಂದಾಗಿ ಬರುತ್ತಿರುವ, ಕರ್ಮ = ಮಾಡಬೇಕಾದ ಕರ್ಮಗಳನ್ನು ಮಾಡುವುದು; ಅಕರ್ಮ–ಮಾಡಬೇಕಾದ ಕರ್ಮಗಳನ್ನು ಬಿಡುವದು

ಏನು ಮಾಡುವೆಯೆಂದು ಕೇಳಿದನು. ಆಗ ಅರ್ಜುನನು ಹೇಳಿದುದೇನೆಂದರೆ, ಮ||ಭಾ||ತಾತ್ಪರ್ಯ ನಿರ್ಣಯ ೨೭ನೆಯ ಅಧ್ಯಾಯದಲ್ಲಿ “ತಮಾಹ ಗಾಂಡಿವಂದಾತುಂಯೋವದೇತ್ತದ್ವಧೊ ಮಯಾ । ಪ್ರತಿಜ್ಞಾ ತಸ್ತತೋಹನ್ಮಿ ನೃಪ ಪಿತ್ಯಾಹತಂ ಹರಿಃ ॥ ಸತ್ಯಸ್ಯ ವಚನಂ ಶ್ರೇಯಃ ಸತ್ಯ ಜ್ಞಾನಂತು ದುಷ್ಕರಂ ॥ ಯತ್ಸತಾಂ ಹಿತಮತ್ಯಂತಂ ತತ್ಸತ್ಯ ಮಿತಿ ನಿಶ್ಚಯಃ ॥ ಧರ್ಮಸ್ಯಾಚರಣಂ ಶ್ರೇಯೋ ಧರ್ಮ ಜ್ಞಾನಂತು ದುಷ್ಕರಂ ॥ ಯಃ ಸತಾಂ ಧಾರಕೋ ನಿತ್ಯಂ ಸಧರ್ಮ ಇತಿ ನಿಶ್ಚಯಃ ॥ ಕೌಶಿಕಾಖ್ಯೋ ಬ್ರಹ್ಮಣೋಹಿ ಲೀನಂ ಗ್ರಾಮ ಜನಂ ಕ್ವಚಿತ್ ॥ ತಸ್ಕರೇಷ್ವಭಿಧಾಯೈವ ನಿರಯಂ ಪ್ರತ್ಯ ಪದ್ಯತ ॥ ಕಶ್ಚಿದ್ವ್ಯಾಧೋ ಮೃಗಂ ಹತ್ವಾ ಮಾತಾ ಪಿತೃನಿಮಿತ್ತತಃ ॥ ಭಕ್ಷಾರ್ಥಮಭ್ಯಗಾತ್ಸ್ವರ್ಗ ಮಸುರೋಸೌ ಮೃಗೋಯತಃ ॥ ಉಪ ಪ್ರಮಾಯ ಲೋಕಸ್ಯ ತಪಶ್ಚ ರತಿ ದುರ್ಮತಿಃ ॥ ತಸ್ಮಾತ್ಸದ್ಧಾರಕೋ ಧರ್ಮಃ ಇತಿ ಕೃತ್ವಾಪಿ ನಿಶ್ಚಯಂ ॥ ಮಾ ನೃಪಂಜಹಿ ಸತ್ಯಾಂಸ್ತ್ವಂ ಕುರುವಾಚಾ ತಿರಸ್ಕುರು ॥ ಇತ್ಯುಕ್ತೋ ಬಹುಧಾನಿಂದತ್ ಕ್ರೋಧಾದೇವಾರ್ಜುನೋ ನೃಪಂ ॥೧೨೬॥೧೨೭॥೧೨೮॥ ಇತ್ಯುಕ್ತ್ವಾ ಚಾತ್ಮನಾಶಾಯ ವಿಕೋಶಂ ಕೃತವಾನಸಿಂ ॥ ಪುನಃ ಕೃಷ್ಣೇನ ಪೃಷ್ಟಸ್ಸ ಸ್ವಾಭಿಪ್ರಾಯಮುವಾಚಹ ॥೧೨೯॥ ತಚ್ಛ್ರುತ್ವಾಗರ್ಹಯಿತ್ವೇನಂ ಪುನರಾಹ ಜನಾರ್ದನಃ ॥ ಮತಿ ಪೂರ್ವಂ ದೇಹ ನಾಶಾತ್ಪಾಪಂ ಮಹದವಾಪ್ಯತೆ ॥ ಅತೋಮಾತ್ಯಜ ದೇಹಂತು ಕುರುಜಾತ್ಮ ಪ್ರಶಂಸನಂ ॥೧೩೦॥ ॥೧೩೧॥ ವಧೋಗುರೂಣಾಂ ತ್ವಂಕಾರಃ ಸ್ವಪ್ರಶಂಸೈವಚಾತ್ಮನಃ ॥ ಇತ್ಯುಕ್ತಸತ್ವಹಂಕಾರಾಚ್ಛಶಂ ಸಸ್ವಗುಣಾನಲಂ ॥೧೩೨॥ ಗುರುನಿಂದಾತ್ಮ ಪೂಜಾಚಥಮಾರ್ಯಯನಭವೇತ್ ಕ್ವಚಿತ್ ॥ ತಥಾಪ್ಯರ್ಜುನಹಾರ್ದಂ ತತ್ಸಂ ಪ್ರಕಾಶ್ಯ ಜನಾರ್ದನಃ ॥ ತಸ್ಯಲಜ್ಜಾಂಸಮುತ್ಪಾದ್ಯ ನಾಶಯಿತ್ವಾಚತಂ ಮದಂ ॥ ನಾಹಂವೇದ ಪರಂಧರ್ಮಂ ಕೃಷ್ಣಏವ ಗತಿರ್ಮಮ ॥ ಇತಿ ಭಾವಂಸಮುತ್ಪಾದ್ಯದೋಷಾನ್ನಾಶಯಿತುಂ ಹರಿಃ ॥ ಕಾಲಯಾಮಾ ಸತತ್ಸರ್ವಮರ್ಜುನೇನಜಗತ್ಪತಿಃ ॥೧೩೪॥ ” ಅರ್ಜುನನು ಶ್ರೀಕೃಷ್ಣನನ್ನು ಕುರಿತಿಂತೆಂದನು:—

ಕೃಷ್ಣ ! ಗಾಂಡೀವವನ್ನು ಮತ್ತೊಬ್ಬರಿಗೆ ಕೊಡೆಂದು ಯಾವನು ಹೇಳುವನೋ ಅವನನ್ನು ಕೊಲ್ಲುವೆನೆಂದು ನಾನು ಪೂರ್ವದಲ್ಲಿ ಪ್ರತಿಜ್ಞೆ

ಮಾಡಿದ್ದೇನು; ಅದನ್ನು ಸತ್ಯಮಾಡುವುದಕ್ಕಾಗಿ ಧರ್ಮರಾಜನನ್ನು ಕೊಲ್ಲ ವೆನೆಂದನು.

ಕೃಷ್ಣ:— ಎಲೈ ಪಾರ್ಥ! ಸತ್ಯವನ್ನು ಪಾಲಿಸುವುದೇನೋ ಉತ್ತಮವಾದುದೆ! ಆದರೆ; ಸತ್ಯವೆಂದರೇನು? ಅದನ್ನು ಬಲ್ಲೆಯಾ? ಸತ್ಯದ ಅರ್ಥಜ್ಞಾನವನ್ನು ಮಾತ್ರ ತಿಳಿಯುವುದು ಕಷ್ಟ. ಕಂಡದ್ದು ಕಂಡಹಾಗೆ ಹೇಳುವುದು ಸತ್ಯವಲ್ಲ. ಯಾವುದನ್ನು ಮಾಡುವುದರಿಂದ ಸಜ್ಜನರಿಗೆ ಹಿತವಾಗುವುದೋ ಅದನ್ನು ಮಾಡುವುದು, ಅಥವಾ ಹೇಳುವುದು ಸತ್ಯವು. ಇದರಂತೆ ಧರ್ಮವನ್ನು ಆಚರಿಸುವುದು ಪುಣ್ಯಸಾಧನವು; ಧರ್ಮದ ಅರ್ಥಜ್ಞಾನವು ಮಾತ್ರ ಆಗುವುದು ಕಷ್ಟ. ಕೇಳು! ಹಿಂದಕ್ಕೆ ಕೌಶಿಕನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಸತ್ಯವಾದಿಯೆಂದು ಲೋಕಪ್ರಸಿದ್ಧಿಯಾಗಿದ್ದನು, ಹೀಗಿರಲು ಒಂದು ದಿವಸ ಮಾರ್ಗದಲ್ಲಿ ಬರುತ್ತಿದ್ದ ಕೆಲವು ಬ್ರಾಹ್ಮಣರು ತಮ್ಮನ್ನು ಅಟ್ಟಿಕೊಂಡು ಬರುತ್ತಿದ್ದ ಕಳ್ಳರಿಗೆ ಹೆದರಿ ಈ ಬ್ರಾಹ್ಮಣನ ಆಶ್ರಮವನ್ನು ಹೊಕ್ಕು ಮರೆಯಾದರು. ಹಿಂದೆಯೇ ಕಳ್ಳರು ಬಂದು ಸತ್ಯವಾದಿ ಬ್ರಾಹ್ಮಣನನ್ನು ಇಲ್ಲಿಗೆ ಬಂದ ಬ್ರಾಹ್ಮಣರು ಎಲ್ಲಿದ್ದಾರೆಂದು ಕೇಳಲು ಸತ್ಯವಾದಿಯು, ಆ ಕಳ್ಳರಿಗೆ ಬ್ರಾಹ್ಮಣರು ಇರುವ ಸ್ಥಳವನ್ನು ತೋರಿಸಿಬಿಟ್ಟನು. ಕಳ್ಳರು ಬ್ರಾಹ್ಮಣರನ್ನು ಹೊಡೆದು ಅವರ ದ್ರವ್ಯವನ್ನು ಅಪಹರಿಸಿದರು. ಆ ಬ್ರಹ್ಮಹತ್ಯೆಯು ಸತ್ಯವಾದಿ ಬ್ರಾಹ್ಮಣನಿಗೆ ಬಂದಿತು. ಅದರಿಂದ ಆತನು ಘೋರವಾದ ನರಕವನ್ನನುಭವಿಸಿದನು. (೨) ಒಬ್ಬ ಬೇಡನು ತಂದೆ ತಾಯಿಗಳಿಗೆ ಆಹಾರಕ್ಕೋಸ್ಕರವಾಗಿ ಒಂದು ಮೃಗವನ್ನು ಕೊಂದನು. ಆ ಮೃಗವು ನಿಜವಾಗಿಯೂ ಒಬ್ಬ ಅಸುರನು. ಲೋಕಹಿಂಸೆಗಾಗಿ ತಪಸ್ಸು ಮಾಡುತ್ತಿದ್ದನು. ಅವನನ್ನು ಕೊಂದ ಪ್ರಯುಕ್ತ ಇವನಿಗೆ ಸ್ವರ್ಗವು ಪ್ರಾಪ್ತವಾಯಿತು. ಆದ್ದರಿಂದ ಸಜ್ಜನರನ್ನು ಉದ್ಧರಿಸುವುದೇ ಧರ್ಮವು. ಹೀಗೆ ನಿಶ್ಚಯಿಸಿ, ಅಣ್ಣನನ್ನು ಕೊಲ್ಲುವ ಉದ್ಯೋಗವನ್ನು ಬಿಟ್ಟು ರಾಜನನ್ನು ನಿಂದನೆಮಾಡಿಬಿಡು! ದೊಡ್ಡವರನ್ನು ನಿಂದನೆ ಮಾಡಿದರೆ ಅವರ ವಧೆ ಮಾಡಿದ ಹಾಗಾಗುವುದು. ಅದರಿಂದಲೆ ಸತ್ಯಪ್ರತಿಜ್ಞೆ ಉಳಿದಂತಾಗುವದೆ ಅಂದನು.

ಅರ್ಜುನನು ಈ ಮಾತನ್ನು ಕೇಳಿ ಧರ್ಮರಾಜನನ್ನು ನೀನು ನಿಂದ್ಯವಾದ ದ್ಯೂತ ಮೊದಲಾದ ಕಾರ್ಯವನ್ನು ಮಾಡಿದವನು! ಕೃತಘ್ನನು!

ಕೈಲಾಗದವನು! ಪರರನ್ನು ದೂಷಿಸುತ್ತಿರುವೆ; ಯುದ್ಧದಲ್ಲಿ ಭಯಪಟ್ಟು ಓಡಿ ಬಂದಿರುವೆ! ನನ್ನನ್ನು ದೂಷಿಸಲು ನೀನು ಯೋಗ್ಯನಲ್ಲ, ಎಂಬಿವೇ ಮೊದಲಾದ ಮಾತಿನಿಂದ ಮನಬಂದಂತೆ ನಿಂದಿಸಿ. ಮತ್ತೂ ಕತ್ತಿಯನ್ನು ತೆಗೆದುಕೊಂಡನು.

ಕೃಷ್ಣ:—ಮತ್ತೇನು ಮಾಡುವೆ?

ಅರ್ಜುನ:—ಕೃಷ್ಣ! ಅಣ್ಣನನ್ನು ನಾನು ದೂಷಿಸಿ ಸಂಹಾರಮಾಡಿದ ಪಾಪಕ್ಕೆ ಒಳಗಾದೆನು; ಅದಕ್ಕಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವೆನು.

ಕೃಷ್ಣ:—ಹುಚ್ಚನಂತೆ ಕಾರ್ಯಮಾಡುವೆ! ಮನಃಪೂರ್ವಕವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡರೆ ಮಹಾಪಾಪದ ಫಲವನ್ನು ಅನುಭವಿಸಬೇಕು. ಆದ್ದರಿಂದ ದೇಹವನ್ನು ಬಿಡುವ ಉದ್ಯೋಗವನ್ನು ಬಿಡು! ನಿನ್ನನ್ನು ನೀನೇ ಶ್ಲಾಘನೆ ಮಾಡಿಕೊ! ಅದರಿಂದ ಆತ್ಮಹತ್ಯೆಯನ್ನು ಮಾಡಿಕೊಂಡಂತಾಗುವುದು. ಗುರುಗಳನ್ನು ನೀನು ಎಂದು ಏಕವಚನವಾಗಿ ದೂಷಿಸಿ ಮಾತನಾಡುವುದು ಕೊಂದಂತಾಗುವುದು. ತನ್ನನ್ನು ತಾನೇ ಶ್ಲಾಘನೆಮಾಡಿಕೊಳ್ಳುವುದು ತನ್ನ ವಧೆಮಾಡಿಕೊಂಡಂತಾಗುವುದು ಎಂದು ಕೃಷ್ಣನು ಹೇಳಿದುದನ್ನು ಕೇಳಿ ಅರ್ಜುನನು ಅಹಂಕಾರದಿಂದ ತಾನೇ ತನ್ನನ್ನು ಹೊಗಳಿಕೊಂಡನು. ಯದ್ಯಪಿ ಗುರುನಿಂದೆಯೂ ಆತ್ಮಶ್ಲಾಘನೆಯೂ ಒಳ್ಳೆಯದಲ್ಲ, ಆದರೂ ಅರ್ಜುನನ ಮನಸ್ಸಿನಲ್ಲಿ ಅಹಂಕಾರವಿದ್ದಿತ್ತು. ಅದನ್ನು ಕೃಷ್ಣನು ಹೊರಗೆ ಹಾಕಿಸಿ, ಅವನಿಗೆ ನಾಚಿಕೆಯನ್ನು ಉಂಟುಮಾಡಿಸಿ ಅವನ ಅಹಂಕಾರವನ್ನು ಮುರಿದನು. ಇದರಿಂದ ಅರ್ಜುನನಿಗೆ ನನಗೆ ಯಾವ ಧರ್ಮವೂ ತಿಳಿಯದು; ಕೃಷ್ಣನೇ ನನಗೆ ಗತಿ! ಅವನು ಹೇಳಿದಂತೆ ಕೇಳುವುದೇ ನಮಗೆ ಧರ್ಮವೆಂಬ ಜ್ಞಾನವು ಹುಟ್ಟಿತು. ಇಂತಹ ಜ್ಞಾನವನ್ನು ಅರ್ಜುನನಿಗೆ ಹುಟ್ಟಿಸಿ ಅವನ ದೋಷವನ್ನು ಪರಿಹರಿಸುವುದಕ್ಕಾಗಿ ಕೃಷ್ಣನು ಅರ್ಜುನನಿಂದ ಈ ಕೆಲಸಗಳನ್ನು ಮಾಡಿಸಿದನು, ಎಂದು ಕಥೆಯನ್ನು ಹೇಳಿರುವನು. ಇಂತಹ ಸೂಕ್ಷ್ಮಧರ್ಮಗಳನ್ನು ತಿಳಿದವನು ಪರಮಾತ್ಮನೇ ಹೊರತು ಮತ್ತಾರೂ ಇಲ್ಲ. ಆದ್ದರಿಂದ ಧರ್ಮವಿತ್ ಎಂದರು. ಮತ್ತು ಸ್ವಯಂ ಧರ್ಮಸ್ವರೂಪನು, ಧರ್ಮಾತ್ಮರಿಂದ ಲಭ್ಯನು, ಎದುರಿಲ್ಲದವನು. ಲಕ್ಷ್ಮೀಪತಿಯು, ಮಿಥ್ಯಾಜ್ಞಾನ ಅನ್ಯಥಾಜ್ಞಾನ ಯಾರಲ್ಲಿ ಇರುತ್ತದೋ ಅವರು ದುರ್ಮತಿಗಳು. (ಈ ವಿಷಯದಲ್ಲಿ ಭಾಗವತ ತಾತ್ಪರ್ಯ ವಾಕ್ಯಗಳು ಹಿಂದಿನ ಸಂಧಿ

ಗಳಲ್ಲಿ ಅಲ್ಲಲ್ಲಿ ಉದಾಹರಿಸಲ್ಪಟ್ಟಿವೆ. ಮತ್ತೂ ಇಲ್ಲಿ ಪ್ರಮಾಣ ಬರೆಯುವ ಆವಶ್ಯಕವಿಲ್ಲವೆಂದು ಬಿಟ್ಟಿರುತ್ತೇ. ಇಂತಹ ದುರ್ಮತಿಗಳು ಮಾಡಿದ ಪೂಜಾದಿಗಳನ್ನು ಸ್ವೀಕರಿಸುವುದಿಲ್ಲ. ॥ ೬ ॥

ಮೇಲಿನ ಪದ್ಯದಲ್ಲಿ ಕರ್ಮಾಕರ್ಮ ಜನ್ಯವಾದ ಫಲಾಫಲಗಳನ್ನು ಉಂಡುಣಿಸುವನೆಂದು ಹೇಳಿದುದರಿಂದ ಪರಮಾತ್ಮನು, ದುಃಖವನ್ನೂ ಸಹ ಅನುಭವಿಸುವನೆಂದು ಕಾಣುತ್ತದೆ; ಆ ಸಂಶಯವನ್ನು ಸದೃಷ್ಟಾಂತವಾಗಿ ಪರಿಹರಿಸಿರುತ್ತಾರೆ:—

**ಜಲದ ಬಡವಾನಲಗಳಂಬುಧಿ**
**ಜಲವನುಂಬುವವಬ್ದ ಮುಳಿಗರೆ-**
**ದಿಳೆಗೆ ಶಾಂತಿಯನೀವುದನಲನು ತಾನೆ ಭುಂಜಿಪುದು ॥**
**ತಿಳಿವುದೀ ಪರಿಯಲ್ಲಿ ಲಕ್ಷ್ಮೀ**
**ನಿಲಯ ಗುಣಕೃತ ಕರ್ಮಜ ಫಲಾ-**
**ಫಲಗಳುಂಡುಣಿಸುವನು ಸರ್ವಗ ಸರ್ವ ಜೀವರಿಗೆ ॥ ೭ ॥**

ಪದ್ಯಾರ್ಥ:—ಜಲದ ಬಡವಾನಲಗಳು=ಜಲದ-ಮೇಘವು, ಬಡವಾನಲಗಳು-ಬಡಬಾಗ್ನಿ, ಇವೆರಡು, ಅಂಬುಧಿ ಜಲವನು=ಸಮುದ್ರೋದಕವನ್ನು, ಉಂಬುವವು=ಪಾನಮಾಡುವುವು; ಅಬ್ದ ಮೇಘವು, ಮುಳಿಗರೆದು ಇಳೆಗೆ=ಭೂಮಿಗೆ, ಶಾಂತಿಯನೀವುದು=ತಂಪು ಮಾಡುವುದು, ಅನಲನು=ಅಗ್ನಿಯು, ತಾನೆ ಭುಂಜಿಪುದು= ತಾನು ಪಾನಮಾಡಿದ ನೀರನ್ನು ತಾನೇ ಸುಟ್ಟು ಬಿಡುವುದು. ಈ ಪರಿಯಲ್ಲಿ—ಈ ರೀತಿಯಾಗಿ, ತಿಳಿವುದು, ಲಕ್ಷ್ಮೀನಿಲಯು=ಲಕ್ಷ್ಮೀದೇವಿಯರಿಗೆ ಮನೆಯಂತಿರುವ, ಸರ್ವಗ-ಸರ್ವತ್ರ ವ್ಯಾಪ್ತನಾದ ಶ್ರೀ ಪರಮಾತ್ಮನು, ಗುಣಕೃತ=ಸತ್ವ ರಜಸ್ತಮೋಗುಣಗಳ ಸಂಬಂಧದಿಂದ ಮಾಡಲ್ಪಟ್ಟ, ಕರ್ಮಜ=ಕರ್ಮಗಳಿಂದ ಜನ್ಯವಾದ, ಫಲಾಫಲಗಳ=ಸುಖದುಃಖಗಳನ್ನು, ಸರ್ವ ಜೀವರಿಗೆ, ಉಂಡುಣಿಸುವನು=ತಾನುಂಡು ಅವರಿಗೂ ಉಣಿಸುವನು.

ತಾತ್ಪರ್ಯ:—ಸಮುದ್ರದಲ್ಲಿರುವ ಉದಕವನ್ನು, ಮೇಘ ಮತ್ತು ಬಡಬಾಗ್ನಿ ಇವೆರಡು ಪಾನಮಾಡುವವು. ಅವರಲ್ಲಿ ಮೇಘವು ತಾನು ಪಾನ ಮಾಡಿದ ಉದಕವನ್ನು ಮುಳಿಗರೆದು ಭೂಮಿಗೆ ತಂಪುಮಾಡಿ ಜನರನ್ನು ಆನಂದಪಡಿಸುವುದು. ಬಡಬಾಗ್ನಿಯು ತಾನು ಪಾನಮಾಡಿದ ಉದಕವನ್ನು

ತಾನೇ ಜೀರ್ಣಿಸಿಕೊಳ್ಳುವುದು. ಅಂದರೆ ಆ ನೀರನ್ನು ಸುಟ್ಟುಬಿಡುವುದು. ಹೀಗೆ ಬಡಬಾಗ್ನಿಯಲ್ಲಿಯೂ, ಮೇಘದಲ್ಲಿಯೂ ಇರುವ ಪ್ರತ್ಯೇಕ ಪ್ರತ್ಯೇಕ ವಾದ ಎರಡು ಗುಣಗಳು ಪರಮಾತ್ಮನೊಬ್ಬನಲ್ಲೇ ಇರುವವೆಂದು ಎರಡು ಉಪಮಾನಗಳನ್ನು ಕೊಟ್ಟಿರುವರು. ಜೀವರು ಮಾಡುವ ಕರ್ಮಜನ್ಯವಾದ ಶುಭಫಲವನ್ನು ಪರಮಾತ್ಮನು ಸ್ವೀಕರಿಸಿ, ಸಮುದ್ರೋದಕವನ್ನು ಪಾನ ಮಾಡಿದ ಮೇಘವು ಮಳೆಗರೆದು ದಿವ್ಯವಾದ ಉದಕದಿಂದ ಜನರನ್ನು ತೃಪ್ತಿ ಪಡಿಸುವಂತೆ ಜೀವರಿಗೆ ಇಮ್ಮಡಿಯಾದ ಸುಖವನ್ನು ಕೊಟ್ಟುದ್ಧರಿಸುವನು. ಬಡಬಾಗ್ನಿಯು ತಾನು ಪಾನಮಾಡಿದ ಉದಕವನ್ನು ಸುಟ್ಟುಬಿಡುವಂತೆ ಪರ ಮಾತ್ಮನು ತಾನು ಸ್ವೀಕರಿಸಿದ ಪಾಪಫಲವನ್ನು ಸುಟ್ಟುಬಿಡುವನು. ಪಾಪಿ ಗಳಲ್ಲಿರುವ ಪಾಪ ಕರ್ಮಗಳನ್ನು ಅಲ್ಲೇ ಬಿಟ್ಟು ಪುಣ್ಯವನ್ನು ಮಾತ್ರ ಸ್ವೀಕ ರಿಸಿ, ಸಜ್ಜನರಿಗೆ ಆ ಪುಣ್ಯವನ್ನು ಹಂಚುವನು. ಈ ವಿಷಯದಲ್ಲಿಯೂ ಮೇಘದ ಉಪಮಾನವನ್ನು ತೆಗೆದುಕೊಳ್ಳಬೇಕು. ಮೇಘವು ಸಮುದ್ರದಲ್ಲಿ ರುವ ಎಲ್ಲಾ ಉದಕವನ್ನೂ ಸ್ವೀಕರಿಸುವುದಿಲ್ಲ. ಸಮುದ್ರದ ಯೋಗ್ಯತೆ ಮೀರಿ ಬರುವ ಉದಕವನ್ನು ಪಾನಮಾಡುವುದು. ಪರಮಾತ್ಮನು ಹಾಗೆ ದೈತ್ಯರಲ್ಲಿ ಪಾಪವನ್ನು ಬಿಟ್ಟು ಅವರಿಗೆ ಮೀರಿದ ಪುಣ್ಯವನ್ನು ಗ್ರಹಿಸಿ, ಮೇ ಘವು ಮಳೆಗರೆದು ಜನರಿಗೆ ಸುಖಕೊಡುವಂತೆ ಸಜ್ಜನರಿಗೆ ಆ ಪುಣ್ಯವನ್ನು ಕೊಡುವನೆಂಬ ತಾತ್ಪರ್ಯ. ॥ ೭ ॥

ಇಂತಹ ಅನುಸಂಧಾನವಿಲ್ಲದವರು ಏನೇನು ಸಾಧನಗಳನ್ನು ಮಾಡಿ ದರೂ ನಿಷ್ಫಲವೆಂದು ಹೇಳುತ್ತಾರೆ:—

**ಪುಸ್ತಕಗಳವಲೋಕಿಸುತ ಮಂ-**
**ತ್ರಸ್ತುತಿಗಳಿನಲೇನು ರವಿ ಉದ-**
**ಯಸ್ತಮಯ ಪರಿಯಂತ ಜಪಗಳ ಮಾಡಿ ಫಲವೇನು ॥**
**ಹೃತ್ಸ್ಥ ಪರಮಾತ್ಮನೆ ಸಮಸ್ತಾ-**
**ವಸ್ಥೆಗಳೊಳಿದ್ದೆಲ್ಲರೊಳಗೆ ನಿ-**
**ರಸ್ತಕಾಮನು ಮಾಡಿ ಮಾಡಿಪನೆಂದು ಸ್ಮರಿಸದವ ॥ ೮ ॥**

ಪದ್ಯಾರ್ಥ:—ನಿರಸ್ತಕಾಮನು = ತ್ಯಜಿಸಲ್ಪಟ್ಟ ಫಲಾಪೇಕ್ಷೆಯುಳ್ಳ, (ಫಲಾಪೇಕ್ಷೆ ಇಲ್ಲದ) ಹೃತ್ಸ್ಥ=ಎಲ್ಲರ ಹೃದಯಾಕಾಶವಾಸಿಯಾದ, ಪರಮಾ

ತ್ಮನೇ, ಎಲ್ಲರೊಳಗೆ=ಎಲ್ಲಾ ಪ್ರಾಣಿಗಳೊಳಗೂ, ಸಮಸ್ತಾವಸ್ಥೆಗಳೊಳು= ಜಾಗ್ರತ್, ಸ್ವಪ್ನ, ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲೂ ಇದ್ದು, ಮಾಡಿ ಮಾಡಿದನೆಂದು=ಸಕಲ ಕರ್ಮಗಳನ್ನು ತಾನು ಮಾಡಿ ಪ್ರಾಣಿಗಳಿಂದ ಮಾಡಿ ಸುವನೆಂದು, ಸ್ಮರಿಸದವ=ಸ್ಮರಣೆ ಮಾಡದಿರುವ ಪುರುಷನು, ಪುಸ್ತಕಗಳ, ಅವಲೋಕಿಸುತ=ನೋಡುತ್ತ ಮಂತ್ರ ಸ್ತುತಿಗಳನು, ಎನಲು=ಬಾಯಿಂದ ಉಚ್ಚರಿಸುತ್ತಲು, ಏನು=ಫಲವೇನು! ರವಿಉದಯ=ಸೂರ್ಯೋದಯ ಮೊದಲು, ಅಸ್ತಮಯ ಪರ್ಯಂತ, ಜಪಗಳ ಮಾಡಿ ಫಲವೇನು! ನಿಷ್ಫಲ ವೆಂದರ್ಥ.

ತಾತ್ಪರ್ಯ: — ಫಲಾಪೇಕ್ಷೆ ಇಲ್ಲದೆ ಎಲ್ಲರ ಹೃದಯಾಕಾಶದಲ್ಲೂ ಇರುವ ಪರಮಾತ್ಮನೇ ಸಕಲ ಪ್ರಾಣಿಗಳಲ್ಲೂ ಇದ್ದು ಜಾಗ್ರದವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ ಮೊದಲಾದ ಎಲ್ಲಾ ಅವಸ್ಥೆಗಳಲ್ಲೂ, ಸಕಲ ಕರ್ಮಗಳನ್ನು ತಾನು ಮಾಡಿ ಮಾಡಿಸುವನೆಂದು ಚಿಂತಿಸದವನು, ಪುಸ್ತಕಗಳನ್ನು ನೋಡುತ್ತ, ಏನು ಪಾರಾಯಣ ಮಾಡಲಿ, ಮಂತ್ರ ಸ್ತೋತ್ರಗಳನ್ನು ಪಠನ ಮಾಡಲಿ, ಸೂರ್ಯೋದಯ ಮೊದಲು ಅಸ್ತಮಯದ ವರೆಗೂ ಜಪಗಳನ್ನು ಮಾಡುತ್ತಿರಲಿ, ಎಲ್ಲವೂ ನಿಷ್ಫಲವೇ ಆಗುವುವು.

ಅವತಾರಿಕೆ: — ಪೃಥಕ್ಕರಣಾರ್ಥವಾಗಿ ಮೇಲೆ ಹೇಳಿರುವನ್ನೇ ದೃಷ್ಟಾಂತ ಸಹಿತವಾಗಿ ವಿವರಿಸುತ್ತಾರೆ: —

**ಮದ್ಯಭಾಂಡವ ದೇವನದಿಯೊಳ-**
**ಗದ್ದಿ ತೊಳೆಯಲು ನಿತ್ಯದಲಿ ಪರಿ-**
**ಶುದ್ಧವಾಹೊದೆ ಎಂದಿಗಾದರು ಹರಿಪದಾಬ್ಜಗಳ ॥**
**ಬುದ್ಧಿಪೂರ್ವಕ ಭಜಿಸದವಗೆ ವಿ-**
**ರುದ್ಧವೆನಿಸುವವೆಲ್ಲ ಕರ್ಮ ಸ-**
**ಮೃದ್ಧಿಗಳ ದುಃಖವನೆ ಕೊಡುತಿಹವಧಮ ಜೀವರಿಗೆ ॥ ೯ ॥**

ಪದ್ಯಾರ್ಥ: — ಮದ್ಯಭಾಂಡವ=ಹೆಂಡವನ್ನು ಹಾಕಿರುವ ಮಣ್ಣಿನ ಗಡಿಗೆಯನ್ನು, ದೇವನದಿಯೊಳಗೆ=ಗಂಗೆಯಲ್ಲಿ, ನಿತ್ಯದಲ್ಲಿ, ಅದ್ದಿ ತೊಳೆಯಲು, ಎಂದಿಗಾದರು, ಪರಿಶುದ್ಧವಾಹೋದೆ? ಇಲ್ಲ. ಅದರಂತೆ, ಹರಿ ಪದಾಬ್ಜಗಳ=ಪರಮಾತ್ಮನ ಪಾದಾರವಿಂದಗಳನ್ನು, ಬುದ್ಧಿ ಪೂರ್ವಕ=

ಅನುಸಂಧಾನಪೂರ್ವಕವಾಗಿ, ಭಜಿಸದವಗೆ, ಎಲ್ಲ ಕರ್ಮ=ಸಮಸ್ತ ಕರ್ಮಗಳು, ವಿರುದ್ಧವೆನಿಸುವುವು. ಅಧಮ ಜೀವರಿಗೆ, ಸಮೃದ್ಧಿಗಳ ದುಃಖವನೇ=ಸಂಪೂರ್ಣವಾದ ದುಃಖವನ್ನು ಕೊಡುತಿಹವು.

ತಾತ್ಪರ್ಯ:—ಮೇಲೆ ಹೇಳಿದಂತೆ ಅನುಸಂಧಾನ ಪೂರ್ವಕವಾಗಿ, ಪರಮಾತ್ಮನ ಪಾದ ಕಮಲವನ್ನು ಭಜಿಸದೆ, ಜಪ, ತಪ ಮೊದಲಾದ ಯಾವ ಕರ್ಮಾನುಷ್ಠಾನ ಮಾಡಿದರೂ ಅವು ಇವನನ್ನು ಉದ್ಧಾರಮಾಡವು. ಭಾಗವತ ಷಷ್ಠಸ್ಕಂಧ ಮೊದಲನೆಯ ಅಧ್ಯಾಯದಲ್ಲಿ, "ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣಪರಾಙ್ಮುಖೈಃ । ನ ವೈ ಪುನಂತಿ ರಾಜೇಂದ್ರ ಸುರಾಕುಂಭಮಿವಾಸಗಾಃ"

ನಾರಾಯಣನಲ್ಲಿ ವಿಮುಖರಾದವರು ಪಾಪಪರಿಹಾರಕ್ಕೋಸ್ಕರವಾಗಿ ಪ್ರಾಯಶ್ಚಿತ್ತ ರೂಪವಾದ ಕರ್ಮಗಳನ್ನೇನು ಮಾಡಿದರೂ, ಮದ್ಯದ ಕೊಡವನ್ನು ಮಹಾನದಿಗಳು ಹೇಗೆ ಶುದ್ಧಮಾಡವೊ, ಹಾಗೆ ಇವನನ್ನು ಶುದ್ಧಿಮಾಡವು ಎಂದು ಹೇಳಿರುವರು. ಅದೇ ಅರ್ಥವನ್ನೇ ಇಲ್ಲಿ ಹೇಳಿರುತ್ತಾರೆ. ಗಂಗೆಯು ಸಕಲ ವಸ್ತುಗಳನ್ನೂ ಶುದ್ಧಿಮಾಡುವ ಯೋಗ್ಯತೆ ಉಳ್ಳುದಾದರೂ ಮದ್ಯಪ ಕೊಡವನ್ನು ಹೇಗೆ ಶುದ್ಧಿ ಮಾಡದೋ ಹಾಗೆ ಸತ್ಕರ್ಮಗಳು ಉತ್ತಮವಾದರೂ ಪರಮಾತ್ಮನೇ ಮಾಡಿಸಿದವನೆಂಬ ಅನುಸಂಧಾನವಿಲ್ಲದೆ ನಾನೆ ಮಾಡಿದೆನೆಂದು ತಿಳಿವ ಅಧಮ ಜೀವರು ಮಾಡಿವ ಕರ್ಮಗಳು ವಿರುದ್ಧ ಫಲವನ್ನೇ ಕೊಡುವವು. ಅಂದರೆ ಸಮೃದ್ಧಿಯಾದ ದುಃಖವನ್ನೇ ಕೊಡುವವು.

ಅವತಾರಿಕೆ:—ಆದ್ದರಿಂದ ಭಕ್ತಿಶ್ರದ್ಧೆಯಿಂದ ಭಗವತ್ಪ್ರೀತಿಗೋಸ್ಕರವಾಗಿ ಕರ್ಮಗಳನ್ನು ಮಾಡಬೇಕೆಂದು ಹೇಳುತ್ತಾರೆ:—

**ಭಕ್ತಿಪೂರ್ವಕವಾಗಿ ಮುಕುಂ-**
**ಮುಕ್ತ ನೀಯಾಮಕನ ಸರ್ವೋ-**
**ದ್ರಿಕ್ತ ಮಹಿಮೆಗಳನವರತ ಕೊಂಡಾಡು ಮರಿಯದಲೆ ॥**
**ಸಕ್ತನಾಗದೆ ಲೋಕವಾರ್ತೆ ಪ್ರ-**
**ಸಕ್ತಿಗಳನೀಡಾಡಿ ಶ್ರುತಿ ಸ್ಮೃ-**
**ತ್ಯುಕ್ತ ಕರ್ಮವ ಮಾಡುತಿರು ಹರಿ ಆಜ್ಞೆಯೆಂದರಿತು ॥೧೦॥**

ಪದ್ಯಾರ್ಥ:—ಮುಕ್ತಾಮುಕ್ತನೀಯಾಮಕನ=ಮುಕ್ತರಿಗೂ ಅಮುಕ್ತರಾದ ಸರ್ವ ಪ್ರಾಣಿಗಳಿಗೂ ಪ್ರೇರಕನಾದ ಶ್ರೀಪರಮಾತ್ಮನ, ಸರ್ವೋದ್ರಿಕ್ತ ಮಹಿಮೆಗಳ=ಎಲ್ಲರಿಗಿಂತಲೂ ಹೆಚ್ಚಿನದಾಗಿರುವ ಮಹಿಮೆಗಳ, ಭಕ್ತಿಪೂರ್ವಕವಾಗಿ ಮರಿಯದಲೆ, ಅನವರತ=ಅವಿಚ್ಛಿನ್ನವಾಗಿ ಕೊಂಡಾಡು, ಸಕ್ತನಾಗದೆ=ಸಂಸಾರದಲ್ಲಿ ಅತ್ಯಾಸಕ್ತನಾಗದೆ, ಲೋಕವಾರ್ತೆ ಪ್ರಸಕ್ತಿಗಳ=ಲೌಕಿಕ ಸಂಬಂಧವಾದ ಹರಟೆಗಳನ್ನು, ಈಡಾಡಿ=ಬಿಟ್ಟು, ಶ್ರುತಿಸ್ಮೃತ್ಯುಕ್ತ ಕರ್ಮವ=ಶ್ರುತಿಗಳಲ್ಲೂ, ಸ್ಮೃತಿಗಳಲ್ಲೂ ಮಾಡಬೇಕೆಂದು ವಿಧಿಸಿರುವ ಕರ್ಮಗಳನ್ನು, ಹರಿ ಆಜ್ಞೆಯೆಂದರಿತು=ಪರಮಾತ್ಮನ ಅಪ್ಪಣೆ ಎಂದು ತಿಳಿದು ಮಾಡುತಿರು.

ತಾತ್ಪರ್ಯ:—ಮುಕ್ತರಿಗೂ, ಅಮುಕ್ತರಿಗೂ ಸಹ ನಿಯಾಮಕನಾದ ಶ್ರೀ ಪರಮಾತ್ಮನ ಸರ್ವೋತ್ಕೃಷ್ಟವಾದ ಮಹಿಮೆಗಳನ್ನು ಮರಿಯದೆ ನಿತ್ಯದಲ್ಲೂ ಭಕ್ತಿ ಪೂರ್ವಕವಾಗಿ ಸ್ತೋತ್ರ ಮಾಡುತ್ತಿರು. ಸಂಸಾರದಲ್ಲಿ ಅತಿ ಆಸಕ್ತಿಯನ್ನು ಮಾಡಬೇಡ. ಲೌಕಿಕವಾದ ಹಾಳು ಹರಟೆಗಳನ್ನು ಬಿಟ್ಟು "ಶ್ರುತಿಸ್ಮೃತೀ ಹರೇರಾಜ್ಞಾ" ಎಂಬ ಪ್ರಮಾಣಾನುಸಾರ ಶ್ರುತಿ, ಸ್ಮೃತಿಗಳು ಭಗವದಾಜ್ಞೆ ಎಂದು ಭಾವಿಸಿ ವಿಧ್ಯುಕ್ತ ಕರ್ಮಗಳನ್ನು ಮಾಡುತ್ತಿರು.

ಅವತಾರಿಕೆ:—ನಿಷ್ಕಾಮುಕನಾಗಿ ಕರ್ಮಗಳನ್ನು ಮಾಡಿದರೆ ಕರ್ಮದಿಂದ ಲಿಪ್ತನಾಗದೆ ಪರಮಾತ್ಮನನ್ನು ಹೊಂದುವನೆಂದು ಹೇಳುತ್ತಾರೆ:—

**ಲೋಪವಾದರು ಸರಿಯೆ ಕರ್ಮಜ**
**ಪಾಪ ಪುಣ್ಯಗಳೆರಡು ನಿನ್ನನು**
**ಲೇಪಿಸವು ನಿಷ್ಕಾಮುಕನು ನೀನಾಗಿ ಮಾಡುತಿರೆ ॥**
**ಸೌಪರ್ಣಿ ವರವಹನ ನಿನ್ನ ಮ-**
**ಹಾಪರಾಧಗಳೆಣಿಸದಲೆ ಸ್ವ-**
**ರ್ಗಾಪವರ್ಗದೊಳಿಟ್ಟು ಸಲಹುವ ನಿತ್ಯ ಸುಖಸಾಂದ್ರ ॥೧೧॥**

ಪದ್ಯಾರ್ಥ:—ನೀನು, ನಿಷ್ಕಾಮುಕನಾಗಿ=ಫಲಾಪೇಕ್ಷೆ ಇಲ್ಲದೆ ಭಗವತ್ಪ್ರೀತಿಗಾಗಿ, ಮಾಡುತಿರೆ=ಕರ್ಮಗಳನ್ನು ಮಾಡುತ್ತಿದ್ದರೆ, ಲೋಪವಾದರು ಸರಿಯೆ=ಮಾಡುವ ಕರ್ಮಗಳಲ್ಲಿ ಸ್ವಲ್ಪ ಲೋಪವಾದರೂ ಸಹ, ಕರ್ಮಜ=ಕಾಮ್ಯ ಕರ್ಮ ಸಂಬಂಧವಾದ, ಪಾಪ ಪುಣ್ಯಗಳೆರಡು, ನಿನ್ನನ್ನು ಲೇಪಿಸವು.

ನಿತ್ಯ ಸುಖಸಾಂದ್ರ=ನಿತ್ಯಾನಂದ ಪೂರ್ಣನಾದ, ಸೌಪರ್ಣಿವರವಹನ=ಸೌಪರ್ಣಿ ದೇವಿಗೆ ಪತಿಯಾದ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡಿರುವ ಶ್ರೀಹರಿಯು, ನಿನ್ನ ಮಹಾಪರಾಧಗಳೆಣಿಸದಲೆ ಸ್ವರ್ಗ=ಇಹದಲ್ಲಿ ಸ್ವರ್ಗಕ್ಕೆ ಸಮವಾದ ಸುಖವನ್ನು ಕೊಟ್ಟು, ಅಥವಾ ಸ್ವತಂತ್ರತನಾದುದರಿಂದ ಸ್ವ=ಎಂದು ಪರಮಾತ್ಮನಿಗೆ ಹೆಸರು. ಅವನನುಗ್ರಹದಿಂದಲೆ ಗಮ್ಯವಾದುದರಿಂದ ಸ್ವರ್ಗವೆಂದು ವೈಕುಂಠಕ್ಕೆ ಹೆಸರು. ಅಥವಾ "ಸ್ವರತೋ ವಿಷ್ಣುಃ ತೇನ ಗತೋ ಲೋಕಃ ವೈಕುಂಠಾಖ್ಯಃ" ಸ್ವರತನಾದುದರಿಂದ ಸ್ವಃ ಎಂದು ವಿಷ್ಣುವಿಗೆ ಹೆಸರು; ಅವನು ವಾಸಮಾಡುವ ಲೋಕಕ್ಕೆ ಸ್ವರ್ಗವೆಂದು ಹೆಸರು; ಅಥವಾ "ಸದಾನಂದಜ್ಞಾನಮೂರ್ತಿತ್ವಾತ್ ಸ್ವರ್ಗೋ ವಿಷ್ಣುಃ" ಸರ್ವದಾ ಜ್ಞಾನಾನಂದ ಸ್ವರೂಪನಾದುದರಿಂದ ಸ್ವರ್ಗವೆಂದು ವಿಷ್ಣುವಿಗೆ ಹೆಸರು; ಇಂತಹ ಸ್ವರ್ಗನಾಮಕನಾದ ಪರಮಾತ್ಮನ ಲೋಕವಾದ ಅಪವರ್ಗದೊಳು=ಮುಕ್ತ ಸ್ಥಾನದಲ್ಲಿ ಅಥವಾ ಸ್ವರ್ಗ ನಾಮಕವಾದ ವೈಕುಂಠವಲ್ಲಿ, ಅಪವರ್ಗದೊಳು=ಮುಕ್ತ ಸ್ಥಾನದಲ್ಲಿ, ಇಟ್ಟು ಸಲಹುವ=ಸ್ವರೂಪಾನಂದವನ್ನು ಕೊಟ್ಟು ಉದ್ಧರಿಸುವನು.

ತಾತ್ಪರ್ಯ:—"ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಗೀತಾವಾಕ್ಯಾನುಸಾರವಾಗಿ ಕರ್ಮಗಳನ್ನು ಮಾಡುವಾಗ, ಪರಮಾತ್ಮನೇ ಮಾಡಿ ಮಾಡಿಸುವನೆಂದು ಅನುಸಂಧಾನ ಪೂರ್ವಕ, ಫಲವನ್ನಪೇಕ್ಷಿಸದೆ ಭಗವತ್ಪ್ರೀತಿಗೋಸ್ಕರವಾಗಿ ಕರ್ಮಗಳನ್ನು ಮಾಡಬೇಕು. ಹಾಗೆ ಸತ್ಕರ್ಮಗಳನ್ನು ಮಾಡುವಾಗ ದೈವ ಸಂಕಲ್ಪದಿಂದ, ಮಾಡಬೇಕಾದ ಸತ್ಕರ್ಮಗಳಿಗೆ ಲೋಪ ಬಂದರೂ, ಆ ಅಪರಾಧಗಳನ್ನು ಪರಮಾತ್ಮನು ಕ್ಷಮಿಸುವನು. ಇವನಲ್ಲಿರುವ ಸಂಚಿತ, ಆಗಾಮಿ ಕರ್ಮ ಸಂಬಂಧವಾದ ನಶ್ವರ ಫಲವನ್ನು ಕೊಡುವ ಸ್ವರ್ಗ ನರಕಗಳಿಗೆ ಸಾಧನವಾದ ಪುಣ್ಯ ಪಾಪಗಳೆಲ್ಲವೂ ಇವನಿಗೆ ಲೋಪವಾಗವು. ಮುಕ್ತಿಗೆ ಸಾಧನವಾದ ಪುಣ್ಯ ಮಾತ್ರ ಉಳಿಯುವದೆಂಬ ತಾತ್ಪರ್ಯ. ಇವನಿಗೆ ಸ್ವರ್ಗವನ್ನಾಗಲಿ, ನರಕವನ್ನಾಗಲಿ ಕೊಡಿಸುವುದಿಲ್ಲ. ಶಾಶ್ವತವಾದ ವೈಕುಂಠ ಲೋಕವನ್ನೆ ಕೊಟ್ಟುದ್ಧರಿಸುವನು. ನಿಷ್ಕಾಮುಕರಾಗಿ ಕರ್ಮ ಮಾಡುವವರಿಗೆ ಸ್ವರ್ಗವಾಗುವುದಿಲ್ಲ. ಆದ್ದರಿಂದಲೆ ಸ್ವರ್ಗಾಪವರ್ಗ ಎಂಬ ಪದಕ್ಕೆ ಪದ್ಯಾರ್ಥದಲ್ಲಿ ಹೇಳಿದಂತೆ ಸ್ವರ್ಗವೆಂದು ವೈಕುಂಠಕ್ಕೆ ಹೆಸರೆಂದು ಅರ್ಥ ಮಾಡಲು ಕಾರಣವಾಯಿತು.

ವೈಕುಂಠವೆಂದು ಅರ್ಥಮಾಡಿದುದು ಸ್ವಬುದ್ಧಿಯಿಂದಲ್ಲ. ಭಾಗವತ ಪ್ರಥಮ ಸ್ಕಂಧದಲ್ಲಿ ಮೊದಲನೆಯ ಅಧ್ಯಾಯುಳನೇ ಶ್ಲೋಕದ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ಸ್ವರ್ಗಾಯ ಲೋಕಾಯವೆಂಬ ಪದಕ್ಕೆ ವ್ಯಾಖ್ಯಾನ ಮಾಡುವಾಗ ಮಾಡಿದ ನಿರ್ವಚನವನ್ನೇ ಈ ಪದ್ಯಾರ್ಥದಲ್ಲಿ ಬರೆದಿದೆ.

ಮೇಲೆ ಹೇಳಿದಂತೆ ನಿಷ್ಕಾಮ್ಯ ಕರ್ಮಗಳನ್ನು ಮಾಡುತ್ತಾ ಪರಮಾತ್ಮನನ್ನು ಸ್ತೋತ್ರಮಾಡುತ್ತಿದ್ದರೆ ಮಹಾಮಹಿಮೆಗಳುಳ್ಳ ಪರಮಾತ್ಮನನ್ನು ಅಪರೋಕ್ಷದಲ್ಲಿ ಕಾಣುವುದಲ್ಲದೆ, ಮುಕ್ತಿಯಲ್ಲಿ ಸರ್ವದಾ ಪ್ರತ್ಯಕ್ಷವಾಗಿ ಪರಮಾತ್ಮನನ್ನು ಕಾಣುತ್ತಿರುವರೆಂದು ಹೇಳುತ್ತಾರೆ.

ಸ್ವರತಸುಖಮಯ ಸುಲಭ ವಿಶ್ವಂ
ಭರ ವಿಶೋಕ ಸುರಾಸುರಾರ್ಚಿತ
ಚರಣಯುಗ ಚಾರ್ವಾಂಗ ಶಾರ್ಙ್ಗಶರಣ್ಯ ಜಿತಮನ್ಯು
ಪರಮಸುಂದರತರ ಪರಾತ್ಪರ
ಶರಳಜನ ಸುರಧೇನು ಶಾಶ್ವತ
ಕರುಣಿ ಕಂಜದಳಾಕ್ಷ ಕಾಯೆನೆ ಕಂಗೊಳಿಪ ಸಿದ್ಧ ||೧೨||

ಪದ್ಯಾರ್ಥ.—ಸ್ವರತ-ಸ್ವರಮಣನಾದ, ಸುಖಮಯ=ಆನಂದ ಸ್ವರೂಪನಾದ, ಸುಲಭ-ಭಕ್ತರಿಗೆ ಸುಲಭನಾದ, ವಿಶ್ವಂಭರ=ಪ್ರಪಂಚವನ್ನು ಧರಿಸಿರುವ, ವಿಶೋಕ-ಶೋಕರಹಿತನಾದ, ಸುರಾಸುರಾರ್ಚಿತ=ಸುರ=ಖದ್ರಾದಿ ದೇವತೆಗಳಿಂದಲೂ, ಅಸುರ = ಮುಖ್ಯಪ್ರಾಣದೇವರಿಂದಲೂ, "ಅಸುಷುರತತ್ವಾದ ಸುರೋಮುಖ್ಯಪ್ರಾಣಃ" ಪ್ರಾಣಗಳಲ್ಲಿ ರತನಾಗಿರುವುದರಿಂದ ಅಸುರ ಎಂದು ಮುಖ್ಯಪ್ರಾಣದೇವರಿಗೆ ಹೆಸರು. ಅಥವಾ ಅಥವಾ ಪ್ರಾಣಮತಾವಲಂಭಿಗಳೆಂಪರ್ಥ. ೧೨ನೆಯ ಸಂಧಿ ೩ನೆಯ ಪದ್ಯದ ವ್ಯಾಖ್ಯಾನದಲ್ಲಿ ಅಸುರ ಶಬ್ಧಕ್ಕೆ ನಿರ್ವಚನ ಮಾಡಿರುತ್ತೆ. ಅಲ್ಲಿ ನೋಡತಕ್ಕದ್ದು. ಇಂತಹಾ ಮಧ್ವ ಮತಾವಲಂಬಿಗಳಿಂದಲೂ, ಅರ್ಚಿತ=ಪೂಜಿತವಾದ, ಚರಣಯುಗ=ಪಾದದ್ವಂದ್ವಗಳು, ಚಾರ್ವಾಂಗ-ಮನೋಜ್ಞವಾದ ಅಂಗಗಳುಳ್ಳ, ಶಾರ್ಙ್ಗಶರಣ್ಯ-ಶಾರ್ಙ್ಗವೆಂಬ ಧನುಸ್ಸಿನ ರೂಪವುಳ್ಳ ವಿದ್ಯಾನಾಮಕ ರಮಾದೇವಿಯರಿಗೆ ಆಶ್ರಯಭೂತನಾದ, ಜಿತಮನ್ಯು=ಜಯಿಸಲ್ಪಟ್ಟ ಕೋಪವುಳ್ಳ, ಪರಮಸುಂದರತರ=ಪರಮ ಸುಂದರರಾದ ಬ್ರಹ್ಮಾದಿಗಳಿಗಿಂತಲೂ ಸುಂದರತರನಾದ ಪರಾತ್ಪರ=ಬ್ರಹ್ಮಾದಿಗಳಿಗಿಂ

ತಲೂ ಉತ್ತಮನಾದ, ಶರಣಜನಸುರಧೇನು=ತನ್ನನ್ನು ಮೊರೆಹೊಕ್ಕ ಜನರಿಗೆ ಕಾಮಧೇನುವಿನಂತಿರುವ, ಶಾಶ್ವತಕರುಣಿ=ಶಾಶ್ವತವಾದ ದಯಾಪೂರ್ಣನಾದ, ಕಂಜದಳಾಕ್ಷ-ಕಮಲದಳದಂತೆ ನೇತ್ರಗಳುಳ್ಳ, ಶ್ರೀಹರಿಯೇ, ಕಾಯಿನೆ-ನನ್ನನ್ನು ರಕ್ಷಿಸೆಂದು ಸ್ತೋತ್ರಮಾಡಲು, ಸಿದ್ಧ-ಸಿದ್ಧವಾಗಿ, ಕಂಗೋಚರ=ಅಪರೋಕ್ಷದಲ್ಲಿ ಗೋಚರಿಸುವನು. ಪರದಲ್ಲಿ=ಮುಕ್ತಿಯಲ್ಲಿ ಸರ್ವದಾ ಪ್ರತ್ಯಕ್ಷವಾಗಿ ಗೋಚರಿಸುತ್ತಿರುವನು.

ತಾತ್ಪರ್ಯವು ವಿಶದವಾಗಿಯೇ ಇರುವುದು. ಸುರಾಸುರಾರ್ಚಿತ ಎಂಬ ಸ್ಥಳದಲ್ಲಿ ಅಸುರರೆಂದರೆ ದೈತ್ಯರೆಂದರ್ಥ, ದೈತ್ಯಕುಲದಲ್ಲಿ ಜನಿಸಿದ ಪ್ರಹ್ಲಾದ ಬಲಿಚಕ್ರವರ್ತಿ ಮೊದಲಾದ ದೈತ್ಯರಿಂದ ಪೂಜಿತವಾದ ಪಾದಕಮಲಗಳುಳ್ಳವನೆಂದರ್ಥ. ಪದ್ಯಾರ್ಥದಲ್ಲಿ ಹೇಳಿದಂತೆ ಮುಖ್ಯಪ್ರಾಣದೇವರೆಂಬೊಂದರ್ಥ, ಮಧ್ವಮತಾವಲಂಭಿಗಳೆಂಬ ಮತ್ತೊಂದರ್ಥ. ಶಾರ್ಙ್ಗಶರಣ್ಯ ಎಂಬ ಕಡೆಯಲ್ಲಿ ಶಾರ್ಙ್ಗವೆಂಬ ಧನುಸ್ಸುಳ್ಳವನಿಗೆ ಶಾರ್ಙ್ಗ ಎಂದು ಹೆಸರಾಗಬೇಕು. ಶಾರ್ಙ್ಗನೆಂದಾಗುವುದಿಲ್ಲ. ಆದ್ದರಿಂದ ಶಾರ್ಙ್ಗಶರಣ್ಯನೆಂದು ಒಂದೇ ಪದ ಮಾಡಬೇಕಾಯಿತು. ಮಹಾಭಾರತ ತಾತ್ಪರ್ಯ ನಿರ್ಣಯ ೩ನೇ ಅಧ್ಯಾಯದಲ್ಲಿ ೭೬ನೆಯ ಶ್ಲೋಕ " ಗದಾತುವಾಯುರ್ಬಲ ಸಂವಿದಾತ್ಮಾ ಶಾರ್ಙ್ಗಶ್ಚ ವಿದ್ಯೇತಿ ರಮೈವ ಖಡ್ಗಃ || ದುರ್ಗಾರ್ತಿಕಾಸ್ಯೈವಚ ಚರ್ಮಸಾಮ್ನಾ ' ಎಂದು ಹೇಳಿರುವರು. ಬಲ ಜ್ಞಾನಾತ್ಮಕರಾದ ವಾಯುದೇವರೇ ಪರಮಾತ್ಮನ ಕೈಯಲ್ಲಿ ಧರಿಸಿರುವ ಗಧೆಯಾಗಿರುವರು, ಶಾರ್ಙ್ಗಧನುಸ್ಸಿನ ರೂಪವಾಗಿ ವಿದ್ಯಾನಾಮಕ ರಮಾದೇವಿಯರಿರುವರು. (ದುರ್ಗಾದೇವಿಯರು ಖಡ್ಗ ಮತ್ತು ಚರ್ಮರೂಪರಾಗಿರುವರು) ಇದರಿಂದ ರಮಾದೇವಿಯರೇ ಶಾರ್ಙ್ಗವೆಂದು ಹೇಳಿದಂತಾಯಿತು. ಇಂತಹಾ ರಮಾದೇವಿಯರಿಗೆ ಶರಣ್ಯ ಅಂದರೆ ಮನೆಯಂತಿರುವನೆಂಬ ತಾತ್ಪರ್ಯ.

ನಿರ್ಮಲನು ನೀನಾಗಿ ಕರ್ಮ ವಿ
ಕರ್ಮಗಳನು ನಿರಂತರದಲಿ ಸು
ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು |
ಛರ್ಮಗರ್ಭನ ಜನಕ ದಯದಲಿ
ದುರ್ಮತಿಗಳನು ಕೊಡದೆ ತನ್ನಯ
ಹರ್ಮದೊಳಗಿಟ್ಟೆಲ್ಲಕಾಲದಿ ಕಾವಕೃಪೆಯಿಂದ ||೧೪||

ಪದ್ಯಾರ್ಥ.— ನೀನು, ನಿರ್ಮಲನಾಗಿ = ಶುದ್ಧ ಅಂತಃಕರಣನಾಗಿ, ಕರ್ಮವಿಕರ್ಮಗಳನು- ಪುಣ್ಯ ಪಾಪ ಕರ್ಮಗಳನ್ನು, ನಿರಂತರದಲಿ, ಸುದರ್ಮನಾಮಕಗೆ=ಸುದರ್ಮನಾಮಕನಾದ ಪರಮಾತ್ಮನಿಗೆ ಅರ್ಪಿಸುತ, ನೀನು ನಿಷ್ಕಲುಷನಾಗು=ಪಾಪ ವಿಮುಕ್ತನಾಗು, ಭರ್ಮಗರ್ಭನ-ಹಿರಣ್ಯಗರ್ಭನಾಮಕರಾದ ಬ್ರಹ್ಮದೇವರ, ಜನಕ-ತಂದೆಯಾದ ಶ್ರೀಹರಿಯು, ದಯದಲಿ-ದಯೆಯಿಂದ, ದುರ್ಮತಿಗಳನು=ಮಿಥ್ಯಾಜ್ಞಾನ ಮೊದಲಾದ ದುರ್ಬುದ್ಧಿಗಳನ್ನು ಕೊಡದೆ, ಎಲ್ಲ ಕಾಲದಲಿ, ತನ್ನ ಹರ್ಮದೊಳಗೆ-ತನ್ನ ಮನೆಯೊಳಗಿಟ್ಟು, ಕೃಪೆಯಿಂದ ಕಾವ.

ತಾತ್ಪರ್ಯ.—ನೀನು ಯಾವಾಗಲೂ ಶುದ್ಧಾಂತಃಕರಣನಾಗಿ ಪುಣ್ಯಪಾಪಗಳನ್ನು ನಿತ್ಯದಲ್ಲೂ ಸುಧರ್ಮನಾಮಕ ಪರಮಾತ್ಮನಿಗರ್ಪಿಸು ಅಂದರೆ ಉತ್ತಮನೆಂದರ್ಥ. ಧರ್ಮ ಅಂದರೆ " ಧಾರಕತ್ವಾದ್ಧರ್ಮ " ಪ್ರಪಂಚವನ್ನೆಲ್ಲಾ ಧರಿಸಿರುವುದರಿಂದ ಧರ್ಮನೆಂದು ಪರಮಾತ್ಮನಗೆ ಹೆಸರು- ಇಂತಹಾ ಪರಮಾತ್ಮನಿಗೆ ಅರ್ಪಿಸುವುದರಿಂದ ನೀನು ಪಾಪರಹಿತನಾಗುವೆ. ಬ್ರಹ್ಮದೇವರ ತಂದೆಯಾದ ಶ್ರೀಪರಮಾತ್ಮನು ದಯಮಾಡಿ ನಿನಗೆ ದುರ್ಬುದ್ಧಿಗಳು ಹುಟ್ಟದಂತೇ ಮಾಡುವನು ಮತ್ತು ತನ್ನ ಮನೆಯಲ್ಲಿಟ್ಟು ಸರ್ವದಾ ಸ್ವರೂಪಾನಂದ ಸುಖವನ್ನು ಕೊಡುವನು.

ಅವತಾರಿಕೆ.— ನಿರಪೇಕ್ಷೆಯಿಂದ ಕರ್ಮಗಳನ್ನು ಮಾಡಬೇಕೆಂಬುವುದನ್ನೇ ದಾರ್ಢ್ಯ ಹುಟ್ಟುವುದಕ್ಕಾಗಿ ಮತ್ತೂ ಹೇಳುತ್ತಾರೆ.—

ಕಲ್ಪಕಲ್ಪದಿ ಶರಣಜನವರ
ಕಲ್ಪವೃಕ್ಷನು ತನ್ನ ನಿಜಸಂ
ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ ||
ಅಲ್ಪ ಸುಖದಾಪೇಕ್ಷೆಯಿಂದ ಹಿ
ತಲ್ಪನಾರಾಧಿಸದಿರೆಂದಿಗು
ಶಿಲ್ಪಿಕಲ ಕೈಶಿಕ್ಕ ಶಿಲೆಯಂದದಲಿ ಸಂತೈಪ ||೧೪||

ಪದ್ಯಾರ್ಥ.— ಶರಣಜನವರಕಲ್ಪವೃಕ್ಷನು- ಶರಣಾಗತರಾದ ಜನರಿಗೆ ಉತ್ತಮವಾದ ಕಲ್ಪವೃಕ್ಷದಂತಿರುವ ಶ್ರೀಹರಿಯು, ತನ್ನ ನಿಜ ಸಂ

ಕಲ್ಪದನುಸಾರದಲಿ- ಅನಾಧಿಯಾದ ಸತ್ಯಸಂಕಲ್ಪಕ್ಕನುಸಾರವಾಗಿ, ಕಲ್ಪಕಲ್ಪದಿ=ಪ್ರತಿ ಬ್ರಹ್ಮಕಲ್ಪದಲ್ಲೂ, ಫಲಾಫಲವ=ಅವರವರ ಯೋಗ್ಯತಾನುಸಾರ ತ್ರಿವಿಧ ಜೀವರಲ್ಲಿ ಮುಕ್ತಿಯೋಗ್ಯರಿಗೆ ಮುಕ್ತಿಯನ್ನು, ತಮೋಯೋಗ್ಯರಿಗೆ ಅಂಧಂತಮಸ್ಸನ್ನು, ಮಧ್ಯರಿಗೆ ಸುಖದುಃಖ ಮಿಶ್ರವಾದ ಸಂತಾನಿಕ ಲೋಕವನ್ನು ಕೊಡುತಿಪ್ಪನು. ಅಹಿತಲ್ಪನ=ಶೇಷಪರ್ಯಂತಶಾಯಿಯಾದ ಶ್ರೀಪರಮಾತ್ಮನನ್ನು, ಅಲ್ಪಸುಖದ=ನಶ್ವರವಾದ ಐಹಿಕ ಸುಖಾಪೇಕ್ಷೆಯಿಂದ ಎಂದಿಗೂ, ಆರಾಧಿಸದಿರು – ಆರಾಧನೆ ಮಾಡಬೇಡ, ಪರಮಾತ್ಮನು, ಶಿಲ್ಪಿಕನ- ಕಲ್ಲುಬಡಿಯುವವನ, ಕೈಶಿಕ್ಕಿ=ಕೈಗೆ ಸಿಕ್ಕಿದ, ಶಿಲೆಯಂದದಲಿ- ಕಲ್ಲಿನಂತೆ, ಸಂತೈಪ=ಸುಖಪಡಿಸುವನು.

ತಾತ್ಪರ್ಯ.—ಶರಣಾಗತರನ್ನು ಪಾಲನೆ ಮಾಡುವ ವಿಷಯದಲ್ಲಿ ಕಲ್ಪವೃಕ್ಷದಂತಿರುವ ಶ್ರೀಹರಿಯು, ತನ್ನ ಸತ್ಯಸಂಕಲ್ಪಾನುಸಾರವಾಗಿ ಪ್ರತಿ ಬ್ರಹ್ಮಕಲ್ಪದಲ್ಲೂ ಸೃಷ್ಟಿಗೆ ಬಂದಿರುವ ತ್ರಿವಿಧ ಜೀವರಾಶಿಗಳಲ್ಲಿ ಆ ಕಲ್ಪಾಂತ್ಯದಲ್ಲಿ ಮುಕ್ತಿಯೋಗ್ಯರಿಗೆ ಮುಕ್ತಿಯನ್ನು ತಮೋಯೋಗ್ಯರಿಗೆ ಅಂಧಂತಮಸ್ಸನ್ನೂ, ಮಧ್ಯಮರಿಗೆ ಸುಖದುಃಖ ಮಿಶ್ರವಾದ ಸಂತಾನಿಕವೆಂಬ ನಿತ್ಯ ಸಂಸಾರವನ್ನೂ ಕೊಡಿಸುವನು, ಇಂತಹಾ ಶೇಷಶಾಯಿಯಾದ ಪರಮಾತ್ಮನನ್ನು ನಶ್ವರವಾದ ಸಂಸಾರ ಸುಖಕ್ಕಾಗಿ ಎಂದಿಗೂ ಭಜಿಸಬೇಡ. ಪರಮಾತ್ಮನು ಸುಪ್ರೀತನಾಗಲೆಂದು ಭಜಿಸಿದರೆ ನಿನ್ನ ಭಜನಗೆ ಮೆಚ್ಚಿ ನಿನಗೆ ಸುಖವನ್ನ ಕೊಡಿಸುವನು. ಕಲ್ಲುಬಡಿಯುವವನ ಕೈಗೆ ಸಿಕ್ಕಿದರೆ ಕಲ್ಲು ನನ್ನನ್ನು ಪ್ರತಿಮೆಯನ್ನಾಗಿ ಮಾಡಿ ಪೂಜಾದಿಗಳನ್ನು ನಡಿಯುವಂತೆ ಮಾಡೆಂದು ಬಡಿಯುವನನ್ನು ಕೇಳಿಕೊಳ್ಳುವುದೇನು ? ಹೇಗೆ ಶಿಲ್ಪಿಯು ತಾನಾಗಿಯೇ ಕಲ್ಲನ್ನು ಪ್ರತಿಮೆಯನ್ನಾಗಿಮಾಡಿ ಪೂಜಾದಿಗಳುನಡೆಯುವಂತೆ ಮಾಡುವನೋ ಹಾಗೆ ಪರಮಾತ್ಮನು ನೀನು ಯಾವುದನ್ನು ಅಪೇಕ್ಷಿಸದಿದ್ದರೂ ತಾನಾಗಿಯೇ ನಿನ್ನ ಯೋಗ್ಯತಾನುಸಾರವಾಗಿ ಸುಖವನ್ನು ಕೊಡುವನು.

ಶ್ರೀಪರಮಾತ್ಮನು ಇವರು ನಮ್ಮವರು ಅವರು ಪರಕೀಯರೆಂಬ ವೈಷಮ್ಯಾದಿಗಳಿಲ್ಲದೆ ಕೇವಲ ಅವರವರ ಉಪಾಸನೆಯನ್ನನುಸರಿಸಿ ಅವರವರಿಗೆ ಫಲವನ್ನು ಕೊಡುವನೆಂದು ಹೇಳುತ್ತಾರೆ.—

**ದೇಶ ಭೇದಾಕಾಶದಂದದಿ**

ವಾಸುದೇವನು ಸರ್ವಭೂತನಿ
ವಾಸನೆನಿಸಿ ಚರಾಚರಾತ್ಮಕನೆಂದು ಕರೆಸುವನು ।
ದ್ವೇಷಸ್ನೇಹೋದಾಸೀನಗಳ
ಲ್ಲೀ ಶರೀರಗಳೊಳಗೆ ಅವರೋ
ಪಾಸನೆಗಳಂದದಲಿ ಫಲವೀವನು ಪರಬ್ರಹ್ಮ ।।೧೫।।

ಪದ್ಯಾರ್ಥ.— ದೇಶಭೇದಾಕಾಶದಂದದಿ - ಸ್ಥಳ ಭೇದದಿಂದ ಒಂದೇ ಆಕಾಶವು ಪ್ರತ್ಯೇಕ ಪ್ರತ್ಯೇಕವಾಗಿ ಕಾಣುವಂತೆ, ವಾಸುದೇವನು, ಸರ್ವಭೂತನಿವಾಸನೆನಿಸಿ=ಸರ್ವ ಪ್ರಾಣಿಗಳಲ್ಲೂ ವಾಸಮಾಡುವವನೆಂದೆನಿಸಿ, ಚರಾಚರಾತ್ಮಕನೆಂದು=ಚರಾಚರಾತ್ಮಕವಾದ ಪ್ರಪಂಚದಲ್ಲಿ ತದಾಕಾರನಾಗಿದ್ದು ಚರಾಚರ ಪ್ರಾಣಿಗಳ ಹೆಸರಿನಿಂದ ಕರೆಸಿಕೊಳ್ಳುವನು. ಪರಮಾತ್ಮನು ಈ ಶರೀರಗಳೊಳಗೆ, ದ್ವೇಷಸ್ನೇಹೋದಾಸೀನಗಳಲ್ಲಿ=ದ್ವೇಷ, ಸ್ನೇಹ ಉದಾಸೀನವೆಂಬ ಮೂರು ವಿಧ ಉಪಾಸನೆಗಳ ಮಧ್ಯದಲ್ಲಿ, ಅವರ–ತ್ರಿವಿಧಜೀವರ, ಉಪಾಸನೆಗಳಂದದಲಿ=ದ್ವೇಷಮಾಡುವವರು, ಸ್ನೇಹಮಾಡುವವರು, ಉದಾಸೀನಮಾಡುವವರು ಹೀಗೆ ಮೂರು ವಿಧ ಉಪಾಸನೆಗಳನ್ನನುಸರಿಸಿ, ಫಲವೀವನು=ಫಲವನ್ನು ಕೊಡುವನು.

ತಾತ್ಪರ್ಯ.—ಎಲ್ಲಾ ಸ್ಥಳಗಳಲ್ಲಿಯೂ ಒಂದೇ ಆಕಾಶವು ವ್ಯಾಪಿಸಿಕೊಂಡಿರುವಂತೆ, ಚರಾಚರಾತ್ಮಕವಾದ ಈ ಪ್ರಪಂಚದ ಸರ್ವ ಸ್ಥಳಗಳಲ್ಲೂ ಪರಮಾತ್ಮನು ವ್ಯಾಪ್ತನಾಗಿರುವುದರಿಂದ ಸರ್ವಭೂತ ನಿವಾಸನೆಂದು ಪರಮಾತ್ಮನಿಗೆ ಹೆಸರಾಗಿರುವದು. ಹೀಗೆ ಚರಾಚರ ಪ್ರಾಣಿಗಳಲ್ಲಿ ತದಾಕಾರನಾಗಿದ್ದು ಆ ಪ್ರಾಣಿಗಳ ಹೆಸರುಗಳನ್ನು ತಾನೇ ಧರಿಸಿರುವನು. ಶರೀರ ಹೊಂದಿದ ಜೀವರಲ್ಲಿ ದ್ವೇಷಮಾಡುವವನೆಂತಲೂ ಸ್ನೇಹ ಮಾಡುವವರೆಂತಲೂ ಉದಾಸೀನಮಾಡುವವರೆಂತಲೂ ಮೂರು ವಿಧ ಉಪಾಸಕರು ಉಂಟು. ಇವರುಗಳಲ್ಲಿ ಅವರವರು ಮಾಡುವ ಉಪಾಸನೆಗಳನ್ನನುಸರಿಸಿ ಸ್ನೇಹಮಾಡುವವರಿಗೆ ಮುಕ್ತಿಯನ್ನೂ, ದ್ವೇಷಿಗಳಿಗೆ ಅಂಧಂತಮಸ್ಸನ್ನೂ ಉದಾಸೀನ ಮಾಡುವವರಿಗೆ ಮಿಶ್ರಲೋಕವನ್ನೂ ಕೊಡಿಸುವನು. ದ್ವೇಷಸ್ನೇಹೋದಾಸೀನಗಳಲ್ಲೀ ಶರೀರಗಳೊಳಗೆಂದು ಪಾಠಾಂತರ ಇದರರ್ಥ.—ಪರಮಾತ್ಮನಿಗೆ ತ್ರಿವಿಧಜೀವರ ದೇಹಗಳಲ್ಲಿ ಒಬ್ಬರಲ್ಲಿ ದ್ವೇಷ, ಒಬ್ಬರಲ್ಲಿ ಸ್ನೇಹ

ಮತ್ತೊಬ್ಬಗಲ್ಲಿ ಉದಾಸೀನ ಹೀಗೆ ವೈಷಮ್ಯವಿರುವುದಿಲ್ಲ. ಎಲ್ಲರಿಗೂ ಅ ವರವರ ಉಪಾಸನೆಯನ್ನನುಸರಿಸಿ ಫಲಗಳನ್ನು ಕೊಡುವನೆಂಬ ತಾತ್ಪರ್ಯ.

ಅವತಾರಿಕೆ.—ಪರಮಾತ್ಮನನ್ನು ಭಜಿಸುವದರಿಂದ ಆಗಾಮಿಸಂಚಿತಗಳು ನಾಶವಾಗುವವು. ಅಪರೋಕ್ಷದಲ್ಲಿ ಪರಮಾತ್ಮನನ್ನು ಕಾಣುವರೆಂದು ಹೇಳುತ್ತಾರೆ.—

**ಸಂಚಿತಾಗಾಮಿಗಳ ಕರ್ಮವಿ**
**ರಿಂಚಿ ಜನಕನ ಭಜಿಸೆ ಕೆಡುವವು**
**ಮಿಂಚಿನಂದದಿ ಪೊಳೆವ ಪುರುಷೋತ್ತಮನು ಹೃದಾಂಬರದೀ ॥**
**ವಂಚಿಸುವ ಜನರೊಲ್ಲ ಶ್ರೀವ**
**ತ್ಸಾಂಕಿತ ಸಂಸದ್ವಕ್ಷ ತಾ ನಿ**
**ಷ್ಕಿಂಚನ ಜನಪ್ರಿಯ ಸುರಮುನಿಗೇಯ ಶುಭಕಾಯ ॥೧೬॥**

ಪದ್ಯಾರ್ಥ.—ವಿರಿಂಚಿಜನಕನ=ಬ್ರಹ್ಮದೇವರ ತಂದೆಯಾದ ಶ್ರೀಪರಮಾತ್ಮನನ್ನು, ಭಜಿಸೆ=ಭಜಿಸಲು, ಸಂಚಿತಾಗಾಮಿಗಳ ಕರ್ಮಸಂಚಿತ=ಈ ಜನ್ಮದಲ್ಲಿ ಅನುಭವಿಸುತ್ತಿರುವ, ಹಿಂದಿನ ಜನ್ಮಗಳಲ್ಲಿ ಸಂಪಾದಿಸಿರುವ ಕರ್ಮಗಳು, ಆಗಾಮಿ=ಮುಂದಿನ ಜನ್ಮಗಳಲ್ಲಿ ಅನುಭವಿಸಬೇಕಾದ ಈ ಜನ್ಮದಲ್ಲಿ ಮಾಡಿದ ಮಾಡುತ್ತಿರುವ, ಕರ್ಮಗಳು-ಇವೆರಡು ಕರ್ಮಗಳೂ, ಕೆಡುವವು=ನಾಶವೈದುವವು, ಪುರುಷೋತ್ತಮನು=ಪುರುಷೇಶ=ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಠನಾದ ಶ್ರೀಪರಮಾತ್ಮನು, ಹೃದಯಾಂಬರದಿ=ನಿಮ್ಮ ಹೃದಯಾಕಾಶದಲ್ಲಿ, ಮಿಂಚಿನಂದದಿ ಪೊಳೆವ=ಅಪರೋಕ್ಷದಲ್ಲಿ ಮಿಂಚಿನಂತೆ ಗೋಚರಿಸುವನು. ಶ್ರೀವತ್ಸಾಂಕಿತ ಸಂಸಧ್ವಕ್ಷ=ಶ್ರೀದೇವಿಯರನ್ನೂ ಕಂಸ್ಥುಭಮಣಿಯನ್ನೂ ವಕ್ಷಸ್ಥಳದಲ್ಲಿರಿಸಿರುವ ಶ್ರೀಪರಮಾತ್ಮನು, ವಂಚಿಸುವ ಜನರ=ಡಾಂಭಿಕಭಕ್ತಿ ತೋರಿಸಿರುವವರನ್ನು, ಒಲ್ಲ=ಅಂಥಾವರಿಗೆ ಒಲಿಯುವುದಿಲ್ಲ. ನಿಷ್ಕಿಂಚನಜನಪ್ರಿಯ-ಪರಮಾತ್ಮನಲ್ಲದೆ ಮಿಕ್ಕ ವಸ್ತುಗಳು ನಮ್ಮವಲ್ಲವೆಂದು ತಿಳಿದವನು ನಿಷ್ಕಿಂಚನನು, ಇಂತಹವರಿಗೆ ಪ್ರಿಯನಾದ ಅಥವಾ ನಿಷ್ಕಿಂಚನ ಜನರಲ್ಲಿ ಪ್ರೀತಿಯುಳ್ಳ ಪರಮಾತ್ಮನು, ಸುರಮುನಿಗೇಯ=ದೇವತೆಗಳಿಂದಲೂ ಋಷಿಗಳಿಂದಲೂ ಸ್ತೋತ್ರಮಾಡಿಸಿಕೊಳ್ಳುವವನು. ಶುಭಕಾಯ=ಮಂಗಳ ಸ್ವರೂಪನು, ಶ್ರೀಪರಮಾತ್ಮನು.

ತಾತ್ಪರ್ಯ.—ಪ್ರಾರಬ್ಧ ಕರ್ಮಣೋನ್ಯಸ್ಯ ಜ್ಞಾನಾದೇವ ಪರಿಕ್ಷಯ ಎಂಬ ಅಣುಭಾಷ್ಯ ವಾಕ್ಯದಲ್ಲಿ ಪ್ರಾರಬ್ಧಕರ್ಮ ಒಂದು ಹೊರ್ತು ಮಿಕ್ಕ ಆಗಾಮಿ ಸಂಚಿತಗಳೆಂಬ ಎರಡು ಕರ್ಮಗಳೂ ಅಪರೋಕ್ಷಜ್ಞಾನವಾದ ಕೂಡಲೇ ನಾಶವಾಗುವವು. ಪ್ರಾರಬ್ಧವು ಮಾತ್ರ ಅನುಭವಿಸಿಯೇ ಆಗ ಬೇಕೆಂದು ಹೇಳಿರುವರು. ಮತ್ತು ಭಿದ್ಯತೇ ಹೃದಯಗ್ರಂಥಿ ಛಿದ್ಯಂತೇಸ ರ್ವಸಂಚಯಾಃ ‖ ಕ್ಷೀಯಂತೇ ಚಾಸ್ಯ ಕರ್ಮಾಣಿದೃಷ್ಟ ಏವಾತ್ಮನೀಶ್ವರ ಎಂಬ ಭಾಗವತ ಪ್ರಥಮ ಸ್ಕಂಧದ ವಾಕ್ಯಾನುಸಾರ ಅಪರೋಕ್ಷದಲ್ಲಿ ಪರ ಮಾತ್ಮನನ್ನು ಕಂಡಕೂಡಲೇ ಮನಃಕಲ್ಮಷವು ಪರಿಹಾರವಾಗುವುದು. ಅದರಿಂದ ಸಕಲವಾದ ಸಂಶಯಗಳೂ ಪರಿಹಾರವಾಗುವವು, ಮತ್ತು ಆವ ಗಾಮಿ ಸಂಚಿತ ಕರ್ಮಗಳೆಲ್ಲವೂ ನಾಶವಾಗುವವೆಂದು ನಿಶ್ಚಯವಾಗು ವದು. ಈ ಅರ್ಥವನ್ನೇ ಇಲ್ಲಿ ಹೇಳಿರುತ್ತಾರೆ. ಪರಮಾತ್ಮನನ್ನು ಬಿಡದೆ ಭಜಿಸುತ್ತಾ, ಮನಸ್ಸನ್ನು ನಿಶ್ಚಲವಾಗಿ ಪರಮಾತ್ಮನಲ್ಲಿ ನಿಲ್ಲಿಸಿದರೆ ತನ್ನನ್ನು ನಂಬಿದ ಜನರಲ್ಲಿ ಪ್ರೀತಿಯನ್ನು ಮಾಡುವ ಪರಮಾತ್ಮನು ಹೃದಯಾಕಾ ಶದಲ್ಲಿ ಮಿಂಚಿನಂತೆ ಪ್ರಕಾಶಮಾನನಾಗಿ ಗೋಚರನಾಗುವನು. ಪರಮಾತ್ಮ ನನ್ನು ಕಂಡಕೂಡಲೆ ಇವನ ಆಗಾಮಿ ಸಂಚಿತಗಳೆಂಬ ಎರಡು ವಿಧವಾದ ಕರ್ಮಗಳು ನಾಶವಾಗಿ ಮುಕ್ತಿಯಲ್ಲಿ ಪರಮ ಸುಖವನ್ನು ಹೊಂದುವನೆಂಬ ತಾತ್ಪರ್ಯ.

ಅವತಾರಿಕೆ.—ಪರಮಾತ್ಮನಲ್ಲಿ ದೃಢಭಕ್ತಿಯಿಲ್ಲದೆ ಬರೇ ಕರ್ಮವೇ ತಾರಕವೆಂದು ತಿಳಿದು ಕರ್ಮಾನುಷ್ಠಾನ ಮಾಡುವವರು ಶುದ್ಧ ಮೂರ್ಖ ರೆಂದು ಹೇಳುತ್ತಾರೆ.—

**ಕಾಲದ್ರವ್ಯ ಸುಕರ್ಮ ಶುದ್ಧಿಯ**
**ಪೇಳುವರು ಅಲ್ಪರಿಗೆ ಅವು ನಿ**
**ರ್ಮೂಲ ಗೈಸುವವಲ್ಲ ಪಾಪಗಳೆಲ್ಲ ಕಾಲದಲಿ ‖**
**ತೈಲಧಾರೀಯಂತವನ ಪದ**
**ವಾಲಯಿಸಿ ಸ್ತುತಿಸದಲೆ ನಿತ್ಯದಿ**
**ಬಾಲಿಶರು ಕರ್ಮಾದಿಗಳೆ ತಾರಕವೆಂದು ಪೇಳುವರ ‖೧೭‖**

ಪದ್ಯಾರ್ಥ.—ಕಾಲ ದ್ರವ್ಯ ಸುಕರ್ಮ ಶುದ್ಧಿಯ = ಕರ್ಮಗಳನ್ನು

ಮಾಡಲು ಯೋಗ್ಯವಾದ ಕಾಲಕ್ಕೆ ಶುಚಿಯಾದ ಕಾಲವೆನ್ನುವರು. ದ್ರವ್ಯ ಶುದ್ಧಿಯೆಂದರೆ ಪಾತ್ರೆ ಮೊದಲಾದವುಗಳಿಗೆ ದ್ರವ್ಯಾಂತರವಾದ ಹುಳಿಹಣ್ಣು ಮೊದಲಾದವುಗಳಿಂದ ಶುದ್ಧಿಯು. ಶುದ್ಧವಾದ ಕಾಲದಲ್ಲಿ ಶುದ್ಧವಾದ ದ್ರವ್ಯ ಸಹಾಯದಿಂದ ಸತ್ಕರ್ಮಗಳನ್ನು ಮಾಡುವುದೇ ಕರ್ಮಕ್ಕೆ ಶುದ್ಧಿ ಎಂದು ಭಾಗವತಾದಿಗಳಲ್ಲಿ ಪೇಳುವರು. ಅಲ್ಪರಿಗೆ=ಅಲ್ಪಜ್ಞಾನಿಗಳಿಗೆ, ಅವು-ಆ ಕಾಲ ದ್ರವ್ಯ ಕರ್ಮಾದಿ ಶುದ್ಧಿಗಳು, ಎಲ್ಲಕಾಲದಲಿ=ಯಾವಕಾಲದಲ್ಲೂ, ಪಾಪಗಳ-ಎಲ್ಲಾ ಪಾಪಗಳನ್ನು, ನಿರ್ಮೂಲಗೈಸುವವಲ=ಸಂಪೂರ್ಣವಾಗಿ ನಾಶಮಾಡುವವಲ್ಲ, ತೈಲಧಾರಿಯಂತೆ-ಎಣ್ಣೆಯ ಧಾರೆಯಂತೆ ಅವಿಚ್ಛಿನ್ನವಾಗಿ, ಅವನ ಪದವ-ಆ ಪರಮಾತ್ಮನ ಪಾದಾರವಿಂದವನ್ನು ನಿತ್ಯ ದಾಲಯಿಸಿ ಚಿತ್ತದಲ್ಲಿಟ್ಟು, ಸ್ತುತಿಸದಲೆ=ಸ್ತೋತ್ರಮಾಡದ, ಬಾಲಿಶರು= ಹುಡುಗ ಬುದ್ಧಿಯುಳ್ಳವರು (ಮೂರ್ಖರು) ಕರ್ಮಾದಿಗಳೇ ತಾರಕವೆಂದು= ಉದ್ಧಾರಕವೆಂದು ಪೇಳುವರು.

ತಾತ್ಪರ್ಯ.—ಕಾಲ ದ್ರವ್ಯ ಸುಕರ್ಮ ಶುದ್ಧಿಯ ಪೇಳುವವರೆಂಬ ಪದ್ಯಾರ್ಥ ರೀತಿಯಾಗಿ ಕಾಲಶುದ್ಧಿ ದ್ರವ್ಯಶುದ್ಧಿ ಕರ್ಮಶುದ್ಧಿ ವಿಷಯಗಳನ್ನು ಭಾಗವತ ಏಕಾದಶ ಸ್ಕಂಧದ ೨೧ ನೆಯ ಅಧ್ಯಾಯದಲ್ಲಿ ಹೇಳಿರುವರು ಅದೆಂತೆನೆ:—ದೇಶ ಕಾಲಾದಿ ಭಾವಾನಾಂ ವಚನಾನ್ಮಮ ಸತ್ತಮಗುಣ ದೋಷೌ ವಿಧೀಯೇತೇ ನಿಯಮಾರ್ಥಂಹಿ ಕರ್ಮಣಾಂ" (ಇದು ಶ್ರೀಕೃಷ್ಣನು ಉದ್ಧವನಿಗೆ ಉಪದೇಶ ಮಾಡಿದುದು ) ಎಲೈ ಉದ್ಧವ ! ಈ ದೇಶದಲ್ಲಿ ಈ ಕಾಲದಲ್ಲಿ ಈ ದ್ರವ್ಯದಿಂದ ಮಾಡುವ ಕರ್ಮವು ಯೋಗ್ಯವಾದುದು. ಹಾಗಿಲ್ಲದಿರುವದು ಅಯೋಗ್ಯವಾದುದು. ಎಂದು ಕರ್ಮಗಳ ನಿಯಮಕ್ಕಾಗಿ ನನ್ನ ವಚನದ ಮೇಲೆ ಗುಣದೋಷಗಳು ವಿಧಿಸಲ್ಪಡುವವು. ದೇಶದಲ್ಲಿ ಯಾವ ದೇಶವು ಶುದ್ಧವಾದುದೆಂದರೆ " ಕೃಷ್ಣ ಸಾರೋಥ ದೇಶಾನಾಂ ಬ್ರಾಹ್ಮಣಾಂ ಶುಚಿ ರ್ಭವೇತ್ ‖ ಕೃಷ್ಣ ಸಾರೋಪಿ ಸೌವೀರ ಕೀಕಟಾ ಸಂಸ್ಕೃತುರಿಣಃ ‖೮‖ ಇದರರ್ಥವು ವಿಜಯ ಧ್ವಜೀಯ ವ್ಯಾಖ್ಯಾನವನ್ನನುಸರಿಸಿ ಬರೆಯಲ್ಪಟ್ಟಿರುತ್ತೆ. ) ಬ್ರಾಹ್ಮಣರು ಕರ್ಮಮಾಡಲು ಯೋಗ್ಯವಾದ ದೇಶವು ಯಾವ ದೇಶದಲ್ಲಿ ಜಿಂಕೆಗಳು ತಾವಾಗಿಯೇ ವಾಸಮಾಡುತ್ತಿರುವವೋ ಆ ದೇಶವು ಶುದ್ಧವಾದುದೆಂದು ತಿಳಿಯಬೇಕು.

ಈ ಶ್ಲೋಕದಲ್ಲಿರುವ ಅಥ ಎಂಬ ಪದವು ಜಿಂಕೆಗಳು ವಾಸಮಾಡುವ ದೇಶಗಳಲ್ಲದ ಮತ್ತೂ ಕೆಲವು ದೇಶಗಳು ಶುಚಿಯಾಗಿರುವವೆಂದು ಸೂಚಿಸುವದು. (ವ್ಯಾಖ್ಯಾನ ಶ್ಲೋಕ ತಾತ್ಪರ್ಯದಿಂದ ಉದಾಹರಿಸುವರು) ನದೀ ಸಮುದ್ರ ಗಿರಯಶ್ಚಾಶ್ರಮಾಶ್ಚ ವನಾನಿಚ ॥ ನಗರಾಣಿಚ ದಿವ್ಯಾನಿ ಸಾಲಗ್ರಾಮದಯಸ್ತಥಾ । ತೇಷಾಂಸಮೀಪಗಾಶ್ಚೈವ ದೇಶಾಯೋ ಜನಮಾತ್ರತಃ ॥ ಕರ್ಮಣ್ಯಾಸ್ತು ಸಮಾಖ್ಯಾತಾಸ್ತದನ್ಯೇ ಕೀಕಟಾಃಸ್ಮೃತಾಃ ॥ ತದನ್ಯೇಪಿತು ವಿದೇಶಾಃ ಕೃಷ್ಣಸಾರೋಷಿತಾಃಸ್ವತಃ॥ ಕರ್ಮಣ್ಯಾ ಏವತೇಜ್ಞೇಯಾಃ ಇತಿ ವಚನಾತ್ ! ಎಂಬ ವಾಕ್ಯದಿಂದ ನದೀ, ಸಮುದ್ರ, ಪರ್ವತಗಳು ಆಶ್ರಮ, ಉಪವನ, ಪುಣ್ಯಕರವಾದ ಅಯೋಧ್ಯ ಮೊದಲಾದ ನಗರಗಳು ಸಾಲಿಗ್ರಾಮ ಇವುಗಳು ಇರುವ ದೇಶಗಳು, ಇವುಗಳಿಗೆ ಸುತ್ತಲೂ ಒಂದು ಗಾವುದದ ಒಳಗಿನದೇಶಗಳು ಕರ್ಮಮಾಡಲು ಯೋಗ್ಯವಾದವು. ಇವುಗಳಿಲ್ಲದಿದ್ದರೂ ಸ್ವತಃ ಜಿಂಕೆಗಳು ವಾಸಮಾಡುವ ದೇಶವಾದರೂ ಕರ್ಮಣ್ಯವೆನಿಸುವುದು ಎಂಬ ತಾತ್ಪರ್ಯ. ಈಗ ಹೇಳಿದುದಕ್ಕೆ ಅಪವಾದವನ್ನು ಹೇಳುತ್ತಾರೆ. ಈ ಶ್ಲೋಕದ ಉತ್ತರಾರ್ಧದಿಂದ.- ಜಿಂಕೆಗಳು ತಾವಾಗಿ ವಾಸಮಾಡುತ್ತಿದ್ದರೂ ಸೌವೀರ, ಕೀಕಟ, ಅಸಂಸ್ಕೃತ ಆರಣ ದೇಶಗಳುಮಾತ್ರ ಯಾವಾಗಲೂ ಅಶುದ್ಧವೆಂದು ತಿಳಿಯಬೇಕು. ಸೌವೀರವೆಂಬ ದೇಶವು ೫೬ ದೇಶಗಳಲ್ಲೊಂದು. ಕೀಕಟವೆಂದರೆ ನದಿಗಳಾಗಲಿ, ಸಾಲಿಗ್ರಾಮ, ಪರ್ವತ ಮೊದಲಾದ ಯಾವುದೂ ಇಲ್ಲದ ದೇಶವೆಂದರ್ಥ. ಪಾಷಂಡಿಗಳು ವಾಸಮಾಡುವ ದೇಶವು ಅಸಂಸ್ಕೃತವೆನಿಸುವುದು. ಆರಣವೆಂದರೆ ಸಮುದ್ರದ ಮಧ್ಯದಲ್ಲಿರುವ ಉಪದ್ವೀಪಗಳು. ಇವುಗಳೆಲ್ಲವೂ ಕರ್ಮಮಾಡಲು ಯೋಗ್ಯವಲ್ಲದ ದೇಶಗಳು. ಅಂದರೆ ನದೀ, ಸಮುದ್ರ ಮೊದಲಾದವೇನಿದ್ದರೂ "ಯದಿ ನಾಧ್ಯಷಿತಾಃಖಲೈ" ಅಲ್ಲಿನ ಜನರೆಲ್ಲರೂ ತಮೋ ಯೋಗ್ಯರೇ ಆಗಿದ್ದರೆ ಅಲ್ಲಿ ವಾಸಕ್ಕೂ ಯೋಗ್ಯವಲ್ಲ. ಕರ್ಮಮಾಡಲು ಸುತರಾಂ ಯೋಗ್ಯವಾದುದಲ್ಲವೆಂಬ ತಾತ್ಪರ್ಯ. ಇದರಲ್ಲಿ ಒಂದು ವಿಶೇಷ ಉಂಟು. "ಖಲೈರಧ್ಯುಷಿತಾಶ್ಚಾಪಿಯದಿ ಸದ್ಭಿರಧಿಷ್ಠಿತಾಃ ॥ ಕರ್ಮಣ್ಯಾ ಏವತೇಜ್ಞೇಯಾ ವಿಷ್ಣುಲಿಂಗಾನಿ ಯತ್ರಚ" ಅಯೋಗ್ಯರು ವಾಸಮಾಡುತ್ತಿದ್ದರೂ ಸಜ್ಜನರೂ ಆ ಸ್ಥಳದಲ್ಲಿ ವಾಸಮಾಡುತ್ತಿದ್ದರೆ ಅದು ಕರ್ಮಣ್ಯವೆನಿಸುವುದು. ಮತ್ತು

ವಿಷ್ಣು ಮೂರ್ತಿಗಳು ಇರುವ ಪ್ರದೇಶಗಳೂ ಸಹ ಕರ್ಮಣ್ಯವೆನಿಸುವುವು. ದೇಶಗಳನ್ನು ಹೇಳಿ ಕರ್ಮಯೋಗ್ಯವಾದ ಕಾಲವನ್ನು ಹೇಳುತ್ತಾರೆ. ಕರ್ಮಣ್ಯ ಎಂಬ ಶ್ಲೋಕದಿಂದ:— (ಭಾಗವತ ಮೂಲ) ಕರ್ಮಣ್ಯೋಗುಣ ವಾ ಕಾಲೋತ್ರವ್ಯತಃ ಸ್ವತಏವವಾ ‖ ಯತೋನಿವರ್ತತೆ ಕರ್ಮಸದೋಷೋ ಕರ್ಮಕಃಸ್ಮೃತಃ‖೯‖ " ಯಾಗಾದಿ ಕರ್ಮಗಳನ್ನು ಮಾಡಲು ಯೋಗ್ಯವಾದ ಕಾಲವೇ ಶುಚಿಯಾದ ಕಾಲವೆನಿಸುವುದು. ಅಕಾಲ ಶುದ್ಧಿಯು ಸ್ವತಃ ಕರ್ಮಣ್ಯವೆಂತಲೂ ದ್ರವ್ಯದಿಂದ ಕರ್ಮಣ್ಯವೆಂತಲೂ ಎರಡುಪ್ರಕಾರ ಅದರಲ್ಲಿ ಸಂಧ್ಯಾಕಾಲ ಮೊದಲಾದವುಗಳು ಸ್ವತಃ ಕರ್ಮ ಯೋಗ್ಯವಾದ ಕಾಲವು. ದ್ರವ್ಯದಿಂದ ಕಾಲಕ್ಕೆ ಕರ್ಮಣ್ಯವೆಂದರೆ ವಸಂತ ಕಾಲ ಮೊದಲಾದವು ಯಾಗಕಾಲವೆಂದು ಹೇಳಿರುವರು. ಇದು ವಸಂತ ಋತುವಿನ ಸಂಬಂಧದಿಂದ ಕಾಲಕ್ಕೆ ಕರ್ಮಣ್ಯ ಪ್ರಾಪ್ತಿಯಾಗುವುದು ಯಾವ ಕಾಲದಲ್ಲಿ ಕರ್ಮ ಮಾಡಬಾರದೆಂದು ನಿಷೇಧಮಾಡಿರುವರೊ ಆ ಕಾಲವು ಸದೋಷವೆಂದು (ಅಶುದ್ಧವೆಂದು) ತಿಳಿಯಬೇಕು. ಅದಾವುದೆಂದರೆ " ನಿಶೀಥೋ ಮಧ್ಯಮಾರಾತ್ರಿಃ ರಾಕ್ಷಸಾನಾಂತು ಗೋಚರಃ " ನಿಶಿಥವಾದ ಮಧ್ಯರಾತ್ರಿಯಲ್ಲಿ ಕರ್ಮವನ್ನು ಮಾಡಿದರೆ ರಾಕ್ಷಸರ ಪಾಲಾಗುವುದು. ಅದು ರಾಕ್ಷಸ ಯೋಗ್ಯವಾದ ಕಾಲವೆಂದು ಹೇಳಿರುವರು. ಆದುದರಿಂದ ಆ ಕಾಲಕ್ಕೆ ಅಶುದ್ಧಿಯನ್ನು ಹೇಳಿದಂತಾಯಿತು. ಅಂದರೆ ಕರ್ಮಕ್ಕೆ ಯೋಗ್ಯವಾದ ಕಾಲವಲ್ಲವೆಂದರ್ಥ. ದ್ರವ್ಯದ ಶುದ್ಧಿಯು ಬಹು ಪ್ರಕಾರವೆಂದು ಹೇಳುತ್ತಾರೆ. ದ್ರವ್ಯಸ್ಯ ಎಂಬ ಶ್ಲೋಕದಿಂದ:—

ದ್ರವ್ಯಸ್ಯ ಶುದ್ಧ ಶುದ್ಧೀಚ ದ್ರವ್ಯೇಣ ವಚನೇನಚ ‖ ಸಂಸ್ಕಾರೇಣಾಥ ಕಾಲೇನ ಮಹತ್ವಾಲ್ಪತಯಾಥವಾ ‖೧೦‖ ಶಕ್ತ್ಯಾ ಶಕ್ತ್ಯಾಚ ವಾಗ್ಬುಧ್ಯಾಸಮೃಧ್ಯಾ ವಾತಥಾತ್ಮನಃ ‖ ಅನ್ಯೇ ಶುದ್ಯಂತಿ ಹಿತಧಾದೇಶಾ ವಸ್ಥಾನು ಸಾರತಃ ‖೧೧‖ ಧಾನ್ಯದಾರ್ವಸ್ಥಿ ತಂತೂನಾಂ ರಸ ತೈಜಸ ಚರ್ಮಣಾಂ | ಕಾಲ ವಾಯ್ವಗ್ನಿ ಮೃತ್ತೋಯೈಃ ಪರಾರ್ಥಿವಾನಾಂ ಯುತಾಯುತೈಃ ‖೧೨‖ " ಇತ್ಯಾದಿ ದ್ರವ್ಯವನ್ನು ಶುದ್ಧಿ ಮಾಡಲು ದ್ರವ್ಯ ಸಂಬಂಧದಿಂದ ಕೆಲವು ದ್ರವ್ಯಗಳಿಗೆ ಕೆಲವು ಪದಾರ್ಥಗಳಿಗೆ ವಾಕ್ಯದಿಂದಲೂ ಸಂಸ್ಕಾರದಿಂದಲೂ ಕಾಲದಿಂದಲೂ ದೊಡ್ಡವಸ್ತು ಸಣ್ಣವಸ್ತುಗಳ ಬೇಧದಿಂದಲೂ ಶಕ್ತಿ ಅಶಕ್ತಿ ವಾ

ಕ್ ಬುದ್ಧಿ ದೇಶಾದಿಗಳಿಂದ ಅನೇಕ ಪ್ರಕಾರವಾಗಿ ಶುದ್ಧಿಯನ್ನು ತಿಳಿಯ ಬೇಕು. ಇದರ ವಿವರ.—ತಾಮ್ರ ಮೊದಲಾದ ಪಾತ್ರೆಗಳಿಗೆ ಉಚ್ಛಿಷ್ಟ ಅಮೇಧ್ಯಾದಿ ಸಂಬಂಧದಿಂದ ಅಶುದ್ಧಿಯಾಗುವುದು. ಆದು ಹುಳಿಹಣ್ಣು ಮೊದಲಾದ ಪದಾರ್ಥಗಳ ಸಂಬಂಧದಿಂದ ಶುದ್ಧಿಯಾಗುವುದು. . . ದೊಡ್ಡ ದೊಡ್ಡ ಭಾಂಡಾದಿಗಳಿಗೆ ಉಚ್ಛಿಷ್ಟಾದಿಗಳಿಂದ ಅಶುದ್ಧಿಯಾದರೆ ಮಹಾತ್ಮರ ಬಾಯಿಂದ ಅದು ಶುದ್ಧವೆಂದು ಬಂದರೆ ಅದು ಶುದ್ಧವಾಗುವುದು. ಆ ಭಾಂಡವು ಎತ್ತಲು, ತೊಳೆಯಲು ಸಾಧ್ಯವಲ್ಲದಿದ್ದರೆ ಮಾತ್ರ ದೊಡ್ಡವರ ವಾಕ್ಯದಿಂದಲೇ ಶುದ್ಧಿಯೆಂದು ಭಾವಿಸಬೇಕು ಕೆಲವು ಪದಾರ್ಥಗಳು ತೊಳೆಯುವುದರಿಂದಲೇ ಶುದ್ಧಿಯಾಗುವವು. ಪುಷ್ಪ ಹಿತ್ತಾಳೆ ತಾಮ್ರ ಮೊದಲಾದವು ತೊಳೆದರೆ ಶುದ್ಧಿಯು ಇಲ್ಲವಾದರೆ ಅಶುದ್ಧವು, ಕೆಲವು ಯಾವಾಗಲು ಅಶುದ್ಧವೆ. ಅವು ಯಾವುವೆಂದರೆ, ಕ್ಷತ್ರಿಯ ವಾಹನ ಅಸಂಸ್ಕೃತವಾಣಿ ಅಂದರೆ ಭಗವತ್ಸಂಬಂಧವಲ್ಲದ ಊರುಹರಟೆಗಳೆಂದರ್ಥ. ಮ್ಲೇಂಛರು ಮೊದಲಾದವರ ಮನೆಯನ್ನು ತೆಗೆದುಕೊಂಡರೆ ಕಾಲದಿಂದ ಶುದ್ಧಿಯಾಗುವುದು. ಅಂದರೆ ಕೆಲವುಕಾಲ ಹಾಳುಹಾಕಿ ಕಾಲಾಂತರದಲ್ಲಿ ಪುಣ್ಯಾಹವಾಚನಾದಿಗಳಿಂದ ಶುದ್ಧಿ ಮಾಡಬೇಕೆಂಬ ಭಾವ. ಅನ್ನಾದಿಗಳನ್ನು ಮಾಡಿದಮೇಲೆ ಒಂದು ಯಾಮದವರೆಗೂ ಶುದ್ಧಿಯು. ಯಾಮಾನಂತರ ಅನ್ನಕ್ಕೆ ಅಶುದ್ಧಿ. ಅನ್ನವೆಂದು ಹೇಳಿದ್ದರಿಂದ ಭಕ್ಷ್ಯಾದಿಗಳು ಇದರಲ್ಲಿ ಸೇರಿಲ್ಲ. ವಿನೋದಕೇನ ಯತ್ಪಕ್ವಂ ಯತ್ಪಕ್ವಂಚಘೃತಾದಿನಾ ॥ ಸರ್ವಂ ತತ್ಫಲವದ್ಗ್ರಾಹ್ಯಂ " ಎಂಬ ಧರ್ಮಶಾಸ್ತ್ರ ವಚನದಿಂದ ನೀರಿಲ್ಲದೆ ಹಾಲು, ತುಪ್ಪ ಮೊದಲಾದವುಗಳಿಂದ ಪಕ್ವವಾದ ಪದಾರ್ಥಗಳನ್ನು ಹಣ್ಣಿನಂತೆ ಸ್ವೀಕರಿಸಬಹುದೆಂದು ಹೇಳಿರುವರು. ಅನ್ನಾದೀನಾಂ ಮಹತ್ವೇಶ್ವಾದಿ ಸ್ಪರ್ಶೇಸಂಸ್ಪ್ರಾಂಶತ್ಯಾಗೇನಶಿಷ್ಟಸ್ಯಶುದ್ಧಿಃ ॥ ಅಥವಾನ್ನಸ್ಯ ಅಲ್ಪತಯಾ ಶನಾಸ್ಪೃಷ್ಟಸ್ಯತಸಾ ಶುದ್ಧಿಃ ಅನ್ನಾದಿಗಳನ್ನು ರಾಶಿಹಾಕಿದುವಾಗ ಯಾವುದಾದರೂ ಒಂದು ಭಾಗದಲ್ಲಿ ನಾಯಿ ಮುಟ್ಟಿಬಿಟ್ಟರೆ ಮುಟ್ಟಿದ ಭಾಗವನ್ನು ಬಿಟ್ಟು ಬಾಕಿ ಉಳಿದ ಭಾಗವನ್ನು ತೆಗೆದುಕೊಳ್ಳಲುಬಹುದು. ಒಂದು ಪಾತ್ರೆಯಲ್ಲಿ ಸ್ವಲ್ಪಅನ್ನವನ್ನಿಟ್ಟಿದ್ದು ನಾಯಿ ಮುಟ್ಟಿಬಿಟ್ಟರೆ ಎಲ್ಲವು ಅಶುದ್ಧಿಯಾಗುವುದು. ಅಲಪಾದ ಇರುವೆ ಮುಂತಾದವು ಮೃತವಾದುದನ್ನು ಮುಟ್ಟಿಕೊಂಡರೆ ಅಶುದ್ಧಿ ಇಲ್ಲ.

ದೊಡ್ಡದಾದ ವಸ್ತು ಮೃತವಾದುದನ್ನು ಮುಟ್ಟಿದರೆ ಅಶುಚಿಯುಂಟು. ಶಕ್ತನಾದ ಪುರುಷನು ಅಶುಚಿತ್ವಕ್ಕೆ ಪ್ರಾಯಶ್ಚಿತ್ತ ರೂಪವಾಗಿ ತೀರ್ಥಯಾತ್ರಾದಿಗಳನ್ನೂ ಚಾಂದ್ರಾಯಣಾದಿ ವ್ರತಾದಿಗಳನ್ನು ಮಾಡಿಕೊಂಡರೆ ಶುದ್ಧನಾಗುವನು. ಜ್ವರಾದಿಗಳಿಂದ ರೋಗಿಯಾದವನಿಗೆ ದೇವತಾರಾಧನೆ ನಿತ್ಯ ಕರ್ಮಾನುಷ್ಠಾನದಿಂದ ಶುದ್ಧನಾಗುವನು. ಬಹಳ ಅಶಕ್ತನಾಗಿದ್ದರೆ ಮಹಾತ್ಮರ ವಚನದಿಂದ ಶುದ್ಧನಾಗುವನು. ಶುದ್ಧನಾದರೂ, ಮಹಾತ್ಮರು ಅಶುದ್ಧನೆಂದು ಬಿಟ್ಟರೆ ಅಶುದ್ಧನೇ ಆಗುವನು. ಅಶುದ್ಧನಾದರೂ ಮಹಾತ್ಮರ ವಾಕ್ಯದಿಂದ ಶುದ್ಧನಾಗುವನು. ಬುದ್ಧಿಗೆ ಶುದ್ಧಿಯನ್ನು ಹೀಗೆ ತಿಳಿಯಬೇಕು ಸುರಪಾನಾದಿಗಳಲ್ಲಿ ಬುದ್ಧಿಯು ಪ್ರವೇಶ ಮಾಡಿದರೆ ಬುದ್ಧಿಗೆ ಅಶುಚಿಯು ಬಂದಿತು. ಹರಿಕಥಾ ಶ್ರವಣಾದಿ ಪುಣ್ಯ ನಿಶ್ಚಯವಾದರೆ ಬುದ್ಧಿಗೆ ಶುದ್ಧಿಯು ತನಗೆ ಇರುವ ಸಂಪತ್ತಿನಿಂದ ಪುರುಷನಿಗೆ ಶುದ್ಧಿಯೂ ಅಶುದ್ಧಿಯೂ ಪ್ರಾಪ್ತವಾಗುವುವು. ಹೇಗೆಂದರೆ ದ್ರವ್ಯವನ್ನು ಸತ್ಪಾತ್ರದಲ್ಲಿ ದಾನಾದಿಗಳನ್ನು ಮಾಡುವುದರಿಂದ ಶುದ್ಧನಾಗುವನು. ಅಸತ್ಪಾತ್ರದಲ್ಲಿ ದಾನ, ವೇಶ್ಯಾ ಮೊದಲಾದವರಲ್ಲಿ ಹಣವನ್ನು ಖರ್ಚು ಮಾಡುವುದರಿಂದ ಅಶುದ್ಧನಾಗುವನು. ಇತ್ಯಾದಿ ಬಹು ವಿಧವಾದ ದ್ರವ್ಯ ಶುದ್ಧಿಯನ್ನು ಹೇಳಿರುವರು. ಕರ್ಮ ಶುದ್ಧಿಯಾಗಬೇಕಾದರೆ ಕರ್ಮಾಂಗ ಶುದ್ಧಿಯು ಅವಶ್ಯಕವು. ಅದೆಂತೆನೆ :— " ಸ್ನಾನ ದಾನ ತಪೋವಸ್ಥಾ ವೀರ್ಯ ಸಂಸ್ಕಾರ ಕರ್ಮಭಿಃ ॥ ಮದ ಭ್ಯಾಸಾನ್ಮನ ಶೌಚಂ ಕೃತ್ವಾ ಕರ್ಮಾಚರೇ ದ್ದ್ವಿಜಃ ॥ ೧೪ ॥ ಮಂತ್ರಸ್ಯ ಚಪರಿ ಜ್ಞಾನಂ ಕರ್ಮ ಶುದ್ಧಿರ್ಮ ದರ್ಪಣಂ ॥ ಧರ್ಮಃ ಸಂಪಾದ್ಯತೇ ಸದ್ಭಿಃ ಅಧರ್ಮಸ್ತು ವಿಪರ್ಯಯೈಃ ॥೧೫॥ ಸ್ನಾನ, ದಾನ, ತಪಸ್ಸು ಇವುಗಳನ್ನು ತನ್ನ ಯೌವನಾದಿ ಅವಸ್ಥೆಗಳನ್ನು ತನ್ನ ಶಕ್ತಿಯನ್ನು ಅನುಸರಿಸಿ ಯೋಗ್ಯತಾನುಸಾರ ಮಾಡಬೇಕು. ಊರ್ಧ್ವಪುಂಡ್ರಧಾರಣ, ಸಂಧ್ಯಾವಂದನೆ ಮೊದಲು ನನ್ನ ಪೂಜಾ ಪರ್ಯಂತರವಾದ ಕರ್ಮಾದಿಗಳನ್ನು ಮಾಡಿ ಇದರಿಂದ ಮನಃ ಶುದ್ಧಿ ಮಾಡಿಕೊಂಡು ಆಮೇಲೆ ತನ್ನಿಷ್ಟವಾದ ವಿಶೇಷ ಕರ್ಮಗಳನ್ನು ಮಾಡಬೇಕು. ಮಂತ್ರಾದಿಗಳನ್ನು ಜಪಿಸಿ ಸಾಧನೆ ಮಾಡಿಕೊಳ್ಳಬೇಕಾದರೆ ಮೊದಲು ಮಂತ್ರಾರ್ಥ ಜ್ಞಾನ ಸಂಪಾದನೆ ಮಾಡಬೇಕು. ಮಾಡಿದ ಕರ್ಮ

ಶುದ್ಧಿಯಾಗಬೇಕಾದರೆ ನನಗೆ ಕರ್ಮಗಳನ್ನರ್ಪಿಸಬೇಕು. ಅಂದರೆ ಶ್ರೀ ಕೃಷ್ಣಾರ್ಪಣವೆಂದು ಸಮರ್ಪಣೆ ಮಾಡಿದರೆ ಕರ್ಮಶುದ್ಧಿಯಾಗುವುದೆಂದು ಹೇಳಿರುವರು. ಇನ್ನೂ ಹೆಚ್ಚಿನ ವಿಷಯವನ್ನು ತಿಳಿಯಬೇಕಾದರೆ ಭಾಗವತ ಏಕಾದಶ ಸ್ಕಂಧದಲ್ಲಿ ತಿಳಿಯತಕ್ಕದ್ದು. ಹೀಗೆ ಪ್ರಾಯಶ್ಚಿತ್ತ ರೂಪವಾಗಿ ಕರ್ಮಗಳ ಶುದ್ಧಿಯನ್ನು ಕಾಲ ದ್ರವ್ಯ ಶುದ್ಧಿಯನ್ನು ಹೇಳಿರುವರು. ಆದರೂ, ಬರೀ ಪ್ರಾಯಶ್ಚಿತ್ತ ರೂಪವಾದ ಕರ್ಮಗಳನ್ನು ಮಾಡಿಕೊಂಡರೂ ಅಜ್ಞಾನಿಗಳಿಗೆ ಇವು ಎಲ್ಲಾ ಪಾಪವೂ ಪರಿಹಾರ ಮಾಡುವಂತಿಲ್ಲ. ಪರಮಾತ್ಮನ ಪಾದಾರವಿಂದದಲ್ಲಿ ಅವಿಚ್ಛಿನ್ನವಾಗಿ ಮನಸ್ಸನ್ನಿಟ್ಟು ಭಜನೆ ಮಾಡದೆ ಬರೀ ಕರ್ಮವನ್ನು ಮಾತ್ರ ಮಾಡಿದರೆ ಅದರಿಂದೇನು ಪ್ರಯೋಜನವಿಲ್ಲ. ಇದರಿಂದ ನಿತ್ಯ ಕರ್ಮಗಳು ಸಂಧ್ಯಾವಂದನಾದಿಗಳು ಮಾಡಲೇಬೇಕು. ಆ ಕರ್ಮಗಳು ಭಗವದರ್ಪಣದಿಂದ ಶುದ್ಧಿಯಾಗುವುವು. ನೈಮಿತ್ತಿಕ ಕರ್ಮಗಳು ದಾನಾದಿಗಳನ್ನು ಮಾಡಿದರೆ ಸ್ವರ್ಗಾದಿ ಭೋಗಕ್ಕೆ ಅನುಕೂಲವೇ ಹೊರತು ಮುಕ್ತಿಗೆ ಸಾಧನವಲ್ಲ. ಆದ್ದರಿಂದಲೇ ದಾಸಾರ್ಯರು ಕರ್ಮವೇ ತಾರಕವೆನ್ನುವರು ಮೂರ್ಖರೆಂದು ಹೇಳಿರುವರು. ಆದ್ದರಿಂದ ಕರ್ಮ ಮಾರ್ಗಕ್ಕಿಂತಲೂ ಜ್ಞಾನ ಮಾರ್ಗವೆ ಉತ್ತಮವೆಂಬ ತಾತ್ಪರ್ಯ.

ಮತ್ತು ಕೆಸರಿಂದ ಕೆಸರ ತೊಳೆದಂತೆ ಕರ್ಮದ ಫಲವೆಂದು ದಾಸರ ವಾಕ್ಯವಿರುವುದು.

ಅವತಾರಿಕೆ.— ಬ್ರಹ್ಮಾದಿಗಳೇ ಪರಮಾತ್ಮನ ಮಹಿಮೆಗಳ ಪಾರಗಾಣದೇ ತಮ್ಮ ಸಾಧನ ಪೂರ್ತಿಗಾಗಿ ಪರಮಾತ್ಮನನ್ನು ಆಶ್ರಯಿಸಿ ಭಕ್ತಿಯಿಂದ ಸ್ತೋತ್ರಮಾಡುತ್ತಿರಲು ಮಿಕ್ಕವರ ಪಾಡೇನೆಂದು ಹೇಳುತ್ತಾರೆ.—

ಕಮಲ ಸಂಭವ ಶರ್ವಶಕ್ರಾ
ದ್ಯಮರರೆಲ್ಲರು ಇವನದುರತಿ
ಕ್ರಮ ಮಹಿಮೆಗಳ ಮನವಚನದಿಂಪ್ರಾಂತಗಾಣದಲೆ ।
ಶ್ರಮಿತರಾಗಿ ಪದಾಬ್ಜ ಕಲ್ಪ
ದ್ರುಮನಳಲನಾಶ್ರಯಿಸಿ ಲಕ್ಷ್ಮೀ
ರಮಣ ಸಂತೈಸೆಂದು ಪ್ರಾರ್ಥಿಪರತಿ ಭಕುತಿಯಿಂದ ॥೧೮॥

ಪದ್ಯಾರ್ಥ.—ಕಮಲಸಂಭವ=ಬ್ರಹ್ಮದೇವರು, ಶರ್ವ=ರುದ್ರದೇವರು, ಶಕ್ರಾದಿ-ಇಂದ್ರ ಮೊದಲಾದ, ಅಮರರೆಲ್ಲರು=ದೇವತೆಗಳೆಲ್ಲರೂ, ಇವನ=ಈ ಪರಮಾತ್ಮನ, ದುರತಿಕ್ರಮ-ಮೀರಲು ಸಾಧ್ಯವಲ್ಲದ ಮಹಿಮೆಗಳ ಮನವಚನದಿಂ=ಮನಸ್ಸಿನಿಂದಲೂ, ವಾಕ್ಯದಿಂದಲೂ, ಪ್ರಾಂತಗಾಣದಲೆ-ಕಡೆಗಾಣದೆ, ಶ್ರಮಿತರಾಗಿ-ಕಷ್ಟವನ್ನು ಹೊಂದಿ, ಪದಾಬ್ಜಕಲ್ಪದ್ರುಮ=ಪಾದಾರವಿಂದವೆಂಬ ಕಲ್ಪವೃಕ್ಷದ, ನೆಳಲು=ನೆಳಲನ್ನು, ಆಶ್ರಯಿಸಿ, ಲಕ್ಷ್ಮೀರಮಣ=ಎಲೈ ಲಕ್ಷ್ಮೀಪತಿಯೇ ! ಸಂಶ್ರೈಸೆಂದು-ರಕ್ಷಣೆ ಮಾಡೆಂದು, ಅತಿಭಕುತಿಯಿಂದ, ಪ್ರಾರ್ಥಿಪರು=ಪ್ರಾರ್ಥಿಸುತ್ತಿರುವರು.

ತಾತ್ಪರ್ಯ.—ಲೋಕೇಶರಾದ ಬ್ರಹ್ಮದೇವರು ರುದ್ರದೇವರು ಇಂದ್ರದೇವರು ಮೊದಲಾದ ಮಹಾನುಭಾವರೆಲ್ಲರೂ ಈ ಪರಮಾತ್ಮನ ಅಪಾರವಾದ ಮಹಾಮಹಿಮೆಗಳನ್ನು ಮನೋವಾಕ್ಕುಗಳಿಂದ ಸ್ತೋತ್ರಮಾಡಿ, ಪಾರಗಾಣದೆ, ಅವನ ಪಾದಾರವಿಂದವೆಂಬ ಕಲ್ಪವೃಕ್ಷದ ನೆಳಲನ್ನು ಆಶ್ರಯಿಸಿ ಲಕ್ಷ್ಮೀಕಾಂತ ! ನಮ್ಮನ್ನು ರಕ್ಷಿಸೆಂದು ಪರಮ ಭಕ್ತಿಯಿಂದ ಪ್ರಾರ್ಥಿಸುವರು. ಹೀಗಿರಲು ಮಿಕ್ಕ ಜನರು ಭಗವಂತನನ್ನು ಆರಾಧಿಸದಿದ್ದರೆ ಗತಿಯಾಗಲಾರದೆಂದು ಬೇರೆಯಾಗಿ ಹೇಳಬೇಕೆ ? ಎಂದಿಗೂ ಒಳ್ಳೇ ಗತಿಯಾಗಲಾರದೆಂಬ ಭಾವ.

ಅವತಾರಿಕೆ.—ತಾರತಮ್ಯ ಜ್ಞಾನದಿಂದ ಭಗವಂತನನ್ನಾರಾಧಿಸುವ ಈ ಮತವನ್ನು ಬಿಟ್ಟು ಅನ್ಯಮತವನ್ನಾಶ್ರಯಿಸುವವರು ಕೆಡುವರೆಂದು ಹೇಳುತ್ತಾರೆ.

**ವಾರಿಚರವೆನಿಸುವುವು ದರ್ದುರ**
**ತಾರಕಗಳೆಂದರಿದು ಭೀಕವ**
**ನೇರಿ ಜಲಧಿಯದಾಟುವೆನು ಎಂಬುವನ ತೆರನಂತೆ ||**
**ತಾರತಮ್ಯ ಜ್ಞಾನಶೂನ್ಯರು**
**ಸೂರಿಗಮ್ಯನ ತಿಳಿಯಲರಿಯದೆ**
**ಸೌರಶೈವಮತಾನುಗರನನುಸರಿಸಿ ಕೆಡುತಿಹರು ||೧೯||**

ಪದ್ಯಾರ್ಥ.—ದರ್ದುರ=ಕಪ್ಪೆಗಳು, ವಾರಿಚರವೆನಿಸುವುವು=ಜಲದಲ್ಲಿ ಸಂಚರಿಸುವ ಪ್ರಾಣಿಗಳೆಂದು ಪ್ರಸಿದ್ಧಿಯಾಗಿರುವವು- ತಾರಕಗಳೆಂದ

ರಿದು- ಆ ಕಪ್ಪೆಗಳೇ ನಮ್ಮನ್ನು ನೀರಿನಿಂದ ಪಾರಗಾಣಿಸಿ ಈ ದಡದಿಂದ ಆ ದಡಕ್ಕೆ ತೆಗೆದುಕೊಂಡುಹೋಗಿ ಬಿಡುವವೆಂದು ನಿಶ್ಚಯಿಸಿ, ಭೇಕವನೇರಿ- ಕಪ್ಪೆಯಮೇಲೇರಿ ಕೂತುಕೊಂಡು, ಜಲಧಿಯ=ಸಮುದ್ರವನ್ನು, ದಾಟು ವೆನೆಂಬುವನ=ದಾಟಹೋಗುವೆನು ಎಂಬ ಮನುಷ್ಯನ ತೆರನಂತೆ ತಾರತಮ್ಯ ಜ್ಞಾನಶೂನ್ಯರು- ತಾರತಮ್ಯಜ್ಞಾನವಿಲ್ಲದವರು, ಸೂರಿಗಮ್ಯನ = ಜ್ಞಾನಿಗ ಳಿಂದ ತಿಳಿಸಿಕೊಳ್ಳಲ್ಪಡುವ ಮಹಿಮೆಯುಳ್ಳ ಶ್ರೀಪರಮಾತ್ಮನನ್ನು, ತಿಳಿ ಯಲರಿಯದೆ- ಹರಿಯೇ ಸರ್ವೋತ್ತಮನು ಬ್ರಹ್ಮಾದಿ ಸಕಲ ಚೇತನರು ಅ ವನಧೀನರೆಂದು ತಿಳಿಯಲು ಯೋಗ್ಯತೆ ಇಲ್ಲದೆ ಸೌರಶೈವ ಮತಾನುಗರನು= ಸೌರ- ಸೂರ್ಯನೆ ಸರ್ವೋತ್ತಮನೆಂದು ಉಪಾಸನೆಮಾಡುವ ಮತ, ಶೈವ= ಶಿವನೇ ಸರ್ವೋತ್ತಮನೆಂದು ಉಪಾಸನೆಮಾಡುವ ಮತ ಇಂತಹಾ ಮತಗ ಳನ್ನು ಅವಲಂಬಿಸಿ ಇರುವವರನ್ನು ಅನುಸರಿಸಿ ಕೆಡುತಿಹರು.

ತಾತ್ಪರ್ಯ.—ಲೋಕದಲ್ಲಿ ಸಮುದ್ರ ಮೊದಲಾದವುಗಳನ್ನು ದಾಟ ಬೇಕಾದರೆ, ತೆಪ್ಪಗಳು ನಾವಿಗಳು ( ಹಡಗುಗಳು ) ಇವುಗಳು ಅದಕ್ಕೆ ಸಾ ಧಕವಾಗಿರುವುವು, ಇದನ್ನರಿಯದೆ ಹಡಗುಗಳೂ ನೀರಿನಲ್ಲಿ ಓಡಾಡುತ್ತಿರು ವವು. ಕಪ್ಪೆಗಳೂ ನೀರಿನಲ್ಲಿ ಓಡಾಡುತ್ತಿರುವವು. ಆದ್ದರಿಂದ ಕಪ್ಪೆಗಳ ಮೇಲೇರಿ ಸಮುದ್ರವನ್ನೇಕೆ ದಾಟಬಾರದೆಂಬ ಕುಯುಕ್ತಿಯಿಂದ ಅವುಗಳ ಮೇಲೆ ಕೂತುಕೊಳ್ಳಲು ಪ್ರಯತ್ನಮಾಡುವವರು ಹೇಗೆ ಕೆಡುವರೋ ಹಾ ಗೆಯೇ ಹರಿಸರ್ವೋತ್ತಮನು, ಅವನಗಿಂತಲೂ ಅನೇಕಗುಣಗಳಿಂದ ಲಕ್ಷ್ಮೀ ದೇವಿಯರು ಕಮ್ಮಿಯಾದವರು. ಬ್ರಹ್ಮವಾಯುಗಳು ಅವರಿಗಿಂತಲೂ ಕಮ್ಮಿ ಯಾದವರೆಂಬ ತಾರತಮ್ಯ ಬೋಧಿಸುವ ಮಧ್ವ ಮತವನ್ನು ಸೂರ್ಯನೇ ಸರ್ವೋತ್ತಮನು, ಶಿವನೇ ಸರ್ವೋತ್ತಮನೆಂದು ಉಪಾಸನೆ ಮಾಡುವವರ ಮತವನ್ನಾಶ್ರಯಿಸಿ ಕೆಡುತ್ತಿರುವರು.

ಕ್ಷುಧೆಯಗೋಸುಗ ಪೋಗಿ ಕಾನನ
ಬದರಿಫಲಗಳಪೇಕ್ಷೆಯಿಂದಲಿ
ಪೊದೆಯೊಳಗೆ ಶಿಗಬಿದ್ದು ಬಾಯ್ಬಿಡಿದವನತೆರನಂತೆ ||

ವಿಧಿಪಿತನ ಪೂಜಿಸದೆ ನಿನ್ನಯ
ಉದರಗೋಸುಗ ಸಾಧುಲಿಂಗ
ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ ||೨೦||

ಪದ್ಯಾರ್ಥ.—ಕ್ಷುಧೆಯುಗೋಸುಗ=ಹಸಿವು ಪರಿಹಾರಮಾಡಿಕೊಳ್ಳುವ ಉದ್ದೇಶವಾಗಿ, ಕಾನನ ಬದರಿ ಫಲಗಳ=ಅಡವಿಗಳಲ್ಲಿರುವ ಬೋರೇಹಣ್ಣುಗಳ, ಅಪೇಕ್ಷೆಯಿಂದಲಿ-ಭಕ್ಷಿಸಬೇಕೆಂಬ ಅಪೇಕ್ಷೆಯಿಂದ, ಪೋಗಿ=ಅಡವಿಗಳಿಗೆ ಹೋಗಿ, ಪೊದೆಯೊಳಗೆ, ಸಿಗಬಿದ್ದು, ಬಾಯ್ದೆರೆದವನತೆರನಂತೆ=ಬಾಯಿಬಿಡುವನಂತೆ, ವಿಧಿಪಿತನ-ಬ್ರಹ್ಮದೇವರ ತಂದೆಯಾದ ಶ್ರೀಪರಮಾತ್ಮನನ್ನು, ಪೂಜಿಸದೆ, ನಿನ್ನಯ, ಉದರಗೋಸುಗ=ಹೊಟ್ಟೆಗಾಗಿ ಸಾಧುಲಿಂಗಪ್ರದರ್ಶಕರ-ಸಾಧುಗಳಂತೆ ವೇಷಧಾರಿಗಳಾಗಿ, ಭಗವದ್ಭಕ್ತಿ ಲೇಶವೂ ಇಲ್ಲದ ಜ್ಞಾನ ಶೂನ್ಯರನ್ನು, ಆರಾಧಿಸುತ-ಸೇವಿಸುತ್ತ, ಭವದೊಳಗೆ=ಸಂಸಾರದೊಳಗೆ, ಬಳಲದಿರು-ಕ್ಲೇಶಪಡಬೇಡ.

ತಾತ್ಪರ್ಯ.—ಮನುಷ್ಯನು ತನಗೆ ಹಸಿವಾದರೆ ಊರೊಳಗೆ ಶುದ್ಧವೃತ್ತಿಯನ್ನು, ಅಥವಾ ಮಧುಕರ ವೃತ್ತಿಯನ್ನಾಗಲೀ, ಅಂತು ಊರೊಳಗೆ ಅನ್ನವನ್ನು ಹುಡುಕುವುದು ಬಿಟ್ಟು ಅರಣ್ಯದಲ್ಲಿರುವ ಬೋರೇಹಣ್ಣಿಗೆ ಆಶೆ ಬಿಟ್ಟು ಪೊದೆಯೊಳಗೆ ಸಿಗಬಿದ್ದು ಕಷ್ಟಪಡುವವನಂತೆ, ಬ್ರಹ್ಮದೇವರಿಗೆ ತಂದೆಯಾದ ಸಕಲ ಜಗದ್ರಕ್ಷಕನಾದ ಶ್ರೀಪರಮಾತ್ಮನನ್ನು ಆರಾಧಿಸದೆ ನೋಡಿದವರಿಗೆ ಮಹಾ ಸಾಧುಗಳಂತೆ ಒಳ್ಳೇ ವೇಷಧಾರಿಗಳ ವೇಷಕ್ಕೆ ಮೋಸ ಹೋಗಿ ಅವರನ್ನು ಆರಾಧನೆ ಮಾಡಿ ನಿನ್ನ ಹೊಟ್ಟೆತುಂಬಿಕೊಳ್ಳುವ ಪ್ರಯತ್ನಮಾಡಿ ಸಂಸಾರದಲ್ಲಿ ಕಷ್ಟವನ್ನನುಭವಿಸಬೇಡ.

ಭಗವಂತನನ್ನು ಆರಾಧಿಸಿ ಐಹಿಕ ಸುಖವನ್ನಪೇಕ್ಷಿಸದೆ ಮುಕ್ತಿಗೆ ಮುಖ್ಯ ಸಾಧನವಾದ ಭಕ್ತಿಯನ್ನೇ ಬೇಡಬೇಕೆಂದು ಹೇಳುತ್ತಾರೆ.—

ಕ್ಷೋಣಿಪತಿ ಸುತನೆನಿಸಿ ಕೈದು
ಗ್ರಾಣಿಗೊಡ್ಡುವತೆರದಿ ಸುಮನಸ
ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ ||
ವೇಣುಗಾನಪ್ರಿಯನ ಐಹಿಕ ಸು
ಖಾನುಭವ ಬೇಡದಲೆ ಲಕ್ಷ್ಮೀ
ಪ್ರಾಣನಾಥನ ಪಾದಭಕುತಿಯ ಬೇಡುಕೊಂಡಾಡು ||೨೧||

ಪದ್ಯಾರ್ಥ.—ಕ್ಷೋಣಿಪತಿ=ಭೂಮಿಯನ್ನಾಳುವ ಮಹಾರಾಜನ, ಸುತನೆನಿಸಿ=ಮಗನೆನಿಸಿಕೊಂಡು, ದುಗ್ಗಾಣಿಗೆ=ಒಂದು ದುಡ್ಡಿಗಾಗಿ, ಕೈಯೊಡ್ಡುವತೆರದಿ=ಬಿಕ್ಷೆ ಬೇಡುವಂತೆ, ಸುಮನಸಧೇನು=ದೇವಹಸುವಾದ ಕಾಮಧೇನು, ಮನೆಯೊಳಗಿರಲು, ಗೋಮಯ-ಸಗಣಿಯನ್ನು, ಬಯಸುವಂದದಲಿ-ಅಪೇಕ್ಷಿಸುವಂತೆ, ವೇಣುಗಾನಪ್ರಿಯನ=ವೇಣುಗಾನ ಪ್ರಿಯನಾದ ಶ್ರೀಕೃಷ್ಣನನ್ನು, ಆರಾಧನೆಮಾಡಿ, ಐಹಿಕಸುಖಾನುಭವಬೇಡದಲಿ=ವಿಷಯಭೋಗಾದಿಸುಖಗಳನ್ನು ಕೊಡೆಂದು ಬೇಡಿಕೊಳ್ಳದೆ, ಲಕ್ಷ್ಮೀಪ್ರಾಣನಾಥನ=ಲಕ್ಷ್ಮೀದೇವಿಯರಿಗೂ, ಮುಖ್ಯಪ್ರಾಣದೇವರಿಗೂ ಸಹ ಸ್ವಾಮಿಯಾದ ಶ್ರೀಪರಮಾತ್ಮನ, ಪಾದಭಕ್ತಿಯ=ಪಾದಾರವಿಂದಗಳಲ್ಲಿ, ಭಕ್ತಿಯನ್ನು ಸ್ತೋತ್ರಮಾಡು.

ತಾತ್ಪರ್ಯ.—ಮಹಾರಾಜನ ಮಗನೆಂದೆನಿಸಿ ಎರಡು ದಂಬಡಿಗಳಿಗೆ ಕೈಯೊಡ್ಡಿದರೆ ಹೇಗೋ, ಅಥವಾ, ಮನೆಯೊಳಗೆ ಕಾಮಧೇನುವಿರಲು ಸಗಣಿಬೇಕೆಂದು ಮನೆಮನೆ ತಿರುಗುವವನ ಯೋಗ್ಯತೆ ಹೇಗಿರುವದೋ ಹಾಗೆ ಲಕ್ಷ್ಮೀಪತಿಯಾದ ಭಗವಂತನ ಅನುಗ್ರಹವನ್ನು ಪಡೆದು ಐಹಿಕಸುಖವನ್ನು ಬೇಡುವದೂ ಸಹ ಮೇಲಿನ ಉಪಮಾನಗಳಿಗೆ ಸರಿಹೋಗುವದು. ಮಹಾರಾಜನ ಮಗನಿಗೆ ಮನೆಯಲ್ಲಿ ಕಮ್ಮಿಯೇನು ? ಅಂತಹವನು ಎರಡುಕಾಸಿಗೆ ಕೈಯೊಡ್ಡಿದರೆ ಅವನ ಯೋಗ್ಯತೆ ಎಷ್ಟರ ಮಟ್ಟಿಗೆ ಹಾಸ್ಯಾಸ್ಪದವಾಗುವದೆಂದು ಯೋಚಿಸಿರಿ- ಮತ್ತು ಬೇಡಿದುದನ್ನು ಕೊಡುವ ಕಾಮಧೇನುವನ್ನು ಮನೆಯಲ್ಲಿಟ್ಟುಕೊಂಡು ಸಗಣಿಗಾಗಿ ಮನೆಮನೆ ತಿರುಗುವವರ ಯೋಗ್ಯತೆ ಎಂತಿಹುದು ! ಇದರಂತೆಯೇ ಮುಕ್ತಿಯನ್ನು ಕೊಟ್ಟು ಸ್ವರೂಪಾನಂದವನ್ನು ಅಭಿವ್ಯಕ್ತಿಮಾಡಿ ಕೊಡುವ ಪರಮಾತ್ಮನನ್ನು ಅಲ್ಪವಾದ, ನಶ್ವರವಾದ ಐಹಿಕಸುಖವನ್ನು ಬೇಡುವವನ ಯೋಗ್ಯತೆಯು ಅಷ್ಟೇ ಆಗಿರುವದು. ಆದ್ದರಿಂದ ಇಂತಹಾ ಅಲ್ಪವನ್ನು ಅಪೇಕ್ಷಿಸದೇ ಶ್ರೀಪರಮಾತ್ಮನನ್ನು ಆರಾಧನೆಮಾಡಿ ಅವನಲ್ಲಿ ದೃಢವಾದ ಭಕ್ತಿಯನ್ನೇ ಬೇಡಬೇಕೆಂದು ತಾತ್ಪರ್ಯ.

ವಿಷ್ಣುಪಂಚಕ ವ್ರತೋಪವಾಸವನ್ನು ಮಾಡುವವರು ಹೇಗೆ ದರ್ಶಪೌರ್ಣಮಾಸಾದಿಗಳ ಉಪವಾಸಗಳನ್ನು ಬಿಡದೆ ಮಾಡುವರೋ ಹಾಗೆ

ಮಾಡಿದ ವಿಧಿ ನಿಷೇಧಕರ್ಮಗಳನ್ನು ಯಾವ ಯೋಚನೆಯನ್ನೂ ಮಾಡದೇ ಪರಮಾತ್ಮನಿಗರ್ಪಿಸಬೇಕೆಂದು ಹೇಳುತ್ತಾ, ಪ್ರಸಕ್ತಿಯಿಂದ ವಿಷ್ಣುಪಂಚಕ ದಲ್ಲಿ ಪೌರ್ಣಮಿ ಮೊದಲಾದ ಉಪವಾಸಗಳನ್ನು ಎಷ್ಟು ಘಳಿಗೆಗಳಿದ್ದರೆ ಮಾ ಡಬೇಕೆಂಬ ವಿಧಿಯನ್ನೂ ಸಹ ಎರಡು ಪದ್ಯಗಳಿಂದ ಸೂಚಿಸುತ್ತಾರೆ.—

**ಉದಯವ್ಯಾಪಿಸಿ ದರ್ಶಪೌರ್ಣಿಮ**
**ದಧಿಕಯಾಮವು ಶ್ರವಣವಭಿಜಿತು**
**ಸದನಯ್ದಿದಿರೆ ಮಾಳ್ಪತೆರದಂದದಲಿ ಹರಿಸೇವೆ**
**ವಿಧಿನಿಷೇಧಗಳೇನು ನೋಡದೆ**
**ವಿಧಿಸುತಿರು ನಿತ್ಯದಲಿ ತನ್ನಯ**
**ಸದನದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು ॥೨೨॥**

ಪದ್ಯಾರ್ಥ.—ಉದಯವ್ಯಾಪಿನಿ=ಉದಯಕಾಲದಲ್ಲಿ ವ್ಯಾಪ್ತಿಯಿರು ವ, ದರ್ಶ–ಅಮಾವಾಸ್ಯೆಯು. ಅಧಿಕಯಾಮವು–ಒಂದು ಯಾಮಕ್ಕೆ ಸ್ವ ಲ್ಪ ಹೆಚ್ಚಿನ ಘಳಿಗೆಗಳಿರುವ, ಪೌರ್ಣಿಮ–ಹುಣ್ಣಿಮೆಯೂ, ಅಭಿಜಿನ್ಮುಹೂ ರ್ತವನ್ನು ವ್ಯಾಪಿಸಿರುವ ಅಂದರೆ 12 ಘಳಿಗೆಗಳಿಗೆಮೇಲೆ ವ್ಯಾಪಿಸಿರುವ ಶ್ರವಣ, ಇಂತಹ ದಿವಸಗಳಲ್ಲಿ ವಿಷ್ಣುಪಂಚಕ ಉಪವಾಸವನ್ನು ಮಾಡುವ ವರು, ಹರಿಸೇವೆ=ಉಪವಾಸರೂಪವಾದ ಹರಿಪೂಜೆಯನ್ನು, ಮಾಳ್ಪತೆರ ದಂದದಲಿ–ಮಾಡುವಂತೆ ವಿಧಿನಿಷೇಧಗಳೇನು ನೋಡದೆ ಇದು ಒಳ್ಳೇಯ ದು ಇದು ಕೆಟ್ಟದ್ದು ಎಂದು ಯೋಚಿಸದೇ ನೀನು ಮಾಡಿದ ಕಾರ್ಯಗಳನ್ನು, ನಿತ್ಯದಲಿ ವಿಧಿಸುತಿರು–ಪರಮಾತ್ಮನಿಗರ್ಪಿಸುತಿರು, ಭಕ್ತವತ್ಸಲನು=ಭಕ್ತ ರಲ್ಲಿ ಪರಮವಾತ್ಸಲ್ಯವುಳ್ಳ ಶ್ರೀಹರಿಯು, ತನ್ನಯ, ಸದನದೊಳಗೆ–ಮನೆ ಯೊಳಗೆ, ಇಂಬಿಟ್ಟು=ಚೆನ್ನಾಗಿ ಇಟ್ಟುಕೊಂಡು, ಸಲಹುವನು=ರಕ್ಷಿಸುವನು

ತಾತ್ಪರ್ಯ.—ವಿಷ್ಣುಪಂಚಕ ಉಪವಾಸ ಮಾಡುವವರು ತಿಂಗಳಿಗೆ ಐದು ವುಪವಾಸಗಳನ್ನು ಮಾಡಬೇಕು. ಅವುಗಳಲ್ಲಿ ಎರಡು ಏಕಾದಶಿ ಪೌರ್ಣಿಮೆ, ಅಮಾವಾಸ್ಯೆ ಶ್ರವಣ, ಹೀಗೆ 5 ವುಪವಾಸಗಳಾಗುವವು. ಏಕಾದಶಿ ವಿಷಯದಲ್ಲಿ ದಶಮೀ ವೇಧೆಯು ಅರುಣೋದಯದಲ್ಲಿ ಬಂದರೂ

ಮಾರನೆಯ ದಿವಸವೇ ಏಕಾದಶೀ ಮಾಡಬೇಕೆಂದು ಸರ್ವಸಾಮಾನ್ಯವಾಗಿ ಸಕಲ ವೈಷ್ಣವರಿಂದಲೂ ಅನುಷ್ಠಿತವಾಗಿರುವದು. ಮಿಕ್ಕ 3 ಉಪವಾಸಗಳು "ಉದಯವ್ಯಾಪಿನೀ ದರ್ಶಾಪೌರ್ಣಮಾಸೀತುಯಾಮಿಕಾ, ಮಧ್ಯಾಹ್ನವ್ಯಾಪಿನೀ ಶ್ರೋಣಾಪ್ರೋಕ್ತಾಪ್ಯಾವಿಷ್ಣುತತ್ಪರೈ" ಎಂಬ ಧರ್ಮಶಾಸ್ತ್ರ ವಾಕ್ಯವನ್ನನುಸರಿಸಿ ಸೂರ್ಯೋದಯವ್ಯಾಪಿನಿ ಉಳ್ಳ ಅಮಾವಾಸ್ಯೆಯಲ್ಲೂ (7|| ಘಳಿಗೆ) ಒಂದು ಯಾಮದವರೆಗೂ ವ್ಯಾಪಿಸಿಕೊಂಡಿರುವ ಪೌರ್ಣಮೆಯಲ್ಲೂ, ಮಧ್ಯಾಹ್ನವೆಂದರೆ ಪ್ರಾತಃಕಾಲ 6 ಘಳಿಗೆ, ಸಂಗಮಕಾಲ 6 ಘಳಿಗೆ ಹೀಗೆ 12 ಘಳಿಗೆಗಳು ಕಳೆದರೆ ಮಧ್ಯಾಹ್ನ ಬರುವುದು. ಮಧ್ಯಾಹ್ನವ್ಯಾಪಿನಿ ಉಳ್ಳ ಶ್ರವಣದಲ್ಲೂ ಉಪವಾಸಮಾಡಬೇಕೆಂದು ನಿಶ್ಚಯವಾಗುವುದು. ಈ ಪ್ರಕಾರ ಆ ದಿನಗಳಲ್ಲಿ ವಿಷ್ಣುಪಂಚಕಮಾಡುವವರು ಹೇಗೆ ಉಪವಾಸವನ್ನು ಬಿಡದೆ ಮಾಡುವರೋ ಹಾಗೆ ನೀನು ಮಾಡುವ ವಿಧಿ ನಿಷೇಧ ಕರ್ಮಗಳನ್ನೂ ಕೂಡ ಯೋಚಿಸದೆ ಪರಮಾತ್ಮನಿಗರ್ಪಿಸು. ಪರಮಾತ್ಮನು ತನ್ನ ಲೋಕವನ್ನು ನಿನಗೆ ಕೊಟ್ಟು ಆದರದಿಂದ ನಿನ್ನನ್ನು ರಕ್ಷಿಸುವನು.

ಅವತಾರಿಕೆ.— ವಿಷ್ಣುಪಂಚಕ ಮಾಡುವವರಿಗೆ ೬ ಉಪವಾಸದ ವಿಧಿ ಇದ್ದರೂ ಕೆಲವು ದಿವಸದಲ್ಲಿ ಶ್ರವಣಾದಿ ಉಪವಾಸಗಳು ತಪ್ಪಿಹೋಗುವುದುಂಟು. ಆ ಶ್ರವಣ ಉಪವಾಸವನ್ನು ಬಿಟ್ಟುಬಿಡುವಂತೆ ಅನ್ಯಾಯದಿಂದ ಎಷ್ಟು ಹಣಬಂದರೂ ಅದಕ್ಕೆ ಮನಸ್ಸುಮಾಡಬಾರದೆಂದು ಹೇಳುತ್ತಾರೆ.—

**ನಂದಿವಾಹನ ರಾತ್ರಿಸಾಧನೆ**
**ಬಂದ ದ್ವಾದಶಿ ದಶಮಿ ಪೈತೃಕೆ**
**ಸಂದಿಸಿದ ಸಮಯದಲಿ ಶ್ರವಣವತ್ಯಜಿಸುವಂತೆ ಸದಾ ||**
**ನಿಂದ್ಯದಿಂದಲಿ ಬಂದದ್ರವ್ಯವ**
**ಕಣ್ದೆರದು ನೋಡದಲೆ ಶ್ರೀಮುದ**
**ನಂಗತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ||೨೩||**

ಪದ್ಯಾರ್ಥ.—ನಂದಿವಾಹನರಾತ್ರಿ – ಶಿವರಾತ್ರಿಯ ದಿವಸದಲ್ಲೂ, ಸಾಧನ ಬಂದ ದ್ವಾದಶಿ = ಅಲ್ಪ ದ್ವಾದಶಿ ಇರುವ ದಿವಸದಲ್ಲೂ ದಶಮಿ= ದಶಮೀ ದಿವಸದಲ್ಲೂ, ಪೈತೃಕ – ಪಿತೃ ಶ್ರಾದ್ಧದ ದಿವಸದಲ್ಲೂ ಸಂಧಿ

ಸಿದ ಸಮಯದಲಿ=ಶ್ರವಣನಕ್ಷತ್ರವು ಬಿದ್ದಪಕ್ಷದಲ್ಲಿ, ಶ್ರವಣವ=ಆ ದಿವಸದ ಶ್ರವಣೋಪಾಸವನ್ನು, ತ್ಯಜಿಸುವಂತೆ=ಬಿಟ್ಟುಬಿಡುವಂತೆ, ಸದಾ, ನಿಂದ್ಯದಿಂದಲಿ-ನಿಷಿದ್ಧಾಚರಣೆಯಿಂದ, ಬಂದ ದ್ರವ್ಯವ ಕಣ್ದೆರೆದು ನೋಡದಲೆ, ಶ್ರೀಮದಾನಂದತೀರ್ಥಾಂತರ್ಗತನ=ಶ್ರೀಮನ್ಮಧ್ವಾಚಾರ್ಯರ ಅಂತರ್ಗತನಾದ ಶ್ರೀಪರಮಾತ್ಮನನ್ನು, ಸರ್ವತ್ರ ಭಜಿಸುತ್ತಿರು.

ತಾತ್ಪರ್ಯ.—ವಿಷ್ಣುಪಂಚಕದ 5 ಉಪವಾಸಗಳಲ್ಲಿ ಶ್ರವಣೋಪವಾಸವು ಕೆಲವು ದಿವಸದಲ್ಲಿ ಮಾಡಬಾರದೆಂದು ಪ್ರಮಾಣವಿರುವುದು. ಬ್ರಹ್ಮಾಂಡಪುರಾಣದಲ್ಲಿ " ಪಿತ್ರಬ್ದೇರೌದ್ರಿಕಾಬ್ದೇಚ ಸ ಧನದ್ವಾದಶೀದಿನೆ || ದಶಮ್ಯಾಂಚೈವ ವಿಬುಧೈರ್ನೋಪೋಷ್ಯಂ ವಿಷ್ಣುತತ್ಪರೈಃ " ತಂದೆತಾಯಿಗಳ ಪ್ರತಿಸಾಂವತ್ಸರೀಕ ಶ್ರಾದ್ಧದ ದಿವಸದಲ್ಲೂ ಪ್ರತಿದಿವಸದಲ್ಲೂ ಬರುವ ಮಹಾಶಿವರಾತ್ರಿಯಲ್ಲೂ, ದ್ವಾದಶಿ 12 ಘಳಿಗೆಗಳಿಗೆ ಕಮ್ಮಿಯಿರುವ ದಿವಸದಲ್ಲೂ ದಶಮಿದಿವಸದಲ್ಲೂ, ಶ್ರವಣಬಂದರೆ ವಿವೇಕಿಗಳು ಉಪವಾಸವಮಾಡಬಾರದೆಂದು ಹೇಳಿರುವರು. ವಿಷ್ಣುಪಂಚಕ ನಿರ್ಣಯದಲ್ಲಿ ವಿಷ್ಣುವ್ರತಾಭಿಮಾನಾದ್ವಾ ಶ್ರವಣೇಚಾಭಿಮಾನತಃ || ಯಃ ಕುರ್ಯಾದ್ವಿಷ್ಣು ಭಕ್ತಸ್ತು ವಿಷ್ಣುದ್ರೋಹೀನ ಸಂಶಯಃ || ಸತತ್ಫಲಂ ಶಿವೇದತ್ವಾಯಾತಿಘೋರಂ ಮಹತ್ತಮಃ " ವಿಷ್ಣುವ್ರತವೆಂಬಭಿಮಾನದಿಂದಾಗಲೀ, ಶ್ರವಣದಭಿಮಾನದಿಂದಾಗಲಿ ಶಿವರಾತ್ರಿಯಲ್ಲಿ ಶ್ರವಣನಿಮಿತ್ತವಾದ ಉಪವಾಸವನ್ನು ಯಾವ ವಿಷ್ಣುಭಕ್ತನು ಮಾಡುವನೋ ಅವನು ವಿಷ್ಣುದ್ರೋಹಿಯೆನಿಸುವನು. ಆ ಉಪವಾಸದ ಫಲವನ್ನು ಈಶ್ವರನಿಗೆ ಕೊಟ್ಟು ಇವನು ಘೋರವಾದ ನರಕವನ್ನು ಸೇರುವನು ಎಂದು ಹೇಳಿರುವರು, ಮತ್ತೂ " ವಿಷ್ಣುವ್ರತಸ್ತೋರಾಜೇಂದ್ರ ಮಾತಾ ಪಿತ್ರೋರ್ಮೃತೇಹನಿ || ಕುರ್ಯಾದ್ವಿಧಿವಚ್ಛ್ರಾದ್ಧಂ ಶೇಷಂಭುಂಜೀತಬಂಧುಭಿಃ || ಅನ್ಯಥಾ ಕರ್ಮ ಲೋಪಃಸ್ಯಾದ್ವ್ರತಭಂಗೋಪಿಜಾಯತೆ " ವಿಷ್ಣುಪಂಚಕವ್ರತವನ್ನು ಮಾಡುವವನು ತನ್ನ ತಾಯಿತಂದೆಗಳ ಶ್ರಾದ್ಧದದಿವಸದಲ್ಲಿ, ಶ್ರವಣ, ಪೌರ್ಣಿಮೆ, ಅಮಾವಾಸ್ಯೆ ಬಿದ್ದರೆ ಆ ದಿವಸ ವಿಧ್ಯುಕ್ತಪ್ರಕಾರ ಶ್ರಾದ್ಧವನ್ನುಮಾಡಿ ಆ ಶೇಷವನ್ನು ತನ್ನ ಬಂಧುಗಳಿಂದ ಕೂಡಿ ತಾನು ಭೋಜನಮಾಡಬೇಕು. ಹಾಗಿಲ್ಲವಾದರೆ ಕರ್ಮಲೋಪವು ಬರುವುದು. ವ್ರತಭಂಗವು ಆಗುವುದು ಎಂದು ಹೇಳಿರುವರು. ಇದೇ ಅಭಿಪ್ರಾ

ಯುವನ್ನೇ ದಾಸಾರ್ಯರು ಇಲ್ಲಿ ಹೇಳುತ್ತಾರೆ.– ಹೇಗೆ ಶ್ರವಣೋಪಾಸವು ವಿಷ್ಣುಪಂಚಕದಲ್ಲಿ ಮುಖ್ಯವಾದರೂ ಕೆಲವು ದಿವಸಗಳಲ್ಲಿ ಬಿಟ್ಟುಬಿಡುವರೋ ಹಾಗೆಯೇ ವಿಧಿನಿಷೇಧಗಳನ್ನು ಶ್ರೀಹರಿಗೆ ಸಮರ್ಪಣೆ ಮಾಡಬಹುದಾದರೂ, ನೀಚ ಸೇವಾದಿಗಳಿಂದ ದ್ರವ್ಯ ಸಂಪಾದನೆ ಮಾಡುವುದನ್ನು ಬಿಟ್ಟು ಅಂತಹ ದ್ರವ್ಯವನ್ನು ಕಣ್ಣಿಂದಾದರೂ ನೋಡಬಾರದು. ಇಂತಹಾ ನಿಯಮದಿಂದ ಶ್ರೀಮದಾನಂದತೀರ್ಥರ ಅಂತರ್ಯಾಮಿಯಾದ ಶ್ರೀಪರಮಾತ್ಮನನ್ನು ಭಜಿಸಬೇಕೆಂಬ ತಾತ್ಪರ್ಯ.

ಜ್ಞಾನಜ್ಞೇಯ ಜ್ಞಾತೃ ಎಂಬಭಿ
ಧಾನದಿಂಬುಧ್ಯಾದಿಗಳಧಿ
ಷ್ಠಾನದಲಿ ನೆಲಸಿದ್ದು ಕರೆಸುವತತ್ತದಾಹ್ವಯದಿ ||
ಭಾನುಮಂಡಲಗ ಪ್ರದರ್ಶಕ
ತಾನೆನಿಸಿ ವಶನಾಗುವನು ಶುಕ
ಶೌನಕಾದಿಮುನೀಂದ್ರ ಹೃದಯಾಕಾಶಗತಚಂದ್ರ ||೨೪||

ಪದ್ಯಾರ್ಥ.— ಜ್ಞಾನ=ತಿಳಿವಳಿಕೆ, ಜ್ಞೇಯ=ತಿಳಿದುಕೊಳ್ಳಬೇಕಾದ ವಸ್ತು, ಜ್ಞಾತೃ=ತಿಳಿವಳಿಕೆ ಉಳ್ಳವನು, ಎಂಬಭಿದಾನದಿಂ=ಈ ಹೆಸರುಗಳಿಂದ, ಬುಧ್ಯಾದಿಗಳ ಅಧಿಷ್ಠಾನದಲಿ=ಬುದ್ಧಿ ಜ್ಞಾನೇಂದ್ರಿಯ ಮೊದಲಾದ ಅಧಿಷ್ಠಾನದಲಿ ನೆಲಸಿದ್ದು=ಅವುಗಳಲ್ಲಿ ವಾಸವಾಗಿದ್ದು, ತತ್ತದಾಹ್ವಯದಿ–ಆಯಾ ಹೆಸರುಗಳಿಂದ, ಕರೆಸುವ=ಕರೆಸುವನು, ಶುಕಶೌನಕಾದಿ ಮುನೀಂದ್ರ–ಶುಕಾಚಾರ್ಯರು, ಶೌನಕ ಮೊದಲಾದ ಋಷೀಶ್ವರರ, ಹೃದಯಾಕಾಶಗತಚಂದ್ರ=ಹೃದಯಾಕಾಶವಾಸಿಯಾದ ಚಂದ್ರನಂತೆ ಆಹ್ಲಾದ ಗುಣವುಳ್ಳ, ಭಾನುಮಂಡಲಗ=ಸೂರ್ಯಮಂಡಲವಾಸಿಯಾಗಿ ಪ್ರದರ್ಶಕ ತಾನೆನಿಸಿ–ಜ್ಞಾನೋಪದೇಷ್ಟನೆಂದೆನಿಸಿ, ವಶನಾಗುವನು = ಭಕ್ತಿಯಿಂದ ಧ್ಯಾನಮಾಡುವವರಿಗೆ ವಶನಾಗುವನು.

ತಾತ್ಪರ್ಯ.— ಶ್ರೀಪರಮಾತ್ಮನು ಜ್ಞಾನಪಂಚಕನಾಗಿ ತಿಳಿದುಕೊಳ್ಳಲು ಯೋಗ್ಯನಾದ ವಸ್ತುವಿನಲ್ಲಿ ತದ್ರೂಪನಾಗಿಯೂ, ತಿಳಿವಳಿಕೆ ಉಳ್ಳವರಲ್ಲಿ ತದ್ರೂಪಿಯಾಗಿಯೂ ಆಯಾ ಹೆಸರುಗಳಿಂದ ಜ್ಞಾನೇಂದ್ರಿಯಗಳಲ್ಲಿದ್ದು ಆಯಾ ಹೆಸರುಗಳಿಂದ ಕರೆಸಿಕೊಳ್ಳುತ್ತಾ ಮಹಾ ಜ್ಞಾನಿಗ

ಳಾದ ಶುಕಾಚಾರ್ಯರು. ಶೌನಕಾದಿಮಹರ್ಷಿಗಳು ಮೊದಲಾದವರ ಹೃದಯಾಕಾಶವಾಸಿಯಾಗಿ ಅವರಿಗೆ ಚಂದ್ರನ ದರ್ಶನದಿಂದ ಆನಂದವಾಗುವಂತೆ ಸುಖಪಡಿಸುತ್ತಾ ಸೂರ್ಯಮಂಡಲ ಮಧ್ಯವರ್ತಿಯಾಗಿ ಸವಿತೃನಾಮಧೇಯದಿಂದ ಜ್ಞಾನಬೋಧಕನಾಗಿ ತನ್ನನ್ನು ಆರಾಧನೆ ಮಾಡುವವರಿಗೆ ವಶನಾಗುವನು.

ಅವತಾರಿಕೆ.--ಶ್ರೀಪರಮಾತ್ಮನು ತನ್ನನ್ನೇ ನಂಬಿ ಸ್ತುತಿಸುವವರ ಮನೋಭೀಷ್ಟವನ್ನು ಪೂರ್ಣಮಾಡುವನೆಂದು ಹೇಳುತ್ತಾರೆ.—

**ಶ್ರೀಮನೋರಮ ಮರುತೇಶತ್ರಿಕಕು**
**ಬ್ಧಾಮ ಸತ್ಕಲ್ಯಾಣ ಗುಣನಿ**
**ಸ್ಸೀಮ ಪಾವನನಾಮ ದಿವಿಜೋದ್ದಾಮ ರಘುರಾಮ।**
**ಪ್ರೇಮಪೂರ್ವಕ ನಿತ್ಯ ತನ್ನ ಮ**
**ಹಾಮಹಿಮೆಗಳ ಸ್ತುತಿಸುವವರಿಗೆ**
**ಸುಧಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ ॥೨೫॥**

ಪದ್ಯಾರ್ಥ.---ಶ್ರೀಮನೋರಮ=ಲಕ್ಷ್ಮೀದೇವಿಯರ ಮನಸ್ಸಿಗೆ ಆನಂದವನ್ನು ಕೊಡಿಸುವವನು, ಮರುತೇಶ=ಮುಖ್ಯಪ್ರಾಣದೇವರಿಗೆ ಸ್ವಾಮಿಯಾದವನು, ತ್ರಿಕಕುಬ್ಧಾಮ=ಶ್ವೇತದ್ವೀಪ, ಅನಂತಾಸನ ವೈಕುಂಠವೆಂಬ ೩ ಸ್ಥಾನದಲ್ಲಿ ಮನೆಯುಳ್ಳವನು, ನಿಸ್ಸೀಮ=ಎಲ್ಲೆ ಇಲ್ಲದ, ಗುಣ=ಉತ್ತಮವಾದ ಮಂಗಳಕರವಾದ ಗುಣಗಳುಳ್ಳವನು, ಪಾವನನಾಮ=ಪವಿತ್ರವಾದ ಹೆಸರುಳ್ಳವನು. ದಿವಿಜೋದ್ಧಾಮ=ಸಕಲ ದೇವತೆಗಳಿಗಿಂತಲೂ ಉತ್ತಮನು, ರಘುರಾಮ=ರಘುವಂಶದಲ್ಲಿ ರಾಮನಾಮಕನಾಗಿ ಅವತರಿಸಿದವನು, ಇಂತಹಾ ಶ್ರೀಪರಮಾತ್ಮನು, ಪ್ರೇಮಪೂರ್ವಕ=ಭಕ್ತಿಯಿಂದ ತನ್ನ ಮಹಾಮಹಿಮೆಗಳ, ಶ್ರುತಿಸುವವರಿಗೆ=ಸ್ತೋತ್ರಮಾಡುವವರಿಗೆ, ಸುಧಾಮಗೊಲಿದಂದದಲಿ=ಕುಚೇಲನಿಗೆ ಪ್ರೀತನಾಗಿ ಸಕಲೈಶ್ವರ್ಯ ಕೊಟ್ಟಂತೆ ಅಖಿಳಾರ್ಥಗಳ ಕೊಡುತಿಪ್ಪ.

ತಾತ್ಪರ್ಯ.---ಶ್ರೀಮನೋರಮ ರಘುರಾಮ ಎಂಬ ಪದದವರೆವಿಗೂ ಇರುವ ಪದಗಳಿಗೆ ಪದ್ಯಾರ್ಥದಲ್ಲಿ ಅರ್ಥವು ಬರಿಯಲ್ಪಟ್ಟದೆ. ಇಂತಹಾ ಪರಮಾತ್ಮನ ಮಹಾ ಮಹಿಮೆಗಳನ್ನು ಭಕ್ತಿ ಪೂರ್ವಕವಾಗಿ

ಸ್ತೋತ್ರಮಾಡುವವರಿಗೆ ಶ್ರೀಪರಮಾತ್ಮನು ಕುಚೇಲನಿಗೆ ಒಲಿದಂತೆ ಅಖಿಳಾರ್ಥಗಳನ್ನು ಕೊಡುವನು.

ಅವತಾರಿಕೆ.—ಜ್ಞಾನಿಗಳು ಪರಮಾತ್ಮನನ್ನು ಕಾಣುವುದಕ್ಕೋಸ್ಕರ ಹುಡುಕುವ ರೀತಿಯನ್ನು ಈ ಎರಡು ಪದ್ಯಗಳಿಂದ ಹೇಳುತ್ತಾರೆ.—

ತಂದೆತಾಯ್ಗಳ ಕುರುಹನರಿಯದ
ಕಂದ ದೇಶಾಂತರದೊಳಗೆ ತ
ನ್ನಂದದಲಿಪ್ಪವರ ಜನನೀ ಜನಕರನ ಕಂಡು ||
ಹಿಂದೆ ಯನ್ನನುಪಡೆದವರು ಇವ
ರಂದದಲಿ ಯಿಪ್ಪರೆಲ್ಲೈ ನಾನವ
ರೆಂದು ಕಾಣುವೆನೆನುತ ಹುಡುಕುವತೆರದಿ ಕೋವಿದರು ||೨೬||

ಶೃತಿಪುರಾಣ ಸಮೂಹದೊಳು ಭಾ
ರತ ಪ್ರತಿಪ್ರತಿ ಪದಗಳೊಳು ನಿ
ರ್ಜಿತನ ಗುಣರೂಪಗಳ ಹುಡುಕುತ ಪರಮ ಹರುಷದಲಿ ||
ಮತಿಮತರು ಪ್ರತಿದಿವಸ ಸಾರ
ಸ್ವತಸಮುದ್ರದಿ ಶಫರಿಯಂದದಿ
ಸತತ ಸಂಚರಿಸುವರು ಕಾಣುವ ಲವಲವಕೆಯಿಂದ ||೨೭||

ಪದ್ಯಾರ್ಥ.—ತಂದೆತಾಯ್ಗಳ. ಕುರುಹನರಿಯದ=ಗುರುತನ್ನು ಕಾಣದ, ಕಂದ=ಮಗುವು, ದೇಶಾಂತರದೊಳಗೆ. ತನ್ನಂದದಲಿಯಿಪ್ಪವರ = ತನ್ನಂತಿರುವ ಬಾಲಕರ, ಜನನೀ ಜನಕರ ಕಂಡು – ತಂದೆತಾಯಿಗಳನ್ನು ನೋಡಿ, ಹಿಂದೆ ನನ್ನನ್ನು ಪಡೆದವರು, ಇವರಂದದಲಿ ಇಪ್ಪರೆಲ್ಲೈ = ಇವರಂತೆಯೇ ನನ್ನನ್ನು ಲಾಲಿಸುತ್ತಿದ್ದರಲ್ಲವೆ ? ನಾನು, ಅವರ=ಅವರನ್ನೆಂದು ಕಾಣುವೆನೆನುತ, ಹುಡುಕುವತೆರದಿ, ಕೋವಿದರು=ಜ್ಞಾನಿಗಳು.

ಪದ್ಯಾರ್ಥ.—ಶೃತಿಪುರಾಣಸಮೂಹದೊಳು=ವೇದಗಳಲ್ಲೂ, ಭಾಗವತಾದಿ ಪುರಾಣಗಳಲ್ಲೂ, ಭಾರತ ಪ್ರತಿಪದಗಳೊಳು=ಭಾರತದ ಒಂದೊಂದು ಪದದಲ್ಲೂ, ನಿರ್ಜಿತನ= ಸದಾ ಜಯಶೀಲನಾದ ಪರಮಾತ್ಮನ, ಗುಣ

ಗಳ ಪರಮಹರುಷದಲಿ=ಅತಿ ಸಂತೋಷದಿಂದ, ಹುಡುಕುತ ಮತಿವಂತರು=ಬುದ್ಧಿವಂತರು, ಪ್ರತಿದಿವಸ ಸಾರಸ್ವತಸಮುದ್ರದಿ=ಸರಸ್ವತೀ ಸಂಬಂಧವಾದುದು ಸಾರಸ್ವತ ಅಂದರೆ ಭಾರತ ಭಾಗವತಾದಿ ಶಾಸ್ತ್ರಾರ್ಥಗಳೆಂಬ ಸಮುದ್ರದಲ್ಲಿ, ಶಫರಿಯಂದದಿ=ಮೀನಿನಂತೆ ಕಾಣುವ, ಲವಲವಿಕೆಯಿಂದ=ಪರಮಾತ್ಮನ ಮಹಿಮೆಯನ್ನು ತಿಳಿಯಬೇಕೆಂಬ ಕುತೂಹಲದಿಂದ, ಸತತ=ಸರ್ವ ಕಾಲದಲ್ಲೂ ಸಂಚರಿಸುವರು.

ತಾತ್ಪರ್ಯ.—ಮಗುವಾಗಿರುವಾಗಲೇ ತಂದೆತಾಯಿಯನ್ನು ಕಳೆದುಕೊಂಡಿರುವ ಮಗುವು ಪರಾಶ್ರಯದಿಂದ ದೇಶಾಂತರದಲ್ಲಿ ವಾಸಮಾಡುವಾಗ ತನ್ನ ವಯಸ್ಸಿನ ಹುಡುಗರು ತಮ್ಮ ತಂದೆ ತಾಯಿಯರಿಂದ ಲಾಲಿಸಲ್ಪಡುವುದನ್ನು ನೋಡಿ ತನ್ನ ತಂದೆ ತಾಯಿಯರ ಗುರುತನ್ನು ಅರಿಯದ ಬಾಲಕನು ನನಗೂ ತಂದೆ ತಾಯಿಯರು ಇರಬಹುದಲ್ಲವೆ ? ಅವರನ್ನು ನಾನು ನೋಡಿದರೆ ನನ್ನನ್ನು ಇವರಂತೆ ಲಾಲಿಸುವರಲ್ಲವೆ ಅವರನ್ನು ನಾನೆಂದು ಕಾಣುವೆನು ಎಂದು ಹುಡುಕುವಂತೆ ಜ್ಞಾನಿಗಳು ಪರಮಾತ್ಮನನ್ನು ಕಾಣವೆ ಪ್ರತಿಪದಕ್ಕೂ ೧೦ ಅರ್ಥಗಳಿಂದ ಕೂಡಿದ ಮಹಾಭಾರತದಲ್ಲೂ, ಭಾಗವತಾದಿ ಪುರಾಣದಲ್ಲೂ. ವೇದದಲ್ಲಿಯೂ ಸಹ ಪ್ರತಿ ಪದದಲ್ಲೂ ಕಾಣುವ ಭಗವನ್ಮಹಿಮೆಯನ್ನು ಹುಡುಕುತ್ತಾ ಸಮುದ್ರದಲ್ಲಿ ಮೀನು ಆಹಾರವನ್ನು ಹುಡುಕುತ್ತಾ ಸಂಚರಿಸುವಂತೆ ಶಾಸ್ತ್ರಾರ್ಥವೆಂಬ ಸಮುದ್ರದಲ್ಲಿ ಭಗವನ್ಮಹಿಮೆಯನ್ನು ಹುಡುಕುತ್ತಾ ಈ ಪರಮ ಪುರುಷನಾದ ಪರಮಾತ್ಮನನ್ನ ಎಂದು ಕಾಣುವೆನೆಂಬ ಲವಲವಿಕೆಯಿಂದ ಸಂಚರಿಸುವರು. ಅಂದರೆ ಭಗವದ್ದರ್ಶನಕ್ಕಾಗಿ ಶಾಸ್ತ್ರಾರ್ಥ ವಿಚಾರದಲ್ಲೇ ನಿರತರಾಗಿರುವರೆಂಬ ಭಾವ.

ಮತ್ಸಕೇತನ ಜನಕ ಹರಿ ಶ್ರೀ
ವತ್ಸಲಾಂಛನ ನಿಜಶರಣ್ಯ ಜನ
ವತ್ಸಲವರಾರೋಹ ವೈಕುಂಠಾಲಯನಿವಾಸಿ॥
ಚಿತ್ಸುಖಪ್ರದ ಸಲಹೆನಲು ಗೋ
ವತ್ಸಧ್ವನಿಗೊದಗುವ ತೆರದಿ ಪರ
ಮೋತ್ಸವದಿ ಬಂದೊದಗುವನು ನಿರ್ಮತ್ಸರರ ಬಳಿಗೆ ॥೨೪॥

ಪದ್ಯಾರ್ಥ :— ಮತ್ಸ್ಯ ಕೇತನ ಜನಕ - ಮನ್ಮಥನ ತಂದೆಯಾದ, ಹರಿ - ಶ್ರೀ ಪರಮಾತ್ಮನೇ! ಶ್ರೀವತ್ಸಲಾಂಛನ – ಶ್ರೀವತ್ಸ ವೆಂಬ ಚಿನ್ಹೆ ಉಳ್ಳವನೇ! ನಿಜಶರಣ್ಯಜನ ವತ್ಸಲ – ತನ್ನನ್ನು ಶರಣೆಂದು ನಂಬಿದ ಜನರಲ್ಲಿ ವಾತ್ಸಲ್ಯ ಉಳ್ಳವನೇ! ವರಾರೋಹ - ಉತ್ತಮವಾದ (ಪರಮ ಸುಂದರವಾದ) ಕಟಿಪಶ್ಚಾದ್ಭಾಗಉಳ್ಳವನೇ! ಅಥವಾ ಉತ್ತಮವಾದ ವಾಹನವನ್ನೇರುವನೆಂದರ್ಥ; ಅಥವಾ ಪರಾಂ – ಲಕ್ಷ್ಮೀಂ ಅರೋಹಯತೀತಿ ವರಾರೋಹಃ - ಲಕ್ಷ್ಮೀದೇವಿಯರನ್ನು ತೊಡೆಯಮೇಲೆ ಕೂಡಿಸಿಕೊಂಡಿರುವುದರಿಂದ ವರಾರೋಹನೆಂದು ಹೆಸರು ವೈಕುಂಠಾಲಯ ನಿವಾಸಿ - ವೈಕುಂಠವೆಂಬ ಮನೆಯಲ್ಲಿ ವಾಸಮಾಡುವವನೆ! ಚಿತ್ಸುಖ ಪ್ರದ– ಚಿದಾನಂದವನ್ನು, ಸಜ್ಜೀವರಿಗೆ ಕೊಡುವವನೇ! ಸಲಹೆನಲು - ನನ್ನನ್ನು ರಕ್ಷಿಸೆನಲು, ನಿರ್ಮತ್ಸರರ ಬಳಿಗೆ - ಉತ್ತಮರಲ್ಲಿ ಹೊಟ್ಟೆಯಕಿಚ್ಚು ಇಲ್ಲದವರ ಬಳಿಗೆ, ಗೋ - ಹಸುವು, ವತ್ಸ ಧ್ವನಿಗೊದಗುವ ತೆರದಿ - ಕರುವು ಕೂಗುವಶಬ್ದವನ್ನು ಕೇಳಿ ತಕ್ಷಣ ಬಂದೊದಗುವಂತೆ, ಪರಮೋತ್ಸಹದಿ - ಪರಮ ಉತ್ಸಾಹದಿಂದ ಬಂದೊದಗುವನು.

ತಾತ್ಪರ್ಯ :—ಶ್ರೀಹರೇ! ನನ್ನನ್ನು ರಕ್ಷಿಸೆಂದು ಭಕ್ತಿಯಿಂದ ಪ್ರಾರ್ಥನೆ ಮಾಡುವ ಭಕ್ತರ ಧ್ವನಿಯನ್ನು ಕೇಳಿದ ಕೂಡಲೇ ಕರುವಿನ ಧ್ವನಿಯನ್ನು ಕೇಳಿ ಹಸುವು ಓಡಿ ಬರುವಂತೆ ಶ್ರೀ ಹರಿಯು ಆ ಭಕ್ತರ ಬಳಿಗೆ ಬಂದು ಸಂರಕ್ಷಣೆ ಮಾಡುವನೆಂಬ ತಾತ್ಪರ್ಯ. ||೨೮||

ಜೀವರ ಯೋಗ್ಯತಾನುಸಾರ ಪರಮಾತ್ಮನು ಅವರಲ್ಲಿ ವರ್ತಿಸುವನೆಂದು ಹೇಳುತ್ತಾರೆ.

**ಸೂರಿಗಳಿಗೆ ಸಮೀಪಗದುರಾ**
**ಚಾರಿಗಳಿಗೆಂದೆಂದು ದೂರಾ**
**ದ್ದೂರತರ ದುರ್ಲಭನೆನಿಸುವನು ದೈತ್ಯ ಸಂತತಿಗೆ ||**
**ಸಾರಿಸಾರಿಗೆ ನೆನೆವವರ ಸಂ**
**ಸಾರವೆಂಬ ಮಹೋರಗಕೆ ಸ**
**ರ್ಪಾರಿ ಯೆನಿಸಿ ಸದಾ ಸು ಸೌಖ್ಯವ ನೀವ ಸುಜನರಿಗೆ ||೨೬||**

ಪದ್ಯಾರ್ಥ :— ಸೂರಿಗಳಿಗೆ – ಜ್ಞಾನಿಗಳಿಗೆ ಸಮೀಪಗ – ಸಮೀಪದಲ್ಲೆ ಸರ್ವದಾ ಇರುವನು. ದುರಾಚಾರಿಗಳಿಗೆ ಎಂದೆಂದು ದೂರಾದ್ದೂರತರ - ದೂರ

ದಲ್ಲೂ ಅತಿ ದೂರನು ; ದೈತ್ಯಸಂತತಿಗೆ, ದುರ್ಲಭನೆನಿಸುವನು - ಎಂದೆಂದಿಗೂ ದೊರಕದವನೆನಿಸುವನು : ಸಾರಿಸಾರಿಗೆ - ಬಾರಿ ಬಾರಿಗೂ, (ಪ್ರತಿ ಕ್ಷಣದಲ್ಲೂ) ನೆನೆವವರ - ಸ್ಮರಿಸುವವರ, ಸಂಸಾರವೆಂಬ ಮಹೋರಗಕೆ - ಮಹಾ ಸರ್ಪಕ್ಕೆ, ಸರ್ಪಾರಿಯೆನಿಸಿ - ಗರುಡನೆನಿಸಿ, ಸುಜನರಿಗೆ, ಸದಾ, ಸುಸೌಖ್ಯವನು ಈವ - ಕೊಡುವನು.

ತಾತ್ಪರ್ಯ :— ಜ್ಞಾನಿಗಳಿಗೆ ಪರಮಾತ್ಮನು ಅತಿ ಸಮೀಪದಲ್ಲಿ ಅಂದರೆ ಎಲ್ಲಿ ಕರೆದರೆ ಅಲ್ಲೇ ಪ್ರತ್ಯಕ್ಷನಾಗುನು. ಪ್ರಹ್ಲಾದನಿಗೆ ಸ್ತಂಭದಲ್ಲೇ ಪ್ರತ್ಯಕ್ಷನಾದನು ; ದುರ್ವಾಸರು ದುರ್ಯೋಧನನಿಗೆ ಪ್ರೀತಿ ಮಾಡುವುದಕ್ಕಾಗಿ ಪಾಂಡವರು ವನವಾಸದಲ್ಲಿದ್ದಾಗ ಆ ಕಾಲದಲ್ಲಿ ಅನ್ನವನ್ನು ಬೇಡಲು ದ್ರೌಪದಿ ದೇವಿಯರು ದುರ್ವಾಸರ ಭಯದಿಂದ ಕೃಷ್ಣನನ್ನು ಸ್ಮರಿಸಿದ ಕೂಡಲೆ ದ್ವಾರವತಿಯಲ್ಲಿದ್ದರೂ ಆತಕ್ಷಣ ಬಂದೊದಗಿದನು. ಇತ್ಯಾದಿಗಳು ಅನೇಕವಿರುವುದು. ಅಯೋಗ್ಯರ ಹೃದಯಾಕಾಶದಲ್ಲಿದ್ದರೂ ಅವರಿಗೆ ದೂರಾದ್ದೂರತರನಾಗಿಯೇ ಇರುವನು ; ದೈತ್ಯ ವಂಶದವರಿಗೆ ಅಂದರೆ ದೈತ್ಯಾಚಾರ ಉಳ್ಳವರಿಗೆ ಎಂದೆಂದಿಗೂ ಲಭ್ಯನಾಗನು. ಬಾರಿಬಾರಿಗೂ ತನ್ನನ್ನು ಸ್ಮರಿಸುತ್ತಿರುವ ಸಜ್ಜನರಿಗೆ ಸರ್ಪಕ್ಕೆ ಗರುಡ ಹೇಗೋ ಹಾಗೆ ಸಂಸಾರ ಸರ್ಪಕ್ಕೆ ಗರುಡನಂತೆ ನಾಶವನ್ನು ಮಾಡಿ ಸ್ವರೂಪಾನಂದವನ್ನು ಕೊಡಿಸುವನು. ||೨೯||

ಚಕ್ರ ಶಂಖ ಗದಾಬ್ಜ ಧರ ದುರ
ತಿಕ್ರಮು ದುರಾವಾಸ ವಿಧಿ ಶಿವ
ಶಕ್ರ ಸೂರ್ಯಾದ್ಯಮರ ಪೂಜ್ಯ ಪದಾಬ್ಜ ನಿರ್ಲಜ್ಜಾ ||
ಶುಕ್ರ ಶಿಷ್ಯನ ಅಶ್ವಮೇಧ
ಪ್ರಕ್ರಿಯುವ ಕೆಡಿಸಬ್ಜ ಜಾಂಡವ
ತಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು ||೩೦||

ಪದ್ಯಾರ್ಥ :— ಶಂಖಚಕ್ರಗದಾಬ್ಜಧರ – ಶಂಖ, ಚಕ್ರ, ಗದಾ, ಪದ್ಮಗಳೆಂಬ ನಾಲ್ಕನ್ನು ನಾಲ್ಕು ಕೈಗಲ್ಲಿ ಧರಿಸಿದವನು ; ದುರತಿಕ್ರಮ - ಇವನನ್ನು ಅತಿಕ್ರಮಿಸಿ ನಡೆಯಲು ಯಾರಿಂದಲೂ ಸಾಧ್ಯವಲ್ಲದ ಸಾಮರ್ಥ್ಯವುಳ್ಳವನು ; ದುರಾವಾಸ - ಅಯೋಗ್ಯರಿಗೆ ವಾಸಕ್ಕೆ ಯೋಗ್ಯನಲ್ಲದವನು ; ವಿಧಿ - ಬ್ರಹ್ಮದೇವರು, ಶಿವ ರುದ್ರದೇವರು, ಶಕ್ರ - ಇಂದ್ರ ದೇವರು, ಸೂರ್ಯಾದ್ಯಮರ ಪೂಜ್ಯಪದಾಬ್ಜ-

ಸೂರ್ಯ ಮೊದಲಾದ ದೇವತೆಗಳಿಂದ ಪೂಜಿತವಾದ ಪಾದ ಕಮಲಗಳುಳ್ಳವನು; ನಿರ್ಲಜ್ಜ - ನಾಚಿಕೆ ಇಲ್ಲದವನು, ತಾನು ಮಾಡುವ ಕಾರ್ಯವು ದೋಷದಿಂದ ಕೂಡಿದ್ದರೆ ಆ ಕಾರ್ಯವನ್ನು ಮಾಡುವವರು ನಾಚಿಕೊಳ್ಳುವರು. ಪರಮಾತ್ಮನು ನಿರ್ದೋಷಿಯು ಅವನು ಮಾಡುವ ಕಾರ್ಯಗಳು ನಿರ್ದೋಷವಾದವು; "ಯೇ ದೋಷಾ ಇತರ ತ್ರಾಪಿ ತೇ ಗುಣಾಃ ಪರಮೇ ಮತಾಃ" ಎಂಬ ವಾಕ್ಯದಿಂದ ಇತರರಿಗೆ ಯಾವುದು ದೋಷವಾಗಿ ಕಾಣುವುದೊ, ಅದು ಪರಮಾತ್ಮನಲ್ಲಿ ಗುಣವೇ ಆಗುವುದು. ಆದ್ದರಿಂದ ನ್ಯಾಯವಾದ ಕಾರ್ಯವನ್ನು ಮಾಡುವವನು ನಾಚಿಕೊಳ್ಳಲು ಕಾರಣವೇನು? ಆದ್ದರಿಂದ ನಾಚಿಕೆಯಿಲ್ಲದವನು ಅಂದರು. ಶುಕ್ರ ಶಿಷ್ಯನ - ಶುಕ್ರಾಚಾರ್ಯರಿಗೆ ಶಿಷ್ಯನಾದ ಬಲಿ ಚಕ್ರವರ್ತಿಯ, ಅಶ್ವಮೇಧಪ್ರಕ್ರಿಯವ - ಅಶ್ವಮೇಧ ಯಾಗ ಕ್ರಿಯೆಯನ್ನು ಕೆಡಿಸಿ – ವಾಮನರೂಪನಾಗಿ ಬಂದ್ಯ ಕೆಡಿಸಿ ತ್ರಿವಿಕ್ರಮಾಹ್ವಯನು - ತ್ರಿವಿಕ್ರಮನಾಮಧೇಯ ಉಳ್ಳವನಾಗಿ, ಅಬ್ಜಾಂಡವ – ಬ್ರಹ್ಮಾಂಡವನ್ನು ಅತಿಕ್ರಮಿಸಿ – ಎರಡನೆಯ ಹೆಜ್ಜೆಯಿಂ ಅಳೆಯ್ಯುವಾಗ ಅತಿಕ್ರಮಿಸಿ, ಜಾಹ್ನವಿಯ - ಗಂಗೆಯನ್ನು, ಪಡೆದ - ಪಾದದಿಂದ ಸೃಷ್ಟಿಸಿದನು.

ತಾತ್ಪರ್ಯ :— "ಚಕ್ರಶಂಖ ಗದಾಪದ್ಮ ಧರಾಶ್ಚಿಂ ತ್ಯಾಹರೇರ್ಭುಜಾಃ" ಎಂಬ ದ್ವಾದಶ ಸ್ತೋತ್ರದ ·ವಾಕ್ಯದಂತೆ, ಚಕ್ರ ಶಂಖ ಗದಾ ಪದ್ಮಗಳನ್ನು ಯಾವಾಗಲೂ ಧರಿಸಿರುವನು. ಇಂತಹಾ ಪರಮಾತ್ಮನನ್ನು ಯಾವ ಕಾಲವಲ್ಲಾಗಲಿ ಯಾವ ದೇಶವಲ್ಲಾಗಲಿ ರಮಾ ಬ್ರಹ್ಮಾದಿ ಯಾವ ದೇವತೆಗಳಿಂದಲಾಗಲಿ ಯಾವ ವಿಷಯದಲ್ಲೂ ಮೀರಿ ನಡೆಯಲು ಸಾಧ್ಯವಲ್ಲವು. ಅಯೋಗ್ಯರಾದ ಭಗವದ್ದ್ವೇಷಿಗಳು ಭಗವದ್ಭಕ್ತರ ದ್ವೇಷಿಗಳು ಏನು ಮಾಡಿದರೂ ಅವರಿಗೆ ಇವನ ವಾಸವು ಸುಖಕರವಾಗುವಂತಿಲ್ಲ. ಕೃಷ್ಣನ ದರ್ಶನಾದಿಗಳಿಂದ ದುರ್ಯೋಧನಾದಿಗಳಿಗೆ ದುಃಖಕ್ಕೆ ಸಾಧನವಾಯಿತು. ಬ್ರಹ್ಮರುದ್ರಾದಿ ದೇವತೆಗಳಿಂದ ಪೂಜಿತವಾದ ಪಾದ ಕಮಲಗಳುಳ್ಳವನು. ಯಾವ ಕೆಲಸವನ್ನು ಮಾಡಿದರೆ ನಾಲ್ವರ ಮುಂದೆ ನಾಚಿಕೊಳ್ಳ ಬೇಕಾಗುವದೋ ಅಂತಹಾ ಕೆಲಸವನ್ನು ಯಾವಾಗಲೂ ಮಾಡದವನು; ಆದ್ದರಿಂದ ನಾಚಿಕೆ ಯಿಲ್ಲದವನು. ಬಲಿಚಕ್ರವರ್ತಿಯು ಇಂದ್ರ ಪದವಿಯನ್ನು ಹೊಂದಿ ೧೦೦ ಅಶ್ವಮೇಧಗಳನ್ನು ಮಾಡುತ್ತಿರುವಾಗ ಇವನು

ಭಕ್ತನೇ ಆದರೂ, ಒಂದೊಂದು ಮನ್ವಂತರಕ್ಕೆ ಒಬ್ಬೊಬ್ಬನೇ ಇಂದ್ರನೆಂದ್ಯ ಪರಮಾತ್ಮನ ಸಂಕಲ್ಪವಿರುವುದರಿಂದಲೂ, ಇವನು ಮುಂದಿನ ಮನ್ವಂತರದಲ್ಲಿ ಇಂದ್ರಪದವೀಗೆ ಬರುವವನಾದುದರಿಂದಲೂ, ಈ ಮನ್ವಂತರದಲ್ಲಿ ಪುರಂದರ ನೆಂಬವನಿಗೆ ಇಂದ್ರ ಪದವಿ ಇರುವುದನ್ನು ಬಲಾತ್ಕಾರದಿಂದ ಬಲಿ ಚಕ್ರವರ್ತಿ ಯು ಅಪಹರಿಸಿರುವುದರಿಂದಲೂ, ಅವನ ಭಕ್ತಿಯನ್ನೂ, ಸತ್ಯವನ್ನೂ ಲೋಕ ದಲ್ಲಿ ಪ್ರಖ್ಯಾತಿ ಪಡಿಸ ಬೇಕೆಂಬ ಇಚ್ಛೆಯಿಂದ ಪರಮಾತ್ಮನು ವಾಮನ ರೂಪಿ ಯಾಗಿ ಬಂದು ಬಲಿಯನ್ನು ಮೂರಡಿ ಭೂಮಿಯನ್ನು ಬೇಡಿ ತ್ರಿವಿಕ್ರಮ ರೂಪದಿಂದ ಒಂದು ಹೆಜ್ಜೆಯಿಂದ ಭೂಮಿಯನ್ನು ಅಳೆದು ಎರಡನೆಯ ಹೆಜ್ಜೆ ಯನ್ನು ಅಂತರಿಕ್ಷದಲ್ಲಿಡುವಾಗ ಆ ಹೆಜ್ಜೆಯು ಬ್ರಹ್ಮಾಂಡ ಖರ್ಪರವನ್ನು ಭೇದಿ ಸಿಕೊಂಡು ಹೊರಗಿನ ಬಾಹ್ಯೋದಕವು ಬ್ರಹ್ಮಾಂಡದ ಒಳಗೆ ಬಂದಿತು. ಅದೇ ವಿಷ್ಣುಪದೀ ಗಂಗೆಯೆಂಬ ನಾಮಧೇಯದಿಂದ ಜಗತ್ತನ್ನು ಪವಿತ್ರವನ್ನಾಗಿ ಮಾಡು ತ್ತಿರುವದು ; ಇಂತಹಾ ಮಹಾ ಮಹಿಮೆಯುಳ್ಳವನೆಂದರ್ಥ ॥೩೦॥

ಶಕ್ತ ರೆನಿಸುವರಿಲ್ಲ ಹರಿವ್ಯತಿ
ರಿಕ್ತ ಸುರಗಣರೊಳಗೆ ಸರ್ವೋ
ದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ ॥
ಭಕ್ತಿ ಪೂರ್ವಕವಾಗಿ ಅನ್ಯಪ್ರ
ಸಕ್ತಿಗಳ ನೀಡಾಡಿ ಪರಮಾ
ಸಕ್ತನಾಗಿರು ಹರಿಕಥಾಮೃತ ಪಾನ ವಿಷಯದಲಿ ॥೩೧॥

ಪದ್ಯಾರ್ಥ :— ಸುರಗಣರೊಳಗೆ - ದೇವತಾಗಣಗಳಲ್ಲಿ ಹರಿವ್ಯತಿರಿಕ್ತ ಪರಮಾತ್ಮನಲ್ಲದೆ, ಶಕ್ತರೆನಿಸುವರು - ಸಮರ್ಥರೆನಿಸುವರು ಇಲ್ಲ - ಮತ್ತೊಬ್ಬರಿಲ್ಲ ಸರ್ವ ಕಾಲದಲಿ - ಹಿಂದಿನ ಕಾಲದಲ್ಲಾಗಲಿ - ಈಗಿನ ಕಾಲದಲ್ಲಾಗಲೀ ಇನ್ನು ಮುಂದಾಗಲಿ ಹೀಗೆ ಸರ್ವ ಕಾಲದಲ್ಲೂ ಸರ್ವರಿಂದಲಿ - ಚರಾ ಚರಾಖ್ಯ ಪ್ರಪಂ ಚದಲ್ಲಿ ಸಕಲ ಚೇತನರಿಂದಲೂ ಸರ್ವೋದ್ರಿಕ್ತ ನೆನಿಸುವ - ರಮಾ ಬ್ರಹ್ಮಾದಿ ಸಕಲ ಜೀವೋತ್ತಮರಕಿಂತಲೂ ಉತ್ತಮನೆನಿಸುವನು. (ಆದ್ದರಿಂದ) ಹರಿಕಥಾ ಮೃತ ಪಾನ ವಿಷಯದಲಿ - ಇಂತಹಾ ಮಹಾನುಭಾವನಾದ ಶ್ರೀ ಪರಮಾತ್ಮನ ಕಥೆಯೆಂಬ ಅಮೃತವನ್ನು ಪಾನ ಮಾಡುವ ವಿಷಯದಲ್ಲಿ ಅನ್ಯಪ್ರಸಕ್ತಿ ಗಳ ನೀಡಾಡಿ - ಇತರ ವಿಷಯಾಸಕ್ತಿಗಳನ್ನು ಬಿಟ್ಟು ಭಕ್ತಿ ಪೂರ್ವಕ

ತಾತ್ಪರ್ಯ.—ಪರಮಾತ್ಮನನ್ನು ಬಿಟ್ಟರೆ ಮತ್ತೊಬ್ಬರು ದೇವತಾಗಣದೊಳಗಾಗಲೀ, ಇತರ ದೈತ್ಯರಾಕ್ಷಸ ಗಂಧರ್ವಾದಿಗಳಲ್ಲೂ ಸಮರ್ಥರೆನಿಸುವರು ಇಲ್ಲ. ಪರಮಾತ್ಮನೊಬ್ಬನು ಸರ್ವರಿಂದಲೂ ಸರ್ವಕಾಲದಲ್ಲೂ ಸರ್ವೋತ್ತಮನೆನಿಸುವನು, ಆದ್ದರಿಂದ ಇತರ ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟು ಹರಿಕಥಾಮೃತವನ್ನು ಪಾನಮಾಡುವ ವಿಷಯದಲ್ಲಿ ಭಕ್ತಿಪೂರ್ವಕವಾಗಿ ಅತ್ಯಂತ ಆದರದಿಂದ ಆಸಕ್ತನಾಗಿರು,

ಅವತಾರಿಕೆ.—ಭಕ್ತಿಯಿಂದ ಏನು ಕೊಟ್ಟರೂ ಪರಮ ಪ್ರೀತಿಯಿಂದ ಸ್ವೀಕರಿಸುವನೆಂದು ಹೇಳುತ್ತಾರೆ—

**ಪ್ರಣತಕಾಮದ ಭಕ್ತ ಚಿಂತಾ**
**ಮಣಿ ಮಣಿಮಯಾಭರಣ ಭೂಷಿತ**
**ಘೃಣಿ ಗುಣತ್ರಯ ದೂರವರ್ಜಿತ ಗಹನ ಸನ್ಮಹಿಮಾ ||**
**ಎಣಿಸ ಭಕ್ತರ ದೋಷಗಳ ಕುಂ**
**ಭಿಣಿಜೆಯಾಣ್ಮ ಶರಣ್ಯ ರಾಮಾ**
**ರ್ಪಣವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮ ||೧೨||**

ಪದ್ಯಾರ್ಥ.—ಪ್ರಣತಕಾಮದ-ನಮಸ್ಕಾರ ಮಾಡುವವರ ಮನೋಭೀಷ್ಟವನ್ನು ಪೂರ್ಣಮಾಡುವ, ಭಕ್ತಚಿಂತಾಮಣಿ=ಭಕ್ತರಿಗೆ ಚಿಂತಾಮಣಿಯಂತೆ ಬೇಡಿದುದನ್ನು ಕೊಡುವ, ಮಣಿಮಯಾಭರಣಭೂಷಿತ=ಮಾಣಿಕ್ಯಮಯವಾದ ಆಭರಣಗಳಿಂದ (ಒಡವೆಗಳಿಂದ) ಭೂಷಿತನಾದ, ಘೃಣಿ=ದಯಾಪೂರ್ಣನಾದ ಗುಣತ್ರಯದೂರವರ್ಜಿತ=ದೂರದಲ್ಲಿ ತ್ಯಜಿಸಲ್ಪಟ್ಟ ಪ್ರಕೃತಿ ಸಂಬಂಧವಾದ ಸತ್ವ ರಜಸ್ತಮೋ ಗುಣಗಳುಳ್ಳ; ಗಹನಸನ್ಮಹಿಮಾ-ಮತ್ತೊಬ್ಬರಿಂದ ತಿಳಿಯಲು ಸಾಧ್ಯವಲ್ಲದ ಉತ್ತಮ ಮಹಿಮೆಯುಳ್ಳ ಪರಮಾತ್ಮನು, ಭಕ್ತರದೋಷಗಳ ಎಣಿಸ=ಲಕ್ಷ್ಯಕ್ಕೆ ತಾರನು. ಕುಂಭಿಣಿಜೆಯ=ಭೂಮಿಯಲ್ಲಿ ಜನಿಸಿದ ಸೀತಾದೇವಿಯ, ಆಣ್ಮ=ಆಳುವ ಅಂದರೆ ಸೀತಾಪತಿಯಾದ, ಶರಣ್ಯ=ಭಕ್ತಜನರು ಮೊರೆಹೋಗಲು ಯೋಗ್ಯನಾದ, ರಾಮಾರ್ಪಣವೆನಲು-ಶ್ರೀರಾಮ ! ನಿನಗೆ ಅರ್ಪಣವೆಂದು ಶಬರಿಯು ಫಲವನ್ನು ಅರ್ಪಿಸಲು, ಶಬರಿಯ ಫಲವ ಕೈಕೊಂಡ=ಸ್ವೀಕರಿಸಿದನು.

ತಾತ್ಪರ್ಯ.—ತನ್ನನ್ನು ವಂದಿಸುವವರ ಇಷ್ಟಾರ್ಥವನ್ನು ಕೊಡು

ವವನು ಭಕ್ತರಿಗೆ ಚಿಂತಾಮಣಿಯಂತೆ ಇಷ್ಟಾರ್ಥವನ್ನು ಪೂರೈಸುವವನು; ಭಕ್ತಚಿಂತಾಮಣಿಯಾದ ಶ್ರೀಪರಮಾತ್ಮನು ತನ್ನನ್ನು ಮೊರೆಹೊಕ್ಕವರಿಗೆ ಮನೋಭೀಷ್ಟವನ್ನು ಪೂರೈಸುವವನು, ಮಾಣಿಕ್ಯಮಯವಾದ ಒಡವೆಗಳಿಂದಲಂಕೃತನಾದವನು ಪರಮದಯಾಳು. ಪ್ರಾಕೃತವಾದ ಸತ್ವ ರಜ ಸ್ತಮೋ ಗುಣಗಳಿಂದ ದೂರನು. ಬ್ರಹ್ಮಾದಿದೇವತೆಗಳಿಂದಲೂ ತಿಳಿಯಲಶಕ್ಯವಾದ ಮಹಾಮಹಿಮೆಯುಳ್ಳವನು. ಭಕ್ತರಲ್ಲಿ ಏನು ದೋಷಗಳಿದ್ದರೂ ಗಣನೆಗೆ ತಾರದವನು. ಕುಲ್ಲಭಿಣಿ ಎಂದು ಭೂಮಿಗೆ ಹೆಸರು, ಕುಂಭಿಣಿಯಿಂದ ಜನಿಸಿದವಳಿಗೆ ಕುಂಭಿಣಿಜೆ ಎಂದು ಹೆಸರು. ಆಕೆಯಾಣ್ಮ ಎಂದರೆ ಪಾಲಿಸುವವನು ಪತಿಯೆಂಬ ತಾತ್ಪರ್ಯ. ಭೂಮಿಯಿಂದ ಹುಟ್ಟಿದವಳು ಸೀತಾದೇವಿ ಆಕೆಯ ಪತಿಯು ಶ್ರೀರಾಮನೆಂದರ್ಥ. ರಾಮದೇವರು ಅರಣ್ಯದಲ್ಲಿರುವಾಗ ಶಬರಿಯೆಂಬ ತಾಪಸಿಯು ರಾಮದೇವರ ಬರುವಿಕೆಯನ್ನು ತಿಳಿದು ರುಚಿನೋಡಿ ಸ್ವಾದುವಾಗಿದ್ದರೆ ಇದು ರಾಮದೇವರಿಗೆಂದು ತೆಗೆದು ಇಡುತ್ತಿದ್ದಳು. ರಾಮದೇವರು ಈಕೆಯಾಶ್ರಮಕ್ಕೆ ಬರಲು ಸೀತಾಪತಿಯಾದ ಶ್ರೀರಾಮಾ ಈ ಫಲಗಳನ್ನು ನಿನಗಾಗಿಟ್ಟಿರುವೆನು. ಇವನ್ನು ನಿನಗರ್ಪಿಸುವೆನೆಂದು ಅರ್ಪಿಸಲು ಅವನು ಅದನ್ನು ಪ್ರೀತಿಯಿಂದ ಸ್ವೀಕರಿಸಿದನು.

ಅವತಾರಿಕೆ.--ಭಕ್ತರು ಭಕ್ತಿಯಿಂದ ಕೊಡುವ ಯಾವ ಪದಾರ್ಥವನ್ನಾದರೂ ಪರಮ ಪ್ರೀತಿಯಿಂದ ಸ್ವೀಕಾರಮಾಡುವನೆಂಬ ತಾತ್ಪರ್ಯ.

ಬಲ್ಲೆನೆಂಬುವರಿಲ್ಲವೀತನ
ವಲ್ಲೆನೆಂಬುವರಿಲ್ಲ ಲೋಕದೊ
ಳಿಲ್ಲದಿಹ ಸ್ಥಳವಿಲ್ಲ ವೊಳ್ಳಜ್ಞಾತ ಜನರಿಲ್ಲ ||
ಬೆಲ್ಲದಚ್ಚಿನ ಬೊಂಬೆಯಂದದಿ
ಯೆಲ್ಲರೊಳಗಿರುತಿಪ್ಪ ಶ್ರೀ ಭೂ
ನಲ್ಲ ಯಿವಗೆಣೆಯಿಲ್ಲವ ಪ್ರತಿಮಲ್ಲ ಜಗಕೆಲ್ಲ ||೩೩||

ಪದ್ಯಾರ್ಥ.—ಈತನ=ಈ ಪರಮಾತ್ಮನನ್ನು, ಬಲ್ಲೆನೆಂಬುವರಿಲ್ಲ=ಈ ಜಗತ್ತಿನಲ್ಲಿ ನಾವು ಸಾಕಲ್ಯೇನ ಬಲ್ಲೆವು ಎಂಬುವರಿಲ್ಲ, ವಲ್ಲೆನೆಂಬುವರು= ಪರಮಾತ್ಮನು ನಮಗೆ ಬೇಡವೆಂಬುವರೂ ಇಲ್ಲ. ಲೋಕದೊಳು ಇಲ್ಲದಿಹ

ಸ್ಥಳವಿಲ್ಲ=ಪರಮಾತ್ಮನಿಲ್ಲದಿರುವ ಸ್ಥಳವಿಲ್ಲ. ಒಳ್ಳೆಜ್ಞಾತಜನರಿಲ್ಲ=ಚೆನ್ನಾಗಿ ಪರಮಾತ್ಮನನ್ನು ತಿಳಿದ ಜನರಿಲ್ಲ. ಬೆಲ್ಲದಚ್ಚಿನ ಬೊಂಬೆಯುಂದದಿ=ಬೆಲ್ಲದಿಂದ ಅಚ್ಚಿನ ಬೊಂಬೆಯನ್ನು ಮಾಡಿದ್ದರೆ ಅದರಲ್ಲಿ ಕೈ ಕಾಲು ಮೊದಲಾದ ಯಾವ ಅಂಗಗಳನ್ನು ವಡೆದು ನೋಡಿದರೂ ಸರ್ವತ್ರ ಒಂದೇ ರೀತಿಯಾಗಿ ಶಿಹಿ ಹ್ಯಾಗೆ ವ್ಯಾಪಿಸಿಕೊಂಡಿರುವದೋ ಹಾಗೆ ಎಲ್ಲರೊಳಗಿರುತಿಪ್ಪ. ಶ್ರೀಭೂನಲ್ಲ= ಶ್ರೀದೇವಿಯರಿಗೂ, ಭೂದೇವಿಯರಿಗೂ ಪತಿಯಾದವನು. ಇವಗೆ ಣೆಯಿಲ್ಲ= ಇವನಿಗೆ ಸಮರ್ಥ್ಯಾರೂ ಇಲ್ಲ. ಜಗಕೆಲ್ಲ=ಜಗತ್ತಿನೊಳಗೆಲ್ಲಾ ಅಪ್ರತಿಮಲ್ಲ=ಪ್ರತಿಭಟರು ಇಲ್ಲದವನು.

ತಾತ್ಪರ್ಯ.—ಭಾಗವತ ದ್ವಿತೀಯ ಸ್ಕಂಧ ೬ನೆಯ ಅಧ್ಯಾಯದಲ್ಲಿ ನಾರದರಿಗೆ ಬ್ರಹ್ಮದೇವರು ಉಪದೇಶಮಾಡುವ ಪ್ರಕರಣದಲ್ಲಿ "ಯಸ್ಯಾವತಾರ ಕರ್ಮಾಣಿ ಗಾಯಂತಿಹ್ಯಸ್ಮದಾದಯಃ || ನಯಂ ವಿಂದಂತಿತತ್ವೇನ ತಸ್ಮೈಭಗವತೇನಮಃ" ಯಾವ ಪರಮಾತ್ಮನ ಅವತಾರ ಚರಿತ್ರೆಗಳನ್ನು ನಮ್ಮಂತಹವರೆಲ್ಲರೂ ಗಾನಮಾಡುತ್ತಿರುವೆವೋ ಯಾವನ ಸ್ವರೂಪವನ್ನು ಸಾಕಲ್ಯೇನ ಅರಿಯಲಾರೆವೋ ಅಂತಹ ಪರಮಾತ್ಮನಿಗೋಸ್ಕರ ನಮಸ್ಕಾರವೆಂದು ಹೇಳಿರುವರು, ಮತ್ತು ೭ನೇ ಅಧ್ಯಾಯದಲ್ಲಿ "ವಿಷ್ಣೋರ್ನುವೀರ್ಯ ಗಣನಾಂ ಕತಮೋರ್ಹತೀಹ" ನಾಂತಂವಿದಾಮ್ಯಹ ಮಮೀ ಮುನಯಃ ಪ್ರಜೇಶಾಃ' ಇತ್ಯಾದಿ ವಾಕ್ಯಗಳಿಂದ ಪರಮಾತ್ಮನ ಮಹಿಮೆ ಸಾಕಲ್ಯೇನ ನಾನು ತಿಳಿದಿರುತ್ತೇನೆಂದು, ತಿಳಿದವರಿಲ್ಲವೆಂದು ಸಿದ್ಧವಾಗುವದು. ಆದ್ದರಿಂದಲೇ ದಾಸಾರ್ಯರು ಈತನನ್ನು ಬಲ್ಲೆನೆಂಬುವರಿಲ್ಲವೆಂದರು. ಯೋಗ್ಯರಾದ ಜನರಲ್ಲಿ ಪರಮಾತ್ಮನನ್ನು ಬೇಡವೆಂಬುವರಿಲ್ಲವೆಂಬ ತಾತ್ಪರ್ಯ.

ತಮೋಯೋಗ್ಯರಾದ ಭಗವದ್ವೇಷಿಗಳು ಮಾತ್ರ ಭಗವಂತನನ್ನು ವಲ್ಲರು. ಲೋಕದಲ್ಲಿ ಪರಮಾತ್ಮನಿಲ್ಲದಿರುವ ಸ್ಥಳವೇ ಇಲ್ಲ. ಪರಮಾತ್ಮನ ಮಹಿಮಾದಿಗಳನ್ನು ಚೆನ್ನಾಗಿ ತಿಳಿದವರೂ ಇಲ್ಲ. ಬೆಲ್ಲದಿಂದ ಬೊಂಬೆಯನ್ನು ಮಾಡಿದರೆ ಅದರ ಸರ್ವಾಂಗಗಳಲ್ಲೂ ಶಿಹಿ ಹೇಗೆ ವ್ಯಾಪಿಸಿಕೊಂಡಿರುವದೋ ಹಾಗೆ ಪರಮಾತ್ಮನು ಎಲ್ಲರೊಳಗೂ ಸರ್ವಾಂಗಗಳಲ್ಲೂ ಸಮವಾಗಿ ವ್ಯಾಪ್ತನಾಗಿರುವನು. ಶ್ರೀ ದೇವಿಯರಿಗೂ ಭೂ ದೇವಿಯರಿಗೂ ಅರಸನು. ಇವನಿಗೆ ಸಮರ್ಥ್ಯಾರೂ ಇಲ್ಲ. ಜಗತ್ತಿನಲ್ಲಿ ಇವನಿಗೆದರೂ

ಮತ್ತೊಬ್ಬರಿಲ್ಲವೆಂಬ ತಾತ್ಪರ್ಯ.

ಶಬ್ದಗೋಚರ ಶಾರ್ವರೀಕರ
ನಬ್ದವಾಹನನನುಜ ಯದುವಂ
ಶಾಬ್ಧಿ ಚಂದ್ರಮ ನಿರುಪಮನು ನಿಸ್ಸೀಮ ಸಮಿತಸಮ ।
ಲಬ್ಧನಾಗುವ ತನ್ನವಗೆ ಪ್ರಾ
ರಬ್ಧಕರ್ಮಗಳುಣಿಸಿ ತೀವ್ರದಿ
ಕ್ಷುಬ್ಧಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ॥೩೪॥

ಪದ್ಯಾರ್ಥ.—ಶಬ್ದಗೋಚರ=ವೇದದಿಂದ ತಿಳಿಸಿಕೊಳ್ಳಲ್ಪಡುವವನು ಶಾರ್ವರೀಕರ=ಸಜ್ಜನರ ತಾಪತ್ರಯನಾಶಕನು. ಅಬ್ದವಾಹನನುಜ-ಮೇಘವಾಹನನೆಂಬ ದೇವೇಂದ್ರನಿಗೆ ತಮ್ಮನಾಗಿ ವಾಮನಾವತಾರ ಮಾಡಿ ಬಲಿಚಕ್ರವರ್ತಿಯಿಂದ ಭೂಮಿಯನ್ನು ಬೇಡಿ ಇಂದ್ರನಿಗೆ ರಾಜ್ಯವನ್ನಿತ್ತು ಯುವರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಉಪೇಂದ್ರನೆನಿಸಿದವನು. ಯದುವಂಶಾಬ್ಧಿಚಂದ್ರಮ=ಯದುವಂಶವೆಂಬ ಸಮುದ್ರಕ್ಕೆ ಚಂದ್ರನಂತೆ ವೃದ್ಧಿಕರನು ನಿರುಪಮನು-ಉಪಮಾನರಹಿತನು, ನಿಸ್ಸೀಮ ಎಲ್ಲೆ ಇಲ್ಲದ ಗುಣಗಣಗಳುಳ್ಳವನು ಸಮಿತಿಸಮಾ=ಸಮವೆಂದು ಗಣಿಸಲ್ಪಟ್ಟ ಸಮ ಉಳ್ಳವನು ಅಂದರೆ ಪರಮಾತ್ಮನಿಗೆ ಸಮರು ಯಾರೆಂದರೆ ಪರಮಾತ್ಮನೇ ಎಂದು, ಬ್ರಹ್ಮಾದಿಗಳಿಂದ ಗಣಿಸಲ್ಪಟ್ಟವನು, ತನ್ನವಗೆ=ತನ್ನ ಭಕ್ತನಿಗೆ, ತೀವ್ರದಿ=ಶೀಘ್ರವಾಗಿ ಪ್ರಾರಬ್ಧ ಕರ್ಮಗಳುಣಿಸಿ-ಪ್ರಾರಬ್ಧ ಕರ್ಮಗಳನ್ನು ಅನುಭವಿಸುವಂತೆ ಮಾಡಿ, ಲಬ್ಧನಾಗುವ-ದೊರಕುವನು, ಕ್ಷುಬ್ಧಪಾವಕನಂತೆ=ಕಾಷ್ಠಸಂಬಂಧದಿಂದ ಪ್ರಜ್ವಲಿಸುವ ಅಗ್ನಿಯು ಹೇಗೆ ಕಾಷ್ಠ ಸಂಬಂಧದಿಂದ ಕಾಷ್ಠವನ್ನು ಬಿಡದೋ ಹಾಗೆಯೇ, ದಯಾಸಾಂದ್ರ=ದಯೆಯಿಂದ ಪೂರ್ಣನಾದ ಪರಮಾತ್ಮನು, ಬಿಡದಿಪ್ಪನು-ಜೀವರನ್ನು ಬಿಡದೇ ಇರುವನು.

ತಾತ್ಪರ್ಯ.—ಶ್ರೀಪರಮಾತ್ಮನು ವೇದದಿಂದ ತಿಳಿಯಲು ಯೋಗ್ಯನು, ಚಂದ್ರನು ಹೇಗೆ ತಾಪ ಪರಿಹಾರಕನೂ ಆಹ್ಲಾದಕರನೋ ಹಾಗೆ ಪರಮಾತ್ಮನಲ್ಲೂ ಆ ಗುಣಗಳಿರುವವು. ಭಕ್ತರ ಸಂಸಾರದಿಂದಾಗುವ ಸಂತಾಪವನ್ನು ಪರಿಹರಿಸಿ ಅಪರೋಕ್ಷದಲ್ಲಿ ಪ್ರತ್ಯಕ್ಷನನಾಗಿ ತನ್ನ ದರ್ಶನದಿಂದ ಅಹ್ಲಾದವನ್ನುಂಟುಮಾಡುವದರಿಂದ (ಶಾರ್ವರೀಕರ) ಚಂದ್ರನೆಂದರೂ

# ಹ ರಿ ಕ ಥಾ ಮೃ ತ ಸಾ ರ.

## ಗುಣತಾರತಮ್ಯ ಸಂಧಿ.

### ಸಂಧಿ ೨೦.

ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀಮದಾಚಾರ್ಯರು " ಸರ್ವೇಷಾಂಚ ಹರಿರ್ನಿತ್ಯಂ ನಿಯಂತಾ ತದ್ವಶಾಃ ಪರೇ || ತಾರತಮ್ಯಂ ತತೋ ಜ್ಞೇಯಂ ಸರ್ವೋಚ್ಚತ್ವಂ ಹರೇಸ್ತಥಾ || ಏತದ್ವಿ ನಾನಕಸ್ಯಾಪಿ ವಿಮುಕ್ತಿಃ ಸ್ಯಾತ್ಕಥಂಚನ " ಸಕಲ ಪ್ರಾಣಿಗಳಿಗೂ ಶ್ರೀಪರಮಾತ್ಮನು ಪ್ರೇರಕನು. ರಮಾ ಬ್ರಹ್ಮಾದಿ ಸಕಲರೂ ಅವನಧೀನರು, ಆದ್ದರಿಂದ ಪರಮಾತ್ಮನನ್ನು ಸರ್ವೋತ್ತಮನೆಂದು ತಿಳಿದು ರಮಾ ಬ್ರಹ್ಮಾದಿಗಳಲ್ಲಿ ತಾರತಮ್ಯವನ್ನು ತಿಳಿಯಬೇಕು- ಇದನ್ನು ತಿಳಿಯದೆ ಯಾರಿಗೂ ಮುಕ್ತಿಯಾಗುವುದಿಲ್ಲವೆಂದು ಹೇಳಿರುವರು. ಆದ್ದರಿಂದ ಪರಮಾತ್ಮನನ್ನು ಮೊದಲುಮಾಡಿ ಮನುಷ್ಯೋತ್ತಮನವರಿವಿಗೂ ಯಾರು ಯಾರು ಏಷ್ಟೆಷ್ಟು ಗುಣಗಳಿಂದ ಕಮ್ಮಿಯಾಗಿರುವರೆಂಬ ತಾರತಮ್ಯ ಜ್ಞಾನವು ಆವಶ್ಯಕವೆಂದು ಈ ಸಂಧಿಯಲ್ಲಿ ಗುಣತಾರತಮ್ಯವನ್ನು ಹೇಳುತ್ತಾರೆ.

ಅದರಲ್ಲಿ ಮೊದಲನೆಯ ಎರಡು ಪದ್ಯಗಳಿಂದ ಗುಣತಾರತಮ್ಯಸಂಧಿಯನ್ನು ತನ್ನಂತರ್ಯಾಮಿಯಾದ ಶ್ರೀಭಗವಂತನನುಗ್ರಹದಿಂದಲೇ ಮುಗಿಸಬೇಕಲ್ಲದೆ ನಮ್ಮ ಪ್ರಯತ್ನ ಸಾಧ್ಯವಲ್ಲವೆಂದು ತಿಳಿದು ಪರಮಾತ್ಮನನ್ನು ಸ್ತುತಿಸುತ್ತಾ ಶ್ರೀಪರಮಾತ್ಮನು ಸರ್ವೋತ್ತಮನೆಂದು ನಿರೂಪಿಸುತ್ತಾರೆ.

**ಹರಿಕಥಾಮೃತಸಾರ ಗುರುಗಳ ಕರುಣದಿಂದ ॥ಪಲ್ಲವಿ॥**

**ಶ್ರೀಧರಾ ದುರ್ಗಾ ಮನೋರಮ**
**ವೇದಮುಖ ಸುಮನಸಗಣ ಸಮಾ**
**ರಾಧಿತ ಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ ||**

**ಗೋಧರ ಫಣಿವರಾತ ಪತ್ರ ನಿ**
**ಷೇಧ ದೋಷವಿಚಿತ್ರ ಕರ್ಮ ಸು**
**ಭೋಧ ಸುಖಮಯಗಾತ್ರ ಪರಮಪವಿತ್ರ ಸುಚರಿತ್ರ ॥೨॥**

ಪದ್ಯಾರ್ಥ.—ಶ್ರೀಧರಾ ದುರ್ಗಾ ಮನೋರಮ = ಶ್ರೀದೇವಿಯರು, ಭೂದೇವಿಯರು, ದುರ್ಗಾದೇವಿಯರೆಂಬ ಮೂವರ ಮನಸ್ಸಿಗೆ ಆನಂದವನ್ನು ಕೊಡಿಸುವವನು ಅಂದರೆ ಈ ಮೂರು ಮಂದಿಗೆ ಪತಿಯೆಂದರ್ಥ. ವೇದಮುಖಬ್ರಹ್ಮದೇವರು ಮೊದಲಾದ, ಸುಮನಸಗುಣ – ದೇವತಾಗಣದಿಂದ ಸಮಾರಾಧಿತಪದಾಂಭೋಜ=ಚೆನ್ನಾಗಿ ಆರಾದಿತವಾದ ಪಾದಕಮಲಗಳುಳ್ಳವನು, ಜಗದಂತರ್ಬಹಿರ್ವ್ಯಾಪ್ತ=ಜಗತ್ತಿನಲ್ಲಿ ಒಳಗೂ ಹೊರಗೂ ವ್ಯಾಪ್ತನಾಗಿರುವವನು. ಗೋಧರ=ಭೂಮಂಡಲವನ್ನು ಹೆಡೆಯಮೇಲೆ ಹೊತ್ತುಕೊಂಡಿರುವ, ಫಣಿವರ = ಸರ್ಪಶ್ರೇಷ್ಟನಾದ ಶೇಷದೇವರ ಹೆಡೆಗಳೆಂಬ, ಆತಪತ್ರ=ಛತ್ರಿ(ಕೊಡೆ)ಯುಳ್ಳವನು, ನಿಷೇಧದೋಷ ವಿಚಿತ್ರಕರ್ಮ=ಇದು ನಿಷೇಧ ಅಂದರೆ ಮಾಡಬಾರದ ಕರ್ಮ, ಇದು ದೋಷವೆಂದರೆ ಪಾಪ ಸಂಬಂಧವಾದ ಕರ್ಮವೆಂಬ ಭಾದಕವಿಲ್ಲದ ವಿಚಿತ್ರವಾದ ಕ್ರಿಯೆಗಳುಳ್ಳವನು ಸುಭೋಧಸುಖಮಯಗಾತ್ರ=ಉತ್ತಮವಾದ ಜ್ಞಾನಾನಂದ ಸ್ವರೂಪ ಉಳ್ಳವನು. ಪರಮಪವಿತ್ರ ಸುಚರಿತ್ರ=ಪರಮ ಮಂಗಳಕರವಾದ ಉತ್ತಮವಾದ ಚರಿತ್ರೆಯುಳ್ಳವನು.

ತಾತ್ಪರ್ಯ.—ಶ್ರೀ, ಭೂ, ದುರ್ಗಾಯೆಂಬ ಮೂರು ರೂಪಗಳಿಂದ ಕೂಡಿದ ರಮಾದೇವಿಯರಿಗೆ ಪತಿಯಾದವನು. ಬ್ರಹ್ಮಾದಿ ದೇವತಾಗಣದಿಂದ ಚೆನ್ನಾಗಿ ಪೂಜಿತವಾದ ಪಾದಕಮಲಗಳುಳ್ಳವನು. ಜಗತ್ತಿನ ಒಳಗೂ ಹೊರಗೂ ಸಹ ವ್ಯಾಪ್ತನಾಗಿರುವವನು. ಸಹಸ್ರಹೆಡೆಗಳ ಮಧ್ಯದಲ್ಲಿ ಒಂದು ಹೆಡೆಯ ಮೇಲೆ ಒಂದು ಸಾಸಿವೆ ಕಾಳಿನಂತೆ ಈ ಭೂಮಂಡಲವನ್ನು ಯಾರ ಹೆಡೆಯಮೇಲೆ ಶೋಭಿಸುತ್ತಿರುವುದೋ ಅಂತಹಾ ಶೇಷದೇವರ ಹೆಡೆಗಳೇ ಪರಮಾತ್ಮನಿಗೆ ಶ್ವೇತಛತ್ರಿಯಾಗಿ ಶೋಭಿಸುತ್ತಿರುವುದು. ಪರಮಾತ್ಮನಿಗೆ ಇದು ಮಾಡಬಹುದಾದ ಕರ್ಮ, ಇದು ಮಾಡಬಾರದ ಕರ್ಮವೆಂತಿಲ್ಲ. “ ಯೇದೋಷಾ ಇತರತ್ರಾಪಿ ತೇ ಗುಣಾಃ ಪರಮೇ ಮತಾಃ ” ಎಂದು ಇತರರಲ್ಲಿ ಯಾವುಯಾವುದು ದೋಷವಾಗಿ ಕಾಣುವುದೋ ಅದೆಲ್ಲವೂ ಪರಮಾ

ತ್ಮನಲ್ಲಿ ಗುಣವಾಗಿಯೇ ಪರಿಣಮಿಸುವುದೆಂದು ಶ್ರೀಮದಾಚಾರ್ಯರ ಉಕ್ತಿಯಿರುವುದರಿಂದ ಕೃಷ್ಣಾವತಾರದಲ್ಲಿ ಪರದಾರರಾದ ಗೋಪಿಕಾಸ್ತ್ರೀಯರಿಗೆ ಅಂಗಸಂಗವನ್ನು ಕೊಟ್ಟಿರುವನು. ಪರಸ್ತ್ರೀಗಮನವು ಮಹಾದೋಷಕರವೆಂದು ಶಾಸ್ತ್ರದಲ್ಲಿ ನಿಷೇಧ ಮಾಡಿದ್ದರೂ ಪರಮಾತ್ಮನ ಗೋಪಿಕಾ ಪರಿಗ್ರಹವು ಶ್ರವಣ ಪಠನ ಮಾಡುವವರಿಗೆ ಪರಮ ಮಂಗಳವನ್ನು ಕೊಡುವುದು. ಮಾವನನ್ನು ಕೊಲ್ಲುವುದು ಮಹಾ ಪಾತಕವಾದರೂ ಶ್ರೀಕೃಷ್ಣನು ಕಂಸನನ್ನು ಕೊಂದುದು ಪುಣ್ಯ ಚರಿತ್ರೆಯೆನಿಸಿತು. ಆದ್ದರಿಂದ ಅವನು ವಿಚಿತ್ರ ಕರ್ಮನೆಂದರು ಉತ್ತಮ ಜ್ಞಾನಾನಂದ ಸ್ವರೂಪನು, ಅವನ ಚರಿತ್ರೆಗಳನ್ನು ಶ್ರವಣ ಪಠನ ಮಾಡುವವರು ಸಕಲ ಪಾಪಗಳಿಂದ ಮುಕ್ತರಾಗಿ ಪರಮ ಪವಿತ್ರರಾಗಿ ದಿವ್ಯ ಗತಿಯನ್ನು ಹೊಂದುವರು.

**ನಿತ್ಯನಿರ್ಮಲ ನಿಗಮವೇದ್ಯೋ**
**ತ್ಪತ್ತಿ ಸ್ಥಿತಿಲಯ ದೂರವರ್ಜಿತ**
**ಪ್ರತ್ಯಗಾತ್ಮ ಪ್ರಸಿದ್ಧ ಮುಕ್ತಾಮುಕ್ತಗಣ ಸೇವ್ಯ ।**
**ಸತ್ಯಕಾಮಶರಣ್ಯ ಶಾಶ್ವತ**
**ಭೃತ್ಯವತ್ಸಲ ಭಯನಿವಾರಣ**
**ನತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂಪಾಹಿ** ॥೨॥

ಪದ್ಯಾರ್ಥ.—ನಿತ್ಯನಿರ್ಮಲ=ಸದಾ ನಿರ್ದೋಷನು, ನಿಗಮವೇದ್ಯ=ವೇದದಿಂದ ತಿಳಿಸಿಕೊಳ್ಳಲ್ಪಡುವವನು ಅಥವಾ ನಿತ್ಯ ನಿರ್ಮಲನಿಗಮವೇದ್ಯ–ನಿತ್ಯ ನಿರ್ದೋಷವಾದ ಅಪೌರುಷೇಯವಾದ ವೇದದಿಂದ ತಿಳಿಸಿಕೊಳ್ಳಲ್ಪಡುವನೆಂದು ಒಂದೇ ಪದವಾಗಿ ಅರ್ಥಮಾಡಬಹುದು. ಉತ್ಪತ್ತಿ ಸ್ಥಿತಿಲಯದೋಷವರ್ಜಿತ=ಉತ್ಪತ್ತಿ=ಹುಟ್ಟುವಿಕೆ, ಸ್ಥಿತಿ=ಬೆಳೆಯುವಿಕೆ, ಲಯ–ನಾಶಹೊಂದುವಿಕೆ, ಇವುಗಳಿಂದ, ದೂರವರ್ಜಿತ= ಬಿಡಿಸಿಕೊಳ್ಳಲ್ಪಟ್ಟವನು ಅಂದರೆ ಜನನ ಮರಣಾದಿಗಳಿಲ್ಲದವನೆಂದರ್ಥ. ಪ್ರತ್ಯಗಾತ್ಮಪ್ರಸಿದ್ಧ=ಸರ್ವಾಂತರ್ಯಾಮಿಯಾದುದರಿಂದ ಪರಮಾತ್ಮನೆಂದು ಪ್ರಸಿದ್ಧನಾದವನು. ಮುಕ್ತಾಮುಕ್ತಗಣಸೇವ್ಯ=ಮುಕ್ತಗಣದಿಂದಲೂ, ಅಮುಕ್ತರಾದ ಬ್ರಹ್ಮಾದಿ ಸಕಲ ದೇವತಾ ಗಣದಿಂದಲೂ ಮನುಷ್ಯೋತ್ತಮ ಮೊದಲಾದ ಯೋಗ್ಯಗಣದಿಂದಲೂ ಸಹ ಸೇವಿತನಾದ, ಸತ್ಯಕಾಮ = ಸತ್ಯಸಂಕಲ್ಪನು

ಶಾಶ್ವತ-ಶಶ್ವದೇಕಪ್ರಕಾರವಾಗಿ, ಶರಣ್ಯ=ಮೊರೆಹೊಗಲು ಯೋಗ್ಯನು, ಭೃತ್ಯವತ್ಸಲ ಭಯನಿವಾರಣನು-ಭಕ್ತರಿಗೆ ಬರುವ ಭಯವನ್ನು ನಿವಾರಣೆ ಮಾಡುವವನು, ಅತ್ಯಧಿಕಸಂಪ್ರಿಯತಮನು=ಬಹಳವಾದ ಉತ್ಕೃಷ್ಟವಾದ ಪ್ರೀತಿಯುಳ್ಳವನು, ಇಂತಹ ಜಗನ್ನಾಥ ! ಮಾಂ - ನನ್ನನ್ನು, ಪಾಹಿ= ಸಂರಕ್ಷಿಸು.

ತಾತ್ಪರ್ಯವು ಸ್ಪಷ್ಟವಾಗಿರುವುದು

ಅವತಾರಿಕೆ.—ಲಕ್ಷ್ಮೀದೇವಿಯರ ಮಹಿಮೆಯನ್ನು ಹೇಳುತ್ತಾ ಪರಮಾತ್ಮನಿಗೂ ಲಕ್ಷ್ಮೀದೇವಿಯರಿಗೂ ಇರುವ ತಾರತಮ್ಯವನ್ನು ಈ ಎರಡು ಪದ್ಯಗಳಿಂದ ಹೇಳುತ್ತಾರೆ—

**ಪರಮಪುರುಷನರೂಪಗಣವನು**
**ಅರಸಿಕೊಂಬಳು ಪ್ರವಹದಂದದಿ**
**ನಿರುಪಮಳು ನಿರ್ದುಷ್ಟಸುಖ ಸಂಪೂರ್ಣಳೆನಿಸುವಳು ।**
**ಹರಿಗೆ ಧಾಮತ್ರಯವೆನಿಸಿ ಯಾ**
**ಭರಣವಸನಾಯುಧಗಳಾಗಿ**
**ಧ್ಧರಿಗಳನೆ ಸಂಹರಿಸುವಳು ಅಕ್ಷರಳೆನಿಸಿಕೊಂಡು** ॥೩॥

ಪದ್ಯಾರ್ಥ.—ಪರಮಪುರುಷನ-ಕ್ಷರಾಕ್ಷರ ಪುರುಷರಲ್ಲಿ ಶ್ರೇಷ್ಟನಾದ ಶ್ರೀಪರಮಾತ್ಮನ, ರೂಪಗುಣವನು-ಅನಂತಾನಂತ ಗುಣಗಳನ್ನು, ಅರಸಿ= ಪಟ್ಟದರಾಣಿಯಾದ ರಮಾದೇವಿಯರು, ಪ್ರವಹದಂದದಿ=ಗಂಗಾದಿ ಮಹಾನದಿಗಳ ಪ್ರವಾಹದಂತೆ ಅವಿಚ್ಛಿನ್ನವಾಗಿ, ಮುಂದೆ ಹೋದ ನೀರು ಹಿಂತಿರುಗದೆ ಹಿಂದೆ ಹೇಗೆ ಮತ್ತೆ ಹೊಸ ನೀರು ಬರುತ್ತಿರುವುದೋ ಹಾಗೆ ಪ್ರವಾಹದಂತೆ ಅವಿಚ್ಛಿನ್ನವಾಗಿ ಕಾಣುತ್ತಿರುವ ರೂಪಗುಣಗಳಲ್ಲಿ ಕಂಡುದನ್ನು ಬಿಟ್ಟು ಹೊಸಹೊಸದಾಗಿ, ಕಾಂಬಳು-ಕಾಣುತ್ತಿರುವರು. ನಿರುಪಮಳ=ಉಪಮಾನವಿಲ್ಲದವರು. ನಿರ್ದುಷ್ಟಸುಖ ಸಂಪೂರ್ಣಳೆನಿಸುವಳು= ದೋಷಮಿಶ್ರವಲ್ಲದ ಸಂಪೂರ್ಣವಾದ ಆನಂದ ಸ್ವರೂಪರೆನಿಸುವರು. ಹರಿಗೆ=ಪತಿಯಾದ ಶ್ರೀಪರಮಾತ್ಮನಿಗೆ, ಧಾಮತ್ರಯವೆನಿಸಿ=ಶ್ವೇತದ್ವೀಪ ಅನಂತಾಸನ ವೈಕುಂಠವೆಂಬ ಮೂರು ವಿಧವಾದ ಮನೆಗಳೆಂದೆನಿಸಿ, ಆಭರಣ ವಸನಾಯುಧಗಳಾಗಿ=ಪರಮಾತ್ಮನು ಧರಿಸಿರುವ ಕೌಸ್ತುಭ ಮೊದಲಾದ ಆಭರಣ ಚಕ್ರಗದಾ ಮೊದಲಾದ ಆಯುಧರೂಪರಾಗಿಯೂ ಪೀತಾಂಬ

ರ ರೂಪರಾಗಿಯೂ, ಚಕ್ರ ಗದಾ ಮೊದಲಾದ ಆಯುಧ ರೂಪರಾಗಿಯೂ ಇದ್ದು, ಅಕ್ಷತೆಳೆನಿಸಿಕೊಂಡು - ನಾಶರಹಿತರಾದುದರಿಂದ ಅಕ್ಷರ ಶಬ್ದ ವಾಚ್ಯ ರಾಗಿ, ಅರಿಗಳನೆ - ಶತ್ರುಗಳನ್ನು, ಸಂಹರಿಸುವಳು - ಸಂಹಾರ ಮಾಡುವರು.

ತಾತ್ಪರ್ಯ:— ಪರಮಾತ್ಮನ ಪಟ್ಟದರಸಿಯರಾದ ರಮಾ ದೇವಿಯರು, ಪರಮಾತ್ಮನ ರೂಪಗುಣಗಳನ್ನು, ಗಂಗಾ ಪ್ರವಾಹಾದಿಗಳಲ್ಲಿ ಹೇಗೆ ನೀರು ಹೋಗುತ್ತಾ ಹಿಂದೆ ಬರುತ್ತಿರುವುದೋ ಹಾಗೆ ತಾವು ಎಷ್ಟು ರೂಪ ಗುಣಗಳನ್ನು ಕಂಡರೂ ಮತ್ತೂ ಅಪರಿಮಿತವಾದ ಗುಣ ರೂಪಗಳನ್ನು ಹುಡುಕುತ್ತಾ ಕಾಣುತ್ತಿರುವರು ಪರಮಾತ್ಮನಿಗೆ ಉಪಮಾನ ಕೊಡಲು ಹೇಗೆ ಅವನಿಗೆ ಸಮಾನರಿಲ್ಲವೋ ರಮಾದೇವಿಯರೂ ಸಹ ಉಪಮಾನವಿಲ್ಲದವರು. ಹೇಗೆಂದರೆ, ರಮಾ ದೇವಿಯರಕಿಂತಲೂ ಪರಮಾತ್ಮನು ಉತ್ತಮನಾದ ವನು. ಬ್ರಹ್ಮಾದಿಗಳೆಲ್ಲರೂ ಅವರವರಾದರು ಈಕೆಗೆ ಸಮರ್ಯ್ಯಾರು? ಆದ್ದರಿಂದ ನಿರುಪಮರು ನಿರ್ದುಷ್ಟವಾದ ಆನಂದವನ್ನು ಭಗವದನುಗ್ರಹದಿಂದ ಬ್ರಹ್ಮಾದಿಗಳಕಿಂತಲೂ ಅತ್ಯಧಿಕವಾಗಿ ಅನುಭವಿಸುತ್ತಿರುವರು. ಪರಮಾತ್ಮನು ವಾಸ ಮಾಡುವ ಶ್ವೇತ ದ್ವೀಪಾದಿ ಮೂರು ಲೋಕಗಳಲ್ಲೂ ಮನೆಗಳಾಗಿ ತಾವೇ ಸೇವಿಸುತ್ತಿರುವರು. ಪರಮಾತ್ಮನು ಧರಿಸಿರುವ ವಸ್ತ್ರಗಳೂ, ಒಡವೆಗಳು ಆಯುಧಗಳು, ಇವುಗಳೆಲ್ಲವೂ ರಮಾ ಸ್ವರೂಪಗಳೇ ಆಗಿರುವವು ಅಂದರೆ ಆಯಾ ರೂಪಗಳಿಂದ ರಮಾದೇವಿಯರೇ ಇದ್ದು ಭಗವಂತನ ಸೇವೆ ಮಾಡುತ್ತಾ ಗದಾ ಚಕ್ರಾದಿ ರೂಪಗಳಿಂದಿದ್ದು ಶತ್ರುಗಳನ್ನು ಸಂಹರಿಸುವರು. ಯಾವಾಗಲೂ, ನಾಶವಿಲ್ಲದ ಕಾರಣ "ಅಕ್ಷರ ಪುರುಷ" ಎಂಬ ಹೆಸರು ಈಕೆಗೆ ಬಂದಿರುವುದು ॥ ೩ ॥

**ಈತನಿಂದಾನಂತ ಗುಣದಲಿ**
**ಶ್ರೀ ತರುಣಿ ತಾ ಕಡಿಮೆಯೆನಿಪಳು**
**ನಿತ್ಯ ಮುಕ್ತಳು ನಿರ್ವಿಕಾರಳು ತ್ರಿಗುಣವರ್ಜಿತಳು ॥**
**ಧೌತ ಪಾಪ ವಿರಂಚಿ ಪವನರ**
**ಮಾತೆಯೆನಿಪ ಮಹಾಲಕುಮಿ ವಿ**
**ಖ್ಯಾತಳಾಗಿಹಲೆಲ್ಲ ಕಾಲದಿ ಶ್ರುತಿ ಪುರಾಣದೊಳು ॥೪॥**

ಪದ್ಯಾರ್ಥ:— ನಿತ್ಯಮುಕ್ತಳು - ಕೆಲವು ಕಾಲ ಅಮುಕ್ತರಾಗಿದ್ದು ಸಾಧನದಿಂದ ಬ್ರಹ್ಮಾದಿಗಳಂತೆ ಮುಕ್ತರಾದರೆಂಬ ಹೆಸರಿಲ್ಲದೆ ನಿತ್ಯ ಮುಕ್ತರೆಂದು ಪ್ರಸಿದ್ಧ ಪಡೆದವರಾದ, ನಿರ್ವಿಕಾರಳು - ವಿಕಾರ ರಹಿತರಾದ, ತ್ರಿಗುಣ ವರ್ಜಿತಳು - ತ್ರಾವೇತ್ರಿ ಗುಣ ಸ್ವರೂಪರಾದುದರಿಂದ, ಗುಣಗಳಿಂದ ಕಟ್ಟು ಬೀಳುವವರಾದ, ಧೌತಪಾಪ ವಿರಂಚಿಪವನರ - ಪಾಪರಹಿತರಾದ ಬ್ರಹ್ಮವಾಯು ಗಳಿಗೆ, (ಪಾಪ - ಪಾಪದಿಂದ, ಧೌತ - ಬಿಡಲ್ಪಟ್ಟ) ಮಾತೆಯೆನಿಪ - ತಾಯಿ ಯೆನಿಸುವ, ಶ್ರೀತರುಣಿ - ಯೌವನ ಸಂಪತ್ತಿನಿಂದ ಕೂಡಿದ ಕಾಂತಿಯುಕ್ತರಾದ, ಮಹಾ ಲಕುಮಿ - ಮಹಾ ಲಕ್ಷ್ಮೀ ದೇವಿಯರು, ಎಲ್ಲ ಕಾಲದಿ - ಸರ್ವಕಾಲದಲ್ಲೂ. ಈತನಿಂದ - ಈ ಪರಮಾತ್ಮನಿಗಿಂತ, ಅನಂತ ಗುಣದಲಿ, ಕಡಿಮೆ ಯೆನಿಪಳು - ತಾರತಮ್ಯದಲ್ಲಿ ಕಮ್ಮಿಯೆನಿಸುವರು. ಹೀಗೆ ಶ್ರುತಿ ಪುರಾಣದೊಳು - ವೇದಗಳಲ್ಲೂ, ಪುರಾಣಗಳಲ್ಲಿಯೂ, ವಿಖ್ಯಾತಳಾಗಿಹಳು

ತಾತ್ಪರ್ಯ :— ಪರಮಾತ್ಮನಕಿಂತಲೂ ಅನಂತಗುಣಗಳಲ್ಲಿ ಕಮ್ಮಿಯೆನಿಸುವರು ರಮಾ ದೇವಿಯರು. ಇವರು ನಿತ್ಯ ಮುಕ್ತರೆಂತಲೂ, ನಿರ್ವಿಕಾರರೆಂತಲೂ ಪ್ರಸಿದ್ಧಿ ಹೊಂದಿರುವರು. ಗುಣಾತ್ಮಕರೇತರಾದರೂ ಗುಣಗಳಿಂದ ಬದ್ಧರಲ್ಲ. ಪಾಪ ರಹಿತರಾದ ಬ್ರಹ್ಮ ವಾಯುಗಳಿಗೆ ತಾಯಿಯೆನಿಸುವರು ಈ ಪ್ರಕಾರವಾಗಿ ಸಕಲವಾದ ಪುರಾಣಗಳಲ್ಲೂ, ವೇದಗಳಲ್ಲೂ ಸಹ ಪ್ರಖ್ಯಾತರಾಗಿರುವರು. ||೪||

ಬ್ರಹ್ಮವಾಯುಗಳ ತಾರತಮ್ಯವನ್ನು ಹೇಳುತ್ತಾರೆ ಕಮಲ ಸಂಭವ ವೆಂಬ ಪದ್ಯದಿಂದ:—

**ಕಮಲ ಸಂಭವ ಪವನರೀರ್ವರು**
**ಸಮರು ಸಮವರ್ತಿಗಳು ರುದ್ರಾ**
**ದ್ಯಮರಗಣ ಸಂಸೇವಿತರಾಪರ ಬ್ರಹ್ಮ ನಾಮಕರು ||**
**ಯಮಳರಿಗೆ ಮಹಲಕುಮಿ ತಾನು**
**ತ್ತಮಳು ಕೋಟಿ ಸಜಾತಿ ಗುಣದಿಂ**
**ದಮಿತ ಸುಖ ವಿಜಾತ್ಯ ಧಮರೆನಿಪರು ಬ್ರಹ್ಮವಾಯುಗಳು ||೫||**

ಪದ್ಯಾರ್ಥ.— ಕಮಲ ಸಂಭವ - ಬ್ರಹ್ಮದೇವರು ಪವನ - ವಾಯುದೇವರು, ಈರ್ವರು - ಇಬ್ಬರು, ಸಮರು, ಸಮವರ್ತಿಗಳು - ಭಗವಂತನ

ಗುಣಗಳನ್ನು ಸಮವಾರ ತಿಳಿದು – ಸಮವಾಗಿ ಉಪಾಸನೆ ಮಾಡುವವರು, ರುದ್ರಾದ್ಯಮರಗಣ ಸಂಸೇವಿತ - ರುದ್ರಾದಿ ದೇವತಾ ಗಣದಿಂದ ಚೆನ್ನಾಗಿ ಸೇವೆ ತೆಗೆದು ಕೊಳ್ಳುವವರಾಗಿ ಅವರ ಬ್ರಹ್ಮನಾಮಕರು - ಪರಬ್ರಹ್ಮನಾದ ಪರಮಾತ್ಮನಿಗೆ ಎರಡನೆಯವರಾಗಿ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಅಪರ ಬ್ರಹ್ಮರೆಂಬ ಹೆಸರುಳ್ಳವರಾಗಿರುವರು. ಯಮಳರಿಗೆ . ಇವರಿಬ್ಬರಾದ ಬ್ರಹ್ಮವಾಯುಗಳಿಗೆ ಮಹಾಲಕುಮಿ ತಾನು - ಮಹಾಲಕ್ಷ್ಮೀ ದೇವಿಯರಾದ ತಾವು ಕೋಟಿ ಸಜಾತಿ ಗುಣದಿಂದ - ಲಕ್ಷ್ಮೀ ದೇವಿಯರ ಗುಣಗಳ ಜಾತಿಯನ್ನು ಸೇರಿದ ಕೋಟಿ ಗುಣಗಳಿಂದ ಉತ್ತಮಳು - ಉತ್ತಮರೆನಿಸುವರು. ಬ್ರಹ್ಮ ವಾಯುಗಳು ಮಿತ ಸುವಿಜಾತ್ಯಧಮರೆನಿಸುವರು - ಲಕ್ಷ್ಮೀದೇವಿಯರು ಎಷ್ಟು ಗುಣಗಳಿಂದ ಉತ್ತಮರೆಂದು ಗಣನೆ ಮಾಡಿರುವರೋ ಅಷ್ಟೆಂದು (ಮಿತವಾದ) ಪರಿಮಿತವುಳ್ಳ ಅಂದರೆ ಕೋಟಿ ಎಂದರ್ಥ. ವಿಜಾತಿ ಗುಣವೆಂದರೆ ಲಕ್ಷ್ಮೀ ದೇವಿಯವರ ಗುಣದ ಜಾತಿಯಲ್ಲವುದರಿಂದ ವಿಜಾತಿ ಎಂದು ಹೆಸರು. ಹೀಗೆ ಕೋಟಿ ವಿಜಾತೀಯ ಗುಣಗಳಿಂದ ಕಮ್ಮಿಯೆನಿಸುವರು.

ತಾತ್ಪರ್ಯ:— ವಾಯು ದೇವರೇ ಮುಂದಿನ ಕಲ್ಪದಲ್ಲಿ ಬ್ರಹ್ಮ ಪಟ್ಟಕ್ಕೆ ಬರುವವರು ಬ್ರಹ್ಮ ದೇವರಲ್ಲಿ ಇರುವ ಗುಣಗಳೆಲ್ಲವೂ ವಾಯುದೇವರಲ್ಲಿ ಇರುವುವು. ಆದರೆ ರುಜುಗಣಕ್ಕೆ ಸೇರಿದವರಲ್ಲಿ ೯೯ನೆಯ ಕಲ್ಪದಲ್ಲಿ ವಾಯು ದೇವರಾಗಿ ಅವತಾರತ್ರಯದಿಂದ ಭಗವತ್ಸೇವಾದಿಗಳನ್ನು ಮಾಡಿ ೧೦೦ನೆಯ ಕಲ್ಪದಲ್ಲಿ ಬ್ರಹ್ಮ ಪದವಿಯನ್ನು ಹೊಂದುವರು. ಹಿಂದಿನ ಕಲ್ಪದ ವಾಯು ದೇವರೇ ಈಗ ಬ್ರಹ್ಮದೇವರಾಗಿರುವವರು. ಆದ್ದರಿಂದ ಒಂದು ಕಲ್ಪಸಾಧನೆ ಮಾತ್ರ ವಾಯು ದೇವರು ಬ್ರಹ್ಮದೇವರಕಿಂತಲೂ ಕಮ್ಮಿ ಯಾದರೂ ಮಿಕ್ಕ ಎಲ್ಲಾ ಗುಣಗಳಲ್ಲೂ ಬ್ರಹ್ಮದೇವರಿಗೆ ಸಮರೆನಿಸುವರು. ರುದ್ರಾದಿ ಸಕಲ ದೇವತೆಗಳಿಗಿಂತಲೂ ಉತ್ತಮರು. ಪರಬ್ರಹ್ಮ ಪರಮಾತ್ಮನೆಂತಲೂ, ಅಪರ ಬ್ರಹ್ಮರು ಬ್ರಹ್ಮವಾಯುಗಳೆಂತಲೂ ಹೆಸರುಳ್ಳವರಾಗಿರುವರು. ಇವರಿಬ್ಬರಿಗಿಂತಲೂ ಕೋಟಿ ಸಜಾತಿ ಗುಣಗಳಿಂದ ರಮಾ ದೇವಿಯರು ಉತ್ತ

ತಾತ್ಪರ್ಯ.—ಬ್ರಹ್ಮ ವಾಯುಗಳಿಗಿಂತಲೂ ಅವರ ಪತ್ನಿಯರಾದ ಸರಸ್ವತೀ ಭಾರತೀಯರು ಬಲದಲ್ಲೂ ಜ್ಞಾನದಲ್ಲೂ ೧೦೦ ವಿಜಾತಿಗುಣಗಳಿಂದ ಕಮ್ಮಿಯೆನಿಸುವರು, ಬ್ರಹ್ಮದೇವರು ಹೇಗೆ ವಾಯುದೇವರಿಗಿಂತಲೂ ಒಂದು ಕಲ್ಪಸಾಧನೆ ಹೆಚ್ಚು ಮತ್ತು ಪದವಿಪ್ರಯುಕ್ತವಾಗಿ ಸ್ವಲ್ಪ ಉತ್ತಮರೋ ಹಾಗೆ ವಾಯುದೇವರ ಪತ್ನಿಯರಾದ ಭಾರತೀದೇವಿಯರಿಗಿಂತಲೂ ಬ್ರಹ್ಮದೇವರ ಪತ್ನಿಯರಾದ ಸರಸ್ವತೀದೇವಿಯರು ಪರಮ ಪದವಿ ಪ್ರಯುಕ್ತವಾಗಿ ಸ್ವಲ್ಪ ಉತ್ತಮರೆಂದು ಜ್ಞಾನಿಗಳು ಚಿಂತನೆ ಮಾಡಬೇಕೆಂದು ತಾತ್ಪರ್ಯ.

ಅವತಾರಿಕೆ.—ಗರುಡ, ಶೇಷ, ರುದ್ರರ ತಾರತಮ್ಯವನ್ನೂ ಕೃಷ್ಣನ ಹೆಂಡರಾದ ಜಾಂಬವತೀ ಮೊದಲಾದ ಆರು ಮಂದಿಯರ ತಾರತಮ್ಯವನ್ನೂ ಹೇಳುತ್ತಾರೆ.—

ಖಗ ಫಣಿಪತಿ ಮೃಡರು ಸಮ ವಾ
ಣಿಗೆ ಶತಗುಣಾಧಮರು ಮೂವರು
ಮಿಗಿಲೆನಿಸುವರು ಶೇಷಪದದಿಂದಲಿ ತ್ರಿಯಂಬಕಗೆ ||
ನಗಧರನ ಷಣ್ಮಹಿಷಿಯರು ಪ
ನ್ನಗ ವಿಭೂಷಣಗೈದು ಮೇನಕೆ
ಮಗಳು ವಾರುಣಿ ಸೌಪರಣಿಗಳಿಗಧಿಕವೆರಡು ಗುಣ ||೬||

ಪದ್ಯಾರ್ಥ.—ಖಗಫಣಿಪತಿಮೃಡರು-ಗರುಡ, ಶೇಷ, ರುದ್ರರು ಸಮರು. ಮೂವರು-ಈ ಮೂರುಮಂದಿಗಳೂ, ವಾಣಿಗೆ=ಸರಸ್ವತೀದೇವಿಯರಿಗೆ, ಶತಗುಣಾಧಮರು=೧೦೦ ಗುಣಗಳಿಂದ ಕಮ್ಮಿಯಾದವರು, ತ್ರಿಯಂಬಕಗೆ=ರುದ್ರದೇವರಿಗೆ, ಶೇಷ=ಶೇಷದೇವರು, ಪದದಿಂದಲಿ=ರುದ್ರದೇವರೇ ಮುಂದಿನ ಕಲ್ಪದಲ್ಲಿ ಶೇಷದೇವರಾಗುವುದರಿಂದ, ಪದವಿಯ ದೆಶೆಯಿಂದ, ಮಿಗಿಲೆನಿಸುವರು=ಉತ್ತಮರೆನಿಸುವರು, ನಗಧರನ=ಗೋವರ್ಧನಪರ್ವತವನ್ನೆತ್ತಿದ ಶ್ರೀಕೃಷ್ಣನ, ಷಣ್ಮಹಿಷಿಯರು=ಜಾಂಬವತಿ ಮೊದಲಾದ ೬ ಮಂದಿ ಹೆಂಡತಿಯರು, ಪನ್ನಗವಿಭೂಷಣಗೆ=ಸರ್ಪಭೂಷಣರಾದ ರುದ್ರದೇವರಿಗೆ, ಐದು-ಐದುಗುಣಗಳು ಕಮ್ಮಿಯೆನಿಸುವರು. ಮೇನಕೆ ಮಗಳು=ಮೇನಕೆಯ ಮಗಳಾದ ಪಾರ್ವತೀದೇವಿಯು, ವಾರುಣಿ=ವರುಣನ ಮಗಳಾದುದರಿಂದ ವಾರುಣಿ ಎಂಬ ಹೆಸರುಳ್ಳ ಶೇಷದೇವರ ಹೆಂಡತಿ,

ತಾತ್ಪರ್ಯ.—ಬ್ರಹ್ಮ ವಾಯುಗಳಿಗಿಂತಲೂ ಅವರ ಪತ್ನಿಯರಾದ ಸರಸ್ವತೀ ಭಾರತೀಯರು ಬಲದಲ್ಲೂ ಜ್ಞಾನದಲ್ಲೂ ೧೦೦ ವಿಜ್ಞಾನಗುಣಗಳಿಂದ ಕಮ್ಮಿಯೆನಿಸುವರು, ಬ್ರಹ್ಮದೇವರು ಹೇಗೆ ವಾಯುದೇವರಿಗಿಂತಲೂ ಒಂದು ಕಲ್ಪಸಾಧನೆ ಹೆಚ್ಚು ಮತ್ತು ಪದವಿಪ್ರಯುಕ್ತವಾಗಿ ಸ್ವಲ್ಪ ಉತ್ತಮರೋ ಹಾಗೆ ವಾಯುದೇವರ ಪತ್ನಿಯರಾದ ಭಾರತೀದೇವಿಯರಿಗಿಂತಲೂ ಬ್ರಹ್ಮದೇವರ ಪತ್ನಿಯರಾದ ಸರಸ್ವತೀದೇವಿಯರು ಪರಮ ಪದವಿ ಪ್ರಯುಕ್ತವಾಗಿ ಸ್ವಲ್ಪ ಉತ್ತಮರೆಂದು ಜ್ಞಾನಿಗಳು ಚಿಂತನೆ ಮಾಡಬೇಕೆಂದು ತಾತ್ಪರ್ಯ.

ಅವತಾರಿಕೆ.—ಗರುಡ, ಶೇಷ, ರುದ್ರರ ತಾರತಮ್ಯವನ್ನೂ ಕೃಷ್ಣನ ಹೆಂಡರಾದ ಜಾಂಬವತೀ ಮೊದಲಾದ ಆರು ಮಂದಿಯರ ತಾರತಮ್ಯವನ್ನೂ ಹೇಳುತ್ತಾರೆ.—

**ಖಗ ಫಣಿಪತಿ ಮೃಡರು ಸಮ ವಾ**
**ಣಿಗೆ ಶತಗುಣಾಧಮರು ಮೂವರು**
**ಮಿಗಿಲೆನಿಸುವರು ಶೇಷಪದದಿಂದಲಿ ತ್ರಿಯಂಬಕಗೆ ||**
**ನಗಧರನ ಷಣ್ಮಹಿಷಿಯರು ಪ**
**ನ್ನಗ ವಿಭೂಷಣಗೈದು ಮೇನಕೆ**
**ಮಗಳು ವಾರುಣಿ ಸೌಪರಣಿಗಳಿಗಧಿಕವೆರಡು ಗುಣ ||೬||**

ಪದ್ಯಾರ್ಥ.—ಖಗಫಣಿಪತಿಮೃಡರು-ಗರುಡ, ಶೇಷ, ರುದ್ರರು ಸಮರು. ಮೂವರು-ಈ ಮೂರುಮಂದಿಗಳೂ, ವಾಣಿಗೆ=ಸರಸ್ವತೀದೇವಿಯರಿಗೆ, ಶತಗುಣಾಧಮರು=೧೦೦ ಗುಣಗಳಿಂದ ಕಮ್ಮಿಯಾದವರು, ತ್ರಿಯಂಬಕಗೆ=ರುದ್ರದೇವರಿಗೆ, ಶೇಷ=ಶೇಷದೇವರು, ಪದದಿಂದಲಿ=ರುದ್ರದೇವರೇ ಮುಂದಿನ ಕಲ್ಪದಲ್ಲಿ ಶೇಷದೇವರಾಗುವುದರಿಂದ, ಪದವಿಯ ದೆಶೆಯಿಂದ, ಮಿಗಿಲೆನಿಸುವರು=ಉತ್ತಮರೆನಿಸುವರು, ನಗಧರನ=ಗೋವರ್ಧನಪರ್ವತವನ್ನೆತ್ತಿದ ಶ್ರೀಕೃಷ್ಣನ, ಷಣ್ಮಹಿಷಿಯರು=ಜಾಂಬವತಿ ಮೊದಲಾದ ೬ ಮಂದಿ ಹೆಂಡತಿಯರು, ಪನ್ನಗವಿಭೂಷಣಗೆ=ಸರ್ಪಭೂಷಣರಾದ ರುದ್ರದೇವರಿಗೆ, ಐದು-ಐದುಗುಣಗಳು ಕಮ್ಮಿಯೆನಿಸುವರು. ಮೇನಕೆಮಗಳು=ಮೇನಕೆಯ ಮಗಳಾದ ಪಾರ್ವತೀದೇವಿಯು, ವಾರುಣಿ=ವರುಣನ ಮಗಳಾದುದರಿಂದ ವಾರುಣಿ ಎಂಬ ಹೆಸರುಳ್ಳ ಶೇಷದೇವರ ಹೆಂಡತಿ,

ಗರುಡನ ಹೆಂಡತಿಯಾದ ಸೌಪರ್ಣಿದೇವಿಯರು ಇವರುಗಳಿಗಿಂತಲೂ ಎರಡು ಗುಣ ಅಧಿಕವು.

ತಾತ್ಪರ್ಯ.—ಗರುಡ ಶೇಷ ರುದ್ರರು ಸಮರು, ಸರಸ್ವತೀ ಭಾರತೀದೇವಿಯರಿಗಿಂತಲೂ ೧೦೦ ಗುಣಗಳು ಕಮ್ಮಿಯೆನಿಸುವರು. ಈ ಮೂವರು ಸಮರಾದರೂ ರುದ್ರದೇವರಿಗಿಂತಲೂ ಶೇಷದೇವರು ಪದವಿಯ ವಿಶೇಷದಿಂದ ಸ್ವಲ್ಪ ಅಧಿಕರೆನಿಸುವರು. ೩೯ ಕಲ್ಪಸಾಧನಮಾಡಿಕೊಂಡು ರುದ್ರಪದವಿಯನ್ನು ಹೊಂದಿ ಮುಂದಿನ ಕಲ್ಪದಲ್ಲಿ ಶೇಷಪದವಿಗೆ ಬರುವರು ರುದ್ರಪದವಿ ಅನುಭವಿಸಿದ ಮೇಲೆ ಶೇಷಪದವಿಗೆ ಬರುವುದರಿಂದ ರುದ್ರದೇವರು ಶೇಷದೇವರಿಗಿಂತಲೂ ಸ್ವಲ್ಪ ಕಮ್ಮಿ ಎನಿಸುವರು. ಕೃಷ್ಣನ ರೆಂಡರಾದ ಜಾಂಬವತಿ, ಮಿತ್ರವಿಂದಾ, ನೀಲಾ, ಭದ್ರಾ, ಲಕ್ಷ್ಮಣಾ, ಕಾಳಿಂದಿ ಎಂಬ ೬ ಮಹಿಳೆಯರು ಇಂದ್ರಾದಿಗಳಿಗಿಂತಲೂ ೫ ಗುಣ ಕಮ್ಮಿಯೂ ಪಾರ್ವತೀ, ವಾರುಣೀ, ಸೌಪರ್ಣಿ, ಎಂಬ ರುದ್ರ, ಶೇಷ, ಗರುಡರ ಹೆಂಡರುಗಳಿಗಿಂತಲೂ ಎರಡು ಗುಣಗಳಿಂದ ಉತ್ತಮರೆಂದು ತಿಳಿಯಬೇಕು.

ಅವತಾರಿಕೆ.— ಗರುಡ ಶೇಷ ರುದ್ರರ ಪತ್ನಿಯರ ತಾರತಮ್ಯವನ್ನು ಹೇಳುತ್ತಾರೆ.—

**ಗರುಡ ಶೇಷಮಹೇಶರಿಗೆ ಸೌ**
**ಪರುಣಿ ವಾರುಣಿ ಪಾರ್ವತಿಯು ಮೂ**

**ವರು ದಶಾಧಮ ವಾರುಣಿಗೆ ಕಡಿಮೆನಿಸುವಳು ಗೌರೀ।**
**ಹರನಮಡದಿಗೆ ಹತ್ತು ಗುಣದಲಿ**
**ಸುರಪಕಾಮರು ಕಡಿಮೆ ಇಂದ್ರಗೆ**

**ಕೊರತೆ ಯೆನಿಸುವ ಮನ್ಮಥನು ಪದದಿಂದಲಾವಾಗ ||೮||**

ಪದ್ಯಾರ್ಥ.—ಗರುಡ, ಶೇಷಮಹೇಶರಿಗೆ=ಗರುಡ-ಶೇಷ ರುದ್ರರಿಗಿಂತಲೂ, ಸೌಪರ್ಣೀ, ವಾರುಣೀ, ಪಾರ್ವತಿಯು ಮೂವರು, ದಶಾಧಮ=೧೦ ಗುಣಗಳು ಕಮ್ಮಿಯೆನಿಸುವರು. ವಾರುಣಿಗೆ=ಶೇಷದೇವರ ಹೆಂಡತಿಯಾದ ವಾರುಣಿದೇವಿಗಿಂತಲೂ, ಗೌರಿ-ಪಾರ್ವತಿದೇವಿಯು, ಕಡಿಮೆ ಎನಿಸುವಳು=ರುದ್ರ ಶೇಷದೇವರಿಗಿಂತಲೂ, ಪದವಿಪ್ರಯುಕ್ತ ಹೇಗೆ ಕಮ್ಮಿಯೋ ಹಾಗೆ ಶೇಷದೇವರ ಹೆಂಡತಿಗಿಂತಲೂ ರುದ್ರದೇವರ ಹೆಂಡತಿಯೂ

ಸ್ವಲ್ಪ ಕಮ್ಮಿ ಎನಿಸುವಳು. ಹೆರನವುಡದಿಗೆ - ಋುದ್ರದೇವನ ಹೆಂಡತಿಯಾದ ಪಾರ್ವತೀದೇವಿಗಿಂತಲೂ, ಸುರಸಕಾನುರು=ಇಂದ್ರ ವ ನ್ಮಥರು, ಕಡಿಮೆ=ಕವ್ಮಿ ಎನಿಸುವರು. ಇಂದ್ರಗೆ=ಇಂದ್ರನಿಗಿಂತಲೂ, ಆವಾಗ=ಯೂವಾಗಲೂ, ಪದದಿಂದ-ಪದದ ಸಂಬಂಧದಿಂದ, ಮನ್ಮಥನು, ಕೊರತೆಯೆನಿಸುವ-ಕಮ್ಮಿ ಎನಿಸುವನು.

ತಾತ್ಪರ್ಯ.—ಸೌಪರ್ಣಿ, ವಾರುಣಿ, ಪಾರ್ವತಿ ಈ ಮೂವರು ತಮ್ಮ ಪತಿಗಳಾದ ಗರುಡ, ಶೇಷ, ಋದ್ರರಿಗಿಂತಲೂ ೧೦ ಗುಣಗಳಿಂದ ಕಮ್ಮಿ ಎನಿಸುವರು. ಪದಪ್ರಯುಕ್ತವಾಗಿ ಶೇಷದೇವರಿಗಿಂತಲೂ ಋದ್ರದೇವರು ಹೇಗೆ ಸ್ವಲ್ಪ ಕಮ್ಮಿಯೋ ಹಾಗೆಯೇ ಶೇಷಪತ್ನಿಯಾದ ವಾರುಣಿಗಿಂತಲೂ ಪಾರ್ವತೀದೇವಿಯು ಸ್ವಲ್ಪ ಕಮ್ಮಿ, ಪಾರ್ವತೀದೇವಿಯರಿಗಿಂತಲೂ ಇಂದ್ರ ಮನ್ಮಥರು ಹತ್ತು ಗುಣಗಳಿಂದ ಅಧಮರೆನಿಸುವರು. ಪದಪ್ರಯುಕ್ತ ಇಂದ್ರನಿಗಿಂತಲೂ ಮನ್ಮಥನು ಸ್ವಲ್ಪ ಕಮ್ಮಿ ಎನಿಸುವನು.

ಅವತಾರಿಕೆ.—ಅಹಂಕಾರಿಕಪ್ರಾಣ ಸ್ವಾಯಂಭುವ ಮೊದಲಾದ ೬ ಜನ, ಪ್ರವಹವಾಯು ಇವರ ತಾರತಮ್ಯವನ್ನು ಹೇಳುತ್ತಾರೆ.—

ಈರೈದುಗುಣ ಕಡಿಮೆಯಾಹಂ
ಕಾರಿಕಪ್ರಾಣನು ಮನೋಜನ
ಗಾರಿಗಳಿಗನಿರುದ್ಧ ರತಿ ಮನುದಕ್ಷ ಶಚಿಯು ।
ಆರುಜನ ಸಮ ಪ್ರಾಣನಿಂದಲಿ
ಹೌರಿಗೆನಿಪರುಹತ್ತು ಗುಣದಲಿ
ಮಾರಜಾದ್ಯರಿಗೈದುಗುಣದಿಂದಧರ್ಮ ಪ್ರವಹಾಖ್ಯ ॥೯॥

ಪದ್ಯಾರ್ಥ.—ಮನೋಜಗಾರಿಗಳಿಗೆ-ಮನ್ಮಥ ಇಂದ್ರ ಇವರಿಗಿಂತಲೂ ಅಹಂಕಾರಿಕಪ್ರಾಣನು, ಈರೈದುಗುಣಕಡಿಮೆ=ಹತ್ತು ಗುಣಗಳಿಂದ ಕಮ್ಮಿಯು, ಅನಿರುದ್ಧರತಿಮನು-ಸ್ವಾಯಂಭುಮನು, ದಕ್ಷಗುರು-ಬೃಹಸ್ಪತ್ಯಾಚಾರ್ಯರು, ಶಚಿ=ಇಂದ್ರನ ಹೆಂಡತಿ, ಇವರು ೬ ಜನ ಸಮ=೬ ಜನವೂ ಸಮಾನರೆನಿಸುವರು. ಪ್ರಾಣನಿಂದಲಿ-ಅಹಂಕಾರಿಕಪ್ರಾಣನಿಗಿಂತಲೂ, ಹತ್ತು ಗುಣದಲಿ=ಹತ್ತು ಗುಣಗಳಿಂದ, ಹೌರಗೆನಿಪರು=ಕಮ್ಮಿ ಎನಿಸುವರು. ಮಾರಜಾದ್ಯರಿಗೆ=ಮನ್ಮಥನ ಮಗ ಅನಿರುದ್ಧ ಮೊದಲಾದ ೬

ಜನರಿಗಿಂತಲೂ, ಪ್ರವಹಾಖ್ಯ=ಕೋಣಾಧಿಪನಾದ ಪ್ರವಹವಾಯು ಎಂಬುವನು, ಐದುಗುಣದಿಂದಧಮ- ಐದು ಗುಣಗಳಿಂದ ಕಮ್ಮಿ ಎನಿಸುವನು.

ತಾತ್ಪರ್ಯ.— ಇಂದ್ರ ಮನ್ಮಥ ಇವರಿಗಿಂತಲೂ ಅಹಂಕಾರಿಕಪ್ರಾಣನು ಹತ್ತು ಗುಣಗಳಿಂದ ಕಮ್ಮಿಯೆನಿಸುವನು. ಏಕೋನಪಂಚ ಆಶನ್ಮಖುದ್ಗಣರೆಂಬ ವಾಯುಗಳಲ್ಲಿ ಶೇರಿದವನು ಈ ಅಹಂಕಾರಿಕಪ್ರಾಣನು ಈ ಪ್ರಾಣನಿಗಿಂತಲೂ ಹತ್ತು ಗುಣಗಳಿಂದ ಕಮ್ಮಿಯಾದವನು. ಪ್ರದ್ಯುಮ್ನನ ಮಗನಾದ ಅನಿರುದ್ಧ ಮನ್ಮಥನ ಹೆಂಡತಿ ರತಿ೨, ಸ್ವಾಯಂಭುವಮನು ೩, ದಕ್ಷಪ್ರಜೇಶ್ವರ ೪, ಬೃಹಸ್ಪತ್ಯಾಚಾರ್ಯರು ೫, ಇಂದ್ರನ ಹೆಂಡತಿ ಶಚೀದೇವಿ ೬, ಇವರಾರು ಜನ ಗುಣಗಳಲ್ಲಿ ಸಮಾನರು, ಇವರಿಗಿಂತಲೂ ೫ ಗುಣಗಳಿಂದ ಅಧಮನು ಪ್ರವಹವಾಯು " ಮರೀಚನಾಮಾಂತರವಾನ್ ಪ್ರವಹೋ ಮುಖ್ಯವಾಯುಜಃ || ಕೋಣಾಧಿಪಸ್ಸ ಏಪ್ರೋಕ್ತೋನಾಸಿಕ್ಯೋ ಭೌತಿಕಸ್ತಥಾ " || ಎಂಬ ತಾರತಮ್ಯ ಕೌಸ್ತುಭದ ವಾಕ್ಯಾನುಸಾರವಾಗಿ ಈ ಪ್ರವಹವಾಯುವಿಗೆ ಮರೀಚಿ ಎಂದು ನಾಮಾಂತರವೂ ಉಂಟು. ಪ್ರಧಾನ ವಾಯುವಿನ ಮಗನು ವಾಯವ್ಯದಿಕ್ಕಿಗೆ ಅಭಿಮಾನಿ, ಪಂಚಭೂತದಲ್ಲಿ ಸಂಬಂಧಪಟ್ಟು ಎಲ್ಲರ ಮೂಗಿನಲ್ಲಿ ಶ್ವಾಸರೂಪನಾಗಿ ತ್ವಗಿಂದ್ರಿಯ ವಿಷಯನಾಗಿಯೂ ಇರುವನೆಂದು ತಿಳಿಯಬೇಕು.

ಅವತಾರಿಕೆ.— ಗುಣದ್ವಯದಿಂ ಎಂಬ ಪದ್ಯದಿಂದ ಚಂದ್ರ, ಸೂರ್ಯ ಮೊದಲಾದ ನಾಲ್ವರು ವರುಣ, ನಾರದ, ಭೃಗು, ಅಗ್ನಿ ಇವರ ತಾರತಮ್ಯವನ್ನು ಹೇಳುತ್ತಾರೆ.–

**ಗುಣದ್ವಯದಿಂ ಕಡಿಮೆ ಪ್ರವಹಗೆ**
**ಇನಶಶಾಂಕ ಯಮ ಸ್ವಯಂಬುವ**
**ಮನು ಮಡದಿ ಶತರೂಪ ನಾಲ್ವರು ಪಾದಪಾದಾರ್ಧ ||**
**ವನಧಿ ನೀಚ ಪದಾರ್ಧ ನಾರದ**
**ಮುನಿಗೆ ಭೃಗ್ವಗ್ನಿ ಪ್ರಸೂತಿಗ**
**ಳೆನಿಸುವರು ಪಾದಾರ್ಧ ಗುಣದಿಂದಧಮರಹುದೆಂದು ||೧೧||**

ಪದ್ಯಾರ್ಥ.––ಪ್ರವಹಗೆ=ಪ್ರವಹವಾಯುವಿಗಿಂತಲೂ, ಇನ – ವಿವಸ್ವಾನ್ ಎಂಬ ಸೂರ್ಯನು, ಶಶಾಂಕ=ಚಂದ್ರನು, ಯಮ=ಯಮದೇವರು ಸ್ವಯಂಭುವ ಮನುವಿನ ಮಡದಿ=ಸ್ವಾಯಂಭುವಮನುವಿನ ಪತ್ನಿಯಾದ ಶತ

ರೂಪೆ, ಈ ನಾಲ್ವರು ಗುಣದ್ವಯದಿಂಕಡಿಮೆ=ಎರಡು ಗುಣಗಳಿಂದ ಕಮ್ಮಿಯೆನಿಸುವರು. ವನಧಿ=ಸಮುದ್ರರಾಜನಾದ ವರುಣನು, ಪಾದಪಾದಾರ್ಧ=ಒಂದು ಕಾಲು ಭಾಗವೂ ಮತ್ತು ಅದರಲ್ಲಿ ಅರ್ಧಭಾಗವೂ ನೀಚ=ಸೂರ್ಯಾದಿಗಳಿಗಿಂತಲೂ 6 ಆಣೆ ಭಾಗ ಕಮ್ಮಿಯೆನಿಸುವನು. ನಾರದ-ನಾರದಮುನಿಯು, ಪಾದಾರ್ಧನೀಚ-ವರುಣನಗಿಂತಲೂ ಅರ್ಧಕಾಲು ಭಾಗ ಕಮ್ಮಿಯೆನಿಸುವನು. ನಾರದನಿಗೆ-ನಾರದಮುನಿಯುಗಿಂತಲೂ, ಭೃಗ್ವಗ್ನಿ ಪ್ರಸೂತಿಗಳು ಭೃಗುಋಷಿಗಳು, ಅಗ್ನಿ, ದಕ್ಷಪ್ರಜೇಶ್ವರನ ಹೆಂಡತಿಯಾದ ಪ್ರಸೂತಿ ಎಂಬ ಇವರು ಮೂವರು ಪಾದಾರ್ಧಗುಣದಿಂದ=ಅರೆಕಾಲುಭಾಗ ಗುಣದಿಂದ, ಅಧಮರಹುದೆಂದು=ಕಮಿಯಾಗುವರೆಂದು ಪ್ರಸಿದ್ಧರಾಗಿರುವರು.

ತಾತ್ಪರ್ಯ.—ಈ ಮರುದ್ಗಣಕ್ಕೆ ಸೇರಿದ ಪ್ರವಹನಾಮಕವಾಯುವಿಗಿಂತಲೂ ಸೂರ್ಯ, ಚಂದ್ರ, ಸ್ವಾಯಂಭುವಮನುವಿನ ಹೆಂಡತಿ ಶತರೂಪೆ, ಯಮ ಈ ನಾಲ್ವರು ೨ ಭಾಗ ಗುಣದಿಂದ ಕಮ್ಮಿಯೆನಿಸುವರು. ಸೂರ್ಯಾದಿಗಳಿಗಿಂತಲೂ ೬ ಆಣೆ ಭಾಗ ವರುಣನು ಕಮ್ಮಿಯೆನಿಸುವನು. ವರುಣನಗಿಂತಲೂ ೨ ಆಣೆ ಭಾಗ ಗುಣದಿಂದ ನಾರದನು ಕಮ್ಮಿಯೆನಿಸುವನು. ನಾರದಮುನಿಗಿಂತಲೂ ಭೃಗುಋಷಿಗಳು, ಅಗ್ನಿ, ದಕ್ಷಪ್ರಜೇಶ್ವರನ ಮಡದಿಯಾದ ಪ್ರಸೂತಿ ಇವರು ಮೂವರು ಎರಡಾಣೆಯ ಭಾಗ ಕಮ್ಮಿಯೆನಿಸುವರು.

ಅವತಾರಿಕೆ.—ಹುತವಹಗೆ ಎಂಬ ಪದ್ಯದಿಂದ ಮರೀಚ್ಯಾದಿ ಬ್ರಹ್ಮದೇವರ ಮಕ್ಕಳು ೭ ಜನರು ವಿಶ್ವಾಮಿತ್ರರು ಮಿತ್ರನೆಂಬ ಸೂರ್ಯ ನಿರ್ಋತಿ ಪ್ರಾವಹಿ ತಾರೆ ನೊದಲಾದವರ ತಾರತಮ್ಯವನ್ನು ಹೇಳುತ್ತಾರೆ.

ಹುತವಹಗೆ ದ್ವಿಗುಣಾಧಮರು ವಿಧಿ
ಸುತ ಮರೀಚ್ಯಾದಿಗಳು ವೈವ
ಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮನು ||
ವ್ರತಿವರ ಜಗಸ್ಮಿತ್ರವರನಿರ
ಋತಿ ಪ್ರವಾಹಿ ತಾರರಿಗೆ ಕಿಂ
ಚಿತ ಗುಣಾಧಮ ಧನಪವಿಷ್ವಕ್ಸೇನರೆನಿಸುವರು ||೧೧||

ಪದಾರ್ಥ.—ವಿಧಿಸುತ=ಬ್ರಹ್ಮದೇವರ ಮಕ್ಕಳಾದ ಮರೀಚ್ಯಾದಿಗಳು=ಮರೀಚಿಋಷಿ ಮೊದಲಾದ ಸಪ್ತ ಪ್ರಜೇಶ್ವರರು, ವೈವಸ್ವತನು

ವಿಶ್ವಾಮಿತ್ರರು ಇವರು ಒಂಭತ್ತು ಜನರು, ಹುತವಹಗೆ= ಅಗ್ನಿಗಿಂತಲೂ, ದ್ವಿಗುಣಾಧಮರು–ಎರಡು ಗುಣಗಳಿಂದ ಕಮ್ಮಿಯೆನಿಸುವರು. ವಿಶ್ವಾಮಿತ್ರರೂ ಮರೀಚಿ ಮೊದಲು ವಿಶ್ವಾಮಿತ್ರರವರಿವಿಗೂ ಹೇಳಿದ 9 ಮಂದಿಗಳಿಗಿಂತಲೂ ವ್ರತಿವರ=ವಿಷ್ಣುವ್ರತದಲ್ಲಿ ಶ್ರೇಷ್ಟನಾದ, ಜಗನ್ಮಿತ್ರ=ಜಗತ್ತಿಗೆ ಮಿತ್ರನೆನಿಸುವ ಮಿತ್ರನೆಂಬ ಸೂರ್ಯನು, ಕಿಂಚಿದ್ಗುಣಾಧಮನು=ಸ್ವಲ್ಪಗುಣ ಕಮ್ಮಿಯೆನಿಸುವನು. ಮಿತ್ರನೆಂಬ ಸೂರ್ಯ, ವರನಿರಋತಿ=ರಾಕ್ಷಸ ಶ್ರೇಷ್ಟನಾದ ಕೋಣಾಧಿಪನಾದ ನಿರಋತಿ ಪ್ರಾವಹಿ ವಾಯು ತಾರೆ ಇವರೆಲ್ಲರೂ ಸಮಾನರು. ಮಿತ್ರವರ ನಿರಋತಿ ಪ್ರಾವಹಿ ತಾರರಿಗೆ=ಮಿತ್ರ ನಿರಋತಿ, ಪ್ರಾವಹಿ, ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರೆ ಇವರಗಿಂತಲೂ, ಧನಪ ವಿಷ್ವಕ್ಸೇನರು=ಕುಭೇರ, ವಿಷ್ವಕ್ಸೇನ ಇವರಿಬ್ಬರೂ ಕಿಂಚಿದ್ಗುಣಾಧಮರೆನಿಸುವರು=ಸ್ವಲ್ಪ ಗುಣ ಕಮ್ಮಿಯೆನಿಸುವರು, ಗಣೇಶನೂ ಕುಭೇರ ವಿಷ್ವಕ್ಸೇನರಿಗೆ ಸಮನೆಂದು ತಿಳಿಯಬೇಕು.

ತಾತ್ಪರ್ಯ.—ಬ್ರಹ್ಮದೇವರ ಮಕ್ಕಳಾದ ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಟ ಇವರೇಳು ಜನರು, ವೈವಸ್ವತಮನು, ವಿಶ್ವಾಮಿತ್ರರು ಅಂತು ಈ 9 ಮಂದಿಗಳು ಅಗ್ನಿಯಗಿಂತಲೂ 2 ಗುಣಗಳಿಂದ ಕಮ್ಮಿಯೆನಿಸುವರು. ಮಿತ್ರನೆಂಬ ಸೂರ್ಯ ದಿಕ್ಪಾಲಕನಾದ ನಿರಋತಿ, ಪ್ರಾವಹಿ ಎಂಬ ವಾಯು, ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರೆ ಇವರು 4 ಮಂದಿ ವಿಶ್ವಾಮಿತ್ರಾದಿಗಳಿಗಿಂತಲೂ ಸ್ವಲ್ಪ ಕಮ್ಮಿಯೆನಿಸುವರು. ಕುಭೇರ ಮತ್ತು ವಿಷ್ವಕ್ಸೇನ ಇವರಿಬ್ಬರೂ ತಾರೆ ಮೊದಲಾದವರಿಗಿಂತಲೂ ಕಮ್ಮಿ.

ಅವತಾರಿಕೆ.—ಸೋಮಪಾನ ಯೋಗ್ಯರಾದ ನೂರು ಮಂದಿ ಪ್ರಧಾನ ದೇವತೆಗಳಲ್ಲಿ ಮೇಲಿನ ತಾರತಮ್ಯಕ್ಕೆ 15 ಮಂದಿ ಹೋಗುತ್ತಾ ಉಳಿದ 85 ಮಂದಿ ದೇವತೆಗಳ ತಾರತಮ್ಯವನ್ನು ಧನಪ ಎಂಬ ಪದ್ಯದಿಂದ ಹೇಳುತ್ತಾರೆ

**ಧನಪ ವಿಷ್ವಕ್ಸೇನ ಗೌರೀ**
**ತನಯರಿಗೆ ಉಕ್ತೇತರರು ಸಮ**
**ರೆನಿಸುವರು ಯೆಂಭತ್ತೈದು ಜನಶೇಷಶತರೆಂದು ।**

**ದಿನಪರಾರೇಳಧಿಕ ನಾಲ್ವ**
**ತ್ತನಿಲರೇಳ್ವ ಸುರುದ್ರರೀರೈ**
**ದನಿತು ವಿಶ್ವೇದೇವ ಋಭುವಶ್ವಿನಿಗಳೆರಡು ಪಿತೃಧರಣೀ ॥೧೨॥**

ಪದ್ಯಾರ್ಥ.—ಧನಪವಿಷ್ವಕ್ಸೇನಗೌರೀತನಯ.ರಿಗೆ=ಕುಭೇರ, ವಿಷ್ವಕ್ಸೇನ, ಗಣೇಶ ಇವರಿಗೆ ಪ್ರಧಾನ ದೇವತೆಗಳು 100 ಮಂದಿಗಳಲ್ಲಿ ಉಕ್ಷೋತರರು=ವೆ ೧೫ ತಾರತಮ್ಯದಲ್ಲಿ ಸೇರಿದವರು ಹೋಗುತ್ತಾ ಉಳಿದವರು ಶೇಷ ಶತರೆಂದು=೧೦೦ರಲ್ಲಿ ಉಳಿದವರೆಂದು ಪ್ರಸಿದ್ಧರಾಗಿರುವ ಎಂಭತ್ತೈದು ಜನ-೮೫ ಜನರು ಸಮರೆನಿಸುವರು, ಅವರ್‍ಯಾರಾರೆಂದರೆ:—ಧನಪರಾರು=12ಸೂರ್ಯರಲ್ಲಿ ಮೇಲೆ ಹೇಳಿದ 6 ಹೋಗುತ್ತಾ ಉಳಿದ ಸೂರ್ಯರು 6ಮಂದಿ ಏಳಧಿಕನಾಲ್ವತ್ತನಿಲರು=49 ಮರುತ್ತುಗಳಲ್ಲಿ ಮೇಲೆ ಹೇಳಿದ ಇಬ್ಬರು ಹೋಗುತ್ತಾ 17 ಮಂದಿ ಮರುತ್ತುಗಳು (ವಾಯುಗಳು) ಏಳ್ವಸು=8ವಸುಗಳಲ್ಲಿ ಹಿಂದೆ ಹೇಳಿದ ಒಬ್ಬನನ್ನು ಬಿಟ್ಟು 7ವಸುಗಳು. ಋದ್ರರೀರೈದು=11 ರುದ್ರರಲ್ಲಿ ಹಿಂದೆ ಹೇಳಿದ ಒಬ್ಬರನ್ನು ಬಿಟ್ಟು ೧೦ ಮಂದಿ ರುದ್ರರು ಅನಿತು ವಿಶ್ವೇದೇವ=ಅಷ್ಟೇ ಸಂಖ್ಯಾವುಳ್ಳ ಅಂದರೆ ೧೦ ಸಂಖ್ಯಾಕರಾದ ವಿಶ್ವೇದೇವತೆಗಳು, ಋಭುಗಣ ೧, ಅಶ್ವಿನೀದೇವತೆಗಳೀರ್ವರು ಪಿತೃಗಣ ಮೂರಲ್ಲಿ ಹಿಂದೆ ಹೇಳಿದ ಎರಡು ಹೋಗುತ್ತಾ ೧ ಪಿತೃಗಣ ಭೂಮಿ ಅಂತೂ ೮೫ ಜನರೆಂದು ತಿಳಿಯಬೇಕು.

ತಾತ್ಪರ್ಯ.—ಕುಬೇರ, ವಿಷ್ವಕ್ಸೆನ ಗಣೇಶರಿಗೆ ಸಮರು ನೂರು ದೇವತೆಗಳ ಪೈಕಿ ಮೇಲೆ ಹೇಳಿದ 15 ಜನರನ್ನು ಬಿಟ್ಟು ಉಳಿದ 85 ಜನರೆಂದು ತಿಳಿಯಬೇಕು. ಈ ವಿಷಯವಾಗಿ ತಾರತಮ್ಯ ಕೌಸ್ತುಭವೆಂಬ ಗ್ರಂಥದಲ್ಲಿ " ನವಕೋಟ್ಯೋಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯತು ॥ ಸೋಮಾಧಿಕಾರೋ ವೇದೋಕ್ತಃ ॥ ದೇವತೆಗಳು ಒಟ್ಟಿನಲ್ಲಿ ಒಂಭತ್ತು ಕೋಟಿ ಸಂಖ್ಯ ಉಳ್ಳವರಿರುವರು. ಅವರಲ್ಲಿ ಸೋಮಪಾನಕ್ಕೆ ಯೋಗ್ಯರೆಂದು ನೂರು ದೇವತೆಗಳನ್ನು ಮಾತ್ರ ವೇದದಲ್ಲಿ ಹೇಳಿರುವರೆಂದು ಹೇಳುತ್ತಾರೆ. ಅವರು ಯಾರೆಂದರೆ.— " ಪ್ರಧಾನ ವಾಯುರ್ವ ಸರ್ವೋ ಋದ್ರಾದಿತ್ಯ ಮರುದ್ಗಣಾಃ । ಭೃಹಸ್ಪತಿ ಋಭುರ್ದಾಕ್ಯಾವಾ ಪೃಥಿವ್ಯಾ ವಶ್ವಿಸೌತಥಾ ವಿಶ್ವೇದೇವಾಶ್ಚ ಪಿತರಃ ಶತಸ್ಥಾ ದೇವತಾಮತಾಃ

ಆ ನೂರು ಮಂದಿ ದೇವತೆಗಳ ವಿವರವನ್ನು ತಿಳಿಸುತ್ತಾರೆ.—

ಪ್ರಧಾನವಾಯುದೇವರು. ೧.
ವಸುಗಳು ೮.

ದ್ರೋಣ
ಪ್ರಾಣ
ಧ್ರುವ
ಅರ್ಕ
ಅಗ್ನಿ
ದೋಷಾವಸು
ವಿಭಾವಸು
ದ್ಯು
ರುದ್ರರು ೧೧.
ರೈವತ
ಅಜ
ಭವ
ಭೀಮ
ವಾಮ
ಉಗ್ರ
ವೃಷಾಕಪಿ
ಅಜೈಕಪಾತ್
ಅಹಿರ್ಭುಧ್ವ
ಬಹುರೂಪ
ಮಹಾನ್
ಆದಿತ್ಯರು ೧೨.
ವಿವಸ್ವಾನ್
ಅರ್ಯಮಾ
ಪೂಷಾ
ತ್ವಷ್ಟಾ

| | |
|---|---|
| ಸವಿತಾ | ಕಾಂತ |
| ಭಗ | ಶುಚಿ |
| ಧಾತಾ | ಶ್ವೇತ |
| ಪರ್ಜನ್ಯ | ಅಜಿತ |
| ವರುಣ | ಗುರು |
| ಮಿತ್ರ | ಸಂಜ್ಞ |
| ಶಕ್ರ ( ಇಂದ್ರ ) | ಸಂವರ್ತಕ |
| ಉರುಕ್ರಮ | ಕಾಲ |
| ಮರುದ್ಗಣ 49 (ವಿವರ) | ಜಿತ |
| ಪ್ರಾಣ | ಸೌಮ್ಯ |
| ಅಪಾನ | ಕಪಿ |
| ವ್ಯಾನ | ಜಡ |
| ಉದಾನ | ಮಂಡೂಕ |
| ಸಮಾನ | ಸಂಹತ |
| ನಾಗ | ಸಿದ್ಧ |
| ಕೃಕಲ | ರಕ್ತ |
| ಕೂರ್ಮ | ಕೃಷ್ಣ |
| ದೇವದತ್ತ | ಕಪಿ |
| ಧನಂಜಯ | ಶುಕ |
| ಪ್ರವಹ | ಯತಿ |
| ವಿವಹ | ಭೀಮ |
| ಶಂಭು | ಹನು |
| ಸಂವಹ | ಪಿಂಗ |
| ಪರಾವಹ | ಅಹಂಕಾರಿಕಪ್ರಾಣ |
| ಉದ್ವಹ | ಕಂಪನ |
| ವಹ | ಬೃಹಸ್ಪತಿ |
| ಶಂಕು | ಋಭು |
| ಕಲ | ದ್ಯಾವಾ |
| ಶ್ವಾಸ | ಪೃಥಿವಿ |
| ನಲ | ಅಶ್ವಿನೀ |
| ಅನಿಲ | ನಾಸತ್ಯ |
| ಪ್ರತಿಭ | ದಸ್ರ |
| ಕುಮುದ | |

ವಿಶ್ವೇದೇವತೆಗಳು ೧೦.

| | |
|---|---|
| ಪುರೂರವ | ಕ್ರತು |
| ಆರ್ದ್ರ | ವಸು |
| ಕಾಮ | ಸತ್ಯ |
| ಕಾಲ | ಪಿತೃಗಳು ೩ |
| ಧುರಿ | ಕವ್ಯವಾಹ |
| ಲೋಚನ | ಯಮ |
| ದಕ್ಷ | ಸೋಮ |

ಹೀಗೆ ೧೦೦ ದೇವತೆಗಳು ಸೋಮಪಾನಾರ್ಹರು. ಇವರಲ್ಲಿ ಹದಿನೈದು ಮಂದಿ ದೇವತೆಗಳನ್ನು ಮೇಲಿನ ತಾರತಮ್ಯದಲ್ಲಿ ಸೇರಿಸಿರುತ್ತಾರೆ.—

ಅದರ ವಿವರ.—ಪ್ರಧಾನವಾಯುದೇವರು ವಸ್ತುಗಳಲ್ಲಿ ಪ್ರಧಾನಾಗ್ನಿ, ಋದ್ರರಲ್ಲಿ ಪಾರ್ವತೀಪತಿಯಾದ ಭವ, ಸೂರ್ಯರಲ್ಲಿ ೬ ಜನರು ಉರುಕ್ರಮನೆಂಬ ಸೂರ್ಯನು ಶ್ರೀವಿಷ್ಣುವೇ ಆದ್ದರಿಂದ ತಾರತಮ್ಯದಲ್ಲಿ ಸೇರುವುದಿಲ್ಲ. ಚಂದ್ರನಿಗೆ ಸಮನನ್ನಾಗಿ ಹೇಳಿದ ವಿವಸ್ವಾನ್ ಎಂಬುವನು ಮಿತ್ರ ಇವನನ್ನು ನಿರ್ಋತಿಗೆ ಸಮನನ್ನಾಗಿ ಹಿಂದೆಯೇ ಸೇರಿಸಿರುತ್ತದೆ. ವರುಣನು ಒಬ್ಬ ಸೂರ್ಯ ಇವನನ್ನು ಮೇಲೆ ಹೇಳಿರುತ್ತೆ. ಇಂದ್ರನೊಬ್ಬನು ಇವರಗಿಂತಲೂ ಕಮ್ಮಿಯಾದವರಲ್ಲಿ ಗಂಗೆಗೆ ಸಮನೆಂದು ಹೇಳುವ ಪರ್ಜನ್ಯ, ಮರುದ್ಗುಣದಲ್ಲಿ ಆಹಂಕಾರಿಕಪ್ರಾಣ, ಪ್ರವಹ, ಬೃಹಸ್ಪತಿ, ದ್ಯುಲೋಕಾಭಿಮಾನಿಯರು ಭಾರತಿ, ಪಿತೃಗಳಲ್ಲಿ ಯಮ, ಚಂದ್ರ ಇವರಿಬ್ಬರೂ ಅಂತು ಹದಿನೈದು ಹೋಗುತ್ತಾ ಉಳಿದವರು ೮೫ ಮಂದಿಯೆಂದು ದಾಸಾರ್ಯರು ಹೇಳಿರುತ್ತಾರೆ. ಅದರ ವಿವರ:—ಸೂರ್ಯರು ೬, ಮರುದ್ಗುಣರಲ್ಲಿ ೮೨, ವಸುಗಳು ೭, ಋದ್ರರು ೧೦, ಋಭು ೧, ಅಶ್ವಿನೀ ೨, ಪಿತೃ ೧, ಭೂಮಿ ೧, ಅಂತು ೮೫ ಮಂದಿದೇವತೆಗಳು, ವಿಷ್ವಕ್ಸೇನ, ಕುಬೇರ, ಗಣೇಶರಿಗೆ ಸಮರೆಂದುತಾತ್ಪರ್ಯ.

ಅವತಾರಿಕೆ.—ಕರ್ಮದೇವತೆಗಳ ತಾರತಮ್ಯವನ್ನು ಎರಡು ಪದ್ಯಗಳಿಂದ ಹೇಳುತ್ತಾರೆ.—

ಅವರಿಗಿಂತಲಿ ಕೊರತೆಯೆನಿಪರು
ಚ್ಯವನ ಸನಕಾದಿಗಳು ಪಾವಕ
ಕವಿಉಚಿಥ್ಯ ಜಯಂತಕಸ್ಯಪಮನುಗಳೇಕಾದಶ ॥
ಧ್ರುವನಹುಷ ಶಶಿಬಿಂಧು ಹೈಹಯ
ದವುಷ್ಯಂತ ವಿರೋಚನನ ನಿಜ
ಕುವರ ಬಲಿಮೊದಲಾದ ಸಪ್ತೇಂದ್ರರು ಕಕುಸ್ಥಗಯ ॥೧೩॥

ಪದ್ಯಾರ್ಥ.—ಇವರಿಗಿಂತಲಿ = ನೂರರಲ್ಲಿ ಉಳಿದ ದೇವತೆಗಳಾದ 85 ಮಂದಿಗಳಿಗಿಂತಲೂ, ಚ್ಯವನ ಸನಕಾದಿಗಳು = ಸನಕ, ಸನಂದನ ಸನತ್ಕುಮಾರ, ಸನತ್ಸುಜಾತರೆಂಬ ನಾಲ್ವರು, ಪಾವಕ = ಪಾವಕನಾಮಕ ಅಗ್ನಿ, ಕವಿ=ಶುಕ್ರಾಚಾರ್ಯರು, ಉಚಿಥ್ಯ, ಜಯಂತ=ಇಂದ್ರನ ಮಗ ಜಯಂತ, ಕಸ್ಯಪ, ಮನುಗಳೇಕಾದಶ = ವೈವಸ್ವತಮನು, ಸ್ವಾಯಂಭುವ ಮನು, ಇವರಿಬ್ಬರನ್ನು ಹಿಂದೆ ತಾರತಮ್ಯದಲ್ಲಿ ಸೇರಿಸಿರುತ್ತಾರೆ. ತಾಪಸನೆಂಬ ಮನು ಶ್ರೀಪರಮಾತ್ಮನ ಅವತಾರವು. ಈ ಮೂವರನ್ನು ಬಿಟ್ಟು ಉಳಿದವರು ಹನ್ನೊಂದು ಮನುಗಳು, ಧ್ರುವ, ನಹುಷ, ಶಶಿಬಿಂಧು, ಹೈಹಯ-ಕಾರ್ತವೀರ್ಯಾರ್ಜುನ, ದವುಷ್ಯಂತ = ದುಷ್ಯಂತರಾಜ, ವಿರೋಚನನ ನಿಜಕುವರ=ಪ್ರಹ್ಲಾದನ ಮಗ ವಿರೋಚನನು, ಅವನ ನಿಜಕುವರ=ಅಂದರೆ ಔರಸಮಗನು, ಬಲಿಚಕ್ರವರ್ತಿ ಮೊದಲಾದ=ಬಲಿಯೇ ಮೊದಲಾದ ಸಪ್ತೇಂದ್ರರು = ಹಿಂದಿನ ತಾರತಮ್ಯದಲ್ಲಿ ಸೇರಿಸಿದ 7 ಮಂದಿ ಇಂದ್ರರು ಕಕುಸ್ಥ, ಗಯ, ಇವರೆಲ್ಲರೂ, ಕೊರತೆಎನಿಪರು = ಕಮ್ಮಿ ಎನಿಸುವರು.

ಅವತಾರಿಕೆ.—ಉಳಿದ ಕರ್ಮಜರನ್ನು ಹೇಳುತ್ತಾರೆ.—

**ಪೃಥುಭರತ ಮಾಂಧಾತಪ್ರಿಯ**
**ವ್ರತ ಮರುತ ಪ್ರಹ್ಲಾದ ಸುಪರಿ**
**ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದಮುಖ ।**
**ಶತಸುಪುಣ್ಯಶ್ಲೋಕರು ಗದಾ**
**ಭೃತಗಧಿಷ್ಠಾನರು ಸುಪ್ರಿಯ**
**ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ॥೧೪॥**

ಪದಾರ್ಥ.—ಪೃಥು, ಭರತ=ದುಷ್ಯಂತನ ಮಗ ಭರತ, ಮಾಂಧಾತ, ಪ್ರಿಯವ್ರತ, ಮರುತ, ಪ್ರಹ್ಲಾದ, ಸುಪರೀಕ್ಷಿತ=ಉತ್ತಮನಾದ ಪರೀಕ್ಷಿದ್ರಾಜನು, ಹರಿಶ್ಚಂದ್ರ, ಅಂಬರೀಷ, ಉತ್ತಾನಪಾದ, ಮುಖ– ಮೊದಲಾದ, ಶತಪುಣ್ಯಶ್ಲೋಕರು=೧೦೦ ಮಂದಿ ಪುಣ್ಯಕೀರ್ತಿ ಸಂಪನ್ನ ರಾದ ರಾಜರು ಇವರೆಲ್ಲರೂ ಕರ್ಮಜರೆಂದು ಕರೆಸುವರು ಕರ್ಮದೇವತೆಗಳೆಂದು ಕರೆಸುವರು.

ತಾತ್ಪರ್ಯ.—13, 14 ಈ ಎರಡು ಪದ್ಯಗಳಲ್ಲಿ ಹೇಳಿದ ರಾಜರು, ಋಷಿ ಮೊದಲಾದವರೆಲ್ಲರೂ ಕರ್ಮದೇವತೆಗಳೆನಿಸುವರು. ಇವರು ಶೇಷಶತ ಸ್ಥರಾದ 85 ದೇವತೆಗಳಗಿಂತಲೂ ಸ್ವಲ್ಪ ಗುಣದಿಂದ ಕಮ್ಮಿಯೆನಿಸುವರು. ಈ ಎರಡು ಪದ್ಯಗಳಲ್ಲಿ ಹೇಳಿದವರೆಲ್ಲರೂ ಸಮರಾದರೂ ಭಗವದಾವೇಶ ಬಲದಿಂದ ಸ್ವಲ್ಪ ಹೆಚ್ಚು ಕಮ್ಮಿಯಾಗುವುದು. ಈ ಕರ್ಮಜರ ಮಧ್ಯದಲ್ಲಿ " ವಿಪ್ರತ್ವಾಚ್ಚ್ಯವನೋಚಥ್ಯ ತನ್ಮಧ್ಯೇ ಕಿಂಚಿದುತ್ತಮೌ " ಎಂಬ ತಾರತಮ್ಯ ಕೌಸ್ತುಭದ ವಾಕ್ಯಾನುಸಾರವಾಗಿ, ಬ್ರಾಹ್ಮಣರಾದುದರಿಂದ ಚ್ಯವನರು, ಉಚಥ್ಯರು ಇವರಿಬ್ಬರೂ ಸ್ವಲ್ಪ ಉತ್ತಮರೆನಿಸುವರು. ೧೦೦ಪುಣ್ಯಶ್ಲೋಕರಾಜರಲ್ಲಿ ಪ್ರಿಯವ್ರತನನ್ನು ಗಣನೆಮಾಡಿ ಮತ್ತೆ ದಾಸಾರ್ಯರು ಸುಪ್ರಿಯವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ಎಂಬುದಾಗಿ ಹೇಳಿರುವರು. ಶತಸುಪುಣ್ಯಶ್ಲೋಕರು=೧೦೦ ಮಂದಿ ಪುಣ್ಯಕೀರ್ತಿರಾಯರುಗಳು. ಗದಾಭೃತಗಧಿಷ್ಠಾನರು–ಗಧಾಧಾರಿಯಾದ ಪರಮಾತ್ಮನಂಶದಿಂದ ಕೂಡಿದ, ಕರ್ಮಜರು=ಕರ್ಮದೇವತೆಗಳಲ್ಲೂ, ಸುಪ್ರಿಯವ್ರತಗೆ=ಪುಣ್ಯಕೀರ್ತಿಯಾದ ಪ್ರಿಯವ್ರತರಾಜನಿಗೆ, ದ್ವಿಗುಣಾಧಮರೆಂದು = ಎರಡು ಗುಣದಿಂದ ಕಮ್ಮಿ ಎಂದು ಕರೆಸುವರು ಎಂದು ಹೇಳಿರುವರು. ಭಾಗವತ ಪಂಚಮ ಸ್ಕಂಧ ತಾತ್ಪರ್ಯದಲ್ಲಿ " ಪ್ರಿಯವ್ರತೋ ಗಯಶ್ಚೈವ ಕರ್ಮದೇವ ಸಮೌ ಗುಣೈಃ " ಪ್ರಿಯವ್ರತರಾಜ, ಗಯರಾಜ

ಇವರಿಬ್ಬರೂ ಗುಣದಲ್ಲಿ ಕರ್ಮದೇವತೆಗಳಿಗೆ ಸಮರೆಂದು ಹೇಳಿರುವರು. ಹೀಗಿರಲು ಪ್ರಿಯವ್ರತನನ್ನು ಮೊದಲು ಕರ್ಮಜರಲ್ಲಿ ಗಣನೆಮಾಡಿ, ಮತ್ತು ಮಿಕ್ಕವರು ಇವನಿಗೆ ಎರಡುಗುಣದಿಂದ ಕಮ್ಮಿಯೆಂದೇಕೆ ಹೇಳಿದರೆಂದರೆ, ಪ್ರಿಯವ್ರತನು ಕರ್ಮದೇವತೆಗಳಿಗೆ ಗುಣದಲ್ಲಿ ಸಮನೆಂದು ಸೇರಿಸಿದರೂ, ಅವನಲ್ಲಿ ವಿಶೇಷವಾದ ಭಗವದಂಶವು ಮಿಕ್ಕೆಲ್ಲರಗಿಂತಲೂ ಅಧಿಕವಾಗಿದ್ದುದರಿಂದ ೨ ಗುಣದಿಂದುತ್ತಮನೆಂದು ಹೇಳಿದ್ದಾರೆಂದು ತಿಳಿಯಬೇಕು. ವಿಶೇಷವಾದ ಭಗವದಂಶ ಅವನಲ್ಲಿದ್ದಿತೆಂಬುವುದಕ್ಕೆ ಭಾಗವತ ಪಂಚಮಸ್ಕಂಧದ ವಚನವಿರುವುದು. ಅದೆಂತೆನೆ.—ಪ್ರಿಯವ್ರತಕೃತಂ ಕರ್ಮಕೋನು ಕುರ್ಯಾದ್ವಿನೇಶ್ವರಂ । ಯೋನೇಮಿನಿಮ್ನೈರಕರೋಚ್ಛಾಯಾಂಘ್ನನ್ ಸಪ್ತವಾರಿಧೀನ್ ' ಪ್ರಿಯವ್ರತರಾಜನು ಮಾಡಿದ ಕಾರ್ಯವನ್ನು ಮಾಡಲು ಪರಮಾತ್ಮನನ್ನು ಬಿಟ್ಟು ಮತ್ತಾರಿಂದ ಸಾಧ್ಯವು ? ಯಾವ ಪ್ರಿಯವ್ರತರಾಜನು ರಾತ್ರಿಕಾಲಗಳಲ್ಲಿ ಪರ್ವತದ ಛಾಯೆಯಿಂದ ಕತ್ತಲಾಗುವುದನ್ನು ಪರಿಹರಿಸಿ ಹಗಲಿನಂತೆ ಮಾಡುವ ಉದ್ದೇಶವಾಗಿ ಒಂದುಚಕ್ರವುಳ್ಳ ರಥವನ್ನೇರಿ ಮೇರುಪರ್ವತವನ್ನು ಪ್ರದಕ್ಷಿಣೆ ಮಾಡುವಾಗ ರಥ ಚಕ್ರದ ತಗ್ಗಿನಿಂದ ಸಪ್ತಸಮುದ್ರವನ್ನು ರಚಿಸಿದನೋ ಎಂಬಿವೇ ಮೊದಲಾದ ವಾಕ್ಯಗಳಿಂದ ಸಪ್ತದ್ವೀಪ ಸಪ್ತಸಮುದ್ರಾದಿಗಳನ್ನು ಮಾಡುವ ಕಾರ್ಯ ಪರಮಾತ್ಮನನ್ನು ಬಿಟ್ಟು ಮತ್ತೊಬ್ಬರಿಂದ ಸಾಧ್ಯವಿಲ್ಲದ ಕಾರ್ಯವೆಂದಮೇಲೆ ಪ್ರಿಯವ್ರತನಲ್ಲಿ ವಿಶೇಷಾಂಶದಿಂದ ಪರಮಾತ್ಮನಿದ್ದು ಈ ಕಾರ್ಯಮಾಡಿದನೆಂದು ಸ್ಪಷ್ಟವಾಗುವದು. ಆದ್ದರಿಂದ ಪುಣ್ಯಶ್ಲೋಕರಾದ ನೂರುಮಂದಿ ರಾಜರುಗಳಲ್ಲಿ ಇವನೂ ಒಬ್ಬನಾದರೂ ಅವನಿಗಿಂತಲೂ ೨ ಗುಣ ಅಧಿಕನೆಂದು ದಾಸಾರ್ಯರು ಹೇಳಿರುತ್ತಾರೆ. ಅಥವಾ ಈ ಪದ್ಯದಲ್ಲಿರುವ "ಪ್ರಿಯವ್ರತಗೆ" ಎಂಬ ಪದವನ್ನು ಮುಂದಿನ ಪದ್ಯದಲ್ಲಿ ಅನ್ವಯಮಾಡಿಕೊಂಡರೆ ಸರಿಹೋಗುತ್ತದೆ. ಹೇಗೆಂದರೆ, ಉತ್ತಾನಪಾದ ಮುಖಶತಸುಪುಣ್ಯಶ್ಲೋಕರು, ಗದಾಭೃತಗಧಿಷ್ಠಾನರು, ಕರ್ಮಜರೆಂದು ಕರೆಸುವರು- ಇವರೆಲ್ಲರು ದ್ವಿಗುಣಾಧಮರು=ಉಕ್ತೇತರರಾದ ೮೫ ದೇವತೆಗಳಿಗಿಂತಲೂ ಎರಡು ಗುಣ ಕಮ್ಮಿಯೆನಿಸುವರೆಂದರ್ಥ ಮಾಡಿ, ಪ್ರಿಯವ್ರತಗೆಂಬ ಪದವನ್ನು ನಳನಿಸಂಜ್ಞಾರೋಹಿಣಿ ಎಂಬ ಪದ್ಯದಲ್ಲಿ ಸೇರಿಸಿಕೊಂಡು ನಳನಿ ಅಂದರೆ ಗಂಗೆ, ಗಂಗೆ ಮೊದಲಾದವರು ಸುಪ್ರಿಯವ್ರತಗಧಮರು

ಎಂದರ್ಥಮಾಡಿದರೂ ಸಿದ್ಧಾಂತಕ್ಕೂ ದಾಸರಾಯರ ವಾಕ್ಯಕ್ಕೂ ಅವಿರೋಧವಾಗುವದು.

ಅವತಾರಿಕೆ.—ಗುಣಾದಿಗಳ ತಾರತಮ್ಯವನ್ನು ಹೇಳುತ್ತಾರೆ.—

ನಳಿನಿ ಸಂಜ್ಞಾ ರೋಹಿಣಿ ಶಾ
ಮಲ ವಿರಾಟ್ ಪರ್ಜನ್ಯರಧಮರು
ಯಲರ ಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳಗೆ ||
ಜಲಮಯ ಬುಧಾಧಮದ್ವಿಗುಣದಿ
ಕೆಳಗೆನಿಸುವರುಷಾ ಶನೈಶ್ಚರ
ನಿಳಿಯು ಯಾರು ಗುಣಾಧಮರುಷಾದೇವಿ ದೆಶೆಯಿಂದ ||೧೫||

ಪದ್ಯಾರ್ಥ.—ನಳನಿ-ಗಂಗೆಯು, ಸಂಜ್ಞಾ-ವಿವಸ್ವಾನ್ ಎಂಬ ಸೂರ್ಯನ ಹೆಂಡತಿಯಾದ ಸಂಜ್ಞಾದೇವಿ, ರೋಹಿಣಿ=ಚಂದ್ರನ ಹೆಂಡತಿ, ಶಾಮಲಾ=ಯಮದೇವರ ಹೆಂಡತಿ, ವಿರಾಟ್-ಅನಿರುದ್ಧನ ಹೆಂಡತಿಯಾದ ಉಷಾದೇವಿಯ ನಾಮಾಂತರವು, ಪರ್ಜನ್ಯ = ಪರ್ಜನ್ಯನೆಂಬ ಸೂರ್ಯ, ಇವರಾರು ಮಂದಿಯರು ಸಮರು, ಮತ್ತು ಸುಪ್ರಿಯವ್ರತಗೆ=ಉತ್ತಮನಾದ ಪ್ರಿಯವ್ರತರಾಜನಿಗಿಂತಲೂ (ಈ ಪದವನ್ನು ಮೇಲಿನ ಪದ್ಯದಿಂದ ತೆಗೆದುಕೊಂಡದ್ದು.) ಅಧಮರು-ಎರಡು ಗುಣಗಳಿಂದ ಕಮ್ಮಿಯೆನಿಸುವರು. ಪ್ರಿಯವ್ರತಗೆ ಎಂದು ಹೇಳಿದ್ದರಿಂದ ಅವನಿಗೆ ಸಮರಾದ ಕರ್ಮದೇವತೆಗಳೆಲ್ಲರಗಿಂತಲೂ ಎಂದರ್ಥ. ಬಾಂಬೊಳಗೆ=ಗಂಗೆಯಗಿಂತಲೂ, ಯಲರಮಿತ್ರನ=ವಾಯುವಿಗೆ ಮಿತ್ರನಾದ, ಅಗ್ನಿಯಮಡದಿ-ಹೆಂಡತಿಯಾದ ಸ್ವಾಹಾದೇವಿಯು, ದ್ವಿಗುಣಾಧಮಳು=ಎರಡು ಗುಣದಿಂದ ಕಮ್ಮಿ ಎನಿಸುವಳು. ಜಲಮಯ-ಉದಕಾಭಿಮಾನಿಯಾದ, ಬುಧ-ಚಂದ್ರನ ಮಗನಾದ ಬುಧನು ದ್ವಿಗುಣದಿ-ಸ್ವಾಹಾಗಿಂತಲೂ ಎರಡು ಗುಣದಿಂದ, ಅಧಮನು=ಕಮ್ಮಿಯಾದವನು, ಉಷಾ=ಅಶ್ವಿನೀದೇವತೆಗಳ ಹೆಂಡತಿಯಾದ ಉಷಾದೇವಿಯು, ಇಳಿಯು=ಭೂಮಿಗೆ ಅಭಿಮಾನಿಯಾದ, ಶನೈಶ್ಚರನು ಇವರಿಬ್ಬರೂ, ಯಾರುಗುಣಾಧಮರು=ಎರಡು ಗುಣದಿಂದ ಕಮ್ಮಿಯೆನಿಸುವರು. ಇದರಲ್ಲಿರುವ "ಉಷಾದೇವಿ ದೆಸೆಯಿಂದ" ಎಂಬ ಪದವು ಮುಂದಿನ ಪದ್ಯಕ್ಕೆ ತೆಗೆದುಕೊಳ್ಳಬೇಕು.

ತಾತ್ಪರ್ಯ.—ಗಂಗೆ, ವಿವಸ್ವಾನ್ ಎಂಬ ಸೂರ್ಯನ ಹೆಂಡತಿಯಾದ ಸಂಜ್ಞಾದೇವಿ, ಇಂದ್ರನ ಹೆಂಡತಿ ರೋಹಿಣೀದೇವಿ, ಯಮದೇವರ ಪತ್ನಿ ಶಾಮಲಾದೇವಿ, ವಿರಾಟ್ ಎಂದು ಅನಿರುದ್ಧನ ಪತ್ನಿಯಾದ, ಬಾಣಾಸುರನ ಮಗಳು ಉಷಾದೇವಿಗೆ ನಾಮಾಂತರವು, ಆದುದರಿಂದ ಈ ಉಷಾ, ಪರ್ಜನ್ಯನೆಂಬ ಸೂರ್ಯ ಇವರಾರು ಮಂದಿ ಸಮಾನರು, ಪ್ರಿಯವ್ರತಾದಿಗಳಿಗಿಂತಲೂ ದ್ವಿಗುಣಾಧಮರು. ಅಗ್ನಿದೇವರ ಹೆಂಡತಿ ಸ್ವಾಹಾದೇವಿಯು, ಗಂಗಾದಿಗಳಿಗಿಂತಲೂ ಎರಡು ಗುಣದಿಂದ ಕಮ್ಮಿಯೆನಿಸುವಳು. ಉದಕಾಭಿಮಾನಿಯಾದ ಬುಧನು ಸ್ವಾಹಾದೇವಿಯಗಿಂತಲೂ ೨ ಗುಣಗಳಿಂದ ನೀಚನು. ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಯು ಪೃಥಿವೀ ಮಾನಿಯಾದ ಶನೈಶ್ಚರನೂ, ಬುಧನಗಿಂತಲೂ ೨ ಗುಣಗಳಿಂದ ಕೆಳಗೆನಿಸುವರು.

ಅವತಾರಿಕೆ.—ಪುಷ್ಕರ, ಆಜಾನಜರು, ಚಿರಪಿತೃಗಳು ಮೊದಲಾದವರ ತಾರತಮ್ಯವನ್ನು ಹೇಳುತ್ತಾರೆ.

ಎರಡು ಗುಣ ಕರ್ಮಾಧಿಪತಿ ಪು
ಷ್ಕರ ಕಡಿಮೆಯಾಜನ ದಿವಿಜರು
ಚಿರಪತೃಗಳಿಂದುತ್ತಮರು ಕಿಂಕರರು ಪುಷ್ಕರಗೆ ॥
ಸುರಪನಾಲಯಗಾಯಕೋತ್ತಮ
ರೆರಡಯಿದು ಗುಣದಿಂದಧಮ ತುಂ
ಬರಗೆ ಸಮ ನವಕೋಟಿ ಋಷಿಗಳು ನೂರುಜನರುಳಿದು ॥೧೬॥

ಪದ್ಯಾರ್ಥ.—ಕರ್ಮಾಧಿಪತಿಪುಷ್ಕರ=ಕರ್ಮಾಭಿಮಾನಿಯಾದ ಪುಷ್ಕರನು ಉಷಾದೇವಿಯ ದೆಶೆಯಿಂದ, ೨ ಗುಣ ಕಡಿಮೆ; ಆಜಾನದಿವಿಜರು =ಆಜಾನದೇವತೆಗಳು ಚಿರಪಿತೃಗಳಿಂದ ಉತ್ತಮರು, ಪುಷ್ಕರಗೆ, ಕಿಂಕರರು, ಎರಡೈದು ಗುಣದಿಂದಧಮ=೧೦ ಗುಣಗಳಿಂದ ಪುಷ್ಕರನಿಗಿಂತಲೂ ಕಮ್ಮಿಯೆನಿಸುವರು. ಆಜಾನಜರಾರೆಂದರೆ.—ಸುರಪನಾಲಯಗಾಯಕೋತ್ತಮ-ದೇವೇಂದ್ರನ ಮನೆಯಲ್ಲಿ ಗಾನಮಾಡುವವಗಲ್ಲಿ ಶ್ರೇಷ್ಠನಾದ, ತುಂಬರು ಎಂಬ ಗಂಧರ್ವ ತುಂಬರು ಮೊದಲಾದ ನೂರು ಗಂಧರ್ವರು, ತುಂಬರಗೆಸಮ-ತುಂಬರು ದೊದಲಾದವರಿಗೆ ಸಮಾನರೆನಿಸುವ, ನೂರುಜನರುಳಿದು=ನೂರು ಜನ ಉತ್ತಮ ಗಣದಲ್ಲಿ ಶೇರಿದವರನ್ನು ಬಿಟ್ಟು, ನವಕೋಟಿ ಋಷಿಗಳು=೯ಕೋಟಿ ಋಷಿಗಳು ಇವರೆಲ್ಲರೂ ಆಜಾನಜರು.

ತಾತ್ಪರ್ಯ.— ಉಷಾದೇವಿಯಗಿಂತಲೂ ಎರಡು ಗುಣ ಕಮ್ಮಿ ಎನಿಸುವನು ಕರ್ಮಾಭಿಮಾನಿ ಪುಷ್ಕರನೆಂಬುವನು. ಚಿರಪಿತೃಗಳಿಗಿಂತಲೂ ಉತ್ತಮರೆನಿಸುವ ಆಜಾನಜರು ಪುಷ್ಕರನಿಗಿಂತಲೂ ಹತ್ತು ಗುಣ ಕಮ್ಮಿ ಎನಿಸುವರು. ಆಜಾನಜರೆಂದರೆ, ತಾರತಮ್ಯಕೌಸ್ತುಭದಲ್ಲಿ "ಅನಾಖ್ಯಾತಾ ದೇವತಾಸ್ತು ಜಾತಾ ದೇವಕುಲೇಚಯಾಃ || ಗಂಧರ್ವಾಸ್ತುಂಬರು ಮುಖಾ ಶತಮಪ್ಸರಸಾಂ ಶತಂ || ನಾರದಾದೀ ನ ಚಿಥ್ಯಂ ತಾ ಪಿನಾಕುಋಷಯೋ ಖಿಲಾಃ || ಆಜಾನಜಾ ದೇವತಾಸ್ತೆ' ದೇವತಾಕುಲದಲ್ಲಿ ಹುಟ್ಟಿ ದೇವತೆಗಳೆಂದು ಗಣನೆಗೆ ಬಾರದಿರುವವರು ತುಂಬರು ಮೊದಲಾದ ನೂರು ಗಂಧರ್ವರು, ಅಪ್ಸರಸ್ತ್ರೀಯರು ನೂರು, ನಾರದರ ಮೊದಲುಮಾಡಿ ಉಚಿಥ್ಯರ ವರೆಗೂ ಹೇಳಿರುವ ಋಷಿಗಳನ್ನು ಬಿಟ್ಟು ಮಿಕ್ಕ ಎಲ್ಲಾ ಋಷಿಗಳು ಇವರುಗಳಿಗೆ ಆಜಾನಜ ದೇವತೆಗಳೆಂದು ಹೇಳಿರುವರು. ಇವರೆಲ್ಲರೂ ಪುಷ್ಕರನಿಗಿಂತಲೂ ಹತ್ತು ಗುಣಗಳಿಂದ ಕಮ್ಮಿಯಾದವರು.

ಅವತಾರಿಕೆ.— ಅವಶಿಷ್ಟರಾದ ಮನುಷ್ಯೋತ್ತಮರ ಪರ್ಯಂತ ತಾರತಮ್ಯವನ್ನು ಪೂರೈಸುತ್ತಾರೆ.—

ಅವರವರಪತ್ನಿಯರಪ್ಸರ
ಯುವತಿಯರು ಸಮ ಉತ್ತಮರನುಳಿ
ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ ||
ಕುವಲಯಾಧಿಪರೀರಯಿದು ಗುಣ
ವವನಿಪ ಸ್ತ್ರೀಯರುದಶೋತ್ತರ
ನವತಿ ಗುಣದಿಂದಧಮರೆನಿಪರು ಮಾನುಷೋತ್ತಮರು ||೧೭||

ಪದ್ಯಾರ್ಥ.— ಅವರವರ=ತುಂಬರು ಮೊದಲಾದ ಗಂಧರ್ವರು ನೂರು ಕಮ್ಮಿ ನವಕೋಟಿ ಋಷಿಗಳು ಇವರುಗಳ, ಪತ್ನಿಯರು=ಹೆಂಡರುಗಳು; ಅಪ್ಸರಯುವತಿಯರು=ಅಪ್ಸರ ಸ್ತ್ರೀಯರುಗಳು, ಉತ್ತಮರನುಳಿದು ಮೇಲೆ ಉತ್ತಮರೆಂದು ಗಣನೆಮಾಡಿರುವ ಋಷಿಪತ್ನಿ ಮೊದಲಾದವರನ್ನು ಬಿಟ್ಟು ಸಮರೆನಿಸುವರು. ಮನುಜಗಂಧರ್ವರು ದ್ವಿಷಡ್ಗುಣದಿ–ಮೇಲೆ ಹೇಳಿದ ದೇವಗಂಧರ್ವರಿಗಿಂತಲೂ ೧೨ಗುಣಗಳಿಂದ, ಅವರರೆನಿಪರು=ಕಮ್ಮಿ ಎನಿಸುವರು. ಕುವಲಯಾಧಿಪರು–ಭೂಮಿಯಲ್ಲಿ ರಾಜರೆಂದು ಪ್ರಸಿದ್ಧ

ರಾದವರು, ಅವನಿಪರಸ್ತ್ರೀಯರು=ಚಕ್ರವರ್ತಿಗಳ ಹೆಂಡರುಗಳು, ಇವರು ಈರೈದುಗುಣ = 10 ಗುಣಗಳಿಂದ ಅಧಮರೆನಿಸುವರು. ಮಾನುಷೋತ್ತಮರು, ಚಕ್ರವರ್ತಿಗಳಕಿಂತಲೂ, ದಶೋತ್ತರನವತಿಗುಣದಿಂದ = 10 ಅಧಿಕರ್ಗಂಗುಣ ಅಂದರೆ 100 ಗುಣಗಳಿಂದ ಅಧಮರೆನಿವರು.

ತಾತ್ಪರ್ಯ.—ಈ ಮೂಲದಲ್ಲಿ ಸಾಧಾರಣವಾಗಿ ತೋರುವಂತೆ ಗಂಧರ್ವರು ೧೦೦ ಮಂದಿ, ಅಪ್ಸರರು ೧೦೦ ಮಂದಿ, ನೂರು ಕಮ್ಮಿ ಕೋಟಿ ಋಷಿಗಳು ಅವರ ಪತ್ನಿಯರು ಇವರೆಲ್ಲರೂ ಪುಷ್ಕರನಕಿಂತಲೂ ಹತ್ತು ಗುಣ ಕಮ್ಮಿಯೆಂತಲೂ, ದೇವಗಂಧರ್ವಾದಿಗಳಕಿಂತಲೂ ಮನುಷ್ಯಗಂಧರ್ವರು 12 ಗುಣಗಳಿಂದ ಕಮ್ಮಿಯೆಂತಲೂ ಚಕ್ರವರ್ತಿಗಳು ಅವರ ಹೆಂಡರೂ ಸಹ ಮನುಷ್ಯಗಂಧರ್ವರಕಿಂತಲೂ 10 ಗುಣಗಳಿಂದ ನೀಚರೆಂತಲೂ ಅವರ ಕಿಂತಲೂ ಮನುಷ್ಯೋತ್ತಮರು 100 ಗುಣಗಳಿಂದ ನೀಚರೆಂತಲೂ ಅರ್ಥವಾಗುತ್ತದೆ. ಅದರಂತೆಯೇ ಪದ್ಯಾರ್ಥದಲ್ಲಿ ಬರಿಯಲ್ಪಟ್ಟಿದೆ. ಆದರೆ ತಾರತಮ್ಯಕೌಸ್ತುಭದ ವಚನಗಳಿಗೂ ದಾಸಾರ್ಯರ ವಾಕ್ಯಕ್ಕೂ ಪರಸ್ಪರ ವಿರೋಧ ಬರುವುದು. ಹೇಗೆಂದರೆ "ಆಜಾನೇಭ್ಯೋಶತಂನ್ಯೂನಾಃ ಪಿತೃಭ್ಯಶ್ಚ ಶತಾಧಮಾಃ || ಉಕ್ತಾನ್ಯೇ ದೇವಗಂಧರ್ವಾಸ್ತೃಚ್ಛತೋನಾನ್ಯಗಾಯತಾಃ || ಗಂಧರ್ವೇಭ್ಯೋ ಮಾನುಷೇಷ್ಯಃ ಶತೋನಾಶ್ಚಕ್ರವರ್ತಿನಃ || ಕ್ಷಿತಿಪೇಭ್ಯೋ ಶತಾಂಶೋನಾ ಈರಿತಾಮಾನುಷೋತ್ತಮಾಃ" ಆಜಾನ ದೇವತೆಗಳಿಗಿಂತಲೂ ಮತ್ತು ಚಿರಪಿತೃಗಳಿಗಿಂತಲೂ ಮೇಲೆ ಹೇಳಿದ ಗಂಧರ್ವರನ್ನು ಬಿಟ್ಟು ಉಳಿದ ದೇವಗಂಧರ್ವರು 100 ಗುಣದಿಂದ ಕಮ್ಮಿಯೆನಿಸುವರು. ಅವರಕಿಂತಲೂ 100 ಗುಣಗಳಿಂದ ಕಮ್ಮಿಯೆನಿಸುವರು ಮನುಷ್ಯ ಗಂಧರ್ವರು. ಅವರಕಿಂತಲೂ 100 ಗುಣ ಕಮ್ಮಿ ಚಕ್ರವರ್ತಿಗಳು. ಅವರಕಿಂತಲೂ ೧೦೦ ಗುಣಗಳಿಂದ ಮನುಷ್ಯೋತ್ತಮರು ಕಮ್ಮಿಯೆನಿಸುವರೆಂದು ಪ್ರಮಾಣಾರ್ಥ. ಇದನ್ನನುಸರಿಸಿ ಮೂಲಕ್ಕೆ ಪ್ರಕಾರಾಂತರವಾಗಿ ಅರ್ಥವು ಬರೆಯಲ್ಪಡುತ್ತದೆ.

ಪ್ರಕಾರಾಂತರವಾಗಿ 17ನೆಯ ಪದ್ಯಾರ್ಥ.—ಉತ್ತಮರನುಳಿದು ಮೇಲಿನ ತಾರತಮ್ಯದಲ್ಲಿ ಉತ್ತಮರನ್ನಾಗಿ ಗಣನೆ ಮಾಡಿದವರನ್ನು ಬಿಟ್ಟು ಅವರವರಪತ್ನಿಯರ = ಋಷಿಗಳ ಪತ್ನಿಯರು, ಅಪ್ಸರಯುವತಿಯರು= ಅಪ್ಸರಸ್ತ್ರೀಯರು, ಸಮ--ಸಮರೆನಿಸುವರು, ದ್ವಿಷಡ್ಗುಣದಿ = 12 ಗುಣ

ಗಳಿಂದ, ಅವರರೆನಿಪರು–ಪತಿಗಳಿಗಿಂತಲೂ ನೀಚರೆನಿಸುವರು, ಮನುಜ ಗಂಧರ್ವರು, ದಶೋತ್ತರನವತಿಗುಣದಿಂದ=೧೦೦ ಅಧಿಕ ಗುಣಗಳಿಂದ ಒಟ್ಟು ೧೦೦ ಗುಣಗಳಿಂದ, ದೇವಗಂಧರ್ವರಕಿಂತಲೂ ಅಧಮರೆನಿಸುವರು. ಕುವಲಯಾಧಿಪರು = ಚಕ್ರವರ್ತಿಗಳು, ಮನುಜ ಗಂಧರ್ವರಕಿಂತಲೂ, ದಶೋತ್ತರನವತಿಗುಣದಿಂದ=೧೦೦ ಗುಣಗಳಿಂದ ( ಈ ಪದವನ್ನು ೨–೩ ಸಲ ಆವೃತ್ತಿಮಾಡಿಕೊಳ್ಳಬೇಕು. ) ಅಧಮರೆನಿಪರು. ಅವನಿಪರಸ್ತ್ರೀಯರು = ಚಕ್ರವರ್ತಿಗಳ ಹೆಂಡತಿಯರು, ಈರೈದುಗುಣ–10 ಗುಣಗಳಿಂದ, ಪತಿಗಳಕಿಂತಲೂ ಅಧಮರೆನಿಪರು ಮನುಷ್ಯೋತ್ತಮರು, ಚಕ್ರವರ್ತಿಗಳಕಿಂತಲೂ, ದಶೋತ್ತರನವತಿಗುಣದಿಂದ–೧೦೦ ಗುಣಗಳಿಂದ ಅಧಮರೆನಿಪರು, ಎಂದು ಅರ್ಥಮಾಡಿದರೆ ಪ್ರಮಾಣಾರ್ಣವೂ ಮೂಲವಾಕ್ಯವೂ ಸರಿಹೋಗುವುದೆಂದು ತೋರಿದಂತೆ ಸೂಚಿಸಿರುತ್ತೆ.

ಅವತಾರಿಕೆ.—ತ್ರಿವಿಧ ಜೀವರ ಲಕ್ಷಣವನ್ನು ಹೇಳುತ್ತಾರೆ.—

**ಸತ್ವಸತ್ವರು ಸತ್ವರಾಜಸ**
**ಸತ್ವತಾಮಸ ಮೂವರು ರಜ**
**ಸ್ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರು ।**
**ನಿತ್ಯಬದ್ಧರು ರಜೋರಜರು**
**ತ್ಪತ್ತಿ ಭೂಸ್ವರ್ಗದೊಳು ನರಕದಿ**
**ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರು** ॥೧೮॥

ಪದ್ಯಾರ್ಥ.—ಸತ್ವಸತ್ವರು=ಸಾತ್ವಿಕ ಸಾತ್ವಿಕರು, ಸತ್ವರಾಜಸ=ಸಾತ್ವಿಕರಾಜಸರು, ಸತ್ವತಾಮಸ–ಸಾತ್ವಿಕತಾಮಸರು, ಮೂವರು–ಈ ಮೂವರು, ಮತ್ತು ರಜಸ್ಸತ್ವರು=ರಾಜಸ ಸಾತ್ವಿಕರು, ಇವರೆಲ್ಲರು = ಅಧಿಕಾರಿಗಳು=ಮೋಕ್ಷಾದಿಕಾರಿಗಳು ( ಮುಕ್ತಿಯೋಗ್ಯರೆಂದರ್ಥ) ಭಗವದ್ಭಕ್ತರೆನಿಸುವರು. ರಜೋರಜರು=ರಾಜಸರಾಜಸರು, ನಿತ್ಯಬದ್ಧರು=ಸದಾಬದ್ಧರೆನಿಸುವರು, ಅಂದರೆ ನಿತ್ಯ ಸಂಸಾರಿಗಳೆಂದರ್ಥ. ಉತ್ಪತ್ತಿ ಭೂಸ್ವರ್ಗದೊಳು=ಭೂಮಿಯಲ್ಲಿ ಹುಟ್ಟುವುದು ಸ್ವರ್ಗಕ್ಕೆ ಹೋಗುವುದು ಹೀಗಿದ್ದು ಕಡೆಗೆ ನಿತ್ಯ ಸಂಸಾರವೆಂಬ ಸುಖದುಃಖ ಮಿಶ್ರವಾದ ಸಾಂತಾನಿಕ ಲೋಕವನ್ನು ಸೇರುವರೆಂಬ ತಾತ್ಪರ್ಯ, ರಜಸ್ತಾಮಸರು = ರಾಜಸತಾಮಸರು, ನರಕದಲ್ಲೂ,

ಪೃಥಿವಿಯೊಳು=ಭೂಮಿಯಲ್ಲೂ, ಸಂಚರಿಸುತಿಪ್ಪರು.

ತಾತ್ಪರ್ಯ.—ಸಾತ್ವಿಕರು, ರಾಜಸರು, ತಾಮಸರೆಂದು ಜೀವರಾಶಿಗಳು ಮೂರು ಪ್ರಕಾರ ಅನಾದಿಕಾಲದಿಂದಲೂ ಇರುವರು. ಈ ಸಾತ್ವಿಕಾದಿ ಒಂ ದೊಂದರಲ್ಲೂ ಮೂರು ಪ್ರಕಾರ ಉಂಟು. ಸಾತ್ವಿಕರಲ್ಲಿ ಸಾತ್ವಿಕ ಸಾತ್ವಿ ಕರು, ಸಾತ್ವಿಕರಾಜಸರು, ಸಾತ್ವಿಕತಾಮಸರೆಂದು ಮೂರು ಪ್ರಕಾರ. ಇದ ರಂತೆ ರಾಜಸರಲ್ಲೂ ರಾಜಸಸಾತ್ವಿಕರು ರಾಜಸರಾಜಸರು, ರಾಜಸತಾಮ ಸರೆಂದು ಮೂರು ಪ್ರಕಾರ ಉಂಟು. ಇವರುಗಳಲ್ಲಿ ಸಾತ್ವಿಕಸಾತ್ವಿಕರು ಸಾ ತ್ವಿಕರಾಜಸರು ಸಾತ್ವಿಕ ತಾಮಸರೆಂದು ಮೂರು ವಿಧ ಸಾತ್ವಿಕರು, ರಾಜ ಸರಲ್ಲಿ ರಾಜಸ ಸಾತ್ವಿಕರೂ ಸಹಾ ಭಗವದ್ಭಕ್ತರಾಗಿರುವರು. ಇವರೆಲ್ಲರೂ ಮುಕ್ತಿಯೋಗ್ಯರು. ರಾಜಸರಾಜಸರು ನಿತ್ಯ ಸಂಸಾರಿಗಳೆನಿಸುವರು. ಇವ ರು ಭೂಮಿಯಲ್ಲಿ ಹುಟ್ಟಿ ಕೆಲವು ಕಾಲ ಸುಖದುಃಖ ಮಯವಾದ ಸಂಸಾರ ದಲ್ಲಿ ದುಃಖ ಮಿಶ್ರವಾದ ಸುಖವನ್ನನುಭವಿಸುವರು. ಮತ್ತು ಸ್ವರ್ಗಕ್ಕೆ ಹೋಗುವರು. ಮತ್ತೂ ಭೂಮಿಯಲ್ಲಿ ಹುಟ್ಟುವರು. ಇವರಿಗೆ ನರಕವಾಸ ವಿಲ್ಲ. ಮುಕ್ತಿಯಲ್ಲೂ ಕೂಡ ಇವರಿಗೆ ಸಂತಾನಿಕವೆಂಬ ಲೋಕವು ಬರುವು ದು. ಅಲ್ಲೂ ಮಿಶ್ರ ಸುಖವನ್ನೇ ಅನುಭವಿಸುವರು. ರಾಜಸತಾಮಸರು ಈ ಭೂಮಿಯಲ್ಲಿ ಹುಟ್ಟುವರು, ನರಕಕ್ಕೆ ಹೋಗುವರು ಇವರು ಸುಖ ಮಿಶ್ರ ವಾದ ದುಃಖವನ್ನೇ ಬಹಳವಾಗಿ ಅನುಭವಿಸುವರು.

ಅವತಾರಿಕೆ.—ಮೂರು ವಿಧರಾದ ತಾಮಸರ ಲಕ್ಷಣವನ್ನು ಹೇಳು ತ್ತಾರೆ —

ತಮಸ್ಸಾತ್ವಿಕರೆನಿಸಿಕೊಂಬರು
ಅಮಿತನಾಖ್ಯಾತ್ಯಸುರಗಣವಿದೆ
ತಮೋರಾಜಸರೆನಿಸಿಕೊಂಬರು ದೈತ್ಯಸಮುದಾಯ ।
ತಮಸ್ತಾಮಸ ಕಲಿಪುರಂಧ್ರಿಯು
ಅಮಿತದುರ್ಗುಣಪೂರ್ಣ ಸರ್ವಾ
ಧಮರೊಳಧಮಾಧಮದುರಾತ್ಮನುಕಲಿಯೆನಿಸಿಕೊಂಬ ॥೧೯॥

ಪದ್ಯಾರ್ಥ.—ತಮಸ್ಸಾತ್ವಿಕರೆನಿಸಿಕೊಂಬರು—ತಾಮಸ, ಸಾತ್ವಿಕರೆ ನಿಸಿಕೊಳ್ಳುವ, ಅಸುರಗಣವು=ದೈತ್ಯಗಣವು, ಅನಾಖ್ಯಾತ-ಅನಾಖ್ಯಾತರೆಂದು

ಅನ್ನಿಸಿಕೊಳ್ಳುವರು. ಅಂದರೆ ಕೀರ್ತಿಯಿಂದ ಪ್ರಖ್ಯಾತಿ ಪಡೆಯದ ಅನಾಮಧೇಯರೆಂಧರ್ಥ. ಇಂತಹವರು ಅಮಿತವಿದೆ=ಅಸಂಖ್ಯಾತವಾದ ಗಣವಿರುವುದು. ದೈತ್ಯಸಮುದಾಯ-ಪ್ರಸಿದ್ಧಿಗೆ ಬಂದಿರುವ ದೈತ್ಯರ ಭೃತ್ಯರು, ಪ್ರಖ್ಯಾತರಾದ ಕೆಲವು ದೈತ್ಯರು, ಒಟ್ಟಿನಲ್ಲಿ ದೈತ್ಯಗುಂಪುಗಳು. ತಮೋರಾಜಸರೆನಿಸಿಕೊಂಬರು=ತಾಮಸ ರಾಜಸರೆನಿಸಿಕೊಳ್ಳುವರು. ಕಲಿಪುರಂಧ್ರಿಯು=ಕಲಿಯ ಹೆಂಡತಿಯಾದ ಜ್ಯೇಷ್ಠಾ ಎಂಬುವಳು, ತವ:ಸ್ತಾಮಸ = ತಾಮಸತಾಮಸಳೆನಿಸುವಳು. ಅವಳ ಪತಿಯಾದ ಕಲಿಯು ಅಮಿತದುರ್ಗುಣಪೂರ್ಣ=ಸಂಖ್ಯೆಯಿಲ್ಲದ ದುರ್ಗುಣಗಳಿಂದ ಪೂರ್ಣನಾಗಿರುವನು. ಸರ್ವಾಧಮರೊಳು=ಲೋಕದಲ್ಲಿ ಅಧಮರೆಂದು ಅನಿಸಿಕೊಳ್ಳುವ ಎಲ್ಲರಕಿಂತಲೂ ಅಧಮಾಧಮ-ಅಧಮರೆನಿಸುವ ಎಲ್ಲರಿಗಿಂತಲೂ ಅಧಮನು, ದುರಾತ್ಮನು= ಪಾಪಸ್ವರೂಪನೆಂದು ಅನಿಸಿಕೊಂಬ.

ತಾತ್ಪರ್ಯ.—ತಾಮಸರು ಪ್ರಾಯಃಶಃ ದೈತ್ಯರು. ಅವರಲ್ಲಿ ಅನಾಖ್ಯಾತ ದೈತ್ಯಗಣವೆಂದು ಅಸಂಖ್ಯಾತರು ಇರುವರು ಅನಾಖ್ಯಾತರೆಂದರೆ ಅಪ್ರಸಿದ್ಧರೆಂದರ್ಥ. ಇವರೆಲ್ಲರೂ ತಾಮಸ ಸಾತ್ವಿಕರೆನಿಸುವರು, ಪ್ರಧಾನರಾದ ಕಲಿ ಮೊದಲಾದ ದೈತ್ಯರ ಭೃತ್ಯರೆಂದು ಪ್ರಸಿದ್ಧರಾದ ದೈತ್ಯಸಮುದಾಯವು ತಾಮಸ ರಾಜಸರೆನಿಸುವರು. ಪ್ರಸಿದ್ಧರಾದ ದಾನವರು ದೈತ್ಯರು ತಾಮಸತಾಮಸರೆನಿಸುವರು. ಈ ವಿಷಯದಲ್ಲಿ ಭಾಗವತ ದ್ವಿತೀಯ ಸ್ಕಂಧ ೧೦ನೆಯ ಅಧ್ಯಾಯದಲ್ಲಿ 41ನೆಯ ಶ್ಲೋಕದ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ, "ಕಲ್ಯಾದಿ ಪ್ರಧಾನಾ ಅಸುರಾಸ್ತಾಮಸತಾಮಸಾಃ। ಪ್ರಧಾನಾಸುರಭೃತ್ಯಾಸ್ತಾಮಸರಾಜಸಾಃ। ಅಪ್ರಸಿದ್ಧಾ ಅಸುರಾಸ್ತಾಮಸ ಸಾತ್ವಿಕಾಃ। ಕೇವಲಪಾಪಚಾರಿಣೋ ಮನುಷ್ಯಾ ರಾಜಸತಾಮಸಾಃ॥ ಮಿಶ್ರಕರ್ಮಕೃತೋ ಮನುಷ್ಯಾರಾಜಸರಾಜಸಾಃ। ಮನುಷ್ಯೇಷುಪುಣ್ಯೈಕ ಕರ್ಮಕೃತ ಉತ್ತಮಾಮನುಷ್ಯಾರಾಜಸಸಾತ್ವಿಕಾಃ। ಪೃಥಕ್ ಅಪ್ರಸಿದ್ಧಾದೇವಾಃ ಸಾತ್ವಿಕತಾಮಸಾಃ ಅತತ್ವಮಾನಿನೋಽಲೋಖ್ಯಾತತಾ ಸಾತ್ವಿಕ ರಾಜಸಾಃ। ತತ್ವಾಭಿಮಾನಿನೋದೇವಾಃ ಸಾತ್ವಿಕಸಾತ್ವಿಕಾಃ। ಸಾತ್ವಿಕೇಭ್ಯೋಽಪಿ ಸಾತ್ವಿಕಾಃ ಗರುಡಾದಿ ತ್ರಿತತದ್ಭಾರ್ಯಾ ಸ್ತೇಭ್ಯೋ ಪಿತೆಸಾತ್ವಿಕೇ ಬ್ರಹ್ಮ ಭಾರ್ಯಾ ಸರಸ್ವತೀ ತತೋಽಪಿ ಸಾತ್ವಿಕೋ ಬ್ರಹ್ಮೇತಿ॥" ಸತ್ವಂರಜಸ್ತಮ ಇತಿ

ತಿಸುಃ ಸುರನ್ಯ ನಾರತಾಃ" ಎಂಬ ಮೂಲವಚನದಿಂದ ಸಾತ್ವಿಕ, ರಾಜಸ ತಾಮಸರೆಂದು ಮೂವರು ದೇವಲೋಕ, ಮನುಷ್ಯಲೋಕ, ನರಕವಾಸಿಗಳೆಂದು ಪ್ರಸಿದ್ಧರಾಗಿರುವರು ಎಂಬ ವಾಕ್ಯದಿಂದ ದೈತ್ಯರೆಲ್ಲರೂ ತಾಮಸರು ನರಕವಾಸಿಗಳೆಂದು ಸ್ಪಷ್ಟವಾಗುವುದು. ಅವಾಂತರ ಭೇದಗಳಿರುವುವು-ಕಲಿ ಮೊದಲಾದ ಪ್ರಧಾನ ದೈತ್ಯರು ತಾಮಸ ತಾಮಸರು; ಪ್ರಧಾನ ದೈತ್ಯರ ಭೃತ್ಯರು ತಾಮಸ ರಾಜಸರು, ಅಪ್ರಸಿದ್ಧರಾದ ದೈತ್ಯರು ತಾಮಸಸಾತ್ವಿಕರು. ರಾಜಸರೆಲ್ಲರೂ ಮನುಷ್ಯರು. ಅವರಲ್ಲಿ ಅವಾಂತರ ಭೇದಗಳು ಕೇವಲ ಪಾಪಚಾರವುಳ್ಳ ಮನುಷ್ಯರು, ರಾಜಸ ತಾಮಸರು, ಪುಣ್ಯಪಾಪ ಮಿಶ್ರವಾದ ಕರ್ಮವನ್ನು ಮಾಡುವ ಮನುಷ್ಯರು ರಾಜಸ ರಾಜಸರು. ಮನುಷ್ಯರಲ್ಲಿ ಕೇವಲ ಪುಣ್ಯವನ್ನು ಮಾತ್ರ ಮಾಡಿಕೊಂಡಿರುವ ಉತ್ತಮ ಮನುಷ್ಯರು ರಾಜಸ ಸಾತ್ವಿಕರು. ಸಾತ್ವಿಕರೆಲ್ಲರೂ ದೇವತೆಗಳು ಅವರಲ್ಲಿ ಅವಾಂತರ ಭೇದವೆಂತೆನೆ :—ಅಪ್ರಸಿದ್ಧರಾದ ರಾಜದೇವತೆಗಳು ಸಾತ್ವಿಕ ತಾಮಸರು. ತತ್ವಾಭಿಮಾನಿಗಳಲ್ಲದ, ಲೋಕದಲ್ಲಿ ಪ್ರಖ್ಯಾತರಾದ ದೇವತೆಗಳು ಸಾತ್ವಿಕ ರಾಜಸರು. ತತ್ವಾಭಿಮಾನಿಗಳಾದ ದೇವತೆಗಳು ಸಾತ್ವಿಕ ಸಾತ್ವಿಕರು. ಸಾತ್ವಿಕರಲ್ಲೂ ಸಾತ್ವಿಕರಾದವರು ಗರುಡ, ಶೇಷ, ಖುದ್ರರು ಅವರ ಹೆಂಡರುಗಳು; ಅವರಗಿಂತಲೂ ಸಾತ್ವಿಕರು ಬ್ರಹ್ಮವಾಯುಗಳ ಪತ್ನಿಯರು ಅವರಗಿಂತಲೂ ಸಾತ್ವಿಕರು ಬ್ರಹ್ಮ ವಾಯುಗಳೆಂದು ಹೇಳಿರುವರು. ಈ ವಾಕ್ಯಗಳನ್ನನುಸರಿಸಿ ಈ ಪದ್ಯಕ್ಕೆ ಅರ್ಥವು ಬರಿಯಲ್ಪಟ್ಟಿದೆಯೆಂದು ತಿಳಿಯಬೇಕು. ಇದರಂತೆ ತಾಮಸತಾಮಸರು ಪ್ರಧಾನ ದೈತ್ಯರಾದರೂ ಎಲ್ಲರಗಿಂತಲೂ ತಾಮಸತಾಮಸಳು ಕಲಿ ಭಾರ್ಯಳಾದ ಜ್ಯೇಷ್ಠಾ ಎಂಬುವಳು ಅವಳಿಗಿಂತಲೂ ಮಹಾ ತಾಮಸನು ಕಲಿಯು.

ಅವತಾರಿಕೆ.—ಕಲಿಯಂತಹ ಪಾಪಿಯು ಮೂರು ಲೋಕಗಳಲ್ಲೂ ಇಲ್ಲವೆಂದು ಹೇಳುತ್ತಾರೆ.—

**ಇವನಪೋಲ್ವ ಪಾಪಿಜೀವರು**
**ಭುವನ ಮೂರೊಳಗಿಲ್ಲ ನೋಡಲು**
**ನವವಿಧ ದ್ವೇಷಗಳಿಗಾತಾರನೆನಿಸಿಕೊಳುತಿಪ್ಪ ||**

**ಬವರದಲಿ ಭಂಗಾರದಲಿ ನಟ**
**ಯುವತಿದ್ಯೂತಾಪೇಯದಲಿ ವೃಷ**
**ಕಪಿಸಿ ಮೋಹದಿಕೆಡಿಸುವನುಯೆಂದರಿದು ತ್ಯಜಿಸುವದು ॥೨೦॥**

ಪದ್ಯಾರ್ಥ.—ಇವನ=ಈ ಕಲಿಯನ್ನು, ಪೋಲುವ-ಸೋಲಿಸಲು ಯೋಗ್ಯರಾದ ಪಾಪಿ ಜೀವರು, ಭುವನಮೂರೊಳಗೆ=ಮೂರು ಲೋಕಗಳಲ್ಲೂ, ಮೂರು ಲೋಕವೆಂದರೆ ಭೂಲೋಕ, ಭುವ ಅಂದರೆ ಅಂತರಿಕ್ಷಲೋಕ, ಸ್ವರ್ಗಲೋಕವೆಂದು ಹೆಸರಾದರೂ, ಭೂಲೋಕದಲ್ಲಿ ಅತಲವಿತಲಾದಿ ಕೆಳಗಿನ ಏಳು ಲೋಕಗಳು ಅಂತರ್ಭಾವವಾಗಿರುತ್ತವೆ. ಮಧ್ಯ ಅಂತರಿಕ್ಷಲೋಕ, ಸ್ವರ್ಗವೆಂದರೆ ಸತ್ಯಲೋಕದವರೆಗೂ ಇರುವ ಸ್ವರ್ಗದ ಮೇಲಿನ ಎಲ್ಲಾ ಲೋಕಗಳೂ ಸೇರಿರುತ್ತವೆ. ಒಟ್ಟಿನಲ್ಲಿ 14 ಲೋಕಗಳೂ ಎಂದರ್ಥ. ನೋಡಲು-ಎಲ್ಲಿ ನೋಡಿದರೂ ಇಲ್ಲ. ನವವಿಧದ್ವೇಷಗಳಿಗೆ= 9 ಬಗೆಯಾದ ದ್ವೇಷಗಳಿಗೆ, ಆತರನೆನಿಸುತಿಪ್ಪ=ಆಶ್ರಯನೆನಿಸಿಕೊಳ್ಳುವನು ಬವರದಲಿ=ಪಶುಹಿಂಸೆಯಾಗುವ ಸ್ಥಳದಲ್ಲೂ, ಭಂಗಾರದಲಿ=ದ್ರವ್ಯದಲ್ಲೂ. ನಾಟ್ಯಯುವತಿ=ವೇಶ್ಯಾಸ್ತ್ರೀಯರಲ್ಲೂ, ದ್ಯೂತದಲ್ಲೂ, ಆಪೇಯದಲಿ-ಮದ್ಯದಲ್ಲೂ, ವೃಷಕಪಿಸಿ=ಸುಳ್ಳು ಮೊದಲಾದ ರೂಪಗಳಿಂದ ವ್ಯಾಪಿಸಿಕೊಂಡು, ಮೋಹದಿ=ಮೋಹ ಹುಟ್ಟುವಂತೆ ಮಾಡಿ ಕೆಡಿಸುವನು. ಎಂದರಿದು=ಎಂದು ತಿಳಿದು, ತ್ಯಜಿಸುವದು-ಮೇಲೆ ಹೇಳಿದ ಕಲಿ ಪ್ರವೇಶವುಳ್ಳ ವಿಷಯಗಳನ್ನು ಬಿಡಬೇಕು

ತಾತ್ಪರ್ಯ.—ಈ ಕಲಿಗೆ ಸಮಾನರಾದ ಪಾಪಿ ಜೀವರು ಈ ಜಗತ್ತಿನಲ್ಲಿ ಎಲ್ಲೂ ಇಲ್ಲ. ಪುಣ್ಯವಂತರಲ್ಲಿ ಬ್ರಹ್ಮದೇವರು ಹೇಗೆ ಉತ್ತಮರೋ ಹಾಗೆ ಪಾಪಿಗಳಲ್ಲಿ ಇವನೇ ಉತ್ತಮನು. ಭಗವಂತನಲ್ಲಿ 9 ವಿಧವಾದ ದ್ವೇಷಗಳಿಗೂ ಇವನು ಆಶ್ರಯಭೂತನಾಗಿರುವನು. ನವವಿಧ ದ್ವೇಷಗಳ ವಿವರ ಗರುಡಪುರಾಣ ಬ್ರಹ್ಮಕಾಂಡದಲ್ಲಿ " ಜೀವಾಭೇದೋಹರಿಣಾಂ ಪ್ರಾಕೃತೇನಸ್ವತಂತ್ರೇಣಹ್ಯಸ್ವತಂತ್ರೇಣ ನಿತ್ಯಂ। ಜ್ಞಾನಾನಂದೈರ್ವಿಧುರತ್ವಾಚ್ಚ ವಿಷ್ಣೋಃ ಸದಾಹರಿರ್ನಿರ್ಗುಣಶ್ಚೇತಿಚಿಂತಾ ॥ ಸದಾತಾಮ್ಯೈಃ ಪರಿಪೂರ್ಣೋಹಚ ಗುಣೈಶ್ಚ ಪೂರ್ಣೋಹರಿ ರಿತ್ಯೇವಚಿಂತಾ ॥ ಶ್ರೀಬ್ರಹ್ಮಾಧಿಪಾತಸಾಂಸದಾತಥಾಧ್ವಿಜಾನಾಂ ಸಾಮತಾಯಾಶ್ಚ ಚಿಂತಾ ॥ ವಿಷ್ಣೋಃಸತಾಶಧ್ವ್ರಹ್ಮರುದ್ರಾದಿತಾನಾಂ ಸದಾಧಿಕ್ಯಾದೇಶ್ಚಂತನಂದ್ವೇಷಏವ॥ ವಿಷ್ಣೋ

ರ್ದೇಹೇಹಸ್ತಪಾದಾದಿ ತಾನಾಂ ಭೇದಜ್ಞಾನಂದ್ವೇಷಮಾಹುರ್ಮಹಾಂತಃ ॥ ಅವತಾರಾಣಾಂ ಭೇಧಭೇದಾದಿತಂಚತತೋತ್ಪತ್ತೀರ್ಮರಣಸ್ಯಾಪಿ ಚಿಂತಾ॥ ತದ್ಭಕ್ತಾನಾಂ ದೂಷಣಂ ಚಾಹುರಾರ್ಯಾಸ್ತದ್ವಾಕ್ಯಾನಾಂ ದೂಷಣಂ ದ್ವೇಷಏವ ॥ ನವದ್ವೇಷೈಃ ಸಂಯುತಾ ಏವಲೋಕೆದೃಶ್ಯಂತೇ ನೈನತುಭಕ್ತಾಃ ತತಾಚ ॥ " ಇವುಗಳ ಅರ್ಥ.—ಸ್ವತಂತ್ರನೂ, ಅಪ್ರಾಕೃತನೂ ಆದ ಪರಮಾತ್ಮನಿಗೂ, ಪ್ರಾಕೃತನೂ ಸ್ವತಂತ್ರನೂ ಆದ ಜೀವನಿಗೂ ಅಭೇದವನ್ನು ಹೇಳುವುದು 1, ಜ್ಞಾನಾನಂದಾದಿಗಳು ಪರಮಾತ್ಮನಿಗೆ ಇಲ್ಲದುದರಿಂದ ಪರಮಾತ್ಮನು ನಿರ್ಗುಣನೆಂದು ಚಿಂತಸೆಮಾಡುವದು 2, ಪೂರ್ಣಕಾಮನಾದ ಹರಿಯನ್ನು ಅಪೂರ್ಣನೆಂದು ಚಿಂತನೆಮಾಡುವದು 3, ಲಕ್ಷ್ಮೀದೇವಿಯರು, ಬ್ರಹ್ಮದೇವರು, ದೇವತೆಗಳು ಮತ್ತು ಬ್ರಾಹ್ಮಣರು ಇವರುಗಳನ್ನು ಸಮರನ್ನಾಗಿ ತಿಳಿಯುವುದು 4, ವಿಷ್ಣುವಿಗಿಂತಲೂ ಬ್ರಹ್ಮರುದ್ರಾದಿಗಳು ಉತ್ತಮರೆಂದು ಚಿಂತಿಸುವುದೂ ಒಂದು ದ್ವೇಷವು 5, ಪರಮಾತ್ಮನ ಕೈಕಾಲು ಮೊದಲಾದ ಅವಯವಗಳಿಗೆ ಭೇದವನ್ನು ಚಿಂತಿಸುವುದೂ ಒಂದು ದ್ವೇಷವೆಂದು ಜ್ಞಾನಿಗಳು ಹೇಳುವರು 6, ಪರಮಾತ್ಮನ ಅವತಾರಗಳಲ್ಲಿ ಪರಸ್ಪರ ಭೇದವನ್ನು ಹೇಳುವುದು ಮತ್ತು ಬಾಣಾದಿಗಳಿಂದ ಶರೀರಗಳು ಭಿನ್ನಭಿನ್ನವಾಯಿತೆಂದು ತಿಳಿಯುವುದು ಒಂದು ದ್ವೇಷವು 7, ಪರಮಾತ್ಮನಿಗೆ ಜನನಮರಣಗಳುಂಟೆಂದು ಚಿಂತಿಸುವುದು ದ್ವೇಷ 8, ಪರಮಾತ್ಮನ ಭಕ್ತರ ದ್ವೇಷ, ಮತ್ತು ಪರಮಾತ್ಮನ ವಾಕ್ಯದಲ್ಲಿ ದ್ವೇಷ 9, ಹೀಗೆ 9 ಬಗೆಯಾದ ದ್ವೇಷಗಳಿಂದ ಕೂಡಿದ ಜನರೇ ಕಲಿಯುಗದಲ್ಲಿ ಕಾಣುವರೇ ಹೊರ್ತು ಭಕ್ತರು ಕಾಣುವದಿಲ್ಲವೆಂದು ಶ್ರೀಪರಮಾತ್ಮನು ಗರುಡನಿಗೆ ಹೇಳಿದ ವಾಕ್ಯವು. ಪ್ರಕೃತ ಈ 9 ವಿಧವಾದ ದ್ವೇಷಗಳಿಗೂ ಆಶ್ರಯನಾಗಿರುವನು ಕಲಿಯು. ಕಲಿಯನು ದಿಗ್ವಿಜಯದಲ್ಲಿ ಪರೀಕ್ಷಿನ್ಮಹಾರಾಜನು ಜಯಿಸಿದಾಗ ಕಲಿಯು ಪ್ರಾರ್ಥನೆಯಮೇರೆ ಕಲಿಗೆ ವಾಸಮಾಡಲು 5 ಸ್ಥಾನಗಳನ್ನು ಕೊಟ್ಟನು. ವುದಾಗಿ ಭಾಗವತ ಪ್ರಥಮ ಸ್ಕಂಧದಲ್ಲಿ " ದ್ಯೂತಂ ಪಾನಂಸ್ತ್ರೀಯಃ ಸೂನಾ ಯತ್ರಧರ್ಮಾಶ್ಚತುರ್ವಿಧಾಃ ॥ ಪುನಶ್ಚಯಾಚಮಾನಾಯಜಾತರೂಪಮದಾತ್ ಪ್ರಭುಃ " ಎಲ್ಲಿ ದ್ಯೂತವೋ ಅಲ್ಲಿ ಒಂದು ರೂಪದಿಂದಲೂ, ಎಲ್ಲಿ ಮದ್ಯಪಾನವೋ ಅಲ್ಲೂ, ಎಲ್ಲಿ ವೈಶ್ಯಾ ಸ್ತ್ರೀಯೋ ಎಲ್ಲಿ ಪಶುಹಿಂಸೆಯೋ ಅಲ್ಲೂ,

ಹೀಗೆ 4 ಅಧರ್ಮಗಳ ಸ್ಥಳಗಳಲ್ಲಿ ನೀನು ವಾಸಮಾಡೆಂದು ಅಪ್ಪಣೆ ಇತ್ತನು. ಕಲಿಯು ಈ ಸ್ಥಳಗಳು ಸಾಲದೆಂದು ಮತ್ತೂ ಬೇಡಿಕೊಳ್ಳಲು ಪರಿಕ್ಷಿದ್ರಾಜನು ಎಲ್ಲಿ ಭಂಗವೋ ಅಲ್ಲಿ ನೀನಿರೆಂದು 5ನೆಯ ಸ್ಥಾನವನ್ನು ಕೊಟ್ಟನು, " ತತೋಽನೃತಂಮದಃ ಕಾಮೋ ರಜೋ ವೈರಂಚ ಪಂಚಮಂ||ಔತ್ತರೆಯೇಣ ದತ್ತಾನಿನ್ಯವಸ್ತತನ್ನಿದೇಶಕೃತ್|| ಉತ್ತರಾ ಕುಮಾರನಾದ ಪರೀಕ್ಷಿದ್ರಾಜನು ಕೊಟ್ಟ ಸ್ಥಳಗಳಾದ ಇವು ಐದರಲ್ಲಿ 5 ರೂಪಗಳಿಂದ ಕಲಿಯು ಅವನಪ್ಪಣೆಯಂತೆ ವಾಸಮಾಡುತ್ತಿರುವನು. ಎಲ್ಲೆಲ್ಲಿ ಯಾವಯಾವ ರೂಪನಾಗಿರುವನೆಂದರೆ, ಎಲ್ಲಿ ದ್ಯೂತವೋ ಅಲ್ಲಿ ಸುಳ್ಳು ರೂಪನಾಗಿಯೂ, ಎಲ್ಲಿ ಪಾನವೋ ಅಲ್ಲಿ ಮದರೂಪದಿಂದಲೂ, ಎಲ್ಲಿ ಸ್ತ್ರೀಯರೋ ಅಲ್ಲಿ ಕಾಮರೂಪಿಯಾಗಿಯೂ, ಎಲ್ಲಿ ಪಶು ಹಿಂಸೆಯೋ ಅಲ್ಲಿ ಪಾಪರೂಪಿಯಾಗಿಯೂ ವಾಸಮಾಡುತ್ತಿರುವನು. ಆದುದರಿಂದ ಒಳ್ಳೆಯದಾಗಬೇಕೆಂದು ಅಪೇಕ್ಷೆಯುಳ್ಳವರು ಇವು ಐದು ವಿಷಯಗಳನ್ನು ಸೇವಿಸಬಾರದೆಂದು ಹೇಳಿರುವರು ಅದೇ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ಹೇಳಿರುತ್ತಾರೆ. ಬವರವಲಿ ಅಂದರೆ ಯುದ್ಧದಲ್ಲಿ ಎಂದರ್ಥವೆಂದು ಕೆಲವರು ಅಭಿಪ್ರಾಯಪಟ್ಟಿರುತ್ತಾರೆ. " ಧರ್ಮೋಯುದ್ಧೇ ವಧೋದ್ವಿಷಾಯ " ಎಂಬ ಭಾಗವತ ವಾಕ್ಯಾನುಸಾರ ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುವದು ಕ್ಷತ್ರಿಯ ಧರ್ಮವೆಂದು ಹೇಳಿರುವುದರಿಂದ ಇಲ್ಲಿ ಬವರವೆನ್ನುವುದಕ್ಕೆ ಯುದ್ಧವೆಂದರ್ಥಮಾಡದೆ ಭಾಗವತ ವಾಕ್ಯಾನುಸಾರವಾಗಿ ಯುದ್ಧಕ್ಕೆ ಸಮಾನಾರ್ಥವಾದ " ಸೂನಾ " ಎಂಬ ಪದವನ್ನು ತೆಗೆದುಕೊಂಡಿರುವೆವು ಸೂನಾ ಎಂದರೆ ಹಿಂಸಿಸುವುದೆಂದರ್ಥ. ಅದಕ್ಕೆ ವ್ಯಾಖ್ಯಾನದಲ್ಲಿ ಪಶುಹಿಂಸೆ ಎಂದರ್ಥ ಮಾಡಿರುವರು ಆದ್ದರಿಂದ ಅದೇ ಅರ್ಥವನ್ನೇ ಇಲ್ಲಿ ಬರೆದಿರುತ್ತೇವೆ ಹೀಗೆ ಮಾಡುವುದರಿಂದ ಭಾಗವತದಲ್ಲಿ ಹೇಳಿದ ಪ್ರಕಾರ ದ್ಯೂತ, ಪಾನ, ಸ್ತ್ರೀಯರು, ಪಶುಹಿಂಸೆ, ದ್ರವ್ಯ ಎಂದರ್ಥವು ಸರಿಹೋಗುತ್ತದೆ ಮೃಷಕವಿಸಿ ಅಂದರೆ ಭಾಗವತವಾಕ್ಯದಂತೆ ದ್ಯೂತಾದಿ 5 ಸ್ಥಾನಗಳಲ್ಲಿ ಸುಳ್ಳು ಮೊದಲಾದ 5 ರೂಪಗಳಿಂದ ಆವರಿಸಿಕೊಂಡು ಕೆಡಿಸುವನೆಂದರ್ಥ. ಈ ಪದ್ಯದಲ್ಲಿ ದ್ಯೂತಾಪೇಯಮೃಷದೊಳು ಕಲಿಸಿಯೆಂದು ಕೆಲವು ಪುಸ್ತಕಗಳ ಪಾಠವಿದೆ. ಕೆಲವಲ್ಲಿ " ದ್ಯೂತಾಪೇಯದೊಳುಮೃಷಕವಿಸಿ " ಎಂದು ಪಾಠಾಂತರವಿರುವುದು. ಮೃಷ

ದೋಳು ಎಂಬ ಪಾಠಕ್ಕಿಂತಲೂ ವೃಷಕವಿಸಿ ಎಂಬ ಪಾಠವೇ ಸಾಧುವಾಗಿ ಕಾಣುತ್ತದೆ. ಹೇಗೆಂದರೆ ಭಾಗವತದಲ್ಲಿ ೫ ಸ್ಥಾನವನ್ನು ಕಲಿಗೆ ಕೊಟ್ಟುದದಾಗಿ ಹೇಳಿ, ದ್ಯೂತದಲ್ಲಿ ಸುಳ್ಳು ರೂಪಿಯಾಗಿ ಕಲಿ ಇರುವನೆಂದು ಹೇಳಿರುತ್ತಾರೆ. ಇದರಿಂದ ಕಲಿಯ ಸ್ವರೂಪವು ಸುಳ್ಳೆಂದು ಹೇಳಿದಂತಾಯಿತು. ಸುಳ್ಳೇ ಪಾಪರೂಪವಾದಮೇಲೆ ಅದರಲ್ಲಿ ಕಲಿ ಪ್ರವೇಶವೆಂತಹುದು? ಇದಲ್ಲದೆ ಭಾಗವತ ವಾಕ್ಯ ಪ್ರಕಾರ ೫ ಸ್ಥಳಗಳು. ಇಲ್ಲಿ ಅವು ೫ ಸರಿಹೋಗಿ ಸುಳ್ಳು ಒಂದು ಜಾಸ್ತಿಯಾಗುವುದು. ಆದ್ದರಿಂದ ಸುಳ್ಳು ಮೊದಲಾದ ೫ ರೂಪಗಳಿಂದ ದ್ಯೂತಾದಿ ೫ರಲ್ಲಿ ಕಲಿ ಇರುವನೆಂಬ ಅರ್ಥವು ಸಮಂಜಸವಾಗಿ ಕಾಣುವುದು.

ತಾರತಮ್ಯವನ್ನು ತಿಳಿದು ಉಪಾಸನೆ ಮಾಡುವವರನ್ನು ಪರಮಾತ್ಮ ಉದ್ಧರಿಸುವನೆಂದು ಹೇಳುತ್ತಾರೆ:—

ತ್ರಿವಿಧ ಜೀವಪ್ರತತಿಗಳ ಸ
ಗ್ಗವೊಳೆಯಮ್ಮಾಲಯನು ನಿರ್ಮಿಸಿ
ಯುವತಿಯರ ವೊಡಗೂಡಿ ಕ್ರೀಡಿಸುವನು ಕೃಪಾಸಾಂದ್ರ ||
ದಿವಿಜದಾನವ ತಾರತಮ್ಯದ
ವಿವರ ತಿಳಿದ ಮಹಾತ್ಮರಿಗೆ ಬಾ
ಸ್ಪವಿದನಖ ತಾನೊಲಿದು ವುದ್ಧರಿಸುವನು ಭವದಿಂದ ||೨೧||

ಪದ್ಯಾರ್ಥ:—ಕೃಪಾಸಾಂದ್ರ ಕರುಣಾಳುವಾದ, ಸಗ್ಗವೊಳೆಯಮ್ಮಾಲಯನು- ಸಗ್ಗ=ಸ್ವರ್ಗದ, ವೊಳೆಯ=ಹೊಳೆಯಾದ ಗಂಗೆಯ (ದೇವನದಿಯಾದ ಗಂಗೆಯ) ಅಮ್ಮ=ಪಾಲಿಸುವ ಅಂದರೆ ಗಂಗೆಯ ಪತಿಯಾದ ಸಮುದ್ರನ, ಆಲಯನು -ಮನೆಯಾಗಿ ಉಳ್ಳವನಾದ ಅಂದರೆ ಕ್ಷೀರಸಮುದ್ರವಾಸಿಯಾದ ಶ್ರೀ ಹರಿಯು, ತ್ರಿವಿಧ ಜೀವ ಪ್ರತತಿಗಳ=ಮೂರುವಿಧ ಜೀವಸಂಘಗಳನ್ನು, ನಿರ್ಮಿಸಿ -ಸೃಷ್ಟಿಮಾಡಿ, ಯುವತಿಯರ ವೊಡಗೂಡಿ= ಶ್ರೀ ಭೂದುರ್ಗಾಯೆಂಬ ಮೂರು ರೂಪದಿಂದ ಕೂಡಿದ ರಮಾದೇವಿಯರಿಂದೊಡಗೂಡಿ, ಕ್ರೀಡಿಸುವನು -ಸೃಷ್ಟಿಮಾಡಿದವರನ್ನು ಪಾಲಿಸುವದು, ಸಂಹರಿಸುವದು ಮೊದಲಾದ ಲೀಲೆಗಳನ್ನು ಮಾಡುತ್ತಿರುವನು. ದಿವಿಜ ದಾನವ ತಾರತಮ್ಯದ=ದೇವ ದೈತ್ಯರ ತಾರತಮ್ಯದ, ವಿವರತಿಳಿದ ಮಹಾತ್ಮರಿಗೆ,

ಬಾಣ್ಣವಿರಸಖ=ಬಾಣ=ಆಕಾಶವೇವೆ, ನವಿರ=ಕೇಶವಾಗಿ ಉಳ್ಳ ರುದ್ರದೇವರ, ಸಖ=ಸಖನಾದ ಶ್ರೀಹರಿಯು ತಾನೊಲಿದು, ಭವದಿಂದ-ಸಂಸಾರದಿಂದ, ಉದ್ಧರಿಸುವನು.

ತಾತ್ಪರ್ಯ:—ದೇವನದಿಯಾದ ಗಂಗೆಗೆ ಪತಿಯಾದ ವರುಣನು ಸಮುದ್ರಾಭಿಮಾನಿಯಾದುದರಿಂದ ಸಮುದ್ರನೆಂದು ವ್ಯವಹಾರ. ಎಲ್ಲಾ ಸಮುದ್ರಾತ್ಮಕನು ವರುಣನೇ ಕ್ಷೀರಸಮುದ್ರದಲ್ಲಿರುವ ಶ್ವೇತದ್ವೀಪವಲ್ಲಿ ವಾಸಮಾಡುತ್ತಿರುವ ಶ್ರೀ ಹರಿಯು ಈ ಪ್ರಕಾರ ಮೂರುವಿಧ ಜೀವ ಸಂಘಗಳನ್ನು ಸೃಷ್ಟಿಸಿ, ಶ್ರೀ, ಭೂ, ದುರ್ಗೆಯರಿಂದೊಡಗೂಡಿ ಲೀಲೆಗಳನ್ನು ಮಾಡುತ್ತಿರುವನು. ಆಕಾಶ ಕೇಶ ಉಳ್ಳವರು ರುದ್ರದೇವರು. ವ್ಯೋಮಕೇಶನೆಂದು ಸಂಸ್ಕೃತದಲ್ಲಿರುವ ವಾಕ್ಯವನ್ನೇ ದಾಸಾರ್ಯರು ಬಾಣ್ಣವಿರ ಎಂದು ಕನ್ನಡದಲ್ಲಿ ಹೇಳಿರುವರು. ರುದ್ರಸಖನಾದ ಶ್ರೀಹರಿಯು, ದೇವದೈತ್ಯರ ತಾರತಮ್ಯವನ್ನು ತಿಳಿದು ಉಪಾಸನೆಮಾಡುವ ಮಹಾತ್ಮರಿಗೆ ಒಲಿದು ಅವರನ್ನು ಸಂಸಾರದಿಂದ ಉದ್ಧಾರಮಾಡುವನು.

ಮಧ್ವಮತಾವಲಂಬಿಗಳಿಗೆ ತಾರತಮ್ಯ ಜ್ಞಾನವು ಅತ್ಯಾವಶ್ಯಕವೆಂದು ತಾರತಮ್ಯ ಜ್ಞಾನದ ಮಹಿಮೆಯನ್ನು ಹೇಳುತ್ತಾರೆ.

ದೇವ ದೈತ್ಯರ ತಾರತಮ್ಯವು
ಪಾವಮಾನಿ ಮತಾನುಗರಿಗಿದು
ಕೇವಲಾವಶ್ಯಕವು ತಿಳಿವದು ಸರ್ವಕಾಲದಲಿ ||
ದಾವಶಿಖಿ ಪಾಪಾಟವಿಗೆ ನವ
ನಾ ವಿ ಯೆನಿಪುದು ಭವಸಮುದ್ರಕೆ
ಪಾವಟಗೆ ವೈಕುಂಠಲೋಕಕಿದೆಂದು ಕರೆಸುವದು ||೨೨||

ಪದ್ಯಾರ್ಥ:—ಇದು=ಈ ಸಂಧಿಯಲ್ಲಿ ಹೇಳಿದ, ದೇವ ದೈತ್ಯರ ತಾರತಮ್ಯವು, ಪಾವಮಾನಿಮತಾನುಗರಿಗೆ= ವಾಯು ಮತಾವಲಂಬಿಗಳಿಗೆ (ಮಧ್ವಮತಾವಲಂಬಿಗಳಿಗೆ) ಸರ್ವಕಾಲದಲಿ=ಎಲ್ಲಾ ಕಾಲದಲ್ಲೂ, ಕೇವಲಾವಶ್ಯಕವು=(ಬಹಳ ಮುಖ್ಯವಾದುದು) ಮುಖ್ಯವಾಗಿ ಬೇಕಾದುದೆಂದು ತಿಳಿವುದು. ಇದು=ಈ ತಾರತಮ್ಯಜ್ಞಾನವು, ಪಾಪಾಟವಿಗೆ=ಪಾಪವೆಂಬ ಘೋರಾರಣ್ಯಕ್ಕೆ, ದಾವಶಿಖಿ=ಕಾಡು ಕಿಚ್ಚಿನಂತೇ ಇರುವದು. ಭವಸಮುದ್ರಕೆ ಸಂಸಾರವೆಂಬ ಸಮುದ್ರಕ್ಕೆ, ನವನಾವಿ ಯೆನಿಪುದು=ಹೊಸದಾದ ಹಡಗೆನಿ

ಸುವುದು. ವೈಕುಂಠ ಲೋಕಕ್ಕೆ ಹೋಗಲಿಕ್ಕೆ, ಪಾವಟಿಗೆಯೆಂದು=ಮೆಟ್ಟಿಲುಯೆಂದು ಕರಿಸುವದು.

ತಾತ್ಪರ್ಯ:—ಈ ಸಂಧಿಯಲ್ಲಿ ಹೇಳಿದ ದೇವದೈತ್ಯರ ತಾರತಮ್ಯಜ್ಞಾನವು, ಮಧ್ವಮತಾವಲಂಬಿಗಳಿಗೆ ಪರಮ ಅವಶ್ಯಕವೆಂದು ಮಧ್ವಾಚಾರ್ಯರ ವಾಕ್ಯವೇ ಇರುವದು; ಪಂಚಭೇದ ಜ್ಞಾನವು, ತಾರತಮ್ಯ ಜ್ಞಾನವು ಇಲ್ಲದೆ ಮುಕ್ತಿಯಿಲ್ಲವೆಂಬ ವಿಷಯದಲ್ಲಿ ಶ್ರೀ ಮದಾಚಾರ್ಯರು ಉದಾಹರಿಸಿರುವ ಪ್ರಮಾಣವನ್ನು ಈ ಸಂಧಿಯ ಆರಂಭದಲ್ಲಿ ಬರದಿರುವೆವು. ಆದ್ದರಿಂದಲೆ ದಾಸಾರ್ಯರು ತಾರತಮ್ಯ ಜ್ಞಾನವು ಅತ್ಯಾವಶ್ಯಕವೆಂದು ಹೇಳಿರುವರು. ಈ ತಾರತಮ್ಯಜ್ಞಾನವು ಪಾಪವೆಂಬ ಅಡವಿಯನ್ನು ಸುಡುವ ವಿಷಯದಲ್ಲಿ ಕಾಮುಕಿಚ್ಚಿನಂತಿರುವದು. ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ಹಾಡೆಯಂತಿರುವುದು. ವೈಕುಂಠಲೋಕಕ್ಕೆ ಏರಿಹೋಗುವುದಕ್ಕೆ ಪಾವಟಿಗೆಯಂತಿರುವುದು. ಆದ್ದರಿಂದಲೆ ಮಧ್ವಮತಾವಲಂಬಿಗಳಿಗೆ ತಾರತಮ್ಯಜ್ಞಾನವು ಅವಶ್ಯಕವೆಂದು ಹೇಳಿರುವರು.

ತಾರತಮ್ಯಜ್ಞಾನ ಮುಕ್ತಿ
ದ್ವಾರವೆನಿಪುದುಭಕ್ತಜನರಿಗೆ
ತೋರಿ ಕೇಳಿ ಸುಖಾಬ್ಧಿಯೊಳು ಲೋಲಾಡುವುದು ಬುಧರು ॥
ಕ್ರೂರಮಾನವರಿಗಿದು ಕರ್ಣಕೆ
ಘೋರವೆನಿಪುದು ನಿತ್ಯವಲಿ ಅಧಿ
ಕಾರಿಗಳಿಗಿದನರುಪುವದು ದುಸ್ತರ್ಕಿಗಳ ಬಿಟ್ಟು ॥೨೩॥

ಪದ್ಯಾರ್ಥ:— ತಾರತಮ್ಯಜ್ಞಾನ=ಮೇಲೆ ಹೇಳಿದ ತಾರತಮ್ಯಜ್ಞಾನವು, ಮುಕ್ತಿದ್ವಾರವೆನಿಪುದು=ಮುಕ್ತಿಗೆ ಬಾಗಿಲೆನಿಸುವುದು. ಬುಧರು=ಜ್ಞಾನಿಗಳು ಭಕ್ತಜನರಿಗೆ, ತೋರಿ=ತಾರತಮ್ಯವನ್ನು ಉಪದೇಶರೂಪವಾಗಿ ತೋರಿಸಿಕೊಟ್ಟು, ಕೇಳಿ=ದೊಡ್ಡವರ ಮುಖದಿಂದ ತಾವೂ ಕೇಳಿ, ಸುಖಾಬ್ಧಿಯೊಳು=ಸುಖವೆಂಬ ಸಮುದ್ರದೊಳಗೆ; ಲೋಲಾಡುವದು=ಮುಳುಗಿ ತೇಲುತ್ತಾ ಇರುತಕ್ಕದ್ದು. ಕ್ರೂರಮಾನವರಿಗೆ=ಕ್ರೂರರಾದ ಅನ್ಯಥಾ ಜ್ಞಾನಿ, ಮಿಥ್ಯಾಜ್ಞಾನಿ ಮೊದಲಾದವರಿಗೆ, ಇದು=ಈ ತಾರತಮ್ಯಜ್ಞಾನವು ಕರ್ಣಕಠೋರವೆನಿಪುದು=ಕಿವಿಗಳಿಗೆ ಕೇಳಲು ಸಾಧ್ಯವಲ್ಲದ ಮಾತುಗಳಾಗಿ

ರುವದು. ದುಸ್ತರ್ಕಿಗಳ ಬಿಟ್ಟು=ಕುತರ್ಕಮಾಡುವ ಅಯೋಗ್ಯರಿಗೆ ಹೇಳ ದೇ ನಿತ್ಯದಲಿ ಅಧಿಕಾರಿಗಳಿಗೆ=ಇದನ್ನು ಕೇಳಲು ಯೋಗ್ಯರಿಗೆ ಮಾತ್ರ ಇದ ನು=ಈ ತಾರತಮ್ಯವನ್ನು-ಅರುಪುವದು=ಹೇಳತಕ್ಕದ್ದು.

ತಾತ್ಪರ್ಯ:—ಈ ತಾರತಮ್ಯಜ್ಞಾನವು ಯೋಗ್ಯರಿಗೆ ಮಾತ್ರವೆ ಮುಕ್ತಿಗೆ ಮಾರ್ಗವೆಂದು ತೋರುವುದೇ ಹೊರತು ಮಿಥ್ಯಾಜ್ಞಾನಿಗಳು ಅನ್ಯಥಾ ಜ್ಞಾನಿಗಳಿಗೆ ಇದು ಕರ್ಣಕಠೋರವಾಗಿರುವುದು ಆದ್ದರಿಂದ ಅಂತಹವರಿಗೆ ಇದನ್ನು ಉಪದೇಶಮಾಡದೆ ಇದಕ್ಕೆ ಅಧಿಕಾರಿಗಳು ಯಾ ರೋ ಅಂತಹಾ ಮುಕ್ತಿಯೋಗ್ಯರಿಗೆ ಮಾತ್ರ ಉಪದೇಶವನ್ನು ಮಾಡುತ್ತಾ ತಾನೂ ದೊಡ್ಡವರ ಮುಖದಿಂದ ಶ್ರವಣ ಮಾಡುತ್ತಾ ಸುಖಸಮುದ್ರದಲ್ಲಿ ತೇಲುತ್ತಾ ಮುಳುಗುತ್ತಾ ಇರಬೇಕೆಂಬ ತಾತ್ಪರ್ಯ.

ತಾರತಮ್ಯವನ್ನು ಮನನ ಮಾಡುವುದಕ್ಕಾಗಿ ಈ ಸಂಧಿಯಲ್ಲಿ ಹೇಳಿ ದ ಸಂಪೂರ್ಣ ತಾರತಮ್ಯವನ್ನು ಸಂಕೋಚದಿಂದ ೨೪ನೆಯ ಪದ್ಯವೊದ ಲು ಸಂಧಿಯು ಕಡೆಯುವರಿಗೂ ಹೇಳುತ್ತಾರೆ:—

ಹರಿ ಶಿರಿ ವಿರಿಂಚೀರ ಭಾರತಿ
ಗರುಡ ಫಣಿಪತಿ ಷಣ್ಮಹಿಷಿಯರು
ಗಿರಿಜನಾಕೇಶ ಸ್ಮರ ಪ್ರಾಣಾನಿರುದ್ಧ ಶಚೀ ||
ಗುರು ರತೀಮನು ದಕ್ಷ ಪ್ರವಹಾ
ಮರುತ ಮಾನವಿ ಯಮ ಶಶಿ ದಿವಾ
ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗು ಮುನಿಪ ||೨೪||

ಪದ್ಯಾರ್ಥ:—ಹರಿ=ಶ್ರೀ ಪರಮಾತ್ಮನು, ಶಿರಿ=ಲಕ್ಷ್ಮೀದೇವಿಯರು, ವಿರಿಂಚಿ=ಬ್ರಹ್ಮದೇವರು, ಈರ=ವಾಯುದೇವರು, ಭಾರತಿ=ಸರಸ್ವತೀ ಭಾ ರತಿಯರು ಗರುಡ, ಫಣಿಪತಿ=ಶೇಷದೇವರು(ರುದ್ರದೇವರು ಷಣ್ಮಹಿಷಿಯ ರು=ಕೃಷ್ಣನ ಹೆಂಡರುಗಳಾದ ಜಾಂಬವತೀ ಮೊದಲಾದ ಆರುಮಂದಿಗಳು, ಗಿರಿಜ, ಪಾರ್ವತಿ, ಇವರಿಗೆ ಸಮರಾದ,ಸೌಪರ್ಣಿ,ವಾರುಣಿ ಅಂತು ಮೂವರು ನಾಕೇಶಸ್ಮರ=ಇಂದ್ರ ಮನ್ಮಥರು, ಪ್ರಾಣ, ಅನಿರುದ್ಧ, ಶಚೀ, ಗುರು, ರತಿ, ಸ್ವಾಯಂಬುವ ಮನು ದಕ್ಷ, ಪ್ರವಹ, ಮಾರುತ=ಪ್ರವಹವಾಯು,ಮಾನವಿ ಶತರೂಪಾ, ಯಮ, ಶಶಿ=ಚಂದ್ರ, ದಿವಾಕರ=ಸೂರ್ಯ, ವರುಣ, ನಾರದ,

ಸುರಾಸ್ಯ=ಅಗ್ನಿ, ಪ್ರಸೂತಿ, ಭೃಗು ಮುನಿಪ=ಭೃಗು ಋಷಿಗಳು.

**ವ್ರತತಿಜಾಸನ ಪುತ್ರರೆನಿಸುವ**
**ವ್ರತಿವರ ಮರೀಚ್ಯತ್ರಿ ವೈವ-**
**ಸ್ವತನು ತಾರಾ ಮಿತ್ರ ನಿಋುಋುತಿ ಪ್ರವಹ ಮಾರುತನ ॥**
**ಸತಿ ಧನೇಶಾಶ್ವಿನಿಗಳೆರ್ಗಣ-**
**ಪತಿಯು ವಿಷ್ವಕ್ಸೇನ ಶೇಷ ಸು-**
**ಶತರು ಮನುಗಳುಚಥ್ಯ ಚ್ಯಾವನ ಮುನಿಗಳಿಗೆ ನಮಿಪೆ ॥೨೫॥**

ಪದ್ಯಾರ್ಥ:—ವ್ರತತಿಜಾಸನ=ಬಳ್ಳಿಗಳಿಂದ ಹುಟ್ಟಿದ ಕಮಲವೇ ಆಸನ ವಾಗಿ ಉಳ್ಳ ಬ್ರಹ್ಮದೇವರ, ಪುತ್ರರೆನಿಸುವ=ಮಕ್ಕಳೆನಿಸುವ, ವ್ರತಿವರ= ವ್ರತ ಉಳ್ಳವರಲ್ಲಿ ಶ್ರೇಷ್ಠರಾದ, ಅತ್ರಿ, ಮರೀಚಿ, ವೈವಸ್ವತನು=ವೈವಸ್ವತ ಮನು, ತಾರಾ=ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರಾ, ಮಿತ್ರ=ಮಿತ್ರನೆಂಬ ಸೂರ್ಯ, ನಿಋುಋುತಿ, ಪ್ರವಹ ಮಾರುತನ ಸತಿ=ಪ್ರವಹ ವಾಯುವಿನ ಹೆಂಡತಿ ಪ್ರಾವಹೀ, ಧನೇಶ=ಕುಬೇರ, ಅಶ್ವಿನಿಗಳಿರ್=ಅಶ್ವಿನೀ ದೇವತೆಗಳೀರ್ವರು, ಗಣ ಪತಿ, ವಿಷ್ವಕ್ಸೇನ, ಶೇಷಸುಶತರು = ೧೦೦ಮಂದಿ ದೇವತೆಗಳಲ್ಲಿ ಹಿಂದೆ ಹೇಳಿದ ವರು ಹೋಗುತ್ತಾ ಉಳಿದವರು, ಮನುಗಳು=ಹಿಂದೆ ಹೇಳಿದವರು ಹೋಗುತ್ತಾ ಉಳಿದ ಮನುಗಳು, ಉಚಥ್ಯಚ್ಯಾವನರಿಗೆ ಮುನಿಗಳಿಗೆ, ನಮಿಪೆ=ಹಿಂದೆ ಎರ ಡು ಪದ್ಯಗಳಿಂದ ಹೇಳಿದ ಹರಿವಿರಿಂಚಿ ಮೊದಲು ಚ್ಯಾವನ ಮುನಿಗಳ ವರೆಗೂ ಎಲ್ಲರಿಗೂ ನಮಸ್ಕಾರ ಮಾಡುವೆನು.

**ಶತಸುಪುಣ್ಯಶ್ಲೋಕರೆನಿಸುವ**
**ಕ್ಷಿತಿಪರಿಗೆ ನಮಿಸುವೆನು ಭಾಗೀ-**
**ರಥಿ ವಿರಾಟ್ ಪರ್ಜನ್ಯ ರೋಹಿಣಿ ಶಾಮಲಾ ಸಂಜ್ಞಾ ॥**
**ಹುತವಹನ ಮಹಿಳಾ ಬುಧೋಷಾ**
**ಕ್ಷಿತಿ ಶನೈಶ್ಚರ ಪುಷ್ಕರರಿಗಾ**
**ನುತಿಸಿ ಬಿನ್ನೈಸುವೆನು ಭಕ್ತಿ ಜ್ಞಾನ ಕೊಡಲೆಂದು ॥ ೨೬ ॥**

ಪದ್ಯಾರ್ಥ:—ಶತಸುಪುಣ್ಯಶ್ಲೋಕರೆನಿಸುವ ಕ್ಷಿತಿಪರಿಗೆ=ಪುಣ್ಯಕೀರ್ತಿ ಗಳಿಂದು ಪ್ರಸಿದ್ಧರಾಗಿರುವ ೧೦೦ ಚಕ್ರವರ್ತಿಗಳಿಗೆ, ಭಾಗೀರಥಿ, ವಿರಾಟ್ = ಅನಿರುದ್ಧನ ಹೆಂಡತಿಯಾದ ಉಷಾದೇವಿಯು, ಪರ್ಜನ್ಯ=ಆ ಹೆಸರುಳ್ಳ ಸೂರ್ಯನು

ರೋಹಿಣಿ=ಚಂದ್ರನ ಹೆಂಡತಿ, ಶಾಮಲಾ=ಯಮದೇವರ ಹೆಂಡತಿ. ಸಂಜ್ಞಾ=ವಿವಸ್ವತನೆಂಬ ಸೂರ್ಯನ ಹೆಂಡತಿ, ಹುತವಹನ ಮಹಿಳಾ=ಅಗ್ನಿಯು ಹೆಂಡತಿ ಸ್ವಾಹಾದೇವಿ,ಬುಧ,ಉಷಾ=ಅಶ್ವಿನೀದೇವತೆಗಳ ಹೆಂಡತಿ, ಕ್ಷಿತಿ=ಭೂಮಿಗೆಅಭಿಮಾನಿ, ಶನೈಶ್ಚರ, ಪುಷ್ಕರರಿಗೆ=ಪುಷ್ಕರನೆ ಕಡೆಯಾದ ಮೇಲೆ ಹೇಳಿದ ಎಲ್ಲರಿಗೂ ನಮಿಸುವೆನು=ನಮಸ್ಕಾರ ಮಾಡುವೆನು; ಅನುತಿಸಿ=ಚೆನ್ನಾಗಿ ಇವರೆಲ್ಲರನ್ನು ಸ್ತುತಿಸಿ, ಭಕ್ತಿ ಜ್ಞಾನವನ್ನು ಕೊಡಲೆಂದು ಬಿನ್ನೈಸುವೆನು.

**ನೂರಧಿಕವಾಗಿಪ್ಪ ಮತ್ಹದಿ-**
**ನಾರುಸಾವಿರ ನಂದಗೋಪ ಕು-**
**ಮಾರನರ್ಧಾಂಗಿಯರಗಸ್ತ್ಯಾದಿಕ ಮುನೀಶ್ವರರು ॥**
**ಊರ್ವಶಿಯು ಮೊದಲಾದ ಅಪ್ಸರ**
**ನಾರಿಯರು ಶತ ತುಂಬರರು ಕಂ-**
**ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಯೆನ್ನಿಂದ ॥ ೨೭ ॥**

ಪದ್ಯಾರ್ಥ:—ನೂರಧಿಕವಾಗಿಪ್ಪ=೧೦೦ ಹೆಚ್ಚಾಗಿರುವ, ಮತ್ತು ಹದಿನಾರು ಸಾವಿರ=೧೬ ಸಾವಿರ ಸಂಖ್ಯಾಕರಾದ, ನಂದಗೋಪ ಕುಮಾರನ=ಶ್ರೀಕೃಷ್ಣನ, ಅರ್ಧಾಂಗಿಯರು=ಹೆಂಡಿರುಗಳು, ಅಗಸ್ತ್ಯಾದಿಕ=ಅಗಸ್ತ್ಯರೇ ಮೊದಲಾಗಿ ಉಳ್ಳ, ಮುನೀಶ್ವರರು=ಋಷಿಶ್ರೇಷ್ಠರು,ಊರ್ವಶಿಯು ಮೊದಲಾದ ಅಪ್ಸರ ನಾರಿಯರು ಶತ=ಅಪ್ಸರಸ್ತ್ರೀಯರು ೧೦೦ ಮಂದಿಗಳು, ತುಂಬರರು ಮೊದಲಾದ ಗಂಧರ್ವರು ೧೦೦ ಮಂದಿಗಳು, ಇವರೆಲ್ಲರು, ಯೆನ್ನಿಂದ=ನನ್ನಿಂದ, ಕಂಸಾರಿ ಗುಣಗಳ=ಶ್ರೀಕೃಷ್ಣನ ಗುಣಗಳ ಕೀರ್ತನೆ ಮಾಡಿಸಲಿ!

**ಪಾವನರು ಶುಚಿಶುದ್ಧನಾಮಕ**
**ದೇವತೆಗಳಾಜಾನ ಚಿರಪಿತೃ**
**ದೇವ ನರಗಂಧರ್ವರವನಿಪ ಮಾನುಷೋತ್ತಮರು ॥**
**ಈ ವಸುಮತಿಯೊಳುಳ್ಳ ವೈಷ್ಣವ-**
**ರಾವಳಿಯೊಳಿಹರೆಂದು ನಿತ್ಯದಿ**
**ಸೇವಿಪುದು ಸಂತೋಷದಿಂ ಸರ್ವ ಪ್ರಕಾರದಲಿ ॥ ೨೮ ॥**

ಪದ್ಯಾರ್ಥ:—ಪಾವನ ಶುಚಿ ಶುದ್ಧನಾಮಕ=ಈ ಹೆಸರುಗಳುಳ್ಳ ಸೋಮಪಾನವಿಲ್ಲದ ಅಪ್ರಸಿದ್ಧರಾದ ಆಜಾನದೇವತೆಗಳು, ಚಿರಪಿತೃ, ದೇವನರ

ಗಂಧರ್ವರು=ದೇವಗಂಧರ್ವರು, ಮನುಷ್ಯಗಂಧರ್ವರು, ಅವನಿಪ=ರಾಜರುಗಳು, ಮಾನುಷೋತ್ತಮರು, ಈ ವಸುಮತಿಯೊಳುಳ್ಳ=ಈ ಭೂಮಿಯೊಳಗಿರುವ ವೈಷ್ಣವರು=ವಿಷ್ಣುಭಕ್ತರನೇಕರು, ಆವಳಿಯೊಳು=ಮೇಲೆ ಹೇಳಿದ ಮಾನುಷೋತ್ತಮರ ಪಙ್ಕ್ತಿಯೊಳಗೆ, ಇಹರೆಂದು=ಸೇರಿರುವರೆಂದು, ನಿತ್ಯದಿ ಸಂತೋಷದಿಂ ಸರ್ವ ಪ್ರಕಾರದಲಿ ಸೇವಿಪುದು.

ತಾತ್ಪರ್ಯ:—ಮನುಷ್ಯೋತ್ತಮ ಗಣದಲ್ಲಿ ಸೇರಿದವರು ಈ ಕಾಲದಲ್ಲೂ, ಈ ಭೂಮಿಯಲ್ಲಿ ಎಷ್ಟೋ ಮಂದಿ ಭಾಗವತೋತ್ತಮರು ಇರುವರೆಂದು ತಿಳಿದು ತಾರತಮ್ಯ ಪ್ರಕಾರ ಸರ್ವರನ್ನು ಸರ್ವ ಪ್ರಕಾರದಿಂದಲೂ ನಿತ್ಯದಲ್ಲೂ ಸೇವೆ ಮಾಡುವುದರಿಂದ ಮುಕ್ತಿಗೆ ಸಾಧನವಾಗುವುದೆಂಬ ತಾತ್ಪರ್ಯ.

ಸಂಧಿಯನ್ನು ಮುಗಿಸುತ್ತಾ ತಾರತಮ್ಯ ಚಿಂತನೆಯ ಮುಖ್ಯ ಫಲಿತಾರ್ಥವನ್ನು ಹೇಳುತ್ತಾರೆ:—

**ಮಾನುಷೋತ್ತಮರನು ಪಿಡಿದು ಚತು-**
**ರಾನನಾಂತ ಶತೋತ್ತಮತ್ವ ಕ್ರ-**
**ಮೇಣ ಚಿಂತಿಪ ಭಕ್ತರಿಗೆ ಚತುರ್ವಿಧ ಪುರುಷಾರ್ಥ ॥**
**ಶ್ರೀನಿಧಿ ಜಗನ್ನಾಥ ವಿಠ್ಠಲ**
**ತಾನೆ ವಲಿದೀವನು ನಿರಂತರ**
**ಸಾನುರಾಗದಿ ಪಠಿಸುವದು ಪ್ರಾಜ್ಞರಿದು ಮರಿಯದಲೆ ॥೨೯॥**

ಪದ್ಯಾರ್ಥ:— ಮಾನುಷೋತ್ತಮರನು = ಮನುಷ್ಯೋತ್ತಮರನ್ನು ಪಿಡಿದು=ಮೊದಲುಮಾಡಿ, ಚತುರಾನನಾಂತ=ಬ್ರಹ್ಮದೇವರ ಕಡೆಯಾಗಿ, ಶತೋತ್ತಮತ್ವ ಕ್ರಮೇಣ=೧೦೦-೧೦೦ ಗುಣಗಳು ಉತ್ತಮರೆಂಬ ಕ್ರಮದಿಂದ, ಚಿಂತಿಪ=ತಿಳಿಯುವ, ಭಕ್ತರಿಗೆ, ಶ್ರೀನಿಧಿ=ಶಿರಿದೇವಿಯೆಂಬ ನಿಧಿಯುಳ್ಳ, ಅಥವಾ ಶ್ರೀದೇವಿಯರಿಗೆ ನಿಧಿಯಂತಿರುವ, ಜಗನ್ನಾಥ ವಿಠ್ಠಲ=ನಮ್ಮಬಿಂಬ ಮೂರ್ತಿಯಾದ ಜಗನ್ನಾಥ ವಿಠ್ಠಲ ನಾಮಕ ಶ್ರೀಹರಿಯು, ತಾನೆ ವಲಿದು=ತಾನಾಗಿ ಸುಪ್ರೀತನಾಗಿ, ಚತುರ್ವಿಧ ಪುರುಷಾರ್ಥ=ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ೪ ವಿಧ ಪುರುಷಾರ್ಥಗಳನ್ನು, ಈವನು=ಕೊಡುವನು. ಇದು=ಈ ತಾರತಮ್ಯ ಸಂಧಿಯನ್ನು,ಮರಿಯದಲೆ, ಪ್ರಾಜ್ಞರು=ಭಗವದ್ಭಕ್ತರಾದ ಜ್ಞಾನಿಗಳು ನಿರಂತರ=ನಿತ್ಯದಲ್ಲೂ, ಸಾನುರಾಗದಿ=ಪರಮಾನುರಾಗದಿಂದ ಪಠಿಸುವದು.

ತಾತ್ಪರ್ಯ:—ಮನುಷ್ಯೋತ್ತಮರು ಮೊದಲು ಬ್ರಹ್ಮದೇವರ ವರೆಗೂ ಒಬ್ಬರಕಿಂತಲೂ ಒಬ್ಬರು ೧೦೦ ಗುಣ ಉತ್ತಮರೆಂಬ ಕ್ರಮದಿಂದ ಅಂವರೆ ಸತಿ ಮೊದಲಾದ ಕೆಲವರಿಗೆ ೧೦ ಗುಣಗಳು ಉತ್ತಮ ನೀಚತ್ವ ಕ್ರಮವೂ ಹೇಳಿರುವರು. ಆ ಕ್ರಮಾನುಸಾರವೆಂಬ ಅರ್ಥ. ೧೦೦ ಗುಣ ಉತ್ತಮರೆಂಮ ಹೇಳಿದುದು ಪ್ರಾಯಶಃ ಎಂದು ಭಾವಿಸಬೇಕು. ಅಂತು ಈ ಸಂಧಿಯಲ್ಲಿ ಹೇಳಿದ ಕ್ರಮದಿಂದ ನಿತ್ಯದಲ್ಲೂ ಯಾರು ಚಿಂತಿಸುವರೊ, ಅವರಿಗೆ ಶ್ರೀಹರಿ ಯು ಪ್ರೀತನಾಗಿ ಚತುರ್ವಿಧ ಪುರುಷಾರ್ಥಗಳನ್ನು ಕೊಡುವನು. ಆದ್ದರಿಂದ ಮರಿಯದೆ ನಿತ್ಯದಲ್ಲೂ ಈ ಸಂಧಿಯನ್ನು ಅಭಿಮಾನಪೂರ್ವಕವಾಗಿ ಪಠಿಸ ಬೇಕು.

ಇಂತೀ ಭಾವ ಪ್ರಕಾಶಿಕೆಯಲ್ಲಿ ಗುಣತಾರತಮ್ಯವೆಂಬ ೨೦ನೆಯ ಸಂಧಿಯು ಸಮಾಪ್ತಮಾದುದು.

ಶ್ರೀಕೃಷ್ಣಾರ್ಪಣಮಸ್ತು.

---

## ಬೃಹತ್ತಾರತಮ್ಯ ಸಂಧಿ

## ( ಅಂಶಾವ ಚರಣ ಸಂಧಿ )

ಪೂರ್ವ ಸಂಧಿಯಲ್ಲಿ ಗುಣಗಳ ಹೆಚ್ಚು ಕಮ್ಮಿಗಳನ್ನು ಅನುಸರಿಸಿ ತಾರತಮ್ಯವನ್ನು ಹೇಳಿದರು. ಈ ಸಂಧಿಯಲ್ಲಿ ಶ್ರೀಪರಮಾತ್ಮನು ಮತ್ತೂ ದೇವತೆಗಳು ಇವರುಗಳ ಅವತಾರಗಳನ್ನೂ ಅಂಶಗಳನ್ನೂ ಸಹ ತಾರತಮ್ಯ ಕ್ರಮದಿಂದ ಹೇಳುತ್ತಾರೆ.—

**ಸಂಧಿ ಸೂಚನೆ.—ಹರಿ ಶಿರಿ ವಿರಂಚೀರಮುಖ ನಿ**
**ರ್ಜರರಾವೇಶಾವತಾರಗಳ**
**ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿಪೂರ್ವಕದಿ ||**

ಪದ್ಯಾರ್ಥ.—ಹರಿ, ಶಿರಿ-ಲಕ್ಷ್ಮೀದೇವಿಯರು, ವಿರಿಂಚಿ = ಬ್ರಹ್ಮ ದೇವರು, ಈರ-ವಾಯುದೇವರು, ಮುಖ=ಇವರುಗಳೇ ಪ್ರಧಾನರಾಗುಳ್ಳ ನಿರ್ಜರರ=ದೇವತೆಗಳ, ಆವೇಶಾವತಾರಗಳ=ಅಂಶಾವತಾರಗಳನ್ನು, ಗುಣ ಗಣ-ಅವರುಗಳ ಗುಣ ಸಮೂಹವನ್ನು, ಸರ್ವಕಾಲದಿ=ಸರ್ವಕಾಲದಲ್ಲೂ, ಭಕ್ತಿಪೂರ್ವಕದಿ ಸ್ಮರಿಸು.

ತಾತ್ಪರ್ಯ:—ಶ್ರೀಪರಮಾತ್ಮನವತಾರಗಳು ಅನಂತವಾದ ಪ್ರ

ರುಯುಕ್ತ ಸಂಪೂರ್ಣ ಅಂಶಗಳನ್ನು ಅವತಾರಗಳನ್ನು ಹೇಳಲು ಸಾಧ್ಯವಲ್ಲ. ಆದ್ದರಿಂದ ಪ್ರಧಾನವಾದ ಅಂಶಾವತಾರಗಳನ್ನು ಹೇಳುವೆವು. ಉಳಿದ ಬ್ರಹ್ಮ ವಾಯು ಮೊದಲಾದ ದೇವತೆಗಳ ಅಂಶಗಳು ಅವತಾರಗಳನ್ನು ಸಂಪೂರ್ಣವಾಗಿ ಇದರಲ್ಲಿ ಹೇಳಿರುತ್ತೇವೆ. ಇಂತಹ ಅಂಶಗಳನ್ನು ಅವತಾರಗಳನ್ನು ಅವರವರ ಗುಣಗಣಗಳನ್ನೂ ನಿತ್ಯದಲ್ಲೂ ಭಗವದ್ಭಕ್ತರಾದ ಅಧಿಕಾರಿಗಳು ಸ್ಮರಿಸಬೇಕೆಂಬ ಭಾವ. ಹೀಗೆ ಈ ಸಂಧಿಯ ಅಭಿಪ್ರಾಯವನ್ನು ಈ ಅರ್ಧ ಪದ್ಯದಿಂದ ಸೂಚಿಸಿರುತ್ತಾರೆ.

ಅವತಾರಿಕೆ:— ಪರಮಾತ್ಮನ ಅಂಶಾವತಾರಗಳನ್ನು ಹೇಳುತ್ತಾರೆ.–

**ಮೀನ ಕೂರ್ಮ ಕ್ರೋಡ ನರಹರಿ**
**ಮಾಣವಕ ಭೃಗುರಾಮ ದಶರಥ**
**ಸೂನುಯಾದವ ಬುದ್ಧ ಕಲ್ಕೀ ಕಪಿಲವೈಕುಂಠ ।**
**ಶ್ರೀನಿವಾಸ ವ್ಯಾಸ ಋಷಭ ಹ**
**ಯಾನನಾ ನಾರಾಯಣೀ ಹಂ**
**ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷೀಕೇಶ ॥೧॥**

ಪದ್ಯಾರ್ಥ.—ಮೀನ=ಮತ್ಸ್ಯಾವತಾರವು, ಕೂರ್ಮ=ಕೂರ್ಮಾವತಾರವು ಕ್ರೋಡ-ವರಾಹಾವತಾರವು ನರಹರಿ=ನರಸಿಂಹಾವತಾರವು ಮಾಣವಕ=ಬ್ರಹ್ಮಚಾರಿಯಾದ ವಾಮನಾವತಾರವು ಭೃಗುರಾಮ-ಪರಶುರಾಮವತಾರವು ದಶರಥಸೂನು=ರಾಮಾವತಾರವು ಯಾದವ-ಕೃಷ್ಣಾವತಾರವು ಬುದ್ಧ ಕಲ್ಕೀ ಕಪಿಲ=ದೇವಹೂತಿಯಲ್ಲಿ ಕರ್ದಮರ ದೆಸೆಯಿಂದ ಅವತರಿಸಿರುವ ಕಪಿಲದೇವರು; ವೈಕುಂಠ-ವಿಕುಂಠಾ ಎಂಬ ಸ್ತ್ರೀಯಲ್ಲಿ ಶುಭ್ರನ ದೆಶೆಯಿಂದ ಅವತರಿಸಿರುವನು. ಪತ್ನೀ ವಿಕುಂಠಾ ಶುಭ್ರಸ್ಯ ಎಂದು ಭಾಗವತ ಅಷ್ಟಮಸ್ಕಂಧದಲ್ಲಿ ಹೇಳಿರುವರು. ಶ್ರೀನಿವಾಸ ವ್ಯಾಸ ಋಷಭ ನಾಭಿರಾಯನ ದೆಶೆಯಿಂದ ಮೇರುದೇವಿಯಲ್ಲಿ ಅವತಾರ ಹಯಾನನ ಹಯಗ್ರೀವ ರೂಪದಿಂದ ಅವತರಿಸಿ ಹಯಗ್ರೀವನಾಮಕ ದೈತ್ಯನನ್ನು ಕೊಂದುದು. ನಾರಾಯಣೀ ಮೋಹಿನಿರೂಪವನ್ನು ಧರಿಸಿ ದೇವತೆಗಳಿಗೆ ಅಮೃತಪ್ರಾಶನ ಕಾಲದಲ್ಲಿ ದೈತ್ಯರನ್ನು ವಂಚಿಸಿದ ರೂಪ ಹಂಸ=ಬ್ರಹ್ಮದೇವರಿಗೆ ತತ್ವೋಪದೇಶಮಾಡಿದರೂಪ ಅನಿರುದ್ಧ-ವಾಸುದೇವಾದಿ 5ರೂಪಗಳವ್ಯೂಹದಲ್ಲಿ ಶೇರಿದ

ಅನಿರುದ್ಧರೂಪ, ತ್ರಿವಿಕ್ರಮ, ಶ್ರೀಧರ = ಲಕ್ಷ್ಮೀದೇವಿಯರನ್ನು ವಕ್ಷಸ್ಥಳದಲ್ಲಿ ಧರಿಸಿದ ಅಜಿತಾವತಾರ, ಹೃಷೀಕೇಶ-ಇಂದ್ರಿಯಾಭಿಮಾನಿಗಳಿಗೆ ಅಧಿಪತಿಯಾದ ಭಗವದ್ರೂಪ, ಇಂತಹಾ ಅನೇಕ ಅವತಾರಗಳುಳ್ಳವನು ಪರಮಾತ್ಮನೆಂಬ ತಾತ್ಪರ್ಯ.

**ಹರಿಯು ನಾರಾಯಣನು ಕೃಷ್ಣಾ**
**ಸುರಕುಲಾಂತಕ ಸೂರ್ಯ ಸಮಪ್ರಭ**
**ಕರೆಸುವನು ನಿರ್ದುಷ್ಟ ಸುಖಪರಿಪೂರ್ಣ ತಾನೆಂದು ।**
**ಸರ್ವದೇವೋತ್ತಮನು ಸರ್ವಗ**
**ಪರಮಪುರುಷ ಪುರಾತನ ಜರಾ**
**ಮರಣವರ್ಜಿತ ವಾಸುದೇವಾದ್ಯಮಿತ ರೂಪಾತ್ಮ ॥೨॥**

ಪದ್ಯಾರ್ಥ.—ಹರಿಯು "ತತ್ರಾಪಿಜಜ್ಞೇಭಗವಾನ್ ಹರಿಣ್ಯಾಂಹರಿಮೇಧಸಃ ॥ ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋಗ್ರಹಾತ್ ಎಂಬ ಭಾಗವತ ಅಷ್ಟಮ ಸ್ಕಂಧದ ವಾಕ್ಯದಂತೆ ಹರಿಮೇದಸ್ ಎಂಬುವನ ದೆಸೆಯಿಂದ ಹರಿಣೀ ಎಂಬಾಕೆಯಲ್ಲಿ ಅವತರಿಸಿ ಗಜೇಂದ್ರನನ್ನು ಮೊಸಳೆಯಿಂದ ಬಿಡಿಸಿದ ಮನ್ವಂತರಾವತಾರ ರೂಪವು. ನಾರಾಯಣನು=ಧರ್ಮಪ್ರಜೇಶ್ವರನ ದೆಶೆಯಿಂದ ಸೂನೃತೆಯಲ್ಲಿ ಅವತರಿಸಿದ ನರನಾರಾಯಣ ರೂಪಗಳಲ್ಲಿ ಒಂದಾದ ನಾರಾಯಣವತಾರವು. ಕೃಷ್ಣ, ಅಸುರಕುಲಾಂತಕ= ದೈತ್ಯರನ್ನು ನಿಗ್ರಹಿಸಲು ಅವತರಿಸಿದ ಕೃಷ್ಣಾವತಾರವು, ಇಂತಹಾ ಪರಮಾತ್ಮನು, ಸೂರ್ಯಸಮಪ್ರಭ=ಸೂರ್ಯನಿಗೆ ಸಮವಾದ ಕಾಂತಿಯುಳ್ಳವನು, ನಿರ್ದುಷ್ಟ=ದೋಷರಹಿತನು, ಸುಖಪರಿಪೂರ್ಣ, ಸರ್ವದೇವೋತ್ತಮನು, ಸರ್ವಗ=ಸರ್ವತ್ರ ವ್ಯಾಪ್ತನು, ಪರಮಪುರುಷ-ಪುರುಷರಲ್ಲಿ ಶ್ರೇಷ್ಟನು, ಪುರಾತನ=ಅನಾದಿಕಾಲೀನನು, ಜರಾಮರಣವರ್ಜಿತವಾಸುದೇವಾದ್ಯಮಿತರೂಪಾತ್ಮ=ವಾಸುದೇವ ಮೊದಲಾದ ಅನಂತಾವತಾರ ಉಳ್ಳವನೆಂದು ಕರೆಸುವನು. ಹೀಗೆ ಸರ್ವ ಶಾಸ್ತ್ರದಲ್ಲೂ ಪ್ರಸಿದ್ಧನಾದವನೆಂದರ್ಥ.

ಅವತಾರಿಕೆ.—ಮುಂದಿನ ಎರಡು ಪದ್ಯಗಳಿಂದ ಲಕ್ಷ್ಮೀದೇವಿಯರ ಅವತಾರಗಳನು ಹೇಳುತ್ತಾರೆ.—

**ಈ ನಳಿನಭವಜನನಿ ಲಕ್ಷ್ಮೀ**
**ಜ್ಞಾನಬಲ ಭಕ್ತ್ಯಾದಿ ಗುಣ ಸಂ**
**ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ।**
**ಹೀನಳೆನಿಪಳನಂತಗುಣದಿ ಪು**
**ರಾಣ ಪುರುಷಗೆ ಪ್ರಕೃತಿಗಿನ್ನು ಸ**
**ಮಾನರೆನಿಸುವರಿಲ್ಲ ಮುಕ್ತಾಮುಕ್ತ ಸುರರೊಳಗೆ ॥೩॥**

ಪದ್ಯಾರ್ಥ:—ಈ ನಳಿನಭವ=ಕಮಲದಿಂದ ಜನಿಸಿದ ಬ್ರಹ್ಮದೇವರ ಜನನಿ=ತಾಯಿಯಾದ ಲಕ್ಷ್ಮೀದೇವಿಯರು ಸರ್ವಕಾಲದಿ=ಪ್ರಳಯ ಮೊದಲಾದ ಎಲ್ಲಾ ಕಾಲದಲ್ಲೂ, ಹರಿಕೃಪಾಬಲದಿ=ಪರಮಾತ್ಮನ ಕೃಪಾಬಲದಿಂದ, ಜ್ಞಾನ ಬಲಭಕ್ತ್ಯಾದಿಗುಣಸಂಪೂರ್ಣಳು–ಮಿಕ್ಕ ಬ್ರಹ್ಮಾದಿ ಸಕಲ ದೇವತೆಗಳಿಗಿಂತಲೂ ಅತ್ಯಧಿಕವಾದ ಸಂಪೂರ್ಣವಾದ ಜ್ಞಾನ, ಬಲ ಭಕ್ತಿ ಇವುಗಳಿಂದ ಕೂಡಿರುವರೆನಿಸುವರು. ಪುರಾಣಪುರುಷಗೆ=ಪುರಾತನ ಪುರುಷನೆನಿಸುವ ನಾರಾಯಣನಿಗೆ ಅನಂತಗುಣದಿ–ಅನಂತಾನಂತ ಗುಣಗಳಿಂದ ಹೀನಳೆನಿಪಳು=ಕಮ್ಮಿಯೆನಿಸುವರು. ಪ್ರಕೃತಿಗೆ–ಈ ಲಕ್ಷ್ಮೀದೇವಿಯರಿಗೆ ಇನ್ನು ಮುಕ್ತಾಮುಕ್ತಸುರರೊಳಗೆ = ಮುಕ್ತರಾದವರಲ್ಲಾಗಲೀ ಆಗುವವರಲ್ಲಾಗಲೀ ಯಾವ ದೇವತೆಗಳಲ್ಲೂ ಸಮಾನರೆನಿಸುವರಿಲ್ಲ.

**ಗುಣಗಳತ್ರಯಮಾನಿ ಶ್ರೀಕುಂ**
**ಭಿಣಿ ಮಹಾದುರ್ಗಾಂಭ್ರಿಣೀ ರು**
**ಗ್ಮಿಣಿಯು ಸತ್ಯಾಶಾಂತಿಕೃತಿ ಜಯೆಮಾಯೆ ಮಹಾಲಕುಮಿ ।**
**ಜನಕಜಾಕಮಲಾಲಯಾದ**
**ಕ್ಷಿಣೆಯು ಪದ್ಮಾತ್ರಿಲೋಕೇಶ್ವರಿ**
**ಯಹುಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ॥೪॥**

ಪದ್ಯಾರ್ಥ:— ಗುಣಗಳತ್ರಯಮಾನಿ=ಸತ್ವ ರಜಸ್ತಮೋ ಗುಣಗಳಿಗಭಿಮಾನಿ ಶ್ರೀ = ಶ್ರೀದೇವಿ ಕುಂಭಿಣೀ – ಭೂದೇವಿ ಮಹಾದುರ್ಗ, ಅಂಭ್ರಿಣೀ ರುಗ್ಮಿಣಿಯು, ಸತ್ಯಾ=ಸತ್ಯಭಾಮೆ, ಶಾಂತೀ–ಅನಿರುದ್ಧನಾಮಕ ಪರಮಾತ್ಮನ ಪತ್ನಿ, ಕೃತಿ=ಪ್ರದ್ಯುಮ್ನನಾಮಕ ಪರಮಾತ್ಮನ ಹೆಂಡತಿ, ಜಯಾ ಸಂಕರ್ಷಣನ ಹೆಂಡತಿ, ಮಾಯಾ–ವಾಸುದೇವನ ಹೆಂಡತಿ, ಮಹಾಲಕುಮಿ ನಾರಾಯಣನಹೆಂಡತಿ, ಜನಕಜಾ=ಸೀತಾ, ಕಮಲಾಲಯಾ=ಅಜಿತನಾಮಕ

ತ್ರಿಲೋಕೇಶ್ವರಿ=ಮೂರು ಲೋಕಕ್ಕೂ ಈಶ್ವರಿ ಎನಿಸುವರು. ಇಂತಹಾ ತ್ರಿಲೋಕೇಶ್ವರಿಯಾದ ಮಹಾಲಕ್ಷ್ಮಿಯು ಅಣುಮಹತ್ತಿನೊಳಿದ್ದು, ಸೂಕ್ಷ್ಮವಾದ ವಸ್ತುಗಳಲ್ಲಿ ಸ್ಥೂಲ ರೂಪವಾಗಿಯೂ ಇದ್ದು, ಉಪಮಾನ ರಹಿತಳೆನಿಸುವಳು=ಎಣೆಯಿಲ್ಲದವರೆನಿಸುವರು.

ಅವತಾರಿಕೆ.—ಬ್ರಹ್ಮವಾಯುಗಳ ತಾರತಮ್ಯವನ್ನು ಹೇಳುತ್ತಾರೆ.—

ಘೋಟಕಾಸ್ಯನ ಮಡದಿಗಿಂದಲಿ
ಹಾಟಕೋದರ ಪವನಗೀರ್ವರು
ಕೋಟಿಗುಣದಿಂದಧಮರೆನಿಪರು ಯಾವಕಾಲದಲಿ ||
ಖೇಟಪತಿ ಶೇಷಾಮರೇಂದ್ರರ
ಸಾಟಿಮಾಡದೆ ಶ್ರೀಶನ ಕೃಪಾ
ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು ||೫||

ಪದ್ಯಾರ್ಥ.—ಘೋಟಕಾಸ್ಯನ=ಕುದುರೆ ಮುಖವುಳ್ಳ ಹಯಗ್ರೀವ ದೇವರ, ಮಡದಿಗಿಂದಲಿ = ಹೆಂಡತಿಯಾದ ಲಕ್ಷ್ಮೀದೇವಿಯರಿಗಿಂತಲೂ, ಹಾಟಕೋದರ ಪವನಗೀರ್ವರು-ಹಾಟಕೋದರ=ಬಂಗಾರವೇ ಉದರವಾಗುಳ್ಳ ಬ್ರಹ್ಮದೇವರು, ಪವನ=ವಾಯುದೇವರು, ಇವರಿಬ್ಬರೂ, ಯಾವ ಕಾಲದಲಿ=ಸರ್ವ ಕಾಲದಲ್ಲೂ, ಕೋಟಿಗುಣದಿಂದಧಮರೆನಿಪರು-ಒಂದು ಕೋಟಿ ಗುಣಗಳಿಂದ ಕಮ್ಮಿಯೆನಿಸುವರು. ಶ್ರೀಶನ = ಲಕ್ಷ್ಮೀಪತಿಯಾದ ಶ್ರೀಪರಮಾತ್ಮನ, ಕೃಪಾನೋಟದಿಂದಲಿ=ಕೃಪಾಕಟಾಕ್ಷದಿಂದ, ಖೇಟಪತಿ ಶೇಷಾಮರೇಂದ್ರರ=ಖೇಟಪತಿ = ಅಂತರಿಕ್ಷದಲ್ಲಿ ಸಂಚರಿಸುತ್ತಿರುವ ಪಕ್ಷಿಗಳಿಗೆ ಪತಿಯಾದ ಗರುಡ, ಶೇಷ, ಅಮರೇಂದ್ರರ=ದೇವೇಂದ್ರರನ್ನು, ಸಾಟಿಮಾಡದೆ – ಲೆಕ್ಕಿಸದೆ, ಸರ್ವರೊಳು – ಎಲ್ಲಾ ಪ್ರಾಣಿಗಳಲ್ಲೂ ಇದ್ದು, ವ್ಯಾಪಾರ ಮಾಡುವರು ಸಕಲೇಂದ್ರಿಯ ವ್ಯಾಪಾರಗಳನ್ನು ನಡೆಸುವರು.

ತಾತ್ಪರ್ಯ:—ಲಕ್ಷ್ಮೀದೇವಿಯರಿಗಿಂತಲೂ, ಬ್ರಹ್ಮ ವಾಯುಗಳಿಬ್ಬರೂ. ಯಾವ ಕಾಲದಲ್ಲೂ ಅಂದರೆ ಮುಕ್ತರಾದ ಮೇಲೂ ಸಹ ಕೋಟಿ ಗುಣಗಳಿಂದ ಕಮ್ಮಿಯೆನಿಸುವರು. ಗರುಡ ಶೇಷ ಇಂದ್ರಾದಿಗಳನ್ನು ಲಕ್ಷ್ಯ ಮಾಡದೆ, ಶ್ರೀಪರಮಾತ್ಮನ ಕೃಪಾಕಟಾಕ್ಷದಿಂದ ಸರ್ವ ಪ್ರಾಣಿಗಳಲ್ಲಿದ್ದು ಸರ್ವೇಂದ್ರಿಯ ವ್ಯಾಪಾರಗಳನ್ನು ನಡಿಯಿಸುವರು. “ಗರುಡ ಶೇಷಾಮ

ರೇಂದ್ರರ " ಎಂದು ಗರುಡ ಶೇಷರನ್ನು ಮಾತ್ರ ಹೇಳಿರುವುದರಿಂದ ಋದ್ರ ದೇವರನ್ನು ಸಾಟಿಮಾಡುವರೋ ಏನೋ ಎಂದು ಶಂಕಿಸಬಾರದು. ಋದ್ರದೇವರೇ ಶೇಷಪದವಿಗೆ ಬರುವವರಾದುದರಿಂದ ಶೇಷದೇವರನ್ನು ಹೇಳಿದಮೇಲೆ ಋದ್ರದೇವರೂ ಇದರಲ್ಲಿ ಸೇರಿದರೆಂಬ ತಾತ್ಪರ್ಯ.

ಅವತಾರಿಕೆ—ಬ್ರಹ್ಮ ವಾಯುಗಳ ಹೆಸರುಗಳನ್ನೂ, ವಾಯುದೇವರ ವಿಶೇಷವಾದ ಗುಣನಾಮ ಕರ್ಮಗಳನ್ನೂ ಸಹ ಹೇಳುತ್ತಾರೆ:—

**ಪುರುಷ ಬ್ರಹ್ಮಾ ವಿರಿಂಚಿಯು ಮಹಾನ್**
**ಮರುತ ಮುಖ್ಯಪ್ರಾಣಧೃತಿ ಸ್ಮೃತಿ**
**ಗುರುವರ ಮಹಾಧ್ಯಾತ ಬಲ ವಿಜ್ಞಾತ ವಿಖ್ಯಾತ ॥**
**ಗರಳಭುಗ್ಭವ ರೋಗಭೇಷಜ**
**ಸ್ವರವರಣ ವೇದಸ್ಥ ಜೀವೇ**
**ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ ॥೬॥**

ವಿರಿಂಚಿಯು=ವಾಸುದೇವನ ದೆಸೆಯಿಂದ ಮಾಯಾದೇವಿಯಲ್ಲಿ ಸೂಕ್ಷ್ಮದೇಹದಿಂದ ಜನಿಸಿದ ರೂಪವು, ಪುರುಷನೆಂದು ಹೆಸರುಳ್ಳದುದಾಗಿರುವುದು. ಮಹಾನ್=ಅನಿರುದ್ಧನಾಮಕ ಪರಮಾತ್ಮನ ದೆಸೆಯಿಂದ ಶಾಂತೀದೇವಿಯಲ್ಲಿ ಜನಿಸಿದ ಮಹತ್ತತ್ತ್ವಾಭಿಮಾನಿಯಾದ ಬ್ರಹ್ಮರೂಪ, ಬ್ರಹ್ಮಾ=ಪರಮಾತ್ಮನ ನಾಭಿ ಕಮಲದಿಂದ ಜನಿಸಿದ ಚತುರ್ಮುಖ ಬ್ರಹ್ಮರೂಪ, ಹೀಗೆ ಬ್ರಹ್ಮದೇವರ ರೂಪನಾಮಗಳನ್ನು ಹೇಳಿ ವಾಯುದೇವರ ರೂಪನಾಮಗಳನ್ನು ಹೇಳಿ ವಾಯುದೇವರ ರೂಪನಾಮಗಳನ್ನು ಹೇಳುತ್ತಾರೆ.—ಮರುತ-೪೯ ಮರುದ್ಗಣದಲ್ಲಿ ಉತ್ತಮ ರೂಪ, ಮುಖ್ಯಪ್ರಾಣ=ಸಕಲ ಪ್ರಾಣಿಗಳಿಗೂ ಪ್ರಾಣಭೂತರು, ಧೃತಿ=ಸಮರಹಿತವಾದ ಧೈರ್ಯ ಉಳ್ಳವರು. ಸ್ಮೃತಿ=ಉಪಮಾನ ರಹಿತವಾದ ಜ್ಞಾಪಕಶಕ್ತಿಯುಳ್ಳವರು, ಗುರುವರ=ಗುರುಗಳಲ್ಲಿ ಉತ್ತಮರೆನಿಸುವರು, ಮಹಾಧ್ಯಾತ = ಶ್ರೀಪರಮಾತ್ಮನನ್ನು ಅಧಿಕವಾಗಿ ಧ್ಯಾನ ಮಾಡುತ್ತಿರುವುದರಿಂದ ಮಹಾಧ್ಯಾತನೆಂದು ಹೆಸರು. ಅವತಾರ ತ್ರಯಗಳಲ್ಲೂ ಮೂಲರೂಪದಲ್ಲೂ ಸಹ ಒಂದೇ ವಿಧವಾದ ಬಲ ಉಳ್ಳವರಾದುದರಿಂದ ಬಲ ಎಂದು ಹೆಸರು. ವಿಜ್ಞಾತ = ವಿಶೇಷವಾದ ಜ್ಞಾನ ಉಳ್ಳವರು ಭಗವತ್ಸ್ವರೂಪವನ್ನು ಗರುಡಾದಿಗಳಿಗಿಂತಲೂ ಹೆಚ್ಚಾಗಿ

ತಿಳಿದವರೆಂಬ ತಾತ್ಪರ್ಯ. ವಿಖ್ಯಾತ=ಲೋಕದಲ್ಲೂ ಪ್ರಖ್ಯಾತರಾದವರು, ಗರಳಭುಕ್ - ವಿಷವನ್ನುಂಡವರು, ಭವರೋಗಭೇಷಜ = ಸಂಸಾರವೆಂಬ ರೋಗಕ್ಕೆ ಔಷಧಪ್ರಾಯರು, ವೇದಸ್ಥ=ವೇದದಲ್ಲಿರುವ, ಸ್ವರವರಣ–ಸ್ವರ ವರ್ಣ ಅಂದರೆ ಅಕ್ಷರಗಳು ಇವುಗಳಿಗೆ ಅಭಿಮಾನಿಗಳು, ಅಥವಾ ಪರಮಾತ್ಮನಿಗೆ ಎರಡನೆಯವರಾಗಿ ವೇದಗಳಲ್ಲಿರುವ ಸ್ವರಾಕ್ಷರ ಪ್ರತಿಪಾದ್ಯರು, ಜೀವೇಶ್ವರ=ಜೀವೋತ್ತಮರು, ವಿಭೀಷಣ=ಶತೃಗಳಿಗೆ ಭಯವನ್ನುಂಟುಮಾಡುವವರು; ಅಥವಾ ಜೀವೇಶ್ವರ, ವಿಭೀಷಣ=ಜೀವನೇ ಈಶ್ವರನೆಂಬುವರಿಗೆ ಭಯಂಕರರು, ವಿಶ್ವಚೇಷ್ಟಕ-ಸಕಲ ಪ್ರಾಣಿಗಳಿಗೂ ಚಲನ ಶಕ್ತಿಯನ್ನುಂಟುಮಾಡುವವರು, ವೀತಭಯ=ಭಯವಿಲ್ಲದವರು, ಭೀಮ=ಭಗವದ್ವೇಷಿಗಳಿಗೆ ಭಯಂಕರರು.

ತಾತ್ಪರ್ಯ.—ಮಹಾಭಾರತ ತಾತ್ಪರ್ಯ ನಿರ್ಣಯ ಮೂರನೆಯ ಅಧ್ಯಾಯದಲ್ಲಿ " ವ್ಯೂಢಸ್ತುಚರ್ಧಾ ಭಗವಾನ್ ಸಏಕೋ ಮಾಯಾಂ ಶ್ರಿಯಂ ಸೃಷ್ಟಿವಿಧಿತ್ಸಯಾಂ || ರೂಪೇಣ ಪೂರ್ವೇಣ ವಾಸುದೇವ ನಮ್ನಾ ವಿರಿಂಚಂ ಸುಷು ವೇಚಸಾತಃ ||೯|| ಸಂಕರ್ಷಣಾಚ್ಚಾಪಿ ಜಯಾತನೂಜೋ ಬಭೂವ ಸಾಕ್ಷಾದ್ಬಲ ಸಂವಿದಾತ್ಮಾ || ವಾಯುರ್ಯ ಏವಾಥ ವಿರಿಂಚನಾಮಾ ಭವಿಷ್ಯ ಅಧ್ಯೋನ ಪರೇಸ್ತತೋಹಿ ||೧೦|| ಸೂತ್ರಂ ಸ ವಾಯುಃ ಪುರುಷೋ ವಿರಂಚಃ " ಇದರ ಅರ್ಥ.— ಶ್ರೀಮನ್ನಾರಾಯಣನು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೆಂಬ ರೂಪಗಳನ್ನು ಮೊಟ್ಟಮೊದಲು ರಿಸಿ ಸೃಷ್ಟಿಮಾಡುವ ಉದ್ದೇಶದಿಂದ ಮೊದಲನೆಯದಾದ ವಾಸುದೇವ ರೂಪದಿಂದ ಲಕ್ಷ್ಮೀದೇವಿಯರ ಮೊದಲನೆಯ ರೂಪವಾದ ಮಾಯಾದೇವಿಯನ್ನ ಸ್ವೀಕರಿಸಿದನು. ಆ ಮಾಯಾದೇವಿಯರು ವಾಸುದೇವನಾಮಕ ಪರಮಾತ್ಮನ ದೆಸೆಯಿಂದ ವಿರಿಂಚನನ್ನು ಪಡೆದರು. ||೯|| ಬಲ ಜ್ಞಾನಾತ್ಮಕರಾದ ವಾಯುದೇವರು ಸಂಕರ್ಷಣನ ದೆಸೆಯಿಂದ ಜಯಾದೇವಿಯರ ಕುಮಾರರಾಗಿ ಜನಿಸಿದರು. ಈ ವಾಯುದೇವರೇ ಮುಂದಿನ ಕಲ್ಪದಲ್ಲಿ ವಿರಿಂಚ ಎಂಬ ಹೆಸರಿನಿಂದ ವಾಸುದೇವನ ದೆಶೆಯಿಂದ ಮಾಯಾದೇವಿಯಲ್ಲಿ ಮೊದಲನೆಯ ಕುಮಾರರಾಗಿ ಜನಿಸುವರು. ಆದ್ದರಿಂದಲೇ ದೇವತೆಗಳ ಪೈಕಿ ಇವರಿಗಿಂತಲೂ ಉತ್ತಮರಾದವರು ಮತ್ತಾರೂ ಇಲ್ಲ. ಹೀಗೆ ಸಂಕರ್ಷಣನ ಪತ್ನಿಯ

ಜಯಾದೇವಿಯಲ್ಲಿ ಅವತರಿಸಿದ ರೂಪಕ್ಕೆ ಸೂತ್ರಯೆಂದು ಹೆಸರು. ಮಾಯಾದೇವಿಯಲ್ಲಿ ಜನಿಸಿದ ವಿರಿಂಚನೇ ಪುರುಷ ಎಂದು ಹೇಳಿರುವರು. ಈ ಪುರುಷರೂಪವೇ ಬ್ರಹ್ಮಾಂಡ ಶರೀರಕ್ಕೆ ಅಭಿಮಾನ ರೂಪವು. ಅನಿರುದ್ಧನ ದೆಶೆಯಿಂದ ಶಾಂತೀದೇವಿಯಲ್ಲಿ ಇದೇ ವಿರಿಂಚನಾಮಕ ಬ್ರಹ್ಮದೇವರೇ ಮಹತತ್ವಾಭಿಮಾನಿಯಾಗಿ ಸ್ಥೂಲದೇಹದಿಂದ ಜನಿಸಿರುವರು. ಆದ್ದರಿಂದ ಮಹಾನ್ ಎಂದು ಹೆಸರು. ಪರಮಾತ್ಮನ ನಾಭಿಕಮಲದ ದೆಸೆಯಿಂದ ನಾಲ್ಕನೆಯಾಗ ಬ್ರಹ್ಮದೇವರು ಜನಿಸಿರುವರು. ಹೀಗೆ ಬ್ರಹ್ಮದೇವರಿಗೆ ನಾಲ್ಕು ಹೆಸರುಗಳು, ೪ ರೂಪಗಳೆಂದು ತಿಳಿಯಬೇಕು. ಇವರಿಗೆ ಭೂಮಿಯಲ್ಲಿ ಅವತಾರವಿಲ್ಲ, ವಾಯುದೇವರು ಕೇವಲ ಬಲ ಜ್ಞಾನಾತ್ಮಕರೆಂದು ನಿರ್ಣಯ ವಾಕ್ಯ ಸ್ಪಷ್ಟವಾಗಿರುವುದು. ಅಲ್ಲದೆ, ನಿರ್ಣಯ ಎರಡನೆಯ ಅಧ್ಯಾಯದಲ್ಲಿ " ಭಕ್ತಿ ರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಸ್ಥಿತಿಃ || ಯೋಗಃ ಪ್ರಾಣೋ ಬಲಂಚೈವ ವೃಕೋದರ ಇತಿ ಸ್ಮೃತಃ ||೧೪|| ಏತದ್ದಶಾತ್ಮಕೋ ವಾಯುಃ ತಸ್ಮಾದ್ಭೀಮಸ್ತದಾತ್ಮಕಃ || " ಭಕ್ತಿ, ಜ್ಞಾನ, ವೈರಾಗ್ಯ ಬುದ್ಧಿ, ಜ್ಞಾಪಕಶಕ್ತಿ, ಧೈರ್ಯ, ಯೋಗಪ್ರಾಣ, ಬಲ ಇವು ಹತ್ತು ಭೀಮಸೇನ ಸ್ವರೂಪವು. ಏಕೆಂದರೆ ವಾಯುದೇವರು ಈ ಹತ್ತರ ಸ್ವರೂಪರು, ಅವರೇ ಭೀಮಸೇನ ರೂಪರು, ಆದ್ದರಿಂದ ಭೀಮಸೇನದೇವರೂ ತಧಾತ್ಮಕರೆಂದು ಹೇಳಿರುವರು. ಮರುತ ಮುಖ್ಯಪ್ರಾಣಾದಿ ಪದಗಳಿಗೆ ಪದ್ಯಾರ್ಥದಲ್ಲೇ ಅರ್ಥಗಳು ಬರೆಯಲ್ಪಟ್ಟಿವೆ.

ಗರಳಭುಕ್=ವಿಷವನ್ನುಂಡವರೆಂದು ಹೇಳಿದುದು ಯಾವ ಕಾಲದಲ್ಲೆಂದರೆ; ದೇವದೈತ್ಯರು ಸೇರಿ ಭಗವದಾಜ್ಞಾ ಪ್ರಕಾರ ಸಮುದ್ರಮಥನ ಮಾಡುವ ಕಾಲದಲ್ಲಿ ಘೋರವಾದ ಹಾಲಹಾಲವೆಂಬ ವಿಷ ಹುಟ್ಟಿತು. ಆಗ ಭಗವದಾಜ್ಞಾಪ್ರಕಾರ ಆ ವಿಷವನ್ನು ವಾಯುದೇವರು ಪಾನಮಾಡಿರುವರು. ಇದಕ್ಕೆ ಆಧಾರ ನಿರ್ಣಯ ೧೦ ನೆಯ ಅಧ್ಯಾಯದಲ್ಲಿ " ತದಾ ಜಗದ್ಗ್ರಾಸವಿಷಂ ಸಮುತ್ಥಿತಂ ತ್ವದಾಜ್ಞಾ ಯಾವಾಯ ರಥಾತ್ಮಕೈ ನಿಜೇ ||೧೩|| ಕಲೇಃಸ್ವರೂಪಂ ತದತೀವ ದುಸ್ಸಹಂ ವರಾದ್ವಿಧಾತುಃ ಸಕಲೈಶ್ಚ ದುಸ್ಸ್ಪ್ರಶಂ ಕಲೇ ವಿಮಥ್ಯಾಸ್ತ ಬಲಂ ಪಿಧಾಯ ದದೌ ಸಕಿಂಚಿದ್ಗಿರಿಶಾ ಯ ವಾ ಯುಃ ||೧೪|| ಸ ತ ತ್ಪಿ ಬ ಕಂ ಠಗ ತೇನ ತೇನ ನಿ

ಪಾತೀತ್ಯೋ ಮೂರ್ಛಿತ ಆಶುರುದ್ರಃ || ಹರೇಃ ಕರಸ್ಪರ್ಶ ಬಲಾತ್ಸಸಂಜ್ಞಾ ಮವಾಪ ನೀಲೋಽಸ್ಯಗಲಸ್ತದಾಸೀತ್ ||೧೫|| ಅಥತ್ವದಾಜ್ಞಾಂ ಪುರತೋಽನಿಧಾಯ ನಿಧಾಯ ಪಾತ್ರೇ ತಪನೀಯರೂಪೇ || ಸ್ವಯಂತ್ವನಿರ್ಮಥ್ಯ ಬಲೋಪಪನ್ನಂ ಪಪೌಸ ವಾಯುಸ್ತದು ತಾಸ್ಯ ಜೀರ್ಣಂ ||೧೬|| ಅತ್ಯಲ್ಪಪಾನಾಚ್ಚ ಬಭೂವ ಶೂಲಾಶಿವಸ್ಯ ಶೀರ್ಷ್ಣೋಽಸ್ಯಕರಾವಶಿಷ್ಟಂ || ಅಭೂತ್ಕಲಿಸ್ಸರ್ವ ಜಗತ್ಸುಪೂರ್ಣಂ ಪೀತ್ವಾ ವಿಕಾರೋನಭೂವವಾಯೋಃ ||೧೭|| "

( ವ್ಯಾಸಾವತಾರಕ್ಕಾಗಿ ಪರಮಾತ್ಮನನ್ನು ದೇವತೆಗಳು ಪ್ರಾರ್ಥನೆ ಮಾಡುವ ಸಂದರ್ಭ ) ಎಲೈ ದೇವಾದಿ ದೇವ ! ದೇವತೆಗಳೂ, ದೈತ್ಯರೂ ಸಹ ಶ್ರಾಂತರಾಗಿ ಅಮೃತ ಮಥನ ಕಾರ್ಯವನ್ನು ಬಿಟ್ಟುಬಿಡಲು ನೀನೊಬ್ಬನೇ ಮಂದರಾಚಲವನ್ನು ಮಥನಮಾಡುತ್ತಿರಲು ಜಗತ್ತನ್ನೇ ಭಕ್ಷಿಸುವ ವಿಷವು ಹುಟ್ಟಿತು. ಆಗ ನಿನ್ನ ಅಪ್ಪಣೆಯ ಮೇರಿಗೆ ವಾಯುದೇವರು ಆ ವಿಷವನ್ನ ಪಾನಮಾಡಲು ಕೈಯ್ಯಲ್ಲಿ ತೆಗೆದುಕೊಂಡರು. ಆ ವಿಷವು ಕೇವಲಕಲಿ ಸ್ವರೂಪವಾದುದು. ಬ್ರಹ್ಮದೇವರ ವರದಿಂದ ಯಾರೂ ಮುಟ್ಟಲೂ ಸಹ ಸಾಧ್ಯವಲ್ಲದೆ, ಯಾರಿಂದಲೂ ಸಹಿಸಲು ಅಶಕ್ಯವಾದುದಾಗಿದ್ದಿತು. ಅಂತಹುದನ್ನು ವಾಯುದೇವರು ಪಾನಮಾಡುವಷ್ಟರಲ್ಲಿ ದೇವತೆಗಳಿಂದ ಪ್ರಾರ್ಥಿತರಾಗಿ ಋದ್ರದೇವರು ಆ ವಿಷವನ್ನು ಪಾನಮಾಡುವೆನೆಂದು ಅಲ್ಲಿಗೆ ಬರಲು, ವಾಯುದೇವರು ಆ ವಿಷದಲ್ಲಿ ಸ್ವಲ್ಪವನ್ನು ತಮ್ಮ ಕೈಯಲ್ಲಿ ಹಾಕಿಕೊಂಡು ಚೆನ್ನಾಗಿ ತಿಕ್ಕಿ ವಿಷದ ಬಲವನ್ನು ಉಡಗಿಸಿ ಋದ್ರದೇವರಿಗೆ ಕೊಟ್ಟರು. ಅಷ್ಟು ಮಾತ್ರ ವಿಷವನ್ನು ಋದ್ರದೇವರು ಪಾನಮಾಡಿದ ಕೂಡಲೇ ಆ ವಿಷವು ಗಂಟಲಲ್ಲಿ ತಗಲಿ ತಕ್ಷಣ ಮೂರ್ಛಿತರಾಗಿ ಕೆಳಗೆ ಬಿದ್ದುಬಿಟ್ಟರು. ತದನಂತರ ಶ್ರೀಪರಮಾತ್ಮನು ಕರದಿಂದ ಸ್ಪರ್ಶಮಾಡಲು ಕರಸ್ಪರ್ಶದ ಬಲದಿಂದ ಋದ್ರದೇವರು ಎಚ್ಚತ್ತರು. ಆದರೂ ಅವರ ಕತ್ತಿನಲ್ಲಿ ಕಪ್ಪುನಿಂತು ನೀಲಕಂಠನೆಂಬ ಹೆಸರು ಬಂದಿತು. ಅದರಮೇಲೆ ವಾಯುದೇವರು ನಿನ್ನ ಅಪ್ಪಣೆಯನ್ನು ಸ್ವೀಕರಿಸಿ, ಭಂಗಾರದ ಪಾತ್ರೆಯಲ್ಲಿ ಆ ವಿಷವನ್ನೆಲ್ಲಾ ಹಾಕಿಕೊಂಡು, ತಾನು ಆ ವಿಷವನ್ನು ತಿಕ್ಕದೆ ಏನೂ ಮಾಡದೆ ಬಲಪೂರ್ಣವಾದುದನ್ನು ಹಾಗೆಯೇ ಪಾನಮಾಡಿದರು. ಅದು ವಾಯುದೇವರಿಗೆ ಜೀರ್ಣವಾಯಿತು. ಋದ್ರದೇವರು ಅತ್ಯಲ್ಪ ವಿಷವನ್ನು ಪಾನ ಮಾಡಿದುದರಿಂದ

ಅವರಿಗೆ ತಲೆಯಲ್ಲಿ ಶೂಲೆಯು ಸ್ಥಿರವಾಗಿ ನಿಂತುಹೋಯಿತು. ಋದ್ರದೇವರಕೈಯ್ಯಲ್ಲಿ ಉಳಿದ ವಿಷವು ಕಲಿ ಸ್ವರೂಪವಾಗಿ ಸರ್ವ ಜಗತ್ತಿನಲ್ಲೂ ಪೂರ್ಣವಾಯಿತು. ಅಂತಹಾ ವಿಷವನ್ನು ಸಂಪೂರ್ಣವಾಗಿ ಪಾನಮಾಡಿದರೂ ವಾಯುದೇವರಿಗೆ ಯಾವ ವಿಕಾರವೂ ಆಗಲಿಲ್ಲ, ಎಂದು ಹೇಳಿರುವರು. ಆ ಅಭಿಪ್ರಾಯವನ್ನೇ ದಾಸರಾಯರು ಗರಳಭುಕ್ ಎಂಬ ಪದದಿಂದ ಹೇಳಿರುವರು. ಮಿಕ್ಕ ಪದಗಳ ಅರ್ಥವು ಪದ್ಯಾರ್ಥದಲ್ಲಿ ನೋಡತಕ್ಕದ್ದು.

ಅನಿಲಸ್ಥಿತಿ ವೈರಾಗ್ಯನಿಧಿ ರೋ
ಚನ ವಿಮುಕ್ತಿಗಾನಂದ ದಶಮತಿ
ಅನಿಮಿಷೇಶಾನಿದ್ರ ಶುಚಿಸತ್ವಾತ್ಮಕ ಶರೀರ ||
ಅಣುಮಹದ್ರೂಪಾತ್ಮಕಾಮೃತ
ಹನುಮದಾದ್ಯವತಾರ ಪದ್ಮಾ
ಸನಪದವಿ ಸಂಪ್ರಾಪ್ತಪರಿಸರ ಅಖಿಣಾತ್ಮಸನು ||೭||

ಪದ್ಯಾರ್ಥ.—ಅನಿಲ-ವಾಯುದೇವರು, ಸ್ಥಿತಿ-ಏಕರೀತಿಯಾದ ಬಲ ಜ್ಞಾನಾದಿಗಳು ಉಳ್ಳವರು, ವೈರಾಗ್ಯನಿಧಿ, ರೋಚನ-ವಾಯುದೇವರ ರೂಪಾಂತರ, ಇವರು ಎರಡನೆಯ ಸ್ವಾರೋಚಿಷ ಮನ್ವಂತರದಲ್ಲಿ ಇಂದ್ರ ಪಟ್ಟವನ್ನು ಆಳಿದವರು, ವಿಮುಕ್ತಿಗೆ=ಭಗವದಾಜ್ಞಾಪ್ರಕಾರ ಮುಕ್ತಿ ಕೊಡುವವರು. ಮಧ್ವಾಚಾರ್ಯರಾಗಿ ಅವತಾರ ಮಾಡಿ, ಆನಂದದಶಮತಿ=ಆನಂದತೀರ್ಥರೆಂತಲೂ, ದಶಮತಿ ತೀರ್ಥರು=ಅಥವಾ ಪೂರ್ಣಪ್ರಜ್ಞಾಚಾರ್ಯರೆಂತಲೂ ಹೆಸರನ್ನು ಪಡೆದವರು, ಅನಿಮಿಷೇಶ=ದೇವೋತ್ತಮರು, ಅನಿದ್ರ=ನಿದ್ರೆಯನ್ನು ಜಯಿಸಿದವರು; ಶುಚಿಸತ್ವಾತ್ಮಕಶರೀರ = ವಿಶುದ್ಧವಾದ ಸತ್ವ ಸ್ವರೂಪ ಉಳ್ಳವರು, ಅಣುಮಹದ್ರೂಪಾತ್ಮಕ=ಅತಿ ಸೂಕ್ಷ್ಮ ರೂಪವನ್ನೂ ಅತಿ ಸ್ಥೂಲ ರೂಪವನ್ನೂ ಸಹ ಧರಿಸಲು ಯೋಗ್ಯವಾದ ಸ್ವಭಾವ ಉಳ್ಳವರು. ಅಮೃತ=ಭೋಜನ ಕಾಲದಲ್ಲಿ ಪಂಚಪ್ರಾಣಾಹುತಿ ತೆಗೆದುಕೊಳ್ಳುವುದಕ್ಕೆ ಪೂರ್ವದಲ್ಲೂ ಭೋಜನಾನಂತರದಲ್ಲೂ ಸಹ ಅಮೃತ ಅಂದರೆ ನೀರಿನ ರೂಪದಿಂದ ಅನ್ನಕ್ಕೆ ಆವರಣ ರೂಪದಿಂದ ಇರುವ ರೂಪವು. ಹನುಮದಾದ್ಯವತಾರ=ಹನುಮದ್ಭೀಮ ಮಧ್ವಾಚಾರ್ಯರೆಂಬ ಮೂರು ಅವತಾರವನ್ನು ತ್ರೇತಾದ್ವಾಪರ, ಕಲಿಯುಗಗಳಲ್ಲಿ ಸ್ವೀಕರಿಸಿದವರು. ಸಂಪ್ರಾಪ್ತ-

ಹೊಂದಲ್ಪಡುವ, ಪದ್ಮಾಸನಪದವಿ-ಬ್ರಹ್ಮಪಟ್ಟವುಳ್ಳವರು, ಅಖಣಾತ್ಮಸಮ-ಪರಮಾತ್ಮನ ಸ್ವರೂಪವನ್ನು ತೋರ್ಪಡಿಸುವ ವಿಷಯದಲ್ಲಿ ಉತ್ತಮವಾದ ಒರೆಗಲ್ಲಿನಂತೆ ಇರುವವರು.

ತಾತ್ಪರ್ಯ. -ಸಾಮಾನ್ಯವಾಗಿ ಗಾಳಿಗೆ ಅನಿಲ ಎಂದು ಹೆಸರು. ವಾಯುದೇವರು ಆ ರೂಪವಾಗಿರುವುದರಿಂದ ಅನಿಲನೆಂದು ವಾಯುದೇವರಿಗೂ ಹೆಸರು. ರೋಚನನೆಂಬ ಹೆಸರಿನಿಂದ ವಾಯುದೇವರು ಇಂದ್ರಪಟ್ಟವನ್ನು ಆಳಿರುವವರು. ಇದಕ್ಕೆ ಆಧಾರ ವಿಷ್ಣುರಹಸ್ಯ ೨೭ನೆಯ ಅಧ್ಯಾಯದಲ್ಲಿ 'ಸ್ವಾರೋಚಿಷೋಮನುರ್ನಾಮ ದ್ವಿತೀಯೋಗ್ನೇಃಸುತೋ ಮಹಾನ್ ॥ ಋಷಿರ್ವೇದಶಿರಾನಾಮತುಷಿತಾ ತಸ್ಯ ಪತ್ನ್ಯಭೂತ್ ॥೧॥ ತಸ್ಯಾಂರೋಚನ ನಾಮಾಸೀ ಜ್ಯೇಷ್ಟ ಇಂದ್ರಶ್ಚ ಸೋಽಭವತ್ ॥ ಯಃಪುರಾ ಸೂತ್ರನಾಮಾಸೀತ್ಸ ಏವಾಯ ಮಿಹಾಭವತ್ ॥೨॥ ಎರಡನೆಯ ಮನು ಸ್ವಾರೋಚಿಷನೆಂದು ಅಗ್ನಿಯ ಮಗನು. ಆ ಮನ್ವಂತರದಲ್ಲಿ ವೇದಶಿರಸ್ಸೆಂಬ ಒಬ್ಬ ಋಷಿಯಿದ್ದನು. ಆತನ ಹೆಂಡತಿಯು ತುಷಿತೆಯೆಂದು, ಆಕೆಯ ಜ್ಯೇಷ್ಟ ಕುಮಾರನು ರೋಚನನು. ಆತನೇ ಆ ಮನ್ವತರದಲ್ಲಿ ಇಂದ್ರನಾಗಿದ್ದನು. ಪೂರ್ವದಲ್ಲಿ ಸಂಕರ್ಷಣನ ದೆಸೆಯಿಂದ ಜಯಾದೇವಿಯಲ್ಲಿ ಜನಿಸಿದ್ಧ ಸೂತ್ರನಾಮಕ ವಾಯುದೇವರೇ ಈಗ ರೋಚನನೆಂಬ ಹೆಸರಿನಿಂದ ಜನಿಸಿರುವರೆಂದು ಹೇಳಿರುವರು. ಇದಲ್ಲದೆ ಭಾರತದಲ್ಲೂ ಪಾಂಡವರು ೫ ಮಂದಿಗಳೂ ೫ ಮನ್ವಂತರಗಳಲ್ಲಿ ಇಂದ್ರರಾಗಿದ್ಧವರೆಂದು ಹೇಳಿರುವರು. ಮಹಾಭಾರತ ತಾತ್ಪರ್ಯ ನಿರ್ಣಯ ಅಧ್ಯಾಯ ೧೮ರಲ್ಲಿ " ಉದ್ಬಬರ್ಹ ಗಿರಿಂತಂತುದದರ್ಶಾತ್ರಚ ತಾನ್ ಸುರಾನ್ ಪೂರ್ವೇಂದ್ರಾನ್ ಮಾರುತವೃಷನಾಸತ್ಯಾಂಶ್ಚತುರಸ್ಥಿತಾನ್ ॥೧೪೨॥ ಮಾನುಷೇಷ್ವವತಾರಾಯ ಮಂತ್ರಂರಹಸಿಕುರ್ವತಃ ॥ " ದೇವೇಂದ್ರನು ರುದ್ರದೇವರ ಶಾಪದಿಂದ ಅವರು ಹೇಳಿದ ಪರ್ವತ ದ್ವಾರಕ್ಕೆ ಮುಚ್ಚಲ್ಪಟ್ಟಿದ್ಧ ಕಲ್ಲನ್ನು ಕಿತ್ತಿದನು. ಆ ಗುಹೆಯಲ್ಲಿ ಪೂರ್ವದ ಮನ್ವಂತರಗಳಲ್ಲಿ ಇಂದ್ರರಾಗಿದ್ದ ವಾಯುದೇವರು ಯದುಧರ್ಮ, ನಾಸತ್ಯ ದಸ್ರರೆಂಬ ಅಶ್ವಿನೀ ದೇವತೆಗಳೀರ್ವರು ಇವರು ನಾಲ್ಕುಮಂದಿ ದೇವತೆಗಳೂ ಭೂಮಿಯಲ್ಲಿ ಮನುಷ್ಯರಲ್ಲಿ ಅವತಾರ ಮಾಡುವ ವಿಷಯದಲ್ಲಿ ಆಲೋಚಿಸುತ್ತಿದ್ಧುದನ್ನು ಕಂಡನೆಂದು ಹೇಳಿರುವರು. ಈ ವಾಕ್ಯದಿಂದ ವಾಯುದೇವರು ಇಂದ್ರರಾಗಿದ್ಧರೆಂದು ಸ್ಪ

ಷ್ಟಗುವುದು. ಆದರೆ ಭಾಗವತ ಅಷ್ಟಮಸ್ಕಂಧ ಮೊದಲನೆಯ ಅಧ್ಯಾಯ ದಲ್ಲಿ ' ಸ್ವಾರೋಚಿಷೋದ್ವಿತೀಯಸ್ತುಮನುರಗ್ನೇಸ್ಸುತೋ ಭವತ್‌॥ ತತ್ರೇಂ ದ್ರೋ ರೋಚನ ಸ್ತ್ವಾಸೀದ್ದೇವಾಶ್ಚ ತುಷಿತಾದಯಃ ॥೨೦॥ ಋಷೇಸ್ತುವೇ ದ ಶಿರಸಸ್ತುಷಿತಾನಾಮ ಪುತ್ನ್ಯಭೂತ್ ॥ ತಸ್ಯಾಂಜಜ್ಞೇತತೋ ದೇವೋ ವಿಭರಿತ್ಯಭಿವಿಶ್ರುತಃ "॥೨೧॥ ಸ್ವಾರೋಚಿಷನೆಂಬ ಅಗ್ನಿ ಕುಮಾರನು ಎರಡ ನೆಯ ಮನು. ಆಗ ರೋಚನನು ಇಂದ್ರನಾಗಿದ್ದನು. ದೇವತೆಗಳು ಅಂದರೆ ತುಷಿತ ಮೊದಲಾದವರು, ವೇದ ಶಿರಸ್ಸೆಂಬ ಋಷಿಗಳಿಗೆ ತುಷಿತೆಯೆಂಬ ಹೆಂಡತಿಯಿದ್ದಳು. ಆಕೆಯಲ್ಲಿ ಶ್ರೀಪರಮಾತ್ಮನು ವಿಭು ಎಂಬ ಹೆಸರಿನಿಂದ ಅವತರಿಸಿದನೆಂದು ಹೇಳಿರುವರು. ವಿಷ್ಣುರಹಸ್ಯದಲ್ಲಿ ರೋಚನನು, ವೇದ ಶಿರಸ್ಸೆಂಬ ಋಷಿಗಳ ದೆಶೆಯಿಂದ ತುಷಿತೆಯಲ್ಲಿ ಜನಿಸಿದವನೆಂದು ಹೇಳಿದರು

ಭಾಗವತದಲ್ಲಿ ರೋಚನನ ತಂದೆತಾಯಿಗಳ ಹೆಸರನ್ನು ಹೇಳಿದ ವೇದ ಶಿರಸ್ಸೇ ವಿಭುನಾಮಕ ಪರಮಾತ್ಮನ ತಂದೆ, ತುಷಿತೆಯು ತಾಯಿಯೆಂದು ಹೇಳಿರುವರು, ಹೀಗೆ ವಿಷ್ಣು ರಹಸ್ಯಕ್ಕೂ ಭಾಗವತಕ್ಕೂ ವಿರೋಧ ಬರುತ್ತ ದೆಯೆಂದರೆ ವಿಷ್ಣುರಹಸ್ಯದ ವಾಕ್ಯದಿಂದ ಈ ವಿರೋಧ ಪರಿಹಾರವಾಗುವುದು ಹೇಗೆಂದರೆ— ಈ ಮೇಲೆ ಉದಾಹರಿಸಿದ ವಿಷ್ಣುರಹಸ್ಯದ ೨೭ನೆಯ ಅಧ್ಯಾ ಯದ ೩ನೆಯ ಶ್ಲೋಕ " ತಸ್ಮಾದನಂತರಂಚಾಹಮವತೀರ್ಣೋ ವಿಭುಃ ಸ್ವ ಯಂ । ಉಪೇಂದ್ರ ಇತಿ ತೇನಾಹಂ ವಿಶ್ರುತೋ ವಿದುಷಾಂ ಮುಖೇ ॥೩॥ ವೇದಶಿರಸ್ಸೆಂಬ ಋಷಿಯ ಪತ್ನಿಯಾದ ತುಷಿತೆಯಲ್ಲಿ ಜೇಷ್ಠ ಕುಮಾರನು ರೋಚನನು ಅವನು ಜನಿಸಿದ ಮೇಲೆ ನಾನು ವಿಭು ಎಂಬ ಹೆಸರಿನಿಂದ ಆ ಕೆಯಲ್ಲಿ ಅವತರಿಸಿದೆನು. ಆದ್ದರಿಂದ ನನ್ನನ್ನು ಉಪೇಂದ್ರನೆಂದು ವಿದ್ವಾಂ ಸರು ಕರೆಯುವರೆಂದು ಶ್ರೀಪರಮಾತ್ಮನು ಬ್ರಹ್ಮದೇವರಿಗೆ ಹೇಳಿರುವರು.

ಈ ವಾಕ್ಯಧಿಂದ ವೇದಶಿರಸ್ಸೆಂಬ ಋಷಿಗಳ ಜ್ಯೇಷ್ಠ ಕುಮಾರನು ರೋಚನನು., ಎರಡನೆಯ ಕುಮಾರನು ವಿಭುನಾಮಕ ಪರಮಾತ್ಮನೆಂದು ಸಿ ದ್ಧವಾಗುವುದರಿಂದ ಭಾಗವತ ವಿಷ್ಣುರಹಸ್ಯಗಳ ವಿರೋಧವು ಪರಿಹಾರವಾ ಯಿತೆಂದು ತಿಳಿಯಬೇಕು. ವಿಮುಕ್ತಿಗೇದರೆ ಮುಕ್ತಿಯನ್ನು ಕೊಡುವವರೆಂ ದರ್ಥ. " ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಸ್ತು ತದನುಜ್ಞಯಾ ॥ಎಂ ಬ ನಿರ್ಣಯ ವಾಕ್ಯಾನುಸಾರ ಮೋಕ್ಷವನ್ನು ಕೊಡುವವನು ಪರಮಾತ್ಮನೇ

ಆದರೂ ಭಗವದಾಜ್ಞಾ ಪ್ರಕಾರ ವಾಯುದೇವರು ಮುಕ್ತಿಯನ್ನು ಕೊಡು ವರು. ಆದ್ದರಿಂದ ದಾಸರಾಯರು ವಿಮುಕ್ತಿಗೆ ಎಂದು ಹೇಳಿದರು. ಶುಚಿಷ ಶ್ವಾತ್ಮಕಶರೀರ ಎಂಬುವುದಕ್ಕೆ "ವಿಶುದ್ಧಸತ್ವಂ ಬ್ರಹ್ಮಾಖ್ಯಂ" ವಿಶುದ್ಧವಾದ ಸತ್ವ ಸ್ವರೂಪವು ಬ್ರಹ್ಮದೇವರದೆಂದು ಭಾಗವತ ದಶಮ ತಾತ್ಪರ್ಯದಲ್ಲಿ ಹೇಳಿರುವುದೇ ಆಧಾರವು. ಅಮೃತ – ಭೋಜನಕ್ಕೆ ಕೂಡುವ ಕಾಲದಲ್ಲಿ " ಅಮೃತ ಉಪಸ್ತರಣಮಸಿ ಸ್ವಾಹಾ ಎಂತಲೂ ಏಳುವಾಗ ಅಮೃತಾಪಿ ಧಾನಮಸಿ ಎಂದು ಹೇಳುವ ಮಂತ್ರವೆ ಇದಕ್ಕೆ ಆಧಾರವು. ಎಲೈ ಅಮೃತ! ಅಮೃತರೂಪಿಯಾದ ವಾಯುದೇವ ! ನಾನು ಭೋಜನ ಮಾಡುವ ಅನ್ನಕ್ಕೆ ಹಾಸಿಗೆಯಂತೆ ಇರು. ಎಂದು ಮೊದಲನೆಯ ಮಂತ್ರಾರ್ಥ, ಕೊನೆಯ ಮಂ ತ್ರಾರ್ಥವು ಎಲೈಅಮೃತ! ನಾನು ಭುಂಜಿಸಿದ ಅನ್ನಕ್ಕೆಹೊದ್ದಿಕೆಯಂತೆ ಇರು ಎಂದು ಇದರಿಂದ ಅಮೃತ ಎಂದು ವಾಯುದೇವರ ಹೆಸರಿಂದು ಸಿದ್ಧವಾ ಯಿತು. ಅಖಣಾಶ್ಮಸಮ=ಇದಕ್ಕೆ ಆಧಾರವು ಭಾಗವತ ಏಕಾದಶಸ್ಕಂಧ ತಾತ್ಪರ್ಯ " ಪ್ರಾಣಸ್ಯ ನಾಸುರಾವೇಶೋ ಆಖಣಾಶ್ಮಸಮೋಹಿಸಃ " || ಪ್ರಾಣದೇವರಿಗೆ ಮಾತ್ರ ಅಸುರಾವೇಶವಿಲ್ಲವು. ಅವರು ಭಗವತ್ಸ್ವರೂಪ ವನ್ನು ಚೆನ್ನಾಗಿ ವ್ಯಕ್ತಿಮಾಡಿ ಕೊಡುವವಿಷಯದಲ್ಲಿ, ಭಂಗಾರದ ಸ್ವರೂಪ ವನ್ನು ವ್ಯಕ್ತಿಮಾಡುವ ವಿಷಯದಲ್ಲಿ ಒರೆಗಲ್ಲು ಹೇಗೋ ಹಾಗೆಯೇ ವಾಯು ದೇವರು ಒರೆಗಲ್ಲಿಗೆ ಸಮರಾಗಿರುವರೆಂದು ಹೇಳಿರುವರು. ಅದೇ ಅರ್ಥ ವನ್ನೇ ದಾಸರಾಯರು ಇಲ್ಲಿ ಹೇಳಿರುವರೆಂದು ತಿಳಿಯಬೇಕು.

ಮಾತರಿಶ್ವ ಬ್ರಹ್ಮರು ಜಗ
ನ್ಮಾತೆ ಗಧಮಾಧೀನರೆನಿಪರು
ಶ್ರೀತರುಣಿ ವಲ್ಲಭನುಯಿರ್ವರೊಳಾವ ಕಾಲದಲಿ |
ನೀತ ಭಕ್ತಿ ಜ್ಞಾನ ಬಲ ರೂ
ಪಾತಿಶಯದಿಂದಿದ್ದು ಚೇತನಾ
ಚೇತನಗಳೊಳು ವ್ಯಾಪ್ತರೆನಿಸುವ ತತ್ತದಾಹ್ವಯದಿ ||೬||

ಪದ್ಯಾರ್ಥ.—ಮಾತರಿಶ್ವಬ್ರಹ್ಮರು = ವಾಯುದೇವರು. ಬ್ರಹ್ಮದೇ ವರು, ಜಗನ್ಮಾತೆಗೆ–ಜಗತ್ತಿಗೆತಾಯಿಯಾದ ಲಕ್ಷ್ಮೀದೇವಿಯರಿಗೆ, ಅಧಮ= ಕೋಟಿ ಗುಣಗಳಿಂದ ಕಮ್ಮಿಯೆಂತಲೂ, ಅಧೀನರು=ಆಕೆಯ ಅಧೀನದಲ್ಲಿ

ರುವವರೆಂತಲೂ ಎನಿಪರು=ಪ್ರಖ್ಯಾತರಾಗಿರುವರು ಶ್ರೀತರುಣಿವಲ್ಲಭನು= ಶ್ರೀ ಲಕ್ಷ್ಮೀದೇವಿಯರೆಂಬ ತರುಣಿಯರಿಗೆ ಪತಿಯಾದ ಶ್ರೀ ಪರಮಾತ್ಮನು, ಅವಕಾಲದಲಿ ಸರ್ವಕಾಲದಲ್ಲೂ, ಈರ್ವರೊಳಗೆ=ಇವರಿಬ್ಬರಾದ ಬ್ರಹ್ಮವಾಯುಗಳಲ್ಲಿ ನೀತ=ಸ್ಥಿರವಾದ, ಭಕ್ತಿ, ಜ್ಞಾನ, ಬಲರೂಪಾತಿಶಯದಿಂದ= ಅತಿಶಯವಾದ ಭಕ್ತಿ ಜ್ಞಾನ ಬಲರೂಪದಿಂದ ಇದ್ದು, ಚೇತನ-ನರ, ಪಶು ಪಕ್ಷಿ ವೃಕ್ಷಾದಿಗಳಲ್ಲೂ, ಅಚೇತನಗಳೊಳು=ಜಡವಾದ ಬೆಟ್ಟ ನೀರು ಮೊದಲಾದವುಗಳಲ್ಲೂ, ತತ್ವದಾಹ್ವಯದಿ-ಆಯಾ ಹೆಸರುಗಳಿಂದ, ವ್ಯಾಪ್ತರು= ಈ ಬ್ರಹ್ಮವಾಯುಗಳೀರ್ವರೂ ವ್ಯಾಪ್ತರಾಗಿರುವೆವು. ಎನಿಸುವ=ಎಂದು ಲೋಕದಲ್ಲಿ ಇವರಿಬ್ಬರಿಗೂ ಕೀರ್ತಿಯನ್ನು ಕೊಡಿಸುವನು.

ತಾತ್ಪರ್ಯ—ಮೇಲಿನ ಪದ್ಯದಲ್ಲಿ ಹೇಳಿದ ಬ್ರಹ್ಮವಾಯುಗಳಿಬ್ಬರೂ ಲಕ್ಷ್ಮೀದೇವಿಯರಕಿಂತಲೂ ಕೋಟಿಗುಣಾಧಮರು. ಮತ್ತು ಅವರ ಆಧೀನದಲ್ಲೇ ಇರುವವರು. ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನು ಸರ್ವಕಾಲದಲ್ಲೂ ಏಕಪ್ರಕಾರವಾದ, ಭಕ್ತಿ ಜ್ಞಾನ ಬಲಗಳಲ್ಲಿ ಮಿಕ್ಕ ರುದ್ರಾದಿ ಎಲ್ಲಾ ದೇವತೆಗಳಗಿಂತಲೂ ಅತಿಶಯವಾದ ಭಕ್ತಿ ಜ್ಞಾನ ಬಲರೂಪದಿಂದ ಇವರಿಬ್ಬರಲ್ಲೂ ಇದ್ದು ಚೇತನಾಚೇತನಾತ್ಮಕವಾದ ಈ ಪ್ರಪಂಚದಲ್ಲಿ ಸರ್ವತ್ರ ಆಯಾ ಹೆಸರುಗಳಿಂದ ವ್ಯಾಪ್ತರನ್ನಾಗಿ ಮಾಡಿಸಿ ಇವರಿಬ್ಬರೂ ಪರಮಾತ್ಮನಂತೆ ಸರ್ವತ್ರವ್ಯಾಪ್ತರೆಂದು ಕೀರ್ತಿಯನ್ನು ಕೊಡಿಸುವನು "ಸಂಪೂರ್ಣಾನುಗ್ರಹಾದ್ವಿಷ್ಣೋಃ ವಾಯುಃ ಪೂರ್ಣಗುಣಾತ್ಮಕಃ" ಎಂಬ ಏಕಾದಶ ತಾತ್ಪರ್ಯಾನುಸಾರ ಪರಮಾತ್ಮನ ಸಂಪೂರ್ಣಾನುಗ್ರಹಬಲದಿಂದಲೆ ಇವರಿಬ್ಬರೂ ವ್ಯಾಪ್ತತ್ವಾದಿ ಸಂಪೂರ್ಣ ಗುಣ ಸ್ವರೂಪರೆಂದು ತಾತ್ಪರ್ಯ.

ಅವತಾರಿಕೆ.—ಸರಸ್ವತೀ ಭಾರತಿಯರ ತಾರತಮ್ಯವನ್ನು ಎರಡು ಪದ್ಯಗಳಿಂದ ಹೇಳುತ್ತಾ ಸರಸ್ವತೀ ದೇವಿಯರ ಹೆಸರುಗಳನ್ನು ಸರಸ್ವತಿ ಎಂಬ ಪದ್ಯದಿಂದ ಹೇಳುತ್ತಾರೆ :—

**ಸರಸ್ವತೀ ವೇದಾತ್ಮಿಕಾಭುಜಿ**
**ನರಹರೀ ಗುರುಭಕ್ತಿ ಬ್ರಾಹ್ಮೀ**
**ಪರಮ ಸುಖ ಬಲ ಪೂರ್ಣ ಶ್ರದ್ಧಾಪ್ರೀತಿ ಗಾಯತ್ರೀ ।**
**ಗರುಡ ಶೇಷರಜನನಿ ಶ್ರೀ ಸಂ**

ಕರುಷಣನ ಜಯಾತನುಜವಾಣೀ
ಕರಣನೀಯಾಮಕ ಚತುರ್ದಶಭುವನ ಸನ್ಮಾನ್ಯೆ ॥೯॥

ಪದ್ಯಾರ್ಥ.—ಸರಸ್ವತೀ, ವೇದಾತ್ಮಿಕಾ-ಸಕಲ ವೇದಗಳಿಗೂ ಅಭಿಮಾನಿಯು, ಭುಜಿ-ಸರ್ವಭೋಗಗಳನ್ನೂ ಭಗವತ್ಪ್ರೀತಿಯಾಗಲೆಂದು ಭುಂಜಿಸುತ್ತಿರುವವರು, ನರಹರಿ=ನರಸಿಂಹ ನಾಮದಿಂದ ಅವತರಿಸಿದ ಶ್ರೀಪರಮಾತ್ಮನಲ್ಲೂ, ಗುರು-ಪತಿಯಾದ ಬ್ರಹ್ಮದೇವರಲ್ಲೂ, ಭಕ್ತಿ=ಭಕ್ತಿಯುಳ್ಳವರು. ಬ್ರಾಹ್ಮೀ=ಬ್ರಹ್ಮ ಪತ್ನಿಯಾದವರು, ಪರಮ ಸುಖ ಬಲಪೂರ್ಣೆ=ಪರಮಾನಂದ, ಬಲ ಇವುಗಳಿಂದ ಪೂರ್ಣರಾಗಿರುವವರು, ಶ್ರದ್ಧಾ=ಪ್ರದ್ಯುಮ್ನನ ದೆಶೆಯಿಂದ ಕೃತಿಯಲ್ಲಿ ಜನಿಸಿದ ರೂಪವು. ಗಾಯತ್ರೀ=ಸರಸ್ವತೀ ದೇವಿಯರ ರೂಪಾಂತರವು. ಬ್ರಹ್ಮದೇವರಿಗೆ ಅತ್ಯಂತ ಪ್ರೀತ್ಯಾಸ್ಪದವಾದ ಸಾವಿತ್ರೀ ಎಂಬ ರೂಪಾಂತರವು. ಗರುಡ ಶೇಷರ ಜನನಿ=ಸರಸ್ವತೀ ಭಾರತೀ ಎಂಬೀವರ ನಾಮಾಂತರವಾದ ಪ್ರಕೃತಿ,ಶ್ರದ್ಧಾ ಎಂಬಿಬ್ಬರಲ್ಲಿ ಗರುಡ ಶೇಷರು ಹುಟ್ಟಿರುವರು, ಆದ್ದರಿಂದ ಗರುಡ ಶೇಷರ ತಾಯಿಯೆಂದು ಹೇಳಿರುವರು ಶ್ರೀಸಂಕರ್ಷಣ ಜಯಾ ತನುಜವಾಣೀ=ಸಂಕರ್ಷಣ ನಾಮಕಪರಮಾತ್ಮನದೆಶೆಯಿಂದಜಯಾ ದೇವಿಯರಲ್ಲಿ ಜನಿಸಿದ ಸೂತ್ರನಾಮಕ ವಾಯುದೇವರಿಗೆ ವಾಕ್ಯರೂಪರಾಗಿರುವವರು, ಕರಣ ನಿಯಾಮಕೆ-ಜ್ಞಾನೇಂದ್ರಿಯ ಕರ್ಮೇಂದ್ರಿಯ ಮನಸ್ಸು ಮೊದಲಾದ ಇಂದ್ರಿಯ ಪತಿಗಳಾದ ದೇವತೆಗಳಿಗೆ ಪ್ರೇರಕರು. ಚತುರ್ದಶಭುವನಸನ್ಮಾನ್ಯೆ=೧೪ ಲೋಕಗಳಲ್ಲಿರುವ ಸಕಲ ಜನರಿಂದಲೂ ಬಹುಮಾನವನ್ನು ಹೊಂದುವವರು (ಪೂಜ್ಯರು).

ತಾತ್ಪರ್ಯ.—ಸರಸ್ವತೀದೇವಿಯರು ಸರ್ವ ವೇದಗಳಿಗೂ ಅಭಿಮಾನಿಯಾದುದರಿಂದ ವೇದಾತ್ಮಿಕಾಎಂದು ಹೆಸರು. ಗರುಡ ಪುರಾಣ ಬ್ರಹ್ಮಕಾಂಡದ "ಸರ್ವವೇದಾಭಿಮಾನಿ ತ್ವಾತ್ಸರ್ವ ವೇದಾತ್ಮಿಕಾ ಸ್ಮೃತಾ" ಎಂಬ ವಾಕ್ಯವು ಇದಕ್ಕೆ ಆಧಾರವು. ಅದೇ ಗರುಡ ಪುರಾಣದಲ್ಲಿ "ಭುಂಜ್ಯತೇ ಸರ್ವ ಭೋಗಾಂಸ್ತು ವಿಷ್ಣುಪ್ರೀತ್ಯರ್ಥ ಮೇವಚ॥ ಅತಸ್ತು ಭಾರತೀಜ್ಞೇಯಾ ಭುಜಿಸಂಜ್ಞಾ ಖಗೋತ್ತಮ" ಎಲೈ ಪಕ್ಷಿಶ್ರೇಷ್ಠನಾದ ಗರುಡನೆ, ಸರ್ವ ಭೋಗಗಳನ್ನು ಶ್ರೀವಿಷ್ಣು ಪ್ರೀತ್ಯರ್ಥವಾಗಿಯೇ ಭುಂಜಿಸುವುದರಿಂದ ಶ್ರೀ ಭಾರತೀದೇವಿಗೆ ಭುಜಿಯೆಂದು ಹೆಸರು ಎಂದು ಹೇಳಿರುವರು.

ಪತ್ಯಂತರ್ಗತ ಪರಮಾತ್ಮನನ್ನು ಹೊರತು ಮತ್ತೊಬ್ಬರನ್ನು ಚಿಂತಿಸದೇ ಪತ್ಯಂತರ್ಗತ ಪರಮಾತ್ಮನನ್ನೇ ದೃಢವಾದ ಭಕ್ತಿಯಿಂದ ಉಪಾಸನೆ ಮಾಡುವುದರಿಂದ ನರಹರಿಗುರು ಭಕ್ತಿಎಂದು ಹೆಸರು. ಬ್ರಹ್ಮಸತಿಯಾದುದರಿಂದ ಬ್ರಾಹ್ಮೀ ಎಂದು ಹೆಸರು. ಪೂರ್ಣಾನಂದ ಸ್ವರೂಪರು ಪೂರ್ಣ ಬಲ ಉಳ್ಳವರು ಶ್ರದ್ಧಾಎಂಬ ಹೆಸರು ಭಾರತೀ ದೇವಿಯಂದಾದರೂ ಸರಸ್ವತೀ ದೇವಿಯರಿಗೂ ಅದೇ ಹೆಸರಿರುವುದರಿಂದ ಶ್ರದ್ಧೆಯೆಂದು ಹೆಸರು. ಮ॥ಭಾ॥ತಾ॥ನಿರ್ಣಯ ಮೂರನೆಯ ಅಧ್ಯಾಯದಲ್ಲಿ "ಪ್ರದ್ಯುಮ್ನತಶ್ಚಾಥಕೃತೌಸ್ತ್ರೀಯೌದ್ವೇ॥ಪ್ರಜಜ್ಞ ತುರ್ಯವುಳೀ ತತ್ರಪೂರ್ವಾಪ್ರಧಾನಸಂಜ್ಞಾ ಪ್ರಕೃತಿರ್ಜ ನಿತ್ರೀ॥೧೧॥ಶ್ರದ್ಧಾದ್ವಿತೀಯಾಥ ತಯೋಶ್ಚಯೋಗೋ ಬಭೂವ ಪುಂಸ್ಯೈವಚಸೂತ್ರನಾಮ್ನಾ॥ಹರೇರ್ನಿಯೋಗಾದಥಸಂಪ್ರಸೂತೌಶೇಷಃಸುಪರ್ಣಶ್ಚತಯೋಃ ಸಹೈವ" ॥೧೨॥ ಪ್ರದ್ಯುಮ್ನನದೆಶೆಯಿಂದ ಕೃತೀದೇವಿಯರಲ್ಲಿ ಅವಳಿಜವಳಿಗಳಾಗಿ ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರು. ಅವರಲ್ಲಿ ಮೊದಲನೆಯ ಆಕೆಯು ಪ್ರಧಾನಾ ಎಂಬ ಹೆಸರುಳ್ಳ ಸೃಷ್ಟಿಗೆ ಕಾರಣರಾದ ಪ್ರಕೃತಿಯು ಎರಡನೆಯ ಆಕೆಯು ಶ್ರದ್ಧಾದೇವಿಯು ಇವರಿಬ್ಬರಿಗೂ ಪುರುಷನಾಮಕ ಬ್ರಹ್ಮದೇವರಿಂದಲೂ,ಸೂತ್ರನಾಮಕ ವಾಯುದೇವರಿಂದಲೂ ಸಂಬಂಧವಾದವು. ಅಂದರೆ ಪ್ರಧಾನ ನಾಮಕರಾದ ಪ್ರಕೃತಿಗೆ ಬ್ರಹ್ಮದೇವರೂ, ಶ್ರದ್ಧಾದೇವಿಯರಿಗೆ ವಾಯುದೇವರೂ ಪತಿಗಳಾದರೆಂದರ್ಥ. ಇವರಿಬ್ಬರ ದೆಶೆಯಿಂದ ಆ ಇಬ್ಬರು ಸ್ತ್ರೀಯರಲ್ಲಿ ಶೇಷನೂ, ಗರುಡನೂ ಹುಟ್ಟಿದರು ಎಂದು ಹೇಳಿರುವರು. ಹೀಗೆ ಶ್ರದ್ಧಾದೇವಿಯರು ವಾಯುದೇವರ ಪತ್ನಿಯಾದ ಭಾರತೀದೇವಿಯರ ಹೆಸರಾದರೂ ಸರಸ್ವತೀದೇವಿಯರಿಗೂ ಅದೇ ಹೆಸರುಂಟೆಂದು ತೋರಿಸುವುದಕ್ಕಾಗಿ ದಾಸರಾಯರು ಸರಸ್ವತೀದೇವಿಯರ ಹೆಸರಿನಲ್ಲಿ ಶ್ರದ್ಧೆಯನ್ನು ಸೇರಿಸಿದರು. ಇದೇ ಪ್ರಮಾಣದಿಂದ ಗರುಡ ಶೇಷರ ಜನನಿಯೆಂಬುವುದಕ್ಕೂ ಅರ್ಥ ಹೇಳಿದಂತಾಯಿತು. ಪತಿಗೂ ಲೋಕದಲ್ಲಿನ ಸರ್ವರಿಗೂ ಪಾಗ್ರೂಪರಾಗಿ ಪ್ರೀತ್ಯಾಸ್ಪದರಾದುದರಿಂದ ಪ್ರೀತಿಯೆಂದು ಹೆಸರು. ಸರಸ್ವತಿಯರಿಗೆ ಮೂರು ರೂಪಗಳೆಂದು ವಿಷ್ಣುರಹಸ್ಯದಲ್ಲಿ ಹೇಳಿರುವರು. ವಿಷ್ಣುರಹಸ್ಯ 16ನೆಯ ಅಧ್ಯಾಯದಲ್ಲಿ "ಅಥಾಘಚಯಪಾಪನ್ನಾ ಪ್ರಕೃತಿ ಸ್ತ್ರೀವಿಧಾಭವತ್ ಸತ್ವಾದಿ ಗುಣಯೋಗೇನ ಗಾಯತ್ರೀಚ ಸರ

ಸ್ತ್ವೇ || ಸಾವಿತ್ರೀತಿ ಗಾಯತ್ರೀತಿ ಬ್ರಹ್ಮಾಣೀ [illegible] ||೮|| ಅದರಂತೆ ಲಕ್ಷ್ಮೀ ಪ್ರಕೃತಿಯೆಂಬ ಬ್ರಹ್ಮನ ಪತ್ನಿಯು ವೃದ್ಧಿಗೋಸ್ಕರ ಹೊಂದಿ ಸತ್ತ್ವ ರಜಸ್ತಮೋಗುಣಗಳ [illegible] ಮೂರು ರೂಪಗಳನ್ನು ಧರಿಸಿದಳು. ಆ ರೂಪಗಳ ಹೆಸರುಗಳು, ಗಾಯತ್ರೀ, ಸರಸ್ವತೀ, ಸಾವಿತ್ರಿ ಎಂದು. ಇವರು ಮೂವರಲ್ಲಿ ಒಬ್ಬ ಬ್ರಹ್ಮದೇವರ ಹೆಂಡತಿಯರಾದ [illegible] ದರೆಂದು ಹೇಳುವರು. ಈ ಆಧಾರದಮೇಲೆ ಗಾಯತ್ರಿಯೆಂದು ಸರಸ್ವತೀ ದೇವಿಯು ರೂಪಾಂತರವೆಂದು ಸಿದ್ಧವಾಯಿತು. ಶ್ರೀಸಂಕರ್ಷಣಜಯಾತ್ಮಜಾವಾಣಿ ಎಂದು ಒಂದೇ ಪದವಾಗಬೇಕು. ಏಕೆಂದರೆ, ಸರಸ್ವತಿ ಭಾರತಿಯರಿಬ್ಬರೂ ಪ್ರದ್ಯುಮ್ನನ ಪತ್ನಿಯಿಂದ ಕೃತಿದೇವಿಯಲ್ಲಿ ಹುಟ್ಟಿದರೆಂದು ಮೇಲೆ ಉದಾಹರಿಸಿದ ನಿರ್ಣಯ ವಾಕ್ಯವನ್ನು ಅಧ್ಯಾಯ ೧೧-೧೩ನೆಯ ಶ್ಲೋಕಗಳಿಂದ ಸ್ಪಷ್ಟವಾಗುವದು. [illegible] ಯನ್ನು ಸ್ತೋತ್ರಮಾಡುವಾಗ ಇದೇ ಹರಿಕಥಾಮೃತ [illegible] ನೇ ಸಂಧಿಯಲ್ಲಿ "ಕೃತಿರಮಣನ ಪ್ರದ್ಯುಮ್ನ ಮಗಳೆ" ಎಂದು [illegible] ಸರಸ್ವತೀ ಭಾರತೀಯರಿಬ್ಬರೂ "ಪ್ರದ್ಯುಮ್ನತಃ ಕೃತ್ಯಾಂ ಪ್ರಜಜ್ಞಾತೇ" ಎಂಬ ಶ್ಲೋಕದಿಂದ, ಅವಳಿಜವಳಿಯಾಗಿ ಹುಟ್ಟಿದವರೆಂದು ಹೇಳಿರುವರು. ಹೀಗೆ ದಾಸರಾಯರ ಉಕ್ತಿಯೂ ಶ್ರೀಮದಾಚಾರ್ಯರ ಉಕ್ತಿಯೂ ಇರುವುದರಿಂದಲೂ, ಸಂಕರ್ಷಣನ ಪತ್ನಿಯಿಂದ ಜಯಾದೇವಿಯಲ್ಲಿ ಹುಟ್ಟಿದರೆಂಬುವುದಕ್ಕೆ ಆಧಾರವಿಲ್ಲದುದರಿಂದಲೂ, ಸರಸ್ವತೀದೇವಿಯನ್ನು ಸಂಕರ್ಷಣಜಯಾತ್ಮಜೆಯೆಂದು ಹೇಳಲು ಸಾಧ್ಯವಿಲ್ಲ. ವಾಸುದೇವನ ಪತ್ನಿಯಿಂದ ಮಾಯಾದೇವಿಯಲ್ಲಿ ಪ್ರದ್ಯುಮ್ನನಾಮಕ ಬ್ರಹ್ಮದೇವರೂ, ಸಂಕರ್ಷಣನ ಪತ್ನಿಯಿಂದ ಜಯಾದೇವಿಯಲ್ಲಿ ಸೂತ್ರನಾಮಕ ವಾಯುದೇವರು ಹುಟ್ಟಿದರೆಂದು ನಿರ್ಣಯದಿಂದ ಸಿದ್ಧವಾಗುವದು. ಆದುದರಿಂದ "ಶ್ರೀಸಂಕರ್ಷಣ ಜಯಾತ್ಮಜಾವಾಣೀ" ಎಂದು ಒಂದೇ ಪದಮಾಡಿ, ಸಂಕರ್ಷಣನ ಪತ್ನಿಯಿಂದ ಜಯಾದೇವಿಯಲ್ಲಿ ಹುಟ್ಟಿದ ವಾಯುದೇವರಿಗೆ, ವಾಣೀ ಎಂದರೆ ವಾಗ್ರೂಪಳಾಗಿರುವಳೆಂದು ಅರ್ಥಮಾಡಲು ಕಾರಣವಾಯಿತು. ವಾಯುದೇವರ ಮುಖದಿಂದ ವೇದಗಳು ಯಾವಾಗಲೂ ಪರಮಾತ್ಮನ ಸ್ತೋತ್ರರೂಪವಾಗಿ ಹೊರಡುತ್ತಿರುವವು. ಸರಸ್ವತಿಯು ವೇದಾತ್ಮಕಳಾದುದರಿಂದ ವೇದ ಸ್ವರೂಪಳಾಗಿ ವಾಯುದೇವರಮುಖನ್ನೆಲೆಯಿಂದ ಹೊರಡುತ್ತಿರುವಳೆಂಬ ತಾತ್ಪರ್ಯ. "ಗೀರ್ವಾಣಗಸ್ಥಾಣೇ

ಸರಸ್ವತೀ" ಎಂಬ ಅನೇಕಕೋಶದ ರೀತ್ಯಾ ಶಾಸ್ತ್ರಕ್ಕೆ ವಾಣೀ ಎಂಬ ಹೆಸರು ಸಿದ್ಧವಾಗುವದು. ವಾಯುದೇವರ ಮುಖದಿಂದ ವೇದಗಳು ಹೊರಡುತ್ತಿರುವವು, ಎಂಬ ವಿಷಯದಲ್ಲಿ ಭಾಗವತ ದಶಮಸ್ಕಂಧ ವೇಣುಗೀತೆಯಲ್ಲಿ "ವನಚರೋಗಿರಿತಟೇಷುಚರಂತೀರ್ವೇಣುನಾಹ್ವಯತಿಗಾಃ ಸಯದಾ ಹಿ" || ಎಂಬ ಶ್ಲೋಕಕ್ಕೂ ವಿಜಯಧ್ವಜೀಯ ವ್ಯಾಖ್ಯಾನದಲ್ಲಿ ಗೋಪಾಲಕೃಷ್ಣನ ಪರವಾಗಿ ಒಂದರ್ಥವನ್ನೂ ಮೂಲರೂಪಿಯಾದ ಶ್ರೀನಾರಾಯಣನ ಪರವಾಗಿ ಒಂದರ್ಥವನ್ನೂ ಮಾಡಿರುವರು. ನಾರಾಯಣನ ಪರವಾಗಿ ವ್ಯಾಖ್ಯಾನ ಮಾಡಿರುವ ವಿವರ ಹೇಗೆಂದರೆ—"ವನಚರಂ—ವನೇ-ಜಲೇ—ಚರಣಂ—ಶಯನಂ ಜಲಶಯನ ಇತ್ಯರ್ಥಃ ಗಿರಿತಟೇಷು ಚರಂತೀಃ ವಾಯೋಃ ಗಿರಿತಟವದ್ವಿಸ್ತೃತೇ ಮುಖೇ ವರ್ತಮಾನಾಃ ಗಾಃ ವೇದವಾಣೀಃ ಆಹ್ವಯತಿ ಸನಕಾದಿಭಿಃ ಸ್ತೂಯಮಾನಃ ಜಲಶಯನಃ ಆದಿಪುರುಷಃ ವಾಯುಮುಖೇವರ್ತಮಾನ ಶ್ರುತೀಃ ತದರ್ಥಕಥನ ಪೂರ್ವಕ ಮುಪದಿಶತಿ" || ವನಂ ಪ್ರಸ್ರವಣೇ ಗೇಹೇ ಪ್ರವಾಸೇಪ್ಯಂಬುಕಾನನೇ ಎಂಬ ಕೋಶಬಲದಿಂದ ವನವೆಂದರೆ ಅಗ್ನಿಗೂ, ಉದಕಕ್ಕೂ, ಅಡವಿಗೂ ಸಹ ಹೆಸರು. ಪ್ರಕೃತ ವನಚರನೆಂದರೆ ಕ್ಷೀರಸಮುದ್ರದ ಮಧ್ಯದಲ್ಲಿ ಮಲಗಿದವನೆಂದರ್ಥ. ಇಂತಹಾ ಆದಿಪುರುಷನು ತನ್ನ ಅನುರಾಗದ ಸನಕಾದಿಗಳಿಂದ ಸ್ತುತ್ಯಮಾನನಾಗಿ ಬೆಟ್ಟದ ತಳದಂತೆ ವಿಸ್ತಾರವಾದ ವಾಯುದೇವರ ಮುಖದಿಂದ ಹೊರಡುವ ಶ್ರುತಿವಾಕ್ಯಗಳನ್ನು ತನ್ನ ಸಮೀಪಕ್ಕೆ ಕರೆದುಕೊಂಡು ಅದರರ್ಥವನ್ನು ಸನಕ ಮೊದಲಾದ ಋಷಿಗಳಿಗುಪದೇಶ ಮಾಡುತ್ತಿರುವನೆಂದು ಅರ್ಥಮಾಡಿರುವರು. ಈ ಆಧಾರದ ಮೇಲೆ ವಾಯುದೇವರ ಮುಖದಿಂದ ಶ್ರುತಿರೂಪಳಾಗಿ ಸರಸ್ವತಿಯು ಹೊರಡುತ್ತಿರುವಳೆಂದು ಅರ್ಥ ಮಾಡುವದು ಸರ್ವಸಮ್ಮತವು. ಅಂದರೆ ಆಚಾರ್ಯರ ವಾಕ್ಯಕ್ಕೂ ದಾಸರಾಯರ ವಾಕ್ಯಕ್ಕೂ ಪರಸ್ಪರ ವಿರೋಧವಿಲ್ಲವೆಂದು ಹೀಗೆ ಅರ್ಥವು ಬರೆಯಲ್ಪಟ್ಟಿದೆ. ತತ್ವನಿಯಾಮಕರು, ಮತ್ತು ಗಳ ಲೋಕದಲ್ಲೂ ಪೂಜ್ಯರೆಂದರ್ಥ-

ಅವತಾರಿಕೆ.—ಭಾರತಿಯ ಅವತಾರಗಳನ್ನು ಹೇಳುತ್ತಾರೆ.—

**ಕಾಳಿ ದ್ರೌಪದಿ ಕಾಶಿಜಾ ಶಾಂ**
**ಚಾಲಿ ಶಿವಕನ್ಯೇಂದ್ರ ಸೇನಾ**
**ಕಾಲನಾಮಾನೀ ಚಂದ್ರ ವಿದುನ್ನಾಮಭಾರತಿಯು ।**

ಗಾಳಿಬ್ರಹ್ಮರ ಯುವತಿಯರು ಯೀ
ಳೇಳು ಐವತ್ತೊಂದು ಗುಣಂ
ಕೀಳೆನಿಪರು ತಮ್ಮ ಪತಿಗಳಿಗಿಂಪವಾಗ ||೧೮||

ಪದ್ಯಾರ್ಥ.—ಕಾಶೀರಾಜನ ಮಗಳಾದ ಕಾಳೀ-ಕಾಳೀನಾಮಕಳಾಗಿ ಭೀಮಸೇನದೇವರ ಹೆಂಡತಿಯಾದ ಸಾಕ್ಷಾದ್ಭಾರತೀದೇವಿಯ ಅವತಾರವು. ಪಾಂಚಾಲಿ-ದ್ರುಪದರಾಜನ ಮಗಳಾದ ದ್ರೌಪದಿ, ಶಚಿ, ಶ್ಯಾಮಳಾ, ಉಷಾ, ಪಾರ್ವತಿಯರಿಂದ ಕೂಡಿ ಅವತರಿಸಿದ ಭಾರತೀರೂಪವು. ಶಿವಕನ್ಯಾ-ಶಿವನೆಂಬ ಬ್ರಾಹ್ಮಣನಲ್ಲಿ ಅವತರಿಸಿದ ಶಚ್ಯಾದಿಗಳಿಂದ ಕೂಡಿದ ರೂಪವು. ಕಾಲಮಾನಿ-ಕಾಲಾಭಿಮಾನಿಯು, ಚಂದ್ರಾ-ಶಂಕರನೆಂಬ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದ ಶಚ್ಯಾದಿಗಳಿಂದ ಕೂಡಿದ ರೂಪವು. ವಿದ್ಯುನ್ನಾಮ-ಅಂತರಿಕ್ಷಲೋಕ ದಿಕ್ಕುಗಳಿಗೂ ಅಭಿಮಾನಿನಿಯಾದ ಭಾರತೀದೇವಿಯ ನಾಮಾಂತರವು ಭಾರತಿಯು, ಈ ನಡನಾಮಗಳಿಂದ ಕೂಡಿದವಳು ಭಾರತೀದೇವಿಯ ರೂಪಾರ್ಥ. ಗಾಳಿಬ್ರಹ್ಮರಯುವತಿಯರು-ವಾಯುದೇವರು ಮತ್ತು ಬ್ರಹ್ಮದೇವರು ಇವರುಗಳ ಪತ್ನಿಯರಾದ ಭಾರತೀ, ಸರಸ್ವತಿಯರು, ಏಳೇಳು ಐವತ್ತೊಂದು ಗುಣದಿಂ-ಏಳೇಳು-೪೯ ಮತ್ತು ೫೧-ಅಂತು ನೂರು ಗುಣಗಳಿಂದ, ಆವಾಗ-ಯಾವಾಗಲೂ, ತಮ್ಮ ಪತಿಗಳಿಂ-ವಾಯು ಬ್ರಹ್ಮರಿಗಿಂತಲೂ, ಕೀಳೆನಿಪರು-ಕಡಿಮೆ ಎನಿಸುವರು.

ತಾತ್ಪರ್ಯ.—ಭಾರತೀದೇವಿಯರು ಭೀಮಸೇನದೇವರ ಪತ್ನಿಯಾಗುವುದಕ್ಕಾಗಿ ಕಾಶೀರಾಜನ ಮಗಳಾಗಿ ಕಾಳೀ ಎಂಬ ಹೆಸರಿನಿಂದ ಹುಟ್ಟಿದರು. ನಿರ್ಣಯ ೨೦ನೆಯ ಅಧ್ಯಾಯದಲ್ಲಿ " ಕೃಷ್ಣಾಸ್ಯೈವಾಪ್ಯನ್ಯರೂಪೇಣ ಜಾತಾ ಕಾಶೀಶಪುತ್ರೀಂ ಯಾಂ ಪ್ರವದಂತಿ ಕಾಳೀಂ || ಸಾ ಕೇವಲಾ ಭಾರತೀ ನಾನ್ಯದೇವ್ಯಸ್ತತ್ರಾವಿಷ್ಟಾಸ್ತತ್ಕೃತೇ ಕಾಶಿರಾಜಃ ||೧೩|| ಸ್ವಯಂವರಾರ್ಥಂ ನೃಪತೀನಾಜುಹಾವ ಸರ್ವಾನ್ ಸ್ತ್ರೀಪಿತ್ಯತ್ರ ಹರ್ಷಾತ್ತ್ವಮೇತಾಃ | ತೇಷಾಂ ಮಧ್ಯೇ ಭೀಮಸೇನಾಂಸವಿಷಾ ಮಾಲಾಮಧಾತ್ತತ್ರ ಜರಾಸುತಾದ್ಯಾಃ || ಇತ್ಯಾದಿ, ಇದೇ ದ್ರೌಪದೀದೇವಿಯರೇ ರೂಪಾಂತರದಿಂದ ಕಾಶೀಶ್ವರನ ಮಗಳಾಗಿ ಜನಿಸಿದ್ದರು ಆಕೆಯನ್ನು ಕಾಳಿ ಎಂದು ಕರೆಯುತ್ತಿದ್ದರು. ಈಕೆಯು

ಉದ್ಧತಾಃ ||113|| ತ್ರಿಶೋಽಋದ್ಧ್ವಂಚಸಾಯ್ಯೈತಾ ಇತಿತೇನೋದಿತಾವಯಂ ಅತಸ್ತ್ವಯ್ಯೈಕ ದೇಹತ್ವಮಿಚ್ಛಾಮೋ ದೇವಿಜನ್ಮಸು ||114|| ಚತುರ್ಷ್ವಪಿ ಯತೋಽಸ್ಮಾಕಂ ಶಾಪದ್ವಯ ನಿಮಿತ್ತತಃ || ಚತುರ್ಜನ್ಮ ಭವೇದ್ಭೂಮೌ ತ್ವಾಂನಾನ್ಯೋ ಮಾರುತಾದ್ವ್ರಜೇತ್ ||115|| ಇತ್ಯಾದಿ, ದ್ರುಪದರಾಜನು ಯಾಗ ಮಾಡುವಾಗ ಅಗ್ನಿಕುಂಡದಿಂದ ದೃಷ್ಟದ್ಯುಮ್ನನು ಹುಟ್ಟಿದಮೇಲೆ ಅಗ್ನಿಕುಂಡದ ಕಟ್ಟೆಯ ಮಧ್ಯದಿಂದ ಸಾಕ್ಷಾದ್ಭಾರತೀದೇವಿಯರು ಹೊರಟು ಬಂದರು. ಸರ್ವರನ್ನು ಭರಣಮಾಡುವುದರಿಂದ ಪ್ರಾಣದೇವರಿಗೆ ಭರತನೆಂದು ಹೆಸರು. ಅವರ ಹೆಂಡತಿಯಾದುದರಿಂದ ಭಾರತೀ ಎಂದು ಹೆಸರು ಬರಲು ಕಾರಣವಾಯಿತು. ಈಕೆಯು ವೇದರೂಪರಾದುದರಿಂದ ಸರಸ್ವತೀ ಎಂತಲೂ ಈಕೆಯನ್ನು ಹೇಳುವುದುಂಟು. ದ್ರುಪದರಾಜನ ಮಗಳೆಂದೆನಿಸಿ ಕೊಂಡಿರುವುದರಿಂದ ದ್ರೌಪದೀ ಎಂದು ಹೆಸರಾಯಿತು. ಈಕೆಯಲ್ಲಿ ಶಚೀ ಶಾಮಳಾ, ಉಷಾ, ಎಂಬುವರ ಆವೇಶವೂ ಉಂಟು. ಇವರು ಮೂವರೂ ಇಂದ್ರ, ಯಮ, ಅಶ್ವಿನೀದೇವತೆಗಳ ಪತ್ನಿಯರಾದುದರಿಂದ ಅವರಾಶ್ರಯ ದಿಂದ ಶ್ರೀ ಎಂಬ ಹೆಸರು ಇವರಿಗಿದ್ದಿತು. ಈಕೆಗೆ ಸ್ತ್ರೀಯರಲ್ಲಿ ಎಲ್ಲರಿಗಿಂತ ಲೂ ಅಧಿಕವಾದ ರೂಪಗಳಿದ್ದುದರಿಂದಲೂ, ಕೃಷ್ಣವರ್ಣವಾದುದರಿಂದಲೂ ಕೃಷ್ಣೆ ಎಂದು ಹೆಸರು ಇದ್ದಿತು. ಹುಟ್ಟುವ ಕಾಲದಲ್ಲೇ ಸರ್ವಜ್ಞರಾಗಿಯೂ ಸರ್ವಾಭರಣ ಭೂಷಿತರಾಗಿಯೂ, ಯೌವ್ವನ ಉಳ್ಳವರಾಗಿಯೂ ಯಾವಾ ಗಲೂ ಮುದುಕತನವನ್ನು ಹೊಂದದೆ ಲೋಕಸುಂದರಿಯರಾಗಿದ್ದರು. ಪಾ ರ್ವತೀ ಅಂಶವು ಶಚ್ಯಾದಿಗಳಿಗಿಂತಲೂ ಹೆಚ್ಚಿಗಿತ್ತು, ಸರ್ವ ಲಕ್ಷಣಗಳಿಂದ ಕೂಡಿದವರಾಗಿದ್ದರು. ಪಾರ್ವತೀ ಮೊದಲಾದವರಿಂದ ಕೂಡಿ ಭಾರತೀದೇವಿ ಯರು ಜನಿಸಲು ಕಾರಣವೇನೆಂದರೆ, ಹಿಂದಕ್ಕೆ ಒಂದು ದಿವಸ ಪಾರ್ವತೀ ಶಚೀ, ಶಾಮಳಾ, ಉಷಾ ಇವರು ನಾಲ್ವರೂ ತಮ್ಮ ಪತಿಗಳೊಡನೆ ಬ್ರಹ್ಮ ದೇವರು ಸಮೀಪದಲ್ಲಿದ್ದಾಗ ಹಾವಭಾವವಿಲಾಸವನ್ನು ಅಧಿಕವಾಗಿ ತೋರಿ ಸಿದರು. ಅದನ್ನು ನೋಡಿ ಬ್ರಹ್ಮದೇವರು ಇವರು ನಾಲ್ವರಿಗೂ ನೀವು ಮ ನುಷ್ಯರಾಗಿ ಹುಟ್ಟಿ ಪರ ಪುರುಷನ ಸಂಬಂಧವನ್ನು ಹೊಂದಿರಿ! ಎಂದು ಶಾಪ ವನ್ನು ಕೊಟ್ಟರು. ಆಗ ಇವರು ನಾಲ್ಕು ದೇವತಾ ಸ್ತ್ರೀಯರೂ ಯೋ ಚಿಸಿ, ಈ ನಾಲ್ಕು ಸ್ತ್ರೀಯರು ಭಾರತೀದೇವಿಯರನ್ನು ಒಂದು ಸಹಸ್ರ

ವರ್ಷಗಳ ಪರ್ಯಂತ ಸೇವೆಮಾಡಿ ಅವರು ಪ್ರಸನ್ನರಾದಮೇಲೆ ತಮ್ಮ ಶಾಪದವೃತ್ತಾಂತವನ್ನು ತಿಳಿಸಿ ಹೀಗೆ ಬೇಡಿಕೆರಂಡರು.– ದೇವಿ ! ನಾವು ನಾಲ್ವರೂ ಮನುಷ್ಯ ಜನ್ಮವನ್ನು ಹೊಂದಿ ಆ ಜನ್ಮವಲ್ಲಿ ಅನ್ಯಪುರುಷರ ಸಂಬಂಧವನ್ನು ಹೊಂದಬೇಕಾದ ಶಾಪವು ಬ್ರಹ್ಮದೇವರಿಂದ ಪ್ರಾಪ್ತವಾಗಿದೆ. ಇಪು ಒಂದೇ ಶಾಪವಲ್ಲ. ಇದಕ್ಕೆ ಹಿಂದೆ ಒಂದು ದಿವಸ ನಾವು ನಾಲ್ವರೂ ಕೂಡಿ ಒಂದೇ ದೇಹದಲ್ಲಿ ಶೇರಿ ಹುಡುಗಾಟದಿಂದ ಬ್ರಹ್ಮದೇವರನ್ನು ವಂಚಿಸಲು ಹೋದೆವು. ಆಗಲೂ ಬ್ರಹ್ಮದೇವರು ಎಲೌ ದೂರ್ತೆಗಳಿರಾ ! ನೀವು ನಾಲ್ವರೂ ಮೂರುಸಲ ಒಂದೇ ದೇಹದಿಂದ ಕೂಡಿ ನನ್ನನ್ನು ವಂಚಿಸಲು ಬಂದುದರಿಂದ ಮೂರು ಜನ್ಮಗಳಲ್ಲಿ ಒಂದೇ ದೇಹದಿಂದ ಹುಟ್ಟಿ ಅನ್ಯ ಪುರುಷನ ಸಂಬಂಧವನ್ನು ಹೊಂದಿರಿ ! ಎಂದು ಶಾಪವನ್ನು ಕೊಟ್ಟಿದ್ದರು, ನಾವು ಅನ್ಯ ಪುರುಷರನ್ನು ಹೊಂದಬೇಕಾದರೆ ನಮ್ಮ ಪತಿಗಳಿಗಿಂತಲೂ ಉತ್ತಮರ ಸಂಗವು ಬಾಧಕವಲ್ಲ. ಆದ್ದರಿಂದ ವಾಯುದೇವರನ್ನು ಹೊರ್ತು ಮತ್ತೊಬ್ಬರನ್ನು ನಾವು ಮುಟ್ಟಲಾರೆವು. ನೀನು ನಮ್ಮೊಡನೆ ಶೇರದಿದ್ದರೆ ವಾಯುದೇವರ ಸಂಬಂಧವು ದೊರಕದು ನಿನ್ನನ್ನು ಬಿಟ್ಟಬೇಕಾದರೆ ವಾಯುದೇವರ ಹೊರತು ಮತ್ತೊಬ್ಬನು ಸ್ಪರ್ಶಮಾಡುವುದಿಲ್ಲ. ನಾವು ಎರಡು ಶಾಪಗಳ ನಿಮಿತ್ತದಿಂದ ನಾಲ್ಕು ಜನ್ಮಗಳಲ್ಲಿ ಮನುಷ್ಯರಾಗಿ ಹುಟ್ಟಬೇಕಾಗಿದೆ, ಆದ್ದರಿಂದ ನಮ್ಮಗಳಿಂದ ಕೂಡಿ ನೀನು ದೇಹವನ್ನೆತ್ತಿದರೆ ನಮಗೆ ವಾಯುದೇವರ ಸಂಬಂಧ ಹೊರತು ಮತ್ತೊಬ್ಬರ ಸ್ಪರ್ಶವಾಗುವುದಿಲ್ಲ. ನೀನು ನಮ್ಮಲ್ಲಿ ದಯವಿಟ್ಟು ನಮ್ಮಗಳಿಂದ ಕೂಡಿ ನಾಲ್ಕು ಜನ್ಮಗಳಲ್ಲಿ ಮನುಷ್ಯಳಾಗಿ ಜನಿಸಬೇಕೆಂದು ಬೇಡಿಕೊಂಡರು. ಭಾರತೀದೇವಿಯರು ಹಾಗೇ ಆಗಲೆಂದು ಅವರಿಗೆ ವರವನ್ನಿತ್ತು ಮೊದಲು ಶಿವನೆಂಬ ಒಬ್ಬ ಬ್ರಾಹ್ಮಣನ ಮಗಳಾಗಿ ಶಿವಕನ್ಯೆ ಎಂದು ಹುಟ್ಟಿ, ಪಾರ್ವತ್ಯಾದಿ ನಾಲ್ವರು ಋದ್ರದೇವರನ್ನು ಕುರಿತು ತಪಸ್ಸು ಮಾಡಲು, ಒಂದು ದೇಹದಲ್ಲಿ ಐವರೂ ಇದ್ದಮೇಲೆ ಐವರ ಕರ್ಮವೂ ಒಂದೇ ರೀತಿಯಾಗಿ ಇರಬೇಕಾದುದರಿಂದ ಭಾರತೀದೇವಿಯರು ಕಾಮ್ಯವನ್ನು ಅಪೇಕ್ಷಿಸಿದವರಾದವರಾದರೂ ಕರ್ಮೈಕ್ಯಕಾರ್ಥವಾಗಿ ಋದ್ರದೇವರ ಅಂತರ್ಗತನಾದ ಹರಿಯನ್ನು ಕುರಿತು ತಪಸ್ಸು ಮಾಡಿದರು. ಇವರುಗಳ ತಪಸ್ಸಿನುದ್ದೇಶವು ತಮ್ಮ ತಮ್ಮ ಪತಿಗಳನ್ನು ತಾವು ಹೊಂದಬೇಕೆಂಬುವುದೇ ಆಗಿತ್ತು. ಆಗ ಪಾರ್ವತ್ಯಾದಿನಾಲ್ವರಿಗೆ ಋದ್ರದೇವರು ಭಾರತೀದೇವಿಯರಿಗೆ ಋದ್ರಾಂತರ್ಗತ ಹರಿಯೂ, ಜನ್ಮಾಂತರದಲ್ಲಿ ಪತಿಸಂಬಂಧವಾಗುವ ವರವಿತ್ತರು.

ಶಿವಕನ್ಯೆಯು ಕನ್ಯಾವಸ್ಥೆಯಲ್ಲೇ ಮರಣಹೊಂದಿದಳು. ಮತ್ತು ಎರಡನೇ ಜನ್ಮದಲ್ಲಿ ನಳರಾಜನ ಮಗಳಾಗಿ ಇಂದ್ರಸೇನೆಯೆಂದು ಪಾರ್ವತ್ಯಾದಿಗಳಿಂದ ಕೂಡಿ ಭಾರತೀದೇವಿಯರೇ ಜನಿಸಿದರು. ಆ ಸಮಯದಲ್ಲಿ ಮುದ್ಗಲನೆಂಬ ಒಬ್ಬ ಋಷಿಯು ತಪಸ್ಸುಮಾಡುತ್ತಿದ್ದನು. ಆ ಋಷಿಯು ಒಂದು ದಿವಸ ಪುರಾಣ ಕೇಳುತ್ತಿರುವಾಗ ಬ್ರಹ್ಮದೇವರು ತನ್ನ ಮಗಳನ್ನೇ ತಾನು ಪರಿಗ್ರಹಿಸಲು ಎತ್ನಮಾಡಿದರೆಂಬುವುದನ್ನು ಕೇಳಿ ಬ್ರಹ್ಮದೇವರನ್ನು ಹಾಸ್ಯಮಾಡಿದನು. ಆಗ ಬ್ರಹ್ಮದೇವರು, ನೀನು ಅಧೋಗತಿಯನ್ನು ಹೊಂದುವುದಕ್ಕಾಗಿ ಭಾರತ್ಯಾದಿ ೫ ದೇವಿಯರ ಸಂಗವನ್ನು ಹೊಂದು! ಎಂದು ಶಾಪವನ್ನಿತ್ತರು. ಆಗ ಮುದ್ಗಲನು ಭಯದಿಂದ ಬ್ರಹ್ಮದೇವರನ್ನು ಬೇಡಿಕೊಂಡನು. ಆಗ ಬ್ರಹ್ಮದೇವರು ಎಲೈ ಮುದ್ಗಲನೇ! ನೀನು ಸಾಕ್ಷಾತ್ತಾಗಿ ಆ ದೇವಿಯರ ಸಂಬಂಧಮಾಡುವುದಿಲ್ಲ. ನಿನ್ನ ಶರೀರದಲ್ಲಿ ವಾಯುದೇವರಿದ್ದು ಆ ದೇವಿಯರನ್ನು ಹೊಂದುವರು. ಆಗ ನಿನಗೆ ಮೂರ್ಛಾವಸ್ಥೆಯಾಗಿರುವದು, ಆದ್ದರಿಂದ ನಿನಗೆ ಆ ದೋಷವು ಬರುವುದಿಲ್ಲವೆಂದು ಶಾಪಾನುಗ್ರಹವನ್ನು ಮಾಡಿದರು. ಅದರಂತೆ ವಾಯುದೇವರು ಮುದ್ಗಲನಲ್ಲಿದ್ದು ಇಂದ್ರಸೇನೆಯನ್ನು ವಿವಾಹ ಮಾಡಿಕೊಂಡು ಬಹುಕಾಲ ಕ್ರೀಡಿಸುತ್ತಿದ್ದು ಮುದ್ಗಲನಿಗೆ ಎಚ್ಚರವನ್ನಿತ್ತು ಹೊರಟುಹೋದರು. ಆ ಇಂದ್ರಸೇನೆಯೇ ದ್ರುಪದರಾಜನ ಮಗಳಾಗಿ ಜನಿಸಿದುದು. ವಾಯುದೇವರು ಮಧ್ವಾಚಾರ್ಯರಾಗಿ ಅವತರಿಸಿದ ಕಾಲದಲ್ಲಿ ಶಂಕರನೆಂಬ ಒಬ್ಬ ಬ್ರಾಹ್ಮಣನ ಮನೆಯಲ್ಲಿ ದ್ರೌಪದಿಯು ಚಂದ್ರಾ ಎಂಬ ಹೆಸರಿಂದ ಹುಟ್ಟಿ, ಕನ್ಯಾವಸ್ಥೆಯಲ್ಲೇ ಮೃತಿಹೊಂದಿದಳು. ಅಂತು ಶಚ್ಯಾದಿಗಳಿಂದ ಕೂಡಿ ಭಾರತೀದೇವಿಯರು ಅವತರಿಸಿದ ರೂಪಗಳು ನಾಲ್ಕೆಂದು ತಿಳಿಯಬೇಕು. ಹನುಮದವತಾರಕಾಲದಲ್ಲಿ ಶಿವಕನ್ಯೆಯಾಗಿ ಜನಿಸಿದರು. ತ್ರೇತಾಯುಗಾಂತ್ಯದಲ್ಲಿ ಇಂದ್ರಸೇನೆಯ ಜನನ, ಭೀಮಸೇನಾವತಾರದಲ್ಲಿ ದ್ರೌಪದೀ, ಮಧ್ವಾವತಾರದಲ್ಲಿ ಚಂದ್ರಾ ಹೀಗೆ 4 ಅವತಾರಗಳ ಕಾಲವನ್ನು ಗರುಡ ಪುರಾಣದಲ್ಲಿ ಹೇಳಿರುವರು. ಈ ಭಾರತೀದೇವಿಯರೇ ಕಾಲಾಭಿಮಾನಿಯು. ವಿದ್ಯುತ್ ಎಂದು ಭಾರತೀ ದೇವಿಯ ನಾಮಾಂತರವು.

ಈ ಸರಸ್ವತೀ ಭಾರತೀಯರು ತಮ್ಮ ಪತಿಗಳಗಿಂತಲೂ ೧೦೦ಗುಣಗಳಿಂದ ಅಧಮರೆಂದು ತಾರತಮ್ಯವನ್ನು ತಿಳಿಯಬೇಕು.

ಅವತಾರಿಕೆ.—ಶೇಷದೇವರ ಮತ್ತು ಋದ್ರದೇವರ ಅವತಾರಗಳೂ ಮತ್ತು ಅವರ ಹೆಸರುಗಳನ್ನೂ ಹೇಳುತ್ತಾರೆ.—

**ಹರಿಸಮೀರಾವೇಶ ನರಸಂ**
**ಕರುಷಣಾವೇಶಯುತ ಲಕ್ಷ್ಮಣ**
**ಪರಮಪುರುಷನ ಶುಕ್ಲಕೇಶಾವೇಶ ಬಲರಾಮ ।**
**ಹರಸದಾಶಿವ ತಪ ಅಹಂಕೃತು**
**ಮರುತಯುಕ್ತಶುಕೋರ್ಧ್ವಪಟ ತ**
**ತ್ಪುರುಷಜೈಗೀಷಾರ್ವ ದ್ರೌಣೀವ್ಯಾಧದುರ್ವಾಸ ॥೧೧॥**

ಪದ್ಯಾರ್ಥ.—ಹರಿಸಮೀರಾವೇಶನರ-ಪರಮಾತ್ಮ ಮತ್ತು ವಾಯು ದೇವರು ಇವರಿಬ್ಬರ ಆವೇಶದಿಂದ ಕೂಡಿದ ಶೇಷದೇವರ ಅವತಾರವು ನರ ನಾರಾಯಣರ ಪೈಕಿ ನರರೂಪವು, ಸಂಕರ್ಷಣಾವೇಶಯುತಲಕ್ಷ್ಮಣ=ಸಂ ಕರ್ಷಣನಾಮಕ ಪರಮಾತ್ಮನ ಅಂಶದಿಂದ ಕೂಡಿದ ಶೇಷದೇವರ ಅವತಾರ ವು ಲಕ್ಷ್ಮಣ ರೂಪವು. ಪರಮಪುರುಷನ ಶುಕ್ಲಕೇಶಾವೇಶ ಬಲರಾಮ= ಪರಮಾತ್ಮನ ಶುಕ್ಲಕೇಶಾವೇಶದಿಂದ ಕೂಡಿದ ಶೇಷದೇವರ ಅವತಾರವೇ ಬಲರಾಮರೂಪವು. ಹರ=ಸಕಲ ಪಾಪಗಳನ್ನು ಸ್ಮರಣ ಮಾತ್ರದಿಂದ ಪರಿ ಹರಿಸುವದರಿಂದ ಹರ ಎಂದು ರುದ್ರನಿಗೆ ಹೆಸರು. ಸದಾ ಮಂಗಳ ಸ್ವರೂಪ ರಾದುದರಿಂದ ಸದಾಶಿವ ಎಂದು ಹೆಸರು. ತಪಃ=೧೦ಕಲ್ಪಗಳು ಸಮುದ್ರದ ಲ್ಲಿ ತಪಸ್ಸುಮಾಡಿದ ಪ್ರಯುಕ್ತ ತಪಃ ಎಂದು ರುದ್ರನಿಗೆ ಹೆಸರು. ಅಹಂಕಾ ರತತ್ವಕ್ಕೆ ಅಭಿಮಾನಿಯಾದುದರಿಂದ ಅಹಂಕೃತು ಎಂದು ಹೆಸರು. ಮರುತ ಯುಕ್ತಶುಕ=ವಾಯುದೇವರ ಆವೇಶದಿಂದ ಕೂಡಿದ ರುದ್ರಾವತಾರವು ಶು ಕ್ರಾಚಾರ್ಯರು. ಊರ್ಧ್ವಪಟ-ಅಂತರಿಕ್ಷವೇ ವಸ್ತ್ರವಾಗಿ ಉಳ್ಳವರೆಂದರ್ಥ. ಪಟಗತಾವಿತಿಧಾತೋಃ ಪಟವೆಂದರೆ ಗತಿಗೆ ಹೆಸರು. ಅಂತರಿಕ್ಷಗಮನವುಳ್ಳ ವರು. ಅಥವಾ ಊರ್ಧ್ವಗತಿಯುಳ್ಳ ರೇತಸ್ಸುಳ್ಳವರೆಂದರ್ಥ. ತತ್ಪುರುಷ-ಪ ರಮಾತ್ಮನ ಸೇವಕರಾದುದರಿಂದ ತತ್ಪುರುಷ ಅಂದರೆ ಅವನ ಪುರುಷನೆಂದ ರ್ಥ. ಜೈಗೀಷ=ಜೈಗೀಷ ಋಷಿ ಕುಲದಲ್ಲಿ ಅವತರಿಸಿ ಅನೇಕರಿಗೆ ತತ್ವೋ

ಪದೇಶವನ್ನು ಮಾಡಿದ ರುದ್ರಾವತಾರವು. ಔರ್ವ-ಭೃಗು ಕುಲದಲ್ಲಿ ತೊಡೆಯಿಂದ ಜನಿಸಿದ ಋಷಿರೂಪ. ದ್ರೌಣಿ-ದ್ರೋಣ ಪುತ್ರರಾದ ಅಶ್ವತ್ಥಾಮಾಚಾರ್ಯರು. ವ್ಯಾಧ=ಕಿರಾತರೂಪ, ದುರ್ವಾಸ = ದೂರ್ವಾಸಋಷಿರೂಪ, ಇವುಗಳೆಲ್ಲವೂ ರುದ್ರಾವತಾರಗಳೆಂದು ತಾತ್ಪರ್ಯ.

**ಗರುಡ ಶೇಷಶಶಾಂಕದಳಶೇ**
**ಖರರು ತಮ್ಮೊಳು ಸಮರು ಭಾರತಿ**
**ಸರಸಿಜಾಸನಪತ್ನಿಗಧಮರು ನೂರುಗುಣದಿಂದ ।**
**ಹರಿಮಡದಿ ಜಾಂಬವತಿಯೊಳು ಶ್ರೀ**
**ತರುಣಿಯಾವೇಶವಿಹದೆಂದಿಗು**
**ಕೊರತೆಯೆನಿಪರು ಗರುಡಶೇಷರಿಗೈವರೈದುಗುಣ ॥೧೨॥**

ಪದ್ಯಾರ್ಥ.— ಗರುಡಶೇಷ ಶಶಾಂಕದಳ ಶೇಖರರು=ಗರುಡ, ಶೇಷ ರುದ್ರ ಈ ಮೂವರೂ, ತಮ್ಮೊಳು ಸಮರು-ಪರಸ್ಪರ ಸಮಗುಣಗಳುಳ್ಳವರು. ಭಾರತಿಸರಸಿಜಾಸನಪತ್ನಿಗೆ = ಭಾರತೀ ಸರಸ್ವತೀ ದೇವಿಯರಿಗೆ ನೂರುಗುಣದಿಂದ-ನೂರು ಗುಣಗಳಿಂದ, ಅಧಮರು=ಕಮ್ಮಿ ಎನಿಸುವರು. ಹರಿಮಡದಿ=ಶ್ರೀಕೃಷ್ಣನ ಹೆಂಡಂದರಾದ ಷಣ್ಮಹಿಷಿಯರಾದ ಜಾಂಬವತೀ ಮಿತ್ರವಿಂದಾ, ನೀಲಾ, ಭದ್ರಾ, ಕಾಳಿಂದೀ, ಲಕ್ಷಣಾ ಎಂಬ ೬ ಮಂದಿಯರ ಪೈಕಿ, ಜಾಂಬವತಿಯೊಳು, ಎಂದಿಗೂ, ಶ್ರೀ ತರುಣಿಯಾವೇಶವಿಹದು=ಶ್ರೀಲಕ್ಷ್ಮೀದೇವಿಯರ ಆವೇಶವಿರುವದು- ಆದ್ದರಿಂದ ಶೇಷಾದಿಗಳಿಗೆ ಸ್ವಲ್ಪ ಕಮ್ಮಿ ಸಮಳೆನಿಸುವಳು. ಮಿಕ್ಕ ನೀಲಾದಿ ಐದು ಮಂದಿ ಕೃಷ್ಣ ಪತ್ನಿಯರೂ, ಗರುಡ, ಶೇಷರಿಗೆ, ಐದು ಗುಣ, ಕೊರತೆಯೆನಿಪರು=ಅಧಮರೆನಿಸುವರು. ಜಾಂಬವತಿಯಲ್ಲಿ ಲಕ್ಷ್ಮಿಯಾವೇಶವಿಲ್ಲದ ಕಾಲದಲ್ಲಿ ಆರು ಮಂದಿಗಳೂ ಸಮರೆಂದೂ ತಿಳಿಯಬೇಕು.

ತಾತ್ಪರ್ಯ.— ಗರುಡದೇವರಿಗೆ ಅವತಾರವಿಲ್ಲದುದರಿಂದ ಅವರ ವಿಷಯವನ್ನು ಹೇಳಲಿಲ್ಲ. ಗರುಡ ಶೇಷ ರುದ್ರರು ಸಮರು. ಪದವಿಯ ದೆಶೆಯಿಂದ ಶೇಷದೇವರು ರುದ್ರದೇವರಿಗಿಂತಲೂ ಕಿಂಚಿದುತ್ತಮರೆಂದು ಹೇಳಿರುವರು. ಇವರು ಮೂವರೂ ಸರಸ್ವತೀ ಭಾರತಿಯರಿಗಿಂತಲೂ ೧೦೦ಗುಣಗಳಿಂದ ಅಧಮರೆನಿಸುವರು. ಶ್ರೀಕೃಷ್ಣನ ಹೆಂಡಂದರಾದ ಜಾಂಬ

ವತೀ ಮೊದಲಾದ ೬ ಮಂದಿಗಳೂ ಸಮರಾದರೂ ಲಕ್ಷ್ಮೀದೇವಿಯರ ಆ ವೇಶ ಒಲದಿಂದ ಜಾಂಬವತಿಯು ಮಿಕ್ಕ ೫ ಮಂದಿಯರಿಗಿಂತಲೂ ಕಿಂಚ ದುತ್ತಮರು. ಸ್ವಲ್ಪ ಕನಿಷ್ಠ ಗರುಡಾದಿಗಳಿಗೆ ಸಮರೆನಿಸುವಳು. ಮಿಕ್ಕ ನೀಲಾದಿ ೫ ಮಂದಿ ಸ್ತ್ರೀಯರು ಗರುಡಾದಿಗಳಿಗಿಂತಲೂ ೫ ಗುಣಗಳಿಂದ ಅಧಮರೆಂಬ ತಾತ್ಪರ್ಯ.

ಅವತಾರಿಕೆ.—ಸೌಪರ್ಣೀ, ವಾರುಣೀ, ಪಾರ್ವತೀ ಈ ಮೂವರ ತಾರತಮ್ಯವನ್ನು ಹೇಳುತ್ತಾರೆ.—

ನೀಲಭದ್ರಾಮಿತ್ರವಿಂದಾ
ಮೇಲೆನಿಪಕಾಳಿಂದಿ ಲಕ್ಷಣಾ
ಬಾಲೆಯರಗಿಂದಧಮವಾರುಣಿಸೌಪರ್ಣಿ ಗಿರಿಜಾ।
ಶ್ರೀಲಕುಮಿಯುತರೇವತೀ ಶಿರಿ
ಮೂಲರೂಪದಿಪೇಯಳೆನಿಪಳು
ಶೈಲಜಾದ್ಯರುದಶಗುಣಾಧಮ ತಮ್ಮ ಪತಿಗಳಿಗೆ ॥೧೪॥

ಪದ್ಯಾರ್ಥ.—ನೀಲಾ, ಭದ್ರಾ, ಮಿತ್ರವಿಂದಾ, ಮೇಲೆನಿಪ=ಶ್ರೇಷ್ಠ ಳೆನಿಸುವ, ಕಾಳಿಂದೀ, ಲಕ್ಷಣಾ, ಬಾಲೆಯರಗಿಂದಾ-ಜಾಂಬವತೀ ಮೊದ ಲಾದ ಈ ೬ ಮಂದಿ ಕೃಷ್ಣಪತ್ನಿಯರಿಗಿಂತಲೂ, ವಾರುಣಿ=ಶೇಷದೇವರ ಹೆಂಡತಿ, ಸೌಪರ್ಣಿ-ಗರುಡನ ಹೆಂಡತಿ, ಗಿರಿಜಾ=ಪಾರ್ವತೀದೇವಿಯರು ಇವರು ಮೂವರೂ, ಅಧಮ=ಕನಿಷ್ಠಯೆನಿಸುವರು. ಅವರಲ್ಲಿ ಶೇಷದೇವರ ಹೆಂಡತಿಯಾದ ವಾರುಣೀದೇವಿಯು, ಶ್ರೀಲಕುಮಿಯುತ-ಶ್ರೀಲಕ್ಷ್ಮೀದೇವಿ ಯರ ಅಂಶದಿಂದ ಕೂಡಿದ, ರೇವತೀ=ರೇವತರಾಜನ ಮಗಳಾದುದರಿಂದ ರೇವತೀ ಎಂಬ ಹೆಸರಿನಿಂದ ಜನಿಸಿ ಬಲರಾಮನಿಗೆ ಹೆಂಡತಿಯಾಗಿರುವಳು. ಈಕೆಗೆ ಶ್ರೀದೇವಿಯ ಅಂಶವಿರುವದರಿಂದ ಶ್ರೀ ಎಂದು ಹೆಸರು. ಮೂಲ ರೂಪದಿ=ಮೂಲರೂಪವಾದ ವಾರುಣೀರೂಪದಿಂದ, ಪೇಯಳೆನಿಪಳು= ಪಾನಮಾಡಲು ಯೋಗ್ಯವಾದ ಮಧ್ಯರೂಪಳಾಗಿ ಬಲರಾಮನನ್ನು ಪ್ರೀತಿ ಪಡಿಸಿರುವಳು. ಶೈಲಜಾದ್ಯರು-ಪಾರ್ವತೀ ಮೊದಲಾದವರು ತಮ್ಮ ಪತಿ ಗಳಿಗೆ, ದಶಗುಣಾಧಮ-ಹತ್ತು ಗುಣಗಳಿಂದ ಕನಿಷ್ಠರೆನಿಸುವರು.

ತಾತ್ಪರ್ಯ.—ಜಾಂಬವತೀ ಮೊದಲಾದವರಿಗಿಂತಲೂ ವಾರುಣೀ, ಸೌಪರ್ಣೀ, ಪಾರ್ವತೀ ಮೂವರೂ ೫ ಗುಣಗಳಿಂದ ಅಧಮರೆನಿಸುವರು. ರೇವತೀ ಎಂಬ ರೇವತರಾಜನ ಮಗಳಾದ ಬಲರಾಮನ ಹೆಂಡತಿಯು, ಬಲರಾಮನಲ್ಲಿ ಹೇಗೆ ಪರಮಾತ್ಮನ ಶುಕ್ಲಕೇಶಾವೇಶವಿರುವದೋ ಹಾಗೆ ಲಕ್ಷ್ಮೀದೇವಿಯಂಶದಿಂದ ಕೂಡಿದ ವಾರುಣೀ ರೂಪವು. ಈಕೆಗೆ ಶ್ರೀ ಎಂದು ಹೆಸರುಂಟು. ಇದೇ ವಾರುಣಿಯು ಮೂಲರೂಪದಿಂದ ಮದ್ಯದ ರೂಪಳಾಗಿ ಬಲರಾಮನನ್ನು ತೃಪ್ತಿಪಡಿಸಿರುವಳು. ಭಾಗವತ ದಶಮಸ್ಕಂಧ ೬೮ನೆಯ ಅಧ್ಯಾಯದಲ್ಲಿ " ರಾಮ ಕ್ಷಪಾಸು ಭಗವಾನ್ ಗೋಪೀನಾಂ ರತಿಮಾವಹನ್ ||೧೭|| ಪೂರ್ಣಚಂದ್ರಕರಾಮೃಷ್ಟೇ ಕೌಮುದೀಗಂಧವಾಯುನಾ || ಯಮುನೋಪವನೇರೇಮೇ ಸೇವಿತೇ ಸ್ತ್ರೀಗಣೈರ್ವೃತಃ ||೧೮|| ವರುಣಪ್ರೇಷಿತಾದೇವೀ ವಾರುಣೀ ವೃಕ್ಷಕೋಟರಾತ್ || ಪತಂತೀತದ್ವನಂಸರ್ವಂಸೌರಭೇಣಾಧ್ಯವಾಸಯತ್ ||೧೯|| ತಂಗಂಧಂಮಧುಧಾರಾಯಾಃ ವಾಯುನೋಪಹೃತಂಬಲಃ || ಆಘ್ರಾಯೋಪಗತಸ್ತತ್ರ ಲಲನಾಭಿಃ ಪಪೌಸಮಂ ||೨೦|| ಬಲರಾಮನು ರಾತ್ರಿ ಕಾಲಗಳಲ್ಲಿ ಗೋಪಿಕಾ ಸ್ತ್ರೀಯರಿಗೆ ಆನಂದವನ್ನುಂಟುಮಾಡುತ್ತಾ, ಪೂರ್ಣಚಂದ್ರನ ಕಿರಣಗಳಿಂದ ಕೂಡಿ ಕುಮುದ ಪುಷ್ಪಾದಿಗಳ ವಾಸನೆಯಿಂದ ಕೂಡಿದ ಗಾಳಿಯಿಂದ ಸೇವಿತವಾದ ಯಮುನಾನದಿ ತೀರದಲ್ಲಿ ಸ್ತ್ರೀಗಣಗಳಿಂದ ಕೂಡಿ ರಮಿಸುತ್ತಿದ್ದನು. ಆ ಸಮಯದಲ್ಲಿ ವರುಣನಿಂದ ಕಳುಹಿಸಲ್ಪಟ್ಟು ವಾರುಣೀ ಎಂಬ ಶೇಷದೇವರ ಹೆಂಡತಿಯು, ಬಲರಾಮನ ಸೇವಾರ್ಥವಾಗಿ ವೃಕ್ಷದ ಮಧ್ಯದಲ್ಲಿರುವ ಟೊಂಗೆಯಿಂದ ಮದ್ಯದ ರೂಪಳಾಗಿ ಹೊರಟು ತನ್ನ ಸುವಾಸನೆಯಿಂದ ಆ ವನವನ್ನೆಲ್ಲಾ ವ್ಯಾಪಿಸಿದಳು. ಬಲರಾಮನು ಗಾಳಿಯಿಂದ ಬಂದ ಆ ವಾಸನೆಯನ್ನು ಆಘ್ರಾಣಿಸಿ ಸ್ತ್ರೀಗಳಿಂದ ಸಮೇತನಾಗಿ ಅಲ್ಲಿಗೆ ಬಂದು ಆ ಮಧುವನ್ನು ಪಾನಮಾಡಿದನೆಂದು ಹೇಳಿರುವರು. ಅದೇ ಅಭಿಪ್ರಾಯದಿಂದ ದಾಸರಾಯರು ಮೂಲರೂಪದಿ ಪೇಯಳೆನಿಪಳೆಂದು ಹೇಳಿರುವರು. ಈ ಪಾರ್ವತೀ ಮೊದಲಾದವರು ತಮ್ಮ ಪತಿಗಳಿಗಿಂತಲೂ ನೂರು ಗುಣಗಳಿಂದ ಅಧಮರೆನಿಸುವರು.

ಅವತಾರಿಕೆ.— ಇಂದ್ರ ಕಾಮರ ಅವತಾರವನ್ನು ಹೇಳುತ್ತಾರೆ.—

**ನರಹರಿಯು ಆವೇಶಸಂಯುತ**
**ನರಪುರಂದರಗಾಧಿಕುಶ ಮಂ**
**ದರದ್ಯುಮ್ನವಿಕುಕ್ಷಿವಾಲೀ ಇಂದ್ರನವತಾರ ||**
**ಭರತಬ್ರಹ್ಮಾ ವಿಷ್ವಸಾಂಬಸು**
**ದರುಶನಪ್ರದ್ಯುಮ್ನ ಸನಕಾ**
**ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನುಕಾಮ ||೧೪||**

ಪದ್ಯಾರ್ಥ.— ನರಹರಿಯು=ಶ್ರೀಶೇಷಾಂಶದಿಂದಲೂ, ಪರಮಾತ್ಮನ ಅಂಶದಿಂದಲೂ ಕೂಡಿದುದು ನರನಾರಾಯಣರ ಪೈಕಿ ನರರೂಪವೆಂದು ಶೇಷದೇವರ ಅವತಾರ ಹೇಳುವಾಗ ಹೇಳಿರುತ್ತದೆ. ಆ ನರನ ಅಂಶದಿಂದಲೂ ಶ್ರೀಹರಿಯ ಅಂಶ ವಿಶೇಷದಿಂದ ಕೂಡಿದ ಇಂದ್ರನು, ನರ=ಅರ್ಜುನನು. ಪುರಂದರ=ಈ ವೈವಸ್ವತ ಮನ್ವಂತರದ ಇಂದ್ರನ ಹೆಸರು. ಗಾಧಿ=ಕುಶ ರಾಜನ ಮಗನಾದ ಗಾಧೀರಾಜನು, ಕುಶ=ರಾಮದೇವರ ಮಗ ಕುಶನು, ಮಂದರದ್ಯುಮ್ನ=ಚಾಕ್ಷುಷಮನ್ವಂತರದ ಇಂದ್ರನು, ವಿಕುಕ್ಷಿ-ಇಕ್ಷ್ವಾಕು ರಾಜನ ಮಗನು, ವಾಲೀ ಸುಗ್ರೀವನ ಅಣ್ಣನು, ಇವರೆಲ್ಲರು ಇಂದ್ರನ ಅವತಾರ. ಭರತ-ರಾಮದೇವರ ತಮ್ಮನು, ಬ್ರಹ್ಮಾವಿಷ್ವಸಾಂಬ=ಜಾಂಬವತೀ ಮಗನಾದ ಸಾಂಬನು ಬ್ರಹ್ಮದೇವರ ಆವೇಶದಿಂದ ಕೂಡಿದ ಮನ್ಮಥನು. ಸುದರ್ಶನ=ಪರಮಾತ್ಮನು ಕೈಯ್ಯಲ್ಲಿ ಧರಿಸಿರುವ ಚಕ್ರವು. ಪ್ರದ್ಯುಮ್ನ=ಶ್ರೀಕೃಷ್ಣ ರುಗ್ಮಿಣಿ ಮಗನು, ಸನಕಾದ್ಯರೊಳಗಿಪ್ಪ-ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೆಂಬ ಬ್ರಹ್ಮಮಾನಸ ಪುತ್ರರಾದ ನಾಲ್ವರಲ್ಲಿ ಶೇರಿದ, ಸನತ್ಕುಮಾರನು, ಷಣ್ಮುಖನು, ಕಾಮ=ಇವೆಲ್ಲವೂ ಮನ್ಮಥನವತಾರಗಳು.

ತಾತ್ಪರ್ಯ.— ನರಾಂಶದಿಂದಲೂ ವಿಶೇಷವಾದ ಪರಮಾತ್ಮನಂಶದಿಂದಲೂ ಕೂಡಿದ ಇಂದ್ರನ ಅವತಾರವೇ ಅರ್ಜುನನು. ಮಹಾಭಾರತ ತಾತ್ಪರ್ಯನಿರ್ಣಯ ೧೨ ನೆಯ ಅಧ್ಯಾಯದಲ್ಲಿ " ಇತೀರಿತಾಸಾಹ್ವಯದಾ ವಾಸವಂ ತತಃ ಪ್ರಜಜ್ಞೇಸ್ವಯಮೇವತಕ್ರಃ || ಸಚಾರ್ಜುನೋನಾಮನರಾಂಶಯುಕ್ತೋ ವಿಷ್ಣ್ವಾವೇಶೀಬಲವಾನಸ್ತ್ರನೇತ್ತಾ ||೯೯|| " ಪಾಂಡು

ರಾಜನ ವಾಕ್ಯವನ್ನು ಕೇಳಿ ಕುಂತೀದೇವಿಯು ಮಂತ್ರಬಲದಿಂದ ಇಂದ್ರನನ್ನು ಕರೆದಳು. ಆಗ ದೇವೇಂದ್ರನು ತಾನೇ ಕುಂತಿಯಲ್ಲಿ ಅರ್ಜುನನೆಂಬ ಹೆಸರಿನಿಂದ ಜನಿಸಿದನು. ಅವನು ನರಾಂಶದಿಂದಲೂ, ಅಂದರೆ ಹರಿ ಆವೇಶದಿಂದ ಕೂಡಿದ ಶೇಷಾಂಶವೆಂದು ತಾತ್ಪರ್ಯ. ( ಹರಿಯಂಶದಿಂದ ಕೂಡಿದ ಶೇಷದೇವರೇ ನರಾವತಾರವೆಂದು 16ನೆಯ ಪದ್ಯದಲ್ಲಿ ಸ್ಪಷ್ಟಮಾಡಿದೆ. ಮತ್ತೂ ವಿಶೇಷವಾದ ಪರಮಾತ್ಮನ ಆವೇಶದಿಂದಲೂ ಕೂಡಿ ಮಹಾ ಬಲಾಢ್ಯನಾಗಿಯೂ ಸಕಲ ಶಾಸ್ತ್ರಗಳನ್ನೂ ತಿಳಿದವನಾಗಿಯೂ ಇದ್ದನೆಂದು ಹೇಳಿರುವರು. ಈ ವಾಕ್ಯವೇ ನರಹರಿಯಾವೇಶಯುಕ್ತ ನರ ಎಂಬುವುದಕ್ಕೆ ಆಧಾರವೆಂದು ತಿಳಿಯಬೇಕು. ನರಾಂಶ ಉಳ್ಳವನಾದುದರಿಂದ ನರನೆಂದು ಅರ್ಜುನನಿಗೂ ನಾರಾಯಣನೆಂದು ಕೃಷ್ಣನಿಗೂ ಹೆಸರು. "ನರನಾರಾಯಣಾವೇತೌ' ಎಂಬ ಭಾಗವತ ವಾಕ್ಯದಿಂದ ಕೃಷ್ಣಾರ್ಜುನರೇ ನರನಾರಾಯಣ ನರರೆಂದು ಸ್ಪಷ್ಟವಾಗುವದು. ಆ ಅಭಿಪ್ರಾಯದಿಂದಲೇ ದಾಸರಾಯರು ಅರ್ಜುನನ ಹೆಸರು ನರನೆಂದು ಹೇಳಿರುವರು. ನರಹರಿಯಾವೇಶಯುತ=ನರ ಅಂದರೆ ನರಹರಿ ಎನ್ನುವುದಕ್ಕೆ ಪರಮಾತ್ಮನೆಂದು ಅರ್ಥವಾಡಿ ಪರಮಾತ್ಮನ ಆವೇಶದಿಂದ ಕೂಡಿದ ನರನೇ ಪುರಂದರನೆಂದು ಅರ್ಥ ಮಾಡುವುದಾದರೆ ಅರ್ಜುನನ ಹೆಸರನ್ನು ಬೇರೆಯಾಗಿ ಹೇಳಬೇಕಾಗಿತ್ತು. ಹಾಗೆ ಹೇಳಲಿಲ್ಲ. ಆದ್ದರಿಂದ ನರಹರಿಯೆಂಬುವುದಕ್ಕೆ ನರಾಂಶವೂ ಹರಿಯಂಶವೂ ಕೂಡಿದ ನರ ಅಂದರೆ ಅರ್ಜುನನೆಂದರ್ಥ ಮಾಡಬೇಕಾಯಿತು. ಪುರಂದರನೆಂದರೆ ಪುರಂದರನೆಂಬ ದೇವೇಂದ್ರನು, ವಿಷ್ಣುರಹಸ್ಯ 44ನೆಯ ಅಧ್ಯಾಯದಲ್ಲಿ " ಏಷಏವಮನುರ್ಜಾತಃ ಸಪ್ತಮೋಹಿರವೇ ಸುತಃ ||37|| ಇಕ್ಷ್ವಾಕು ಮುಖಾಸ್ತಸ್ಯಾಸುಃ ಪುತ್ರಾದಶಮಹಾಬಲಾಃ | ಇಂದ್ರಪುರಂದರಸ್ತತ್ರ ದೇವಾಃಖುದ್ರಾದಯಸ್ಥಥಾ ||38|| ಆರನೆಯ ಮನ್ವಂತರದ ಅಂತ್ಯದಲ್ಲಿ ಸತ್ಯವ್ರತನೆಂಬ ರಾಜನಲ್ಲಿ ಪರಮಾತ್ಮನು ಮತ್ಸ್ಯಾವತಾರವನ್ನು ಮಾಡಿ ಅವನಿಗೆ ತತ್ವೋಪದೇಶವನ್ನು ಮಾಡಿದನು. ಆ ಸತ್ಯವ್ರತನು ಭಗವದನುಗ್ರಹದಿಂದ ವಿವಸ್ವಾನ್ ಎಂಬ ಸೂರ್ಯನ ಮಗನಾಗಿ ಶ್ರಾದ್ಧದೇವನೆಂತಲೂ ವೈವಸ್ವತನೆಂತಲೂ ಹುಟ್ಟಿ ಈ ಮನ್ವಂತರಕ್ಕೆ ಅಧಿಪತಿಯಾದನು ಅವನ ಮಕ್ಕಳು ಇಕ್ಷ್ವಾಕುಮೊದಲಾದ 19 ಮಂದಿಗಳು. ಆ ಮನ್ವಂ

ತರದಲ್ಲಿ ಪುರಂದರನೆಂಬ ಕಶ್ಯಪರ ಮಗನು ಇಂದ್ರನಾಗಿದ್ದನು. ಎಂದು ಹೇಳಿರುವರು. ಆದ್ದರಿಂದ ವೈವಸ್ವತಮನ್ವಂತರದ ಇಂದ್ರನಿಗೆ ಪುರಂದರನೆಂದು ಹೆಸರು. ಗಾಧಿರಾಜನು ಚಂದ್ರವಂಶದಲ್ಲಿ ಹುಟ್ಟಿದವನು. ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ೪ನೆಯ ಅಧ್ಯಾಯದಲ್ಲಿ " ತತಃ ಸುವಂಶೇಶತನಃ ಪ್ರಸೂತೋ ಗಾಧೀತಿ ಶಕ್ರಸ್ತನುಜೋಸ್ಯಚಾಸೀತ್ ‖ ಉತ್ತಮವಾದ ಚಂದ್ರವಂಶದಲ್ಲಿ ದೇವೇಂದ್ರನು ಗಾಧಿಯೆಂಬ ಹೆಸರಿನಿಂದ ಹುಟ್ಟಿದನು. ಅವನ ಮಗನು ವಿಶ್ವಾಮಿತ್ರನೆಂದು ಹೇಳಿರುವರು. ರಾಮದೇವರ ಮಕ್ಕಳಾದ ಕುಶಲವರಲ್ಲಿ ಕುಶನು ಇಂದ್ರನು. ನಿರ್ಣಯ ಅಧ್ಯಾಯ ಒಂಭತ್ತರಲ್ಲಿ " ದೇವ್ಯಾಂಸಜಾಜನಯದಿಂದ್ರ ಹುತಾಶನೌದ್ವೌಪುತ್ರೌಯಮೌ ಕುಶಲವೌ ಬಲಿನೌ ಗುಣಾಢ್ಯೌ ‖ ಶ್ರೀರಾಮದೇವರು ಸೀತಾದೇವಿಯರ ಇಂದ್ರ ಅಗ್ನಿಯರನ್ನು ಕುಶ ಲವ ಎಂಬ ಹೆಸರುಳ್ಳ ಮಕ್ಕಳನ್ನಾಗಿ ಪಡೆದರು. ಅವರಲ್ಲಿ ಕುಶನು ಇಂದ್ರನು. ಲವನು ಅಗ್ನಿಯು ಇವರಿಬ್ಬರೂ ಅವಳಿಜವಳಿಗಳಾಗಿ ಹುಟ್ಟಿದವರು. ಗುಣಾಢ್ಯರು, ಬಲಾಢ್ಯರೆಂದು ಹೇಳಿರುವರು. ಕುಶನೇ ಇಂದ್ರನೆಂಬುವುದಕ್ಕೆ ಈ ವಾಕ್ಯವು ಆಧಾರವು. ಮಂದರದ್ಯುಮ್ನನು ಪೂರ್ವೇಂದ್ರನು. ಪ್ರಮಾಣ.—ವಿಷ್ಣುರಹಸ್ಯ ೪೪ನೆಯ ಅಧ್ಯಾಯ " ಷಷ್ಠಸ್ತುಚಕ್ಷುಷಃ ಪುತ್ರಃ ಚಾಕ್ಷುಷೋ ಮನುರೀರಿತಃ ‖ ಮಂದ್ರದ್ಯುಮ್ನಸ್ವಯಂತಶಕ್ರಃ ಐದ್ರಂಪದಮಶಾಸತ ‖೮‖ ಆರನೆಯ ಮನುಚಕ್ಷುಷನ ಮಗನು. ಚಾಕ್ಷುಷನೆಂಬುವನು ಸ್ವಯಂ ದೇವೇಂದ್ರನು, ಮಂದ್ರದ್ಯುಮ್ನನೆಂಬ ಹೆಸರಿನಿಂದ ಇಂದ್ರಪಟ್ಟವನ್ನಾಳಿದನು ಎಂದು ಹೇಳಿರುವರು. ಇಕ್ಷ್ವಾಕುರಾಜನ ಮಗನು ವಿಕ್ಷುಕಿರಾಜನು, ಇಂದ್ರವತಾರನು, ವಾಲಿ ಇಂದ್ರಾವತಾರವು.

ಮನ್ಮಥನ ಅವತಾರಗಳನ್ನು ಹೇಳುತ್ತಾರೆ.—ರಾಮದೇವರ ತಮ್ಮನಾದ ಕೈಕೇಯಿಯ ಮಗ ಭರತನು ಪೂರ್ವದಲ್ಲಿ ಮನ್ಮಥನು, ನಿರ್ಣಯ ಮೂರನೆಯ ಅಧ್ಯಾಯದಲ್ಲಿ " ಪೂರ್ವಂ ಹರೇಶ್ಚಕ್ರಮಭೂದ್ಧಿದುರ್ಗಾತಮಃ ಸ್ಥಿತಾ ಶ್ರೀರಿತಿಯಾಂ ವದಂತಿ ‖ ಸತ್ವಾತ್ಮಿಕಾ ಶಂಖ ಮಥೋ ರಜಸ್ಥಾ ಭೂನಾರ್ಮಿಕಾಪದ್ಮಮ ಭೂದ್ಧರೇರ್ಹಿ ‖75‖ ಗದಾತುವಾಯುರ್ಬಲ ಸಂವಿದಾತ್ಮಾಶಾರ್ಙ್ಗಕ್ಷ ವಿದ್ಯೇತಿ ರಮ್ಯೈವ ಖಡ್ಗಃ ‖ ದುರ್ಗಾತ್ಮಿಕಾಸೇವಚರ್ಮ

ನಾಮ್ನಾ ಪಂಚಾತ್ಮಕೋ ಮಾರುತ ಏವಬಾಣಃ ||76|| ಏವಂಸ್ಥಿತೇಷ್ವೇವ ಪುರಾತನೇಷುವರಾದ್ರಥಾಂಗತ್ವಮುಪಾಸಕಾಮಃ || ತತ್ಸೂನುತಾಮಾಪಚ ಸೋಽನಿರುದ್ಧೋ ಬ್ರಹ್ಮೋದ್ಭವಃ ಶಂಜತನುಃ ಪುಮಾತ್ಮಾ ||77|| ತಾವೇವ ಜಾತೌ ಭಗತಶ್ಚನಾಮ್ನಾ ಶತ್ರುಘ್ನ ಇತ್ಯೇವಚ ರಾಮತೋಽನು " ಮೊಟ್ಟಮೊದಲು ಸತ್ವರಜಸ್ತಮೋ ಗುಣಾತ್ಮಕರಾದ ಶ್ರೀ ಭೂ ದುರ್ಗೆಯರೆಂಬ ಲಕ್ಷ್ಮೀದೇವಿಯರ ಮೂರು ರೂಪಗಳಲ್ಲಿ ತಮೋಗುಣಾತ್ಮಕರಾದ ದುರ್ಗಾದೇವಿಯರು ಪರಮಾತ್ಮನ ಚಕ್ರರೂಪರಾಗಿದ್ದರು. ಸತ್ವಗುಣಾತ್ಮಕರಾದ ಶ್ರೀದೇವಿಯರು ಶಂಖರೂಪರಾಗಿದ್ದರು. ರಜೋಗುಣಾತ್ಮಕರಾದ ಭೂದೇವಿಯರು ಪದ್ಮರೂಪರಾಗಿದ್ದರು. ಬಲ ಜ್ಞಾನದಿಂದ ಕೂಡಿದ ವಾಯುದೇವರು ಗಧೆಯಾಗಿದ್ದರು. ವಿದ್ಯಾನಾಮಕ ರಮಾದೇವಿಯರು ಶಾರ್ಙ್ಗವೆಂಬ ಧನುಸ್ಸಾಗಿದ್ದರು. ರಮಾದೇವಿಯರೇ ಖಡ್ಗರೂಪರಾಗಿದ್ದರು. ದುರ್ಗಾದೇವಿಯರು ಚರ್ಮಪ್ರಾಣಾಪಾನಾದಿ ಪಂಚರೂಪಿಯಾದ ವಾಯುದೇವರು ಬಾಣರೂಪರಾಗಿದ್ದರು, ಹಿಂದಿನಸ್ಥಿತಿ ಹೀಗಿರಲಾಗಿ ಮನ್ಮಥನು ತಪಸ್ಸನ್ನುಮಾಡಿ ವರದಿಂದ ಚಕ್ರತ್ವವನ್ನು ಹೊಂದಿದನು. ಮನ್ಮಥನ (ಪ್ರದ್ಯುಮ್ನನ) ಮಗನಾದ ಅನಿರುದ್ಧನು ತಪಸ್ಸಿನಿಂದ ವರವನ್ನು ಪಡೆದು ಶಂಖರೂಪನಾಗಿ ಬ್ರಹ್ಮದೇವರಿಂದ ಜನಿಸಿ ಪರಮಾತ್ಮನ ಕೈಸೇರಿದನು. ಅವರಿಬ್ಬರೇ ಭರತ, ಶತ್ರುಘ್ನರೆಂಬ ಹೆಸರಿನಿಂದ ರಾಮದೇವರನ್ನನುಸರಿಸಿ ಕೈಕೇಯಿ ಸುಮಿತ್ರೆಯರ ಮಕ್ಕಳಾಗಿ ಹುಟ್ಟಿದರೆಂದು ಹೇಳುವರು. ಈ ಆಧಾರಧಮೇಲೆ ಮನ್ಮಥನೇ ಸುದರ್ಶನನೆಂಬ ಚಕ್ರನಾಗಿದ್ದವನು, ಅವನೇ ಭರತ ರಾಮನ ಭರತ, ಸುದರ್ಶನ ಎಂಬೆರಡು ರೂಪಗಳಿಗೂ ಆಧಾರಕೊಟ್ಟಂತಾಯಿತು. ಜಾಂಬವತೀ ಕುಮಾರನಾದ ಸಾಂಬನು ಬ್ರಹ್ಮದೇವರ ಅಂಶದಿಂದ ಕೂಡಿದ ಮನ್ಮಥನು. ಇದಕ್ಕಾಧಾರ ನಿರ್ಣಯ 17ನೆಯ ಅಧ್ಯಾಯದಲ್ಲಿ " ಅಥಾಪಸಾಂಬನಾಮಕಂಸುತಂಚ ರೋಹಿಣೀ ಹರೇಃ ||2೭0|| ಚತುರ್ಮುಖಂಶಸಂಯುತಂ ಕುಮಾರ ಮೇವ ಷಣ್ಮುಖಂ " ಶ್ರೀಕೃಷ್ಣನು ಜಾಂಬವತೀ ಸತ್ಯಭಾಮೆಯರನ್ನು ಮದುವೆಮಾಡಿಕೊಂಡಮೇಲೆ ರೋಹಿಣಿಯು ಕೃಷ್ಣನ ದೆಶೆಯಿಂದ ಸಾಂಬನೆಂಬ ಕುಮಾರನನ್ನು ಪಡೆದಳು. (ರೋಹಿಣಿಯೆಂದು ಜಾಂಬವತೀಗೆ ಹೆಸರು. ಜಾಂಬವಂತನ ಮಗಳಾದುದರಿಂದ ಜಾಂಬವತೀ

ಯೆಂಬ ಪ್ರಸಿದ್ಧಿಯಾದರೂ ಆಕೆಯ ಮೊದಲನೆಯ ಹೆಸರು ರೋಹಿಣಿ ಎಂದಿದ್ದಿತು. ಆ ಸಾಂಬನು ಪೂರ್ವದಲ್ಲಿ ಷಣ್ಮುಖನು, ಬ್ರಹ್ಮದೇವರ ಅಂಶದಿಂದ ಹುಟ್ಟಿದವನೆಂದು ಹೇಳಿರುವರು. ಈ ಆಧಾರದಿಂದ ಮನ್ಮಥನು ಬ್ರಹ್ಮಾವೇಶದಿಂದ ಕೂಡಿದ ಸಾಂಬನೆಂತಲೂ, ಮನ್ಮಥನೇ ಷಣ್ಮುಖನೆಂತಲೂ ಎರಡವತಾರಗಳಿಗೂ ನಿರ್ಣಯಮಾಡಿದಂತಾಯಿತು. ಪ್ರದುಮ್ನನು ಮನ್ಮಥನೆಂಬ ವಿಷಯದಲ್ಲಿ ನಿರ್ಣಯ 17 ನೆಯ ಅಧ್ಯಾಯದಲ್ಲಿ " ತಯಾರನುಜ್ಞನಾರ್ಧನೋ ವಿಯೋಗ ಶೂನ್ಯಯಾ ಸದಾ ||18|| ಅಥತ್ಮ ಪುತ್ರಮುತ್ತಮಂ ಮನೋಭವಂ ಪುರಾತನಂ || ಚತುಸ್ತನೋರ್ಹರೇ ಪ್ರಭೋಸ್ತ್ರುತೀಯರೂಪಸಂಯುತಃ " ಶ್ರೀಕೃಷ್ಣನು ಸಾಕ್ಷಾಚ್ರಮಾವತಾರಳಾದ ರುಗ್ಮಿಣಿದೇವಿಯನ್ನು ಮದುವೆಮಾಡಿಕೊಂಡು ಸದಾ ವಿಯೋಗಶೂನ್ಯಳಾದ ಆ ರುಗ್ಮಿಣಿಯಿಂದ ರಮಿಸುತ್ತಿದ್ದನು. ಈಕೆಯಲ್ಲಿ ಪ್ರದ್ಯುಮ್ನನೆಂಬ ಕುಮಾರನು ಜನಿಸಿದನು. ಅವನು ಪೂರ್ವದಲ್ಲಿ ಮನ್ಮಥನು, ಪರಮಾತ್ಮನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ನಾಮಕ ಪರಮಾತ್ಮನ ಅಂಶದಿಂದ ಕೂಡಿ ಅದೇ ಹೆಸರಿನಿಂದ ಜನಿಸಿದನೆಂಬುವುದೇ ಇದಕ್ಕೆ ಆಧಾರವು. ಬ್ರಹ್ಮದೇವರ ಮಾನಸ ಪುತ್ರರಾದ ಸನಕಾದಿ ನಾಲ್ವರಲ್ಲಿ ಸನತ್ಕುಮಾರನು ಸನತ್ಕುಮಾರ ನಾಮಕ ಪರಮಾತ್ಮನ ಅಂಶದಿಂದ ಕೂಡಿದ ಮನ್ಮಥನ ಅವತಾರವು ಇವೆಲ್ಲವೂ ಮನ್ಮಥನವತಾರಗಳೆಂದು ತಿಳಿಯಬೇಕು.

ಅವತಾರಿಕೆ.—ಇಂದ್ರಕಾಮರ ತಾರತಮ್ಯವನ್ನೂ, ರತಿ ಮೊದಲಾದವರ ತಾರತಮ್ಯವನ್ನೂ ಹೇಳುತ್ತಾರೆ.—

ಈರೈದುಗುಣ ಕಡಿಮೆ ಪಾರ್ವತಿ
ವಾರುಣೀಯರಿಗಿಂದ್ರಕಾಮ ಕ
ರೀರವಾನಿಪ್ರಾಣದಶಗುಣವವರ ಶಕ್ರನಿಗೆ ।
ಮಾರಜಾರತಿ ದಕ್ಷಗುರು ವೃ
ತ್ರಾರಿಜಾಯಾಶಚಿ ಸ್ವಯಂಭುವ
ರಾರುಜನ ಸುಪ್ರಾಣಗವರರು ಹತ್ತುಗುಣದಿಂದ ||೧೫||

ಪದ್ಯಾರ್ಥ.—ಪಾರ್ವತಿವಾರುಣಿಯರಿಗೆ, ಇಂದ್ರಕಾಮರು ಈ

ರ್ಕೆ ದುಗುಣ=೧೦ಗುಣಗಳಿಂದ, ಕಡಿಮೆ=ಅಧಮರೆನಿಸುವರು. ಶಕ್ರನಿಗೆ= ಇಂದ್ರನಿಗಿಂತಲೂ, ವರೀರಮಾಸಪ್ರಾಣ=ಅಹಂಕಾರಿಕಪ್ರಾಣನು, ದಶಗುಣವ=೧೦ಗುಣಗಳಿಂದ, ಅವರ=ಕಮ್ಮಿಯೆನಿಸುವನು. ಮಾರಜ=ಪ್ರದ್ಯುಮ್ನರೂಪಿಯಾದ ಮನ್ಮಥನ ಮಗನಾದ ಅನಿರುದ್ಧ, ಮನ್ಮಥನ ಹೆಂಡತಿಯೂದ, ರತಿ=ರತೀದೇವಿಯು, ದಕ್ಷ=ಬ್ರಹ್ಮದೇವನ ಮಗನಾದ ದಕ್ಷ ಪ್ರಜೇಶ್ವರನೂ, ಗುರು=ಬೃಹಸ್ಪತ್ಯಾಚಾರ್ಯರು. ವೃತ್ರಾರಿಜಾಯಾ=ವೃತ್ರಾಸುರನ ಶತ್ರುವಾದ ದೇವೇಂದ್ರನ ಹೆಂಡತಿಯಾದ ಶಚಿ=ಶಚೀದೇವಿಯು, ಸ್ವಯಂಭುವರು—ಸ್ವಾಯಂಭುವ ಮನು ಇವರು, ಆರು ಜನ ಸಮ, ಪ್ರಾಣಗೆ= ಅಹಂಕಾರಿಕಪ್ರಾಣನಿಗೆ ಹತ್ತುಗುಣದಿಂದ, ಅಧಮರು=ಕಮ್ಮಿಯೆನಿಸುವರು.

ತಾತ್ಪರ್ಯ.—ಪಾರ್ವತೀ ಮೊದಲಾದ ಮೂವರಕಿಂತಲೂ ಇಂದ್ರ ಮನ್ಮಥರು ೧೦ಗುಣ ಕಮ್ಮಿಯಾದವರು. ಇವರಿಕಿಂತಲೂ ಅಹಂಕಾರಿಕ ಪ್ರಾಣನು ೧೦ಗುಣಗಳಿಂದಧಮನು. ಇವನಕಿಂತಲೂ ರತಿ; ಸ್ವಾಯಂಭುವ ಮನು, ಬೃಹಸ್ಪತಿ, ಶಚಿ, ದಕ್ಷಪ್ರಜೇಶ್ವರ, ಪ್ರದ್ಯುಮ್ನನ ಮಗನಾದ ಅನಿರುದ್ಧ ಇವರಾರು ಜನರೂ ೧೦ಗುಣಗಳಿಂದ ಅಧಮರು ತಮ್ಮೊಳಗೆ ೬ಜನರೂ ಸಮರೆಂಬ ತಾತ್ಪರ್ಯ.

ಅವತಾರಿಕೆ.—ಅನಿರುದ್ಧ, ರತಿ, ಶಚಿ, ಇವರ ಅವತಾರಗಳನ್ನು ಹೇಳುತ್ತಾರೆ:—

**ಕಾಮಪುತ್ರನಿರುದ್ಧ ಸೀತಾ**
**ರಾಮನಾನುಜಶತೃಹನಬಲ**
**ರಾಮನಾನುಜಪೌತ್ರನಿರುದ್ಧನೊಳಗನಿರುದ್ಧ ||**
**ಕಾಮಭಾರ್ಯಾ ರುಗ್ಮವತಿಸ**
**ನ್ನಾಮ ಲಕ್ಷ್ಮಣಳೆನಿಸುವಳು ಪೌ**
**ಲೋಚಿಮಿಚಿತ್ರಾಂಗದೆಯುತಾರಾ ಎರಡುಹೆಸರುಗಳು ||೧೬||**

ಪದ್ಯಾರ್ಥ:—ಕಾಮಪುತ್ರನಿರುದ್ಧ=ಪ್ರದ್ಯುಮ್ನನ ಮಗನಾದ ಅನಿರುದ್ಧನು, ಸೀತಾರಾಮನಾನುಜ=ಸೀತಾ ಪತಿಯಾದ ಶ್ರೀರಾಮದೇವರ ತಮ್ಮನಾದ, ಶತೃಹನ=ಶತ್ರುಘ್ನನು, ಅಂದರೆ ಅನಿರುದ್ಧನವತಾರವೇ ಶತ್ರುಘ್ನನೆಂಬ ತಾತ್ಪರ್ಯ, ಬಲರಾಮನಾನುಜ=ಬಲರಾಮನ ತಮ್ಮನೆಂದೆನಿಸಿದ

ಶ್ರೀಕೃಷ್ಣನ, ಪೌತ್ರನು=ಮಗನಾದ ಪ್ರದ್ಯುಮ್ನನ ಮಗನಾದ, ಅನಿರುದ್ಧ ನೊಳಗೆ, ಅನಿರುದ್ಧ=ಅನಿರುದ್ಧನಾಮಕ ಪರಮಾತ್ಮನ ಆವೇಶ ಉಂಟು, ಕಾಮಭಾರ್ಯಾ=ಮನ್ಮಥನ ಹೆಂಡತಿಯಾದ ರತೀದೇವಿಯ ಅವತಾರಗಳು, ರುಗ್ಮವತಿ=ರುಗ್ಮಿಯ ಮಗಳಾದ ರುಗ್ಮವತಿಯೂ, ಸನ್ನಾಮ ಉತ್ತಮವಾದ ಹೆಸರುಳ್ಳ ಲಕ್ಷಣ=ದುರ್ಯೋಧನನ ಮಗಳಾದ ಲಕ್ಷಣೆ ಇವೆರಡೆಂದು ತಿಳಿಯ ಬೇಕು. ಪೌಲೋಮಿ=ಇಂದ್ರನ ಹೆಂಡತಿಯಾದ ಶಚೀದೇವಿಗೆ ಚಿತ್ರಾಂಗದೆ ಯು=ಪಾಂಡ್ಯ ದೇಶಾಧಿಪತಿಯಾದ ವೀರಸೇನನ ಮಗಳಾದ ಚಿತ್ರಾಂಗದೆ ಯು ತಾರಾ=ವಾಲಿಯ ಹೆಂಡತಿಯಾದ ತಾರೆಯು, ಎರಡು ಹೆಸರುಗಳು. ಈಎರಡು ಅವತಾರಗಳಲ್ಲೂ ಎರಡು ಹೆಸರೆಂದು ತಿಳಿಯಬೇಕು.

ತಾತ್ಪರ್ಯ.—ಪ್ರದ್ಯುಮ್ನನ ಮಗನಾದ ಅನಿರುದ್ಧನೇ ಶತೃಘ್ನ ನೆಂಬ ವಿಷಯದಲ್ಲಿ ಮನ್ಮಥನ ಅವತಾರಗಳನ್ನು ಹೇಳುವ ಪ್ರಕರಣದಲ್ಲಿ ಬರದಿರುವ ನಿರ್ಣಯ ಶ್ಲೋಕದಿಂದಲೇ ಸಿದ್ಧಾಂತವಾಗುವುದು. ಮನ್ಮಥನು ತಪಸ್ಸನ್ನು ಮಾಡಿ ಚಕ್ರತ್ವವನ್ನು ಹೊಂದಿದನು. ಅವನ ಮಗನಾದ ಅನಿ ರುದ್ಧನು ಶಂಖನಾದನು .ಅವರಿಬ್ಬರೆ ಭರತ ಶತೃಘ್ನರಾಗಿ ಜನಿಸಿದರೆಂದು ಹೇಳಿರುವದರಿಂದ ಶಂಖಾತ್ಮಕನಾದ ಅನಿರುದ್ಧನೇ ಶತೃಘ್ನನೆಂದು ಸ್ಪಷ್ಟ ಮಾಡಿದಂತಾಯಿತು, ಅನಿರುದ್ಧನಲ್ಲಿ ಅನಿರುದ್ಧನಾಮಕ ಪರಮಾತ್ಮನ ಅಂಶ ವಿರುವುದು ಅಂದಮೇಲೆ ಅದೇ ಅನಿರುದ್ಧನೇ ಶತೃಘ್ನನಾದುದರಿಂದ ಶತ್ರು ಘ್ನನಲ್ಲೂ ಅನಿರುದ್ಧನಾಮಕ ಪರಮಾತ್ಮನ ಅಂಶವಿರುವುದೆಂದು ಬೇರೆ ಹೇಳ ಬೇಕಾಗಿಲ್ಲ ಸ್ವತಃ ಸಿದ್ಧವಾಯಿತು. ಮನ್ಮಥನ ಹೆಂಡತಿಯಾದ ರತೀದೇ ವಿಯು ರುಗ್ಮಿಣಿಯ ಅಣ್ಣನಾದ ರುಗ್ಮಿಯ ಮಗಳಾಗಿ ಜನಿಸಿ ಪ್ರದ್ಯುಮ್ನನ ಹೆಂಡತಿಯಾದಳು. ಮತ್ತೊಂದು ರೂಪವು ದುರ್ಯೋಧನನ ಮಗಳಾದ ಲಕ್ಷ ಣಾದೇವಿಯೆಂದು, ನಿರ್ಣಯ ೧೯ನೆಯ ಅಧ್ಯಾಯದಲ್ಲಿ ''ತಸ್ಯಾಂಸುತಂ ತ್ವಜನಯತ್ಪುರುಆಸಯೋಕ್ಷಃ ಕನ್ಯಾಂಪುರಾಪ್ರಿಯತಮಾಂಚಷಡಾನನಸ್ಯ'' ಪೂರ್ವದಲ್ಲಿ ವಾಲಿಯ ಹೆಂಡತಿಯಾದ ಅಲಕ್ಷ್ಮಿಯು ಕಾಶೀರಾಜನ ಮಗ ಳಾಗಿ ಹುಟ್ಟಿದ್ದಳು. ಆಕೆಯನ್ನು ದುರ್ಯೋಧನನು ಮದುವೆಮಾಡಿಕೊಂಡು ಅವಳಲ್ಲಿ ಪೂರ್ವದಲ್ಲಿ ರಾವಣನ ಮಗನಾದ ಅಕ್ಷಕುಮಾರನನ್ನೆ ಲಕ್ಷಣನೆಂಬ ಹೆಸರುಳ್ಳ ಮಗನನ್ನಾಗಿ ಪಡೆದನು. ಮತ್ತೊಬ್ಬ ಹೆಣ್ಣುಮಗಳು ಹುಟ್ಟಿದಳು.

ಆಕೆಯ ಹೆಸರು ಲಕ್ಷಣೆ. ಆಕೆಯು ಪೂರ್ವದಲ್ಲಿ ಷಣ್ಮುಖನ ಪ್ರಿಯತಮಳಾದ ಹೆಂಡತಿಯು, ಷಣ್ಮುಖನು ಮನ್ಮಥಾವತಾರನೆಂದು ಪೂರ್ವದಲ್ಲಿ ಹೇಳಲ್ಪಟ್ಟದೆ. ಷಣ್ಮುಖನೇ ಮನ್ಮಥನೆಂಬ ವಿಷಯದಲ್ಲಿ ಮತ್ತೊಂದು ಆಧಾರ ಮಹಾಭಾರತ ತಾತ್ಪರ್ಯ ನಿರ್ಣಯದ ೨೨ನೆಯ ಅಧ್ಯಾಯದಲ್ಲಿ, ‘‘ದುರ್ಯೋಧನಸ್ಯಾಸಪುತ್ರೀರತಿರ್ಯಾ ಪೂರ್ವಂ ನಾಮ್ನಾ ಲಕ್ಷಣಾಕಾಂತರೂಪಾ ॥ ಸ್ವಯಂವರಸ್ಥಾಂತಾಂಬಲ್ಯೈನೈವಸಾಂಬೋ ಜಗ್ರಾಹಸಾಚೈನಮಾಸಾಸುರಕ್ತಾ ॥೪೧॥ ’’ ದುರ್ಯೋಧನನಿಗೆ ಮಗಳಾದ ಲಕ್ಷಣಾ ಎಂಬಾಕೆಯು ಪೂರ್ವದಲ್ಲಿ ರತೀದೇವಿಯು- ಆಕೆಯನ್ನು ಸ್ವಯಂವರದಲ್ಲಿಟ್ಟಿರುವಾಗ ಜಾಂಬವತೀ ಕುಮಾರನಾದ ಸಾಂಬನು ಬಲಾತ್ಕಾರದಿಂದ ಅಪಹರಿಸಿದನು. ಆ ಲಕ್ಷಣೆಯೂ ಇವನಲ್ಲಿ ಅನುರಕ್ತಳಾಗಿದ್ದಳು, ಎಂದು ಹೇಳಿರುವರು. ಈ ವಾಕ್ಯದಿಂದ ಮೇಲಿನ ಪ್ರಮಾಣದಲ್ಲಿ ಷಣ್ಮುಖನ ಹೆಂಡತಿಯು ಲಕ್ಷಣೆ ಎಂದು ಹೇಳಿದರು. ಈ ಶ್ಲೋಕದಲ್ಲಿ ಆಕೆಯು ರತೀದೇವಿಯು ಎಂದು ಹೇಳಿದರು. ಷಣ್ಮುಖನವತಾರ ಸಾಂಬನೆಂದು ಮೇಲೆ ಹೇಳಿರುವರು, ಆತನು ಈ ಲಕ್ಷಣೆ ಎಂಬ ರತಿಯನ್ನು ವಿವಾಹ ಮಾಡಿಕೊಂಡನೆಂದಮೇಲೆ ಷಣ್ಮುಖನೇ ಮನ್ಮಥನೆಂತಲೂ, ಅವನೇ ಸಾಂಬ, ಮತ್ತು ಪ್ರದ್ಯುಮ್ನ ಈ ಎರಡು ರೂಪದಿಂದ ಹುಟ್ಟಿ, ರತೀಗೆ ಮೊದಲನೆಯ ಅವತಾರವಾದ ರುಗ್ಮಿ ಮಗಳಾದ ರುಗ್ಮವತಿಯನ್ನು ಪ್ರದ್ಯುಮ್ನನೂ, ರತಿಗೆ ಎರಡನೆಯ ರೂಪವಾದ ಲಕ್ಷಣೆಯನ್ನು ಸಾಂಬನೂ ಮದುವೆ ಮಾಡಿಕೊಂಡರೆಂಬ ಭಾವ. ಶಚೀದೇವಿಯ ಅವತಾರವನ್ನು ಹೇಳುತ್ತಾರೆ:—ಪಾಂಡ್ಯದೇಶಾಧಿಪತಿಯಾದ ವೀರಸೇನನ ಮಗಳು ಚಿತ್ರಾಂಗದೆ ಎಂಬಾಕೆಯು ಶಚಿಯ ಅವತಾರವು. ಮಹಾಭಾರತ ತಾತ್ಪರ್ಯ ನಿರ್ಣಯದ ೨೦ನೆಯ ಅಧ್ಯಾಯದಲ್ಲಿ ‘‘ಸಂವತ್ಸರಾಂತೇ ಫಲ್ಗುನಸ್ಯಾನುರೂಪಾಚಿತ್ರಾಂಗದಾ ವೀರಸೇನೇನತೋಷಾತ್ ॥ ಸವೀರಸೇನಸ್ತ್ವಷ್ಟ್ರರಂಶೋಯಮಸ್ಯಾಪ್ಯಾವೇಶೆಯುಕ್ ಸಾಚಕನಾಶಚೀಹ॥೧೬೧॥ ಅರ್ಜುನನು ತೀರ್ಥಯಾತ್ರಾ ಪ್ರಸಂಗದಿಂದ ಪಾಂಡ್ಯದೇಶಕ್ಕೆ ಬಂದನು. ಆಗ ಅರ್ಜುನನ ತೀರ್ಥಯಾತ್ರೆಗೆ ಸಂವತ್ಸರದ ಕಡೆಯಾಗಿದ್ದಿತು. ಪಾಂಡ್ಯದೇಶಾಧಿಪತಿಯಾದ ವೀರಸೇನರಾಜನು ಅರ್ಜುನನಿಗೆ ಅನುರೂಪಳಾದ ತನ್ನ ಮಗಳಾದ ಚಿತ್ರಾಂಗದೆಯನ್ನು ಸಂತೋಷದಿಂದ ಮದುವೆಯನ್ನು

ಮಾಡಿಕೊಟ್ಟನು. ಆ ವೀರಸೇನನು ತ್ವಷ್ಟ್ಟ ಎಂಬ ಸೂರ್ಯನ ಅಂಶವುಳ್ಳವನು. ಮತ್ತು ಯಮನಾವೇಶವು ಉಂಟು. ಅವನ ಮಗಳಾದ ಚಿತ್ರಾಂಗದೆಯು ಇಂದ್ರನ ಹೆಂಡತಿಯಾದ ಶಚೀದೇವಿಯು. ಅವರೆ ಈಕೆಯನ್ನು ಮದುವೆಯಾದಮೇಲೆ ಆಕೆಯಲ್ಲಿ ಮಗನಾದ ಬಭ್ರುವಾಹನನು ಹುಟ್ಟುವವರೆಗೂ ಅಲ್ಲಿದ್ದು ಆಕೆಯನ್ನು ಬಿಟ್ಟು ಹೊರಟುಹೋದನು. ಆದುದರಿಂದ ಚಿತ್ರಾಂಗದೆಗೂ ಅರ್ಜುನನಿಗೂ ಒಂದು ಕಡೆ ವಾಸವಿರಲಿಲ್ಲ. ಹಾಗಿರಲು ಕಾರಣವೇನೆಂದರೆ:—ನಿರ್ಣಯ "ತಾರಾದೇಹೇಸೂರ್ಯಜಸಾಂಗಸಂಗಾತ್ಸ್ವರ್ಗಂನಾಯಾದಂತರಿಕ್ಷಾದಿಹಾಸೀತ್ ॥ ತೇನೈವಹೇತೋರ್ನಾತಿಸಾಮೀಪ್ಯಮಾಸೀತ್" ಪೂರ್ವದಲ್ಲಿ ವಾಲಿಯ ಹೆಂಡತಿಯಾದ ತಾರೆಯಾಗಿದ್ದಾಗ ಸೂರ್ಯ ಪುತ್ರನಾದ ಸುಗ್ರೀವನ ಅಂಗಸಂಗವು ಈಕೆಗೆ ಆದ ದೋಷದಿಂದ ಆಗ ಈಕೆಯು ಸ್ವರ್ಗಕ್ಕೆ ಹೋಗದೆ ಅಂತರಿಕ್ಷ ಲೋಕದಲ್ಲಿದ್ದು ಇಲ್ಲಿ ಚಿತ್ರಾಂಗದೆಯಾಗಿ ಹುಟ್ಟಿದಳು. ಆ ಕಾರಣದಿಂದಲೇ ಅರ್ಜುನನಿಗೂ ಚಿತ್ರಾಂಗದೆಗೂ ಅತಿ ಸಾಮೀಪ್ಯವಿರಲಿಲ್ಲವೆಂದು ಹೇಳಿರುವರು. ವಾಲಿಯೆಂಬ ಕಪಿಯು ಇಂದ್ರಾವತಾರದವನು; ಅವನ ಹೆಂಡತಿಯು ತಾರೆ. ಆಕೆಯು ಶಚೀದೇವಿಯೆಂದು ಮೇಲಿನ ಪ್ರಮಾಣದಿಂದಲೆ ಸಿದ್ಧವಾಗುವುದು. ಹೀಗೆ ಶಚೀದೇವಿಗೆ ಎರಡು ರೂಪಗಳೆಂದು ತಾತ್ಪರ್ಯ.

ಬೃಹಸ್ಪತ್ಯಾಚಾರ್ಯರ ಅವತಾರಗಳನ್ನು ಹೇಳುತ್ತಾರೆ:—

**ತಾರನಾಮಕ ತ್ರೇತೆಯೊಳುಸೀ**
**ತಾರಮಣನಾರಾಧಿಸಿದನು ಸ**
**ಮೀರಯುಕ್ತೋದ್ಧವನುಕೃಷ್ಣಗೆಪ್ರಿಯನೆನಿಸಿದನು ॥**
**ವಾರಿಜಾಸನಯುಕ್ತದ್ರೋಣನು**
**ಮೂರು ಇಳೆಯೊಳುಬೃಹಸ್ಪತಿಗಳ**
**ತಾರವೆಂಬರು ಮಹಾಭಾರತ ತಾತ್ಪರ್ಯದೊಳಗೆ ॥೧೭॥**

ಪದ್ಯಾರ್ಥ:—ತಾರನಾಮಕ=ತಾರನೆಂಬ ಕಪಿಯು, ತ್ರೇತೆಯೊಳು=ತ್ರೇತಾಯುಗದಲ್ಲಿ, ಸೀತಾರಮಣನ=ಸೀತಾಪತಿಯಾದ ಶ್ರೀರಾಮದೇವರನ್ನು, ಆರಾಧಿಸಿದನು. ಸಮೀರಯುಕ್ತ=ವಾಯುದೇವರ ಆವೇಶದಿಂದ ಕೂಡಿದ್ದ ಉದ್ಧವನು, ಕೃಷ್ಣಗೆ ಪ್ರಿಯನೆನಿಸಿದನು. ವಾರಿಜಾಸನಯು

ಕ್ತ=ಬ್ರಹ್ಮಾವೇಶದಿಂದ ಕೂಡಿದ, ದ್ರೋಣನು=ದ್ರೋಣಾಚಾರ್ಯರು. ಇಳೆಯೊಳು=(ಹೀಗೆ) ಈ ಭೂಮಿಯಲ್ಲಿ, ಬೃಹಸ್ಪತಿಗೆ ಮೂರು ಅವತಾರಗಳೆಂದು, ಮಹಾಭಾರತ ತಾತ್ಪರ್ಯದೊಳಗೆ, ಎಂಬರು=ಹೇಳಿರುವರು.

ತಾತ್ಪರ್ಯ:— ಬೃಹಸ್ಪತ್ಯಾಚಾರ್ಯರಿಗೆ ಮೂರು ಅವತಾರಗಳು. ತ್ರೇತಾಯುಗದಲ್ಲಿ ರಾಮದೇವರ ಸೇವಾರ್ಥವಾಗಿ ತಾರನೆಂಬ ಕಪಿಯಾಗಿ ಅವತರಿಸಿರುವರು, ಮಹಾಭಾರತ ನಿರ್ಣಯ ಅಧ್ಯಾಯ ಮೂರರಲ್ಲಿ "ಬೃಹಸ್ಪತಿಸ್ತಾರ ಉತೋ ಶಚೀ ಚ ಶಕ್ರಸ್ಯ ಭಾರ್ಯೈವ ಬಭೂವ ತಾರಾ॥೭೦॥ ಬೃಹಸ್ಪತಿರ್ಬ್ರಹ್ಮಸುತೋಽಪಿ ಪೂರ್ವಂ ಸಹೈವ ಶಚ್ಯಾ ಮನಸೋಽಭಿಜಾತಃ। ಬ್ರಹ್ಮೋದ್ಭವಸ್ಯಾಂಗಿರಸಃ ಸುತೋಽಭೂನ್ಮಾರೀಚಜಸ್ಯೈವ ಶಚೀ ಪುಲೋಮ್ನಃ ॥೭೧॥ ಸ ಏವ ಶಚ್ಯಾ ಸಹ ವಾನರೋಽಭೂತ್ಸ್ವಸಂಭವೋ ದೇವಗುರುರ್ಬೃಹಸ್ಪತಿಃ ॥" ಬೃಹಸ್ಪತ್ಯಾಚಾರ್ಯರು ತಾರನೆಂತಲೂ, ಪೂರ್ವದಲ್ಲಿ ಇಂದ್ರನ ಹೆಂಡತಿಯಾದ ಶಚೀದೇವಿಯು ತಾರೆಯೆಂತಲೂ ಅಣ್ಣ ತಂಗಿಯರಾಗಿ ಏಕೋದರದಲ್ಲಿ ಜನಿಸಿದರು. ಈ ತಾರೆಯೇ ಇಂದ್ರಾವತಾರನಾದ ವಾಲಿಯ ಹೆಂಡತಿಯು. ಬೃಹಸ್ಪತ್ಯಾಚಾರ್ಯರು ಪೂರ್ವದಲ್ಲಿ ಬ್ರಹ್ಮದೇವರ ಮಕ್ಕಳಾದರೂ ಬ್ರಹ್ಮದೇವರಮನಸ್ಸಿನಿಂದ ಶಚೀದೇವಿಯಿಂದ ಸಹಿತರಾಗಿಯೇ ಜನಿಸಿದರು. ಅದ್ದರಿಂದ ಆಗಲೂ ಅಣ್ಣತಂಗಿಯರೇ ಆಗಿದ್ದರು. ಮಧ್ಯದಲ್ಲಿ ಒಂದು ಜನ್ಮ ಭಿನ್ನಶರೀರರಾಗಿದ್ದರು. ಬ್ರಹ್ಮದೇವರ ಮಕ್ಕಳಾದ ಆಂಗಿರಸ ಎಂಬ ಋಷಿಗಳ ದೆಸೆಯಿಂದ ಬೃಹಸ್ಪತ್ಯಾಚಾರ್ಯರು ಹುಟ್ಟಿದರು. ಮರೀಚಿಋಷಿ ಮಕ್ಕಳಾದ ಕಶ್ಯಪರ ದೆಸೆಯಿಂದ ದನೂದೇವಿಯಲ್ಲಿ ಹುಟ್ಟಿದ ಪುಲೋಮನೆಂಬ ದಾನವನ ಮಗಳಾಗಿ ಶಚೀದೇವಿಯು ಹುಟ್ಟಿದಳು, ಆದ್ದರಿಂದಲೇ ಪೌಲೋಮಿಯೆಂದು ಶಚೀದೇವಿಗೆ ಹೆಸರು ಬರಲು ಕಾರಣವು. ಈಗ ಅದೇ ಬೃಹಸ್ಪತ್ಯಾಚಾರ್ಯರು ಶಚೀದೇವಿಯಿಂದೊಡಗೂಡಿ ವಾನರ ರೂಪಿಗಳಾಗಿ ಜನಿಸಿದರು. ಆದ್ದರಿಂದ ದೇವಗುರುವಾದ ಬೃಹಸ್ಪತ್ಯಾಚಾರ್ಯರೇ ತಾರನೆಂಬ ಕಪಿಯಾಗಿ ಜನಿಸಿದರೇ ಹೊರತು ಬೃಹಸ್ಪತ್ಯಾಚಾರ್ಯರ ಮಗ ತಾರನೆಂಬ ಕಪಿಯೆಂದರ್ಥವಲ್ಲವೆಂಬ ಭಾವ. ವಾಯುದೇವರ ಆವೇಶದಿಂದ ಕೂಡಿ ಬೃಹಸ್ಪತ್ಯಾಚಾರ್ಯರೇ ದ್ವಾಪರಾಂತ್ಯದಲ್ಲಿ ಶ್ರೀಕೃಷ್ಣನ ಸೇವಾರ್ಥವಾಗಿ ಜನಿಸಿದರು, ಮಹಾಭಾರತ ತಾತ್ಪರ್ಯನಿರ್ಣಯದ ೧೨ನೆಯ ಅಧ್ಯಾಯದಲ್ಲಿ, "ಬೃಹಸ್ಪತಿಃ ಪೂರ್ವಮಭೂದ್ಧರೇಃ

ಪದಂ ಸಂಸೇವಿತುಂ ಪವನಾವೇಶಯುಕ್ತಃ ॥ ೧೦೦ ॥ ಸ ಉದ್ಧವೋ ನಾಮ ಯದುಪ್ರವೀರಾಜ್ಞಾತೋ ವಿದ್ವಾನುಪಗವನಾಮಧೇಯಾತ್ ॥ ದ್ರೋಣಾತ್ಮಕಂ ನಾತಿತರಾಂ ಸ್ವಸೇವಕಂ ಕುರ್ಯಾದ್ಧರಿರ್ಮಾಮಿತಿ ಭೂಯ ಏವ ॥ ೧೦೧ ॥ ಸ ಉದ್ಧವಾತ್ಮಾವತತಾರ ಯಾದವೇಷ್ವಾಸೇವನಾರ್ಥಂ ಪುರುಷೋತ್ತಮಸ್ಯ ॥ "ಬೃಹಸ್ಪತ್ಯಾಚಾರ್ಯರು ಪರಮಾತ್ಮನ ಸೇವೆಯನ್ನು ಮಾಡುವುದಕ್ಕಾಗಿ ದ್ರೋಣಾಚಾರ್ಯರಾಗಿ ಜನಿಸಿದ್ದರೂ ಅಷ್ಟಕ್ಕೆ ತೃಪ್ತರಾಗದೆ ವಾಯುದೇವರ ಆವೇಶದಿಂದ ಕೂಡಿ ಯಾದವಶ್ರೇಷ್ಠನಾದ ಉಪಗವನೆಂಬುವನ ದೆಶೆಯಿಂದ ಉದ್ಧವನೆಂಬ ಹೆಸರಿನಿಂದ ಜನಿಸಿದರು. ಅದೇಕೆಂದರೆ:--ದ್ರೋಣರೂಪಿಯಾದ ತನ್ನನ್ನು ಶ್ರೀಹರಿಯು ಅತ್ಯಂತ ಪ್ರೀತ್ಯಾಸ್ಪದನಾದ ಸೇವಕನನ್ನಾಗಿ ಮಾಡಿಕೊಳ್ಳಲಾರನೆಂದು ಯೋಚಿಸಿ ಶ್ರೀಕೃಷ್ಣನನ್ನು ಚೆನ್ನಾಗಿ ಸೇವೆ ಮಾಡಬೇಕೆಂಬ ಇಚ್ಛೆಯಿಂದ ಉದ್ಧವ ಸ್ವರೂಪದಿಂದ ಯಾದವರಲ್ಲಿ ಜನಿಸಿದರು. ಎಂದು ಹೇಳಿರುವರು. ಬ್ರಹ್ಮಾವೇಶದಿಂದ ಕೂಡಿ ದ್ರೋಣಾಚಾರ್ಯರೆಂಬ ಹೆಸರಿನಿಂದ ಇದೇ ಬೃಹಸ್ಪತ್ಯಾಚಾರ್ಯರು ಉದ್ಧವನಾಗಿ ಜನಿಸುವುದಕ್ಕೆ ಮುಂಚಿತವಾಗಿ ಜನಿಸಿರುವರು. ಮೊದಲನೆಯ ಅವತಾರವು ತಾರನೆಂಬ ಕಪಿಯು, ಎರಡನೆಯದು ಉದ್ಧವನು, ಮೂರನೆಯದು ದ್ರೋಣನೆಂದು. ಉದ್ಧವನ ಅವತಾರ ವಿಷಯದಲ್ಲಿ ಕೊಟ್ಟ ಪ್ರಮಾಣದಿಂದ ಸಿದ್ಧವಾಗುವುದು. ದ್ರೋಣರೂಪಿಯಾದ ನನ್ನನ್ನು ಶ್ರೀಕೃಷ್ಣನು ಅತ್ಯಂತ ಪ್ರಿಯಸೇವಕನನ್ನಾಗಿ ಮಾಡಿಕೊಳ್ಳುವುದಿಲ್ಲವೆಂದು ಯೋಚಿಸಿ ಯಾದವರಲ್ಲಿ ಉದ್ಧವನಾಗಿ ಜನಿಸಿದನೆಂಬ ಪ್ರಮಾಣದಿಂದಲೂ, ಉದ್ಧವನೂ, ದ್ರೋಣಾಚಾರ್ಯರೂ ಸಮಕಾಲೀನರು; ಅದರಲ್ಲಿ ದ್ರೋಣಾಚಾರ್ಯರ ಉತ್ಪತ್ತಿ ಮೊದಲು ಆದುದೆಂತಲೂ, ತದನಂತರ ಉದ್ಧವನ ಉತ್ಪತ್ತಿ ಆದುದೆಂತಲೂ ನಿರ್ಣಯಾದಿವಾಕ್ಯಗಳಿಂದ ಸ್ಪಷ್ಟವಾಗುವುದು. ಆದರೆ ದಾಸರಾಯರು ಏಕೆ ವ್ಯತ್ಯಾಸವಾಗಿ ಮೊದಲು ತಾರ, ಎರಡನೆಯದು ಉದ್ಧವ, ಆಮೇಲೆ ದ್ರೋಣನೆಂದು ಹೇಳಿದರೆಂದರೆ, ಅವರ ಅಭಿಪ್ರಾಯ ಬೃಹಸ್ಪತಿಗೆ ಅವತಾರ ಮೂರೆಂದು ಹೇಳಬೇಕಾಗಿ ಹೇಳಿದರೆ ಹೊರತು ಅವತಾರ ಕ್ರಮ ಹೇಳಬೇಕಾಗಿರಲಿಲ್ಲ. ಆದ್ದರಿಂದ ವಿರೋಧವಿಲ್ಲವೆಂಬ ತಾತ್ಪರ್ಯ. ದ್ರೋಣಾಚಾರ್ಯರು ಬೃಹಸ್ಪತಿ ಎಂಬ ವಿಷಯದಲ್ಲಿ ಪ್ರಮಾಣ:—ನಿರ್ಣಯ ೧೧ನೆಯ ಅಧ್ಯಾ

ಯುದಲ್ಲಿ "ಯದೈವ ಜಾತಃ ಸ ಕೃಪಸ್ತದೈವ ಬೃಹಸ್ಪತೇಃ ಸೂನುರಗಾಚ್ಚ ಗಂಗಾಂ ॥ ಸ್ನಾತುಂ ಘೃತಾಚೀಂ ಸ ದದರ್ಶ ತತ್ರ ಶ್ಲಥದ್ದುಕೂಲಾಂ ಸುರವರ್ಯಕಾಮಿನೀಂ ॥೬೪॥ ತದ್ದರ್ಶನಾತ್ಸ್ಕನ್ನಮಥೇಂದ್ರಿಯಂ ಸ ದ್ರೋಣೇ ದಧಾರಾಶು ತತೋಽಭವತ್ಸ್ವಯಂ ॥ ಅಂಭೋಜಜಾವೇಶಯುತೋ ಬೃಹಸ್ಪತಿಃ ಕರ್ತುಂ ಹರೇಃ ಕರ್ಮಭುವೋ ಭರೋದ್ಧೃತೌ ॥ ೬೫ ॥ ದ್ರೋಣೇತಿ ನಾಮಾಸ್ಯ ಚಕಾರ ತಾತೋ" ಯಾವಾಗ ಕೃಪಾಚಾರ್ಯರು ಭೂಮಿಯಲ್ಲಿ ಜನಿಸಿದರೋ ಅದೇ ಕಾಲದಲ್ಲಿ ಬೃಹಸ್ಪತ್ಯಾಚಾರ್ಯರ ಮಕ್ಕಳಾದ ಭರದ್ವಾಜರು ಸ್ನಾನ ಮಾಡುವುದಕ್ಕಾಗಿ ಗಂಗೆಗೆ ಬಂದರು. ಆ ಸಮಯದಲ್ಲಿ ಅಲ್ಲಿ ಮುಂಚಿತವಾಗಿ ಬಂದಿದ್ದ ದೇವತಾಕಾಮಿನಿಯಾದ ಘೃತಾಚಿಯೆಂಬ ಅಪ್ಸರಸ್ತ್ರೀಯನ್ನು ನೋಡಿದರು. ಆಕೆಯು ಉಟ್ಟ ವಸ್ತ್ರವು ಸ್ಥಾನದಿಂದ ಜಿರಗಿ ಕೆಳಗೆ ಬಂದು ಬಿಟ್ಟಿದ್ದಿತು. ಅಂತಹ ಸ್ತ್ರೀಯನ್ನು ನೋಡಿದ ಕೂಡಲೇ ಇವರಿಗೆ ಇಂದ್ರಿಯವು ಸ್ಖಲನವಾಯಿತು. ಅವರು ಅಮೋಘವೀರ್ಯರಾದುದರಿಂದ ಆ ವೀರ್ಯವನ್ನು ತಮ್ಮ ಕೈಯಲ್ಲಿದ್ದ ದ್ರೋಣ ಪಾತ್ರೆಯಲ್ಲಿ ಹಿಡಿದರು. ಆ ಪಾತ್ರೆಯ ದೆಶೆಯಿಂದ ಸ್ವಯಂ ಬೃಹಸ್ಪತ್ಯಾಚಾರ್ಯರು, ಬ್ರಹ್ಮದೇವರ ಆವೇಶದಿಂದ ಕೂಡಿ ಶ್ರೀ ಪರಮಾತ್ಮನ ಭೂಭಾರಹರಣರೂಪವಾದ ಕೃತ್ಯಕ್ಕೆ ಸಹಾಯಕರಾಗಬೇಕೆಂಬ ಉದ್ದೇಶದಿಂದ ಜನಿಸಿದರು. ಅವರ ತಂದೆಯಾದ ಭರದ್ವಾಜರು ಇವರಿಗೆ ದ್ರೋಣ ಎಂದು ನಾಮಕರ್ಣವನ್ನು ಮಾಡಿದರು ಎಂದು ಹೇಳಿರುವರು. ಈ ವಾಕ್ಯಗಳನ್ನು ಉದ್ದೇಶಿಸಿ ದಾಸಾರ್ಯರು ಈ ಅವತಾರ ಆವೇಶಗಳನ್ನು ಮಹಾಭಾರತ ತಾತ್ಪರ್ಯದೊಳಗೆ ಅಂದರೆ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುವರೆಂದು ಹೇಳಿರುವರು. ಆದ್ದರಿಂದ ಆ ನಿರ್ಣಯದ ಮೂಲ ಶ್ಲೋಕಗಳು ಇಲ್ಲಿ ಅರ್ಥಸಹಿತವಾಗಿ ಬರೆಯಲ್ಪಟ್ಟಿವೆ.

ಅವತಾರಿಕೆ:—ಪ್ರವಹವಾಯು, ಯಮ, ಮನುಪತ್ನಿಯಾದ ಶತರೂಪೆ, ಚಂದ್ರ, ಸೂರ್ಯ ಇವರ ತಾರತಮ್ಯವನ್ನು ಹೇಳುತ್ತಾರೆ:—

**ಮನುಮುಖಾದ್ಯರಿಗಿಂದ ಪ್ರವಹಾ**
**ಗುಣವು ಪಂಚಕ ನೀಚನೆನಿಸುವ**
**ಇನಶಶಾಂಕರು ಧರ್ಮಮಾನವಿಯೆರಡು ಗುಣದಿಂದ ॥**
**ಕನಿಯರೆನಿಪರು ಪ್ರವಹಗಿಂದಲಿ**
**ದಿನಪಶಶಿಯಮಧರ್ಮರೂಪಗ.**
**ಳನುದಿನದಿ ಚಿಂತಿಪುದು ಸಂತರು ಸರ್ವಕಾಲದಲಿ ॥ ೧೮ ॥**

ಪದ್ಯಾರ್ಥ:—ಮನುಮುಖಾದ್ಯರಿಗಿಂದ=ಸ್ವಾಯಂಭುವ ಮನು ಮೊದಲಾದ ೬ ಮಂದಿಯರಕಿಂತಲೂ, ಪ್ರವಹ=ಪ್ರವಹವಾಯು, ಪಂಚಕಗುಣವು=೫ ಗುಣಗಳಿಂದ, ನೀಚನೆನಿಸುವ; ಇನ=ಸೂರ್ಯ, ಶಶಾಂಕರು=ಚಂದ್ರ ಇವರಿಬ್ಬರು, ಧರ್ಮ=ಯಮಧರ್ಮನು, ಮಾನವಿ=ಮನುವಿನ ಹೆಂಡತಿಯಾದ ಶತರೂಪೆ ಇವರೆಲ್ಲರೂ, ಪ್ರವಹಗಿಂದಲಿ=ಪ್ರವಹವಾಯುವಿನಕಿಂತಲೂ, ಎರಡು ಗುಣದಿಂದ, ಕನಿಯರೆನಿಪರು=ಚಿಕ್ಕವರೆನಿಪರು ನೀಚರೆನಿಸುವರು. ದಿನಪ=ಸೂರ್ಯ, ಶಶಿ=ಚಂದ್ರ, ಯಮಧರ್ಮರೂಪಗಳನು=ಇವರ ರೂಪಗಳನ್ನು, ಸಂತರು=ಸಜ್ಜನರು, ಅನುದಿನದಿ=ಪ್ರತಿದಿವಸದಲ್ಲೂ, ಸರ್ವಕಾಲದಲಿ=ಹಗಲು, ರಾತ್ರಿ, ಸಂಧ್ಯಾಕಾಲ ಮೊದಲಾದ ಎಲ್ಲಾ ಕಾಲದಲ್ಲೂ ಚಿಂತಿಪುದು=ಸ್ಮರಿಸತಕ್ಕದ್ದು.

ವಿಶೇಷ ಸೂಚನ:—ಈ ಪದ್ಯವಲ್ಲಿ ಶ್ರೀ ಸಂಕರ್ಷಣ ಒಡೆಯರ ವ್ಯಾಖ್ಯಾನ ಪುಸ್ತಕದಲ್ಲೂ ಉಡುಪಿಯ ಛಾಪಾ ಮೂಲ ಪುಸ್ತಕದಲ್ಲೂ ಸಹ "ಮನುಮುಖಾದ್ಯರಗಿಂದ ಪ್ರವಹಾ ಗುಣಗಳ ದ್ವಯ ನೀಚನೆನಿಸುವ" ಎಂದು ಪಾಠವಿರುವುದು. ಕಮಲಾಪತಿದಾಸರ ವ್ಯಾಖ್ಯಾನ ಪುಸ್ತಕದ ಮೂಲವಲ್ಲಿ "ಮನುಮುಖಾದ್ಯರಗಿಂದ ಪ್ರವಹಾ ಗುಣವು ಪಂಚಕ ನೀಚನೆನಿಸುವ" ಎಂದು ಪಾಠವಿರುವುದು. ಈ ಪಾಠದ್ವಯದಲ್ಲಿ ಕಮಲಾಪತಿದಾಸರ ಪುಸ್ತಕಪಾಠವು ಸಾಧುವೆಂದು ಕಾಣುತ್ತದೆ. ಹೇಗೆಂದರೆ, ಗುಣ ತಾರತಮ್ಯ ಸಂಧಿಯೆಂಬ ೨೦ನೆಯ ಸಂಧಿ ೯ನೆಯ ಪದ್ಯದಲ್ಲಿ "ಮಾರಜಾದ್ಯರಿಗೈದ ಗುಣದಿಂದಧಮಪ್ರವಹಾಖ್ಯ" ಎಂದು ಎಲ್ಲಾ ಪುಸ್ತಕಗಳಲ್ಲೂ ಒಂದೇ ಪಾಠವಾಗಿರುವುದು. ಹೀಗೆ ದಾಸರಾಯರು ಮೇಲಿನ ಸಂಧಿಯಲ್ಲಿ, ಮಾರಜಾದ್ಯರು ಅಂದರೆ, ಅನಿರುದ್ಧ, ರತಿ, ಮನು, ಗುರು, ದಕ್ಷ, ಶಚಿ ಹೀಗೆ ಕಾಮಪುತ್ರನಾದ ಅನಿರುದ್ಧ ಮೊದಲಾದ ೬ ಮಂದಿಯರಕಿಂತಲೂ ೫ ಗುಣ ಕಮ್ಮಿ ಪ್ರವಹವಾಯು ಎಂದು ಹೇಳಿ, ಈ ಸಂಧಿಯಲ್ಲಿ "ಮನುಮುಖಾದ್ಯರಿಗಿಂದಪ್ರವಹಗುಣಗಳ ದ್ವಯನೀಚನೆನಿಸುವ" ಮನು, ಶಚಿ, ಮೊದಲಾದ ೬ ಮಂದಿಯರಕಿಂತಲೂ ಎರಡು ಗುಣಗಳಿಂದ ಕಡಿಮೆಯೆಂದು ಹೇಳಿದರೆ, ದಾಸರಾಯರ ಸ್ವೋಕ್ತಿವಿರೋಧ ಅಂದರೆ ದಾಸರಾಯರು ಹೇಳಿದ ಮೇಲಿನ ಮಾತಿಗೂ, ಕೆಳಗಿನ ಮಾತಿಗೂ ಪರಸ್ಪರ ವಿರೋಧವಾಗುತ್ತದೆ, ಆದ್ದರಿಂದ 'ಗುಣಗಳದ್ವಯ' ಎಂಬ

ಕಡೆ ಗುಣವು ಪಂಚಕವೆಂದು ಇರುವ ವಾರವನ್ನು ಅಂಗೀಕರಿಸುವುದು ನ್ಯಾಯವೆಂದು ಕಾಣುತ್ತದೆ.

ತಾತ್ಪರ್ಯ.—ಸ್ವಾಯಂಭುವಮನು, ಬೃಹಸ್ಪತ್ಯಾಚಾರ್ಯರು, ಕಾಮಪುತ್ರನಾದ ಅನಿರುದ್ಧ, ರತಿ, ಶಚಿ, ದಕ್ಷ ಇವರಾದರು ಮುಂದಿಯುರಕಿಂತಲೂ ಏಕೋನಪಂಚಾಶತ್ ಮರುದ್ಗಣಕ್ಕೆ ಸೇರಿದ ಪ್ರವಾಹವಾಯುವು ೫ ಗುಣಗಳಿಂದ ಕಮ್ಮಿಯೆನಿಸುವನು. ಇವನಕಿಂತಲೂ ಚಂದ್ರ, ಸೂರ್ಯ, ಯಮ, ಶತರೂಪೆ (ಮನುಪತ್ನಿ) ಇವರುಗಳು ಎರಡು ಗುಣಗಳಿಂದ ಕಮ್ಮಿಯೆನಿಸುವರು. ಸೂರ್ಯ, ಚಂದ್ರ, ಯಮಧರ್ಮ ಇವರನ್ನು ನಿತ್ಯದಲ್ಲೂ ಸ್ಮರಿಸುತ್ತಿದ್ದರೆ ಯಮದೇವರ ಸ್ಮರಣೆಯಿಂದ ಪಾಪ ಪರಿಹಾರದ್ವಾರಾ ಯಮಬಾಧೆ ಕಮ್ಮಿಯಾಗುವುದು. ಸೂರ್ಯನ ಮಂತ್ರವನ್ನು ಜಪಾದಿಗಳನ್ನು ಮಾಡುವುದರಿಂದ ಸಕಲಾಭೀಷ್ಟಪ್ರದವೂ, ಸರ್ವರೋಗ ನಿವಾರಣೆಯೂ ಆಗುವುದಲ್ಲದೆ ಕಾಲಕ್ಕೆ ಮಳೆಯೂ ಬರುವುದು. ಚಂದ್ರನ ಸ್ಮರಣೆಯಿಂದ ಭೋಗಗಳನ್ನನುಭವಿಸುವರೆಂದು ಅಲ್ಲಲ್ಲಿ ಭಾಗವತಾದಿ ವಾಕ್ಯಗಳಿಂದ ಸಿದ್ಧವಾಗುವುದು.

ಅವತಾರಿಕೆ.—ಯಮಧರ್ಮ, ಸೂರ್ಯ, ಚಂದ್ರ ಇವರ ಅವತಾರಗಳನ್ನು ಹೇಳುತ್ತಾರೆ:—

**ಮರುತನಾವೇಶಯುತ ಧರ್ಮಜ**
**ಕರಡಿವಿದುರನು ಸತ್ಯಜಿತು ಯಿ**
**ರೆರಡು ಧರ್ಮನರೂಪ ಬ್ರಹ್ಮಾವಿಷ್ಟಸುಗ್ರೀವ ||**
**ಹರಿಯರೂಪಾವಿಷ್ಟಕರ್ಣನು**
**ತರಣಿಗೆರಡವತಾರಚಂದ್ರಮ**
**ಸುರಪನಾವೇಶಯುತನಂಗದನೆನಿಸಿಕೊಳುತಿಪ್ಪ ||೧೯||**

ಪದ್ಯಾರ್ಥ:—ಧರ್ಮನ=ಯಮಧರ್ಮನಿಗೆ, ಮರುತನಾವೇಶಯುತ=ವಾಯುದೇವ ಆವೇಶದಿಂದ ಕೂಡಿದ್ದ, ಧರ್ಮಜ=ಧರ್ಮರಾಜನವತಾರ ಒಂದು; ಕರಡಿ=ಜಾಂಬವಂತನೆಂಬ ರೂಪವು ಎರಡನೆಯದು. ವಿದುರ ಮೂರು; ಸತ್ಯಜಿತ್=ಮೂರನೆಯ ಮನ್ವಂತರದಲ್ಲಿ ಇಂದ್ರನಾಗಿದ್ದವನು ನಾಲ್ಕು ಹೀಗೆ ಈರೆರಡುರೂಪ=೪ ಅವತಾರಗಳು. ತರಣಿಗೆ=ಸೂರ್ಯನಿಗೆ, ಬ್ರಹ್ಮಾವಿಷ್ಟ=ಬ್ರಹ್ಮದೇವರ ಆವೇಶದಿಂದ ಕೂಡಿದ್ದ, ಸುಗ್ರೀವ=ಸುಗ್ರೀವ

ನೆಂಬ ಕಪಿರೂಪ ಒಂದು, ಹರಿಯ ರೂಪವಿಷ್ಟ ಕರ್ಣನು=ಪರಮಾತ್ಮನಾ ವೇಶದಿಂದ ಕೂಡಿದ ಕರ್ಣರೂಪ ಒಂದು; ಅಂತು ಎರಡವತಾರ=೨ಅವತಾ ರಗಳು. ಚಂದ್ರಮ=ಚಂದ್ರನು ಸುರಪನಾವೇಶಯುತನು=ಇಂದ್ರನಾವೇಶ ದಿಂದ ಕೂಡಿದ, ಅಂಗದನೆನಿಸಿಕೊಳುತಿಪ್ಪ.

ತಾತ್ಪರ್ಯ.—ಯಮಧರ್ಮನಿಗೆ ೪ ಅವತಾರಗಳು. ಕುಂತೀಪುತ್ರ ನಾದ ಧರ್ಮರಾಜನ ರೂಪ ಒಂದು. ಇವನಲ್ಲಿ ವಾಯುದೇವರ ಆವೇಶವಿ ರುವುದು. ಮಹಾಭಾರತ ತಾತ್ಪರ್ಯ ನಿರ್ಣಯದ ೧೨ ನೆಯ ಅಧ್ಯಾಯ ವಲ್ಲಿ "ಇತಿರಿತೇತಯಾಯಮಃ ಸಮಾಹುತೋಗಮದ್ರುತಂ||೩೨|| ತತಶ್ಚ ಸದ್ಯಏವಸಾಸುಷಾವ ಪುತ್ರಮುತ್ತಮಂ" ಯುಧಿಷ್ಠಿರಂ ಯಮೋಹಿಸಃ ಪ್ರ ಸೇದೆ ಆತ್ಮಪುತ್ರತಾಂ||೩೩||" ಪತಿಯ ಅಪ್ಪಣೆಯನ್ನು ಕೇಳಿ ಕುಂತೀದೇವಿ ಯು ಯಮದೇವರನ್ನು ಮಂತ್ರಬಲದಿಂದ ಕರೆದಳು. ಯಮನು ತಕ್ಷಣದಲ್ಲಿ ಅಲ್ಲಿಗೆ ಬಂದನು. ಕುಂತಿಯು ಯಮನ ದೆಶೆಯಿಂದ ತಕ್ಷಣದಲ್ಲೇ ಉತ್ತ ಮನಾದ ಮಗನನ್ನು ಪಡೆದಳು. ಯುದಿಷ್ಠರನೆಂದು ಆ ಪುತ್ರನಿಗೆ ಹೆಸರಾ ಯಿತು. ಅವನು ಯಮಧರ್ಮನು. ಯಮನು ತನ್ನ ದೆಶೆಯಿಂದ ಕುಂತಿ ಯಲ್ಲಿ ತಾನೇ ಪುತ್ರನಾಗಿ ಜನಿಸಿದನು, ಎಂಬೀ ವಾಕ್ಯವು ಧರ್ಮರಾಜನು ಯಮನೆಂಬ ವಿಷಯಕ್ಕೆ ಆಧಾರವು. ಇವನಲ್ಲಿ ವಾಯು ದೇವರ ಆವೇಶ ಉಂಟೆಂಬ ವಿಷಯದಲ್ಲಿ ಮಹಾಭಾರತ ತಾತ್ಪರ್ಯ ನಿರ್ಣಯ ೧೨ನೆಯ ಅಧ್ಯಾಯದಲ್ಲಿ ೧೨೯ನೆಯ ಶ್ಲೋಕದಲ್ಲಿ " ಯುಧಿಷ್ಠಿರಾದ್ಯೇಷು ಚತುರ್ಷು ವಾಯುಃ ಸಮಾವಿಷ್ಟಃ ಫಲ್ಗುನೇಶೋವಿಶೇಷಾತ್ ||೧೨೯|| ಯುಧಿಷ್ಠರೇ ಸೌಮ್ಯರೂಪೇಣಾವಿಷ್ಟಃ ವೀರೇಣರೂಪೇಣಾನನಂಜಯೇಸೌ||" ಧರ್ಮರಾಜ ಮೊದಲಾದ ನಾಲ್ವರಲ್ಲಿ ಅಂದರೆ ಭೀಮಸೇನ ದೇವರು ಸ್ವಯಂ ವಾಯುದೇ ವರೇ ಆದುದರಿಂದ ಅವರನ್ನು ಬಿಟ್ಟು ಉಳಿದ, ಧರ್ಮರಾಜ, ಅರ್ಜುನ ನಕುಲ, ಸಹದೇವ ಈ ನಾಲ್ವರಲ್ಲೂ ವಾಯುದೇವರು ಪ್ರವಿಷ್ಟರಾಗಿದ್ದರು ಅದರಲ್ಲೂ ಅರ್ಜುನನಲ್ಲಿ ವಿಶೇಷವಾದ ಆವೇಶವಿದ್ದಿತು. ಧರ್ಮರಾಜನಲ್ಲಿ ಸೌಮ್ಯರೂಪದಿಂದ ವಾಯುದೇವರ ಪ್ರವೇಶವು. ಅರ್ಜುನನಲ್ಲಿ ವೀರರೂಪ ದಿಂದ ಪ್ರವೇಶ ಮಾಡಿದ್ದರು. ಇತ್ಯಾದಿ ವಾಕ್ಯಗಳಿಂದ ಧರ್ಮರಾಜನಲ್ಲಿ ವಾಯು ಆವೇಶ ಸಿದ್ಧವಾಗುವುದು. ಯಮಧರ್ಮನಿಗೆ ಎರಡ ಅವತಾರವೆಂ

ದರೆ ಜಾಂಬವಂತನ ಅವತಾರ ಒಂದು. ಮಹಾಭಾರತ ತಾತ್ಪರ್ಯ ನಿರ್ಣಯ ಮೂರನೆಯ ಅಧ್ಯಾಯದಲ್ಲಿ ‘‘ಯಏವಪೂರ್ವಂಪರಮೇಷ್ಠಿವಕ್ಷಸಸ್ತ್ವಗುದ್ಭವೋಧರ್ಮಇಹಾಸ್ಯತೋ ಭವತ್॥೬೮॥ಯಏವಸೂರ್ಯಾತ್ಪುನರೇವಸಂಜ್ಞಯಾಂ ನಾಮ್ನಾಯಮೋ ದಕ್ಷಿಣದಿಕ್ಪ ಆಸೀತ್॥ಸಜಾಂಬವಾನ್ದೈವತಕಾರ್ಯದರ್ಶಿನಾ ಪುರೈವಸೃಷ್ಟೋಮುಖತಃ ಸ್ವಯಂಭುವಾ॥೬೯॥’’ ಯಾವ ಧರ್ಮನು ಪೂರ್ವದಲ್ಲಿ ಬ್ರಹ್ಮದೇವರ ವಕ್ಷಸ್ಥಳದ ಚರ್ಮದ ದೆಶೆಯಿಂದ ಹುಟ್ಟಿದ್ದನೋ, ಅದೇ ಧರ್ಮನೇ ಮತ್ತು ಬ್ರಹ್ಮದೇವರ ಬಾಯಿಯ ದೆಸೆಯಿಂದ ಈಗ ಹುಟ್ಟಿದನು. ಮತ್ತು ಯಾವನು ಪೂರ್ವದಲ್ಲಿ ವಿವಸ್ವಾನ್ ಎಂಬ ಸೂರ್ಯನ ದೆಸೆಯಿಂದ ಸಂಜ್ಞಾದೇವಿಯಲ್ಲಿ ಯಮನೆಂದು ಹುಟ್ಟಿ ದಕ್ಷಿಣ ದಿಕ್ಪಾಲಕನೆಂದೆನಿಸಿದನೋ ಆ ಯಮಧರ್ಮನೇ ದೇವತಾ ಕಾರ್ಯವನ್ನು ಮುಂಚಿತವಾಗಿ ಬಲ್ಲವರಾದ ಬ್ರಹ್ಮದೇವರ ಮುಖದದೆಸೆಯಿಂದ ಮೊದಲೇ ಸೃಷ್ಟಿಸಲ್ಪಟ್ಟನು. ಅವನೇ ಜಾಂಬವಂತನು ಎಂಬ ಪ್ರಮಾಣದಿಂದ ಜಾಂಬವಂತನು ಯಮಾವತಾರವೆಂದು ಸಿದ್ಧವಾಯಿತು. ವಿದುರನು ಧರ್ಮರಾಜನೆಂಬ ವಿಷಯದಲ್ಲಿ, ಮಹಾಭಾರತ ತಾತ್ಪರ್ಯ ನಿರ್ಣಯದ ೧೧ನೆಯ ಅಧ್ಯಾಯದಲ್ಲಿ, ‘‘ತಸ್ಯಾಂಸದೇವೋಜನಿಧರ್ಮರಾಜೋ ಮಾಂಡವ್ಯಶಾಪಾದ್ಯ ಉವಾಹಶೂದ್ರತಾಂ॥ ವಸಿಷ್ಠ ಸಾಮಂಸಮಭೀಪ್ಸಮಾನಂಪ್ರಚ್ಯಾವ್ಯವಯನ್ನಿಚ್ಛಯಾಶಾಪಮಾಪ॥೧೪॥’’ ವೇದವ್ಯಾಸದೇವರ ತಾಯಿಯಾದ ಸತ್ಯವತಿಯ ಮಾತಿನ ಪ್ರಕಾರ ವಿಚಿತ್ರವೀರ್ಯನ ಹೆಂಡಂದಿರಾದ ಇಬ್ಬರಲ್ಲಿ ಅಂಬಿಕೆಯು ಧೃತರಾಷ್ಟ್ರನೆಂಬ ಅಂಧಕನನ್ನೂ, ಎರಡನೆಯವಳಾದ ಅಂಬಾಲಿಕೆಯು ಪಾಂಡುರಾಜನೆಂಬುವನನ್ನೂ ವೇದವ್ಯಾಸದೇವರ ಸ್ಪರ್ಶಮಾತ್ರದಿಂದಲೇ ಪಡೆದರು. ಇಬ್ಬರಲ್ಲಿ ದೊಡ್ಡವನು ಅಂಧಕನೂ, ಎರಡನೆಯವನು ಶುದ್ಧವಾದ ಬಿಳಿಯ ಬಣ್ಣದವನೂ ತಾಯಿಯರ ದೋಷದಿಂದ ಆದುದನ್ನು ಕಂಡು ಸತ್ಯವತಿಯು, ನಿರ್ದೋಷಿಯಾದ ಮತ್ತೊಬ್ಬ ಕುಮಾರನನ್ನು ಕೊಡಬೇಕೆಂದು ವೇದವ್ಯಾಸ ದೇವರನ್ನು ಬೇಡಿ, ಅವರ ಒಪ್ಪಿಗೆಯ ಮೇಲೆ ದೊಡ್ಡ ಸೊಸೆಯಾದ ಅಂಬಿಕೆಯನ್ನು ನೀನು ಮೊದಲು ವೇದವ್ಯಾಸರನ್ನು ಕಂಡು ಹೆದರಿ ಕಣ್ಣುಮುಚ್ಚಿಬಿಟ್ಟೆ. ಆದುದರಿಂದ ನಿನ್ನ ಮಗನು ಕುರುಡನಾದನು. ಈಗ ಹಾಗೆ ಮಾಡದೆ ನಿನ್ನ ಭಾವನಾದ ವೇದವ್ಯಾಸನನ್ನು

ಭಕ್ತಿಯಿಂದ ಸೇವಿಸೆಂದು ಅಪ್ಪಣೆ ಮಾಡಿದಳು. ಆಕೆಯು ಹೆದರಿಕೆಯಿಂದ ತನ್ನ ದಾಸಿಯಾದ ಶೂದ್ರ ಸ್ತ್ರೀಗೆ ತನ್ನಂತೆ ಅಲಂಕರಿಸಿ ವೇದವ್ಯಾಸದೇವರ ಸಮೀಪಕ್ಕೆ ಕಳುಹಿದಳು. ಆಕೆಯು ಭಕ್ತಿಯಿಂದ ವೇದವ್ಯಾಸದೇವರನ್ನು ಸೇವೆಮಾಡಿದಳು. ಆಕೆಯಲ್ಲಿ ಯಮಧರ್ಮನು ಹುಟ್ಟಿದನು. ಶೂದ್ರ ಸ್ತ್ರೀಯಲ್ಲಿ ಯಮನು ಹುಟ್ಟಲು ಕಾರಣವೇನೆಂದರೆ; ಮಾಂಡವ್ಯನೆಂಬ ಒಬ್ಬ ಋಷಿಯು ತಾನು ವಸಿಷ್ಠರಿಗ ಸಮನಾಗಬೇಕೆಂಬ ಇಚ್ಛೆಯಿಂದ ತಪಸ್ಸುಮಾಡುತ್ತಿದ್ದನು. ಆ ಸಮಯದಲ್ಲಿ ಆ ದೇಶಾಧಿಪತಿಯಾದ ರಾಜನ ಮನೆಯಲ್ಲಿ ಕಳ್ಳರು ಬಿದ್ದು ರಾಜದ್ರವ್ಯವನ್ನು ಅಪಹರಿಸಿದರು. ಹಿಂದೇ ರಾಜನಾಜ್ಞಾ ಪ್ರಕಾರ ರಾಜದೂತರು ಆ ಕಳ್ಳರನ್ನು ಅಟ್ಟಿಕೊಂಡು ಬರುವಾಗ ಕಳ್ಳರು ಭಯಪಟ್ಟು ಈ ಮಾಂಡವ್ಯರ ಆಶ್ರಮದಲ್ಲಿ ಪ್ರವೇಶಮಾಡಿಬಿಟ್ಟರು. ಆಗ ಮಾಂಡವ್ಯನು ಅಸಂಪ್ರಜ್ಞಾತ ಸಮಾಧಿಯಲ್ಲಿದ್ದುದರಿಂದ ಮೈಮೇಲೆ ಪ್ರಜ್ಞೆ ಇರಲಿಲ್ಲ. ರಾಜದೂತರು ಮಾಂಡವ್ಯಾಶ್ರಮದಲ್ಲಿ ಕಳ್ಳರನ್ನು ಕಂಡು ದೇವರಪ್ರೇರಣೆಯಿಂದ ತಪಸ್ಸು ಮಾಡುತ್ತಾ ಪ್ರಜ್ಞೆ ಇಲ್ಲದಿರುವ ಮಾಂಡವ್ಯರನ್ನೂ ಕೂಡ ಕಳ್ಳನೆಂಬ ಭಾವನೆಯಿಂದ ಕಳ್ಳರ ಕೂಡಲೆ ಇವರನ್ನೂ ಹಿಡಿದು ಕಟ್ಟಿ ತೆಗೆದುಕೊಂಡು ಹೋಗಲು, ರಾಜನು, ಎಲ್ಲರಿಗೂ ವಿಧಿಸಿದಂತೆ ಇವರಿಗೂ ಶೂಲಾರೋಪಣೆ ಶಿಕ್ಷೆಯನ್ನು ಕೊಟ್ಟನು. ಆಗಲೂ ಇವರು ಸಮಾಧಿಯಲ್ಲೇ ಇದ್ದರು. ಮಿಕ್ಕ ಕಳ್ಳರೆಲ್ಲರೂ ಮೃತರಾದರು. ಇವರಿಗೆ ಕ್ಲುಪ್ತಕಾಲದಲ್ಲಿ ಸಮಾಧಿಯಿಂದ ಎಚ್ಚರವಾಯಿತು. ನೋಡುವಾಗ ತಮಗೆ ಶೂಲಾರೋಪಣೆಯಾಗಿದ್ದಿತು ಆಗ ಅಲ್ಲಿರುವ ದೂತರನ್ನು ಕುರಿತು ರಾಜನನ್ನು ಕರೆಯಿರಿ ! ಎಂದು ಅಪ್ಪಣೆಯನ್ನಿತ್ತರು. ದೂತರು ಭಯದಿಂದ ಓಡಿಹೋಗಿ ರಾಜನಿಗೆ ಸಮಾಚಾರ ಕೊಡಲು ರಾಜನು ಬಂದು ನೋಡಿ ಕ್ಷಮಾಬೇಡಿಕೊಂಡು ತ್ರಿಶೂಲವು ದೇಹದಲ್ಲಿ ಏರಿದ್ದುದರಿಂದ ಮಾಂಡವ್ಯನನ್ನು ಬೇರ್ಪಡಿಸಲು ಸಾಧ್ಯವಾಗದೆ ಅಪಾನಕ್ಕೆ ಕೆಳಭಾಗದಲ್ಲಿ ಶೂಲವನ್ನು ಕತ್ತರಿಸಿಬಿಟ್ಟನು. ಶೂಲಾಗ್ರವು ದೇಹದಲ್ಲಿ ನಿಂತ ಪ್ರಯುಕ್ತ ಅಣಿಮಾಂಡವ್ಯನೆಂದು ಹೆಸರಾಯಿತು. ಮಾಂಡವ್ಯನು ಇದು ರಾಜನು ಮಾಡಿದ ಶಿಕ್ಷೆಯಲ್ಲ. ಯಮದೇವರ ಪ್ರೇರಣೆಯಿಂದ ತನಗೆ ಶಿಕ್ಷೆಯಾಗಿದೆಯೆಂದು ಜ್ಞಾನದೃಷ್ಟಿಯಿಂದ ತಿಳಿದು ರಾಜನನ್ನು ಕ್ಷಮಿಸಿ ಅಲ್ಲಿಂದ ಯಮದೇವರಲ್ಲಿ

ಬಂದು ನನಗೆ ಶೂಲಾರೋಪಣೆ ಮಾಡಿಸಲು ಕಾರಣವೇನೆಂದು ಕೇಳಿದರು. ವಾಸ್ತವದಲ್ಲಿ ಶೂಲಾರೋಪಣೆಗೆ ಕಾರಣವು, ತನಗೆ ಯೋಗ್ಯತೆಯಿಲ್ಲದ ವಸಿಷ್ಠ ಸಾಮ್ಯವನ್ನು ಅಪೇಕ್ಷಿಸಿದುದೇ ಕಾರಣವಾದರೂ, ಯಮದೇವರು ಇವರು ಮಾಡಿದ ಹೆಚ್ಚು ತಪಸ್ಸನ್ನು ನಾಶಮಾಡುವ ಉದ್ದೇಶದಿಂದ ಇವರಿಗೆ ಕೋಪವನ್ನುಂಟುಮಾಡಿಸಿ ತಾನು ಶಾಪವನ್ನು ತೆಗೆದುಕೊಳ್ಳುವುದಾಗಿ ನಿಶ್ಚಯಿಸಿ "ನೀವು ಬಾಲ್ಯದಲ್ಲಿ ನೊಣಗಳಿಗೆ ಅಪಾನದಲ್ಲಿ ಬಿಡ್ಡಿ ಹಾಕಿ ಕೊಂದಿರಿ! ಅದರಿಂದ ಶೂಲಾರೋಪಣೆಯಾಯಿತೆ'ಂದು ಸುಳ್ಳು ಹೇಳಿದನು. ಇದು ಅವರ ತಪೋನಾಶರೂಪವಾದ ಶಿಕ್ಷೆಗಾಗಿ ಹೇಳಿದ ಸುಳ್ಳಾದುದರಿಂದ ಶಿಕ್ಷಾಕರ್ತನಾದ ಯಮದೇವನಿಗೆ ಸುಳ್ಳು ಹೇಳಿದ ದೋಷವು ಬರಲಿಲ್ಲ. ಮಾಂಡವ್ಯನು ಕೋಪದಿಂದ ನಾನು ಬಾಲ್ಯದಲ್ಲಿ ಅಜ್ಞಾನದ ದೆಸೆಯಲ್ಲಿ ಮಕ್ಷಿಕೆಯ ವಧಮಾಡಿದ್ದರೂ ಅದರ ಶಿಕ್ಷೆಯು ಇದಾಗುವುದಿಲ್ಲ. ನೀನು ನನ್ನಲ್ಲಿ ಯಥಾರ್ಥವನ್ನು ಹೇಳದೇ ಸುಳ್ಳು ಹೇಳಿರುವೆ. ಆದ್ದರಿಂದ ಶೂದ್ರನಾಗಿ ಭೂಮಿಯಲ್ಲಿ ಹುಟ್ಟೆಂದು ಶಾಪವನ್ನು ಕೊಟ್ಟನು. ಅದರಿಂದ ಮಾಂಡವ್ಯರ ತಪಸ್ಸಿನ ಫಲವೆಲ್ಲವೂ ನಾಶವಾಯಿತು. ಹೀಗೆ ಇವರಿಗೆ ತಪಸ್ಸನ್ನು ನಾಶಮಾಡುವ ಉದ್ದೇಶದಿಂದ ತನ್ನ ಇಚ್ಛೆಯಿಂದಲೆ ಅವರ ದೆಸೆಯಿಂದ ಶಾಪವನ್ನು ಹೊಂದಿದನು. ಆ ಕಾರಣದ ದೆಸೆಯಿಂದಲೇ ವೇದವ್ಯಾಸ ದೇವರ ದೆಸೆಯಿಂದ ಶೂದ್ರ ಸ್ತ್ರೀಯಲ್ಲಿ ಯಮಧರ್ಮನು ವಿದುರನಾಗಿ ಹುಟ್ಟಿದನು. ಆದರೂ ಮಹಾಜ್ಞಾನಿಯಾಗಿ ಧರ್ಮನಿರತನಾಗಿದ್ದನು. "ವಿದ್ಯಾರತೇರ್ವಿದುರೋ ನಾಮ ಜಾಯಂ" ಎಂದು ವಿದ್ಯಾನಿರತನಾದುದರಿಂದ ವಿದುರನೆಂದು ಪ್ರಖ್ಯಾತನಾದನು, ಎಂದು ಹೇಳಿರುವರು. ಮತ್ತು ಯಮಧರ್ಮನಿಗೆ ಸತ್ಯಜಿತು ಎಂದು ಒಂದು ಅವತಾರ ಉಂಟು. ಅದು ಯಾವ ಕಾಲ? ಎಲ್ಲಿ? ಅಂದರೆ ವಿಷ್ಣುರಹಸ್ಯ ೨೭ನೆಯ ಅಧ್ಯಾಯದಲ್ಲಿ, 'ತೃತೀಯೇ ತ್ವಂತರೇ ಬ್ರಹ್ಮನ್ನುತ್ತಮೋ ನಾಮ ವೈ ಮನುಃ ॥೪॥ ಯಃ ಸ್ತನಾದಭವದ್ವಿಷ್ಣೋಃ ಸ ಧರ್ಮಸ್ತ್ವಿಂದ್ರತಾಂ ಗತಃ ॥ ಸತ್ಯಜಿನ್ನಾಮ ವಿಖ್ಯಾತೋ ಧರ್ಮಾದಜನಿ ಯಃ ಸ್ವಯಂ ॥ ೫ ॥" ಮೂರನೆ ಯಮನು ಪ್ರಿಯವ್ರತರಾಜನ ಮಗನು ಉತ್ತಮನೆಂಬುವನು. ಪೂರ್ವದಲ್ಲಿ ಯಾವನು "ಧರ್ಮಸ್ತನಾದ್ದಕ್ಷಿಣತಃ" ಎಂಬ ಭಾಗವತ ವಾಕ್ಯದಂತೆ ಪರಮಾತ್ಮನ ಬಲದ ಸ್ತನದಿಂದ ಹುಟ್ಟಿದ್ದನೋ ಆ

ಧರ್ಮನೆ ಧರ್ಮನ ದೆಶೆಯಿಂದ ಸತ್ಯಜಿತ್ ಎಂಬ ಹೆಸರಿನಿಂದ ತಾನೇ ಜನಿಸಿ ಈ ಮೂರನೆಯ ಮನ್ವಂತರದಲ್ಲಿ ಇಂದ್ರನಾಗಿದ್ದನು, ಎಂದು ಹೇಳಿರುವರು. ಇದೇ ಆಧಾರವು ಸತ್ಯಜಿತ್ ಯಮಧರ್ಮನೆಂಬುವ ವಿಷಯದಲ್ಲಿ ಎಂದು ತಿಳಿಯಬೇಕು. ಹೀಗೆ ಯಮಧರ್ಮನಿಗೆ ೪ ಅವತಾರಗಳು ಸೂರ್ಯನಿಗೆ ಎರಡವತಾರಗಳು; ಬ್ರಹ್ಮದೇವರ ಆವೇಶದಿಂದ ಕೂಡಿದ ಸುಗ್ರೀವನೆಂಬ ಕಪಿಯರೂಪ ಒಂದು. ಈ ವಿಷಯದಲ್ಲಿ ಆಧಾರ ಮಹಾಭಾರತ ತಾತ್ಪರ್ಯ ನಿರ್ಣಯದ ಮೂರನೆಯ ಅಧ್ಯಾಯದಲ್ಲಿ "ಸುಗ್ರೀವ ಆಸೀತ್ಪರಮೇಷ್ಠಿತೇಜಸಾಯುತೋ ರವಿಃ" ಬ್ರಹ್ಮದೇವರ ಆವೇಶದಿಂದ ಕೂಡಿ ಸೂರ್ಯನು ಸುಗ್ರೀವನೆಂಬ ಹೆಸರಿನಿಂದ ಜನಿಸಿದನು ಎಂದು ಹೇಳಿರುವರು. ಎರಡನೆಯ ಅವತಾರವು ಕರ್ಣನು. ನಿರ್ಣಯ ೧೧ನೆಯ ಅಧ್ಯಾಯದಲ್ಲಿ "ಅಥಾಸಸಾದ ಭಾಸ್ಕರಃ ॥ ಸ ತತ್ರ ಜಜ್ಞಿವಾನ್ ಸ್ವಯಂ ದ್ವಿತೀಯರೂಪಕೋ ವಿಭುಃ॥ ಸ ವರ್ಮದಿವ್ಯಕುಂಡಲೋ ಜ್ವಲನ್ನಿವ ಸ್ವತೇಜಸಾ ॥೧೫೬॥ ಪುರಾ ಸ ವಾಲಿಮಾರಣಪ್ರಭೂತದೋಷಕಾರಣಾತ್ ॥ ಸಹಸ್ರವರ್ಮನಾಮನಾಸುರೇಣ ವೇಷ್ಟಿತೋಽಜನಿ ॥೧೫೭॥ ಯಥಾಗ್ರಹೈರ್ನಿದೂಷ್ಯತೇ ಮತಿರ್ನೃಣಾಂ ತಥೈವ ಹಿ ॥ ಅಭೂಚ್ಚ ದೈತ್ಯದೂಷಿತಾ ಮತಿರ್ದಿವಾಕರಾತ್ಮನಃ ॥೧೫೮॥ ತಥಾಪಿ ರಾಮಸೇವನಾದ್ಧರೇಶ್ಚ ಸನ್ನಿಧಾನಯುಕ್ ॥ ಸುದರ್ಶನೀಯಕರ್ಣತಃ ಸ ಕರ್ಣನಾಮಕೋಽಭವತ್ ॥ ೧೫೯ ॥" ಕುಂತೀದೇವಿಯು ಸೂರ್ಯನನ್ನು ಮಂತ್ರದಿಂದ ಕರೆಯಲು ಆತನು ಅಲ್ಲಿಗೆ ಬಂದು ತಾನೇ ಎರಡನೆಯ ರೂಪದಿಂದ ಸಹಜವಾದ ಕರ್ಣಕುಂಡಲಗಳಿಂದಲೂ ದಿವ್ಯವಾದ ಕವಚದಿಂದಲೂ ಕೂಡಿ ತನ್ನ ತೇಜಸ್ಸಿನಿಂದ ಪ್ರಜ್ವಲಿಸುತ್ತಾ ಹುಟ್ಟಿದನು. ಆದರೆ ಪೂರ್ವಜನ್ಮದಲ್ಲಿ ಸುಗ್ರೀವನಾಗಿದ್ದಾಗ ವಾಲಿಯನ್ನು ಕೊಲ್ಲಿಸಿದ ಪಾಪದಿಂದ ಸಹಸ್ರವರ್ಮನೆಂಬ ದೈತ್ಯನಾವೇಶದಿಂದ ಕೂಡಿದ್ದುದರಿಂದ ಹೇಗೆ ಮನುಷ್ಯರಿಗೆ ಭೂತಗ್ರಹಾದಿಗಳು ಹಿಡಿದಿದ್ದರೆ ಬುದ್ಧಿಯು ಕೆಟ್ಟಿರುವುದೋ ಹಾಗೆಯೇ ಸೂರ್ಯಸ್ವರೂಪನಾದ ಇವನಿಗೆ ಬುದ್ಧಿಯು ಕೆಟ್ಟುಹೋಗಿದ್ದಿತು. ಹಾಗಿದ್ದರೂ ಪೂರ್ವಜನ್ಮದಲ್ಲಿ ರಾಮದೇವರ ಸೇವೆಮಾಡಿದ ಪುಣ್ಯದಿಂದ ಪರಮಾತ್ಮನ ಸನ್ನಿಧಾನದಿಂದ ಯುಕ್ತನಾಗಿದ್ದನು. ಇವನ ಕಿವಿಗಳು ಕುಂಡಲಗಳಿಂದ ಶೋಭಿತವಾಗಿ ದರ್ಶನೀಯವಾಗಿದ್ದುದರಿಂದ ಕರ್ಣನೆಂದು ನಾಮವಾಯಿತು ಎಂದು ಹೇಳಿ

ರುವರು. ಹೀಗೆ ಸೂರ್ಯನಿಗೆ ೨ ಅವತಾರಗಳು. ಚಂದ್ರನು ಇಂದ್ರನಾವೇಶ ದಿಂದ ಕೂಡಿ ಅಂಗದನೆಂಬ ಕಪಿಯಾಗಿ ಜನಿಸಿರುವನು. ಮಹಾಭಾರತ ತಾತ್ಪರ್ಯ ನಿರ್ಣಯದ ಮೂರನೆಯ ಅಧ್ಯಾಯದಲ್ಲಿ "ಬ್ರಹ್ಮೋದ್ಭವಃ ಸೋಮ ಉತಾಸ್ಯ ಸೂನೋರತ್ರೇರಭೂತ್ಸೋಽಂಗದ ಏವ ಜಾತಃ" * * * ಇಂದ್ರೋಽಂಗದೇ ಚೈವ ತತೋಽಂಗದೋ ಹಿ ಬಲೀ ನಿತಾಂತಂ ಸ ಬಭೂವ ಶಶ್ವತ್ ॥ ಪೂರ್ವದಲ್ಲಿ ಬ್ರಹ್ಮದೇವರ ಮಗನಾಗಿದ್ದ ಚಂದ್ರನೇ, ಬ್ರಹ್ಮದೇವರ ಮಕ್ಕಳಾದ ಅತ್ರಿಋಷಿಗಳ ಮಗನಾಗಿ ಜನಿಸಿದ್ದನು. ಅವನೇ ಮತ್ತೂ ಅಂಗದನೆಂದು ವಾಲಿಯ ಮಗನಾಗಿ ಜನಿಸಿದನು ಎಂದು ೭೦ನೆಯ ಶ್ಲೋಕದಲ್ಲಿ ಹೇಳಿರುವರು. ಅದೇ ಅಧ್ಯಾಯ ೮೦ನೆಯ ಶ್ಲೋಕವಲ್ಲಿ, ಅಂಗದನಲ್ಲಿ ಇಂದ್ರನ ಆವೇಶವೂ ಇದ್ದಿತು. ಆದುದರಿಂದ ಅಂಗದನು ಬಹಳ ಬಲಾಢ್ಯನಾಗಿದ್ದನು ಎಂದು ಹೇಳಿರುವರು. ಈ ಅಭಿಪ್ರಾಯವನ್ನೇ ದಾಸಾರ್ಯರು "ಸುರಪನಾವೇಶಯುತನಂಗದ" ಎಂದು ಹೇಳಿರುವರು.

ಅವತಾರಿಕೆ: — ಈ ಪದ್ಯದಲ್ಲಿ ವರುಣ, ನಾರದರು, ಅಗ್ನಿ, ಪ್ರಸೂತಿ ಇವರ ತಾರತಮ್ಯವನ್ನೂ ವರುಣನ ಅವತಾರಗಳನ್ನೂ ಹೇಳುತ್ತಾರೆ: —

**ತರಣಿಗಿಂದಲಿ ಪಾದಪಾದರೆ**
**ವರುಣನೀಚನು ಮಹಭಿಷಕ್‌ದರ**
**ದುರಸುಷೇಣನು ಶಂತನುವು ನಾಲ್ವರು ವರುಣರೂಪ ॥**
**ಸುರಮುನೀ ನಾರದನು ಕಿಂಚಿತ್**
**ಕೊರತೆ ವರುಣಗೆ ಅಗ್ನಿಭೃಗುವಜ**
**ಗೊರಳಪತ್ನಿಪ್ರಸೂತಿಮೂವರು ನಾರದನಿಗಧಮ ॥ ೨೦ ॥**

ಪದಾರ್ಥ:— ತರಣಿಗಿಂದಲಿ = ಸೂರ್ಯನಿಗಿಂತಲು, ಪಾದಪಾದರೆ= ಒಂದು ಪಾದವೂ ಅರೆಪಾದ ಗುಣಗಳಿಂದ (ಕಾಲೇ ಅರೆಕಾಲು) (ಅಥವಾ ರೂಪಾಯಿಯಲ್ಲಿ ೬ ಆಣೆ ಭಾಗ) ವರುಣ=ವರುಣನು, ನೀಚನು; ಮಹಭಿಷಕ್=ಮಹಾಭಿಷಕೆಂಬ ರಾಜನವತಾರ ಒಂದು; ದರದುರ (ದರ್ದುರ) ಕಪ್ಪೆಯ ರೂಪ ಒಂದು; ಸುಷೇಣ=ಸುಷೇಣನೆಂಬ ಕಪಿರೂಪ ಒಂದು; ಶಂತನುವು=ಶಂತನು ಚಕ್ರವರ್ತಿಯ ರೂಪ ಒಂದು, ನಾಲ್ವರು=ಈ ನಾಲ್ಕು ರೂಪಗಳು, ವರುಣರೂಪ=ವರುಣನ ಅವತಾರಗಳು, ಸುರಮುನೀ=ದೇವಋಷಿ

ಯಾದ, ನಾರದನು, ವರುಣಗೆ, ಕಿಂಚಿತ್=ಸ್ವಲ್ಪಭಾಗ ಮಾತ್ರ, ಕೊರತೆ=ಕಮ್ಮಿಯೆನಿಸುವನು. ಅಗ್ನಿ ಭೃಗು=ಭೃಗುಮುನಿಪನು, ಅಜಗೊರಳಪತ್ನಿ=ಮೇಕೆಯ ತಲೆಯುಳ್ಳ ದಕ್ಷಪ್ರಜೇಶ್ವರನ ಹೆಂಡತಿಯಾದ ಪ್ರಸೂತಿ, ಮೂವರು=ಈ ಮೂವರೂ, ನಾರದನಿಗೆ=ನಾರದನಕಿಂತಲೂ, ಅಧಮ=ಕಮ್ಮಿಯೆನಿಸುವರು.

ತಾತ್ಪರ್ಯ:– ಸೂರ್ಯನಕಿಂತಲೂ ಆರು ಆಣೆಯ ಭಾಗ ಗುಣಗಳಿಂದ ವರುಣನು ಕಮ್ಮಿಯೆನಿಸುವನು. ವರುಣನಿಗೆ ೪ ಅವತಾರಗಳು. ಮಹಾಭಿಷಕ್ ಎಂಬ ರಾಜನಾಗಿ ಜನಿಸಿದುದು ಒಂದು ರೂಪವು. ವರುಣನು ರಾಜನಾಗಿ ಹುಟ್ಟಲು ಕಾರಣವೇನೆಂದರೆ, ಮಹಾಭಾರತ ತಾತ್ಪರ್ಯ ನಿರ್ಣಯದ ೧೧ನೆಯ ಅಧ್ಯಾಯದಲ್ಲಿ "ಪೂರ್ವೋದಧೇಸ್ತೀರಗತೇಽಬ್ಜಸಂಭವೇ ಗಂಗಾಯುತಃ ಪರ್ವಣಿ ಘೂರ್ಣಿತೋಽಬ್ಧಿಃ ॥ ಅವಾಕ್ಷಿಪತ್ತಸ್ಯ ತನೌ ಸಿಶೋಽದಬಿಂದುಂ ಶಶಾಪೈನಮಥಾಬ್ಜಯೋನಿಃ ॥೧೭॥ ಮಹಾಭಿಷಙ್ನಾಮ ನರೇಶ್ವರಸ್ತ್ವಂ ಭೂತ್ವಾ ಪುನಃ ಶಂತನುನಾಮಧೇಯಃ ॥ ಜನಿಷ್ಯಸೇ ವಿಷ್ಣುಪದೀ ತಥೈಷಾ ತತ್ರಾಪಿ ಭಾರ್ಯಾ ಭವತೋ ಭವಿಷ್ಯತಿ ॥೧೭॥ ಶಾಂತೋ ಭವೇತ್ಯೇವ ಮಯೋದಿತಸ್ತ್ವಂ ತನುತ್ವಮಾಪ್ತೋಽಸಿ ತತಶ್ಚ ಶಂತನುಃ ॥ ಇತೀರಿತಃ ಸೋಽಥ ನೃಪೋ ಬಭೂವ ಮಹಾಭಿಷಙ್ನಾಮ ಹರೇಃ ಪದಾಶ್ರಯಃ ॥೧೮॥ ಸ ತತ್ರ ಭುಕ್ತ್ವಾ ಚಿರಕಾಲಮುರ್ವೀಂ ತನುಂ ವಿಹಾಯಾಪ ನದೋ ವಿಧಾತುಃ ॥ ತತ್ರಾಪಿ ತಿಷ್ಠನ್ನುರವೃಂದವನ್ಯಥಾ ದದರ್ಶ ಗಂಗಾಂ ಶ್ಲಥಿತಾಂಬರಾಂ ಸ್ವಕಾಂ ॥೧೯॥ ಅವಾಙ್ಮುಖೇಷು ದ್ಯುಸದಸ್ಸು ಗಂಗಾಂ ಸಮೀಕ್ಷ್ಯಮಾಣಾಂ ಪುನರಾತ್ಮಸಂಭವಃ ॥ ಉವಾಚ ಭೂಮೌ ನೃಪತಿರ್ಭವಾಶು ಶಪ್ತೋ ಯಥಾ ತ್ವಂ ಹಿ ಪುರಾ ಮಯ್ಯೈವ ॥೨೦॥ ಇತೀರಿತಸ್ತತ್ಕ್ಷಣತಃ ಪ್ರತೀಪಾದ್ಬಭೂವ ಸಾಮ್ನಾ ನೃಪತಿಶ್ಚ ಶಂತನುಃ ॥" ಒಂದಾನೊಂದು ಪರ್ವಕಾಲದಲ್ಲಿ ಬ್ರಹ್ಮದೇವರು ಪೂರ್ವ ಸಮುದ್ರತೀರಕ್ಕೆ ಬಂದಿರಲು, ಸಮುದ್ರನು (ವರುಣನು) ಗಂಗಾ ಸಂಗಮದಿಂದಲೂ, ಪರ್ವಕಾಲವಾದುದರಿಂದಲೂ ಬಲವಾದ ಅಲೆಗಳಿಂದ ಕೂಡಿ ಮೊರೆಯುತ್ತಾ ಬ್ರಹ್ಮದೇವರ ಮೇಲೆ ತನ್ನ ಉದಕ ಬಿಂದುಗಳನ್ನು ಚೆಲ್ಲಿದನು. ಆಗ ಬ್ರಹ್ಮದೇವರು ಕೋಪದಿಂದ "ಎಲೈ ವರುಣನೆ! ನೀನು ಭೂಮಿಯಲ್ಲಿ ಮಹಾಭಿಷಕ್ ಎಂಬ ರಾಜನಾಗಿ ಹುಟ್ಟಿ ಕೆಲವು ಕಾಲವಿದ್ದು ಆ ದೇಹವನ್ನು

ಬಿಟ್ಟು ಮತ್ತು ಶಂತನು ಎಂಬ ಹೆಸರಿನಿಂದ ರಾಜಕುಮಾರನಾಗಿ ಜನಿಸು, ಆಗಲೂ ಈ ಗಂಗೆಯು ನಿನಗೆ ಭಾರ್ಯಳಾಗುವಳು. ಶಾಂತನಾಗು ಎಂದು ನನ್ನಿಂದ ಹೇಳಿಸಿಕೊಳ್ಳಲ್ಪಟ್ಟು ನೀನು ತನುವನ್ನು ಸ್ವೀಕರಿಸುವುದರಿಂದ ನಿನಗೆ ಶಂತನು ಎಂದು ಹೆಸರಾಗುವುದು ಎಂದು ಬ್ರಹ್ಮದೇವರು ಶಾಪವನ್ನು ಕೊಟ್ಟರು. ಅದೇ ರೀತಿಯಾಗಿ ಸಮುದ್ರರಾಜನಾದ ವರುಣನು ಪರಮಾತ್ಮನ ಭಕ್ತನಾಗಿ ಮಹಾಭಿಷಕ್ ಎಂಬ ಹೆಸರಿನಿಂದ ರಾಜನಾಗಿ ಹುಟ್ಟಿ, ಭೂಮಿಯಲ್ಲಿ ಬಹುಕಾಲದ ವರಿವಿಗೂ ರಾಜ್ಯವನ್ನಾಳುತ್ತಿದ್ದು ಆ ದೇಹವನ್ನು ಬಿಟ್ಟು ಬ್ರಹ್ಮಲೋಕಕ್ಕೆ ಹೋಗಿ ಸೇರಿದನು. ಅಲ್ಲಿ ಒಂದು ದಿವಸ ಸಭೆಯಲ್ಲಿ ಎಲ್ಲರೂ ಕೂತಿರಲು, ಮಹಾಭಿಷಗ್ರಾಜನಿಗೆ ಹೆಂಡತಿಯಾದ ಗಂಗೆಗೆ ಆಕಸ್ಮಿಕವಾಗಿ ಉಟ್ಟ ವಸ್ತ್ರವು ಸೊಳ್ಳಾಗಿ ಬಿಚ್ಚಿಹೋಗಲು ಅಲ್ಲಿ ಕೂತಿದ್ದ ದೇವತೆಗಳೆಲ್ಲರೂ "ನ ನಗ್ನಾಂ ಸ್ತ್ರಿಯಮೀಕ್ಷೇತ" ವಸ್ತ್ರವಿಲ್ಲದಿರುವ ಸ್ತ್ರೀಯನ್ನು ನೋಡಬಾರದು ಎಂಬ ಪ್ರಮಾಣವನ್ನನುಸರಿಸಿ ತಲೆ ತಗ್ಗಿಸಿದರು. ಆಗ ಈ ರಾಜನು ಮಾತ್ರ ಈಕೆಯನ್ನು ನೋಡುತ್ತಿದ್ದನು. ಆಗ ಬ್ರಹ್ಮದೇವರು ನಾನು ನಿನಗೆ ಪೂರ್ವದಲ್ಲಿ ಕೊಟ್ಟ ಶಾಪದಂತೆ ಈಗಲೂ ತತ್‌ಕ್ಷಣದಲ್ಲಿ ಭೂಮಿಯಲ್ಲಿ ರಾಜನಾಗಿ ಹುಟ್ಟು ಎಂದು ಶಾಪವನ್ನಿತ್ತರು. ಆ ತತ್‌ಕ್ಷಣದಲ್ಲಿ ಪ್ರತೀಪರಾಜನ ಮಗನಾಗಿ ಶಂತನು ಎಂಬ ಹೆಸರಿನಿಂದ ಹುಟ್ಟಿ ತನ್ನ ಮೊದಲಿನ ಪತ್ನಿಯಾದ ಗಂಗೆಯನ್ನೇ ಮದುವೆಯಾಗಿ ಬಹುಕಾಲ ವಾಸಮಾಡುತ್ತಿದ್ದನು ಎಂದು ಹೇಳಿರುವರು. ಈ ವಾಕ್ಯಗಳಿಂದ ಮಹಾಭಿಷಕ್ ೧, ಶಂತನು ಚಕ್ರವರ್ತಿ ೨, ಇವೆರಡು ಅವತಾರಗಳ ಕಾರಣವೂ ಹೇಳಿದಂತಾಯಿತು. ದರ್ದುರನೆಂದು ಒಂದು ಅವತಾರವೆಂದು ಹೇಳಿರುವರು. ದರ್ದುರವೆಂದರೆ ಕಪ್ಪೆಗೆ ಹೆಸರು. ವರುಣನು ಕಪ್ಪೆಯ ರೂಪದಿಂದ ಪರಮಾತ್ಮನನ್ನು ಸ್ತೋತ್ರಮಾಡಿರುವುದನ್ನು ಮಾಂಡೂಕೋಪನಿಷತ್ತಿನಲ್ಲಿ ಹೇಳಿರುವರು. ಮಾಂಡೂಕೋಪನಿಷದ್ಭಾಷ್ಯದಲ್ಲಿ "ಮಂಡೂಕರೂಪೀ ವರುಣಸ್ತುಷ್ಟಾವ ಹರಿಮವ್ಯಯಂ" ವರುಣನು ಮಂಡೂಕ ಅಂದರೆ ಕಪ್ಪೆಯ ರೂಪದಿಂದ ಹರಿಯನ್ನು ಸ್ತೋತ್ರಮಾಡಿದನು ಎಂದು ಹೇಳಿರುವರು. ಆದುದರಿಂದ ಮೂರನೆಯದು ಕಪ್ಪೆಯ ಅವತಾರವು. ಸುಷೇಣ ಎಂಬ ಕಪಿರೂಪ ಒಂದು. ನಿರ್ಣಯ ಮೂರನೆಯ ಅಧ್ಯಾಯ ೭೨ನೆಯ ಶ್ಲೋಕದಲ್ಲಿ

ಅರ್ಜುನನಲ್ಲಿರುವ ಮಾರ್ದವ ಗುಣವನ್ನೂ ನೋಡಿ, ಅರ್ಜುನನಿಗೆ ಕೊಟ್ಟು
ಮದುವೆ ಮಾಡಲಿಕ್ಕಾಗಿ ಒಬ್ಬ ಮಗಳನ್ನೂ, ದ್ರೋಣಾಚಾರ್ಯನನ್ನು ಕೊಲ್ಲು
ವ ಒಬ್ಬ ಮಗನನ್ನೂ, ಪಡೆಯಬೇಕೆಂದು ಯೋಚಿಸಿ, ಯಾಜೋಪಯಾಜ
ರೆಂಬ ಬ್ರಾಹ್ಮಣೋತ್ತಮರಲ್ಲಿ ಬಂದು ಅವರಿಗೆ ೧೦ ಕೋಟಿ ಗೋವುಗಳನ್ನು
ಕೊಟ್ಟು ಅವರನ್ನು ಕರೆತಂದು ತನ್ನ ಉದ್ದೇಶ ಪೂರ್ಣ ಮಾಡಿಕೊಳ್ಳುವುದ
ಕ್ಕಾಗಿ ಇಷ್ಟಿಯನ್ನು ಮಾಡಿದನು. ಆ ಅಣ್ಣತಮ್ಮಂದಿರಾದ ಯಾಜ, ಉಪ
ಯಾಜರು, ಪುತ್ರ ಸಂತಾನಕರವಾದ ಹವಿಸ್ಸನ್ನು ಅಭಿಮಂತ್ರಿಸಿ ದ್ರುಪದ
ರಾಜನ ದೆಶೆಯಿಂದ ಅವನ ಹೆಂಡತಿಯಲ್ಲಿ ಪುತ್ರನಾಗುವಂತೆ ಮಾಡಬೇಕೆಂಬ
ಉದ್ದೇಶದಿಂದ ರಾಜನ ಹೆಂಡತಿಯನ್ನು ಕರೆದರು. ಬಂದೆ ತಡೀರಿ! ಎಂದು
ಅಹಂಕಾರದಿಂದ ತನ್ನ ಅಲಂಕಾರವನ್ನು ಮಾಡಿಕೊಳ್ಳುತ್ತಾ ಸಾವಕಾಶಮಾ
ಡಿದಳು. ಆಕೆಯ ಮನಸ್ಸಿನಲ್ಲಿ ತನ್ನನ್ನು ಬಿಟ್ಟರೆ ಮಕ್ಕಳಾಗುವುದಿಲ್ಲವೆಂತ
ಲೂ, ತಾನು ರಾಜನ ಹೆಂಡತಿ, ಇವರು ಪುರೋಹಿತರಾದ ವೈದಿಕ ಬ್ರಾಹ್ಮ
ಣರು; ಕಾದಿರುತ್ತಾರೆ ಎಂದು ನಿಶ್ಚಯ ಮಾಡಿದ್ದಳು. ಆ ಬ್ರಾಹ್ಮಣೋತ್ತ
ಮರು ಇವಳ ಅಹಂಕಾರವನ್ನು ತಿಳಿದು ಈಕೆಯಿಂದ ನಮಗಾಗುವುದೇನು
ಎಂದು ಯೋಚಿಸಿ ಆಕೆಯನ್ನು ಲಕ್ಷೀಕರಿಸದೆ ಆಕೆಗೆ ಕೊಡಬೇಕೆಂದು ಉದ್ದೇ
ಶ ಮಾಡಿರುವ ಮಗನೂ, ಮಗಳೂ, ಹುಟ್ಟುವುದಕ್ಕಾಗಿ ಅಭಿಮಂತ್ರಿತವಾದ
ಎರಡು ಹವಿಸ್ಸುಗಳನ್ನೂ, ವಿಷ್ಣು ಸಂಬಂಧವಾದ ಎರಡು ಮಂತ್ರಗಳಿಂದ ಅ
ಗ್ನಿಯಲ್ಲಿ ಆಹುತಿ ಕೊಟ್ಟುಬಿಟ್ಟರು. ತತ್‍ಕ್ಷಣದಲ್ಲಿ ಪ್ರಜ್ವಲಿಸುವ ಅಗ್ನಿಯಂತೆ
ಕಾಂತಿಸಂಪನ್ನನಾಗಿ ಅಗ್ನಿಯೇ ಕುಂಡ ಮಧ್ಯದಿಂದ ಹೊರಟು ಬಂದನು.
ದಿವ್ಯವಾದ ಕಿರೀಟದಿಂದಲೂ ದಿವ್ಯ ಕುಂಡಲಗಳಿಂದಲೂ, ಪ್ರಜ್ವಲಿಸುತ್ತಾ
ಬಂಗಾರದ ಹಾರಗಳಿಂದ ಅಲಂಕೃತನಾಗಿ ಕೈಯಲ್ಲಿ ಉತ್ತಮವಾದ ಕತ್ತಿ
ಯನ್ನು ಹಿಡಿದುಕೊಂಡು ಸೂರ್ಯನಂತೆ ಪ್ರಜ್ವಲಿತವಾದ ರಥದಲ್ಲಿ ಕುಳಿತು
ಅತಿ ಧಾರ್ಷ್ಟ್ಯದಿಂದ ಈಗಲೇ ಶತ್ರುವನ್ನು ಕೊಲ್ಲುವನೋ! ಎಂದು ತೋರು
ವಂತೆ ಗರ್ಜಿಸುತ್ತಾ ದ್ರುಪದರಾಜನ ಸಮೀಪಕ್ಕೆ ಬಂದನು. ಅತಿ ಧಾರ್ಷ್ಟ್ಯ
ಉಳ್ಳವನಾದುದರಿಂದಲೂ, ಕಾಂತಿಸಂಪನ್ನನಾದುದರಿಂದಲೂ ಧೃಷ್ಟದ್ಯುಮ್ನ
ನೆಂದು ಅವನಿಗೆ ನಾಮಕರಣ ಮಾಡಿದರು. ಅಗ್ನಿಕುಂಡಕ್ಕೆ ಸೇರಿದ ಕಟ್ಟೆ
ಯಿಂದ ದ್ರೌಪದಿಯು ಹುಟ್ಟಿದಳು ಎಂದು ಹೇಳಿರುವರು. ಅಗ್ನಿಗೆ ಧೃಷ್ಟ

ದ್ಯುಮ್ನ ರೂಪವು ಎರಡನೆಯ ಅವತಾರವೆಂದು ಇದರಿಂದ ನಿಶ್ಚಯಿಸಿದಂತಾಯಿತು. ಮತ್ತೊಂದು ಅವತಾರವು ಲವನೆಂಬ ರಾಮದೇವರ ಮಗನು. ಇವನ ವಿಷಯದಲ್ಲಿ ಹಿಂದೆ ಇಂದ್ರನವತಾರಗಳನ್ನು ಹೇಳುವಾಗ ಇಂಧ್ರನು ಕುಶನಾಗಿಯೂ, ಅಗ್ನಿಯು ಲವನಾಗಿಯೂ, ಹೀಗ ಅವಳಿ ಜವಳಿಗಳಾಗಿ, ಕುಶ ಲವರೆಂಬ ಇಬ್ಬರು ಮಕ್ಕಳು ಸೀತೆಯಲ್ಲಿ ಹುಟ್ಟಿದರೆಂದು ಪ್ರಮಾಣವು ಉದಾಹರಿಸಲ್ಪಟ್ಟಿದೆ. ಅದೇ ಪ್ರಮಾಣವೇ ಅಗ್ನಿಯು ಲವನೆಂಬ ವಿಷಯದಲ್ಲಿ ಆಧಾರವಾಗಿರುವುದು. ಭೃಗುಋಷಿಗಳು ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಉತ್ತಮರಾರೆಂದು ಪರೀಕ್ಷಿಸುವುದಕ್ಕಾಗಿ ಹೊರಟುಬಂದು ಬ್ರಹ್ಮದೇವರಿಗೆ ನಮಸ್ಕಾರ ಮಾಡದೆ ಇರಲು ಬ್ರಹ್ಮದೇವರಿಗೆ ಕೋಪ ಬಂದುದನ್ನೂ ಮತ್ತೂ ಆ ಕೋಪವನ್ನು ತಡೆದುಕೊಂಡುದುದನ್ನೂ ತಿಳಿದು, ರುದ್ರದೇವರ ಸಮೀಪಕ್ಕೆ ಬರಲು ಅವರು ಪಾರ್ವತಿಯ ಸಂಭೋಗದಲ್ಲಿದ್ದವರು ಬಿಟ್ಟು ಪ್ರೀತಿಯಿಂದ ಭೃಗುಋಷಿಯನ್ನು ಆಲಿಂಗನ ಮಾಡಿಕೊಳ್ಳುವುದಕ್ಕಾಗಿ ಬರಲು, ಭೃಗುಋಷಿಯು ನೀನು ಅಶುಭಚಾರನೆಂದು ಆಲಿಂಗನವನ್ನು ನಿಷೇಧ ಮಾಡಲು, ರುದ್ರದೇವರು ಕೋಪದಿಂದ ಭೃಗುಮುನಿಯನ್ನು ಕೊಲ್ಲಲು ಬಂದುದನ್ನೂ ನೋಡಿ ವಿಷ್ಣುವಿನ ಸಮೀಪಕ್ಕೆ ಬಂದು ಆತನು ಮಲಗಿರುವುದನ್ನು ಕಂಡು ಕಾಲಿಂದ ಒದೆಯಲು ಪರಮಾತ್ಮನು ಆದರದಿಂದೆದ್ದು ಭೃಗುಮುನಿಯನ್ನು ಉಪಚರಿಸುದುದನ್ನು ಕಂಡು ಭೃಗುಮುನಿಯು ಹರಿ ಸರ್ವೋತ್ತಮನೆಂತಲೂ ಬ್ರಹ್ಮದೇವರು ಮಧ್ಯಮರೆಂತಲೂ, ರುದ್ರದೇವರು ಇವರ ಕಿಂತಲೂ ಕಮ್ಮಿಯೆಂತಲೂ, ಲೋಕದಲ್ಲಿ ಪ್ರಖ್ಯಾತಿಪಡಿಸಿದರೆಂದು ಕಥೆ ಇರುವದು. ಈಕಥೆಯು ಭಾಗವತದಲ್ಲೂ, ಭವಿಷ್ಯೋತ್ತರ ಪುರಾಣದಲ್ಲೂ ಬರುವುದು. "ಪಾದಪ್ರಹಾರದೋಷೇಣ ಭೃಗುಂತುವ್ಯಾಧತಾಂಗತಂ ಸ್ವಾಜ್ಞಾಪ್ರಾಪ್ತ ವಿಮಾನೇನದಿವಂನಿನ್ಯೇಜನಾರ್ದನಃ" ಪರಮಾತ್ಮನನ್ನು ಕಾಲಿಲೊದ್ದ ದೋಷದಿಂದ ಭೃಗುಋಷಿಯು ಜರಾ ಎಂಬ ಬೇಡನಾಗಿ ಹುಟ್ಟಿದುದನ್ನು ತಿಳಿದ ಶ್ರೀಕೃಷ್ಣನು ಆತನನ್ನು ತನ್ನ ಆಜ್ಞಾಪ್ರಕಾರ ಪ್ರಾಪ್ತವಾದ ವಿಮಾನದಲ್ಲಿ ಕೂಡಿಸಿ ಸ್ವರ್ಗಕ್ಕೆ ಕಳುಹಿದನು ಎಂದು ಭಾಗವತ ಏಕಾದಶಸ್ಕಂಧದ ಕಡೆಯ ಅಧ್ಯಾಯದ ತಾತ್ಪರ್ಯದಲ್ಲಿ ಹೇಳಿರುವರು. ಅದೇ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು. ಹೀಗೆ ಅಗ್ನಿ, ಭೃಗುಋಷಿ, ಪ್ರಸೂತಿ ಇವನ್ನು

'ಮೂವರು ಬ್ರಹ್ಮದೇವರ ಮಕ್ಕಳಾದ್ಯ-ಇದೇ ೨೩ನೆಯ ಪದ್ಯದಲ್ಲಿ ಹೇಳುವ ಮರೀಚಿ ಮೊದಲಾದ ಸಪ್ತಋಷಿಗಳಕಿಂತಲೂ ಉತ್ತಮರೆನಿಸುವರು ನಾರದರಕಿಂತಲೂ ಕಮ್ಮಿಯೆನಿಸುವರು. ಈ ಮೂವರಿಗೆ ಸಮನಾದ ಪ್ರಹ್ಲಾದನು ವಾಯುದೇವರ ಆವೇಶದಿಂದ ಕೂಡಿ ಬಾಹ್ಲೀಕ ರಾಜನಾಗಿ ಜನಿಸಿದನು ನಿರ್ಣಯ 11ನೆಯ ಅಧ್ಯಾಯವಲ್ಲಿ ·'ಪುತ್ರಿಕಾಪುತ್ರತಾಂಯಾತೋ ಬಾಹ್ಲೀಕೋ ರಾಜಸತ್ತಮಃ ||೭|| ಹಿರಣ್ಯಕಸಿಪೋಃ ಪುತ್ರಃ ಪ್ರಹ್ಲಾದೋಭಗವತ್ಪರಃ || ವಾಯುನಾಚಸಮಾವಿಷ್ಟೋಮಹಾಬಲಸಮನ್ವಿತಃ|| ೮|| ಯೇನ್ನೈವಜಾಯಮಾನೇನ ತರಸಾಭೂರ್ವಿದಾರಿತಾ || ಭೂಭಾರಕ್ಷಪಣೇವಿಷ್ಣೋಃರಂಗತಾಮಾಪ್ತುಮೇವಸಃ ||೯||ಪ್ರತೀಪಪುತ್ರತಾಮಾಪ್ಯಬಾಹ್ಲೀಕೇಷ್ವಭವತ್ಪತಿಃ'' ಕುರುವಂಶದ ರಾಜನಾದ ಪ್ರತೀಪನಿಗೆ ದೇವಾಪಿ, ಬಾಹ್ಲೀಕ, ಶಂತನು ಎಂದು ಮೂವರು ಮಕ್ಕಳು. ಮಗಳನ್ನು ಕೊಟ್ಟು ಮೊಮ್ಮಗನನ್ನ ತನಗೇನೇ ಕೊಡಬೇಕೆಂದು ಮೊದಲೇ ನಿಶ್ಚಯಮಾಡಿ ಹೆಣ್ಣು ಕೊಡುವುದಕ್ಕೆ ಪುತ್ರಿಕಾಪುತ್ರಧರ್ಮವೆಂದು ಹೆಸರು. ಆ ರೀತಿಯಾಗಿ ಹಸ್ತಿನಾಪುರದ ರಾಜನಾದ ಪ್ರತೀಪರಾಜನ ಮಗನಾದ ಬಾಹ್ಲೀಕರಾಜನು ತನ್ನ ತಾಯಿಗೆ ತಂದೆಯಾದ ಬಾಹ್ಲೀಕದೇಶಾಧಿಪತಿಗೆ ಪುತ್ರಿಕಾಪುತ್ರ ಧರ್ಮದಿಂದ ದತ್ತನಾಗಿ ಆ ದೇಶಾಧಿಪತಿಯಾದನು ಹಿರಣ್ಯಕಶ್ಯಪನ ಮಗನಾದ, ಮಹಾ ಭಗವದ್ಭಕ್ತನಾದ ಪ್ರಹ್ಲಾದನು ವಾಯುದೇವರ ಆವೇಶದಿಂದ ಕೂಡಿ ಮಹಾ ಬಲಾಢ್ಯನಾಗಿ ಬಾಹ್ಲೀಕನೆಂಬ ಹೆಸರಿನಿಂದ ಹುಟ್ಟಿದನು. ಇವನು ಹುಟ್ಟಿ ಭೂಸ್ಪರ್ಶವಾಗಲು ಭೂಮಿಯ ಆ ಭಾಗವು ಬಿರಿದುಹೋಯಿತು. ಪರಮಾತ್ಮನು ಭೂಮಿಯಲ್ಲಿ ಕೃಷ್ಣಾವತಾರಮಾಡಿ ಭೂಭಾರಹರಣ ಮಾಡುವುದರಲ್ಲಿ ತಾನು ಅಂಗಭೂತನಾಗಿ ಭೂಭಾರಹರಣಕ್ಕೆ ಸಹಾಯರೂಪವಾದ ಸೇವೆಯನ್ನು ಮಾಡಬೇಕೆಂಬುವುದೇ ಇವನ ಉದ್ದೇಶವು. ಪ್ರತೀಪರಾಜನ ಮಗನಾಗಿ ಹುಟ್ಟಿ ಬಾಹ್ಲೀಕ ದೇಶಕ್ಕೆ ಅಧಿಪತಿಯಾದನು ಎಂದು ಹೇಳಿರುವರು.

ತಾರತಮ್ಯ ಸ್ತೋತ್ರದಲ್ಲಾಗಲಿ ಹಿಂದಿನ ತಾರತಮ್ಯದಲ್ಲಾಗಲಿ ಪ್ರಹ್ಲಾದನನ್ನು ಶೇರಿಸಲಿಲ್ಲ. ಹೀಗಿರಲು ಮಧ್ಯದಲ್ಲಿ ಪ್ರಹ್ಲಾದನನ್ನು ದಾಸರಾಯರು ಶೇರಿಸಿ ಅವನ ಅವತಾರವನ್ನು ಇಲ್ಲಿ ಹೇಳಲು ಕಾರಣವೇನು ಎಂಬ ಶಂಕೆಯನ್ನು ಈ ಪದ್ಯದಿಂದ ಪರಿಹರಿಸುತ್ತಾರೆ—

**ಜನಪಕರ್ಮಜರೊಳಗೆ ನಾರದ**
**ಮುನಿಯನುಗ್ರಹ ಬಲದಿ ಪ್ರಹ್ಲಾ**
**ದನಲಭೃಗುಮುನಿದಕ್ಷಪತ್ನಿಗೆಸಮನೆನಿಸಿಕೊಂಬ||**
**ಮನುವಿವಾಸ್ವಾರ್ಗಾಧಿಜೀರ್ವರು**
**ಅನಲಗಿಂದಲಿಕಿಂಚಿತಾಧಮ**
**ಗೆ (ರೆ) ಣೆಯೆನಿಸುವರು ಸಪ್ತಋಷಿಗಳೆಲ್ಲಕಾಲದಲೀ ||೨೨||**

ಪದ್ಯಾರ್ಥ:—ಜನಪಕರ್ಮಜರೊಳಗೆ=ಪೂರ್ವದಲ್ಲಿ ರಾಜರಾಗಿದ್ದು ಕರ್ಮದಿಂದ ದೇವತ್ವವನ್ನು ಹೊಂದಿದವರು ಕರ್ಮಜರೆನಿಸುವರು. ಕರ್ಮ ದೇವತೆಗಳೊಳಗೆ ಒಬ್ಬನಾದ ಪ್ರಹ್ಲಾದನು ನಾರದಮುನಿಯ ಅನುಗ್ರಹಬಲ ದಿ ಉಪದೇಶರೂಪವಾದ ಅನುಗ್ರಹ ಬಲದಿಂದ, ಅನಲ=ಅಗ್ನಿ, ಭೃಗು ಮುನಿ, ದಕ್ಷಪತ್ನಿಗೆ-ಪ್ರಸೂತಿದೇವಿ=ಇವರಿಗೆ ಸಮನೆನಿಸಿಕೊಂಬ, ಮನುವಿ ವಸ್ವಾರ್ ಎಂಬ ಸೂರ್ಯನ ಮಗನಾದ ವೈವಸ್ವತನೆಂಬ ಮನುವು, ಗಾಧಿಜ= ಗಾಧಿರಾಜನ ಮಕ್ಕಳಾದ ವಿಶ್ವಾಮಿತ್ರ ಋಷಿಗಳು, ಈರ್ವರು=ಇವರಿಬ್ಬರೂ, ಅನಲಗಿಂದಲಿ-ಅಗ್ನಿಯಕಿಂತಲೂ, ಕಿಂಚಿತಾಧಮಗೆ=ಸ್ವಲ್ಪ ಕಮ್ಮಿಯಾದ, ಸಪ್ತಋಷಿಗಳಿಗೆ ಮರೀಚಿ ಮೊದಲಾದ ಸಪ್ತಋಷಿಗಳಿಗೆ, ಎಲ್ಲ ಕಾಲದಲಿ= ಅನಾದ್ಯನಂತ ಕಾಲದಲ್ಲೂ, ಎಣೆಯೆನಿಸುವರು=ಸಮರೆನಿಸುವರು. "ಅನ ಲಗಿಂತಲಿಕಿಂಚಿತಾಧಮರೆಣೆಯೆನಿಸುವರು ಸಪ್ತಋಷಿಗಳಿಗೆ ಎಂದು ಪಾಠಾಂ ತರ"; ಹಾಗಿದ್ದರೆ ವೈವಸ್ವತಮನು ವಿಶ್ವಾಮಿತ್ರರು ಇವರಿಬ್ಬರೂ ಅಗ್ನಿಯ ಕಿಂತಲೂ ಸ್ವಲ್ಪ ಅಧಮರು, ಸಪ್ತಋಷಿಗಳಿಗೆ ಸಮರೆಂವರ್ಥ ಮಾಡ ಬೇಕು.

ತಾತ್ಪರ್ಯ.—ಈ ಸಂಧಿಯ ೨೭ನೆಯ ಪದ್ಯದಲ್ಲಿ ಹೇಳುವ ಅರಸರಾಗಿ ದ್ದು ಕರ್ಮದಿಂದ ದೇವತ್ವ ಹೊಂದಿದ ಕರ್ಮದೇವತೆಗಳಲ್ಲಿ ಒಬ್ಬನಾದ ಪ್ರಹ್ಲಾದನು ಅಗ್ನಿ ಮೊದಲಾದವರಿಗೆ ಸಮನು ಹೇಗಾದನೆಂದರೆ, ಇವನು ತಾಯಿಯ ಗರ್ಭದಲ್ಲಿರುವಾಗಲೇ ನಾರದರು ಪರಮಾನುಗ್ರಹಮಾಡಿ ಭಗ ವನ್ಮಹಿಮೆಯನ್ನು ಉಪದೇಶ ಮಾಡಿದುದರಿಂದ ಅಧಿಕನಾದ ಭಗವದ್ಭಕ್ತಿ

ಯಿಂದ ಈ ಅಗ್ನಿ ಮೊದಲಾದ ಮೂವರಿಗೆ ಸಮನಾದನೆಂಬ ತಾತ್ಪರ್ಯ. ವೈವಸ್ವತಮನುವು, ವಿಶ್ವಾಮಿತ್ರರು ಇವರಿಬ್ಬರೂ ಅಗ್ನಿ ಮೊದಲಾದ ಮೂವರಕಿಂತಲೂ ಸ್ವಲ್ಪ ಕನ್ನಿಯೆನಿಸುವರು. ಮರೀಚಿ ಮೊದಲಾದ ಋಷಿಗಳಿಗೆ ಸರ್ವಕಾಲದಲ್ಲೂ ಸಮರೆನಿಸುವರು.

ಅವತಾರಿಕೆ.—ಮರೀಚಿ ಮೊದಲಾದ ಏಳು ಜನರು ಯಾರೆಂಬುವುದನ್ನೂ ಅವರ ತಾರತಮ್ಯವನ್ನೂ ಮಿತ್ರನೆಂಬ ಸೂರ್ಯನ ಅವತಾರಗಳನ್ನೂ ಹೇಳುತ್ತಾರೆ:—

**ಕಮಲಸಂಭವಭವರೆನಿಪಸಂ**
**ಯಮಮರೀಚಿಯು ಅತ್ರಿಯಂಗಿರ**
**ಸುಮತಿಪುಲಹಕ್ರತುವಶಿಷ್ಟಪುಲಸ್ತ್ಯಮುನಿಸ್ವಾಹಾ ॥**
**ರಮಣಗಧಮರು ಮಿತ್ರನಾಮಕ**
**ದ್ಯುಮಣಿರಾಹೂಯುಕ್ತಭೀಷ್ಮಕ**
**ಯಮಳರೂಪನು ತಾರನಾಮಕನೆನಿಸಿ ತ್ರೇತೆಯೊಳು ॥೨೩॥**

ಪದ್ಯಾರ್ಥ:—ಕಮಲ ಸಂಭವ=ಪರಮಾತ್ಮನ ನಾಭೀ ಕಮಲದಿಂದ ಜನಿಸಿದ ಬ್ರಹ್ಮದೇವರಿಂದ, ಭವರೆನಿಪ=ಹುಟ್ಟಿದವರೆನಿಸುವ, ಸಂಯಮ=ಜಿತೇಂದ್ರಿಯರಾದ, ಮರೀಚಿಯು=ಮರೀಚಿಋಷಿಯು, ಅತ್ರಿಯು, ಅಂಗಿರ=ಅಂಗಿರಸಋಷಿಯು, ಸುಮತಿ=ಜ್ಞಾನಿಗಳಾದ, ಪುಲಹ=ಪುಲಹಋಷಿಯು, ಕ್ರತು, ವಶಿಷ್ಟ, ಪುಲಸ್ತ್ಯಮುನಿ=ಪುಲಸ್ತ್ಯಋಷಿಗಳು ಇವರೇಳು ಮಂದಿ ಋಷಿಗಳೂ ಸ್ವಾಹಾರಮಣಗೆ=ಅಗ್ನಿಗೆ, ಅಧಮರು, ಮಿತ್ರನಾಮಕದ್ಯುಮಣಿ ಮಿತ್ರನೆಂಬ ಸೂರ್ಯನು, ರಾಹುಯುಕ್ತಭೀಷ್ಮಕ=ರಾಹು ಅಂಶದಿಂದ ಕೂಡಿ ಭೀಷ್ಮಕರಾಯನೆಂದು ಜನಿಸಿದನು. ತ್ರೇತೆಯೊಳು=ತ್ರೇತಾ ಯುಗದಲ್ಲಿ, ತಾರನಾಮಕನೆನಿಸಿ=ತಾರನಾಮಕನಾಗಿದ್ದು, ಯಮಳರೂಪನು=ಎರಡು ರೂಪಗಳುಳ್ಳವನಾದನು.

ತಾತ್ಪರ್ಯ.—ಬ್ರಹ್ಮದೇವರ ಮಕ್ಕಳಾದ ಮರೀಚಿ, ಅತ್ರಿ, ಅಂಗಿರ, ಪುಲಹ, ಕ್ರತು. ವಶಿಷ್ಟ, ಪುಲಸ್ತ್ಯ ಈ ಏಳುಮಂದಿ ಋಷಿಗಳೂ ಅಗ್ನಿ ಮೊದಲಾದ ಮೂವರಕಿಂತಲೂ ಕನ್ನಿಯೆನಿಸುವರು, ಮಿತ್ರನೆಂಬ ಸೂರ್ಯನಿಗೆ ಎರಡು ರೂಪಗಳು. ತ್ರೇತಾಯುಗದಲ್ಲಿ ತಾರನಾಮಕನಾಗಿದ್ದನು.

ಆದರೆ ಬೃಹಸ್ಪತ್ಯಾಚಾರ್ಯರು ತಾರನೆಂಬ ಕಪಿಯಾದರೆಂದು ದಾಸರಾಯರ ವಾಕ್ಯದಿಂದಲೂ. ನಿರ್ಣಯವಾಕ್ಯದಿಂದಲೂ. ಸಿದ್ಧಾಂತವಾಗಿರುವುದು. ಆದ್ದರಿಂದ ಮಿತ್ರನು ತಾರನೆಂಬ ಪುತ್ರೊಬ್ಬ ಕಪಿಯಾಗಿರಬಹುದೆಂದು ಊಹಿಸಬೇಕು. ಇದಕ್ಕೆ ಸರಿಯಾದ ಆಧಾರವು ನಮಗೆ ದೊರಕಲಿಲ್ಲ. ದಾಸಾರ್ಯರು ಅಪರೋಕ್ಷ ಜ್ಞಾನಿಗಳಾದುವರಿಂದಲೂ ಅನೇಕ ಗ್ರಂಥಗಳನ್ನು ನೋಡಿದವರಾದುವರಿಂದ ಯಾವ ಗ್ರಂಥಗಳ ಆಧಾರದ ಮೇಲೆ ಈ ಅವತಾರವನ್ನು ಹೇಳಿದರೆಂದು ಕಂಡು ಹಿಡಿಯಲು ನಮ್ಮ ಮಂದಬುದ್ಧಿಗ ಗೋಚರವಾಗಲಿಲ್ಲ, ಶ್ರೀಸಂಕರ್ಷಣ ಒಡೆಯರ ವ್ಯಾಖ್ಯಾನದಲ್ಲೂ ತಾರನೆಂಬ ಇವನು ಬೇರೆ; ಬೃಹಸ್ಪತಿ ಅವತಾರನಾದ ತಾರನು ಬೇರೆ ಎಂದು ಮಾತ್ರ ಬರೆದಿರುವರು ಅವರೂ ಆಧಾರ ಬರೆದಿಲ್ಲ. ಕಮಲಾಪತಿ ದಾಸರ ವ್ಯಾಖ್ಯಾನದಲ್ಲೂ "ತಾರನಾಮಕನೆನಿಸಿ" ಎಂಬ ಪದಕ್ಕೆ ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರೆಗೆ ಕೃಪೀ ಎಂದು ಅವತಾರ ಉಂಟೆಂದು ಬರೆದಿರುತ್ತಾರೆ ಇಲ್ಲಿರುವುದು ತಾರನೆಂದು ಪುಲ್ಲಿಂಗವಾಚಕವಾಗಿರುವುದು, ವ್ಯಾಖ್ಯಾನದಲ್ಲಿ ತಾರೆಯೆಂದು ಅರ್ಥಮಾಡಿರುವರು; ಇದು ಮೂಲಕ್ಕೂ ವ್ಯಾಖ್ಯಾನಕ್ಕೂ ಸರಿಹೋಗುವುದಿಲ್ಲ. ಪುಸ್ತಕಾಂತರದಲ್ಲಿ ಪಾಠಾಂತರವಿರಬಹುದೊ ಎಂಬ ಶಂಕೆಯೂ ಬಾಧಿಸುತ್ತಿರುವುದು. ಅಂತು ಇದು ಹೀಗೆ ಎಂದು ನಿರ್ಧರಿಸಲು ಸಾಧ್ಯವಾಗಲಿಲ್ಲ. ಮಿತ್ರನೆಂಬ ಸೂರ್ಯನಿಗೆ ಮತ್ತೊಂದು ಅವತಾರವು ಭೀಷ್ಮಕರಾಜನ ರೂಪವು. ಇವನಲ್ಲಿ ರಾಹುವಿನ ಆವೇಶವೂ ಇರುವುದು. ನಿರ್ಣಯ ೧೪ನೆಯ ಅಧ್ಯಾಯದಲ್ಲಿ" ಯಃಪೂರ್ವಮಾಸದಿತಿಜೋನರಹೇಲ್ವಲಾಖ್ಯೋ ರುಗ್ಮೀತಿ ನಾಮಃಬಭೂವಸುಕುಂಡಿನೇಶಃ॥೧॥ ಭಾಗೇತಏವತನಯಸ್ಯ ಸ ವವನ್ದೇರ್ನಾವಹ್ನಾರುಚೇಸ್ಸಚಪಿತಾಸ್ಯಹಿಮಿತ್ರಭಾಗಃ॥ ರಾಹ್ವಂಶಯುಕ್ ತದನುಜೌ ಕ್ರಥಕೈಶಿಕಾಖ್ಯೌ" ಪೂರ್ವದಲ್ಲಿ ಮನುಷ್ಯರನ್ನ ಕೊಲ್ಲುತ್ತಿದ್ದ ಇಲ್ವಲನೆಂಬ ದಾನವನೆ ರುಗ್ಮೀ ಎಂಬ ಹೆಸರಿನಿಂದ ಹುಟ್ಟಿ ಕುಂಡಿನಪಟ್ಟಣಕ್ಕೆ ಅಧಿಪತಿಯಾಗಿದ್ದನು. ಇವನಲ್ಲಿ ಶುಚಿಯೆಂಬ ಅಗ್ನಿಯ ಅಂಶವೂ ಇದ್ದಿತು. ಇವನ ತಂದೆಯಾದ ಭೀಷ್ಮಕರಾಜನು ರಾಹು ಅಂಶದಿಂದ ಕೂಡಿದ ಮಿತ್ರನೆಂಬ ಸೂರ್ಯನೆಂದು ತಿಳಿಯಬೇಕು. ಎಂದು ಹೇಳಿರುವರು.

ಅವತಾರಿಕೆ.—ನಿರುಋತಿಯ ಅವತಾರವನ್ನು ತಾರಾ ಮೊದಲಾದವರ ತಾರತಮ್ಯವನ್ನು ವಿಘ್ನೇಶ್ವರ ಅಶ್ವಿನೀ ಮೊದಲಾದವರ ವಿಷಯವನ್ನು ಈ ಪದ್ಯದಲ್ಲಿ ಹೇಳುತ್ತಾರೆ:—

**ನಿಋರ್ುತಿಗೆರಡವತಾರದುರ್ಮುಖ**
**ಹರಯುತಘಟೋತ್ಕಚನುಪ್ರಾವಹಿ**
**ಗುರುಮಡದಿ ತಾರಸಮರುಪರ್ಜನ್ಯಗುತ್ತಮರು ||**
**ಕರಿಗೊರಳಹರಯುಕ್ತ ಭಗದ**
**ತ್ತರಸು ಕಥ್ನನಧನಪರೂಪಗ**
**ಳೆರಡುವಿಘ್ನಪಚಾರುದೇಷ್ಣನು ಅಶ್ವಿನಿಗಳಸಮ ||೨೪||**

ಪದ್ಯಾರ್ಥ:—ನಿಋರ್ುತಿಗೆ, ದುರ್ಮುಖ= ದುರ್ಮುಖನೆಂಬ ಕಪಿ ರೂಪ ಒಂದು, ಹರಯುತ=ರುದ್ರದೇವರ ಆವೇಶದಿಂದ ಕೂಡಿದ ಘಟೋತ್ಕಚನು, ಎರಡವತಾರ=ಹೀಗೆ ಎರಡವತಾರಗಳು. ಪ್ರಾವಹಿ=ಪ್ರವಹ ವಾಯುವಿನ ಹೆಂಡತಿಯಾದ ಪ್ರಾವಹೀ, ಗುರುಮಡದಿ= ಬೃಹಸ್ಪತ್ಯಾಚಾರ್ಯರ ಹೆಂಡತಿ, ತಾರಾ=ತಾರಾದೇವಿಯು, ಸಮರು= ಪೂರ್ವಪದ್ಯದಲ್ಲಿ ಹೇಳಿದ ಮಿತ್ರನೆಂಬ ಸೂರ್ಯ. ನಿಋರ್ುತಿ, ಪ್ರಾವಹೀ, ತಾರೆ ಈ ನಾಲ್ವರೂ ಸಮರು ಪರ್ಜನ್ಯಗುತ್ತಮರು. ಧನಪ= ಕುಬೇರನಿಗೆ, ಕರಿಗೊರಳ= ನೀಲಕಂಠನೆನಿಸಿದ. ಹರಯುಕ್ತ=ರುದ್ರದೇವರ ಅಂಶದಿಂದ ಕೂಡಿದ, ಭಗದತ್ತರಸು=ನರಕಾಸುರನ ಮಗನಾದ ಭಗದತ್ತನೆಂಬ ರಾಜನ ರೂಪ ಒಂದು, ಕಥ್ನ= ಕಥ್ನನೆಂಬ ಕಪಿ ರೂಪ ಒಂದು, ಅಂತು ರೂಪಗಳೆರಡು. ವಿಘ್ನಪ= ಗಣಪತಿಯ ಅವತಾರವು ಚಾರುದೇಷ್ಣನೆಂಬ ಕೃಷ್ಣನ ಮಗನ ರೂಪವು, ಈ ಗಣಪತಿ ಧನಪರು ಅಶ್ವಿನಿಗಳ ಸಮ= ಅಶ್ವಿನೀ ದೇವತೆಗಳಿಗೆ ಸಮರೆನಿಸುವರು.

ತಾತ್ಪರ್ಯ.—ನಿಋರ್ುತಿಗೆ ದುರ್ಮುಖನೆಂಬ ಕಪಿ ರೂಪ ಒಂದು, ಘಟೋತ್ಕಚನ ರೂಪ ಒಂದು ಅಂತು ಎರಡು ರೂಪಗಳುಂಟು. ಭೀಮಸೇನ ದೇವರ ಮಗನಾದ ಘಟೋತ್ಕಚನಲ್ಲಿ ರುದ್ರದೇವರ ಆವೇಶವೂ ಇದ್ದಿತು. ಈ ನಿಋರ್ುತಿಗೆ ಸಮರು ಪ್ರವಹ ವಾಯುವಿನ ಪತ್ನಿ ಪ್ರಾವಹಿ, ಬೃಹಸ್ಪತ್ಯಾಚಾರ್ಯರ ಹೆಂಡತಿ ತಾರೆ. ಇವರೆಲ್ಲರೂ ಪರ್ಜನ್ಯನಗಿಂತಲೂ ೨ ಗುಣಗಳುತ್ತಮರು. ತಾರತಮ್ಯ ಕೌಸ್ತುಭದಲ್ಲಿ ಹೇಳಿರುವ ‘‘ಮಹಾಬಲೀದುರ್ಮು

ಖಶ್ಚ ರುದ್ರಯುಕ್ತೋ ಘಟೋತ್ಕಚಃ॥ ದ್ವಾವೇತೌನಿರ್ಋತಿಃ ಪೂರ್ವಂ" ಎಂಬ ವಾಕ್ಯವು ನಿರ್ಋತಿಯ ಅವತಾರಗಳಿಗೆ ಆಧಾರವೆಂದು ತಿಳಿಯಬೇಕು ಕುಬೇರನಿಗೆ ಕತ್ಥನನೆಂಬ ಕಪಿರೂಪ ಒಂದು; ನರಕಾಸುರನಮಗ ಭಗದತ್ತ ರೂಪ ಒಂದು ಅಂತು ಎರಡವತಾರಗಳು. ಸುಕತ್ಥನೋವಿತ್ತಪತಿಃ ಎಂದು ನಿರ್ಣಯ ಆನೆಯಅಧ್ಯಾಯದಲ್ಲಿ ಹೇಳಿರುವರು. ಭಗದತ್ತನಲ್ಲಿ ರುದ್ರದೇವರ ಅಂಶವೂ ಇದ್ದಿತು. ನಿರ್ಣಯ ೧೧ನೆಯ ಅಧ್ಯಾಯದಲ್ಲಿ "ವಿತ್ತೇಶ್ವರಃ ಪೂರ್ವಮಘೂದ್ಧಿಭೌಮಾದ್ವರೇಃ ಸುತತ್ವೇಪಿ ತದಿಚ್ಛಯಾಸುರಾತ್ ॥ ವಾಪೇನ ತೇನಾಪಹೃತೋಽಹಸ್ತೀಶವಪ್ರದತ್ತಃ ಸುಪ್ರತೀಕಾಭಿಧಾನಃ ॥ತ ತದರ್ಥಮೇವಾಸ್ಯಸುತೋಭಿಜಾತೋ ಧನೇಶ್ವರೋ ಭಗದತ್ತಾಭಿದೇಯಃ ಮಹಾಸೂರಸ್ಯಾಂಶಯುತಃ ಸಏವ ರುದ್ರಾವೇಶಾದ್ಬಲವಾನಸ್ತ್ರವಾಂಶ್ಚ" ಪರಮಾತ್ಮನು ಕೃಷ್ಣಾವತಾರ ಮಾಡುವುದಕ್ಕೆ ಪೂರ್ವದಲ್ಲಿ ದೇವತೆಗಳೆಲ್ಲರು ಆತನ ಸೇವಾರ್ಥವಾಗಿ ಜನಿಸಬೇಕೆಂದು ಬ್ರಹ್ಮದೇವರ ಅಪ್ಪಣೆಯಾಯಿತು. ಅದಕ್ಕಿಂತಲೂ ಮುಂಚಿತವಾಗಿಯೇ ಕುಬೇರನು ನರಕಾಸುರನ ಮಗನಾಗಿ ಜನಿಸಿದ್ದನು. ಕಾರಣವೇನೆಂದರೆ, ಪಾಪಿಯಾದ ನರಕಾಸುರನು ಕುಬೇರನಿಗೆ ರುದ್ರದೇವರು ಕೊಟ್ಟಿದ್ದ ಸುಪ್ರತೀಕವೆಂಬ ಆನೆಯನ್ನು ಅಪಹರಿಸಿ ಬಿಟ್ಟಿದ್ದನು. ಅದರ ಲೋಭದಿಂದ ಆ ಪಾಪೀಗೆ ಮಗನಾಗಿ ಹುಟ್ಟಿ ಆ ಆನೆಯನ್ನು ತನ್ನ ಸ್ವಾಧೀನಪಡಿಸಿಕೊಳ್ಳುವ ಉದ್ದೇಶದಿಂದ ಕುಬೇರನು ಭಗದತ್ತನೆಂಬ ಹೆಸರಿನಿಂದ ನರಕಾಸುರನಿಗೆ ಮಗನಾಗಿ ಹುಟ್ಟಿದನು. ಇವನಲ್ಲಿ ನರಕಾಸುರನ ಆವೇಶವು ನರಕಾಸುರನು ಬದುಕಿರುವವರೆಗೂ ಇದ್ದಿತು. ನರಕಾಸುರನು ಮೃತನಾದಮೇಲೆ ಅಸುರಾವೇಶವು ನಿವೃತ್ತಿಯಾಯಿತು. ಇವನಲ್ಲಿ ರುದ್ರಾವೇಶವೂ ಇದ್ದುದರಿಂದ ಮಹಾ ಬಲಾಢ್ಯನಾಗಿ ಅಸ್ತ್ರಾಭಿಜ್ಞನಾಗಿ ಇದ್ದನು, ಎಂದು ಹೇಳಿರುವರು. ಹೀಗೆ ಕುಬೇರನಿಗೆ ಎರಡು ಅವತಾರಗಳು ವಿಷ್ವಕ್ಸೇನನಿಗೆ ಒಂದೇಅವತಾರವು ಚಾರುದೇಷ್ಣನೆಂದು ನಿರ್ಣಯ ೨೦ನೆಯ ಅಧ್ಯಾಯದಲ್ಲಿ "ಭೈಷ್ಮ್ಯಾಮಥಚಾರುದೇಷ್ಣಃ॥ ಸಚಾರುದೇಷ್ಣಃ ಪೂರ್ವಂ ವಿಷ್ವಕ್ಸೇನರಾಜಃ" ಶ್ರೀಕೃಷ್ಣನ ದೆಸೆಯಿಂದ ರುಗ್ಮಿಣಿಯಲ್ಲಿ ಚಾರುದೇಷ್ಣನೆಂಬ ಕುಮಾರನು ಹುಟ್ಟಿದನು. ಆ ಚಾರುದೇಷ್ಣನು ಪೂರ್ವದಲ್ಲಿ ವಿಷ್ವಕ್ಸೇನನು ಎಂದು ಹೇಳಿರುವರು. ಇದೇ ವಾಕ್ಯವನ್ನೇ ದಾಸಾರ್ಯರು

ಇಲ್ಲಿ ಹೇಳಿರುವರು. ಈ ಕುಬೇರನು, ಗಣಪತಿಯೂ, ಅಶ್ವಿನೀ ದೇವತೆಗಳಿಗೆ ಸಮರೆನಿಸುವರು.

ಅವತಾರಿಕೆ.—ಪ್ರಧಾನರಾದ ೧೦೮ ಮಂದಿ ದೇವತೆಗಳ ಪೈಕಿ ಹಿಂದೆ ಹೇಳಿದವರನ್ನು ಬಿಟ್ಟು ಉಳಿದ ದೇವತೆಗಳ ತಾರತಮ್ಯವನ್ನೂ ಅವ ತಾರಗಳನ್ನೂ ಹೇಳುತ್ತಾ ಈ ಪದ್ಯದಿಂದ ಅಷ್ಟವಸುಗಳ ಅವತಾರ ತಾರ ತಮ್ಯವನ್ನು ಹೇಳುತ್ತಾರೆ:—

**ದ್ರೋಣಧ್ರುವ ದೋಷಾರ್ಕನಗ್ನಿ**
**ಪ್ರಾಣದ್ಯು ವಿಭಾವಸುಗಳೆಂಟುಕೃ**
**ಶಾನುಶ್ರೇಷ್ಠದ್ಯುನಾಮವಸು ಭೀಷ್ಮಾರ್ಯ ಬ್ರಹ್ಮಯುತ ||**
**ದ್ರೋಣನಾಮಕನಂದಗೋಪ ಪ್ರ**
**ಧಾನಅಗ್ನಿಯನುಳಿದುಯೇಳುಸ**
**ಮಾನರೆನಿಪರು ತಮ್ಮೊಳಗೆಜ್ಞಾನಾದಿಗುಣದಿಂದ ||೨೫||**

ಪದ್ಯಾರ್ಥ:—ದ್ರೋಣ, ಧ್ರುವ, ದೋಷ ಅರ್ಕನು, ಅಗ್ನಿ, ಪ್ರಾಣ, ದ್ಯು, ವಿಭಾವಸುಗಳು ಹೀಗೆ ಎಂಟು ವಸುಗಳು, ಕೃಶಾನುಶ್ರೇಷ್ಠ= ಇವರಲ್ಲಿ ಪ್ರಧಾನನಾದ ಅಗ್ನಿಯು ಶ್ರೇಷ್ಠನು. ದ್ಯುನಾಮವಸು=ದ್ಯು ಎಂಬ ಹೆಸರುಳ್ಳ ವಸುವು, ಬ್ರಹ್ಮಯುತ=ಬ್ರಹ್ಮದೇವರ ಅಂಶದಿಂದ ಕೂಡಿ ಭೀಷ್ಮಾಚಾರ್ಯ=ಭೀಷ್ಮಾಚಾರ್ಯರೆಂದು ಜನಿಸಿದನು. ದ್ರೋಣನಾಮಕ= ದ್ರೋಣನೆಂಬ ವಸು, ನಂದಗೋಪ=ನಂದಗೋಪನಾಗಿ ಹುಟ್ಟಿದನು. ಪ್ರ ಧಾನ ಅಗ್ನಿಯನುಳಿದು=ಆ ವಸುಗಳಲ್ಲಿ ಪ್ರಧಾನನಾದ ಅಗ್ನಿಯನ್ನು ಬಿಟ್ಟು, ಏಳು=ಏಳು ವಸುಗಳು, ತಮ್ಮೊಳಗೆ ಜ್ಞಾನಾದಿ ಗುಣದಿಂದ ಸಮಾನರೆನಿ ಪರು.

ತಾತ್ಪರ್ಯ.—"ನವಕೋಟ್ಯೋಹಿ ದೇವಾನಾಂತೇಷಾಂಮಧ್ಯೇಶತ ಸ್ಯತು || ಸೋಮಾಧಿಕಾರೋ ವೇದೋಕ್ತೋ " ಎಂಬ ತಾರತಮ್ಯ ಸಂಗ್ರ ಹದ ವಾಕ್ಯದಂತೆ ದೇವತೆಗಳ ಒಂಭತ್ತು ಕೋಟಿಗಳ ಪೈಕಿ ೧೦೦ ದೇವತೆಗಳಿಗೆ ಮಾತ್ರವೇ ಸೋಮಪಾನ ಉಂಟೆಂದು ವೇದದಲ್ಲಿ ಹೇಳಿರು ವುದು. ಆ ೧೦೦ ಮಂದಿಯಲ್ಲಿ ಕೆಲವರ ತಾರತಮ್ಯವು ಹಿಂದೆ ಹೇಳಲ್ಪ ಟ್ಟಿದೆ. ಉಳಿದವರ ಅವತಾರಗಳನ್ನು ತಾರತಮ್ಯವನ್ನು ಹೇಳುತ್ತಾರೆ;

ತಾತ್ಪರ್ಯ.—ಮೇಲೆ ಹೇಳಿದ ಏಕಾದಶ (೧೧) ರುದ್ರರ ಪೈಕಿ ಭವ ಎಂಬ ಹೆಸರುಳ್ಳ ಪಾರ್ವತೀ ಪತಿಯು ಉತ್ತಮ ಕಕ್ಷದಲ್ಲಿ ಸೇರಿರುತ್ತಾರೆ. ಉಳಿದ ೧೦ ರುದ್ರರು ಮಾತ್ರ ತಮ್ಮೊಳಗೆ ಎಲ್ಲರೂ ಸಮರೆಂದು ತಿಳಿಯಬೇಕು

ಅವತಾರಿಕೆ.—ದಶರುದ್ರರ ಅವತಾರಗಳನ್ನು ಹೇಳುತ್ತಾರೆ.

**ಭೂರ್ಯಜೈಕಪದಾಹ್ವಯಹಿರ್ಬು**
**ಧ್ನೀರಯಿದು ರುದ್ರಗಣ ಸಂಯುತ**
**ಭೂರಿಶ್ರವನೆಂದೆನಿಪ ಶಲವಿರೂಪಾಕ್ಷ ನಾಮಕನೂ ||**
**ಸೂರಿಕೃಪವಿಷ್ಕಂಭ ಸಹದೇ**
**ವಾರಣಾಗ್ರಣಿ ಸೋಮದತ್ತನು**
**ತಾರಚಿಸಿದ ದ್ವಿರೂಪಧರೆಯೊಳು ಪತ್ರತಾಪಕನೂ ||೨೭||**

ಪದ್ಯಾರ್ಥ.—ಅಜೈಕಪದಾಹ್ವಯ=ಅಜೈಕಪಾತ್ ಎಂಬ ರುದ್ರನು, ಭೂರಿ ಭೂರಿ ರಾಜನಾಗಿ ಜನಿಸಿದನು. ಅಹಿರ್ಬುಧ್ನಿ=ಈ ಹೆಸರುಳ್ಳ ರುದ್ರನು, ಈರಯಿದು ರುದ್ರಗಣ ಸಂಯುತ-೧೦ ರುದ್ರರ ಅಂಶದಿಂದ ಕೂಡಿ, ಭೂರಿಶ್ರವನೆಂದೆನಿ =ಭೂರಿಶ್ರವ ರಾಜನೆಂದೆನಿಸಿಕೊಂಡನು. ವಿರೂಪಾಕ್ಷ ನಾಮಕನು ವಿರೂಪಾಕ್ಷನೆಂಬ ರುದ್ರನು, ಶಲ=ಶಲರಾಜನಾದನು, ವಿಷ್ಕಂಭ=ಆ ಹೆಸರುಳ್ಳ ರುದ್ರನು, ಸೂರಿ=ಜ್ಞಾನಿಯಾದ, ಕೃಪ=ಕೃಪಾಚಾರ್ಯನಾಗಿ ಜನಿಸಿದನು. ಸಹದೇವ ಜರಾಸಂಧನ ಮಗನಾದ ಸಹದೇವನೂ, ರಣಾಗ್ರಣಿ=ರಣದಲ್ಲಿ ಶೂರನಾದ ಸೋಮದತ್ತನೂ, ದ್ವಿರೂಪ ಈ ಎರಡು ರೂಪಗಳನ್ನು ಪತ್ರತಾಪಕನೂ=ಪತ್ರತಾಪಕನೆಂಬ ರುದ್ರನು, ಧರೆಯೊಳು=ಭೂಮಿಯಲ್ಲಿ, ತಾರಚಿಸಿದ=ತಾನು ಸೃಷ್ಟಿಸಿದನು ಅಂದರೆ ಎರಡು ರೂಪಗಳಿಂದ ಅವತರಿಸಿದನೆಂದರ್ಥ.

ತಾತ್ಪರ್ಯ.—ಅಜೈಕಪಾತ್, ಅಹಿರ್ಬುಧ್ನಿ, ವಿರೂಪಾಕ್ಷರೆಂಬ ಮೂರು ಮಂದಿ ರುದ್ರರು ಸೋಮದತ್ತನ ಮಕ್ಕಳಾಗಿ ಭೂರಿ, ಭೂರಿಶ್ರವ, ಶಲ ಎಂಬ ಹೆಸರುಗಳಿಂದ ಜನಿಸಿರುವರು. ಈ ಮೂವರ ತಂದೆಯಾದ, ಪ್ರಹ್ಲಾದಾಂಶನಾದ ಬಾಹ್ಲೀಕ ರಾಜನ ಮಗನಾದ ಸೋಮದತ್ತ ರಾಜನು, ಪತ್ರತಾಪನೆಂಬ ರುದ್ರನ ಅವತಾರವು. ನಿರ್ಣಯ ೧೧ನೆಯ ಅಧ್ಯಾಯದಲ್ಲಿ, "ಪ್ರತೀಪಪುತ್ರಾಪಾಪ್ಯ ಬಾಹ್ಲೀಕಿಷ್ಟ ಭವತ್ಸುತಃ|| ರುದ್ರೇಷುಪತ್ರತಾಪಾಖ್ಯಃ

ಸೋಮದತ್ತೋಽಸ್ಯಜಾತ್ಮಜಃ ॥ ೧॥ ಅಜೈಕಪಾದಹಿರ್ಬುಧ್ನಿರ್ವಿರೂಪಾಕ್ಷ ಇತಿತ್ರಯಃ ॥ ರುದ್ರಾಣಾಂಸೋಮದತ್ತಸ್ಯ ಬಭೂವುಃಪ್ರಥಿತಾಃ ಸುತಾಃ ॥ ವಿಷ್ಣೋರೇವಾಂಗತಾಃ ಪ್ರಾಪ್ತುಂ ಭೂರಿ ಭೂರಿಶ್ರವಾಃ ಶಲಃ ॥ಶಿವಾದಿ ಸರ್ವರುದ್ರಾಣಾಮಾವೇಶಾದ್ವರತಸ್ತಥಾ ॥೧೨॥ ಭೂರಿಶ್ರವಾ ಅತೀವ ಲಸ್ತತ್ರಾಸೀತ್ಪರಮಾಸ್ತ್ರವಿತ್ ॥ ತದರ್ಥಂಹಿತಪಸ್ತೀರ್ಣಂ ಸೋಮದತ್ತೇನ ಶಂಭವೇ ॥೧೩॥ದತ್ತೋವರಸ್ತತೇನಾಸ್ಯ ತ್ವತ್ಪ್ರತೀಪಾಭಿಭೂತಿಶೃತ್ ॥ ಬಲವೀರ್ಯಗುಣೋಪೇತೋ ನಾಮ್ನಾಭೂರಿಶ್ರವಾಃ ಸುತಃ ॥೧೪॥ ಆವಿಷ್ಯತಿ ಮಯಾಪಿಷ್ಟೋ ಯಜ್ಞಶೀಲ ಇತಿಸ್ಮಹ ॥ ತೇನಭೂರಿಶ್ರವಾ ಜಾತಃ ಸೋಮದತ್ತಸುತೋಬಲೀ ॥೧೫॥ " ಪ್ರತೀಪರಾಜನ ಮಕ್ಕಳು ದೇವಾಪಿ, ಬಾಲ್ಹೀಕ, ಶಂತನು ಎಂಬ ಮೂವರು; ಅವರಲ್ಲಿ ಪ್ರಹ್ಲಾದನು ಬಾಲ್ಹೀಕ ರಾಜನಾಗಿ ಜನಿಸಿದನೆಂದು ೨೧ನೆಯ ಪದ್ಯದಲ್ಲಿ ಹೇಳಲ್ಪಟ್ಟಿದೆ. ರುದ್ರರಲ್ಲಿ ಪತ್ರತಾಪನೆಂಬ ರುದ್ರನು ಸೋಮದತ್ತನೆಂಬ ಹೆಸರಿನಿಂದ ಬಾಲ್ಹೀಕ ರಾಜನ ಮಗನಾಗಿ ಜನಿಸಿದನು. ಅಜೈಕಪಾತ್, ಅಹಿರ್ಬುಧ್ನಿ, ವಿರೂಪಾಕ್ಷರೆಂಬ ಮೂರು ಮಂದಿ ರುದ್ರರು, ಭೂರಿ, ಭೂರಿಶ್ರವಾ, ಶಲ ಎಂಬ ಹೆಸರುಗಳಿಂದ ಇವನ ಮಕ್ಕಳಾಗಿ ಜನಿಸಿದರು. ಅವರಲ್ಲಿ ಭೂರಿಶ್ರವರಾಜನು ಉಮಾಪತಿಯಾದ ಶಿವ ಮೊದಲಾದ ಎಲ್ಲಾ ರುದ್ರರ ಆವೇಶದಿಂದಲೂ ವರ ಬಲದಿಂದಲೂ, ಪರಮಾಸ್ತ್ರವೇತ್ತನಾಗಿ ಮಹಾ ಬಲಾಢ್ಯನಾದನು. ವರ ಬಲವೇನೆಂದರೆ; ಪೂರ್ವದಲ್ಲಿ ಸೋಮದತ್ತನು ರುದ್ರದೇವರನ್ನು ಕುರಿತು ಇಂತಹಾ ಮಗನು ಹುಟ್ಟಬೇಕೆಂದು ತಪಸ್ಸು ಮಾಡಿದನು. ಆಗ ರುದ್ರದೇವರು "ನಿನ್ನ ಶತ್ರುವನ್ನು ಮರ್ದನ ಮಾಡುವ ಶಕ್ತಿಯುಳ್ಳವನಾಗಿ ಬಲ, ವೀರ್ಯ, ಗುಣ ಇವುಗಳಿಂದ ಕೂಡಿ ಭೂರಿಶ್ರವಾ ಎಂಬ ಮಗನು ಹುಟ್ಟುವನು. ಅವನಲ್ಲಿ ನನ್ನ ಆವೇಶವೂ ಇರುವುದು. ಯಜ್ಞಶೀಲನೆಂದು ಕೀರ್ತಿಪಡೆಯುವನು." ಎಂದು ವರವನ್ನಿತ್ತರು. ಆದುದರಿಂದ ಭೂರಿಶ್ರವನು ಅಷ್ಟು ಬಲಾಢ್ಯನಾಗಲು ಕಾರಣವಾಯಿತು. ವಿಷ್ಕಂಭನೆಂಬ ರುದ್ರನು ಕೃಪಾಚಾರ್ಯನಾಗಿ ಜನಿಸಿದನು. ನಿರ್ಣಯ ೧೦ನೆಯ ಅಧ್ಯಾಯದಲ್ಲಿ ಶರದ್ವಾಂಸ್ತು ತಪಃ ಕುರ್ವನ್ ದದರ್ಶಸಹಸೋರ್ವಶೀಂ ॥ ತಸ್ಯೈದರೇತಸ್ತ್ರಸ್ಮಾಥ ಶರಸ್ತಂಬೇ ತತೋಽಭವತ್ ॥೫೭॥ ವಿಷ್ಕಂಭೋನಾಮ ರು

ದ್ರಾಣಾಂ ಭೂಭಾರ ಹರಣೇಂಗತಾಂ || ಹರೇಃ ಪ್ರಾಪ್ತ್ಯಂ ತಥಾತಾರಾ ಭಾರ್ಯಾಯಾಹಿ ಬೃಹಸ್ಪತೇಃ ||೫೮|| ತಾವುಭೌಶಂತನುರ್ದೃಷ್ಟ್ವಾ ಕೃಪಾ ವಿಷ್ಟಃ ಸ್ವಕಂಗೃಹಂ || ನಿನಾಯ ನಾಮಚಕ್ರೇಥಕೃಪಾಯಾವಿಷಯೌ ಸು ತಃ ||೫೯|| ಕೃಪಃ ಕೃಪೀತಿ ” ಶರದ್ವಾನ್ ಎಂಬ ಋಷಿಗಳು ತಪಸ್ಸು ಮಾಡು ತ್ತಿರುವಾಗ ಊರ್ವಶಿಯನ್ನು ನೋಡಲು ಇವರ ರೇತಸ್ಸು ಸ್ಖಲನವಾಗಿ ಶರ ಸ್ತಂಬದಲ್ಲಿ ಬೀಳುವಾಗ ಎರಡುಭಾಗಗಳಾಗಿ ಬೀಳಲು ಅಲ್ಲಿಂದ ಒಂದು ಗಂಡು, ಒಂದು ಹೆಣ್ಣು ಹೀಗೆ ಇಬ್ಬರು ಮಕ್ಕಳು ಹುಟ್ಟಿದರು. ಆ ಇಬ್ಬರ ಪೈಕಿ ಮಗನು ರುದ್ರರಲ್ಲಿ ವಿಷ್ಕಂಭನೆಂಬ ರುದ್ರನು, ಪರಮಾತ್ಮನು ಭೂ ಭಾರಹರಣ ಮಾಡಲು ಭೂಮಿಯಲ್ಲಿ ಅವತರಿಸುವನು, ಅದಕ್ಕೆ ನಾನೂ ಅಂ ಗಭೂತನಾಗಬೇಕೆಂಬ ಉದ್ದೇಶದಿಂದ ಅಲ್ಲಿ ಹುಟ್ಟಿದನು. ಮಗಳು, ಬೃಹ ಸ್ಪತ್ಯಾಚಾರ್ಯರು ದ್ರೋಣಾಚಾರ್ಯರಾಗಿ ಜನಿಸುವರೆಂದು ಅವರ ಪತ್ನಿಯಾದ ತಾರೆಯು ದ್ರೋಣ ಪತ್ನಿಯಾಗುವುದಕ್ಕಾಗಿ ಇಲ್ಲಿ ಜನಿಸಿದಳು. ಇವರಿಬ್ಬ ರನ್ನು ಮೃಗ ಬೇಟೆಗೆ ಬಂದಿದ್ದ ಶಂತನು ಚಕ್ರವರ್ತಿಯು ಕರುಣದಿಂದ ಮ ನೆಗೆ ಕರೆತಂದು ಕೃಪಾವಿಷಯರಾದುದರಿಂದ ಗಂಡಿಗೆ—ಕೃಪನೆಂತಲೂ, ಹೆಣ್ಣಿಗೆ—ಕೃಪಿ ಎಂತಲೂ, ನಾಮಕರಣ ಮಾಡಿದನು ಎಂದು ಹೇಳಿರುವರು. ಈ ಕೃಪಾಚಾರ್ಯರೆ ವಿಷ್ಕಂಭನೆಂಬ ರುದ್ರನೆಂದು ತಿಳಿಯಬೇಕು. ಯದ್ಯಪಿ 11 ರುದ್ರರಲ್ಲಿ ಪತ್ರತಾಪ, ವಿರೂಪಾಕ್ಷ, ವಿಷ್ಕಂಭ ಇವರು ಸೇರಲಿಲ್ಲ. ಈ ರುದ್ರರು ಯಾರೆಂದರೆ, ಏಕಾದಶ ರುದ್ರರಲ್ಲದೆ ಇನ್ನು ಕೋಟಿ ಸಂಖ್ಯಾಕ ರಾದ ರುದ್ರರಿರುವರು ಅವರಲ್ಲಿ ಪ್ರಧಾನರಿವರೆಂದು ತಿಳಿಯಬೇಕು. ಭಾಗ ವತ ಷಷ್ಟಸ್ಕಂಧ 6ನೆಯ ಅಧ್ಯಾಯದಲ್ಲಿ “ಭೂತಸ್ಯ ಭಾರ್ಯಾಭೂತಾ ಯಾ ರುದ್ರಾನೇಕಾದಶಾಸುವತ್ || ಸುರೂಪ್ಯಾ ಸೂತ ಭೂತಸ್ಯ ಭಾರ್ಯಾ ರುದ್ರಾಂಶ್ಚ ಕೋಟಿಶಃ ||೧೭|| ” ದಕ್ಷಪ್ರಜೇಶ್ವರನು ಪ್ರಾಚೇತಸನಾಗಿ ಹುಟ್ಟಿ ೬೦ ಹೆಣ್ಣು ಮಕ್ಕಳನ್ನು ಪಡೆದನು. ಅವರ ಪೈಕಿ ಭೂತ ಎಂಬುವ ರಿಗೆ ಇಬ್ಬರು ಹೆಣ್ಣು ಮಕ್ಕಳನ್ನು ಕೊಟ್ಟನು. ಭೂತೆ ಮತ್ತು ಸುರೂಪೆ ಎಂದು ಅವರ ಪೈಕಿ ಭೂತೆ ಎಂಬಾಕೆಯಲ್ಲಿ ಏಕಾದಶ(11) ರುದ್ರರು ಹುಟ್ಟಿದರು. ಸುರೂಪೆ ಎಂಬಾಕೆಯಲ್ಲಿ ಕೋಟಿಶಃ ರುದ್ರರು ಹುಟ್ಟಿದರೆಂದು ಹೇಳಿರುವರು. ಆ ಆಧಾರದಿಂದ ವಿಷ್ಕಂಭಾದಿಗಳು ಆ ರುದ್ರಗಣಕ್ಕೆ ಸೇರಿದ

ವರೆಂದು ತಿಳಿಯಬೇಕು. ಪತ್ರತಾಪನೆಂಬ ರುದ್ರನಿಗೆ ಸೋಮದತ್ತರೂಪ ವಲ್ಲವೆ ಮತ್ತೊಂದು ಅವತಾರವು ಉಂಟು. ಅದು ಯಾವುದೆಂದರೆ, ಜರಾಸಂಧನ ಮಗನು ಸಹದೇವನೆಂಬುವನು. ನಿರ್ಣಯ 21ನೆಯ ಅಧ್ಯಾಯ ದಲ್ಲಿ ''ಇತೀಕ್ಷ್ಯ ಭೀಮಂಪ್ರತಿಯೋಧನಾಯ ಸಂಗೃಹ್ಯರಾಜ ಸಹಜಾದಾಸು ತೋ ಬಲೀ। ರಾಜ್ಯೇ ನಿಜಂಚಾತ್ಮಜಮಭ್ಯಷಿಂಚತ್ ಪುರಾಖ್ಯಾ ತಂ ಪತ್ರ ತಾಪಾಖ್ಯ ರುದ್ರಂ ॥೧೫॥ '' ಜರಾಸಂಧನನ್ನು ಕೊಲ್ಲುವುದಕ್ಕಾಗಿ ಕೃಷ್ಣ, ಭೀಮಸೇನ, ಅರ್ಜುನ ಮೂವರೂ ಬಂದು ನಮ್ಮ ಮೂವರ ಪೈಕಿ ಯಾರ ನ್ನಾದರೂ ಯುದ್ಧಕ್ಕೆ ಕರೆ ಎಂದು ಕೃಷ್ಣನು ಹೇಳಲು, ಭೀಮಸೇನನ ಸಂ ಗಡ ಯುದ್ಧವನ್ನು ಮಾಡುವೆನೆಂದು ಹೇಳಿ ಜರಾಸಂಧನು ತನ್ನ ಮಗನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿಬಿಟ್ಟನು. ಅವನು ಪೂರ್ವದಲ್ಲಿ ಪತ್ರ ತಾಪನೆಂಬ ರುದ್ರನು ಎಂದು ಹೇಳಿರುವರು. ಇವನ ಹೆಸರನ್ನು ಹೇಳಲಿಲ್ಲ. ಸುಮ್ಮನೆ ಮಗನೆಂದು ಹೇಳಿರುವರು. ಇವನೇ ಸಹದೇವನೆಂದು ಹೇಗೆ ನಿಶ್ಚಯಿಸಬೇಕೆಂದರೆ, ಇದೇ ಅಧ್ಯಾಯ ೧೭೧ನೆಯ ಶ್ಲೋಕದಲ್ಲಿ ಜರಾಸಂ ಧನ ಸಂಹಾರವಾದ ಕೂಡಲೆ ''ಸುತೋಽಸ್ಯಯೌಶರಣಂ ತಾನ್ ರಮೇಶ ಭೀಮಾರ್ಜುನಾನ್ ಸಹದೇವೋಽಸ್ಯಧೀಮಾನ್॥ '' ತನ್ನ ತಂದೆಯನ್ನು ಭೀಮ ಸೇನನು ಸಂಹಾರ ಮಾಡಲು ಜರಾಸಂಧನ ಮಗನಾದ ಸಹದೇವನು ಕೃಷ್ಣ ಭೀಮಾರ್ಜುನರನ್ನು ಮೊರೆಹೊಕ್ಕನು. ಅಲ್ಲದೇ ಉತ್ತಮವಾದ ಒಂದು ರಥವನ್ನೂ ತನ್ನ ತಂಗಿಯನ್ನೂ ಭೀಮಸೇನಾರ್ಥವಾಗಿ ಕೊಟ್ಟನು. ಭೀಮ, ಸೇನದೇವರು ತನ್ನ ತಮ್ಮನಾದ ಸಹದೇವನಿಗೆ ಆ ಕನ್ಯೆಯನ್ನು ಮದುವೆ ಮಾಡಿಸಿದರೆಂದು ಹೇಳಿರುವರು. ಈ ಆಧಾರದಿಂದ ಸಹದೇವನೆಂಬ ಜರಾ ಸಂಧನ ಮಗನೇ ಪತ್ರತಾಪಾವತಾರನೆಂದು ನಿಶ್ಚಯವಾಗುವುದು. ಅಂತು ಪತ್ರತಾಪನೆಂಬ ರುದ್ರನಿಗೆ ಸಹದೇವ, ಸೋಮದತ್ತನೆಂಬ ಎರಡು ಅವ ತಾರಗಳೆಂದು ಹೇಳಿದಂತಾಯಿತು.

ಅವತಾರಿಕೆ.—ದ್ವಾದಶಾದಿತ್ಯರನ್ನೂ ಅವರ ಅವತಾರಗಳನ್ನೂ ಹೇ ಳುತ್ತಾರೆ.

ದೇವಶಕ್ರನುರುಕ್ರಮಾಮಿ
ತ್ರಾವರುಣ ಪರ್ಜನ್ಯ ಭಗ ಪೂ
ಷಾವಿವಸ್ವನು ಸವಿತೃಧಾತಾ ಅರ್ಯಮತ್ವಷ್ಟಾ ॥
ದೇವಕೀ ಸುತನಲ್ಲಿ ಸವಿತೃ ವಿ
ಭಾವಸೂಸುತ ಭಾನು ಎನಿಸುವ
ಜ್ಯಾವನಪಯುಜ ವೀರಸೇನನು ತ್ವಷ್ಟೃನಾಮಕನು ॥೨೮॥

**ಪದ್ಯಾರ್ಥ.**—ದೇವ=ದೇವತೆಗಳಿಗೆ ಉತ್ತಮನಾದ, ಶಕ್ರ – ಶಕ್ರನೆಂಬ ಇಂದ್ರದೇವನು, ಉರುಕ್ರಮು, ಮಿತ್ರ, ವರುಣ, ಪರ್ಜನ್ಯ, ಭಗ, ಪೂಷಾ, ವಿವಸ್ವಾನ್, ಸವಿತಾ, ಧಾತಾ, ಅರ್ಯಮಾ, ತ್ವಷ್ಟಾ ಎಂದು 12 ಆದಿತ್ಯರು (ಅದಿತಿಯ ಮಕ್ಕಳೆಂದರ್ಥ) ಈ 12 ಆದಿತ್ಯರಲ್ಲಿ ಸವಿತೃ ವಿಭಾವಸು=ಸವಿತಾ ಎಂಬ ಸೂರ್ಯನು, ದೇವಕೀಸುತನಲ್ಲಿ–ಶ್ರೀಕೃಷ್ಣನಲ್ಲಿ, ಸುತ=ಸತ್ಯಭಾಮೆಯ ಮಗನಾಗಿ ಹುಟ್ಟಿ, ಭಾನುಯೆನಿಸುವ=ಭಾನುಯೆಂಬ ಹೆಸರುಳ್ಳವನಾದನು. ಛ್ಯಾವನಪಯುತ = ಯಮದೇವರ ಅಂಶದಿಂದ ಕೂಡಿ, ತ್ವಷ್ಟೃನಾಮಕನು=ತ್ವಷ್ಟಾ ಎಂಬ ಸೂರ್ಯನು, ವೀರಸೇನನ=ಪಾಂಡ್ಯದೇಶಾಧಿಪತಿಯಾದ ವೀರಸೇನರಾಜನೆಂದು ಎನಿಸಿಕೊಂಡನು.

**ತಾತ್ಪರ್ಯ.**— ಅದಿತಿ ಮಕ್ಕಳಾದ ಆದಿತ್ಯರು 12 ಜನರು ಶಕ್ರ, ಉರುಕ್ರಮು, ಮಿತ್ರ, ವರುಣ, ಪರ್ಜನ್ಯ, ಭಗ, ಪೂಷಾ, ವಿವಸ್ವಾನ್, ಸವಿತಾ, ಧಾತಾ, ಅರ್ಯಮಾ, ತ್ವಷ್ಟಾ ಎಂದು ಇವರ ಮಧ್ಯದಲ್ಲಿ ಸವಿತಾ ಎಂಬ ಸೂರ್ಯನು ಕೃಷ್ಣನ ದೆಶೆಯಿಂದ ಸತ್ಯಭಾಮೆಯಲ್ಲಿ ಭಾನು ಎಂದು ಜನಿಸಿದನು. ನಿರ್ಣಯ ೨೦ನೆಯ ಅಧ್ಯಾಯದಲ್ಲಿ " ವಿನಸ್ವತೋತ್ಥೋವರಜೋದಿತೇಃ ಸುತೋ ಖ್ಯಾತಶ್ಚದಾಮ್ನಾಸವಿತೇತಿ ಕೃಷ್ಣಃ ||೧೪೧|| ಜಾತಃ ನಸತ್ಯಾಜಠರೇತ್ರ ನಾಮ್ನಾಭಾನುಶ್ಚ " ವಿವಸ್ವಾನ್ ಎಂಬ ಸೂರ್ಯನ ತಮ್ಮನಾದ ಸವಿತಾ ಎಂಬ ಸೂರ್ಯನು ಸತ್ಯಭಾಮೆಯ ಉದರದಲ್ಲಿ ಭಾನು ಎಂಬ ಹೆಸರಿನಿಂದ ಹುಟ್ಟಿದನೆಂದು ಹೇಳಿರುವರು. ತ್ವಷ್ಟಾ ಎಂಬ ಸೂರ್ಯನು ಯಮನ ಆವೇಶದಿಂದ ಕೂಡಿ, ಪಾಂಡ್ಯದೇಶಾಧಿಪತಿಯಾದ ವೀರಸೇನನಾಗಿ ಜನಿಸಿದನು. ನಿರ್ಣಯ ೨೦ನೆಯ ಅಧ್ಯಾಯದಲ್ಲಿ " ಸುತಾಪಾಂಡ್ಯರಾಜೇನದತ್ತಾ ||೧೬೦|| ಸಂವತ್ಸರಾಂತೇ ಫಲ್ಗುನಸ್ಯಾನುರೂಪಾ ಚಿತ್ರಾಂಗಧಾ ವೀರಸೇನೇನತೋಷಾತ್ | ಸವೀರಸೇನೋ ತ್ವಷ್ಟೃರಂಶೋ ಯಮಸ್ಯಾಪ್ಯಾವೇಶಯುಕ್ | " ಎಂಬೀ ಶ್ಲೋಕಗಳಿಂದ, ಅರ್ಜುನನ ಹೆಂಡತಿ ಚಿತ್ರಾಂಗಧೆಗೆ ತಂದೆಯಾದ, ಪಾಂಡ್ಯದೇಶಾಧಿಪತಿಯಾದವನು ವೀರಸೇನನೆಂತಲೂ, ಇವನು ಯಮದೇವರ ಆವೇಶದಿಂದ ಕೂಡಿದ ತ್ವಷ್ಟಾ ಎಂಬ ಸೂರ್ಯನೆಂತಲೂ ಸಿದ್ಧವಾಗುವುದು.

ಅವತಾರಿಕೆ --ಉಳಿದ ಆದಿತ್ಯರ ವಿಷಯವನ್ನೂ ಮರುತ್ತುಗಳ ಅವತಾರವನ್ನೂ ಹೇಳುತ್ತಾರೆ: --

**ಎರಡಧಿಕ ದಶಸೂರ್ಯರೊಳು ಮೂ**
**ರೆರಡುಜನರುತ್ತಮ ವಿವಸ್ವನು**
**ವರುಣ ಶಕ್ರನುರುಕ್ರಮನು ಪರ್ಜನ್ಯ ಮಿತ್ರಾಖ್ಯಾ ॥**
**ಮರುತನಾವೇಶಯುತ ಪಾಂಡೂ**
**ವರಪರಾವಹನೆಂದೆನಿಪಕೇ**
**ಸರಿಮೃಗಪಸಂಪಾತಿ ಶ್ವೇತತ್ರಯರು ಮರುದಂಶ ॥೨೯॥**

ಪದ್ಯಾರ್ಥ.-- ಎರಡಧಿಕದಶಸೂರ್ಯರೊಳು = ೧೨ ಸೂರ್ಯರೊಳಗೆ, ಮೂರೆರಡು ಜನರುತ್ತಮರು - ೬ ಜನರುತ್ತಮರು, ( ಇದರಲ್ಲಿ ಪ್ರಭೇದ ೫ ಜನರುತ್ತಮರು ಒಬ್ಬನು ಅಂದರೆ ಪರ್ಜನ್ಯನು ಗಂಗೆಗೆ ಸಮನು ಅಂತು ೬ ಮಂದಿಯರು ಉಳಿದ ೬ ಮಂದಿಯರಿಗೆ ಸಮರಲ್ಲವೆಂಬ ಭಾವನೆ. ) ವಿವಸ್ವಾನ್, ವರುಣ, ಶಕ್ರ, ಉರು, ಕ್ರಮ, ಮಿತ್ರ ಇವರ ವೃತ್ತಾಂತವನ್ನು ಹಿಂದೆ ಹೇಳಿರುವರು. ಪರ್ಜನ್ಯನ ವಿಷಯವನ್ನು ಮುಂದೆ ಹೇಳುವರು. ಉಳಿದ ೬ ಮಂದಿ ಸೂರ್ಯರು ಸಮರೆಂದು ಭಾವ. ವರಪರಾವಹನು=ಮರುತ್ತುಗಳಲ್ಲಿ ಶ್ರೇಷ್ಠನಾದ ಪರಾವಹನೆಂಬುವನು, ಮರುತನಾವೇಶಯುತ = ವಾಯುದೇವರ ಆವೇಶದಿಂದ ಕೂಡಿ, ಪಾಂಡೂ ಎಂದೆನಿಪ-ಪಾಂಡುರಾಜನೆಂದವತರಿಸಿದನು, ಕೇಸರಿಮೃಗಪ=ಕೇಸರಿ ಎಂಬ ಕಪಿಯು, ಸಂಪಾತಿ-ಸಂಪಾತಿಯೆಂಬ ಕಪಿಯು, ಶ್ವೇತ=ಶ್ವೇತನೆಂಬ ಕಪಿ, ತ್ರಯರು=ಕೇಸರೀ, ಸಂಪಾತಿ, ಶ್ವೇತನೆಂಬ ಮೂವರು ಕಪಿಗಳೂ, ಮರುದಂಶ=ಮರುತ್ತುಗಳ ಅಂಶದಿಂದ ಹುಟ್ಟಿದವರು.

ತಾತ್ಪರ್ಯ.—ದ್ವಾದಶಾದಿತ್ಯರ ಪೈಕಿ ಹಿಂದೆ ತಾರತಮ್ಯದಲ್ಲಿ ಹೇಳಿರುವ ವಿವಸ್ವಾನ್, ವರುಣ, ಶಕ್ರ, ಉರುಕ್ರಮ, ಮಿತ್ರ ಇವರು ಐವರೂ ಉತ್ತಮರು. ಪರ್ಜನ್ಯನು ಇನ್ನು ಮುಂದೇ ಹೇಳುವ ಗಂಗೆಗೆ ಸಮನು. ಉಳಿದ 6 ಮಂದಿಯರು ಸಮರು. ಏಕೋನಪಂಚಾಶತ್ ( 49 ) ಮರುದ್ಗಣಗಳ ಪೈಕಿ ಪರಾವಹನೆಂಬುವನು ವಾಯುದೇವರ ಆವೇಶದಿಂದ ಕೂಡಿ ಪಾಂಡುರಾಜನಾಗಿ ಜನಿಸಿದನು. ಕೇಸರಿ, ಸಂಪಾತಿ, ಶ್ವೇತ ಎಂಬ ಮೂವರು ಕಪಿಗಳ ಮರುತ್ತುಗಳಲ್ಲಿ ಶ್ರೇಷ್ಟರಾದವರ ಅಂಶದಿಂದ ಹುಟ್ಟಿರುವರು.

ನಿರ್ಣಯ ೮ನೆಯ ಅಧ್ಯಾಯದಲ್ಲಿ " ಪವನಗಣವರಾಂಶೌ ಶ್ವೇ ಸಂಪಾತಿ ನೌಚ " ಮತ್ತೂ ಕೇಸರೀತಿಪ್ರವರಮುಖ ಮರುತ್ಸ್ವಪ್ರಾಸ್ಯದೇತೇಽಮುಖೇ ಸಃ ||೧೦೬|| ಈ ವಾಕ್ಯಗಳಿಂದ ಶ್ವೇತ, ಸಂಪಾತಿ, ಕೇಸರೀ ಮೂವರೂ ಪವನಗಣವರಾಂಶರು ಅಂದರೆ ಮರುದ್ಗಣದಲ್ಲಿ ಉತ್ತಮರ ಅಂಶದಿಂದ ಕೂಡಿದವರೆಂದು ಸಿದ್ಧವಾಗುವುದು. ಹೆಸರು ಹೇಳಲಿಲ್ಲ. ದಾಸಾರ್ಯರೂ ಹೆಸರು ಹೇಳಲಿಲ್ಲವೆಂದು ತಿಳಿಯಬೇಕು. ಮರುತ್ತುಗಳ ಅಂಶದಿಂದ ಹುಟ್ಟಿದವರೆಂದು ತಾತ್ಪರ್ಯ.

ಅವತಾರಿಕೆ:—ಮರುದ್ಗಣಕ್ಕೆ ಸೇರಿದ ಕೆಲವರ ಅವತಾರಗಳನ್ನು ಹೇಳುತ್ತಾರೆ —

ಪ್ರತಿಭವಾತನು ಚೇಕಿತಾನವಿ
ಪೃಥುವೆನಿಸುವನು ಸೌಮ್ಯಮಾರುತ
ವಿತತಶರ್ವೋತ್ತುಂಗ ಗಜನಾಮಕರು ಪ್ರಾಣಾಂಶ ||
ದ್ವಿತಿಯಪಾನ ಗವಾಕ್ಷಗವಯನು
ತೃತಿಯ ವ್ಯಾನವುದಾನವೃಷಪ
ರ್ವತುಳಶರ್ವತ್ರಾತ ಗಂಧಸುಮಾದನರು ಸಮಾನ ||೩೦||

ಪದ್ಯಾರ್ಥ.—ಪ್ರತಿಭವಾತನು–ಪ್ರತಿಭನೆಂಬ ಮಾರುತನು, ಚೇಕಿತಾನನು=ಚೇಕಿತಾನನೆಂಬ ಯಾದವನು, ಸೌಮ್ಯಮಾರುತ=ಸೌಮ್ಯನಾಮಕ ಮಾರುತನು, ವಿಪೃಥುವೆನಿಸುವನು=ವಿಪೃಥು ಎಂಬ ಯಾದವನು, ವಿತತ, ಶರ್ವೋತ್ತುಂಗ ಎಂಬ ಇಬ್ಬರು ಯದುವಂಶದವರು, ಗಜನೆಂಬುವನು ಕಪಿ ಇವರು ಮೂವರು, ಪ್ರಾಣಾಂಶಾ–ಪ್ರಾಣನಾಮಕ ಮಾರುತನ ಅಂಶದಿಂದ ಹುಟ್ಟಿದವರು, ದ್ವಿತೀಯ=ಎರಡನೆಯವನಾದ, ಅಪಾನ = ಅಪಾನ ಮಾರುತನು ಗವಾಕ್ಷನೆಂಬ ಕಪಿಯಾದನು ತೃತೀಯ–ಮೂರನೆಯವನಾದ ವ್ಯಾನ – ವ್ಯಾನನಾಮಕ ಮಾರುತನು, ಉದಾನ = ಉದಾನನಾಮಕನಾದ ಮಾರುತನು, ವೃಷಪರ್ವ=ವೃಷಭನೆಂಬ ಕಪಿಯು, ಅತುಳ = ಪರಾಕ್ರಮಶಾಲಿಯಾದ, ಶರ್ವತ್ರಾತ–ಶರ್ವತ್ರಾತನೆಂಬ ಭೀಮಸೇನದೇವರ ಮಗನೂ, ಗಂಧಸುಮಾದನರು=ಗಂಧಮಾಧನನೆಂಬ ಕಪಿಯೂ, ಇವರಿಬ್ಬರೂ, ಸಮಾನ–ಸಮಾನ ಮಾರುತನ ಅವತಾರಗಳು.

ತಾತ್ಪರ್ಯ.—೪೯ ಮರುತ್ತುಗಳ ಅವತಾರಗಳಲ್ಲಿ ಎಲ್ಲರಿಗೂ ಅವತಾರವಿಲ್ಲ. ಕೆಲವು ಮರುತ್ತುಗಳಿಗೆ ಮಾತ್ರ ಇರುವುದು. ಅಷ್ಟುಮಾತ್ರ ಹೇಳಿದರೆ ಶ್ವೇತಾದಿಗಳು ಮರುದ್ಗಣ ಪ್ರವಿಷ್ಟರೋ ಅಲ್ಲವೋ ಎಂದು ಸಂಶಯ ಬರುವುದು, ಆದುದರಿಂದ ಮೊದಲು ೪೯ ಮರುತ್ತುಗಳ ಹೆಸರು ತಿಳಿಯುವುದು ಆವಶ್ಯಕವಿರುವುದು. ಆದ್ದರಿಂದ ಹಿಂದಿನ ತಾರತಮ್ಯ ಪ್ರಕರಣದಲ್ಲಿ ಬರದಿದ್ದರೂ ಇಲ್ಲೊಮ್ಮೆ ಬರೆಯಲು ಕಾರಣವಾಯಿತು.

### ಮರುದ್ಗಣರ ಹೆಸರುಗಳು.

ಪ್ರಾಣ ಅಪಾನ ವ್ಯಾನ ಉದಾನ ಸಮಾನ ನಾಗ ಕೃಕಲ ಕೂರ್ಮ ದೇವದತ್ತ ಧನಂಜಯ ಪ್ರವಹ ವಿವಹ ಶಂಯು ಸಂವಹ ಪರಾವಹ ಉದ್ವಹ ಆನಹ ಶಂಕು ಕಾಲ ಶ್ವಾಸನಲ ಅನಿಲ ಪ್ರತಿಭ ಕುಮುದ ಕಾಂತ ಶುಚಿ ಶ್ವೇತ ಅಜಿತ ಗುರು ಝುಂಝು ಸಂವರ್ತಕ ಕೀಲ ಜಿತ ಸೌಮ್ಯ ಕಪಿ ಜಡ ಮಂಡೂಕ ಸಂಹತ ಸಿದ್ಧ ರಕ್ತ ಕೃಷ್ಣ ಪಿಕ ಶುಕ ಯತಿ. ಭೀಮ ಹನು ಪಿಂಗ ಅಹಂಕಾರಿಕ ಕಂಪನ ಹೀಗೆ ೪೯ ಮರುತ್ತುಗಳಲ್ಲಿ ೧೫ನೆಯ ಮರುತ್ತು ಪರಾವಹನು ಪಾಂಡುರಾಜನು. ೨೭ನೆಯ ಶ್ವೇತನೆಂಬುವನು ಸಂಪಾತಿ, ಕೇಸರಿ ಎಂಬ ಎರಡವತಾರಗಳನ್ನು ತೆಗೆದಿರುವನು. ೨೩ನೆಯ ಪ್ರತಿಭನೆಂಬ ಮಾರುತನು ಚೇಕಿತನನಾಗಿ ಅವತರಿಸಿದನು. ನಿರ್ಣಯ ೧೨ನೆಯ ಅಧ್ಯಾಯದಲ್ಲಿ "ಮರುತ್ಸುನಾಮ ಪ್ರತಿಭೋಯದುಷ್ವಭೂತ್ಸೇಚೇಕಿತಾನೋ ಹರಸೇವನಾರ್ಥಂ" ಮರುತ್ತುಗಳಲ್ಲಿ ಪ್ರತಿಭನೆಂಬುವನು ಪರಮಾತ್ಮನ ಸೇವೆಮಾಡುವುದಕ್ಕಾಗಿ ಚೇಕಿತಾನನೆಂದು ಯಾದವರಲ್ಲಿ ಜನಿಸಿದನು. ಈ ವಾಕ್ಯವು ಮೇಲಿನ ವಾಕ್ಯಕ್ಕೆ ಆಧಾರವು. ಸೌಮ್ಯನಾಮಕನಾದ ೩೪ನೆಯ ಮಾರುತನು ವಿಪೃಥು ಎಂಬ ಯಾದವನಾಗಿ ಜನಿಸಿದನು. ನಿರ್ಣಯ ೨೦ನೆಯ ಅಧ್ಯಾಯದಲ್ಲಿ "ಗರ್ನಿತ್ಯಪ್ರುರ್ಥ್ಯಾವಿಪ

ಘುಂ ದದರ್ಶ ರಾಮೇಣ ಪುರ್ಯಾ ರಕ್ಷಣೇ ಸನ್ನಿಯುಕ್ತಂ ॥ ಏಕೋಹ್ಯಸೌ ಮರುತಾಂ ಸೌಮ್ಯನಾಮ ಶುಶ್ರೂಷಾರ್ಥಂ ವಾಸುದೇವಸ್ಯ ಜಾತಃ ॥೧೯೩॥ ಅರ್ಜುನನು ಸನ್ಯಾಸ ವೇಷದಿಂದ ದ್ವಾರವತಿಗೆ ಬಂದು ಸುಭದ್ರೆಯಿಂದ ಸೇವಿತನಾಗಿದ್ದು ಬಲರಾಮ ಕೃಷ್ಣ ಮೊದಲಾದ ಎಲ್ಲರೂ ರೈವತ ಪರ್ವತಕ್ಕೆ ಹೋಗಿರುವಾಗ ಕೃಷ್ಣಾನುಮತಿಯಿಂದ ಸುಭದ್ರೆಯನ್ನು ಅಪಹರಿಸಿಕೊಂಡು ದ್ವಾರವತಿಯನ್ನು ಬಿಟ್ಟು ಹೊರಟು ಹೋಗುವಾಗ ವಿಪೃಥು ಎಂಬ ಯಾದವನು ದ್ವಾರ ರಕ್ಷಕನಾಗಿರುವುದನ್ನು ಕಂಡನು. ಅವನು ಬಲರಾಮನ ಆಜ್ಞಾ ಪ್ರಕಾರ ಪುರ ರಕ್ಷಕನಾಗಿದ್ದನು. ಇವನು ಪೂರ್ವದಲ್ಲಿ ಮರುದ್ಗಣ ರಲ್ಲಿ ಒಬ್ಬನಾದ ೩ಳನೆಯ ಸೌಮ್ಯನೆಂಬ ಮಾರುತನು. ವಿಪೃಥು ಎಂಬ ಹೆಸರಿನಿಂದ ಕೃಷ್ಣನ ಸೇವಾರ್ಥವಾಗಿ ಹುಟ್ಟಿದವನು. ಆದುದರಿಂದ ಅರ್ಜುನನ ಸಂಗಡ ಕಪಟದಿಂದ ಯುದ್ಧ ಮಾಡಿದಂತೆ ತೋರಿ ಅರ್ಜುನ ನನ್ನು ಬಿಟ್ಟು ಬಿಟ್ಟನು, ಎಂದು ಹೇಳಿರುವರು. ಇದರಿಂದ ವಿಪೃಥು ಎಂಬು ವನು ಯಾದವನೆಂತಲೂ, ಸೌಮ್ಯನಾಮಕ ಮರುತ್ತಿನ ಅಂಶದವನೆಂತಲೂ ಸಿದ್ಧವಾಯಿತು. ವಿತತ, ಶರ್ವೋತ್ತುಂಗ ಇವರಿಬ್ಬರೂ ಗಜನೆಂಬ ಕಪಿ ಒಬ್ಬ, ಅಂತು ಮೂವರೂ ಮೊದಲನೆಯವನಾದ ಪ್ರಾಣನಾಮಕ ಮರು ತ್ತಿನ ಅಂಶದವರೆಂದು ತಿಳಿಯಬೇಕು. ಎರಡನೆಯವನಾದ ಅಪಾನನು ಗವಾಕ್ಷನೆಂಬ ಕಪಿಯಾದನು. ಮೂರನೆಯ ವ್ಯಾನನು ಗವಯನೆಂಬ ಕಪಿ ಯು, ನಾಲ್ಕನೆಯವನಾದ ಉದಾನನು ವೃಷಭನೆಂಬ ಕಪಿಯಾದನು. ೫ನೆ ಯ ಸಮಾನನು, ಶರ್ವತ್ರಾತನೆಂಬ ಭೀಮಸೇನ ದೇವರ ಮಗನ ಅವತಾರ ಒಂದು, ಗಂಧಮಾದನನೆಂಬ ಕಪಿ ರೂಪ ಒಂದು, ಅಂತು ಎರಡು ರೂಪ ಗಳನ್ನು ಧರಿಸಿರುವನು. ಇವುಗಳಿಗೆ ಆಧಾರ ನಿರ್ಣಯ ೮ನೆಯ ಅಧ್ಯಾ ಯದಲ್ಲಿ "ಗಜೋಗವಾಕ್ಷೋ ಗವಯೋವೃಷಶ್ಚ ಸಗಂಧ ಮಾದಾ ಧನ ದೇನ ಜಾತಾಃ ॥ ಪ್ರಾಣಾದಯಃ ಪಂಚಮರುತ್ಪ್ರವೀರಾಃ" ಗಜ, ಗವಾಕ್ಷ, ಗವಯ. ವೃಷಭ, ಗಂಧಮಾದನ ಈ ಐವರು, ಪ್ರಾಣ, ಅಪಾನ, ವ್ಯಾನ ಉದಾನ, ಸಮಾನರೆಂಬ ೫ ಮರುತ್ತುಗಳ ಅಂಶದಿಂದ ಕೂಡಿದವರು ಎಂದು ಹೇಳಿರುವರು. ಇದಲ್ಲದೆ ಸಮಾನ ಮಾರುತನು ಭೀಮಸೇನ ದೇವರ ಮಗನಾಗಿ ಶರ್ವತ್ರಾತನೆಂಬ ಹೆಸರಿನಿಂದ ಹುಟ್ಟಿರುವನು. ನಿರ್ಣಯ ೨೦ನೆ ಯು ಅಧ್ಯಾಯದಲ್ಲಿ "ಭೀಮಸೇನೋಽಥಂಸ್ವಂ ॥ ಆರುಹ್ಯ ಕಾಶೀಶ್ವ

ಪೂಜಿತಶ್ಚ ಯಯೌಕಾಲ್ಯಾಶಕ್ರಸನಾಮಕಂ ಪುರಂ ॥ ೨೭ ॥ ತಸ್ಯಾಂ ತ್ರಿಲೋಕಾಧಿಕ ರೂಪಸದ್ಗುಣ್ಯೈ ರಾಸಮ್ಮಿತಾಯಾಂ ರಮಮಾಣಃ ಸುತಂಚ ॥ ಶರ್ವತ್ರಾತಂನಾಮ್ನಾ ಜನಯತ್ಪುರಾಯಃ ಸಮಾನವಾಯುರ್ಬಲವೀರ್ಯಯುಕ್ತಃ ॥ ೨೮ ॥" ಭೀಮಸೇನ ದೇವರು ಕಾಶೀಶ್ವರನ ಪಟ್ಟಣಕ್ಕೆ ಕಾಲಿಯ ಸ್ವಯಂವರಕ್ಕಾಗಿ ಬಂದು ಸ್ವಯಂವರದಲ್ಲಿ ಕಾಲಿಯನ್ನು ಪರಿಗ್ರಹಿಸಿ ಅಲ್ಲಿ ಬಂದಿದ್ದ ಮಾಗಧಾದಿ ಸಮಸ್ತ ರಾಜರನ್ನು ಜಯಿಸಿ ಸಾಕ್ಷಾತ್ ಭಾರತೀ ಅವತಾರಳಾದ ಕಾಲಿಯ ಸಮೇತರಾಗಿ ಕಾಶೀಶ್ವರನಿಂದ ಪೂಜಿತರಾಗಿ ಇಂದ್ರಪ್ರಸ್ಥಕ್ಕೆ ಬಂದು ಲೋಕೈಕ ಸುಂದರಿಯಾದ ಆಕೆಯಿಂದ ರಮಿಸುತ್ತಾ ಆಕೆಯಲ್ಲಿ ಶರ್ವತ್ರಾತನೆಂಬ ಸುತನನ್ನು ಪಡೆದರು. ಅವನು ಪೂರ್ವದಲ್ಲಿ ಸಮಾನ ವಾಯು. ಸಮಾನ ವಾಯುವೆ ಬಲವೀರ್ಯಯುಕ್ತನಾಗಿ ಇಲ್ಲಿ ಜನಿಸಿದನು, ಎಂದು ಹೇಳಿರುವರು. ಶರ್ವತ್ರಾತನು ಭೀಮಸೇನ ದೇವರ ಮಗನೆಂಬುವುದಕ್ಕೆ ಈ ವಾಕ್ಯವು ಆಧಾರವಾಗಿರುವುದು.

ಅವತಾರಿಕೆ.—ನಾಗಕೃಕಲ ಮೊದಲಾದವರ ತಾರತಮ್ಯವನ್ನು ಹೇಳುತ್ತಾರೆ :—

**ಐವರೊಳಗೀ ಕುಂತಿಭೋಜನು**
**ಅವಿನಾಮಕ ನಾಗಕೃಕಳನು**
**ದೇವದತ್ತ ಧನಂಜಯರು ಅವತಾರವರ್ಜಿತರು ॥**
**ಆವಹೋದ್ವಸವಿವಹ ಸಂವಹ**
**ಪ್ರಾವಹೀ ಪತಿಮರುತ ಪ್ರವಹನಿ**
**ಗಾವಕಾಲ ಕುಕಿಂಚಿದಧಮರು ಮರುದ್ಗಣರೆಲ್ಲಾ ॥೩೧॥**

ಪದ್ಯಾರ್ಥ.—ಐವರೊಳಗೆ=ನಾಗಾದಿ ಐವರೊಳಗೆ, ಅವಿನಾಮಕ=ಕೂರ್ಮನಾಮಕನಾದ ಮಧ್ಯಪವನು (ಅನೆಯುವನು), ಕುಂತಿಭೋಜನು=ಕುಂತಿಭೋಜರಾಜನಾಗಿ ಜನಿಸಿರುವನು. ಮಿಕ್ಕ ನಾಗ, ಕೃಕಳನು, ದೇವದತ್ತ, ಧನಂಜಯರು ಇವರು ನಾಲ್ವರು, ಅವತಾರವರ್ಜಿತರು = ಅವತಾರವಿಲ್ಲದವರು ಆವಹ, ಉದ್ವಹ, ವಿವಹ, ಸಂವಹ (ಮೊದಲಾದ) ಮರುದ್ಗಣರೆಲ್ಲಾ, ಪ್ರಾವಹೀಪತಿ ಮರುತ ಪ್ರವಹನಿಗೆ ಮತ್ತು (ಅಹಂಕಾರಿಕ ಪ್ರಾಣನಿಗೂ ಸಹ) ಕಿಂಚಿದಧಮರು=ಸ್ವಲ್ಪ ಕಮ್ಮಿ ಎನಿಸುವರು.

ತಾತ್ಪರ್ಯ.—ಮರುದ್ಗಣದಲ್ಲಿ ಆನೆಯವನಾದ, ನಾಗಾದಿಗಳಲ್ಲಿ ೩ನೆ ಯವನಾದ ಕೂರ್ಮನು ಶೂರರಾಜನ ಸಖನಾದ ಕುಂತೀಭೋಜನಾಗಿ ಜನಿಸಿದನು. ಇವನು ಶೂರರಾಜನ ಮಗಳಾದ ಕುಂತೀದೇವಿಯನ್ನು ಸಾಕಿ ಕುಂತೀ ಎಂಬ ಹೆಸರಿಟ್ಟವನು ಅದಕ್ಕೆ ಮುಂಚೆ ಕುಂತೀದೇವಿಗೆ ಪೃಥಾ ಎಂಬ ಹೆಸರಿದ್ದಿತು. ನಾಗ, ಕೃಕಳ, ದೇವದತ್ತ, ಧನಂಜಯರಿಗೆ ಅವತಾರವಿಲ್ಲ. ಅಹಂಕಾರಿಕಪ್ರಾಣ, ಪ್ರವಹವಾಯು (೪೮,೧೧, ಈ ಸಂಖ್ಯೆ ಉಳ್ಳವರು) ಇವರಿಬ್ಬರಿಕಿಂತಲೂ, ಮಿಕ್ಕ ಆವಹಾದಿ ಎಲ್ಲಾ ಮರುತ್ತುಗಳೂ ಸ್ವಲ್ಪ ಕಮ್ಮಿ ಎನಿಸುವರು.

ಅವತಾರಿಕೆ.—ವಿಶ್ವೇ ದೇವತೆಗಳ ಅವತಾರಗಳನ್ನು ಹೇಳುತ್ತಾರೆ :—

**ಪ್ರಾಣ ಪಾನ ವ್ಯಾನೋದಾನ ಸ**
**ಮಾನರೈವರ ನುಳಿದು ಮರುತರು**
**ಊನರೆನಿಪರು ಹತ್ತು ವಿಶ್ವೇ ದೇವರಿವರಿಂದ ||**
**ಸೂನುಗಳು ಯೆನಿಸುವರು ಐವರು**
**ಮಾನಿನಿ ದ್ರೌಪದಿಗೆ ಕೆಲವರು**
**ಕ್ಷೋಣಿಯೊಳು ಕೈಕೇಯರೆನಿಪರು ಎಲ್ಲಕಾಲದಲಿ　　||೩೨||**

ಪದ್ಯಾರ್ಥ.—ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಐವರ ನುಳಿದು=ಈ ಐವರನ್ನು ಬಿಟ್ಟು, ಮರುತರು=ಉಳಿದ ಮರುತ್ತುಗಳು ಸಮರು, ಇವರಿಂದ=ಪ್ರಾಣಾಪಾನಾದಿ ಐವರ ದೆಶೆಯಿಂದ ಹತ್ತು ವಿಶ್ವೇ ದೇವರು=ವಿಶ್ವೇ ದೇವತೆಗಳು= ೧೦ ಜನರು, ಊನರೆನಿಪರು=ಸ್ವಲ್ಪ ಕಮ್ಮಿ ಎನಿಪರು, ಮಾನಿನೀ ದ್ರೌಪದೀಗೆ=ಲೋಕಮಾನ್ಯಳಾದ ದ್ರೌಪದೀ ದೇವಿಗೆ, ಐವರು—ವಿಶ್ವೇ ದೇವತೆಗಳು ೧೦ ಜನರ ಪೈಕಿ ಐದು ಜನರು, ಸೂನುಗಳು ಯೆನಿಸುವರು—ಮಕ್ಕಳೆನಿಸುವರು, ಕೆಲವರು=ಉಳಿದ, ಐದು ಜನರು ಎಲ್ಲಾ ಕಾಲದಲಿ=ಎಲ್ಲಾ ಕಲ್ಪಗಳಲ್ಲೂ ಕೈಕೇಯಿ—ಕೈಕೆಯರೆಂಬ ಹೆಸರಿನಿಂದ ಜನಿಸುವರು.

ತಾತ್ಪರ್ಯ.—೪೯ ಮರುತ್ತುಗಳಲ್ಲಿ ಮೇಲೆ ಹೇಳಿದ= ಮೇಲೆ ಹೇಳಿದ ಅಹಂಕಾರಿಕಪ್ರಾಣ, ಪ್ರವಹ, ಇವರಿಬ್ಬರೂ ಉತ್ತಮರು. ಉಳಿದ ೪೭ ಜನರಲ್ಲಿ ಪ್ರಾಣ—ಅಪಾನ, ವ್ಯಾನ, ಉದಾನ, ಸಮಾನ ಎಂಬೈವರೂ ಸ್ವಲ್ಪ ಉತ್ತಮರು. ಅದ್ದರಿಂದ ಭಾಗವತ ತಾತ್ಪರ್ಯದಲ್ಲಿ 'ಮರುತಶ್ಚ ಸಮಾಃ ಸರ್ವೇಸಪ್ತತೇಷು ಪ್ರಧಾನಕಾಃ' ೪೯ ಮರುತ್ತುಗಳಲ್ಲಿ ಸಮರು.

ಅವರ ಪೈಕಿ ೭ ಜನರು ಪ್ರಧಾನರು ಎಂದು ಹೇಳಿರುವರು. ಇದಲ್ಲದೆ "ಪವ ಗಣವರಾಂಶೌ ಶ್ವೇತಿ ಸಂಪಾತಿನೌಚ || ಕೇಸರಿತಿ ಪ್ರವರ ಪುಥಮರತ್ನ" ಎಂಬ ವಾಕ್ಯಗಳಿಂದ ಶ್ವೇತ, ಸಂಪಾತಿ, ಕೇಸರಿ ಎಂಬ ಮೂವರು ಕಪಿ ಗಳು ಮರುತ್ತಗಳಲ್ಲಿ ಶ್ರೇಷ್ಠರಾದವರ ಅಂಶದಿಂದ ಕೂಡಿದವರೆಂದು ಹೇಳಿ ದ್ದರಿಂದ ಮರುತ್ತಗಳೆಲ್ಲರೂ ಸಮಾನರಲ್ಲವೆಂತಲೂ ಸ್ವಲ್ಪ ತಾರತಮ್ಯ ಉಂ ಟೆಂತಲೂ ಸಿದ್ಧವಾಗುವುದು. ಆದು ಭಾಗವತ ತಾತ್ಪರ್ಯದಿಂದ ೭ ಮಂದಿ ಪ್ರಧಾನರೆಂದು ಸಿದ್ಧಾಂತ ಮಾಡಿರುವರು. ಅವರ್ಯಾರೆಂದರೆ ಅಹಂಕಾರಿಕ ಪ್ರಾಣ ೧, ಪ್ರವಹ ೨, ಪ್ರಾಣ, ಅಪಾನಾದಿ ಐವರು; ಅಂತು ೭ ಜನ ರೆಂದು ಸಿದ್ಧಾಂತವಾಗುವದು. ಉಳಿದವರು ಸಮಾನರು. ವಿಶ್ವೇ ದೇವತೆ ಗಳು ಮರುತ್ತುಗಳಿಗೆ ಸಮಾನರಾದರೂ ಪ್ರಾಣಾಪಾನಾದಿ ಐವರಿಗೆ ಸ್ವಲ್ಪ ಕಮ್ಮಿ ಎನಿಸುವರೆಂಬ ತಾತ್ಪರ್ಯ. ವಿಶ್ವೇ ದೇವತೆಗಳು ೧೦ ಮಂದಿಗಳು ಉರೂರವ, ಆದ್ರವ, ಕಾಲ, ಕಾಮ, ಧೂಃ, ಲೋಚನ, ದಕ್ಷ, ಕ್ರತು, ಸತ್ಯವಸು ಎಂದು ಇವರಲ್ಲಿ ಮೊದಲನೆಯವರಾಗ ಐವರು ದ್ರೌಪದೀ ದೇವಿ ಯರಲ್ಲಿ ಧರ್ಮರಾಜ ಮೊದಲಾದ ೫ ಪಾಂಡವರ ದೆಶೆಯಿಂದ ೫ ಮಕ್ಕಳಾಗಿ ಹುಟ್ಟಿದರು. ಉಳಿದ ಐವರು ಕೈಕೆಯರೆಂಬ ಹೆಸರಿನಿಂದ ಜನಿಸಿದರೆಂಬ ತಾತ್ಪರ್ಯ. ದ್ರೌಪದೀ ಮಕ್ಕಳ ವಿಷಯವನ್ನು ಮುಂದಿನ ಪದ್ಯದಲ್ಲಿ ವಿವರಿ ಸಿರುತ್ತಾರೆ. ವಿಶ್ವೇ ದೇವತೆಗಳ ಅವತಾರ ಕೈಕೇಯರು ಎಂಬ ವಿಷಯ ದಲ್ಲೆ ನಿರ್ಣಯ ೨೦ನೆಯ ಅಧ್ಯಾಯದಲ್ಲಿ "ವಿಶ್ವೇಷಾಂದೇವಾನಾಮಮತಾ ರಾಹಿ ಪಂಚ ತೇಕೈಕಯಾಃ ಭ್ರಾತರೋ ಸ್ಯಾಃಹರೆಶ್ಚ || ಭಕ್ತಾನಿತ್ಯಂ ಪಾಂ ಡವಾನಾಂಚ" ಕೃಷ್ಣನಿಗೆ ಸೋದರತ್ತೆಯ ಮಕ್ಕಳೂ ಮತ್ತು ಕೃಷ್ಣನ ಅಷ್ಟ ಮಹಾಮಹಿಷೆಯರಲ್ಲಿ ಒಬ್ಬಳಾದ ಭದ್ರೆ ಎಂಬಾಕೆಯ ಸಹೋದರ ರೂ ಆದ ಕೈಕಯರೆಂಬ ಐದು ಮಂದಿ ಅಣ್ಣ ತಮ್ಮಂದಿರು ವಿಶ್ವೇ ದೇವತೆ ಗಳ ಅವತಾರದವರು. ಪಾಂಡವರಿಗೆ ಇವರೈವರೂ ಮಾತೃಷ್ವಸಾ ಅಂದರೆ ತಾಯಿಗೆ ಒಡಹುಟ್ಟಿದವಳೆಂದರ್ಥ. ಕೈಕಯರ ತಾಯಿಯೂ ಪಾಂಡವರ ತಾಯಿಯಾದ ಕುಂತೀದೇವಿಯು ಅಕ್ಕತಂಗಿಯರು. ಆದುದರಿಂದ ಪಾಂಡ ವರಿಗ ಬೇಕಾದವರಾಗಿದ್ದರು. ಇವರ ತಂದೆಯಾದ ಶೈಬ್ಯನೂ ಪಾಂಡವರ ವಶದಲ್ಲಿದ್ದನು ಎಂದು ಹೇಳಿರುವರು. ಇದರಿಂದ ಕೈಕಯರು ಇಂತಹವ ರೆಂದು ಸಿದ್ಧಾಂತವಾಯಿತು.

ಅವತಾರಿಕೆ.—ದ್ರೌಪದೀ ಮಕ್ಕಳ ವಿವರ ಹೇಳುತ್ತಾರೆ :—

**ಪ್ರತಿವಿಂಧ್ಯಶ್ರುತಸೋಮ ಶ್ರುತಿಕೀ**
**ರುತಿಶತಾನಿಕಶ್ರುತಿಕರ್ಮ ದ್ರೌ**
**ಪದಿ ಕುವರರಿವರೊಳಗೆ ಅಭಿತಾಮ್ರಪ್ರಮುಖ ಚಿತ್ರ॥**
**ರಥನು ಗೋಪಕಿಶೋರ ಬಲರೆಂ**
**ಬತುಲರೈಗಂಧರ್ವರಿಂದಲಿ**
**ಯುತರು ಧರ್ಮ ವೃಕೋದರಾದಿಜರೆಂದು ಕರೆಸುವರೂ ।೩೩।**

ಪದ್ಯಾರ್ಥ:—ಪ್ರತಿವಿಂಧ್ಯ, ಶ್ರುತಸೋಮ,ಶ್ರುತಕೀರ್ತಿ,ಶತಾನೀಕ, ಶ್ರುತಕರ್ಮ, ಈಐದು ಮಂದಿಗಳೂ, ದ್ರೌಪದೀ ಕುವರರು=ದ್ರೌಪದಿಯ ಮಕ್ಕಳು. ಇವರೊಳಗೆ=ಈಐವರೊಳಗೆ ಅಭಿತಾಮ್ರ, ಪ್ರಮುಖ=ಗಂಧರ್ವ ಶ್ರೇಷ್ಟನಾದ ಚಿತ್ರರಥ, ಗೋಪ, ಕಿಶೋರ, ಬಲರೆಂಬ ಅತುಲ=ಸಮರಹಿತರಾದ (ಅಂದರೆ ಗಂಧರ್ವರ ಪೈಕಿ ಈಐವರಿಗೆ ಐವರೇ ಸಮರೇ ಹೊರತು ಮತ್ತಾರೂ ಅಲ್ಲವೆಂದು ತಾತ್ಪರ್ಯ) ಐಗಂಧರ್ವರಿಂದಲಿ=ಐದು ಗಂಧರ್ವರಿಂದಯುತರು ಆವೇಶದಿಂದ ಕೂಡಿದವರು,ಧರ್ಮವೃಕೋದರಾದಿಜರೆಂದು=ಈಐವರೂಧರ್ಮರಾಜ, ಭೀಮಸೇನ, ಅರ್ಜುನ, ನಕುಲ, ಸಹದೇವ ಈ ಐವರದಶೆಯಿಂದ ದ್ರೌಪದಿಯಲ್ಲಿ ಹುಟ್ಟಿದವರೆಂದು, ಕರೆಸುವರು=ಲೋಕದಲ್ಲಿ ಪ್ರಖ್ಯಾತರಾಗಿರುವರು

ತಾತ್ಪರ್ಯ:—ಧರ್ಮರಾಜ ಮೊದಲಾದ ೫ಮಂದಿ ಪಾಂಡವರದೆಶೆಯಿಂದ ದ್ರೌಪದಿಯಲ್ಲಿ ೫ಮಂದಿ ವಿಶ್ವೇದೇವತೆಗಳು ಪ್ರತಿವಿಂಧ್ಯಾ ಮೊದಲಾದ ೫ಹೆಸರುಗಳಿಂದ ಹುಟ್ಟಿರುವರು,ಈಐವರಲ್ಲಿ ಐಮಂದಿ ಗಂಧರ್ವರ ಆವೇಶವೂ ಇರುವುದು. ನಿರ್ಣಯ ೨೦ನೆಯ ಅಧ್ಯಾಯದಲ್ಲಿ "ಆಸಕೃಷ್ಣಾಯಾಃ ಪಂಚಸುತಾ ಗುಣಾಢ್ಯಾಃ ವಿಶ್ವೇದೇವಾಃ ಪಂಚಗಂಧರ್ವ ಮುಖ್ಯೈಃ॥೧೧॥ ಆವಿಷ್ಟಾಸ್ತೇ ಚಿತ್ರರಥಾಭಿತಾಮ್ರ ಕಿಶೋರ ಗೋಪಾಲ ಬಲೈಃ ಕ್ರಮೇಣ ಪ್ರತಿವಿಂಧ್ಯಃ ಶ್ರುತಸೋಮಃ ಶ್ರುತಾಖ್ಯೋಕೀರ್ತಿ ಶ್ರುತಾನೀಕ ಉತಶ್ರುತಕ್ರಿಯಃ॥೧೨॥ ಯುಧಿಷ್ಟಿರಾದ್ಯೈಃ ಕ್ರಮಶಃ ಪ್ರಜಾತಾಃ" ದ್ರೌಪದಿಯಲ್ಲಿ ವಿಶ್ವೇದೇವತೆಗಳು ಐವರು, ೫ಗಂಧರ್ವ ಶ್ರೇಷ್ಟರ ಆವೇಶದಿಂದಕೂಡಿ ಹುಟ್ಟಿದರು ಚಿತ್ರರಥ, ಅಭಿತಾಮ್ರ ಕಿಶೋರ, ಗೋಪಾಲ, ಬಲ ಎಂಬ ೫ಗಂಧರ್ವ ಶ್ರೇಷ್ಟರು ಪ್ರತಿವಿಂಧ್ಯ ಮೊದಲಾದ ಐವರಲ್ಲಿ ಕ್ರಮದಿಂದ ಅವಿಷ್ಟರಾಗಿರುವರು. ಈಐವರು ಧರ್ಮರಾಜ ಮೊದಲಾದ ಐವರ ದೆಶೆಯಿಂದ ದ್ರೌಪದಿಯಲ್ಲಿ

ಕ್ರಮವಾಗಿಹುಟ್ಟಿದವರು. ಕ್ರಮವೆಂದರೆ,ಧರ್ಮರಾಜನ ದೆಶೆಯಿಂದ ಹುಟ್ಟಿದ ಪ್ರತಿವಿಂಧ್ಯ, ಭೀಮಸೇನನ ಮಗನು ಶ್ರುತಸೋಮ, ಶ್ರುತಕೀರ್ತಿಯೆಂಬುವನು ಅರ್ಜುನನ ದೆಶೆಯಿಂದ ಹುಟ್ಟಿದವನು ಶ್ರುತಾನೀಕನು ನಕುಲನ ಮಗನು; ಶ್ರುತಕರ್ಮ(ಶ್ರುತಕ್ರಿಯ)ನೆಂಬುವನು ಸಹದೇವನ ದೆಶೆಯಿಂದ ಹುಟ್ಟಿದವನೆಂದರ್ಥ. ಇವರಲ್ಲಿ ಕ್ರಮವಾಗಿ ಪ್ರತಿವಿಂಧ್ಯನಲ್ಲಿ ಚಿತ್ರರಥನ ಆವೇಶವೂ,ಶ್ರುತಸೋಮನಲ್ಲಿ ಅಭಿತಾಮ್ರನೆಂಬ ಗಂಧರ್ವನೂ, ಶ್ರುತಿಕೀರ್ತಿಯಲ್ಲಿ ಕಿಶೋರನ ಆವೇಶವೂ ಶ್ರುತಾನೀಕನಲ್ಲಿ ಗೋಪಾಲನೆಂಬ ಗಂಧರ್ವನ ಆವೇಶವೂ, ಶ್ರುತಕ್ರಿಯನಲ್ಲಿಬಲನೆಂಬ ಗಂಧರ್ವನ ಆವೇಶವೂ ಇರುವುವೆಂದುತಿಳಿಯಬೇಕು. ಐದುಮಂದಿ ವಿಶ್ವದೇವತೆಗಳು ದ್ರೌಪದಿ ಮಕ್ಕಳೆಂದು ಹೇಳುವರು. ಆವಿಶ್ವೇದೇವತೆಗಳ ಹೆಸರುಗಳು ೩೨ನೆಯ ಪದ್ಯದ ಪದಾರ್ಥದಲ್ಲಿ ಕೊಡಲ್ಪಟ್ಟಿವೆ.

ಅವತಾರಿಕೆ:—ಅಶ್ವಿನೀದೇವತೆಗಳ ಅವತಾರಗಳನ್ನೂ ದ್ಯಾವಾ, ಪೃಥಿವೀ, ವಿಷ್ವಕ್ಸೇನ ಕುಬೇರ ಮೊದಲಾದವರ ತಾರತಮ್ಯವನ್ನು ಹೇಳುತ್ತಾರೆ:—

**ವಿವಿದ ಮೈಂದರು ನಕುಲ ಸಹದೇ**
**ವವಿಭು ತ್ರಿಶಿಖಾ ಶ್ವಿನಿಗಳವರೊಳು**
**ದಿವಿಷನಾವೇಶ ವಿಹುದೆಂದಿಗುದ್ಯಾವಾ ಪೃಥ್ವಿ ಋಭು॥**
**ಪವನಸುತ ವಿಷ್ವಕ್ಸೇನನು ಮಾ**
**ಕುವರ ವಿಘ್ನಪ ಧನಪ ಮೊದಲಾ**
**ದವರು ಮಿತ್ರಗೆ ಕಿಂಚಿತಾಧಮರೆನಿಸಿ ಕೊಳುತಿಹರು.॥೩೮॥**

ಪದಾರ್ಥ:—ವಿವಿದ ಮೈಂದರು=ಈಹೆಸರುಳ್ಳ ಕಪಿಗಳು, ನಕುಲ ಸಹದೇವರು,ವಿಭುತ್ರಿಶಿಖರು ಈಅವತಾರಗಳು ಅಶ್ವಿನಿಗಳು=ನಾಸತ್ಯ ದಸ್ರರೆಂಬ ಅಶ್ವಿನೀದೇವತೆಗಳ ಅವತಾರಗಳು. ಇವರೊಳು, ಎಂದಿಗೂ=ಯಾವಾಗಲೂ ದಿವಿಷನಾವೇಶ=ದೇವೇಂದ್ರನಾವೇಶವೂಇಹುದು=ಇರುವುದು. ದ್ಯಾವಾ,ಪೃಥಿವಿ ಋಭು, ಪವನಸುತ=ವಾಯುಕುಮಾರನಾದ ವಿಷ್ವಕ್ಸೇನನು,ಉಮಾಕುವರವಿಘ್ನಪ=ಪಾರ್ವತಿಯ ಮಗನಾದ ವಿಘ್ನೇಶ್ವರನು, ಧನಪ=ಕುಬೇರ ಮೊದಲಾದವರು ಮಿತ್ರಗೆ=ಮಿತ್ರನೆಂಬ ಸೂರ್ಯನಿಗೆ ಕಿಂಚಿತಾಧಮರು=ಸಲ್ಪ ಕಮ್ಮಿಯಾದವರೆಂದುಅನಿಸಿಕೊಳುತಿಹರು.

ತಾತ್ಪರ್ಯ:—ರಾಮಾವತಾರಕಾಲದಲ್ಲಿ ರಾಮದೇವರ ಸೇವಾರ್ಥ

ವಾಗಿ ಅಶ್ವಿನೀ ದೇವತೆಗಳು ವಿವಿದ ಮೈಂದನೆಂಬ ಕಪಿಗಳಾಗಿ ಹುಟ್ಟಿದರು ಅಶ್ವಿನೀ ದೇವತೆಗಳೆಂಬುವರು ಕುದುರೆಯ ೨ಮೂಗುಗಳ ರಂಧ್ರದಿಂದ ಸಮ ವಾಗಿಪುಟ್ಟಿದವರಾದುದರಿಂದ ಅವರು ಯಾವಾಗಲೂ ಇಬ್ಬರು ಒಂದೇರೂಪ ಉಳ್ಳವರಾಗಿ ಒಂದೇ ಸ್ಥಳದಲ್ಲಿ ಇಬ್ಬರುಇರುವರು. ಎಲ್ಲಿ ಅವತಾರ ಮಾಡಿ ದರೂ ಇಬ್ಬರೂ ಸೇರಿಜನಿಸುವರು. ಆದುದರಿಂದ ನಾಸತ್ಯ, ದಸ್ರರೆಂಬ ಇ ಬ್ಬರು ಅಶ್ವಿನೀದೇವತೆಗಳು ವಿವಿಧ ಮೈಂದರಾಗಿ ಹುಟ್ಟಿದರು. "ಅಶ್ವಿನೌಚ ನಾಸತ್ಯ ದಸ್ರೌ ವಿವಿದಶ್ಚ ಮೈಂದಃ" ಎಂಬನಿರ್ಣಯವಾಕ್ಯವು ಇದಕ್ಕೆಆದಾ ರವು. ಕೃಷ್ಣಾವತಾರಕಾಲದಲ್ಲಿ ಪಾಂಡುರಾಜನ ಹೆಂಡತಿಯಾದ ಮಾದ್ರಿಯ ಲ್ಲಿ ಅಶ್ವಿನೀದೇವತೆಗಳು ತಮ್ಮದೆಶೆಯಿಂದ ತಾವೇ ನಕುಲ ಸಹದೇವರಾಗಿಪು ಟ್ಟಿರುವರು ನಿರ್ಣಯ ೧೨ನೆಯ ಅಧ್ಯಾಯದಲ್ಲಿ "ಮಂತ್ರಂಸಮುದಾಯಚ ಮದ್ರಪುತ್ರೀನ್ಯ್ಯಚಿಂತಯ ತ್ಯ್ಯಾನ್ನು ಕಥಂದ್ವಿಪುತ್ರೀ||ಸದಾವಿಯೋಗೌ ದಿವಿ ಜೇಷುದಸ್ರೌನ ಚ್ಛೈತಯೋರ್ನಾಮ ಭೇದಃ ಕ್ವಚಿದ್ಧಿ||೨೪|| ಏಕಾಥಾಂಯಾರ್ಣ ತ್ವೇತಯೋರ ಪ್ಯಪಾಹಿ ತದಾಯಾತಂ ಸಕೃದಾವರ್ತನಾದ್ದ್ವೌ ಇತೀಕ್ಷ್ಯಂ ತ್ಯ್ಯೇರಿತಾವಶ್ವಿನೌತೌ ಶೀಘ್ರಂ ಪಾರ್ಸ್ತೌ ಪುತ್ರಕೌ ತತ್ಪ್ರಸೂತೌ||೨೫|| ತಾವೇವ ದೇವೌ ನಕುಲಃ ಪೂರ್ವ ಜಾತಃ ಸಹದೇವೋಭೂತ್ಪಶ್ಚಿಮಸ್ತ್ವಾಯ ಪೌಹಿ||" ಪಾಂಡುರಾಜನಿಗೆ ಕುಂತೀದೇವಿಯಲ್ಲಿ ಧರ್ಮರಾಜ, ಭೀಮಸೇನ,ಅ ರ್ಜುನರೆಂಬ ಮೂವರು ಯಮ,ವಾಯು,ಇಂದ್ರ ಈಮೂವರ ದೆಶೆಯಿಂದ ಹುಟ್ಟಿದಮೇಲೆ, ಮಾದ್ರಿಗೆ ಕುಂತಿಯಲ್ಲಿರುವ ಸಂತಾನ ಪ್ರದವಾದ ಮಂತ್ರವ ನ್ನು ಉಪದೇಶಮಾಡೆಂದು ಪಾಂಡುರಾಜನು ಹೇಳಲು, ಕುಂತೀಗೆ ಇಷ್ಟವಿಲ್ಲದಿ ದ್ದರೂ ಪತಿಯ ಅಪ್ಪಣೆಯನ್ನು ಮೀರಲಾರದೆಮಂತ್ರವು ಒಂದೇ ಆವೃತ್ತಿಫ ಲಿಸುವಂತೆ ಹೇಳಿ ಮಾದ್ರೀಗೆ ಉಪದೇಶವಿತ್ತಳು. ಮಾದ್ರಿಯು ಮಂತ್ರವನ್ನು ಹೊಂದಿ ಒಂದೇ ಸಲ ನನಗೆ ಮಂತ್ರವು ಫಲಿಸುವುದು, ನನಗೆ ಒಂದೇ ಆವೃ ತ್ತಿಯಲ್ಲಿ ಇಬ್ಬರು ಮಕ್ಕಳು ಹುಟ್ಟುವುದಕ್ಕೆ ತಕ್ಕ ಉಪಾಯವುಮಾಡಬೇಕು. ಅಶ್ವಿನೀದೇವತೆಗಳಿಬ್ಬರೂ ಯಾವಾಗಲೂ ಕೂಡಿರುವರು. ಒಬ್ಬರನ್ನು ಬಿಟ್ಟು ಒಬ್ಬರು ಇರುವುದಿಲ್ಲ. ಇವರಿಬ್ಬರಿಗೂ ಉಷೆ ಎಂಬ ಒಬ್ಬಳೇ ಹೆಂಡತಿ ಇರುವ ಳು. ಇವರಿಬ್ಬರಲ್ಲಿ ರೂಪ ವಿಷಯವಾದ ಭೇದವೂ ಕಾಣುವುದಿಲ್ಲ. ಆದುದರಿಂದ ಅವರನ್ನು ಒಂದು ಸಲ ಮಂತ್ರದಿಂದ ಕರೆದರೆ ಅವರಿಬ್ಬರೂ ಬಂದು ಎರಡು

ಮಕ್ಕಳನ್ನು ಕೊಡುವರೆಂದು ನಿಶ್ಚಯಿಸಿ ಮಂತ್ರದಿಂದ ಅಶ್ವಿನೀದೇವತೆಗಳನ್ನು ಕರೆದಳು. ತಕ್ಷಣದಲ್ಲಿ ನಾಸತ್ಯ ದಸ್ರರೆಂಬ ಅಶ್ವಿನೀದೇವತೆಗಳಿರ್ವರು ಬಂದು ಆಕೆಯಲ್ಲಿ ತಾವೇ ಜನಿಸಿದರು. ಅವರಲ್ಲಿ ಮೊದಲು ನಕುಲನೂ, ಆಮೇಲೆ ಸಹದೇವನೂ ಹುಟ್ಟಿದನು. ಇವರಿಬ್ಬರೂ ಅವಳಿ ಜವಳಿಗಳೆಂದು ತಾತ್ಪರ್ಯ, ಎಂದು ಹೇಳಿರುವರು ಈ ಆಧಾರದಿಂದ ಅಶ್ವಿನೀ ದೇವತೆಗಳು ನಕುಲ ಸಹದೇವರೆಂದು ಸಿದ್ಧವಾಯಿತು. ವಿಭು ತ್ರಿಶಿಖ(ವಿಶಿಖ) ಎಂಬೀರ್ವರು ೪-೫ ಈ ಎರಡು ಮನ್ವಂತರಗಳಲ್ಲಿ ವಿಶಿಖ(ತ್ರಿಶಿಖ)ವಿಭು ಇವರಿಬ್ಬರೂ ಇಂದ್ರರಾಗಿದ್ದರು ಈ ವಿಷಯದಲ್ಲಿ ನಿರ್ಣಯ ೧೮ನೆಯ ಅಧ್ಯಾಯದಲ್ಲಿ "ಪೂರ್ವೇಂದ್ರಾಃ ಮಾರುತ ವೃಷ ನಾಸತ್ಯಾಂ ಶ್ಚತುರಸ್ಥಿತಾಃ||೪೨|| ಪೂರ್ವಮನ್ವಂತರಗಳಲ್ಲಿ ಇಂದ್ರರಾಗಿದ್ದ ವಾಯುದೇವರು ಯಮಧರ್ಮ ಅಶ್ವಿನೀದೇವತೆಗಳಿರ್ವರು ಈ ಹೀ ನಾಲ್ವರು ಭೂಮಿಯಲ್ಲಿ ಹುಟ್ಟುವುದಕ್ಕಾಗಿ ಯೋಚಿಸುತ್ತಿದ್ದರು, ಎಂಬ ವಾಕ್ಯದಿಂದ ಅಶ್ವಿನೀದೇವತೆಗಳೂ ಇಂದ್ರರಾಗಿದ್ದರೆಂದು ಸಿದ್ಧಾಂತವಾಗುವುದು. ಆ ಇಂದ್ರರು ಯಾರು? ಏನು ಹೆಸರು? ಯಾವಕಾಲವೆಂಬುವುದಕ್ಕೆ ವಿಷ್ಣುರಹಸ್ಯವಾಧಾರ:— (ವಿಷ್ಣು ರಹಸ್ಯ ೨೮ನೆಯ ಅಧ್ಯಾಯ) ಚತುರ್ಥಸ್ತ್ವಾಪಸೋ ನಾಮ್ನಾ ಹ್ಯುತ್ತಮಸ್ಯಾನು ಜೋಮನುಃ||ನಾಸತ್ಯೋಽಪಿ ವಿಶಿಖೋ ನಾಮ್ನಾ ಪ್ರಾಪ್ತ ಇಂದ್ರಪದಂ ಸುರಾಃ||೨||ನಾಲ್ಕನೆಯ ಮನು ಉತ್ತಮನ ತಮ್ಮನಾದ ತಾಪಸನೆಂಬುವನು ಆ ಮನ್ವಂತರದಲ್ಲಿ ನಾಸತ್ಯ ದಸ್ರರೆಂಬ ಅಶ್ವಿನೀ ದೇವತೆಗಳ ಪೈಕಿ ನಾಸತ್ಯನೆಂಬುವನು ವಿಶಿಖನೆಂಬ ಹೆಸರಿನಿಂದ ಹುಟ್ಟಿ ಇಂದ್ರಪದವಿಯನ್ನು ಹೊಂದಿದನು ಎಂದು ಇರುವುದು. ಆದರೆ ದಾಸಾರ್ಯರು ತ್ರಿಶಿಖನೆಂದು ಹೇಳಿರುವರು

ಹೆಸರು ವ್ಯತ್ಯಾಸವಾಗಲು ಕಾರಣವೇನೆಂದು ಆಕ್ಷೇಪಣೆ ಬರಬಹುದು ಭಾಗವತ ಅಷ್ಟಮ ಸ್ಕಂಧದಲ್ಲಿ "ಚತುರ್ಥ ಉತ್ತಮ ಭ್ರಾತಾಮನುನಾಮ್ನಾ ಚ ತಾಪಸಃ||ಸತ್ಯಕಾ ಹರಯೋ ವೀರಾದೇವಾಸ್ತ್ರಿಶಿಖ ಈಶ್ವರಃ|| " ನಾಲ್ಕನೆಮನು ಉತ್ತಮನ ತಮ್ಮನು ತಾಪಸನೆಂಬುವನು ಸತ್ಯಕಾ ಹರಿ,ವೀರ ಮೊದಲಾದವರು ದೇವತಾಗಣಗಳು ತ್ರಿಶಿಖನೆಂದು ದೇವೇಂದ್ರನು ಎಂದು ಹೇಳಿರುವರು, ಹೀಗೆ ಭಾಗವತದಲ್ಲಿ ತ್ರಿಶಿಖನೆಂದೇ ಇರುವುದು ದಾಸಾರ್ಯರು ತ್ರಿಶಿಖನೆಂದೇ ಹೇಳಿರುವರು. ವಿಷ್ಣುರಹಸ್ಯದಲ್ಲಿ ಇದೇ ಪ್ರಕರಣದಲ್ಲಿ ವಿಶಿಖನೆಂದು ಹೇಳ

ದುದರಿಂದ ಪುಸ್ತಕದಲ್ಲಿ ತಪ್ಪು ಇದ್ದರೂ ಇರಬಹುದು ಅಥವಾ ಪಾಠಭೇದ ವಿದ್ದರೂ ಇರಬಹುದು, ಅಥವಾ ಒಬ್ಬನಿಗೆ ೨ ಹೆಸರಿದ್ದರೂ ಇರಬಹುದು. ೫ನೆಯ ಮನ್ವಂತರದಲ್ಲಿ ಅಶ್ವನಿಗಳ ಪೈಕಿ ದಸ್ರನೆಂಬುವನು ವಿಭು ಎಂಬ ಹೆಸರಿನಿಂದ ಇಂದ್ರನಾಗಿದ್ದನು. ಭಾಗವತಾಷ್ಟಮಸ್ಕಂಧ ೫ನೆಯ ಅಧ್ಯಾಯದಲ್ಲಿ "ಪಂಚಮೋರೈವತೋನಾಮಮನುಸ್ತಾಮಸಸೋದರಃ॥ವಿಭುರಿಂದ್ರಃ" ೫ನೆಯ ಮನುತಾಮಸನ ತಮ್ಮನು ರೈವತನೆಂಬುವನು. ದೇವೇಂದ್ರನು ವಿಭು ಎಂಬುವನು ಎಂದು ಹೇಳಿರುವದು. ಈ ಆಧಾರಗಳ ಮೇಲೆ ವಿಭುತ್ರಿಶಿಖರೀರ್ವಾಪೂರ್ವೇಂದ್ರರಂತಲೂ ಅಶ್ವನೀ ಅವತಾರದವರೆಂತಲೂ ಸಿದ್ಧವಾಯಿತು. ಇವರುಗಳ ಪೈಕಿ ವಿವಿದನೆಂಬ ಕಪಿಯಲ್ಲಿ ಇಂದ್ರನಾವೇಶವಿರುವುದೆಂದು ನಿರ್ಣಯ ೩ನೆಯ ಅಧ್ಯಾಯದ 'ಅಶ್ವಿನೌಚ ಬಭೂವತುಸ್ತೌವಿವಿದಶ್ಚ ಮೈಂದಃ॥ ಬ್ರಹ್ಮೋದ್ಭವೌತೌ ಪುನರೇವಸೂರ್ಯಾದ್ಬಭೂವತು ಸ್ತತ್ರಕನೀಯ ಸಸ್ತು॥ ಆವೇಶ ಐಂದ್ರೋವರದಾನತೋ ಭೂತ್ತತೋ ಬಲೀಯಾನ್ ವಿವಿದೋಪಿ ಮೈಂದಾತ್ ॥ ೭೩ ॥

ಅಶ್ವನೀ ದೇವತೆಗಳು ಪೂರ್ವದಲ್ಲಿ ಬ್ರಹ್ಮದೇವರ ಮಕ್ಕಳು, ಮತ್ತೂ ಸೂರ್ಯನ ದೆಶೆಯಿಂದ ಹೆಣ್ಣು ಕುದುರೆಯ ಮೂಗಿನ ದ್ವಾರದಿಂದ ಹುಟ್ಟಿದರು. ಅವರೇ ರಾಮಾವತಾರದಲ್ಲಿ ಮೈಂದ ವಿವಿದರೆಂದು ಕಪಿಗಳಾಗಿ ಹುಟ್ಟಿದರು. ಅವರಲ್ಲಿ ಚಿಕ್ಕವನಾದ ವಿವಿದನೆಂಬುವನಲ್ಲಿ ಇಂದ್ರನಾವೇಶವೂ, ವರಬಲವೂ ಇದ್ದುದರಿಂದ ಮೈಂದನಕಿಂತಲೂ ವಿವಿದನು ಬಲಾಢ್ಯನಾಗಿದ್ದನು, ಎಂಬ ವಾಕ್ಯದಿಂದ ಸಿದ್ಧವಾಗಿರುವುದು. ದ್ಯಾವಾ, ಪೃಥಿವೀ, ಋಭುಗಣದವರು, ವಿಷ್ವಕ್ಸೇನ, ವಿಘ್ನೇಶ, ಕುಬೇರ, ಮೊದಲಾದವರು ಮಿತ್ರನಿಗಿಂತಲೂ ಸ್ವಲ್ಪ ಕಮ್ಮಿಯೆಂದು ತಾತ್ಪರ್ಯ.

ಅವತಾರಿಕೆ.—ಎರಡು ಪದ್ಯಗಳಿಂದ ಹಿಂದೆ ಹೇಳಿದ ಮನುಗಳನ್ನು ಬಿಟ್ಟು ಉಳಿದ ಮನುಗಳು, ಮತ್ತೂ ಕರ್ಮ ದೇವತೆಗಳು ಇವರ ತಾರತಮ್ಯವನ್ನೂ ಹೇಳುತ್ತಾರೆ :—

**ಪಾವಕಾಗ್ನಿ ಕುಮಾರನೆನಿಸುವ**
**ಚ್ಯಾವನನು ಚಥ್ಯಮುನಿ ಚಾಕ್ಷುಷ**
**ರೈವತಸ್ವಾರೋಚಿಷೋತ್ತಮ ಬ್ರಹ್ಮ ರುದ್ರೇಂದ್ರಾ ॥**
**ದೇವ ಧರ್ಮನು ದಕ್ಷನಾಮಕ**
**ಸಾವರಣಿ ಶಶಿಬಿಂದು ಪೃಥುಪ್ರೀ**
**ಯವ್ರತನು ಮಾಂಧಾತ ಗಯನು ಕಕುಸ್ಥ ದೌಷ್ಯಂತಿ ॥೩೫॥**

ಪದ್ಯಾರ್ಥ.—ಅಗ್ನಿ ಕುಮಾರನೆನಿಸುವ=ಅಗ್ನಿಯ ಹಿರಿಯ ಮಗನೆಂದು ಪ್ರಖ್ಯಾತನಾದ, ಪಾವಕ=ಪಾವಕನು, ಚಾವನ, ಉಚಿಥ್ಯರೆಂಬ, ಮುನಿ=ಋಷಿಗಳೀರ್ವರು, ಚಾಕ್ಷುಷಮನು ರೈವತ, ಸ್ವಾರೋಚಿಷ, ಉತ್ತಮ ಈ ೪ ಮನುಗಳು, ಬ್ರಹ್ಮ=ಬ್ರಹ್ಮಸಾವರ್ಣಿ, ರುದ್ರ=ರುದ್ರಸಾವರ್ಣಿ, ಇಂದ್ರ=ಇಂದ್ರ ಸಾವರ್ಣಿ, ದೇವ=ದೇವಸಾವರ್ಣಿ, ಧರ್ಮನು=ಧರ್ಮಸಾವರ್ಣಿ, ದಕ್ಷನಾಮಕನು=ದಕ್ಷ ಸಾವರ್ಣಿ ಎಂಬುವನು, ಸಾವರ್ಣಿ ಈ ಏಳು ಮನುಗಳು ಶಶಿಬಿಂದು, ಈ ಹೆಸರುಳ್ಳ ಚಕ್ರವರ್ತಿಯು, ಪೃಥು=ಪೃಥು ಚಕ್ರವರ್ತಿ, ಪ್ರಿಯವ್ರತನು, ಮಾಂಧಾತ, ಗಯನು, ಕಕುಸ್ಥ, ದೌಷ್ಯಂತಿ=ದುಷ್ಯಂತನ ಮಗನಾದ ಭರತನು.

**ಭರತ ಋಷಭಜ ಹರಿಣಿಜಾದ್ವಿಜ**
**ಭರತ ಮೊದಲಾದಖಿಳರಾಯರೊ**
**ಳಿರುತಿಹದು ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನದಿ ||**
**ವರದಿವಸ್ಪತಿ ಶಂಭುರದ್ಭುತ**
**ಕರೆಸುವನು ಬಲಿವಿಧೃತ ಶುಚಿ**
**ಸರಿಯೆನಿಪ ಋತಿಧಾಮ ಮೊದಲಾದಷ್ಟ ಗಂಧರ್ವ ||೩೬||**

ಪದ್ಯಾರ್ಥ.—ಋಷಭಜ=ಋಷಭ ದೇವರ ಮಗನಾದ, ಭರತ=ಭರತರಾಜನು, ಹರಿಣಿಜ=ಜಿಂಕೆಯ ಜನ್ಮವನ್ನು ಹೊಂದಿದ ಭರತನ ಎರಡನೆಯ ರೂಪವು, ದ್ವಿಜ=ಬ್ರಾಹ್ಮಣ ಜನ್ಮವನ್ನು ಧರಿಸಿದ ಭರತನ ಮೂರನೆಯ ರೂಪವು, ಅಂತು ಮೂರು ರೂಪಗಳುಳ್ಳ ಭರತಮೊದಲಾದ, ಅಖಿಳರಾಯರೊಳು ಪ್ರತಿದಿನದಿ=ಸರ್ವ ಕಾಲಗಳಲ್ಲಿಯೂ, ಶ್ರೀ ವಿಷ್ಣು ಪ್ರಾಣಾವೇಶ=ಶ್ರೀಪರಮಾತ್ಮನ, ಮತ್ತು ವಾಯು ದೇವರ ಆವೇಶವು ಇರುತಿಹವು. ವರ=ಉತ್ತಮನಾದ, ದಿವಸ್ಪತಿ=ದಿವಸ್ಪತಿ ಎಂಬ ದೇವೇಂದ್ರನು, ಶಂಭು, ಅದ್ಭುತ, ಬಲಿ, ವಿಧೃತ, ಶುಚಿಸರಿಯೆನಿಪ=ಇವರಿಗೆ ಸರಿ ಎನಿಸುವ, ಋತಧಾಮ=ಋತಧಾಮ ಮೊದಲಾದ ಏಳು ಮಂದಿ, ಕರೆಸುವರು=ಇಂದ್ರರೆನಿಸುವರು. ಈ ಏಳು ಇಂದ್ರರು, ಅಷ್ಟಗಂಧರ್ವ=೮ ಮಂದಿ ಗಂಧರ್ವರು.

**ಅರಸೆನಿಪ ಕರ್ಮಜರು ವೈಶ್ವಾ**
**ನರಗಧಮು ಶತಗುಣದಿ ವಿಘ್ನೇ**
**ಶ್ವರಗೆ ಕಿಂಚಿದ್ಗುಣಕಡಿಮೆ ಬಲಿಮುಖ್ಯ ಪಾವಕರು ||**
**ಶರಭಪರ್ಜನ್ಯಾಖ್ಯ ಮೇಘಪ**
**ತರಣಿಭಾರ್ಯಾ ಸಂಜ್ಞೆ ಶಾರ್ವರಿ**
**ಕರನಪತ್ನಿಯು ರೋಹಿಣೀಶಾಮಲೆಯು ದೇವಕಿಯೂ ||೩೭||**

ಪದ್ಯಾರ್ಥ.—ಅರಸೆನಿಪ = ಶಶಿಬಿಂದು, ಮಾಂಧಾತ ಮೊದಲಾದ ರಾಜರೆಂದು ಪ್ರಖ್ಯಾತರಾದ, ಕರ್ಮಜರು=ಕರ್ಮ ದೇವತೆಗಳು, ವೈಶ್ವಾನರಗೆ-ಅಗ್ನಿಗೆ, ಶತಗುಣದಿ=೧೦೦ ಗುಣಗಳಿಂದ, ಅಧಮ=ಕಮ್ಮಿ ಎನಿಸುವರು. ಬಲಿಮುಖ್ಯ=ಬಲಿಚಕ್ರವರ್ತಿ ಮೊದಲಾದ ಇಂದ್ರರು, ಪಾವಕ, ಉಚಿಥ್ಯ ಮೊದಲಾದವರು, ವಿಘ್ನೇಶ್ವರಗೆ, ಕಿಂಚಿದ್ಗುಣಕಡಿಮೆ = ಸ್ವಲ್ಪ ಗುಣ ಕಮ್ಮಿಯು, ಶರಭಪರ್ಜನ್ಯಾಖ್ಯ=ಶರಭನೆಂಬ ಕಪಿ ರೂಪವನ್ನು ಧರಿಸಿದ್ದ ಪರ್ಜನ್ಯನೆಂಬ, ಮೇಘಪ=ಮೇಘಾಧಿಪತಿಯು, ತರಣಿ=ವಿವಸ್ವಾನೆಂಬ ಸೂರ್ಯನ, ಭಾರ್ಯಾ=ಹೆಂಡತಿಯಾದ, ಸಂಜ್ಞೆ=ಸಂಜ್ಞಾ ದೇವಿಯೂ, ಶಾರ್ವರೀಕರನ ಪತ್ನಿಯು=ಚಂದ್ರನ ಹೆಂಡತಿಯಾದ ರೋಹಿಣೀ ದೇವಿಯು ಶಾಮಲೆಯು=ಯಮದೇವರ ಹೆಂಡತಿಯಾದ ಶಾಮಲಾ ದೇವಿಯು.

**ಅರಸಿಯೆನಿಪಳು ಧರ್ಮರಾಜಗೆ**
**ವರುಣಭಾರ್ಯೋಷಾದಿಷಟ್ಕರು**
**ಕೊರತೆಯೆನಿಪರು ಪಾವಕಾದ್ಯರಿಗೆರಡುಗುಣದಿಂದ ||**
**ಎರಡುಮೂರ್ಜನ ರಥಮಸ್ವಾಹಾ**
**ಕರೆಸುವಳುಷಾದೇವಿ ವೈಶ್ವಾ**
**ನರನಮಡದಿಗೆ ದಶಗುಣಾವರಳಶ್ವನೀಭಾರ್ಯಾ ||೩೮||**

ಪದ್ಯಾರ್ಥ.— ದೇವಕಿಯು=ಮೇಲಿನ ಶ್ಲೋಕವಲ್ಲಿ ಕಡೆಯ ಪದದಲ್ಲಿ ಹೇಳಿದ ದೇವಕಿ ಎಂಬಾಕೆಯು ಶಾಮಲಾ ದೇವಿಯ ಅವತಾರದವಳು. ಈಕೆಯು ಧರ್ಮರಾಜಗೆ, ಅರಸಿಯೆನಿಪಳು=ಪತ್ನಿ ಎನಿಸುವಳು, ಈ ದೇವಕಿಯು, ವರುಣಭಾರ್ಯಾ=ಗಂಗೆಯು, ಉಷಾದಿಷಟ್ಕರು=ಅನಿರುದ್ಧನ ಹೆಂಡತಿಯಾದ ಉಷಾ ಮೊದಲಾದ ೬ ಮಂದಿಯರು, ಪಾವಕಾದ್ಯರಿಗೆ= ಅಗ್ನಿಯ ಮಗನಾದ ಪಾವಕ ಮೊದಲಾದವರಕಿಂತಲೂ, ಎರಡು ಗುಣದಿಂದ=ಎರಡು ಗುಣಗಳಿಂದ, ಕೊರತೆಯೆನಿಪರು=ಕಮ್ಮಿ ಎನಿಸುವರು, ಎರಡು ಮೂರ್ಜ

ನರ=ಪರ್ಜನ್ಯ ಮೊದಲಾದ ಆರು ಜನರಕಿಂತಲೂ, ಸ್ವಾಹಾ=ಅಗ್ನಿ ಭಾರ್ಯೆಳಾದ ಸ್ವಾಹಾದೇವಿಯು, ಅಧಮ= ಕಮ್ಮಿಯು, ಅಶ್ವಿಸೀಭಾರ್ಯ=ಅಶ್ವಿನೀ ದೇವತೆಗಳ ಹೆಂಡತಿಯಾದ, ಉಷಾದೇವಿ=ಉಷಾದೇವಿ ಎಂದು, ಕರೆಸುವಳು=ಹೆಸರುಳ್ಳಾಕೆಯು, ವೈಶ್ವಾನರ ಮಡದಿಗೆ= ಅಗ್ನಿ ದೇವನ ಹೆಂಡತಿಯಾದ ಸ್ವಾಹಾ ದೇವಿಗೆ, ದಶಗುಣ=೧೦ ಗುಣಗಳಿಂದ, ಅವರಳು=ಕಮ್ಮಿ ಎನಿಸುವಳು.

ತಾತ್ಪರ್ಯ.—೩೫ನೇ ಪದ್ಯ ಮೊದಲು ೩೮ನೆಯ ಪದ್ಯದ ವರೆಗೂ ಆಗುವ ೪ ಪದ್ಯಗಳಲ್ಲಿ ಪದ್ಯಾಂತದಲ್ಲಿ ಕ್ರಿಯಾಪದಗಳು ಇಲ್ಲದೆ ಇದ್ದುದರಿಂದ ೪ ಪದ್ಯಗಳಿಗೂ ಸೇರಿಸಿ ಒಂದೇ ಅನ್ವಯವಾಗುವದು ; ಆದುದರಿಂದ ಆ ೪ ಪದ್ಯಗಳ ತಾತ್ಪರ್ಯವೂ ಇಲ್ಲಿ ಬರೆಯಲ್ಪಡುತ್ತದೆ. ಪ್ರಧಾನಾಗ್ನಿಗೆ ಹಿರಿಯ ಮಗನಾದ ಪಾವಕನೆಂಬುವನು ; ಚ್ಯಾವನ, ಉಚಿಥ್ಯರೆಂಬ ಋಷಿಗಳೀರ್ವರು ಚಾಕ್ಷುಷ=೬ನೆಯ ಮನ್ವಂತರಕ್ಕೆ ಅಧಿಪತಿಯಾದ ಮನು, ರೈವತ=೫ನೆಯ ಮನು, ಸ್ವಾರೋಚಿಷ=ಎರಡನೆಯ ಮನು, ಉತ್ತಮ=ಮೂರನೆಯ ಮನು ಅಂತೂ ಇವರು ೪ ಮನುಗಳು , ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ಇಂದ್ರಸಾವರ್ಣಿ, ದೇವಸಾವರ್ಣಿ, ಧರ್ಮಸಾವರ್ಣಿ, ದಕ್ಷಸಾವರ್ಣಿ, ಸಾವರ್ಣಿ ಎಂಬೀ ೭ ಮನುಗಳು. ಮುಂದಿನ ೮ನೆಯ ಮನ್ವಂತರ ಮೊದಲು ೧೪ನೆಯ ಮನ್ವಂತರದವರೆಗೂ ಆಗುವ ೭ ಮನ್ವಂತರಗಳಿಗೆ ಅಧಿಪತಿಗಳು. ಒಟ್ಟು ಮನುಗಳು ೧೪ ಜನರು. ಅವರಲ್ಲಿ ೪ನೆಯ ಮನ್ವಂತರಾಧಿಪತಿಯಾದ ತಾಪಸನೆಂಬುವನು ಶ್ರೀ ಪರಮಾತ್ಮನ ಅವತಾರದವನು. ಸ್ವಾಯಂಭುವ ಮನುವು ರತಿ, ಶಚಿ, ಬೃಹಸ್ಪತಿ ಮೊದಲಾದವರ ಸಮನೆಂದು ಅಲ್ಲಿ ಸೇರಿಸಿರುವರು. ವೈವಸ್ವತ ಮನುವನ್ನು ವಿಶ್ವಾಮಿತ್ರ, ಮರೀಚಿ ಮೊದಲಾದವರ ಕಕ್ಷಾದಲ್ಲಿ ಸೇರಿಸಿರುವರು. ಹೀಗೆ ೩ ಜನರನ್ನು ಬಿಟ್ಟು ಉಳಿದ ೧೧ ಮನುಗಳನ್ನು ಇಲ್ಲಿ ಹೇಳಿರುವರು. ಶಶಿಬಿಂದುರಾಜನು ಪೃಥು ಚಕ್ರವರ್ತಿ, ಪ್ರಿಯವ್ರತರಾಜನು, ಮಾಧಾಂತರಾಜನು, ಗಯ, ಕಕುಸ್ಥ ದುಷ್ಯಂತರಾಜನ ಮಗನಾದ ಭರತರಾಜನು. ಋಷಭದೇವರ ಮಗನಾದ ಭರತನಿಗೆ ಜಿಂಕೆಯಜನ್ಮವೂ, ಬ್ರಾಹ್ಮಣ ಜನ್ಮವೂ ಬಂದಿದ್ದವು. ಈ ೩ ಜನ್ಮಗಳುಳ್ಳ ಭರತನು, ಇವರೇ ಮೊದಲಾದ ಎಲ್ಲಾ ರಾಜರಲ್ಲೂ

ಶ್ರೀಪರಮಾತ್ಮನಾವೇಶವೂ, ವಾಯುದೇವರ ಆವೇಶವು ಇರುವವು, ಮತ್ತು ಇಂದ್ರರು ೧೪ ಜನರು. ಅವರಲ್ಲಿ ೭ ಇಂದ್ರರನ್ನು ಉತ್ತಮ ಕಕ್ಷ್ಯದಲ್ಲಿ ಸೇರಿಸಿ ಇರುವರು ಸ್ವಾಯಂಭುವ ಮನ್ವಂತರದಲ್ಲಿ ಯಜ್ಞನಾಮಕನಾದ ಪರಮಾತ್ಮನೇ ಇಂದ್ರನು. ಸ್ವಾರೋಚಿಷ ಮನ್ವಂತರದಲ್ಲಿ ರೋಚನರೆಂದು ವಾಯುದೇವರು ಇಂದ್ರರು. ಉತ್ತಮ ಮನ್ವಂತರ ಅಂದರೆ ಮೂರನೆಯ ಮನ್ವಂತರದಲ್ಲಿ ಸತ್ಯಜಿತ್ ಎಂದು ಯಮಧರ್ಮನು ಇಂದ್ರನಾಗಿದ್ದನು. ತಾಪಸ, ರೈವತರೆಂಬ ೪-೫ ಈ ಮನ್ವಂತರಗಳಲ್ಲಿ ತ್ರಿಶಿಖ, ವಿಭು ಎಂಬ ನಾಸತ್ಯ ದಸ್ರರೆಂಬ ಅಶ್ವಿನೀ ದೇವತೆಗಳು ಇಂದ್ರರಾಗಿದ್ದರು. ೬ನೆಯ ಚಾಕ್ಷುಷ ಮನ್ವಂತರದಲ್ಲಿ ಮಂದ್ರದ್ಯುಮ್ನನೆಂತಲೂ. ಈಗ ನಡೆಯುತ್ತಿರುವ ೭ನೆಯ ವೈವಸ್ವತ ಮನ್ವಂತರದಲ್ಲಿ ಪುರಂದರನೆಂತಲೂ, ಈ ಇಬ್ಬರು ಇಂದ್ರರೂ ಶಚೀಪತಿಯಾದ ಪುರಂದರನೆಂದು ತಿಳಿಯಬೇಕು. ಅಂತು ಈ ೭ ಇಂದ್ರರನ್ನು ಹಿಂದೇ ಹೇಳಿರುವರು. ಉಳಿದವರು ೭ಜನ ಇಂದ್ರರು. ಬಲಿಚಕ್ರವರ್ತಿಯು ೮ನೆಯ ಮನ್ವಂತರದಲ್ಲಿ ಇಂದ್ರನಾಗುವನು. ಅದ್ಭುತ ನೆಂಬ ಇಂದ್ರನು ೯ನೆಯ ಮನ್ವಂತರದಲ್ಲಿಯೂ, ೧೦ನೆಯ ಮನ್ವಂತರದಲ್ಲಿ ಶಂಭು ಎಂಬ ಇಂದ್ರನು, ೧೧ನೆಯ ಮನ್ವಂತರದಲ್ಲಿ ವಿಧೃತ ಎಂಬ ಇಂದ್ರನು, ೧೨, ೧೩, ೧೪ ಈ ಮೂರು ಮನ್ವಂತರಗಳಲ್ಲಿ ಋತಧಾಮನು, ದಿವಸ್ಪತಿ, ಶುಚಿ ಎಂಬ ಮೂವರೂ ಇಂದ್ರರು. ಗಂಧರ್ವರ ಪೈಕಿ ಪ್ರಧಾನರು ೮ ಜನರು ಇವರೆಲ್ಲರೂ ಸಮರು. ಪಾವಕನನ್ನು ಮೊದಲು ಮಾಡಿ ಸಾವರ್ಣಿ ಪರ್ಯಂತರವಾದ ದೇವತೆಗಳೂ, ಕರ್ಮದೇವತೆಗಳೆನಿಸುವ ಶಶಿಬಿಂದು ಮೊದ ಲಾದ ರಾಜರು, (ಕರ್ಮದೇವತೆಗಳೆಂದರೆ ಮೊದಲು ರಾಜರಾಗಿದ್ದು ಕರ್ಮ ದಿಂದ ದೇವತ್ವವನ್ನು ಹೊಂದಿದವರೆಂದರ್ಥ.) ಮತ್ತು ದಿವಸ್ಪತಿ ಮೊದ ಲಾದ ಇಂದ್ರರು ಗಂಧರ್ವರೆಂಟು ಜನರು ಇವರೆಲ್ಲರೂ ಪ್ರಧಾನಾಗ್ನಿಗೆ ೧೦೦ ಗುಣಗಳಿಂದ ಕಮ್ಮಿಯೆನಿಸುವರು. ವಿಷ್ವಕ್ಸೇನನಿಗಿಂತಲೂ ಬಲಿ ಚಕ್ರವರ್ತಿ ಪಾವಕ ಮೊದಲಾದವರು ಸ್ವಲ್ಪ ಕಮ್ಮಿಯೆನಿಸುವರು. ಮೇಘಾಧಿ ಪತಿಯಾದ ಪರ್ಜನ್ಯನೆಂಬುವನು ದ್ವಾದಶಾದಿತ್ಯರ ಪೈಕಿ ಒಬ್ಬನು. ಇವನಿಗೆ ಶರಭನೆಂಬ ಕಪಿಯ ಅವತಾರವು ಬಂದಿರುವುದು. ರಾಮಾಯಣ ಬಾಲ ಕಾಂಡ ೧೭ನೆಯ ಸರ್ಗದಲ್ಲಿ 'ಶರಭಂಜನಯಾಮಾಸ ಪರ್ಜನ್ಯಸ್ತುಮಹಾ

ಬಲಃ॥" ಮಹಾ ಬಲಾಢ್ಯನಾದ ಪರ್ಜನ್ಯನು ಶರಭನೆಂಬ ಕಪಿಯನ್ನು ಸೃಷ್ಟಿಸಿದನು ಎಂಬ ವಾಕ್ಯವು ಇದಕ್ಕೆ ಆಧಾರವು. ಈ ಪರ್ಜನ್ಯನೊಬ್ಬನು (೧) ವಿವಸ್ವಾನ್ ಎಂಬ ಸೂರ್ಯನ ಹೆಂಡತಿ ಸಂಜ್ಞಾದೇವಿ. (೨) ಚಂದ್ರನ ಹೆಂಡತಿ ರೋಹಿಣಿ, (೩) ಯಮದೇವರ ಹೆಂಡತಿಯಾದ ಶಾಮಲಾದೇವಿ, (೪) ವರುಣನ ಹೆಂಡತಿಯಾದ ಗಂಗೆ (೫) ಅನಿರುದ್ಧನ ಹೆಂಡತಿ ಉಷೆ, (೬) ಇವರಾರು ಮಂದಿಗಳು ಪಾವಕ ಮೊದಲಾದರಗಿಂತಲೂ ಎರಡು ಗುಣಗಳು ಕಮ್ಮಿ ಎಂದು ತಿಳಿಯಬೇಕು. ಇವರ ಪೈಕಿ ಯಮನ ಹೆಂಡತಿ ಶಾಮಳೆಗೆ ದೇವಕೀ ಎಂದು ಒಂದು ಅವತಾರ ಉಂಟು. ಅಂದರೆ ವಸುದೇವನ ಹೆಂಡತಿಯಾದ ದೇವಕಿಯಲ್ಲ. ಈಕೆಯು ಧರ್ಮರಾಜನ ಹೆಂಡತಿಯು. ನಿರ್ಣಯ ೨೦ನೆಯ ಅಧ್ಯಾಯ, 'ಅಥೋಪಯೇಮೇ ಶಿಶುಪಾಲಪುತ್ರೀಂ ಯುಧಿಷ್ಠಿರೋ ದೇವಕೀನಾಮ ಪೂರ್ವಾಂ॥ ಸ್ವೀಯಾಂಭಾರ್ಯಾಂ" ಧರ್ಮರಾಜನು ಶಿಶುಪಾಲನ ಮಗಳಾದ ದೇವಕಿಯನ್ನು ಮದುವೆ ಮಾಡಿಕೊಂಡನು, ಆಕೆಯು ಪೂರ್ವದಲ್ಲಿ ಯಮನ ಹೆಂಡತಿಯು; ಯಮನೇ ಧರ್ಮರಾಜನಾದುದರಿಂದ ಪೂರ್ವದಲ್ಲಿ ಇವನ ಹೆಂಡತಿ ಎಂದು ಹೇಳಿರುವರು. ಆ ವಾಕ್ಯವು ಶಾಮಳೆಯು ಶಿಶುಪಾಲನ ಮಗಳಾದ ದೇವಕೀ ಅವತಾರವೆಂದು ಸಿದ್ಧಮಾಡಲು ಆಧಾರವಾಗಿರುವುದು. ಮೇಲೆ ಹೇಳಿದ ಪರ್ಜನ್ಯಾದಿ ೬ ಜನರಕಿಂತಲೂ ಅಗ್ನಿಯ ಹೆಂಡತಿಯಾದ ಸ್ವಾಹಾದೇವಿಯು ಎರಡು ಗುಣಗಳಿಂದ ಕಮ್ಮಿಯೆನಿಸುವಳು. ಅಶ್ವಿನೀ ದೇವತೆಗಳ ಹೆಂಡತಿಯಾದ ಉಷಾ ದೇವಿಯು ಸ್ವಾಹಾ ದೇವಿಯಗಿಂತಲೂ ೧೦ ಗುಣಗಳು ಅಧಮರೆಂಬ ತಾತ್ಪರ್ಯ.

ಅವತಾರಿಕೆ.—ಬುಧ, ಶನಿ, ಪುಷ್ಕರ ಇವರ ತಾರತಮ್ಯವನ್ನೂ ಉಷಾ ದೇವಿಯ ಅವತಾರಗಳನ್ನೂ ಹೇಳುತ್ತಾರೆ:—

**ಸುದರುಶನ ಶಕ್ರಾದಿಸುರಯುತ**
**ಬುಧನು ಶಾನಭಿಮನ್ಯುವೆನಿಸುವ**
**ಬುಧನಿಗಿಂದಾಶ್ವಿನೀಭಾರ್ಯಾಶಲ್ಯಮಾಗಧರಾ ॥**
**ಉದರಜೋಷಾದೇವಿಗಿಂದಲಿ**
**ಅಧಮನೆನಿಪಶನೈಶ್ಚರನುಶನಿ**
**ಗಧಮಪುಷ್ಕರಕರ್ಮಪನು ಯೆನಿಸುವನುಬುಧರಿಂದ ॥ ೩೯ ॥**

ಪದ್ಯಾರ್ಥ.—ಸುದರುಶನ=ಚಕ್ರವು, ಶಕ್ರಾದಿಸುರಯುತ=ಇಂದ್ರ

ಮೊದಲಾದ ಅಂಶದಿ ಯಮ, ವಾಯು, ಇಂದ್ರ, ಅಶ್ವಿನೀ, ಚಂದ್ರ ಈ ದೇವತೆಗಳ ಅಂಶದಿಂದ ಕೂಡಿದ, ಬುಧನು ತಾನು ಅಭಿಮನ್ಯುವೆನಿಸುವ= ಅರ್ಜುನನ ಮಗನಾದ ಅಭಿಮನ್ಯುವಾಗಿ ಜನಿಸಿದನು. ಶಲ್ಯಮಾಗಧರ= ಶಲ್ಯ. ಜರಾಸಂಧ ಇವರ, ಉದರಜಾ=ವೀರ್ಯದಿಂದ ಹುಟ್ಟಿದ ಎರಡು ಅವ ತಾರಗಳಿಂದ ಕೂಡಿದ, ಅಶ್ವಿನೀಭಾರ್ಯಾ=ಅಶ್ವಿನೀ ದೇವತೆಗಳ ಹೆಂಡತಿ ಯಾದ ಉಷಾ ದೇವಿಯು, ಬುಧನಿಗಿಂತ ಕನಿಷ್ಠೆ ಎನಿಸುವಳು. ಉಷಾದೇ ವಿಗಿಂವಲಿ ಶನೈಶ್ಚರನು ಅಧಮನೆನಿಸ, ಪುಷ್ಕರ ಕರ್ಮಪನು=ಪುಷ್ಕರನೆಂಬ ಕರ್ಮಕ್ಕೆ ಅಧಿಪತಿಯು, ಶನಿಗೆ-ಶನಿಯುಗಿಂತಲೂ, ಬುಧರಿಂದ-ಜ್ಞಾನಿಗಳಿಂದ ಅಧಮನೆನಿಸುವನು.

ತಾತ್ಪರ್ಯ.—ಚಂದ್ರನ ಮಗನಾದ ಬುಧನು ವಿಶೇಷವಾದ ಚಂದ್ರಾಂಶ ದಿಂದಲೂ, ಸುದರ್ಶನನೆಂಬ ಭಗವಚ್ಚಕ್ರದ ಆವೇಶದಿಂದಲೂ ಯಮ, ವಾಯು, ಇಂದ್ರ, ಅಶ್ವಿನೀ ಇವರ ಆವೇಶದಿಂದಲೂ ಯುಕ್ತನಾಗಿ ಸುಭ ದ್ರೆಯಲ್ಲಿ ಅರ್ಜುನನ ದೆಸೆಯಿಂದ ಹುಟ್ಟಿದನು. ನಿರ್ಣಯ ೨೦ನೆಯ ಅಧ್ಯಾಯದ 'ತೇಷಾಂವ್ವಯೋಽಶ್ವಾವರ ಜೋಽಭಿಮನ್ಯುಃ || ಚಂದ್ರಾಂಶ ಯುಕ್ತೋತಿತರಾಂಬುಧೋ ಸೌಜಾತಸ್ಸುಭದ್ರಾಜರರ್ಜುನೇನ|| ಧರ್ಮೇ ರಶಂಕ್ರಾಂಶಯುತೋಽಶ್ವಿನೋಽಶ್ಚ ತಥೈವ ಕೃಷ್ಣಸ್ಯಚ ಸನ್ನಿಧಾನಯುಕ್ ||' ಎಂಬ ವಾಕ್ಯವು ಇದಕ್ಕೆ ಆಧಾರವು. ಅಭಿಮನ್ಯುವಲ್ಲಿ ಶ್ರೀ ಕೃಷ್ಣನ ಸನ್ನಿ ಧಾನವೂ ಉಂಟೆಂದು ಹೇಳಿದ ನಿರ್ಣಯ ವಾಕ್ಯದಿಂದ ಸಿದ್ಧವಾಗುವುದು. ಅಶ್ವಿನೀ ದೇವತೆಗಳ ಹೆಂಡತಿಯಾದ ಉಷೆಯು ಬುಧನಿಕಿಂತಲೂ ಸ್ವಲ್ಪ ಅಧ ಮಳೆನಿಸುವಳು. ಈಕೆಗೆ ಎರಡು ಅವತಾರಗಳುಂಟು. ಶಲ್ಯನ ಮಗಳೂ, ನಕುಲನ ಹೆಂಡತಿಯೂ ಆದ ಕರೇಣುಮತಿಯು ಅವತಾರ ಒಂದು; ಜರಾ ಸಂಧನ ಮಗಳೂ, ಸಹದೇವನ ಹೆಂಡತಿಯೂ ಆದ ವಿಜಯಾ ಎಂಬ ರೂಪ ಒಂದು ಇವೆರಡೂ ಉಷಾದೇವಿಯ ಅವತಾರವು. ಅಶ್ವಿನೀ ದೇವತೆಗಳಿಬ್ಬ ರಿಗೂ ಉಷೆ ಎಂಬ ಒಬ್ಬಳೇ ಭಾರ್ಯಳಾದುದರಿಂದಲೂ, ನಕುಲ ಸಹದೇವ ರು, ಅಶ್ವಿನೀ ದೇವತೆಗಳಾದುದರಿಂದಲೂ ಇವರಿಬ್ಬರಿಗೂ ಹೆಂಡತಿಯಾಗುವ ದಕ್ಕಾಗಿ ಒಬ್ಬಾಕೆಯೇ ಎರಡು ರೂಪದಿಂದ ಹುಟ್ಟಿ ಇಬ್ಬರಿಗೂ ಪತ್ನಿಯಾದ ಳೆಂಬ ತಾತ್ಪರ್ಯ. ನಿರ್ಣಯ ೨೦ನೆಯ ಅಧ್ಯಾಯದಲ್ಲಿ 'ಭೀಮಃ ಕನ್ಯಾಂ

ಸಹದೇವಸ್ಯ ಹೇತೋಸ್ಸಮಗ್ರಹೀದನುಜಸ್ಯಾತ್ಮನಸ್ಸಃ || ನಕುಲಸ್ಯಾಗಾ ನ್ಮದ್ರರಾಜೋ ಋಪೂರ್ವಂಸ್ವಿಯಾಂ ಕನ್ಯಾಂ ಸಾತಥೈಸಾಪ್ಯೃಷಾಃ ||" ಭೀಮಸೇನ ದೇವರು ಜರಾಸಂಧನನ್ನು ಕೊಂದ ಕೂಡಲೆ ಅವನ ಮಗನಾದ ಸಹದೇವನು ಒಂದು ರಥವನ್ನೂ ತನ್ನ ತಂಗಿಯನ್ನು ಭೀಮಸೇನ ದೇವರಿಗೆ ಕೊಟ್ಟು ಅವರನ್ನು ಮೋಹಿಸೋಕ್ಕನೆಂದು ಇದಕ್ಕೆ ಹಿಂದಿನ ನಿರ್ಣಯ ಶ್ಲೋಕದಲ್ಲಿ ಹೇಳಿರುವರು. ಆ ಶ್ಲೋಕವು ಏಕಾದಶ ರುದ್ರರ ತಾರತಮ್ಯವನ್ನು ಹೇಳುವ ಸಂದರ್ಭದಲ್ಲಿ ಪತ್ರತಾಪನೆಂಬ ರುದ್ರನು ಜರಾಸಂಧನ ಮಗನಾದ ಸಹದೇವನಾಗಿ ಜನಿಸಿದನೆಂದು ಹೇಳಿದೆ, ಇದೇ ಸಂಧಿ ೨೭ನೆಯ ಪದ್ಯಾರ್ಥ ದಲ್ಲಿ ಉದಾಹರಿಸಿ ಅದರರ್ಥವೂ ಬರೆಯಲ್ಪಟ್ಟಿದೆ. ಈ ಶ್ಲೋಕಾರ್ಥವೇ ನೆಂದರೆ:—ಭೀಮಸೇನದೇವರು ಜರಾಸಂಧನ ಮಗನಾದ ಸಹದೇವನು ಕೊಟ್ಟ ಕನ್ಯೆಯನ್ನು ತನ್ನ ತಮ್ಮನಾದ ಸಹದೇವನಿಗೋಸ್ಕರವಾಗಿ ಸ್ವೀಕರಿಸಿದರು. ಆಕೆಯನ್ನು ಸಹದೇವನಿಗೆ ಮದುವೆ ಮಾಡಿಸಿದರು; ಇದಕ್ಕೆ ಮುಂಚೆ ಶಲ್ಯನು ತನ್ನ ಸೋದರಳಿಯನಾದ ನಕುಲನಿಗೆ ತನ್ನ ಮಗಳನ್ನು ಕೊಟ್ಟಿದ್ದನು. ಆ ಶಲ್ಯನ ಮಗಳೂ, ಈ ಸಹದೇವನ ತಂಗಿಯೂ, ಜರಾ ಸಂಧನ ಮಗಳೂ ಆದ ಇಬ್ಬರೂ, ಪೂರ್ವದಲ್ಲಿ ಅಶ್ವಿನೀ ದೇವತೆಗಳ ಹೆಂಡತಿ ಯಾದ ಉಷಾದೇವಿ ಎಂದು ತಿಳಿಯಬೇಕೆಂಬ ವಾಕ್ಯದಿಂದ ಸಿದ್ಧ ವಾಗುವುದು. ಈ ಉಷಾದೇವಿಗಿಂತಲೂ ಶನೈಶ್ಚರನು ಅಧಮನು. ಅವನಿ ಕಿಂತಲೂ ಕರ್ಮಕ್ಕೆ ಅಭಿಮಾನಿಯಾದ ಪುಷ್ಕರನು ಅಧಮನೆನಿಸುವನು.

ಅವತಾರಿಕೆ.—ತುಂಬರು ಮೊದಲಾದ ಗಂಧರ್ವರ ವಿಷಯವನ್ನು ಹೇಳುತ್ತಾರೆ:—

ಉದ್ವಹಾ ಮರುತಾನ್ವಿತ ವಿರಾ
ಧದ್ವಿತೀಯಸಂಜಯನು ತುಂಬರು
ವಿದ್ವದುತ್ತಮಜನಮೇಜಯತ್ವಷ್ಟ್ರುಯುತ ಚಿತ್ರರಥ ||
ಸದ್ವಿನುತದಮಘೋಷಕಕಬಂ
ಧದ್ವಯರು ಗಂಧರ್ವದನುಮನು
ಪದ್ಮಸಂಭವಯುತಾಕ್ರೂರಕಿಶೋರನೆನಿಸುವನು || ೪೦ ||

ಪದ್ಯಾರ್ಥ.—ತುಂಬರು=ತುಂಬರು ಎಂಬ ಗಂಧರ್ವನಿಗೆ, ವಿರಾಧ= ವಿರಾಧನೆಂಬ ರಾಕ್ಷಸ ರೂಪ ಬಂದ್ದು, ದ್ವಿತೀಯ=ಎರಡನೆಯದಾದ, ಉದ್ವ

ಹಾಮರುತಾನ್ವಿತ=ಉದ್ವಹನೆಂಬ ಮರುತ್ತಿನ ಅಂಶದಿಂದ ಕೂಡಿದ, ಸಂಜಯನು=ಸಂಜಯನ ರೂಪ ಒಂದು, ಅಂತು ಎರಡು ರೂಪಗಳು. ವಿದ್ವದುತ್ತಮ=ತಿಳಿದವರಲ್ಲಿ ಉತ್ತಮನಾದ, ಜನಮೇಜಯ=ಜನಮೇಜಯ ರಾಜನು, ತ್ವಷ್ಟ್ರಯುತ=ತ್ವಷ್ಟ್ರನೆಂಬ ಸೂರ್ಯನ ಅಂಶದಿಂದ ಕೂಡಿದ, ಚಿತ್ರರಥ=ಚಿತ್ರರಥನೆಂಬ ಗಂಧರ್ವನ ಅವತಾರವು, ಸದ್ವಿನುತ = ಸಜ್ಜನರಿಂದ ವಂದಿತನಾದ, ದನುಘೋಷಕ=ದನುಘೋಷರಾಯನ ಅವತಾರ ಒಂದು, ಕಬಂಧ=ಕಬಂಧನೆಂಬ ರಾಕ್ಷಸ ರೂಪ ಒಂದು, ದ್ವಯರು=ಈ ಎರಡು ರೂಪಗಳು, ದನುಗಂಧರ್ವ = ದನುವೆಂಬ ಗಂಧರ್ವನ ಅವತಾರಗಳು, ಮನು=ಸ್ವಾಯಂಭುವ ಮನುವು, ಪದ್ಮಸಂಭವಯುತ = ಬ್ರಹ್ಮದೇವರು ಇವರ ಅಂಶದಿಂದ ಕೂಡಿ, ಕಿಶೋರನು=ಕಿಶೋರನೆಂಬ ಗಂಧರ್ವನು, ಅಕ್ರೂರನೆನಿಸುವನು=ಅಕ್ರೂರನಾಗಿ ಜನಿಸಿರುವನು.

ತಾತ್ಪರ್ಯ.—ತುಂಬರು ಎಂಬ ಗಂಧರ್ವನಿಗೆ ವಿರಾಧನೆಂಬ ರಾಕ್ಷಸ ರೂಪ ೧. ಎರಡನೆಯದು ಸಂಜಯನೆಂಬುವನ ರೂಪ ೧. ಹೀಗೆ ಎರಡು ಅವತಾರಗಳು. ತುಂಬರು ಎಂಬ ಗಂಧರ್ವನು ವಿರಾಧನೆಂಬ ವಿಷಯದಲ್ಲಿ ನಿರ್ಣಯ ೫ನೆಯ ಅಧ್ಯಾಯದಲ್ಲಿ ಹೇಳಿದ, "ರಾಮೋಽಪಿ ತತ್ರ ದದೃಶೇ ಧನದಸ್ಯಶಾಪಾದ್ಗಂಧರ್ವ ಮುರ್ವಶಿಕೃತೇಽರಥ ಯಾತುಧಾನಿಂ ॥ ಪ್ರಾಪ್ತಂಡಶಾಂ ಸಪದಿತುಂಬರು ನಾಮದೇಯಂ ನಾಮ್ನಾ ವಿರಾಧಮಪಿ ಶರ್ವವರಾದವಧ್ಯಂ ॥೨೦॥" ರಾಮದೇವರು ಸೀತಾ ಲಕ್ಷ್ಮಣರಿಂದ ಕೂಡಿ ದಂಡಕಾರಣ್ಯ ಪ್ರವೇಶ ಮಾಡಿ ಬರುತ್ತಿರುವಾಗ ವಿರಾಧನೆಂಬ ರಾಕ್ಷಸನನ್ನು ಕಂಡರು. ಅವನು ಪೂರ್ವದಲ್ಲಿ ತುಂಬರು ಎಂಬ ಗಂಧರ್ವನು. ಹಿಂದಕ್ಕೆ ಒಂದು ದಿವಸ ಕುಬೇರನ ಅಪ್ಪಣೆಯ ಮೇರೆಗೆ ಊರ್ವಶಿಯು ಕುಬೇರನ ಮನೆಗೆ ಅವಸರವಾಗಿ ಹೋಗುತ್ತಿರುವಾಗ ಮಾರ್ಗದಲ್ಲಿ ತುಂಬರು ಎಂಬ ಗಂಧರ್ವನು ನಿರ್ಬಂಧದಿಂದ ಆಕೆಯನ್ನು ತಾನು ನಿಲ್ಲಿಸಿ ಕುಬೇರನಲ್ಲಿ ಕಾಲಕ್ಕೆ ಸೇರಲಿಕ್ಕೆ ಸಾಧ್ಯವಿಲ್ಲದೆ ಮಾಡಿದನು. ಇದನ್ನು ಕುಬೇರನು ತಿಳಿದು ನೀನು ರಾಕ್ಷಸನಾಗಿ ಹುಟ್ಟೆಂದು ಗಂಧರ್ವನಿಗೆ ಶಾಪವನ್ನುಕೊಟ್ಟನು. ಅವನೇ ವಿರಾಧನೆಂಬ ರಾಕ್ಷಸನಾಗಿ ಹುಟ್ಟಿ ರುದ್ರದೇವರ ವರದಿಂದ ಒಬ್ಬರಿಂದಲೂ ಕೊಲ್ಲಿಸಿಕೊಳ್ಳಲ್ಪಡದವನಾಗಿದ್ದನು ಎಂಬ ವಾಕ್ಯವು ಆಧಾರವು. ಇದೇ

ತುಂಬರು ಸಂಜಯನೆಂಬ ವಿಷಯದಲ್ಲಿ ನಿರ್ಣಯ ೧೧ನೆಯ ಅಧ್ಯಾಯದಲ್ಲಿ ಹೇಳಿದ "ಗವಲ್ಗಣಾಸ ತಥೈವಸೂತಾತ್ಸಮಸ್ತ ಗಂಧರ್ವಪತಿಃ ಸ ತುಂಬರುಃ || ಯವುದ್ವಹೋ ನಾಮ ಮರುತ್ತದಂಶ ಯುಕ್ತೋಪಶೀ ಸಂಜಯನಾಮಧೇಯಃ || ೧೪೬ ||" ಧೃತರಾಷ್ಟ್ರ ರಾಜನ ಸಾರಥಿಯಾದ ಗವಲ್ಗಣನೆಂಬ ಸೂತಜಾತಿಯವನ ದೆಶೆಯಿಂದ ತುಂಬರು ಎಂಬ ಗಂಧರ್ವನು ಉದ್ವಹನೆಂಬ ಮರುತ್ತಿನ ಅಂಶದಿಂದ ಕೂಡಿ ಸಂಜಯನೆಂಬ ಹೆಸರಿನಿಂದ ಹುಟ್ಟಿದನು ಎಂಬ ವಾಕ್ಯವು ಆಧಾರವಾಗಿರುವುದು. ಚಿತ್ರರಥನೆಂಬ ಗಂಧರ್ವನು ತ್ವಷ್ಟ್ರನೆಂಬ ಸೂರ್ಯನ ಆವೇಶದಿಂದ ಕೂಡಿ ದ್ರುಪದರಾಜನ ಮಗನಾಗಿ. ಜನಮೇಜಯನೆಂಬ ಹೆಸರಿನಿಂದ ಜನಿಸಿದನು. ನಿರ್ಣಯ ೧೮ನೆಯ ಅಧ್ಯಾಯದಲ್ಲಿ "ಅಗ್ರತಸ್ತು ಶಿಖಂಡ್ಯಾಗಾದ್ರುಘೋದಾರ, ಶರಾನ್ ಕ್ಷಿಪನ್ || ಜನಮೇಜಯಸ್ತಮನ್ವೇವಪೂರ್ವಂ ಚಿತ್ರರಥೋಹಿಸಃ||೭೫|| ತ್ವಷ್ಟುರಾವೇಶಸಂಯುಕ್ತಃ ಸಶರಾನಭ್ಯವರ್ಷತ ||" ದ್ರೋಣಾಚಾರ್ಯರ ವಾಕ್ಯದ ಪ್ರಕಾರ ದ್ರುಪದ ರಾಜನನ್ನು ಜಯಿಸಿ ತಂದು ದ್ರೋಣಾಚಾರ್ಯರಿಗೆ ಒಪ್ಪಿಸುವುದಕ್ಕಾಗಿ ಭೀಮಾರ್ಜುನರು ದ್ರುಪದರಾಜನ ಸಂಗಡ ಯುದ್ಧಕ್ಕೆ ಬರಲು ದ್ರುಪದನು ತನ್ನ ಮಕ್ಕಳಿಂದ ಕೂಡಿ ಯುದ್ಧಕ್ಕೆ ಬಂದನು. ಶಿಖಂಡಿಯು ಎಲ್ಲರಿಗೂ ಮುಂದೆ ಹೊರಟನು. ಅವನ ಹಿಂದೆಯೇ ಅವನ ತಮ್ಮನಾದ ಜನಮೇಜಯನು ಬಾಣಗಳನ್ನು ವರ್ಷಿಸುತ್ತಾ ಬಂದನು. ಅವನು ಪೂರ್ವದಲ್ಲಿ ಚಿತ್ರರಥನೆಂಬ ಗಂಧರ್ವನು. ತ್ವಷ್ಟ್ರನೆಂಬ ಸೂರ್ಯನ ಅಂಶದಿಂದ ಕೂಡಿದವನು ಎಂದು ಹೇಳಿರುವರು. ಆ ವಾಕ್ಯವೇ ಇದಕ್ಕೆ ಆಧಾರವು. "ದಮಘೋಷಕಬಂಧೌದನುಗಂಧರ್ವ ಉಚ್ಯತೆ" ಎಂಬ ಬೃಹತ್ತಾರತಮ್ಯ ವಾಕ್ಯದಂತೆ ರಾಮಾವತಾರದಲ್ಲಿ ರಾಮದೇವರಿಂದ ಮೃತನಾದ ಕಬಂಧನೆಂಬ ರಾಕ್ಷಸನೂ, ಶ್ರೀಕೃಷ್ಣನ ಸೋದರತ್ತೆಯ ಪತಿಯಾದ ದಮಘೋಷ ರಾಜನೂ, ದನುವೆಂಬ ಗಂಧರ್ವನ ರೂಪಗಳು. "ಬ್ರಹ್ಮಾಸ್ವಾಯಂಭುವಾವಿಷ್ಟೋಽಕ್ರೂರಃ ಪ್ರಾಕ್ಕಿಶೋರಕಃ" ಎಂಬ ಪ್ರಮಾಣದಿಂದ ಬ್ರಹ್ಮದೇವರು ಮತ್ತು ಸ್ವಾಯಂಭುವ ಮನು ಇವರ ಅಂಶದಿಂದ ಕೂಡಿದ ಕಿಶೋರನೆಂಬ ಗಂಧರ್ವನು ಅಕ್ರೂರನೆಂದು ಸಿದ್ಧವಾಗುವುದು.

ಅವತಾರಿಕೆ.—ಧೃತರಾಷ್ಟ್ರ ಮೊದಲಾದ ಗಂಧರ್ವರ ಅವತಾರಗಳನ್ನು ಹೇಳುತ್ತಾರೆ:—

**ವಾಯುಯುತ ಧೃತರಾಷ್ಟ್ರದಿವಿಜರ**
**ಗಾಯಕನು ಧೃತರಾಷ್ಟ್ರನಕ್ರನು**
**ರಾಯದ್ರುಪದನವಹವಿಶಿಷ್ಟಾ ಹೂಹು ಗಂಧರ್ವ ||**
**ನಾಯಕವಿರಾಡ್ವಿವಹಯುತ ಹಾಹಾ**
**ಗೇಯವಿದ್ಯಾಧರನೆ ಯಜಗರ**
**ತಾ ಯೆನಿಸುವನು ವುಗ್ರಸೇನನೆ ವುಗ್ರಸೇನಾಖ್ಯ ||೨೧||**

ಪದ್ಯಾರ್ಥ.–ಧೃತರಾಷ್ಟ್ರ=ಧೃತರಾಷ್ಟ್ರನೆಂಬ, ದಿವಿಜರಗಾಯಕನು= ದೇವಗಂಧರ್ವನು, ವಾಯುಯುತ = ವಾಯುದೇವರ ಆವೇಶದಿಂದ ಕೂಡಿದ, ಧೃತರಾಷ್ಟ್ರ=ಧೃತರಾಷ್ಟ್ರ ರಾಜನು. ನಕ್ರನು=ಗಜೇಂದ್ರನನ್ನು ಹಿಡಿದುಕೊಂಡಿದ್ದ ಮೊಸಳೆಯು, ರಾಯದ್ರುಪದನು–ದ್ರುಪದರಾಯನು, ಅವಹವಿಶಿಷ್ಟ=ಅವಹನೆಂಬ ಮರುತ್ತಿನ ಅಂಶದಿಂದ ಕೂಡಿದ, ಹೂಹೂ ಗಂಧರ್ವ=ಹೂಹೂ ಎಂಬ ಗಂಧರ್ವನ ಅವತಾರಗಳು. ನಾಯಕವಿರಾಟ= ವಿರಾಟರಾಜನು, ವಿವಹಯುತ=ವಿವಹನೆಂಬ ಮರುತ್ತಿನ ಅಂಶದಿಂದ ಕೂಡಿದ, ಹಾಹಾ=ಹಾಹಾ ಎಂಬ ಗಂಧರ್ವನ ಅವತಾರವು. ಗೇಯವಿದ್ಯಾಧರನೆ=ಗಾಯಕನಾದ ಸುದರ್ಶನನೆಂಬ ವಿದ್ಯಾಧರನೇ, ಅಜಗರ=ನಂದಗೋಪನನ್ನು ನುಂಗಿದ ಅಜಗರವು. ಉಗ್ರಸೇನಾಖ್ಯ=ಉಗ್ರಸೇನನೆಂಬ ಗಂಧರ್ವನು, ಉಗ್ರಸೇನನೆನಿಸುವನು=ಉಗ್ರಸೇನರಾಜನೆಂದೆನಿಸುವನು.

ತಾತ್ಪರ್ಯ.—ನಿರ್ಣಯ ೧೧ನೆಯ ಅಧ್ಯಾಯದ " ಅಭೂಚ್ಚಪತಸ್ಯಾಂ ಧೃತರಾಷ್ಟ್ರನಾಮಕೋ ಗಂದರ್ವರಾಟ್ ಪವನಾವೇಶಯುಕ್ತಃ " ಎಂಬ ವಾಕ್ಯದ ಆಧಾರದ ಮೇಲೆ ಧೃತರಾಷ್ಟ್ರನೆಂಬ ಗಂಧರ್ವನು ವಾಯುದೇವರ ಆವೇಶದಿಂದ ಕೂಡಿದವನಾಗಿ ಧೃತರಾಷ್ಟ್ರ ರಾಜನಾಗಿ ಅಂಬಿಕೆ ಎಂಬ ಸ್ತ್ರೀಯಲ್ಲಿ ಜನಿಸಿದನೆಂದು ಸಿದ್ಧವಾಗುವುದು. ಮೊಸಳೆಯು ಹೂಹೂ ಎಂಬ ಗಂಧರ್ವನೆಂಬ ವಿಷಯದಲ್ಲಿ, ಭಾಗವತ ಅಷ್ಟಮಸ್ಕಂಧದ " ಯೋಽಸೌಗ್ರಾಹಃ ಸದ್ಯಸ್ಸದ್ಯಃ ಪರಮಾಶ್ಚರ್ಯ ರೂಪಧೃಕ್ || ಮುಕ್ತೋದೇವಲಶಾಪೇನ ಹೂಹೂ ಗಂಧರ್ವಸತ್ತಮಃ " ಗಜೇಂದ್ರನನ್ನು ಹಿಡಿದುಕೊಂಡಿದ್ದ ಮೊಸ

ಳೆಯನ್ನು ಪರಮಾತ್ಮನು ಸೀಳಿದ ಕೂಡಲೆ ಆ ಮೊಸಳೆಯಾಗಿದ್ದವನು, ಆ ರೂಪವನ್ನು ಬಿಟ್ಟು ಆಶ್ಚರ್ಯಕರವಾದ ರೂಪದಿಂದ ನಿಂತನು. ಅವನು ಪೂರ್ವ ದಲ್ಲಿ ಹೂಹೂ ಎಂಬ ಗಂಧರ್ವನಾಗಿದ್ದು, ಗಾನದಲ್ಲಿ ತನಗೆ ಸಮರಾರೂ ಇಲ್ಲವೆಂಬ ಅಹಂಕಾರದಿಂದ, ಬ್ರಹ್ಮದೇವನ ಸಭೆಯಲ್ಲಿ ದೇವಲ ಎಂಬ ಋಷಿ ಗಳನ್ನು ತಿರಸ್ಕಾರ ಮಾಡಿದುದರಿಂದ, ಅವರು ಶಾಪವನ್ನು ಕೊಟ್ಟರು. ಆ ಶಾಪದಿಂದ ಮೊಸಳೆಯಾಗಿದ್ದನು. ಈಗ ಆ ಶಾಪದಿಂದ ಮುಕ್ತನಾಗಿ ದಿವ್ಯ ರೂಪವನ್ನು ಧರಿಸಿದನೆಂಬ ವಾಕ್ಯವು ಆಧಾರವಾಗಿರುವುದು. ಇದೇ ಹೂ ಹೂ ಗಂಧರ್ವನೆ ಆವಹನೆಂಬ ಮರುತ್ತಿನ ಅಂಶದಿಂದ ಕೂಡಿ ದ್ರುಪದ ರಾಜನಾಗಿ ಹುಟ್ಟಿದನೆಂಬ ವಿಷಯದಲ್ಲಿ ನಿರ್ಣಯ ೧೧ನೆಯ ಅಧ್ಯಾಯ ದಲ್ಲಿ "ಕಾಲೇಚತಸ್ಮಿನ್ ಪೃಷತೋನಪತ್ಯೋ ವನೇಶುಪಾಂಚಾಲಪತಿಶ್ಚ ಕಾರ॥ತಪೋ ಮಹತ್ತಸ್ಯ ತಥಾವರಾಪ್ಸರಾವಲೋಕನಾತ್ಸ್ಕಂದಿತ ಮಾಶುರೇ ತಃ ॥ ೬೭ ॥ ಸತದ್ವಿಲಜ್ಜಾವಶತಃ ಪದೇನ ಸಮಾಕ್ರಮತ್ತಸ್ಯ ಬಭೂವಸೂನುಃ ॥ ಹೂಹೂಸ್ತುನಾಮಾಸ ವಿರಿಂಚಗಾಯಕೋ ನಾಮ್ನಾವಹೋಯೋ ಮರುತಾಂತದಂಶಯುಕ್ ॥ ೬೮ ॥ ಪದೇದ್ರುತತ್ವಾದ್ದ್ರುಪದಾಭಿಧೇಯಃ" ಪಾಂಚಾಲ ದೇಶಾಧಿಪತಿಯಾದ ಪೃಷತ ರಾಜನು ಸಂತಾನಾಪೇಕ್ಷೆಯಿಂದ ವನದಲ್ಲಿ ಮಹತ್ತರವಾದ ತಪಸ್ಸನ್ನು ಮಾಡುತಿದ್ದನು. ಆ ಸಮಯದಲ್ಲಿ ಉತ್ತಮ ರೂಪವತಿಯಾದ ಒಬ್ಬ ಅಪ್ಸರ ಸ್ತ್ರೀಯನ್ನು ಅಲ್ಲಿ ಕಂಡ ಕೂ ಡಲೆ ಅವನಿಗೆ ರೇತಸ್ಸು ಸ್ಖಲನವಾಯಿತು. ಅವನು ನಾಚಿಕೆಯಿಂದ ಕಾಲಿ ನಿಂದ ಅದನ್ನು ಮೆಟ್ಟಿ ಮುಚ್ಚಿದನು. ಅದರಿಂದಲೇ ಮಗನು ಹುಟ್ಟಿದನು. ಪಾದದಲ್ಲಿ ಮುಚ್ಚಿದುದರಿಂದ ಹುಟ್ಟಿದ ಪ್ರಯುಕ್ತ ದ್ರುಪದನೆಂದು ಹೆಸ ರಾಯಿತು ಎಂದು ಹೇಳಿರುವರು. ಆ ಅಭಿಪ್ರಾಯವನ್ನೇ ಇಲ್ಲಿ ಹೇಳಿರು ವರು. ವಿರಾಟರಾಜನು ವಿವಹನೆಂಬ ಮರುತ್ತಿನ ಅಂಶದಿಂದ ಕೂಡಿದ ಹಾಹಾ ಎಂಬ ಗಂಧರ್ವನು. ನಿರ್ಣಯ ೧೧ನೆಯ ಅಧ್ಯಾಯದ "ತೇಷಾಂ ಸವ ನೋವಯಸಾ ವಿರಾಟಸ್ತ್ವಭೂದ್ಧಾಹಾನಾಮವಿಧಾತೃಗಾಯಕಃ ॥ ಮರುತ್ಸಯೋ ವಿವಹೋನಾಮತಸ್ಯಾಪ್ಯಂಶೇನ ಯುಕ್ತೋ ನಿಜಧರ್ಮವರ್ತೀ ॥ ೭೨ ॥ ದೃಪದರಾಜ ಮೊದಲಾದವರಿಗೆ ವಯಿಸ್ಸಿನಲ್ಲಿ ಸಮಾನ ನಾದವನು ವಿರಾಟರಾಜನು. ಇವನು ಪೂರ್ವದಲ್ಲಿ ಬ್ರಹ್ಮದೇವನ ಸದಸ್ಸಿ

ನಲ್ಲಿ ಗಾಯಕನಾದ ಹಾಹಾ ಎಂಬ ಗಂಧರ್ವನು, ವಿವಹನೆಂಬ ಮರುತ್ತಿನ ಅಂಶದಿಂದ ಕೂಡಿ ಹುಟ್ಟಿರುವನು ಎಂದು ಹೇಳಿರುವ ವಾಕ್ಯವೇ ಇದಕ್ಕೆ ಆಧಾರವಾಗಿರುವುದು. ಗಾಯನಾದ ಸುದರ್ಶನನೆಂಬ ವಿದ್ಯಾಧರನು ಅಜಗ ರನಾಗಿ ಹುಟ್ಟಿದನು. ಭಾಗವತ ದಶಮಸ್ಕಂಧದಲ್ಲಿ ನಂದಗೋಪ ಮೊದ ಲಾದ ಗೋಪಾಲಕರೆಲ್ಲರೂ ಬಲರಾಮಕೃಷ್ಣರಿಂದ ಕೂಡಿ ಎಲ್ಲರೂ ದೇವ ಯಾತ್ರೆ ಎಂಬ ನಿಮಿತ್ತದಿಂದ ಸರಸ್ವತೀ ತೀರಕ್ಕೆ ಬಂದು, ರಾತ್ರೀ ಕಾಲದಲ್ಲಿ ಮಲಗಿರುವಾಗ ಈ ಅಜಗರನು ನಂದಗೋಪನನ್ನು ನುಂಗಿತು. ಅದರಿಂದ ಬಿಡಿಸಿ ಬಿಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಶ್ರೀ ಕೃಷ್ಣನು ಪಾದ ದಿಂದ ಆ ಸರ್ಪವನ್ನು ಒದೆಯಲು ತಕ್ಷಣ ಆ ಸರ್ಪದೇಹವನ್ನು ಬಿಟ್ಟು ದಿವ್ಯರೂಪಧರನಾಗಿ ನಿಂತನು. ಆಗ ಶ್ರೀ ಕೃಷ್ಣನು ನೀನಾರೆಂದು ಕೇಳಲು "ಅಹಂವಿದ್ಯಾಧರಃ ಕಶ್ಚಿತ್ಸುದರ್ಶನ ಇತಿಶ್ರುತಃ ॥ ಶ್ರಿಯಾಸ್ವರೂಪಸಂಪತ್ಯಾ ವಿಮಾನೇನಾಚರಂದಿಶಃ ॥೧೨॥ ಋಷೀನ್ ವಿರೂಪಾನಂಗಿರಸಃ ಪ್ರಾಹಸಂ ರೂಪದರ್ಪಿತಃ ॥ ತೈರಿಮಾಂಪ್ರಾಪಿತೋ ಯೋನಿಂ" ನಾನು ಒಬ್ಬ ವಿದ್ಯಾ ಧರನು. ಸುದರ್ಶನನೆಂಬು ನನ್ನ ಹೆಸರು. ಬಹು ರೂಪ ಐಶ್ವರ್ಯದಿಂದ ಕೂಡಿ ಅಹಂಕಾರದಿಂದ ವಿಮಾನಾರೂಢನಾಗಿ ಸಂಚರಿಸುತ್ತಿದ್ದೆನು. ಒಂದು ದಿವಸ ಕುರೂಪಿಗಳಾದ ಅಂಗಿರಸರೆಂಬ ಋಷಿಗಳನ್ನು ಕಂಡು ನಾನು ಅವ ರನ್ನು ಹಾಸ್ಯಮಾಡಿ ಅವರ ಶಾಪದಿಂದ ಈ ಗತಿಯನ್ನು ಹೊಂದಿದೆನೆಂದು ಆ ಸರ್ಪನು ಉತ್ತರವನ್ನಿತ್ತನೆಂದು ಹೇಳಿರುವರು. ಇದರಿಂದ ಸುದರ್ಶನ ನೆಂಬ ವಿದ್ಯಾಧರನು ಅಜಗರನೆಂದು ಸಿದ್ಧವಾಗುವುದು. ಉಗ್ರಸೇನನೆಂಬ ಗಂಧರ್ವನು ಉಗ್ರಸೇನರಾಜನಾಗಿ ಜನಿಸಿರುವನು. "ಯ ಉಗ್ರಸೇನಃ ಸುರಗಾಯಕಃ ಸ ಜಾತೋ ಯದುಷ್ವೇವ ತಥಾಭಿಧೇಯಃ" ಎಂಬ ನಿರ್ಣಯ ವಾಕ್ಯವು ಇದಕ್ಕಾಧಾರವು.

**ಭಿಸಜಸಂಭವ ಯುಕ್ತ ವಿಶ್ವಾ**
**ವಸು ಯುಧಾಮುನ್ಯುತ್ತಮೌಜಸ**
**ಬಿಸಜಮಿತ್ರಾರ್ಯಮನು ಯುತ ಪರಾವಸು ಯೆನಿಸುತಿಪ್ಪ ॥**
**ಅಸಮಮಿತ್ರಾನ್ವಿತನು ಸತ್ಯಜಿ**
**ದ್ವಸುಧಿಯೊಳು ಚಿತ್ರಸೇನನ ಮೃತಾಂ**
**ಧಸರಗಾಯಕರೆಂದು ಕರೆಸುವರಾವಕಾಲದಲಿ ॥೪೨॥**

ಪದ್ಯಾರ್ಥ.—ಭಿಸಜಸಂಭವಯುಕ್ತ = ಬ್ರಹ್ಮದೇವರ ಆವೇಶದಿಂದ ಕೂಡಿದ, ವಿಶ್ವಾವಸು=ವಿಶ್ವಾವಸು ಎಂಬ ಗಂಧರ್ವನು, ಯುಧಾಮನ್ಯು=ದ್ರುಪದರಾಜನ ಮಗನಾದ ಯುಧಾಮನ್ಯು ಎಂಬ ರಾಜನು, ಆರ್ಯಮ=ಆರ್ಯಮನೆಂಬ, ಬಿಸಜಮಿತ್ರಯುತ=ಕಮಲ ಸಖನಾದ ಸೂರ್ಯನ ಅಂಶದಿಂದ ಕೂಡಿದ, ಪರಾವಸು=ಈ ಹೆಸರುಳ್ಳ ಗಂಧರ್ವನು, ಉತ್ತಮೌಜಸಯೆನಿಸುತಿಪ್ಪ=ಈ ಹೆಸರಿನಿಂದ ದ್ರುಪದರಾಜನ ಮಗನೆಂದೆನಿಸಿಕೊಂಡನು, ಅಸಮ=ಸಮರಹಿತನಾದ (ಮಹಾ ಬಲಾಢ್ಯನಾದ) ಚಿತ್ರಸೇನನೆಂಬ ಗಂಧರ್ವನು, ಮಿತ್ರಾನ್ವಿತನು=ಮಿತ್ರನೆಂಬ ಸೂರ್ಯನ ಅಂಶದಿಂದ ಕೂಡಿದವನಾಗಿ, ವಸುಧಿಯೊಳು=ಭೂಮಿಯಲ್ಲಿ, ಸತ್ಯಜಿತ್=ಈ ಹೆಸರಿನಿಂದ ದ್ರುಪದರಾಜನ ಮಗನಾಗಿ ಜನಿಸಿದ್ದನು. ಅವಕಾಲದಲೀ=ಅನಾದ್ಯನಂತ ಕಾಲದಿಂದಲೂ, ಮೇಲೆ ಹೇಳಿದ ಗಂಧರ್ವರೆಲ್ಲರೂ, ಅಮೃತಾಂಧಸರ=ಅಮೃತವೇ ಆಹಾರವಾಗುಳ್ಳ ದೇವತೆಗಳ ಗಾಯಕರೆಂದು, ಕರೆಸುವರು.

ತಾತ್ಪರ್ಯ.—ಈ ಪದ್ಯದಲ್ಲಿ ಹೇಳಿರುವ ಯುಧಾಮನ್ಯು, ಉತ್ತಮೌಜಸ್, ಸತ್ಯಜಿತ್ ಎಂಬ ಮೂವರೂ ದ್ರುಪದರಾಜನ ಮಕ್ಕಳು. ಈ ಮೂವರೂ ಬ್ರಹ್ಮಾಂಶ, ಆರ್ಯಮ, ಮಿತ್ರನೆಂಬ ಸೂರ್ಯರು ಇವರುಗಳ ಅಂಶದಿಂದ ಕೂಡಿದ ವಿಶ್ವಾವಸು, ಪರಾವಸು, ಚಿತ್ರಸೇನರೆಂಬ ಗಂಧರ್ವರೆಂದು, ನಿರ್ಣಯ ೧೪ನೆಯ ಅಧ್ಯಾಯದ " ಚಕ್ರರಕ್ಷೌತು ತಸ್ಯಾಸ್ತಾಂ ಯುಧಾಮನ್ಯೂತ್ತಮೌಜಸೌ ॥ ಧಾತ್ಪರ್ಯಮಾವೇಶಯುತೌವಿಶ್ವಾವಸುಪರಾವಸೂ॥೭೩॥ ಸುತೌತಸ್ಯಮಹಾವೀರ್ಯೌಸತ್ಯಜಿತ್ಪೃಷ್ಟತೋಽಭವತ್ ॥ ಸಮಿತ್ರಾಂಶಯುತೋ ವೀರಶ್ಚಿತ್ರಸೇನೋಮಹಾರಥಃ ॥೭೪॥ " ಎಂಬ ವಾಕ್ಯಗಳಿಂದ ಸಿದ್ಧವಾಗುವುದು. ಬ್ರಹ್ಮಾಂಶದಿಂದ ಕೂಡಿದ ವಿಶ್ವಾವಸು ಎಂಬುವನು ಯುಧಾಮನ್ಯುವೆಂತಲೂ, ಆರ್ಯಮಾವೇಶದಿಂದ ಕೂಡಿದ ಪರಾವಸು ಎಂಬುವನು ಉತ್ತಮೌಜಸ್ ಎಂತಲೂ, ಮಿತ್ರಾಂಶದಿಂದ ಕೂಡಿದ ಚಿತ್ರಸೇನನು ಸತ್ಯಜಿತ್ತೆಂತಲೂ ತಾತ್ಪರ್ಯ. ಇವರೆಲ್ಲರು ದೇವಗಂಧರ್ವರೆಂದು ತಿಳಿಯಬೇಕು.

**ಉಳಿದ ಗಂಧರ್ವರುಗಳೆಲ್ಲರು**
**ಬಲಿ ಮೊದಲು ಗೋಪಾಲರೆನಿಪರು**
**ಇಳಿಯೊಳಗೆ ಸ್ತ್ರೈಣೇಂದ್ರಿ ಪಿಂಗಳೆಯಪ್ಸರಸಿ ಯೆಯು ॥**

**ತಿಲೋತ್ತಮೆ ಯು ಪೂರ್ವದಲಿ ನಕುಲನ**
**ಲಲನೆಪಾರ್ವತಿ ಯೆನಿಸುವಳು ಗೋ**
**ಕುಲದ ಗೋಪಿಯರೆಲ್ಲ ಶಬರೀ ಮುಖ್ಯರಪ್ಸರರು ||೪೩||**

ಪದ್ಯಾರ್ಥ.—ಉಳಿದಗಂಧರ್ವರುಗಳೆಲ್ಲರೂ=ಮೇಲೆ ಹೇಳಿದವರನ್ನು ಬಿಟ್ಟು ಮಿಕ್ಕ ಗಂಧರ್ವರೆಲ್ಲರೂ, ಬಲಿ ಮೊದಲು ಗೋಪಾಲರೆನಿಸುವರು= ಗೋಕುಲದಲ್ಲಿ ಶ್ರೀಕೃಷ್ಣನ ಸಖರಾಗಿ ಬಲಿ ಮೊದಲಾದ ಹೆಸರುಗಳಿಂದ ಹುಟ್ಟಿರುವರು. ಇಳಿಯೊಳಗೆ=ಭೂಮಿಯಲ್ಲಿ, ಸ್ವೈಳೇಂದ್ರಿ=ಶ್ರೀಕೃಷ್ಣನಿಗೆ ಗಂಧವನ್ನು ಕೊಟ್ಟ ತ್ರಿವಕ್ರೆ ಎಂಬ ಸೈರಂಧ್ರಿಯೂ, ಪಿಂಗಳಾ ಎಂಬ ವೇಶ್ಯಾ ಸ್ತ್ರೀಯೂ, ಪೂರ್ವದಲ್ಲಿ ಅಪ್ಸರ ಸ್ತ್ರೀಯರು. ನಕುಲನ, ಲಲನೆ=ಹೆಂಡತಿಯಾದ ಪಾರ್ವತಿಯು, ಪೂರ್ವದಲ್ಲಿ ತಿಲೋತ್ತಮೆ ಎನಿಸುವಳು. ಗೋಕುಲದ ಗೋಪಿಯರೆಲ್ಲರೂ, ಶಬರೀ=ರಾಮಾವತಾರದಲ್ಲಿ ಪ್ರಸಿದ್ಧಳಾದ ಶಬರೀ ಎಂಬಾಕೆಯು, ಮುಖ್ಯರು=ಇವರು ಮೊದಲಾದವರು, ಅಪ್ಸರರು.

ತಾತ್ಪರ್ಯ.—ಮೇಲೆ ಹೇಳಿದ ಪ್ರಧಾನ ಗಂಧರ್ವರನ್ನು ಬಿಟ್ಟು ಉಳಿದ ಗಂಧರ್ವರು ಗೋಕುಲದಲ್ಲಿ ಬಲ ಮೊದಲಾದ ಗೋಪಾಲಕರಾಗಿ ಕೃಷ್ಣನ ಸೇವಾರ್ಥವಾಗಿ ಹುಟ್ಟಿರುವರು. ಪೂರ್ವದಲ್ಲಿ ಪಿಂಗಳೆ ಎಂಬ ವೇಶ್ಯೆಯು ವಿದೇಹ ದೇಶದಲ್ಲಿದ್ದು, ಕಡೆಗೆ ವೈರಾಗ್ಯದಿಂದ ವೇಶ್ಯೆಯ ವೃತ್ತಿಯನ್ನು ಬಿಟ್ಟು ತನ್ನ ಅಂತರ್ಗತನಾದ ಪರಮಾತ್ಮನೇ ಪತಿ ಎಂದು ಭಾವಿಸಿ ಧ್ಯಾನ ಮಾಡುತ್ತಿದ್ದು ಆ ದೇಹವನ್ನು ಬಿಟ್ಟು ಕೃಷ್ಣಾವತಾರದಲ್ಲಿ ತ್ರಿವಕ್ರೆಯಾಗಿ ಹುಟ್ಟಿ ಶ್ರೀಕೃಷ್ಣನಿಗೆ ಗಂಧವನ್ನು ಕೊಟ್ಟು ಕೃಷ್ಣನ ಅಂಗಸಂಗವನ್ನು ಹೊಂದಿರುವಳು. ಈಕೆಯು ಪೂರ್ವದಲ್ಲಿ ಅಪ್ಸರ ಸ್ತ್ರೀಯು. ಪಿಂಗಳೆಯ ಕಥೆಯನ್ನು ಭಾಗವತದ ಏಕಾದಶಸ್ಕಂಧಲ್ಲಿ ವಿಸ್ತಾರವಾಗಿ ಹೇಳಿರುವರು. ಇದೇ ಅರ್ಥವನ್ನೇ ನಿರ್ಣಯ ೧೫ನೆಯ ಅಧ್ಯಾಯದ "ಯಾಪಿಂಗಳಾಸ್ವಭವ ಆತ್ಮನಿ ಸಂಸ್ಥಿತಂ ತಂಸಂಸ್ಮೃತ್ಯ ಕಾಂತಮುರುಗಾಯಮಭೂತ್ರಿವಕ್ರಾ" ಎಂಬ ೨ನೆಯ ಶ್ಲೋಕದಿಂದ ವಿವರಿಸಿರುವರು. ನಕುಲನಿಗೆ ಶಲ್ಯನ ಮಗಳಲ್ಲದೆ ಪಾರ್ವತೀ ಎಂಬ ಮತ್ತೊಬ್ಬ ಹೆಂಡತಿಯು ಇದ್ದಳು. ಆಕೆಯು ಪೂರ್ವದಲ್ಲಿ ತಿಲೋತ್ತಮೆ ಎಂಬ ಅಪ್ಸರೆಯು. ಈ ಅರ್ಥವು ನಿರ್ಣಯ ೨೨ನೆಯ ಅಧ್ಯಾಯದ " ಪಾರ್ವತೀ ನಕುಲಸ್ಯಾಸೀದ್ಭಾರ್ಯಾ ಪೂರ್ವಂ ತಿಲೋತ್ತಮಾ "

ಎಂಬ ಶ್ಲೋಕದಿಂದ ಸಿದ್ಧವಾಗುವುದು. ಗೋಕುಲದ ಗೋಪಿಯರೆಲ್ಲರೂ ಅಪ್ಸರ ಸ್ತ್ರೀಯರೆಂದು ನಿರ್ಣಯ ವಾಕ್ಯದಿಂದಲೂ, ಭಾಗವತ ದಶಮಸ್ಕಂಧ ದಿಂದಲೂ, ಸಿದ್ಧವಾಗುವುದು. ನಿರ್ಣಯ ೧೩ನೆಯ ಅಧ್ಯಾಯದಲ್ಲಿ "ಗೋ ಪಾಂಗನಾಅಪಿಪುರಾ ವರಮಾಪಿರೇ ಯತ್ || ಸಂಸ್ಕಾರತಃ ಪ್ರಥಮಮೇವ ಸುಸಂಗಮೋನೋ ಭೂಯಾತ್ತ್ವವೇತಿ ಪರಮಪ್ಸರಃ ಪುರಾ ಯಾಃ ||೫೧||" ಗೋಪಿಕಾ ಸ್ತ್ರೀಯರು ಪೂರ್ವದಲ್ಲಿ ಉತ್ತಮರಾದ ಅಪ್ಸರ ಸ್ತ್ರೀಯರು. ಇವರು ಪರಮಾತ್ಮನನ್ನು ಕುರಿತು ತಪಸ್ಸು ಮಾಡಿ "ನಿನಗೆ ಉಪನಯನವಾ ಗುವುದಕ್ಕೆ ಪೂರ್ವದಲ್ಲಿ ನಮಗೆ ನಿನ್ನ ಅಂಗ ಸಂಗವನ್ನು ಕೊಡಬೇಕೆಂದು ಕೇ ಳಿಕೊಂಡು ಅದೇ ಪ್ರಕಾರ ವರವನ್ನು ಪಡೆದಿದ್ದರು." ಎಂಬ ವಾಕ್ಯದಿಂದ, ಗೋಪಿಯರೆಲ್ಲರೂ ಅಪ್ಸರ ಸ್ತ್ರೀಯರೆಂದು ಸಿದ್ಧವಾಗುವುದು. ಮತ್ತೂ ಶಬ ರಿಯು ಅಪ್ಸರ ಸ್ತ್ರೀ ಎಂದು ನಿರ್ಣಯ ೫ನೆಯ ಅಧ್ಯಾಯದ "ದೃಷ್ಟ್ವಾತ್ವತ ಮೇವಶಬರೀ ಪರಮಂಹರಿಂಚ ಜ್ಞಾತ್ವಾವಿವೇಶದಹನಂ ಪುರತೋಸ್ಯ ತಸ್ಮೈ || ಪ್ರಾದಾತ್ಸ್ವಲೋಕಮಿಮಮೇವಚ ಸಾಪ್ರತೀಕ್ಷ್ಯ ಪೂರ್ವಂಮತಂ ಗವಚನೇ ನವನೇತ್ರಸಾಭೂತ್ || ೪೪ || ಶಾಪಾದ್ವರಾಪ್ಸಸಮೇವಹಿತಾಂ ವಿಮೋಕ್ಷ್ಯಶಚ್ಯಾಕೃತಾತ್ಸತಿ ' ಪುರಸ್ತ್ವತಿ ದರ್ಪಹೇತೋಃ" ಶ್ರೀರಾಮನು ದಂಡಕಾರಣ್ಯದಲ್ಲಿ ಸೀತೆಯನ್ನು ಹುಡುಕುವ ನಿಮಿತ್ತಮಾಡಿ ಬರುತ್ತಿರುವಾಗ ಶಬರಿಯು ಶ್ರೀರಾಮನನ್ನು ಕಂಡು ತಾನು ರುಚಿ ನೋಡಿ, ರುಚಿಯಾದು ದೆಂದು ತಿಳಿದ ಫಲಾದಿಗಳನ್ನು ರಾಮನಿಗೆಂದು ತೆಗೆದು ಇಟ್ಟಿದ್ದುದನ್ನು ಶ್ರೀ ರಾಮನಿಗೆ ಸಮರ್ಪಿಸಿ ಶ್ರೀರಾಮನ ಸನ್ನಿಧಾನದಲ್ಲಿ ಅಗ್ನಿ ಪ್ರವೇಶವನ್ನು ಮಾ ಡಿದಳು. ಶ್ರೀ ಪರಮಾತ್ಮನು ತನ್ನ ಲೋಕವನ್ನು ಕೊಟ್ಟನು. ಆಕೆಯು ಪೂರ್ವದಲ್ಲಿ ಉತ್ತಮಳಾದ ಅಪ್ಸರ ಸ್ತ್ರೀಯು ; ಒಂದು ದಿವಸ ದೇವೇಂ ದ್ರನ ಸಮೀಪದಲ್ಲಿ, ಶಚೀದೇವಿಯ ಸನ್ನಿಧಾನದಲ್ಲಿ, ಈ ಅಪ್ಸರೆಯು ಅತಿ ದರ್ಪವನ್ನು ಪ್ರಕಟಿಸಲು ಶಚಿಯು ಕೋಪದಿಂದ ಶಾಪವನ್ನಿತ್ತಳು. ಆ ನಿಮಿ ತ್ತದಿಂದ ಭೂಮಿಯಲ್ಲಿ ಹುಟ್ಟಿದಳು. ಶ್ರೀರಾಮದೇವರು ಶಾಪದಿಂದ ವಿಮೋಚನ ಮಾಡಿಸಿದರೆಂಬ ವಾಕ್ಯದಿಂದ ಸಿದ್ಧವಾಗುವುದು.

ಅವತಾರಿಕೆ.—ಶ್ರೀ ಕೃಷ್ಣನ ಹೆಂಡತಿಯರಾದ ೧೬,೧೦೦ ಮಂದಿ ಯರ ವಿಷಯವನ್ನು ಹೇಳುತ್ತಾರೆ :—

ಕೃಷ್ಣವರ್ತ್ಮನ ಸುತರೊಳಗೆ ಶತ
ದ್ವ್ಯಷ್ಟಸಾವಿರಸ್ತ್ರೀಯರಲ್ಲಿ ಪ್ರ
ವಿಷ್ಟಳಾಗಿ ರಮಾಂಬ ತತ್ತನ್ನಾಮರೂಪದಲಿ ॥
ಕೃಷ್ಣಮಹಿಷಿಯರೊಳಗೆ ಯಿಪ್ಪಳು
ತ್ವಷ್ಟೃಪುತ್ರಿ ಕಶೇರು ಇವರೊಳು
ಶ್ರೇಷ್ಠಳೆನಿಪಳು ಉಳಿದ ಋಷಿಗಣ ಗೋಪಿಕಾ ಸಮರು ॥೪೪॥

ಪದ್ಯಾರ್ಥ.—ಕೃಷ್ಣವರ್ತ್ಮನ=ಅಗ್ನಿಯ, ಸುತರೊಳಗೆ=ಮಕ್ಕಳ ಪೈಕಿ, ಶತದ್ವ್ಯಷ್ಟಸಾವಿರಸ್ತ್ರೀಯರಲ್ಲಿ=ಹದಿನಾರುಸಾವಿರದ ನೂರೆಂಟು ಸ್ತ್ರೀಯರಾದ ಕೃಷ್ಣಮಹಿಷಿಯರೊಳಗೆ, ರಮಾಂಬ=ರಮಾದೇವಿಯರು, ತತ್ತನ್ನಾಮರೂಪದಲಿ-ಆಯಾ ಹೆಸರು ಆಯಾ ರೂಪಗಳಿಂದ ಪ್ರವಿಷ್ಟರಾಗಿ, ಇಪ್ಪಳು=ಇರುವರು. ಇವರೊಳು, ತ್ವಷ್ಟೃಪುತ್ರಿ-ತ್ವಷ್ಟೃವಿನ ಮಗಳಾದ, ಕಸೇರು-ಕಸೇರು ಎಂಬಾಕೆಯು ಶ್ರೇಷ್ಟಳೆನಿಸುವಳು. ಉಳಿದ ಋಷಿಗಣ-ಕಸೇರು ಒಬ್ಬಳನ್ನು ಬಿಟ್ಟು ಉಳಿದ ಕೃಷ್ಣನ ಹೆಂಡತಿಯರಾಗಿ ಅವತರಿಸಿದ ಅಗ್ನಿ ಪುತ್ರರಾದ ಋಷಿಗಣರು, ಗೋಪಿಕಾಸಮರು=ಗೋಪಿಕಾ ಸ್ತ್ರೀಯರಿಗೆ ಸಮರು.

ತಾತ್ಪರ್ಯ.—ಕೃಷ್ಣಪತ್ನಿಯರಾದ ಹದಿನಾರುಸಾವಿರದ ನೂರುಮಂದಿಯರು ಪೂರ್ವದಲ್ಲಿ ಅಗ್ನಿ ಪುತ್ರರಾದ ಋಷಿಗಳು, ಕೃಷ್ಣನ ಅಂಗಸಂಗದ ಇಚ್ಛೆಯಿಂದ ತಪಸ್ಸು ಮಾಡಿ ವರ ಪಡೆದು ಸ್ತ್ರೀಯರಾಗಿ ಹುಟ್ಟಿ ಶ್ರೀಕೃಷ್ಣನಿಗೆ ಪತ್ನಿಯರಾದರು. ಇವರ ಪೈಕಿ ತ್ವಷ್ಟೃನ ಮಗಳಾದ ಕಶೇರು ಎಂಬಾಕೆಯು ಶ್ರೇಷ್ಠಳು. ಉಳಿದವರೆಲ್ಲರೂ ಗೋಪಿಕಾಸ್ತ್ರೀಯರಿಗೆ ಸಮರೆಂಬ ತಾತ್ಪರ್ಯ. ಈ ಅರ್ಥವು ನಿರ್ಣಯ ೨೦ನೆಯ ಅಧ್ಯಾಯದಲ್ಲಿ ನರಕಾಸುರನನ್ನು ಸಂಹಾರಮಾಡಿ ಅವನ ಮನೆಯಲ್ಲಿ ಬಂಧನದಲ್ಲಿದ್ದ ಹದಿನಾರು ಸಾವಿರದನೂರು ರಾಜಕನ್ಯೆಯರನ್ನು ಶ್ರೀಕೃಷ್ಣನು ಸ್ವೀಕರಿಸಿದನೆಂಬ ಘಟ್ಟದಲ್ಲಿ " ದ್ವ್ಯಷ್ಟಸಹಸ್ರಾಣಿಶತಂಚ ರೂಪಶೀಲೌದಾರಾಃ ಅಕ್ಷತಾಃ ಸರ್ವ್ವತಸ್ಥಾಃ । ಕಾಶ್ಚಿತ್ತತ್ರಾಸ್ಸ ದೇವಗಂಧರ್ವಕನ್ಯಾಃ ತಾಸಾಂ ಪ್ರಧಾನಾತ್ವಷ್ಟೃಪುತ್ರೀ ಕಶೇರುಃ ॥112॥ ಪುತ್ರಾಗ್ನೇಃ ಪೂರ್ವಮಾಸಂಸ್ತತೇಥ ಸ್ತ್ರೀತ್ವಪ್ರಾಪ್ತ್ಯೈ ಚಕ್ರುರುಗ್ರಂ ತಪಶ್ಚ ॥ ಭಾರ್ಯಾತ್ವಾರ್ಥೇ ವಾಸುದೇವಸ್ಯಯೋಷಿತ್ತನುಂತಾಸಾಮಿಚ್ಛತೀನಾಂ ಸಮೀರಃ ॥113॥ ಆದಾಗ್ವರಃ ತಪಸಾರಾಧಿತಃ ಸಸ್ತ್ರೀಭೂತಾಸ್ತೇ ಬದರೀಂ ಸಂಪ್ರಜಗ್ಮುಃ। ನಾರಾಯಣಂ ತತ್ರ್ಯ

ಶ್ರೂಷಮಾಣಾಂ ಪ್ರಾಪ್ಯಾಪ್ಸರಸ್ತ್ವಂ ರಾಜಕುಲೇಷುಜಾತಾಃ ॥114॥ "
ಶ್ರೀಕೃಷ್ಣನು ನರಕಾಸುರನ ಮನೆಯಲ್ಲಿ ನಿರುದ್ಧರಾದ, ರೂಪಶೀಲ ಗುಣ ಗಳಿಂದ ಕೂಡಿದ ಹದಿನಾರುಸಾವಿರದ ನೂರು ಮಂದಿ ಸ್ತ್ರೀಯರನ್ನು ಕಂಡರು. ಅವರೆಲ್ಲರೂ ಸದ್ವ್ರತ ಉಳ್ಳವರಾಗಿಯೂ, ಕನ್ಯೆಯರಾಗಿಯೂ ಇದ್ದರು. ಅವರಲ್ಲಿ ಕೆಲವರು ದೇವಕನ್ಯೆಯರಾಗಿಯೂ, ಕೆಲವರು ಗಂಧರ್ವ ಕನ್ಯೆಯರಾಗಿಯೂ, ಕೆಲವರು ರಾಜಕನ್ಯೆಯರಾಗಿಯೂ ಇದ್ದರು. ಇವರ ಮಧ್ಯದಲ್ಲಿ ತ್ವಷ್ಟ್ರನೆಂಬ ಸೂರ್ಯ ಪುತ್ರಿಯಾದ ಕಶೇರು ಎಂಬಾಕೆಯು ಶ್ರೇಷ್ಠಳೆನಿಸುವಳು. ಇವರೆಲ್ಲರೂ, ಪೂರ್ವದಲ್ಲಿ ಅಗ್ನಿದೇವರ ಮಕ್ಕಳು ಇವರು ಸ್ತ್ರೀತ್ವವನ್ನು ಹೊಂದಿ ಶ್ರೀಕೃಷ್ಣನಿಗೆ ಪತ್ನಿಯರಾಗಬೇಕೆಂಬ ಉದ್ದೇಶದಿಂದ ವಾಯುದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದರು. ಆಗ ವಾಯುದೇವರು ಅವರ ತಪಸ್ಸಿನಿಂದ ಸಂತುಷ್ಟರಾಗಿ ವರವನ್ನಿತ್ತರು ಆಗ ಅವರೆಲ್ಲರೂ ಸ್ತ್ರೀತ್ವವನ್ನುಹೊಂದಿ ಬದರಿಕಾಶ್ರಮಕ್ಕೆ ಬಂದು ಅಲ್ಲಿ ಶ್ರೀ ನಾರಾಯಣದೇವರನ್ನು ಸೇವೆ ಮಾಡುತ್ತಿದ್ದು ಅಪ್ಸರ ಸ್ತ್ರೀಯರಾಗಿ ಹುಟ್ಟಿ ತದನಂತರದಲ್ಲಿ ರಾಜಕುಲದಲ್ಲಿ ಹುಟ್ಟಿದರು. " ಕಾಶ್ಚಿತ್ಸ್ವರ್ಗೇ ತಾನಿಶಾಮ್ಯೈವಕೃಷ್ಣಂವವ್ರುಃ ಪತಿಂಸರ್ವಗುಣಾಭಿರಾಮಂ ॥ ಅಜಾನದೇವ್ಯೈಃ ಸರ್ವಗುಣೈಃ ಸಮಸ್ತಾಃ ಸ್ವಭಾವತೋಽಥೇಂದಿರಾವೇಶತೋಽತಃ ॥115॥ ಗುಣಾಧಿಕಾಸ್ತಾಃ ಶಿಬಿಕಾಸು ಕೃಷ್ಣಃ ಆರೋಪಯಿತ್ವಾಪ್ರಾಹಿಣೋದ್ದ್ವಾರವತ್ಯೈಃ" ಕೆಲವರು ಸ್ವರ್ಗದಲ್ಲಿ ಇದ್ದರು. ಇವರೆಲ್ಲರೂ ಶ್ರೀಕೃಷ್ಣನ ಮಹಿಮೆಯನ್ನು ಕೇಳಿ ಶ್ರೀಕೃಷ್ಣನನ್ನು ತಮಗೆ ಪತಿಯಾಗಬೇಕೆಂದು ಕೇಳಿಕೊಂಡರು. ಇವರೆಲ್ಲರೂ ವಿಶೇಷವಾದ ರಮಾದೇವಿಯರ ಆವೇಶದಿಂದ ಕೂಡಿ ಅಜಾನದೇವತೆಗಳಿಗೆ ಸಮರಾಗಿದ್ದರು. ರಮಾವೇಶದಿಂದಲೇ ಎಲ್ಲರಲ್ಲೂ ಅಧಿಕವಾದಗುಣಗಳಿದ್ದವು. ಅವರೆಲ್ಲರನ್ನೂ ಶ್ರೀಕೃಷ್ಣನು ಪಾಲಕಿಯಲ್ಲಿ ಕೂಡಿಸಿ ದ್ವಾರವತಿಗೆ ಕಳುಹಿಸಿದನೆಂಬ ಶ್ಲೋಕಗಳಿಂದ ಸಿದ್ಧವಾಗುವದು.

ಅವತಾರಿಕೆ.—ಅಜಾನದೇವತೆಗಳ ತಾರತಮ್ಯವನ್ನು ಹೇಳುತ್ತಾರೆ.—

**ಸೂನುಗಳು ಯೆನಿಸುವರು ದೇವಕೃ**
**ಶಾನುವಿಗೆ ಕ್ರತುಸಿಂಧು ಶುಚಿಪವ**
**ಮಾನ ಕೌಶಿಕರೈದು ತುಂಬರು ಊರ್ವಶೀಶತರೂ ॥**
**ಮೇನಕೇ ಋಷಿರಾಯರುಗಳಾ**

**ಜಾನಸುರರಿಗೆ ಸಮರೆನಿಪರು ಸು**
**ರಾಣಕರಸಾಖ್ಯಾತದಿವಿಜರ ಜನಕರೆನಿಸುವರು ||೪೫||**

ಪದಾರ್ಥ.—ದೇವಕೃಶಾನುವಿಗೆ=ಅಗ್ನಿದೇವರಿಗೆ, ಕ್ರತು, ಸಿಂಧು, ಶುಚಿ, ಪವಮಾನ, ಕೌಶಿಕರೆಂದು, ಐದು=೫ ಜನರು, ಸೂನುಗಳು ಎನಿಸುವರು=ಮಕ್ಕಳೆನಿಸುವರು. ಇವರೈದು ಜನರು, ತುಂಬರುಶತರು=ತುಂಬರು ಮೊದಲಾದ ನೂರು ಗಂಧರ್ವರು, ಊರ್ವಶೀಶತರು-ಊರ್ವಶೀ ಮೊದಲಾದ ನೂರು ಅಪ್ಸರರು, ಮೇನಕೀ=ಮೇನಕೇ ಮೊದಲಾದವರು, ಋಷಿ=ಹಿಂದೆ ಹೇಳಿದ ವಶಿಷ್ಠಾದಿಗಳನ್ನು ಬಿಟ್ಟು ಉಳಿದ ಋಷಿಗಳು, ರಾಯರುಗಳು=ಹಿಂದೆ ಹೇಳಿದ ಪ್ರಿಯವ್ರತಾದಿಗಳು ಹೊರತು ಉಳಿದ ರಾಜರುಗಳು; ಆಜಾನಸುರರಿಗೆ=ಅಜಾನದೇವತೆಗಳಿಗೆ, ಸಮರೆನಿಪರು. ಸುರಾಣಕರು-ಆಜಾನಜರಲ್ಲಿ ಆಖ್ಯಾತರೆಂಬ ದೇವತಾ ಸಮೂಹವು, ಅನಾಖ್ಯಾದಿವಿಜರ=ಅಪ್ರಖ್ಯಾತ ದೇವತೆಗಳ, ಜನಕರೆನಿಸುವರು=ತಂದೆ ಎನಿಸುವರು.

ತಾತ್ಪರ್ಯ.—ಅಗ್ನಿದೇವರಿಗೆ ಕ್ರತು, ಸಿಂಧು, ಶುಚಿ, ಪವಮಾನ, ಕೌಶಿಕರೆಂದು ಐದು ಮಕ್ಕಳಿರುವರು. ಇವರೈದು ತುಂಬರು ಮೊದಲಾದ ಗಂಧರ್ವರು ನೂರು, ಊರ್ವಶೀ ಮೊದಲಾದ ಅಪ್ಸರರು ನೂರು, ಮೇನಕೆ, ವಶಿಷ್ಠಾದಿಗಳು ಹೊರತು ಉಳಿದ ಋಷಿಗಳು, ಪ್ರಿಯವ್ರತಾದಿಗಳನ್ನು ಬಿಟ್ಟುಳಿದ ರಾಜರುಗಳು ಇವರೆಲ್ಲರೂ ಆಜಾನಜರೆನಿಸುವರು. ಬೃಹತ್ತಾರತಮ್ಯದಲ್ಲಿ, " ಪವಮಾನಕ್ರತೌ ದ್ವೌಪ್ರಾಕ್ ಪವಮಾನೋಗ್ನಿಜಃ ಸ್ಮೃತಃ ಕೌಶಿಕೋಥಾಗ್ನಿಜಃ ಸಿಂಧುಃ ಶುಚಿಃ ಪ್ರಾಕ್‌ಶುಚಿರಗ್ನಿಜಃ || ತುಂಬರ್ವಾದಿತತಂಚೈವಊರ್ವಶ್ಯಾದ್ಯಪ್ಸರಾಸ್ತಥಾ || ಋಷಯಶ್ಚವಶಿಷ್ಠಾದೀನ್ಯತೇ ಆಜಾನಜಾಃಸ್ಮೃತಾಃ ' ಪವಮಾನನೆಂಬ ಅಗ್ನಿಗೆ ಪವಮಾನ, ಕ್ರಧರೆಂಬಿಬ್ಬರು ಮಕ್ಕಳು. ಕೌಶಿಕ, ಸಿಂಧುವೆಂಬಿಬ್ಬರು ಅಗ್ನಿಯ ಮಕ್ಕಳು. ಶುಚಿ ಎಂಬ ಅಗ್ನಿಗೆ ಶುಚಿ ಎಂಬ ಮಗನೊಬ್ಬನು ಅಂತು ಐವರು ಅಗ್ನಿ ಪುತ್ರರು. ತುಂಬರು ಮೊದಲಾದ ನೂರು ಗಂಧರ್ವರು, ಉರ್ವಶೀ, ಮೇನಕೆ ಮೊದಲಾದ ಅಪ್ಸರ ಸ್ತ್ರೀಯರು ನೂರು, ವಶಿಷ್ಠಾದಿ ಉತ್ತಮ ಗಣದಲ್ಲಿ ಸೇರಿದ ಋಷಿಗಳ ಹೊರತು ಉಳಿದ ಋಷಿಗಳು, ಇವರೆಲ್ಲರೂ ಅಜಾನ ದೇವತೆಗಳೆನಿಸುವರೆಂದು ಹೇಳಿರುವರು. ಈ ವಾಕ್ಯಗಳಿಂದ ಮೇಲಿನ ಅರ್ಥವು ಸಿದ್ಧವಾಗುವದು. ಸುರಾಣಕ ಅಂದರೆ, ಸುರಾಣಕರೆಂದು ದೈತ್ಯ ಗುಂಪು ಒಂದು ಉಂಟೆಂದು "ಸುರಾಣಕಾಂಸ್ತಮೋನೇತುಂತತ್ಯಾಜೇವಸಜಾನಕೀಂ

ಸುರಾಣಕರೆಂಬ ದೈತ್ಯ ಸಮೂಹವನ್ನು ತಪಸ್ಸಿಗೆ ಕಳುಹಿಸುವುದಕ್ಕಾಗಿ ಸೀತೆಯನ್ನು ತ್ಯಾಗಮಾಡಿದಂತೆ ತೋರಿದರೆಂಬ ವಚನದಲ್ಲಿ ಹೇಳಿದ ಸುರಾಣಕರನ್ನು ಇಲ್ಲಿ ಹೇಳಲಿಲ್ಲ. ಸುರಾಣಕ ಅಂದರೆ ದೇವತಾ ಸಮೂಹವೆಂದರ್ಥ. ಈ ದೇವತಾ ಸಮೂಹದವರು ಆಜಾನರಲ್ಲಿ ಸಂಬಂಧಪಟ್ಟ ಅನಾಖ್ಯಾತ ( ಅಪ್ರಸಿದ್ಧ ) ದೇವತೆಗಳಿಗೆ ತಂದೆ ಎನಿಸುವರು.

ಅವತಾರಿಕೆ.—ಉಳಿದ ಆಜಾನಜರ ತಾರತಮ್ಯವನ್ನೂ, ಅವರ ಲಕ್ಷಣವನ್ನೂ ಹೇಳುತ್ತಾರೆ.

**ಪಾವಕರಗಿಂದಧಮರೆನಿಸುವ**
**ದೇವಕುಲಜಾನಾಖ್ಯ ಸುರಗಣ**
**ಕೋವಿದರು ನಾನಾಸುವಿದ್ಯದಿ ಸೋತ್ತಮರನಿತ್ಯಾ ।**
**ಸೇವಿಪರು ಸದ್ಭಕ್ತಿಪೂರ್ವಕ**
**ಸ್ವಾವರರಿಗುಪದೇಶಿಸುವರು ನಿ**
**ರಾವಲಂಬನ ವಿಮಲಗುಣಗಳ ಪ್ರತಿದಿವಸದಲ್ಲಿ ॥೪೬॥**

ಪದ್ಯಾರ್ಥ.—ದೇವಕುಲ=ದೇವತಾ ಕುಲದಲ್ಲಿ ಹುಟ್ಟಿ ದೇವತೆಗಳೆಂದು ಪ್ರಸಿದ್ಧರಾಗದ ಅನಾಖ್ಯಾತರೆಂಬುವರು, ಪಾವಕರಗಿಂಡ=ಮೇಲೆ ಹೇಳಿದ ಅಗ್ನಿಗಳಗಿಂತಲೂ, ಅಧಮರೆನಿಸುವ=ಅಧಮರೆನಿಸುವರು. ಇವರೆಲ್ಲರೂ, ನಾನಾಸುವಿದ್ಯದಿ=ನಾನಾ ವಿಧವಾದ ಉತ್ತಮ ವಿದ್ಯೆಯಲ್ಲಿ, ಕೋವಿದರು=ಜ್ಞಾನಿಗಳೆನಿಸುವರು. ನಿತ್ಯ=ನಿತ್ಯದಲ್ಲೂ, ಸೋತ್ತಮರ–ತಮಗಿಂತಲೂ ಉತ್ತಮರನ್ನು ಸದ್ಭಕ್ತಿಪೂರ್ವಕ ಸೇವಿಪರು. ನಿರಾವಲಂಬನ=ಯಾವ ಕಾಲದಲ್ಲೂ ಯಾರನ್ನೂ ಆಶ್ರಯಿಸದ ಜಗದೀಶ್ವರನ, ವಿಮಲಗುಣಗಳ=ನಿರ್ಮಲವಾದ ಗುಣಗಳನ್ನು, ಪ್ರತಿದಿವಸದಲ್ಲಿಯೂ, ಸ್ವಾವರರಿಗೆ–ತಮಗಿಂತಲೂ ಕಮ್ಮಿಯಾದವರಿಗೆ, ಉಪದೇಶಿಸುವರು.

ತಾತ್ಪರ್ಯ.—ಮೇಲೆ ಹೇಳದ ಅಗ್ನಿಗಿಂತಲೂ ಅನಾಖ್ಯಾತರಾದ ಆಜಾನಜರು ಅಧಮರೆನಿಸುವರು. ಇವರೆಲ್ಲರೂ ಸಕಲ ವಿದ್ಯಾಪಾರಂಗತರಾಗಿ ತಮಗಿಂತಲೂ ಉತ್ತಮರನ್ನು ಉತ್ತಮವಾದ ಭಕ್ತಿಯಿಂದ ಸೇವೆ ಮಾಡುತ್ತಾ ಜಗದೀಶ್ವರನಾದ ಶ್ರೀಪರಮಾತ್ಮನ ನಿರ್ಮಲವಾದ ಗುಣಗಳನ್ನು ತಮಗಿಂತಲೂ ಅಧಮರಾದ ಭಕ್ತರಿಗೆ ಉಪದೇಶವನ್ನು ಮಾಡುತ್ತಾ ಕಾಲವನ್ನು ಕಳೆಯುವರು.

ವಿರೋಧ ಚಿಂತಿಸಬಾರದು. ಏಕೆಂದರೆ; ಬೃಹತ್ತಂತ್ರಸ್ಯ ವಾಕ್ಯ "ಉಕ್ತ ಸಂಖ್ಯಾಧಿಕತ್ವೇಕ್ತಿರ್ಗಾನಾನಾಂ ವಿಶೇಷತಃ || ದಶಂದಶಸಹಸ್ರಂಚ ನೈವ ತನ್ಮಾತ್ರವಾಚಕಂ || ಅವಿರೋಧಸ್ತತೋಜ್ಞೇಯೋ ನಾನಾವಾಕ್ಯೇಷುಸರ್ವಶಃ" ೧೦, ೧೦೦, ೧೦೦೦ ಮೊದಲಾದ ಸಂಖ್ಯೆಗಳು ೧೦,೧೦೦ ಎಂದೆ ಅರ್ಥವಲ್ಲ. ೧೦ ಎಂದರೂ, ೧೦೦ ಎಂದರೂ ಅನಂತ ಸಂಖ್ಯೆಯ ವಾಚಕ ವೆಂದು ಪ್ರಮಾಣವಿರುವುದರಿಂದ ಉಕ್ತವಾದ ಸಂಖ್ಯೆಗಳನ್ನು ಅವಿರೋಧ ವಾಗಿ ಅನ್ವಯಿಸಿ ಅರ್ಥ ಮಾಡುವುದರಿಂದ ಪರಸ್ಪರ ವಿರೋಧ ಪರಿಹಾರವಾ ಗುವುದು. ಹೀಗೆ ಅರ್ಥಮಾಡುವುದೆ ಸಾಧುಜನ ಸಮ್ಮತವೆಂದು ತಾತ್ಪರ್ಯ.

ಅವತಾರಿಕೆ.—ಮುಕ್ತಿಯೋಗ್ಯರ ಲಕ್ಷಣವನ್ನು ಹೇಳುತ್ತಾರೆ.—

**ಇವರುಮುಕ್ತಿಗೆಯೋಗ್ಯರೆಂಬರು**
**ಶ್ರವಣಮನನಾದಿಗಳ ಪರಮೋ**
**ತ್ಸವದಿ ಮಾಡುತ ಕೇಳಿನಲಿಯುತ ಧರ್ಮಕಾಮಾರ್ಥ ||**
**ತ್ರಿವಿಧಫಲಗಳಪೇಕ್ಷಿಸದೆ ಶ್ರೀ**
**ಪವನಮುಖ ದೇವಾಂತರಾತ್ಮಕ**
**ಪ್ರವರತಮ ಶಿಷ್ಟೇಷ್ಟದಾಯಕನೆಂದುಸ್ಮರಿಸುವರು ||೫೧||**

ಪದ್ಯಾರ್ಥ : ಶ್ರವಣಮನನಾದಿಗಳ=ಪರಮಾತ್ಮನ ಚರಿತ್ರೆಗಳನ್ನು ಕೇಳುವುದು, ಕೇಳಿದುದನ್ನು ಸರ್ವದಾ ಮನಸ್ಸಿನಲ್ಲಿ ಚಿಂತಿಸುತ್ತಿರುವುದು ಇವೇ ಮೊದಲಾದವುಗಳನ್ನು, ಪರಮೋತ್ಸವದಿ=ಪರಮಾನಂದದಿಂದ (ಮನೆಯಲ್ಲಿ ಮಕ್ಕಳಿಗೆ ಮದುವೆ ಮೊದಲಾದವುಗಳನ್ನು ಮಾಡುವಾಗ ಸಂಭ್ರಮದಿಂದ ಆನಂದ ಪಡುವಂತೆ ಎಂದರ್ಥ) ಮಾಡುತ, ಕೇಳಿ=ಶ್ರವಣಾದಿಗಳನ್ನು ಮಾಡಿದ ಕೂ ಡಲೆ ಆನಂದದಿಂದ, ನಲಿಯುತ=ನರ್ತನೆ ಮಾಡುತ್ತ, ಧರ್ಮ ಕಾಮ, ಅರ್ಥ, ತ್ರಿವಿಧಫಲಗಳ=ಈ ಮೂರು ವಿಧವಾದ ಫಲಗಳನ್ನು ಅಪೇಕ್ಷಿಸದೆ, ಶ್ರೀ= ಲಕ್ಷ್ಮೀದೇವಿಯರು, ಪವನ=ವಾಯು ದೇವರು, ಮುಖ=ಇವರೇ ಮೊದಲಾದ ದೇವ=ದೇವತೆಗಳ, ಅಂತರಾತ್ಮಕ=ಅಂತರ್ಯಾಮಿಯಾದ, ಪ್ರವರತಮ=ಸಕಲ ದೇವತೆಗಳಕಿಂತಲೂ, ಶ್ರೇಷ್ಟತಮನಾದ ಅಥವಾ ಶ್ರೀ ಪವನಮುಖದೇವಾಂತ ರಾತ್ಮಕ ಪ್ರವರತಮ=ಶ್ರೀ ವಾಯುದೇವರು ಮೊದಲಾದ ತತ್ವಾಭಿಮಾನಿ ದೇವತೆಗಳಿಗೆ, ಪ್ರವರತಮನೆಂದರೆ=ಶ್ರೇಷ್ಟತಮನಾದ, ಶಿಷ್ಟೇಷ್ಟದಾಯಕ=

ಶಿಷ್ಟರಾದ ಭಗವದ್ಭಕ್ತರ ಇಷ್ಟಗಳನ್ನು ಪೂರೈಸುವವನು ಶ್ರೀ ಹರಿಯು ಎಂದು ಸ್ಮರಿಸುವವರು, ಇವರು=ಇಂತಹಾ ಲಕ್ಷಣಗಳುಳ್ಳವರೇ, ಮುಕ್ತಿಗೆ ಯೋಗ್ಯರೆಂಬರು=ಮುಕ್ತಿಯೋಗ್ಯರೆಂದು ಪುರಾಣ ಪ್ರಸಿದ್ಧರಾಗಿರುವರು.

ತಾತ್ಪರ್ಯ.—ಪರಮಾತ್ಮನ ಕಥೆಗಳನ್ನು ಬಹು ಸಂತೋಷದಿಂದ ಶ್ರವಣ ಮಾಡುತ್ತಾ, ಶ್ರವಣ ಮಾಡಿದುದನ್ನು ಮನನ ಮಾಡಿ, ಆನಂದದಿಂದ ಮೈಮರೆತು ಕುಣಿಯುತ್ತಾ, ಮನನಾದಿ ಎಂಬ ಆದಿ ಶಬ್ದದಿಂದ, ಕೀರ್ತನೆ, ಸ್ಮರಣೆ ಮೊದಲಾದ ೮ ವಿಧ ಭಕ್ತಿಯನ್ನೂ ತೆಗದುಕೊಳ್ಳಬೇಕು. "ಶ್ರವಣಂ, ಕೀರ್ತನಂ, ವಿಷ್ಣೋಃಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ದಾಸ್ಯಂ, ಸಖ್ಯಂ, ಆತ್ಮನಿವೇದನಂ" || ಎಂಬ ೯ ವಿಧ ಭಕ್ತಿಯಿಂದ ಪರಮಾತ್ಮನನ್ನು ಭಜಿಸುತ್ತಾ ಧರ್ಮ, ಅರ್ಥ, ಕಾಮಗಳೆಂಬ ಮೂರು ವಿಧ ಪುರುಷಾರ್ಥಗಳನ್ನು ಬೇಡದೆ ಲಕ್ಷ್ಮೀ ಬ್ರಹ್ಮ ಮೊದಲಾದ ಸಕಲ ದೇವತೆಗಳ ಅಂತರ್ಯಾಮಿಯಾದ, ಸಕಲ ದೇವತಾ ಶ್ರೇಷ್ಟತಮನಾದ ಶ್ರೀ ಪರಮಾತ್ಮನು ಭಕ್ತರ ಇಷ್ಟಗಳನ್ನು ಪೂರೈಸುವವನೆಂದು ಸರ್ವದಾ ಹರಿಯನ್ನು ಮರೆಯದೆ ಚಿಂತಿಸುವವರಾರೋ, ಅವರೆ ಮುಕ್ತಿಯೋಗ್ಯರೆಂದು ವಿಷ್ಣುರಹಸ್ಯ ಮೊದಲಾದ ಪುರಾಣಾದಿಗಳಲ್ಲಿ ಮುಕ್ತಿಯೋಗ್ಯರ ಲಕ್ಷಣವನ್ನು ಹೇಳಿರುವರು. ಅದೇ ಅಭಿಪ್ರಾಯವನ್ನೆ ದಾಸಾರ್ಯರು ಇಲ್ಲಿ ಹೇಳಿರುತ್ತಾರೆಂದು ತಿಳಿಯಬೇಕು.

ಅವತಾರಿಕೆ.—ನಿತ್ಯ ಸಂಸಾರಿಗಳ ಲಕ್ಷಣವನ್ನು ಹೇಳುತ್ತಾರೆ.

**ನಿತ್ಯ ಸಂಸಾರಿಗಳುಗುಣದೋ**
**ಷಾತ್ಮಕರು ಬ್ರಹ್ಮಾದಿ ದಿವಿಜರು**
**ಭೃತ್ಯರೆಂಬರು ರಾಜಸೋಪಾದಿಯಲಿ ಹರಿಯೆಂಬ ||**
**ಕೃತ್ತಿವಾಸನುಬ್ರಹ್ಮಶ್ರೀವಿ**
**ಷ್ಣುತ್ರಯರು ಸಮದುಃಖಸುಖವು**
**ತ್ಪತ್ತಿಮೃತಿಭಯಪೇಳುವರು ಅವತಾರಗಳಿಗೆಸದಾ ||೫೨||**

ಪದ್ಯಾರ್ಥ.—ನಿತ್ಯಸಂಸಾರಿಗಳು=ರಾಜಸರಾದ ನಿತ್ಯ ಸಂಸಾರಿ ಜೀವರುಗಳು, ಗುಣದೋಷಾತ್ಮಕರು=ಗುಣದೋಷ ಮಿಶ್ರವಾದ ಸ್ವಭಾವ ಉಳ್ಳವರು. ಇವರು ಉಪಾಸನೆ ಮಾಡುವ ಕ್ರಮವು ಹೇಗೆಂದರೆ:—ಬ್ರಹ್ಮಾದಿ

ದಿವಿಜರು=ಬ್ರಹ್ಮ ಮೊದಲಾದ ದೇವತೆಗಳು, ಭೃತ್ಯರೆಂಬರು=ಪರಮಾತ್ಮನ ಪರಿವಾರ ದೇವತೆಗಳೆಂದು ಹೇಳುವರು, ಆದರೂ, ಹರಿಯು, ರಾಜನೋಪಾದಿಯಲಿ=ರಾಜನು ಹೇಗೆ ಪ್ರಜೆಗಳಿಗಧಿಪತಿಯೋ ಹಾಗೆ ಪರಮಾತ್ಮನೂ, ಬ್ರಹ್ಮಾದಿ ಪ್ರಜೆಗಳಿಗೆ ಅಧಿಪತಿಯು, ಎಂಬ=ಅನ್ನುವರು. ಕೃತ್ತಿವಾಸನು=ಚರ್ಮವೇ ವಸ್ತ್ರವಾಗುಳ್ಳ ರುದ್ರದೇವರೂ, ಬ್ರಹ್ಮದೇವರು, ಶ್ರೀವಿಷ್ಣು ತ್ರಯರು=ಇವರು ಮೂವರೂ, ಸಮ=ಸಮರು, ಅವತಾರಗಳಿಗೆ=ಪರಮಾತ್ಮನ ರಾಮ ಕೃಷ್ಣಾದಿ ಅವತಾರಗಳಿಗೆ, ಸದಾ=ಸರ್ವ ಕಾಲದಲ್ಲೂ, ದುಃಖ, ಸುಖ, ಉತ್ಪತ್ತಿ=ಹುಟ್ಟುವುದು, ಮೃತಿ=ನಾಶಹೊಂದುವುದು, ಭಯ ಇವುಗಳು ಉಂಟೆಂದು ಹೇಳುವರು.

ತಾತ್ಪರ್ಯ.—ನಿತ್ಯ ಸಂಸಾರಿಗಳು ಯಾವ ಕಾಲದಲ್ಲೂ ಗುಣದೋಷ ಮಿಶ್ರವಾದ ಸ್ವಭಾವವುಳ್ಳವರು. ಇವರ ಉಪಾಸನೆಯ ಪ್ರಕಾರವು, "ತತ್ರ ಸಂಸೃತಿಬದ್ಧಾಸ್ತು ಗುಣದೋಷೋಭಯಾತ್ಮಕಾಃ || ತತ್ರೋಚ್ಚಾ ರಾಜವದ್ವಿಷ್ಣೋಃ ಸರ್ವಾಧಿಕ್ಯೇತುಸಂಶಯಾಃ || ಜಾನಂತ್ಯಥಾಪಿ ಬ್ರಹ್ಮಾದಿದೇವಾನಾಂ ಪರಿವಾರತಾಂ" ನಿತ್ಯ ಸಂಸಾರಿಗಳೆಂಬುವರು ಗುಣದೋಷಗಳೆಂಬ ಎರಡು ಮಿಶ್ರವಾದ ಸ್ವಭಾವವುಳ್ಳವರು. ಪರಮಾತ್ಮನು ಸಾಧಾರಣ ಒಬ್ಬ ರಾಜನಂತೆ ಪ್ರಜಾಧಿಪತಿ ಎಂದು ಮಾತ್ರ ತಿಳಿದಿರುವರು. ಅಂದರೆ ರಾಜನಿಗೆ ಮೇಲೆ ಚಕ್ರವರ್ತಿ ಹೇಗಿರುವನೋ ಹಾಗೆ ಪರಮಾತ್ಮನಿಗೂ ಪ್ರೇರಕರು ಇರಬಹುದು ಎಂದು ಸರ್ವಾಧಿಕ್ಯ ವಿಷಯದಲ್ಲಿ ಸಂಶಯಗ್ರಸ್ತರಾಗಿರುವರು. ಆದರೂ, ಬ್ರಹ್ಮಾದಿ ದೇವತೆಗಳು ಪರಮಾತ್ಮನ ಪರಿವಾರರೆಂದು ತಿಳಿದಿರುವರು. ಎಂಬ ಸತ್ತತ್ವರತ್ನಮಾಲೆಯ ವಾಕ್ಯಾರ್ಥವನ್ನೇ ಇಲ್ಲಿ ಹೇಳಿರುವರು. ಮತ್ತು ಬ್ರಹ್ಮದೇವರು, ರುದ್ರದೇವರು, ಶ್ರೀವಿಷ್ಣು ಇವರು ಮೂವರೂ ಸಮರು; ರಾಮಕೃಷ್ಣಾದಿ ಅವತಾರಗಳಲ್ಲಿ ಸುಖ, ದುಃಖ, ಉತ್ಪತ್ತಿ, ನಾಶ, ಭಯ ಮೊದಲಾದವುಗಳುಂಟೆಂದು ಭಾವಿಸುವರು. ಆದುದರಿಂದಲೆ ಇವರಿಗೆ ನಿತ್ಯ ಸಂಸಾರ ರೂಪವಾದ ಸಾಂತಾನಿಕ ಲೋಕ ಪ್ರಾಪ್ತಿಯಾಗುವದು, ಅಲ್ಲಿ ಸುಖ, ದುಃಖ ಮಿಶ್ರ ಫಲವನ್ನು ಅನುಭವಿಸುತ್ತಿರುವರು.

ಅವತಾರಿಕೆ.—ಮನುಷ್ಯರಲ್ಲಿ ಅಧಮರ ಲಕ್ಷಣವನ್ನು ಹೇಳುತ್ತಾರೆ.

**ತಾರತಮ್ಯಜ್ಞಾನವಿಲ್ಲದೆ**
**ಸೂರಿಗಳನಿಂದಿಸುತ ನಿತ್ಯದಿ**
**ತೋರುತಿಪ್ಪರು ಸುಜನರೋಪಾದೆಯಲಿ ನರರೊಳಗೆ ||**
**ಕ್ರೂರಕರ್ಮಾಸಕ್ತರಾಗಿ ಶ**
**ರೀರಪೋಷಣೆಗೋಸುಗದಿ ಸಂ**
**ಚಾರಮಾಳ್ಪರು ಅನ್ಯದೇವತೆ ನೀಚರಾಲಯದಿ ||೫೩||**

ಪದ್ಯಾರ್ಥ.—ತಾರತಮ್ಯಜ್ಞಾನವಿಲ್ಲದೆ=ಇವರು ಉತ್ತಮರು, ಇವರು ನೀಚರೆಂಬ ತಾರತಮ್ಯಜ್ಞಾನವಿಲ್ಲದೆ, ಸೂರಿಗಳ=ಜ್ಞಾನಿಗಳನ್ನು ನಿತ್ಯದಿ, ನಿಂದಿಸುತ=ದೂಷಿಸುತ್ತ, ನರರೊಳಗೆ=ಮನುಷ್ಯರೊಳಗೆ, ಸುಜನರೋಪಾದೆಯಲಿ=ಬಹು ಯೋಗ್ಯರಾದ ಸಾಧುಜನರಂತೆ ತೋರುತಿಪ್ಪರು, ಕ್ರೂರಕರ್ಮಾಸಕ್ತರಾಗಿ=ಕ್ಷುದ್ರದೇವತೆ ಭಜನೆ ಮೊದಲಾದ ಕ್ರೂರಕರ್ಮಗಳಲ್ಲಿ ನಿರತರಾಗಿ, ಶರೀರಪೋಷಣೆಗೋಸುಗದಿ=ತಮ್ಮ ಹೊಟ್ಟೆ ತುಂಬಿಸಿಕೊಂಡು ದೇಹವನ್ನು ಪೋಷಣೆ ಮಾಡುವುದಕ್ಕೋಸ್ಕರವಾಗಿ, ಅನ್ಯದೇವತೆನೀಚರಾಲಯದಿ=ದೇವತೆಗಳಲ್ಲಿ ನೀಚರಾದ ಕ್ಷುದ್ರ ದೇವತೆಗಳ ಆಲಯಗಳಲ್ಲೂ, ಅಥವಾ ಅನ್ಯದೇವತೆಗಳ ಆಲಯವೂ, ದುಡ್ಡಿಗೋಸ್ಕರ ನೀಚ ಜನರ ಮನೆಗಳು ಇವುಗಳಲ್ಲಿ ಸಂಚಾರಮಾಳ್ಪರು.

ತಾತ್ಪರ್ಯ.—ಮನುಷ್ಯಾಧಮರು, ತಾರತಮ್ಯ ಜ್ಞಾನವಿಲ್ಲದೆ ಭಗವದ್ಭಕ್ತರನ್ನು ದೂಷಿಸುತ್ತಾ ನೋಡಿದ ಜನರಿಗೆ ಮಾತ್ರ ಬಹು ಜ್ಞಾನಿಗಳಂತೆಯೂ, ತಪಸ್ವಿಗಳಂತೆಯೂ. ತೋರಿಕೊಳ್ಳುವರು. ಅವರ ಕೆಲಸವೆಲ್ಲವೂ ಕ್ರೂರಕರವಾಗಿರುವುದು ಕ್ಷುದ್ರ ದೇವತೆಗಳ ಉಪಾಸನೆಯನ್ನು ಮಾಡುತ್ತಾ ಹೊಟ್ಟೆಗೋಸ್ಕರ ನೀಚ ಜನರ ಮನೆಮನೆ ತಿರುಗುತ್ತಿರುವರು. "ಯಸ್ತಾತ್ವದ್ವೇಷ್ಟಿಸಮಾಂದ್ವೇಷ್ಟಿ ಯಸ್ತಾನನು ಸಮಾಮನು" ಎಂಬ ಗೀತಾವಾಕ್ಯದಿಂದ ತಾರತಮ್ಯ ಜ್ಞಾನವಿಲ್ಲದೆ ಹರಿಭಕ್ತರ ದ್ವೇಷ ಮಾಡುವವರು ಪರಮಾತ್ಮನಲ್ಲೂ ದ್ವೇಷ ಮಾಡೇ ಮಾಡುವರು. ಅದರಿಂದ ಅಧೋಗತಿಯೇ ಪ್ರಾಪ್ತಿಯಾಗುವುದೆಂಬ ತಾತ್ಪರ್ಯ.

ಅವತಾರಿಕೆ—ಪ್ರಕರಣವನ್ನು ಮುಗಿಸುತ್ತಾ ಬೃಹತ್ತಾರತಮ್ಯವೆಂಬ ರತ್ನಮಾಲಿಕೆಯನ್ನು ಹರಿವಾಯುಗಳಿಗೆ ಅರ್ಪಿಸುತ್ತಾರೆ.

**ದಶಪ್ರಮತಿಯ ಮತಾಬ್ಧಿಯೊಳು ಸುಮ-**
**ನಸರೆನಿಪ ರತ್ನಗಳನವಲೋ**
**ಕಿಸಿ ತೆಗೆದು ಪ್ರಾಕೃತ ಸುಭಾಷಾತಂತುಗಳ ರಚಿಸಿ ॥**
**ಅಸುಪತಿ ಶ್ರೀರಮಣಗೆ ಸಮ-**
**ರ್ಪಿಸಿದೆ ಸಜ್ಜನರಿದನು ಸಂತೋ-**
**ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥ ೫೪ ॥**

ಪದ್ಯಾರ್ಥ—ದಶಪ್ರಮತಿಯ ಮತ=ಪೂರ್ಣಪ್ರಜ್ಞರೆಂಬ ಹೆಸರನ್ನು ಪಡೆದ ಶ್ರೀಮನ್ಮಧ್ವಾಚಾರ್ಯರ ಮತವೆಂಬ, ಅಬ್ಧಿಯೊಳು=ಸಮುದ್ರದಲ್ಲಿ ಸುಮನಸರೆನಿಪ=ದೇವತೆಗಳೆಂಬ ರತ್ನಗಳನ್ನು, ಅವಲೋಕಿಸಿ=ಹುಡುಕಿ ತೆಗೆದು ಪ್ರಾಕೃತಸುಭಾಷಾಂತತುಗಳ=ಪ್ರಾಕೃತವೆನಿಸುವ ಉತ್ತಮವಾದ ಕನ್ನಡ ಭಾಷೆ ಎಂಬ ದಾರದಲ್ಲಿ ಪೋಣಿಸಿ, ರಚಿಸಿ=ಮಾಲೆಯನ್ನಾಗಿ ಮಾಡಿ, ಅಸುಪತಿ=ಪ್ರಾಣಪತಿಯಾದ, ಶ್ರೀರಮಣಗೆ=ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನಿಗೆ ಸಮರ್ಪಿಸಿದೆ; ಸಜ್ಜನರು, ದೋಷಗಳೆಣಿಸದಲೆ, ಕಾರುಣ್ಯದಲಿ=ಇದರಲ್ಲಿ ಏನು ದೋಷಗಳಿದ್ದರೂ ಅದನ್ನು ಮನಸ್ಸಿಗೆ ತಾರದೆ ನಿತ್ಯದಲ್ಲಿ ಇದನ್ನು ನೋಡಿ ಸಂತೋಷಿಸಲಿ.

ಅವತಾರಿಕೆ—ಈ ಸಂಧಿಯಲ್ಲಿ ಹೇಳಿದ ತಾರತಮ್ಯವನ್ನು ಮನಸ್ಸಿನಲ್ಲಿ ಧಾರಣೆಮಾಡುವುದಕ್ಕಾಗಿ ಸಂಧಿಯನ್ನು ಮುಗಿಸುತ್ತಾ ಎರಡು ಪದ್ಯಗಳಿಂದ ಸಂಕ್ಷೇಪವಾಗಿ ಹೇಳುತ್ತಾರೆ.

**ನಿರುಪಮ ಶ್ರೀವಿಷ್ಣು ಲಕುಮಿ**
**ಸರಸಿಜೋದ್ಭವ ವಾಯು ವಾಣೀ**
**ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ ॥**
**ಗುರುಬೃಹಸ್ಪತಿ ಪ್ರವಹ ಸೂರ್ಯನು**
**ವರುಣ ನಾರದ ವಹ್ನಿ ಸಪ್ತಂ-**
**ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಾಹಾ ಬುಧನು ॥ ೫೫ ॥**

ಪದ್ಯಾರ್ಥ—ನಿರುಪಮ=ಉಪಮಾನವಿಲ್ಲದವನಾದ (ಸಮರಹಿತನಾದ) ಶ್ರೀವಿಷ್ಣು, ಲಕ್ಷ್ಮೀ, ಸರಸಿಜೋದ್ಭವ=ಬ್ರಹ್ಮದೇವರು, ವಾಯು, ವಾಣೀ=ಸರಸ್ವತೀ ಭಾರತಿಯರು, ಗರುಡ=ಗರುಡ ಶೇಷ ರುದ್ರರು, ಷಣ್ಮಹಿಷಿಯರು=ಶ್ರೀಕೃಷ್ಣನ ಹೆಂಡತಿಯರಾದ ಜಾಂಬವತೀ ಮೊದಲಾದ 6 ಸ್ತ್ರೀಯರು,

ಪಾರ್ವತಿ=ಸೌಪರ್ಣೀ, ವಾರುಣೀ ಪಾರ್ವತೀ ಇವರು ಮೂವರು ಶಕ್ರ=ದೇವೇಂದ್ರನು, ಸ್ಮರ=ಮನ್ಮಥನು, ಪ್ರಾಣ=ಅಹಂಕಾರಿಕ ಪ್ರಾಣನು, ಗುರು, ಬೃಹಸ್ಪತಿ, ಪ್ರವಹ, ಸೂರ್ಯನು, ವರುಣ, ನಾರದ, ವಹ್ನಿ=ಅಗ್ನಿಯು, ಸಪ್ತಾಂಗಿರರು=ಅಂಗಿರ, ವಶಿಷ್ಠ ಮೊದಲಾದ ಬ್ರಹ್ಮದೇವರ ಮಕ್ಕಳು ಏಳು ಜನರು, ಮಿತ್ರ=ಮಿತ್ರನೆಂಬ ಸೂರ್ಯನು, ಗಣೇಶ, ಪೃಥು=ಪೃಥು ಮೊದಲಾದ ಚಕ್ರವರ್ತಿ ರಾಜರುಗಳು, ಗಂಗಾ, ಸ್ವಾಹಾ, ಬುಧನು.

**ತರಣಿತನಯ ಶನೈಶ್ಚರನು ಪು-**
**ಷ್ಕರನಜಾನಜ ಚಿರಪಿತರು ಗಂ-**
**ಧರುವರೀರ್ವರು ದೇವ ಮಾನುಷ ಚಕ್ರವರ್ತಿಗಳು ॥**
**ನರರೊಳುತ್ತಮ ಮಧ್ಯಮಾಧಮ**
**ಕರೆಸುವರು ಮಧ್ಯೋತ್ತಮರು ಯಿ-**
**ರೆರಡು ಜನ ಕೈವಲ್ಯ ಮಾರ್ಗಸ್ಥರೆಂದಾ ನಮಿಪೆ ॥ ೫೬ ॥**

ಪದ್ಯಾರ್ಥ—ತರಣಿತನಯ=ಸೂರ್ಯನ ಮಗನಾದ, ಶನೈಶ್ಚರನು, ಪುಷ್ಕರ, ಅಜಾನಜ=ಅಜಾನಜ ದೇವತೆಗಳು, ಚಿರಪಿತರು, ದೇವಮಾನುಷ ಗಂಧರ್ವರೀರ್ವರು=ದೇವಗಂಧರ್ವರು, ಮನುಷ್ಯ ಗಂಧರ್ವರು, ಚಕ್ರವರ್ತಿಗಳು, ನರರೊಳುತ್ತಮ=ಮನಷ್ಯೋತ್ತಮರು, ಮಧ್ಯಮರು, ಅಧಮರು, ಕರೆಸುವರು=ಮನುಷ್ಯರಲ್ಲಿ ಹೀಗೆ ತ್ರಿವಿಧ ಜೀವರು, ಇವರ ಮಧ್ಯದಲ್ಲಿ ಮನುಷ್ಯ ಗಂಧರ್ವರು, ಮನುಷ್ಯ ಚಕ್ರವರ್ತಿಗಳು, ಮನುಷ್ಯೋತ್ತಮರು, ಮನುಷ್ಯ ಮಧ್ಯಮರು, ಹೀಗೆ ಈರೆರಡು ಜನ=ಈ ೪ ಪ್ರಕಾರವುಳ್ಳ ಮನುಷ್ಯ ಸಂಬಂಧದವರು ಕೈವಲ್ಯ ಮಾರ್ಗಸ್ಥರೆಂದು=ಮುಕ್ತಿಯೋಗ್ಯರೆಂದು, ಆ ನಮಿಪೆ=ಇವರೆಲ್ಲರಿಗೂ ನಮಸ್ಕಾರಮಾಡುವೆನು ಎಂದು ದಾಸಾರ್ಯರು ಸಂಧಿಯ ಅವಸಾನದಲ್ಲಿ ಸಮಸ್ಕರಿಸುವರು. ಇದರಂತೆಯೇ ಬೃಹತ್ತಾರತಮ್ಯ ಗ್ರಂಥಕಾರರೂ ನಮಸ್ಕಾರಮಾಡಿರುವರು. ಅದೆಂತೆನೆ=“ವಿಷ್ಣುಃ ಶ್ರೀರ್ಬ್ರಹ್ಮವಾಣೀ-ಶೋಽನಿಲೋಮೇಂದ್ರಸ್ಮರೋ ಗುರುಃ॥ಪ್ರವಹಸ್ಸೂರ್ಯವರುಣೌ ನಾರದೋಽಗ್ನಿರ್ವಸಿಷ್ಠಕಃ ॥ ಮಿತ್ರವಿಘ್ನೇಶ್ವರೌ ಚೈವ ಪೃಥುರ್ಗಂಗಾ ಚ ಕೇಚನ ॥ ಸ್ವಾಹಾ ಬುಧೋಽಷಾಶನಯಃ ಪುಷ್ಕರಾಜಾನದೇವತಾಃ ॥ ಪಿತರೋ ದೇವ-ಮನುಜಗಂಧರ್ವಾಶ್ಚಕ್ರವರ್ತಿನಃ । ಮನುಷ್ಯೋತ್ತಮಪರ್ಯಂತಾಃ ಪ್ರೀಯಂತಾಂ ಗುರುವೋ ಮಮ ॥” ಎಂದು ಹೇಳಿರುವರು, ಅದೇ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ಹೇಳಿರುತ್ತಾರೆ.

ಅವತಾರಿಕೆ—ಫಲಸ್ತುತಿಯನ್ನು ಹೇಳಿ, ಸಂಧಿಯನ್ನು ಮುಗಿಸುತ್ತಾರೆ.

**ಸಾರಭಕ್ತಿ ಜ್ಞಾನದಿಂ ಬೃಹ-**
**ತ್ತಾರತಮ್ಯವನರಿತು ಪಠಿಸುವ**
**ಸೂರಿಗಳಿಗನುದಿನದ ಪುರುಷಾರ್ಥಗಳ ಪೂರೈಸಿ ।**
**ಕಾರುಣಿಕ ಮರುತಾಂತರಾತ್ಮಕ**
**ಮಾರರಮಣ ಜಗನ್ನಾಥವಿಠ್ಠಲ**
**ತೋರಿಕೊಂಬನು ಹೃತ್ಕಮಲದೊಳುಯೋಗ್ಯತೆಗಳರಿತು**
**॥ ೫೭ ॥**

ಪದ್ಯಾರ್ಥ—ಸಾರಭಕ್ತಿಜ್ಞಾನದಿಂ=ಪರಮಾತ್ಮನಲ್ಲಿ ದೃಢತರವಾದ ಭಕ್ತಿಯಿಂದಲೂ, ಹರಿ ಸರ್ವೋತ್ತಮನೆಂಬ ಜ್ಞಾನದಿಂದಲೂ ಬೃಹತ್ತಾರ ತಮ್ಯವೆಂಬ ಈ ಸಂಧಿಯ ಸಾರವನ್ನರಿತು, ಪಠಿಸುವ ಸೂರಿಗಳಿಗೆ=ಜ್ಞಾನಿಗಳಿಗೆ ಅನುದಿನದಿ=ಪ್ರತಿದಿವಸದಲ್ಲೂ, ಪುರುಷಾರ್ಥಗಳ ಪೂರೈಸಿ, ಕಾರುಣಿಕ=ಮಹಾ ಕರುಣಾಳುವಾದ, ಮರುತಾಂತರಾತ್ಮಕ=ಭಾರತೀರಮಣ ಮುಖ್ಯ ಪ್ರಾಣಾಂತರ್ಯಾಮಿಯಾದ, ಮಾರರಮಣ=ಲಕ್ಷ್ಮೀಪತಿಯಾದ ಶ್ರೀಜಗನ್ನಾಥ ವಿಠಲನು. ಯೋಗ್ಯತೆಗಳನರಿತು=ಅವರವರ ಯೋಗ್ಯತಾನುಸಾರವಾಗಿ, ಹೃತ್ಕಮಲದೊಳಗೆ=ಹೃದಯಕಮಲ ಮಧ್ಯದಲ್ಲಿ, ತೋರಿಕೊಂಬನು=ಅಪರೋಕ್ಷ ದಲ್ಲಿ ತನ್ನ ರೂಪವನ್ನು ತೋರಿಸುವನು.

ತಾತ್ಪರ್ಯ—ಶ್ರೀವಿಷ್ಣು ಸರ್ವೋತ್ತಮನೆಂದು ಅರಂಭಮಾಡಿ, ಮನುಷ್ಯೋತ್ತಮರವರಿಗೂ ಹೇಳಿರುವ ಬೃಹತ್ತಾರತಮ್ಯವೆಂಬ ಈ ಸಂಧಿಯ ಸಾರವನ್ನು ತಿಳಿದು ಭಕ್ತಿ ಜ್ಞಾನದಿಂದ ಶ್ರವಣಪಠನ ಮಾಡುವವರಿಗೆ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀಪತಿಯಾದ ಜಗನ್ನಾಥ ವಿಠಲನು ಸುಪ್ರೀತನಾಗಿ ಅವರ ಧರ್ಮ, ಕಾಮಾದಿ ೪ವಿಧ ಪುರುಷಾರ್ಥಗಳನ್ನು ಪೂರೈಸಿ ಅವರವರ ಯೋಗ್ಯತಾನುಸಾರವಾಗಿ ಹೃದಯಾಕಾಶದಲ್ಲಿ ತೋರಿಕೊಳ್ಳುವನು, ಅಂದರೆ ಅಪರೋಕ್ಷದಲ್ಲಿ ಪರಮಾತ್ಮನನ್ನು ಕಾಣುವರೆಂದರ್ಥ.

ಇಂತೀ ಭಾವಪ್ರಕಾಶಿಕೆಯಲ್ಲಿ ಬೃಹತ್ತಾರತಮ್ಯವೆಂಬ ೨೧ನೆಯ ಸಂಧಿಯು ಸಮಾಪ್ತಮಾದುದು.

**॥ ಶ್ರೀಕೃಷ್ಣಾರ್ಪಣಮಸ್ತು ॥**



## ಭಕ್ತಾಪರಾಧಸಹಿಷ್ಣುಸಂಧಿ.



### ಸಂಧಿ ೨೨.

ಈ ಸಂಧಿಯಲ್ಲಿ ಶ್ರೀ ಪರಮಾತ್ಮನು ತನ್ನ ಭಕ್ತರು ಅಕಸ್ಮಾತ್ತಾಗಿ ಹೀನ ಕರ್ಮಗಳನ್ನು ಮಾಡಿದರೂ ಸಹ ಅವುಗಳನ್ನು ಕ್ಷಮಿಸಿ ಅವರಿಗೆ ಪುಣ್ಯಫಲವನ್ನೆ ಕೊಡುವನೆಂದು ಸದೃಷ್ಟಾಂತವಾಗಿ ಹೇಳುತ್ತಾರೆ.

ಮೊದಲನೆಯ ಪದ್ಯದಿಂದ ಪರಮಾತ್ಮನು ಪರಮ ದಯಾಸಮುದ್ರ ನೆಂದು ಹೇಳುತ್ತಾರೆ.

**ಶ್ರೀಲಕುಮಿವಲ್ಲಭಗೆ ಸಮಕರು**
**ಣಾಳುಗಳನಾಕಾಣೆನೆಲ್ಲಿ ಕು**
**ಚೇಲನವಲಿಗೆ ಮೆಚ್ಚಿ ಕೊಟ್ಟನು ಸಕಲಸಂಪದವಾ ||**
**ಕೇಳಿ ನಾಕ್ಷಣ ವಸ್ತ್ರಗಳ ಪಾಂ**
**ಚಾಲಿಗಿತ್ತನು ದೈತ್ಯನುದರವ**
**ಸೀಳಿಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ ||೧||**

ಪದ್ಯಾರ್ಥ--ಶ್ರೀಲಕುಮಿವಲ್ಲಭಗೆ=ಶ್ರೀಲಕ್ಷ್ಮೀಪತಿಯಾದ ನಾರಾಯಣನಿಗೆ, ಸಮ=ಸಮರಾದ, ಕರುಣಾಳುಗಳ, ಎಲ್ಲಿ=ಯಾವ ಲೋಕದಲ್ಲೂ ನಾ=ನಾನು, ಕಾಣೆ=ಕಾಣೆನು, ಕುಚೇಲನ=ಸುಧಾಮನೆಂಬ ಬ್ರಾಹ್ಮಣನ ಅವಲಿಗೆ=ಅವಲಕ್ಕಿಗೆ, ಮೆಚ್ಚಿ, ಸಕಲ ಸಂಪದವ ಕೊಟ್ಟನು. ಕೇಳಿದಾಕ್ಷಣ=, ದ್ರೌಪದಿಯ ಆರ್ತಧ್ವನಿಯನ್ನು ಕೇಳಿದ ತಕ್ಷಣದಲ್ಲಿ, ಪಾಂಚಾಲಿಗೆ=ದ್ರೌಪದಿ ದೇವಿಯರಿಗೆ, ವಸ್ತ್ರಗಳ=ಅಪರಿಮಿತವಾದ ವಸ್ತ್ರಗಳನ್ನು ಇತ್ತನು; ದೈತ್ಯನ=ಹಿರಣ್ಯಕಶಿಪನನ್ನು ಸೀಳಿ, ಕೃಪಾಸಾಂದ್ರ=ಕರುಣಾಳುವಾದ ಶ್ರೀ ಹರಿಯು, ಪ್ರಹ್ಲಾದನ, ಸಂತೈಸಿದನು.

ತಾತ್ಪರ್ಯ.—ಕರುಣಾಸಮುದ್ರನೆಂದರೆ ಶ್ರೀಲಕ್ಷ್ಮೀಪತಿಯಾದ ಪರಮಾತ್ಮನೊಬ್ಬನಲ್ಲದೆ, ಅವನಿಗೆ ಸಮರಾದವರು ಮತ್ತಾರು ಜಗತ್ತಿನಲ್ಲೀ ಇಲ್ಲವು. ಅಂತಹಾ ಕಾರುಣ್ಯವನ್ನು ಯಾರಲ್ಲಿ ತೋರಿಸಿರುವನೆಂದರೆ, ಕುಚೇಲನೆಂಬ ಬ್ರಾಹ್ಮಣನು ತಂದಿದ್ದ ೪ ಮುಷ್ಟಿ ಅವಲಕ್ಕಿಯಲ್ಲಿ ಒಂದು ಮುಷ್ಟಿ ಅವಲಕ್ಕಿಯನ್ನು ತೆಗದುಕ್ಕೊಂಡು ಅವನಿಗೆ ಐಹಿಕದಲ್ಲಿ ಮಹದೈಶ್ವರ್ಯವನ್ನೂ ಪರಲೋಕದಲ್ಲಿ ಮುಕ್ತಿಯನ್ನೂ ಕೊಟ್ಟನು. ದ್ರೌಪದಿಯು ಸಭೆಯಲ್ಲಿ ದುಃಶಾಸನನು ತನ್ನ ವಸ್ತ್ರವನ್ನು ಸುಲಿಯುತ್ತಿರುವಾಗ, "ಹಾ ಕೃಷ್ಣ ದ್ವಾರಕಾವಾಸಿ" ಎಂದು ಶ್ರೀ ಕೃಷ್ಣನನ್ನು ಪ್ರಾರ್ಥಿಸಿದ ಕೂಡಲೆ, ವಸ್ತ್ರವನ್ನು ಅಕ್ಷಯವನ್ನಾಗಿ ಮಾಡಿದನು. ಹಿರಣ್ಯಕಶಿಪನು ತನ್ನ ಮಗನಾದ ಪ್ರಹ್ಲಾದನನ್ನು ಕೊಲ್ಲುವುದಕ್ಕೆ ಸಿದ್ಧನಾಗಲು, ಪರಮಾತ್ಮನು ನರಸಿಂಹಾವತಾರ ಮಾಡಿ ಹಿರಣ್ಯನನ್ನು ಶೀಳಿ ಪ್ರಹ್ಲಾದನನ್ನು ರಕ್ಷಿಸಿದನು. ಆದುದರಿಂದ ಪರಮಾತ್ಮನು ಕೃಪಾಸಾಂದ್ರನೆಂದರು.

ಅವತಾರಿಕೆ.—ಪರಮಾತ್ಮನನ್ನು ಭಜಿಸಿ ಅವನ ಅನುಗ್ರಹಕ್ಕೆ ಪಾತ್ರನಾದರೆ ಇಹಪರಂಗಳಲ್ಲಿ ಸುಖ ಉಂಟು. ಇಲ್ಲವಾದರೆ ಎಂದಿಗೂ ಸುಖವಿಲ್ಲವೆಂದು ಅನುಭವವನ್ನು ತೋರಿಸುತ್ತಾರೆ.

**ದೇವಶರ್ಮಾಹ್ವಯಕುಟುಂಬಕೆ**
**ಜೀವನೋಪಾಯವನು ಕಾಣದೆ**
**ದೇದೇವಶರಣ್ಯ ರಕ್ಷಿಸುರಕ್ಷಿಸೆನೆ ಕೇಳಿ॥**
**ತಾನೊಲಿದುಪಾಲಿಸಿದ ಸೌಖ್ಯ ಕೃ**
**ಪಾವಲೋಕನದಿಂದೆ ಈತನ**
**ಸೇವಿಸದೆ ಸೌಖ್ಯಗಳ ಬಯಸುವರಲ್ಪಮಾನವರು ॥೨॥**

ಪದ್ಯಾರ್ಥ.—ದೇವಶರ್ಮಾಹ್ವಯ=ದೇವಶರ್ಮನೆಂಬ ಬ್ರಾಹ್ಮಣನು, ಕುಟುಂಬಕೆ=ತನ್ನ ಕುಟುಂಬಕ್ಕೆ, ಜೀವನೋಪಾಯವನು ಕಾಣದೆ, ದೇವದೇವ! ಶರಣ್ಯ! ರಕ್ಷಿಸು! ರಕ್ಷಿಸು ಎನೆ, ಎಂದು ಪ್ರಾರ್ಥಿಸಲು ಕೇಳಿ=ಶ್ರೀ ಶ್ರೀನಿವಾಸನು ಕೇಳಿ, ತಾನೊಲಿದು ಕೃಪಾವಲೋಕನದಿಂದ, ಕರುಣಾದೃಷ್ಟಿಯಿಂದ, ಸೌಖ್ಯಪಾಲಿಸಿದ ಐಶ್ವರ್ಯಾದಿಗಳಿಂದ ಸೌಖ್ಯವನ್ನಿತ್ತನು. ಅಲ್ಪಮಾನವರು, ಈತನ=ಈ ಶ್ರೀನಿವಾಸನನ್ನು ಸೇವಿಸದೆ ಸೌಖ್ಯಗಳ ಬಯಸುವರು.

ತಾತ್ಪರ್ಯ.—ದೇವಶರ್ಮನೆಂಬ ಬ್ರಾಹ್ಮಣನು ತನ್ನ ಹೆಂಡರು ಮಕ್ಕಳು ಮೊದಲಾದವರನ್ನು ಪೋಷಿಸಲು ಮಾರ್ಗವಿಲ್ಲದೆ ದಾರಿದ್ರ್ಯಾವಸ್ಥೆಯಿಂದ ಕಷ್ಟಪಡುತ್ತಾ ಶ್ರೀನಿವಾಸ ದೇವರನ್ನು ಕುರಿತು ಸ್ತೋತ್ರಮಾಡಲು ಶ್ರೀನಿವಾಸನು ಪ್ರಸನ್ನನಾಗಿ ವರವನ್ನು ಕೊಟ್ಟನು. ಆದಿತ್ಯಪುರಾಣ ವೇಂಕಟೇಶ ಮಹಾತ್ಮ್ಯದಲ್ಲಿ ಈ ಕಥೆಯನ್ನು ಹೇಳಿರುವರು. ವರವನ್ನು ಕೊಟ್ಟ ಪ್ರಕಾರ ಆದಿತ್ಯ ಪುರಾಣದಲ್ಲಿ " ಶ್ರೀನಿವಾಸ ಉವಾಚ ‖ ಪ್ರೀತೋಹಂತೇ ದ್ವಿಜಶ್ರೇಷ್ಟ ಮದುಪಾಸನಕರ್ಮಣಾ ‖ ಮಹದೈಶ್ವರ್ಯ ಸಂಸಿದ್ಧಿ ಕಾರಣಂ ಸ್ತೋತ್ರ ಮುತ್ತಮಂ ‖ ಕೃತವಾನಸಿಯಸ್ಮಾತ್ತ್ವಂ ನಾಭೈಷ್ಯಾತ್ರ ಪರತ್ರಚ‖ ವಿಪನ್ನಾಶಃ ಸಂಪದಾಪ್ತಿರ್ಭೂಯಾತ್ತೇ ಮದನುಗ್ರಹಾತ್ ‖ ಮಮಭಕ್ತಸ್ಯತೇಗೇಹೇ ಸ್ವರ್ಣವೃಷ್ಟಿರ್ದಿನೇದಿನೇ‖ " ಶ್ರೀನಿವಾಸನು ದೇವಶರ್ಮನನ್ನು ನೋಡಿ ಹೇಳಿದುದೇನೆಂದರೆ :—ಎಲೈ ಬ್ರಾಹ್ಮಣ ಶ್ರೇಷ್ಟ ! ನೀನು ಮಾಡಿದ ನನ್ನ ಉಪಾಸನೆ ರೂಪವಾದ ಸ್ತೋತ್ರದಿಂದ ನಾನು ಸಂತುಷ್ಟನಾದೆನು. ಮಹದೈಶ್ವರ್ಯ ಪ್ರಾಪ್ತಿಯಾಗುವುದಕ್ಕೆ ಯೋಗ್ಯವಾದ ಉತ್ತಮವಾದ ಸ್ತೋತ್ರವನ್ನು ನೀನು ಮಾಡಿರುವೆ ; ಆದುದರಿಂದ ನೀನು ಇಹದಲ್ಲೂ ಪರದಲ್ಲೂ ಸಹ ಭಯ ಪಡಬೇಕಾದುದು ಇಲ್ಲ. ನನ್ನ ಅನುಗ್ರಹದಿಂದ ನಿನ್ನ ವಿಪತ್ತು ಪರಿಹಾರವಾಗುವುದು. ಮಹದೈಶ್ವರ್ಯವೂ ಪ್ರಾಪ್ತಿಯಾಗುವುದು. ನನ್ನ ಭಕ್ತನಾದ ನಿನ್ನ ಮನೆಯಲ್ಲಿ ಪ್ರತಿ ದಿವಸದಲ್ಲೂ ಭಂಗಾರದ ಮಳೆಗರೆಯುವುದು ಎಂದು ವರವನ್ನಿತ್ತನು ಎಂದು ಹೇಳಿರುವರು. " ಸುಖಮಿಚ್ಛಂತಿಯೇ ಮೂಢಾಃ ನೇಚ್ಛಂತಿ ಸುಖಕಾರಣಂ" ಎಂಬ ವಾಕ್ಯದಂತೆ ಎಲ್ಲರಿಗೂ ಸುಖ ಮಾತ್ರ ಬೇಕು. ಏನು ಮಾಡಿದರೆ ಸುಖ ಪ್ರಾಪ್ತಿಯಾಗುವುದೋ ಅದರ ಕಾರಣ ಮಾತ್ರ ಯಾರಿಗೂ ಬೇಡ ; ಅಲ್ಪ ಮನುಷ್ಯರಾದವರು ಪರಮಾತ್ಮನನ್ನು ಸೇವಿಸದೇ ಸುಖವನ್ನು ಮಾತ್ರ ಬೇಡುವರು. ಅದು ಎಂದಿಗೂ ಲಭ್ಯವಾಗದೆಂಬ ತಾತ್ಪರ್ಯ

ಅವತಾರಿಕೆ.—ಭಕ್ತಜನರ ದೋಷಗಳನ್ನು ಲಕ್ಷೀಕರಿಸದೆ ಅವರನ್ನುದ್ಧರಿಸುವನೆಂದು ಹೇಳುತ್ತಾರೆ.

**ಶ್ರೀನಿವಾಸನಪೋಲ್ವ ಕರುಣಿಗ
ಳೀನಳಿನಜಾಂಡದೊಳುಕಾಣೆ ಪ್ರ
ವೀಣರಾದವರರಸಿನೋಳ್ಪುದು ಶ್ರುತಿಪುರಾಣದೊಳು ॥
ದ್ರೋಣಭೀಷ್ಮ ಕೃಪಾದಿಗಳುಕುರು
ಸೇನೆಯೊಳಗಿರಲವರವಗುಣಗ
ಳೀನುನೋಡದೆಪಾಲಿಸಿದಪರಮಾತ್ಮ ಪರಗತಿಯ ॥೩॥**

ಪದ್ಯಾರ್ಥ.—ಶ್ರೀನಿವಾಸನಪೋಲ್ವ=ಶ್ರೀನಿವಾಸದೇವರಿಗೆ ಸಮಾನರೆಂದು ಹೋಲಿಸಲು ಯೋಗ್ಯರಾದ, ಕರುಣಿಗಳ=ಕರುಣಾಳುಗಳನ್ನು, ಈನಳಿನಜಾಂಡದೊಳು=ಈ ಬ್ರಹ್ಮಾಂಡದೊಳಗೆ, ಕಾಣೆ=ನಾಕಾಣೆನು, ಪ್ರವೀಣರಾದವರು=ಜ್ಞಾನಿಗಳಾದವರು, ಶ್ರುತಿಪುರಾಣದೊಳು, ಅರಶಿನೋಳ್ಪುದು=ಹುಡುಕಿ ನೋಡಬಹುದು. ದ್ರೋಣ ಭೀಷ್ಮಕೃಪಾದಿಗಳು, ಕುರುಸೇನೆಯೊಳಗಿರಲು, ಅವರ ಅವಗುಣಗಳನು, ನೋಡದೆ=ಲಕ್ಷೀಕರಿಸದೆ, ಪರಮಾತ್ಮ= ಶ್ರೀಪರಮಾತ್ಮನು, ಪರಗತಿಯ=ಪರಲೋಕದಲ್ಲಿ ಉತ್ತಮಗತಿಯನ್ನು ಪಾಲಿಸಿದ=ಕೊಟ್ಟನ.

ತಾತ್ಪರ್ಯ.—ಶ್ರೀ ಶ್ರೀನಿವಾಸನಂತೆ ಕರುಣಾಸಮುದ್ರರು ಈ ಬ್ರಹ್ಮಾಂಡದೊಳಗೆ ಎಲ್ಲಿ ಹುಡುಕಿದರೂ ನನಗೆ ದೊರಕರು. ಜ್ಞಾನಿಗಳಾದವರು ಈ ವಿಷಯದಲ್ಲಿ ಸಂಶಯವಿದ್ದರೆ ಶ್ರುತಿಗಳನ್ನೂ ಪುರಾಣಗಳನ್ನೂ ಚೆನ್ನಾಗಿ ಪರಿಶೀಲನೆ ಮಾಡಿ ನೋಡಬಹುದು. ದ್ರೋಣಾಚಾರ್ಯರು ಭೀಷ್ಮಾಚಾರ್ಯರು, ಕೃಪಾಚಾರ್ಯರು ಮೊದಲಾದವರು ಶ್ರೀಕೃಷ್ಣನಿಗೆ ವಿರೋಧಪಕ್ಷೀಯರಾದ ಕೌರವ ಸೈನ್ಯದೊಳಗೆ ಸೇರಿ ಪಾಂಡವರ ಸಂಗಡ ಯುದ್ಧವನ್ನು ಮಾಡಿದರು. ಹಾಗಿದ್ದರೂ ಅವರ ಅವಗುಣಗಳನ್ನೆಣಿಸದೆ ಅವರೆಲ್ಲರಿಗೂ ಉತ್ತಮ ಗತಿಯನ್ನು ಕೊಟ್ಟಿರುವನು.

ಅವತಾರಿಕೆ.—ಮತ್ತೇನು ಮಾಡಿದನೆಂದರೆ :—

**ಚಂಡವಿಕ್ರಮ ಚಕ್ರಶಂಖವ
ತೋಂಡಮಾನನೃ ಪಾಲಗಿತ್ತನು
ಭಾಂಡಕಾರಕ ಭೀಮನನೃದಾಭರಣಗಳಿಗೊಲಿದ ॥
ಮಂಡೆಯೊಡದಾಕಾಶರಾಯನ
ಹೆಂಡತಿಯನುಡಿಕೇಳಿ ಮಗಳಿಗೆ
ಗಂಡನೆನಿಸಿದ ಗಹನಮಹಿಮ ಗದಾಬ್ಜಧರಪಾಣಿ ॥೪॥**

ಪದ್ಯಾರ್ಥ.—ಚಂಡವಿಕ್ರಮ–ಪ್ರಚಂಡವಾದ ಪರಾಕ್ರಮವುಳ್ಳ ಶ್ರೀ ಶ್ರೀನಿವಾಸನು, ಚಕ್ರಶಂಖವ–ಚಕ್ರವನ್ನೂ ಶಂಖವನ್ನೂ, ತೋಂಡಮಾನ ನೃಪಾಲಗೆ=ತೋಂಡಮಾನ ರಾಜನಿಗೆ, ಇತ್ತನು=ಕೊಟ್ಟನು. ಭಾಂಡಕಾರಕ ಭೀಮನ=ಭೀಮನೆಂಬ ಕುಂಬಾರನ, ಮೃದಾಭರಣಗಳಿಗೆ, ಒಲಿದ–ಮಣ್ಣಿನ ಆಭರಣಗಳಿಗೆ ಮೆಚ್ಚಿದ, ಗಹನಮಹಿಮ–ತಿಳಿಯಲಶಕ್ಯವಾದ ಮಹಿಮೆಯುಳ್ಳ. ಗದಾಬ್ಜಧರಪಾಣಿ=ಗದಾಪದ್ಮಗಳನ್ನು ಮಾತ್ರ ಕೈಗಳಲ್ಲಿ ಧರಿಸಿರುವ, ಮಂಡೆಯೊಡದ=ಒಡೆಸಿಕೊಳ್ಳಲ್ಪಟ್ಟ ಮಂಡೆಯುಳ್ಳ ಶ್ರೀ ಶ್ರೀನಿವಾಸನು, ಹೆಂಡತಿಯ=ರಾಮಾವತಾರದಲ್ಲಿ ತನಗೆ ಹೆಂಡತಿಯಾದ ಸೀತಾದೇವಿಯ ನುಡಿಕೇಳಿ, ಆಕಾಶರಾಜನ ಮಗಳಿಗೆ, ಗಂಡನೆನಿಸಿದ–ಪತಿ ಎನಿಸಿದನು.

ತಾತ್ಪರ್ಯ.—ತೋಂಡಮಾನರಾಜನ ಭಕ್ತಿಗೆ ಮೆಚ್ಚಿ ತನ್ನ ಶಂಖ ಚಕ್ರವನ್ನು ಅವನಿಗೆ ಕೊಟ್ಟನು. ಗದಾಪದ್ಮಗಳನ್ನು ಮಾತ್ರ ತಾನು ಧರಿಸಿರುವನು. ಭೀಮನೆಂಬ ಕುಂಬಾರನ ಭಕ್ತಿಗೆ ಮೆಚ್ಚಿ ಅವನು ಸಮರ್ಪಿಸಿದ ಮಣ್ಣಿನ ತುಳಸೀ ದಳಗಳನ್ನು ಸ್ವೀಕರಿಸಿದನು. ಚೋಳರಾಜನ ದನಗಳನ್ನು ಕಾಯುತ್ತಿರುವ ಗೋಪಾಲನು, ಗೋರೂಪಿಯಾದ ಬ್ರಹ್ಮದೇವರು ಶ್ರೀನಿವಾಸನಿಗೆ ಕ್ಷೀರಾಭಿಷೇಕ ಮಾಡುತ್ತಿರುವುದನ್ನು ಸಹಿಸದೆ ಗೊಡ್ಲಿಯಿಂದ ಗೋವನ್ನು ಹೊಡೆಯಲು, ಗೋರಕ್ಷಣೆಗೋಸ್ಕರ ತನ್ನ ತಲೆಯನ್ನು ಒಡೆದುಕೊಂಡನು ರಾಮಾವತಾರದಲ್ಲಿ ಸೀತೆಗೆ ಪ್ರತಿನಿಧಿಯಾಗಿ ವೇದವತಿ ಎಂಬಾಕೆಯು ಸೀತೆಯ ರೂಪದಿಂದ ಒಂದು ವರ್ಷ ರಾವಣನ ಮನೆಯಲ್ಲಿ ಕಷ್ಟಪಟ್ಟುದುದರಿಂದ ಈ ವೇದವತಿಯನ್ನು ಮದುವೆ ಮಾಡಿಕೊಳ್ಳಬೇಕೆಂದು ಸೀತೆಯು ಬೇಡಲು, ಈ ಅವತಾರದಲ್ಲಿ ನಾನು ಏಕಪತ್ನಿಯ ವ್ರತವನ್ನು ಧರಿಸಿರುವೆನು, ಕೃಷ್ಣಾವತಾರದಲ್ಲಿ ಈಕೆಯನ್ನು ಮದುವೆ ಮಾಡಿಕೊಳ್ಳುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದನು. ಹೆಂಡತಿಯಾದ ಸೀತಾದೇವಿಗೆ ಕೊಟ್ಟ ವಾಕ್ಯವನ್ನು ಸತ್ಯ ಮಾಡುವುದಕ್ಕಾಗಿ ಆಕಾಶರಾಜನ ಮಗಳನ್ನು ಮದುವೆಯಾದನು. ಆಕಾಶರಾಜನ ಮಗಳಾದ ಪದ್ಮಾವತಿಯೇ ವೇದವತೀ ಎಂಬ ತಾತ್ಪರ್ಯ. ಈ ಕಥೆ ಎಲ್ಲವೂ ಭವಿಷ್ಯೋತ್ತರ ಪುರಾಣ ವೇಂಕಟೇಶವ ಹಾತ್ಮ್ಯೆಯಲ್ಲಿ ವಿಸ್ತಾರವಾಗಿ ಹೇಳಿರುವರು. ಅಲ್ಲಿನ ಕಥೆಯನ್ನು ದಾಸಾರ್ಯರು ಸಂಕೋಚದಿಂದ ಇಲ್ಲಿ ಸೂಚಿಸಿರುವರು.

ಅವತಾರಿಕೆ.—ಶ್ರೀಹರಿಯ ಕಾರುಣ್ಯವನ್ನೇ ಮತ್ತೂ ವಿವರಿಸುತ್ತಾರೆ

ಗೌತುಮನನಿಜಪತ್ನಿಯನುಪುರು
ಹೂತನೈದಿರೆಕಾಯ್ದು ವೃತ್ರನ
ಘಾತಿಸಿದಪಾಪವನು ನಾಲ್ಕು ವಿಭಾಗವಮಾಡಿದನು ||
ಶಾತಕುಂಭಾತ್ಮಕ ಕಿರೀಟವ
ಕೈತವದಿ ಕದ್ದೊಯ್ದ ಯಿಂದ್ರಾ
ರಾತಿಬಾಗಿಲಕಾಯ್ದ ಭಕ್ತತ್ವೇನ ಸ್ವೀಕರಿಸಿ ||೫||

ಪದ್ಯಾರ್ಥ.—ಗೌತುಮನ ನಿಜಪತ್ನಿಯನು = ಗೌತುಮರ ಹೆಂಡತಿಯಾದ ಅಹಲ್ಯೆಯನ್ನು, ಪುರುಹೂತನು-ದೇವೇಂದ್ರನು, ಯ್ಯೆದಿರ=ಪರಿಗ್ರಹಿಸಿ ಇರಲು, ಕಾಯ್ದು=ಆ ಪಾಪದ ದೆಶೆಯಿಂದ ಇಂದ್ರನನ್ನು ರಕ್ಷಿಸಿ ವೃತ್ರನ-ವೃತ್ರಾಸುರನನ್ನು, ಘಾತಿಸಿದ=ಕೊಂದ ಪಾಪವನ್ನು, ನಾಲ್ಕು ವಿಭಾಗ ಮಾಡಿದನು=ಭೂಮಿ, ವೃಕ್ಷ, ಉದಕ, ಸ್ತ್ರೀಯರು ಈ ೪ ಸ್ಥಳಗಳಲ್ಲಿ ವಿಭಾಗಿಸಿ ಇಟ್ಟು ಇಂದ್ರನನ್ನು ಪಾಪರಹಿತನನ್ನಾಗಿ ಮಾಡಿದನು. ಶಾತಕುಂಭಾತ್ಮಕ-ಭಂಗಾರಮಯವಾದ, ಕಿರೀಟವ=ಶ್ವೇತದ್ವೀಪದಲ್ಲಿ ಶ್ರೀಮನ್ನಾರಾಯಣದೇವರು ಧರಿಸಿದ್ದ ಕಿರೀಟವನ್ನು, ಕೈತವದಿ=ಕಳ್ಳತನದಿಂದ, ಕದ್ದೊಯ್ದ=ಅಪಹರಿಸಿಕೊಂಡು ಹೋದ, ಇಂದ್ರಾರಾತಿ=ಇಂದ್ರನ ಶತೃವಾದ ಬಲಿಚಕ್ರವರ್ತಿಯನ್ನು, ಭಕ್ತತ್ವೇನ ಸ್ವೀಕರಿಸಿ=ಆವನನ್ನು ಭಕ್ತನೆಂದು ಅಂಗೀಕರಿಸಿ, ಬಾಗಿಲಕಾಯ್ದ=ಅವನ ಮನೆಯ ದ್ವಾರಪಾಲಕನಾದನು.

ತಾತ್ಪರ್ಯ—ದೇವೇಂದ್ರನು ಗೌತುಮರ ಪತ್ನಿಯಾದ ಅಹಲ್ಯೆಯನ್ನು ಗೌತುಮರ ವೇಷದಿಂದ ವಂಚಿಸಿ ಆಕೆಯನ್ನು ಪರಿಗ್ರಹಿಸಿದ ದೊಡ್ಡಪಾಪದಿಂದ ಇಂದ್ರನನ್ನು ರಕ್ಷಿಸಿದನು. ಮತ್ತೂ ದೇವೇಂದ್ರನು ವೃತ್ರಾಸುರನನ್ನು ಕೊಂದು ಬ್ರಹ್ಮಹತ್ಯೆಯನ್ನು ಅನುಭವಿಸುವಾಗ “ಭೂಮ್ಯಂಬುದ್ರುಮಯೋಷಿದ್ಭ್ಯಃ ಚತುರ್ಧಾವ್ಯಭಜದ್ಧರಿಃ” ಎಂಬ ಭಾಗವತ ವಾಕ್ಯಾನುಸಾರ. ಬ್ರಹ್ಮಹತ್ಯೆಯನ್ನು ನಾಲ್ಕು ಭಾಗ ಮಾಡಿ ಭೂಮಿಯಲ್ಲಿ ಒಂದು ಭಾಗವನ್ನು, ಉದಕದಲ್ಲಿ ಒಂದು ಭಾಗವನ್ನು, ವೃಕ್ಷಗಳಲ್ಲಿ ಒಂದು ಭಾಗವನ್ನು, ಸ್ತ್ರೀಯರಲ್ಲಿ ಒಂದು ಭಾಗವನ್ನು ಇಟ್ಟು ಇಂದ್ರನನ್ನು ಪಾಪ ಮುಕ್ತನನ್ನಾಗಿ ಮಾಡಿದನು. ಈ ನಾಲ್ಕು ಸ್ಥಳಗಳಲ್ಲಿ ಈಗಲೂ ಬ್ರಹ್ಮಹತ್ಯೆ

ಯು ೪ ಪ್ರಕಾರವಾಗಿ ತೋರುವುದು. ಅದು ಹೇಗೆಂದರೆ :—"ಈರಣಂ ಬ್ರಹ್ಮಹತ್ಯಾಯ ರೂಪಂ ಭೂಮೌಪ್ರದೃಶ್ಯತೆ" ಸೌಳುಮಣ್ಣು ರೂಪವಾಗಿ ಭೂಮಿಯಲ್ಲಿ ಬ್ರಹ್ಮಹತ್ಯೆಯು ತೋರುವುದು. ನೀರಿನಲ್ಲಿ ಒಂದು ಭಾಗ ಬ್ರಹ್ಮಹತ್ಯೆ ಇರುವದು. "ತಾಸು ಬುದ್ಬುದಫೇನಾಭ್ಯಾಂ ದೃಷ್ಟಂತದ್ಧರಿ ಕಿಲ್ಬಿಷಂ" ನೀರಿನಲ್ಲಿ ನೊರೆಗಳು, (ಬುರುಗು) ಏಳುವುದು, ಈ ರೂಪದಿಂದ ಬ್ರಹ್ಯಹತ್ಯೆಯ ಭಾಗವು ಕಾಣುವುದು. ವೃಕ್ಷಗಳಲ್ಲಿ ಒಂದು ಭಾಗ ಬ್ರಹ್ಮ ಹತ್ಯೆ ಇರುವುದು. "ತೇಷಾಂನಿರ್ಯಾಸರೂಪೇಣ ಬ್ರಹ್ಮಹತ್ಯಾ ಪ್ರದೃ ಶ್ಯತೆ" ಅವುಗಳಲ್ಲಿ ಗೋಂದು (ಬಂಕೆ) ರೂಪವಾಗಿ ಬ್ರಹ್ಮಹತ್ಯೆಯು ಕಾ ಣುವುದು. ಸ್ತ್ರೀಯರಲ್ಲಿ ಒಂದು ಭಾಗ ಬ್ರಹ್ಮಹತ್ಯೆಯು ಕಾಣುವುದು "ರಜೋರೂಪೇಣ ತಾಸ್ವಂದೋ ಮಾಸಮಾಸ ಪ್ರದೃಶ್ಯತೆ" ತಿಂಗಳಿಗೊ ಮ್ಮೆ ರಜಸ್ವಲೆಯ ರೂಪವಾಗಿ ಬ್ರಹ್ಮಹತ್ಯೆಯು ತೋರುವುದು ಎಂದ ಭಾಗವತ ಷಷ್ಟ ಸ್ಕಂಧದಲ್ಲಿ ವಿವರ ಮಾಡಿರುವರು. ಇಂದ್ರ ಶತ್ರುವಾದ ಬಲಿಚಕ್ರವರ್ತಿಯು ಪರಮಾತ್ಮನ ಕಿರೀಟವನ್ನು ಕಳ್ಳತನದಿಂದ ಅಪಹರಿಸಿ ದನು. ಇದು ಎಲ್ಲಿಯ ಕಥೆ ಎಂದರೆ ; ಭಾಗವತ ದಶಮಸ್ಕಂಧದಲ್ಲಿ ವಿಸ್ತಾ ರವಾಗಿ ಹೇಳಿರುವರು. ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಸಂಕೋಚ ವಾಗಿ ಹೇಳಿರುವರು. ಅದೆಂತೆನೆ :—ಮಹಾಭಾರತ ತಾತ್ಪರ್ಯ ನಿರ್ಣಯ ೧೬ನೆಯ ಅಧ್ಯಾಯದಲ್ಲಿ "ತದಾದುಗ್ಧಾಬ್ಧೌ ಸಂಸ್ಥಿತಿಸ್ಥೈಃ ಸುರಾದ್ಯೈಃ ಪೂಜಾ ಆಪ್ತುಂ ಸ್ಥಾನಮೇಷಾಂಚ ಯೋಗ್ಯಂ॥ ಮುಕ್ತಸ್ಥಾನಾದಾಪ ನಾ ರಾಯಣೋಜೋ ಬಲಿಶ್ಚಾಗಾತ್ತತ್ರ ಸಂದ್ರಷ್ಟುಮೀಶಂ ॥೪॥ ತತ್ರಾಸುರಾ ವೇಶಮುಮುಷ್ಯವಿಷ್ಣುಃ ಸಂದರ್ಶಯನ್ ಸುಪ್ತಿಹೀನೋಪಿ ನಿತ್ಯಂ॥ ಸಂಸು ಪ್ತವಚ್ಛೇಶ್ಯ ಉದಾರಕರ್ಮಾಸಂಜ್ಞಾಯೈ ದೇವಾನಾಂ ಮುಖಮೀಕ್ಷ್ಯಾ ಪ್ರ ಮೇಯಃ ॥೫॥ ದೇವಾಶ್ಚ ತದ್ಭಾವವಿದೋಖಿಲಾಶ್ಚ ನಿಮೀಲಿತಾಕ್ಷಾಃ ಶಯ ನೇಷುಶಿಃ ಶ್ಯಿರೆ॥ ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟಮಾದಾಯಗಾಜ್ಜಹ ಸುಸ್ಸರ್ವದೇವಾಃ ॥೬॥ ನಾರಾಯಣೇಸರ್ವದೇವೈಃ ಸಮೇತೇ ಬ್ರಹ್ಮಾದಿಭಿ ರ್ಹಾಸಮಾನೇಸುಪರ್ಣಃ॥ ಗತ್ವಾಪಾತಾಲಂಯುಧಿ ಜಿತ್ವಾಬಲಿಂ ಚ ಕಿರೀಟ ಮಾದಾಯಾಭ್ಯಯಾದ್ಯತ್ರಕೃಷ್ಣಃ ॥ ೭ ॥" ಶ್ರೀಕೃಷ್ಣನು ಜರಾಸಂಧ ನೊಂದಿಗೆ ೧೭ ಸಲ ಯುದ್ಧವನ್ನು ಮಾಡಿ ಜಯಿಸಿ ೧೮ನೆಯ ಸಲ ಅವನಿಗೆ ಜಯವನ್ನು ಕೊಡಿಸುವ ಉದ್ದೇಶವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಬಲಾ

ಧ್ಯರಾದ ಶತ್ರುಗಳು ಹೆಚ್ಚಿದಾಗ ತಾವು ಊರನ್ನು ಬಿಟ್ಟು ದುರ್ಗಾದಿಗಳನ್ನು ಸೇರುವುದು ನೀತಿಶಾಸ್ತ್ರ ಸಮ್ಮತವೆಂದು ತೋರ್ಪಡಿಸುತ್ತಾ ೧೮ನೆಯ ಸಲ ಯುದ್ಧಾರಂಭಕ್ಕೆ ಮುಂಚಿತವಾಗಿ ದುರ್ಗವನ್ನು ನೋಡುವುದಕ್ಕಾಗಿ ಗೋಮಂತ ಪರ್ವತಕ್ಕೆ ಹೋಗಿದ್ದನು. ಆ ಸಮಯದಲ್ಲಿ ಮುಕ್ತ ಸ್ಥಾನದಲ್ಲಿರುವ ಶ್ರೀನಾರಾಯಣನು ಅಮುಕ್ತರಾದ ಬ್ರಹ್ಮಾದಿ ದೇವತೆಗಳು ತನ್ನನ್ನು ಸೇವಿಸಲು ಮುಕ್ತಸ್ಥಾನದಲ್ಲಿ ಪ್ರವೇಶವಿಲ್ಲದುದರಿಂದ ಅವರುಗಳಿಂದ ಸೇವೆ ತೆಗೆದುಕೊಳ್ಳುವ ಉದ್ದೇಶವಾಗಿ ಕ್ಷೀರಸಮುದ್ರ ಮಧ್ಯದಲ್ಲಿರುವ ಶ್ವೇತದ್ವೀಪಕ್ಕೆ ಬಂದಿದ್ದನು. ಪರಮಾತ್ಮನನ್ನು ನೋಡುವುದಕ್ಕಾಗಿ ಅಲ್ಲಿಗೆ ದೇವತೆಗಳೆಲ್ಲರು ಬಂದಿದ್ದರು. ಬಲಿಚಕ್ರವರ್ತಿಯೂ ಸಹಾ ಅದೇ ಕಾಲದಲ್ಲಿ ಶ್ರೀನಾರಾಯಣನನ್ನು ಸೇವಿಸುವ ನಿಮಿತ್ತದಿಂದ ಬಂದನು. ಅವನಲ್ಲಿ ಅಸುರಾವೇಶವಿರುವುದನ್ನು ಜನರಿಗೆ ತೋರ್ಪಡಿಸುವ ನಿಮಿತ್ತ ಶ್ರೀಪರಮಾತ್ಮನು ದೇವತೆಗಳನ್ನು ಮಲಗಿಕೊಳ್ಳುವಂತೆ ಸಂಕೇತಮಾಡಿ ಎಂದಿಗೂ ನಿದ್ರೆ ಇಲ್ಲದವನಾದರೂ, ತಾನೂ ಮಲಗಿಕೊಂಡು ನಿದ್ರೆ ಮಾಡುವವನಂತೆ ತೋರಿಸನು. ಬಲಿಚಕ್ರವರ್ತಿಯು ಅಲ್ಲಿಗೆ ಬಂದು ಎಲ್ಲರೂ ಮಲಗಿ ನಿದ್ರೆಮಾಡುತ್ತಿರುವುದನ್ನು ಕಂಡು ಅಸುರಾವೇಶದಿಂದ ಪರಮಾತ್ಮನ ತಲೆಯಮೇಲಿರುವ ಅದ್ಭುತವಾದ ಕಿರೀಟವನ್ನು ಮೆಲ್ಲಗೆ ತೆಗೆದು ವಸ್ತ್ರದಲ್ಲಿ ಸುತ್ತಿಕೊಂಡು ಹೊರಟುಹೋದನು ಆಗ ದೇವತೆಗಳು ಮತ್ತು ಪರಮಾತ್ಮನೂ ಸಹ ಅವನ ಕಳ್ಳತನದ ಬುದ್ಧಿಯನ್ನು ಕಂಡು ನಗುತ್ತಿದ್ದರು. ಆ ಸಮಯದಲ್ಲಿ ಗರುಡನು ಬಲಿಚಕ್ರವರ್ತಿಯನ್ನು ಅನುಸರಿಸಿ ಹಿಂದೆಯೇ ಸುತಳ ಲೋಕಕ್ಕೆ ಹೋಗಿ ಅವನನ್ನು ಜಯಿಸಿ ಕಿರೀಟವನ್ನು ತೆಗದುಕೊಂಡು ಬರುವಾಗ ಗೋಮಂತ ಪರ್ವತದ ಮೇಲೆ ನಿಂತಿದ್ದ ಶ್ರೀಕೃಷ್ಣನ ತಲೆಯ ಮೇಲೆ ಆ ಕಿರೀಟವನ್ನಿಟ್ಟು ನಮಸ್ಕರಿಸಿದನೆಂದು ಹೇಳಿರುವರು. ಆ ಅಭಿಪ್ರಾಯವನ್ನೆ ದಾಸಾರ್ಯರು ಇಲ್ಲಿ ಹೇಳಿರುವರು. ಇಂತಹಾ ಅಪರಾಧವನ್ನು ಬಲಿಚಕ್ರವರ್ತಿಯು ಮಾಡಿದ್ದರೂ ವಾಮನ ರೂಪದಿಂದ ಅವನ ಮನೆ ಬಾಗಿಲು ಕಾಯುತ್ತಾ ಅವನನ್ನು ಅದ್ಯಾಪಿ ರಕ್ಷಿಸುತ್ತಿರುವನು, ಆದುದರಿಂದಲೆ ಇಂತಹಾ ಕರುಣಾಳುಗಳನ್ನು ಜಗತ್ತಿನಲ್ಲಿ ನಾ ಕಾಣೆನೆಂದು ದಾಸಾರ್ಯರು ಹೇಳಿರುವರು.

ಅವತಾರಿಕೆ.—ಮತ್ತೂ ಅವನ ಕಾರುಣ್ಯವನ್ನೇ ಪ್ರಕಟಿಸುತ್ತಾರೆ.

ನಾರನೆಂದವ್ರಜದ ಸ್ತ್ರೀಯರ
ಜಾರಕರ್ಮಕೆ ವಲಿಯುತಜ ಸುತು
ವಾರನೆನಿಸಿದ ನಂದಗೋಪಗೆ ನಳಿನಭವಜನಕ ॥
ವೈರವರ್ಜಿತ ದೈತ್ಯರನು ಸಂ
ಹಾರವಮಾಡಿದ ವಿಪಗಮನ ಪೆಗ
ಲೇರಿದನು ಗೋಪಾಲಕರ ವೃಂದಾವನದೊಳಂದು ॥೬॥

ಪದ್ಯಾರ್ಥ.—ನಾರ=ಅರ ಅಂದರೆ ದೋಷವೆಂದರ್ಥ, ನಾರ ಅಂದರೆ [illegible] ದರ್ಥ. ದೋಷರಹಿತನೆಂಬ ತಾತ್ಪರ್ಯ. ಇಂತಹಾ ಶ್ರೀ [illegible], ನಂದವ್ರಜದಸ್ತ್ರೀಯರ-ನಂದಗೋಕುಲದಲ್ಲಿ ವಾಸಮಾಡು [illegible] ಗೋಪಿಕಾಸ್ತ್ರೀಯರ, ಜಾರಕರ್ಮಕೆ ವಲಿಯುತ=ತನ್ನನ್ನು ಜಾರ ನೆಂ[illegible] ಭಾವಿಸಿ ಭಕ್ತಿಯಿಂದ ಸೇವಿಸಿದುದಕ್ಕಾಗಿ ಅವರಿಗೆ ಪ್ರಸನ್ನನಾದನು [illegible] ಉತ್ಪತ್ತಿ ಶೂನ್ಯನಾದರೂ, ನಳಿನಭವಜನಕ=ಪದ್ಮಸಂಭವ ಜನಕ ಪದ್ಮಸಂಭವನಾದ ಬ್ರಹ್ಮದೇವರ ತಂದೆಯಾದರೂ, ನಂದಗೋಪಗೆ -ನಂದಗೋಪನಿಗೆ, ಸುತನೆನಿಸಿದ-ಅವನ ಮಗನೆಂದು ಪ್ರಸಿದ್ಧನಾದನು. ವೈರವರ್ಜಿತ=ದೈತ್ಯರಲ್ಲಿ ತನಗೆ ದ್ವೇಷವಿಲ್ಲದಿದ್ದರೂ, ದೈತ್ಯರನ್ನು ಸಂಹಾರಮಾಡಿದ-ಕೇವಲ ದೇವತೆಗಳ ರಕ್ಷಣೆಗಾಗಿ ದೈತ್ಯರನ್ನು ಕೊಂದನು. ವಿಪಗಮನ=ಸ್ವಯಂ ಗರುಡವಾಹನನಾದರೂ, ವೃಂದಾವನದೊಳು, ಅಂದು=ಹಿಂದಕ್ಕೊಂದು ದಿವಸ, ಗೋಪಾಲಕರ ಪೆಗಲೇರಿದ = ಗೋಪಾಲಕರ ಹೆಗಲೇರಿದನು.

ತಾತ್ಪರ್ಯ.—ತಾನು ದೋಷರಹಿತನು, ಆದರೂ ತನ್ನನ್ನು ಜಾರ ನೆಂದು ಉಪಾಸನೆ ಮಾಡುತ್ತಿರುವ, ನಂದಗೋಕುಲ ನಿವಾಸಿಗಳಾದ ಗೋಪಿಕಾಸ್ತ್ರೀಯರಿಗೊಲಿದು ಅಂಗಸಂಗವನ್ನಿತ್ತು ಪರಲೋಕದಲ್ಲಿ ದಿವ್ಯಗತಿಯನ್ನಿತ್ತನು. ಬ್ರಹ್ಮದೇವರ ತಂದೆಯಾದರೂ, ತನಗೆ ಹುಟ್ಟುವಿಕೆ ಮೊದಲಾದವು ಇಲ್ಲದಿದ್ದರೂ, ನಂದಗೋಪನ ಮಗನೆನಿಸಿದನು. ತನಗೆ ದೈತ್ಯರಲ್ಲಿ ದ್ವೇಷವಿಲ್ಲದಿದ್ದರೂ, ದೇವ ಬ್ರಾಹ್ಮಣರ ಉದ್ಧಾರಕ್ಕಾಗಿ ದೈತ್ಯರನ್ನು ಕೊಂದನು. ತಾನು ಗರುಡವಾಹನನು, ಆದರೂ ತಾನು ಬಾಲಲೀಲೆಯನ್ನು ತೋರಿಸುತ್ತಾ ಕುದುರೆಯ ಆಟದ ನಿಮಿತ್ತದಿಂದ ಶ್ರೀದಾಮನೆಂಬ ಗೋಪಾಲನ ಹೆಗಲೇರಿ ಭಾಂಡೀರಕವೆಂಬ ವಟವೃಕ್ಷದ ಬುಡದಲ್ಲಿ ವಿಹರಿಸಿದನು.

"ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ" ಎಂಬ ಭಾಗವತ ದಶಮ ಸ್ಕಂಧದ ವಾಕ್ಯದ ವ್ಯಾಖ್ಯಾನದಲ್ಲಿ "ಶ್ರೀದಾಮಾಪರಾಜಿತಃ ಸನ್ ಕೃಷ್ಣಮುವಾಹ" ಎಂದು ಅರ್ಥಮಾಡಿರುವರು, ಅಂದರೆ ಮೂಲದಲ್ಲಿ ಶ್ರೀಕೃಷ್ಣನು ಪರಾಜಿತನಾಗಿ ಶ್ರೀದಾಮನನ್ನು ಹೊತ್ತನೆಂದು ಅರ್ಥವಾಗುವುದು, ಆ ವಾಕ್ಯವು ಹರಿವಂಶಾದಿಗಳಿಗೆ ವಿರೋಧವಾಗುವುದು, ಅದಕ್ಕಾಗಿ "ಬಹುಮಾನವಿರೋಧೇತು ವ್ಯತ್ಯಾಸಃ ಶಬ್ದತೋರ್ಥತಃ" ಎಂಬ ಭಾಗವತ ತಾತ್ಪರ್ಯಾನುಸಾರವಾಗಿ, ಮಹಾಗ್ರಂಥಗಳಿಗೆ ವಿರೋಧ ಬಂದಾಗ ಶಬ್ದದಿಂದಲೂ, ಅರ್ಥದಿಂದಲೂ ವ್ಯತ್ಯಾಸವಾಗಿ ಅರ್ಥವನ್ನು ಹೇಳಬೇಕೆಂಬ ಆಧಾರದ ಮೇಲೆ ಶ್ರೀಧಾಮನು ಕೃಷ್ಣನನ್ನು ಹೊತ್ತನೆಂದು ಅರ್ಥಮಾಡಿರುವರು. ಅದೇ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ಹೇಳಿರುವರು.

ಶ್ರೀಕರಾರ್ಚಿತ ಪಾದಪಲ್ಲವ
ಗೋಕುಲದ ಗೊಲ್ಲತಿಯರೊಲಿಸಿದ
ಪಾಕಶಾಸನ ಪೂಜ್ಯ ಗೋಗೋವತ್ಸಗಳ ಕಾಯ್ದ ॥
ನೀ (ಓ) ಕರಿಸಿ ಕುರುಪತಿಯ ಭೋಜನ
ಸ್ವೀಕರಿಸಿದನು ವಿದುರನೌತನ
ಬಾಕುಲಿಕನಂದದಲಿ ತೋರಿದ ಭಕ್ತವತ್ಸಲನೂ ॥೭॥

ಪದ್ಯಾರ್ಥ:—ಶ್ರೀ=ಲಕ್ಷ್ಮೀದೇವಿಯರ, ಕರ-ಕೈಗಳಿಂದ, ಅರ್ಚಿತ-ಪೂಜಿತವಾದ, ಪಾದಪಲ್ಲವ=ಕೋಮಲವಾದ ಪಾದಗಳುಳ್ಳ ಶ್ರೀಪರಮಾತ್ಮನು, ಗೋಕುಲದ ಗೊಲ್ಲತಿಯರನ್ನು, ಒಲಿಸಿದ=ಭಕ್ತಿಗೆ ಮೆಚ್ಚಿದನು: ಪಾಕಶಾಸನಪೂಜ್ಯ=ಇಂದ್ರನಿಂದ ಪೂಜ್ಯನಾದ ಹರಿಯು, ಗೋಗೋವತ್ಸಗಳಕಾಯ್ದ=ಗೋವುಗಳನ್ನು ಕರುಗಳನ್ನು ಮೇಯಿಸಿದನು, ಕುರುಪತಿಯ=ಮಹಾರಾಜನಾದ ದುರ್ಯೋಧನನ, ಭೋಜನ=ಮಿಷ್ಟಾನ್ನವನ್ನು, ನೀಕರಿಸಿ-ಧಿಕ್ಕರಿಸಿ (ತಿರಸ್ಕಾರಮಾಡಿ) ವಿದುರನ=ಬಡವನಾದ ವಿದುರನ, ಔತನ=ಔತನವನ್ನು, ಸ್ವೀಕರಿಸಿದನು-ಅವನ ಮನೆಯಲ್ಲಿ ಭೋಜನವನ್ನು ಮಾಡಿದನು, ಭಕ್ತವತ್ಸಲನು=ಭಕ್ತರಲ್ಲಿ ವಾತ್ಸಲ್ಯ ಉಳ್ಳ ಶ್ರೀಹರಿಯು, ಬಾಕುಳಿಕನಂದದಲಿ=ಪಾಂಡವರ ದೂತನಂತೆ, ತೋರಿದ=ತೋರಿದನು:

ತಾತ್ಪರ್ಯ:-ಶ್ರೀಪರಮಾತ್ಮನು ಭಕ್ತವತ್ಸಲನು (ಭಕ್ತಜನಪ್ರಿಯನು)

ಎಂದು ತೋರಿಸುತ್ತಾರೆ. ಸ್ವಯಂ ಲಕ್ಷ್ಮೀದೇವಿಯರಿಂದ ಪೂಜಿತವಾದ ಕ ಮಲ ಉಳ್ಳವನು. ಅಲ್ಪರಾದ ಗೊಲ್ಲಜಾತಿಯುವರಾದ ಗೋಪಿಕಾಸ್ತ್ರೀಯರ ಭಕ್ತಿಗೆ ಮೆಚ್ಚಿ ಅವರಿಗೆ ಅಂಗಸಂಗವನ್ನಿತ್ತನು. ದೇವೇಂದ್ರ ಮೊದಲಾದ ವರಿಂದ ಪೂಜ್ಯನಾಗಿದ್ದರೂ ಗೋಪಾಲಕರ ಪ್ರೀತಿಗೋಸುಗ ಹಸುಗಳನ್ನೂ ಕರುಗಳನ್ನೂ ಕಾಯ್ದನು. ಪಾಂಡವರಿಗೂ ದುರ್ಯೋಧನಾದಿಗಳಿಗೂ ಸಂಧಿ ಮಾಡಿಸುವ ನಿಮಿತ್ತದಿಂದ ಪಾಂಡವರ ದೂತನೆನಿಸಿ ದುರ್ಯೋಧನನ ಮನೆಗೆ ಬರಲು ಅವನು ಶ್ರೀಕೃಷ್ಣನಿಗೋಸ್ಕರ ಮಿಷ್ಟಾನ್ನವನ್ನು ಸಿದ್ಧಪಡಿಸಿ ಭೋ ಜನಕ್ಕೆ ಕರೆಯಲು, "ದ್ವಿಷದನ್ನಂ ನಭೋಕ್ತವ್ಯಂ ದ್ವಿಷಂತಂ ನೈವಭೋಜ ಯೇತ್ ।" ದ್ವೇಷಿಗಳ ಮನೆಯಲ್ಲಿ ಭೋಜನವನ್ನು ಮಾಡಬಾರದು, ದ್ವೇ ಷಿಗಳನ್ನು ಭೋಜನಕ್ಕೆ ಕರೆದು ಅವರಿಗೆ ಭೋಜನವನ್ನು ಮಾಡಿಸಲೂ ಬಾ ರದು. ನೀನು ಪಾಂಡವರನ್ನು ದ್ವೇಷಿಸುತ್ತಿರುವೆ. ಪಾಂಡವರು ನನ್ನ ಬಂ ಧುಗಳು (ಭಕ್ತರು) ಅವರ ದ್ವೇಷವೇ ನನ್ನ ದ್ವೇಷವು ಮತ್ತು ನೀನು ಭೋಜ ನಕ್ಕೆ ಮಾತ್ರ ಕರೆಯುವೆ! ಆದಾಗೂ ನನ್ನಲ್ಲಿ ಪ್ರೀತಿಯಿಂದ ಆದರಪೂರ್ವಕ ವಾಗಿ ಕರೆಯುವವನಲ್ಲ. ಡಂಭಕ್ಕೆ ಕರೆಯುವೆ. ಲೋಕದಲ್ಲಿ ಒಬ್ಬರ ಮನೆಗೆ ಮತ್ತೊಬ್ಬರು ಭೋಜನಕ್ಕೆ ಬರಬೇಕಾದರೆ ಎರಡು ವಿಧ ಕಾರಣದಿಂದ ಬರು ವರು. ಪ್ರೀತಿಯಿಂದ ಆದರಿಸಿ ಕರೆದರೆ ಅವರ ಮನೆಗೆ ಬರುವುದುಂಟು. ಅಥವಾ ಪರಮಾಪದ್ಗತರಾಗಿ ಪರಸ್ಥಳಕ್ಕೆ ಬಂದು ಅನ್ನ ದೊರಕದ ಕಾಲದಲ್ಲಿ ಒಬ್ಬರ ಮನೆಗೆ ಅನ್ನಕ್ಕೆ ಹೋಗುವುದುಂಟು. ಅಂತಹಾ ಎರಡು ಸಂಭವ ವೂ ನನಗಿಲ್ಲ. "ನಚಸಂಪ್ರೀಯಸೇ ರಾಜನ್, ನಚೈವಾಪದ್ಗತಾವಯಂ" ನನಗೆ ನಿನ್ನಲ್ಲಿ ಪ್ರೀತಿಯೂ ಇಲ್ಲ, ಅನ್ನಕ್ಕಿಲ್ಲದೆ ನಿನ್ನ ಮನೆಗೆ ಬರಬೇಕಾದ ಆ ಪತ್ತು ಎಂದಿಗೂ ನನಗಿಲ್ಲ. ಆದ್ದರಿಂದ ನಿನ್ನ ಮನೆಯಲ್ಲಿ ನಾನು ಭೋಜನ ಮಾಡುವುದಿಲ್ಲವೆಂದು ಹೇಳಿ ವಿದುರನ ಮನೆಯಲ್ಲಿ ತನ್ನೊಂದಿಗೆ ಬಂದಿದ್ದ ಬ್ರಾಹ್ಮಣರಿಂದ ಕೂಡಿ ಭೋಜನಮಾಡಿದನೆಂದು ಭಾರತ ಉದ್ಯೋಗಪರ್ವ ದಲ್ಲೂ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲೂ ಸಹ ಹೇಳಿರುವರು. ಆ ಅ ಭಿಪ್ರಾಯವನ್ನು ದಾಸಾರ್ಯರು ಇಲ್ಲಿ ಸೂಚಿಸಿರುತ್ತಾರೆ. ಪರಮಾತ್ಮನು ಬ್ರಹ್ಮಾದಿ ವಂದಿತನಾಗಿ ಪಾಂಡವರ ದೂತನೆಂದೆನಿಸಿದನು. ಆದ್ದರಿಂದ ಭ ಕ್ತವತ್ಸಲನೆಂಬ ಬಿರುದು ಪರಮಾತ್ಮನಿಗೆ ಸಲ್ಲುವುದೆಂಬ ತಾತ್ಪರ್ಯ.

**ಪುತ್ರನೆನಿಸಿದ ಗೋಪಿದೇವಿಗೆ (ನಂದಗೋಪಗೆ)**
**ಭರ್ತೃವೆನಿಸಿದ ವ್ರಜದನಾರಿಯ**
**ರುತ್ರ (ಕ್ತಿ) ಲಾಲಿಸಿ ಪರ್ವತವನೆಗಹಿದ ಕೃಪಾಸಾಂದ್ರ ।**
**ಶತ್ರುತಾಪನು ಯಜ್ಞಪುರುಷನ**
**ಪುತ್ರಿಯರ ತಂದಾಳ್ದ ತ್ರಿಜಗ**
**ದ್ಧಾತ್ರ ಮಂಗಳಗಾತ್ರ ಪರಮಪವಿತ್ರ ಸುರಮಿತ್ರ ॥೮॥**

ಪದ್ಯಾರ್ಥ:— ಗೋಪಿದೇವಿಗೆ=ಯಶೋದಾದೇವಿಗೆ, ( ಪಾಠಾಂತರ ನಂದಗೋಪಗೆ ) ಪುತ್ರನೆನಿಸಿದ=ಮಗನೆಂದು ಪ್ರಸಿದ್ಧನಾದನು. ವ್ರಜದನಾರಿಯರ=ಗೋಪಿಕಾ ಸ್ತ್ರೀಯರ, ಉಕ್ತಿ ಲಾಲಿಸಿ=ಪ್ರಾರ್ಥನೆಯನ್ನು ಲಾಲಿಸಿ, ಭರ್ತೃವೆನಿಸಿದ=ಪತಿ ಎನಿಸಿದನು, ಕೃಪಾಸಾಂದ್ರ=ಕರುಣಾಳುವಾದ ಶ್ರೀಹರಿಯು, ಪರ್ವತವ=ಗೋವರ್ಧನಬೆಟ್ಟವನ್ನು, ನೆಗಹಿದ=ಎತ್ತಿದನು, ಶತ್ರುತಾಪನು=ಶತ್ರುವಿಗೆ ಅತಿ ತಾಪವನ್ನುಂಟುಮಾಡುವ ಶ್ರೀಕೃಷ್ಣನು, ಯಜ್ಞಪುರುಷನ=ಅಗ್ನಿದೇವರ ಪುತ್ರಿಯರ ಮಕ್ಕಳಾದ ೧೬ ಸಾವಿರದ ನೂರು ಮಂಗಿ ಸ್ತ್ರೀಯರನ್ನು, ತಂದು–ನರಕಾಸುರನ ಮನೆಯಲ್ಲಿದ್ದವರನ್ನು ತಂದು, ಆಳ್ದ ಅವರಿಗೆ ಪತಿಯಾಗಿ ಕಾಪಾಡಿದನು, ತ್ರಿಜಗದ್ಧಾತ್ರ=ಕೇವಲ ಅಗ್ನಿ ಪುತ್ರಿಯರನ್ನು ಮಾತ್ರ ಕಾಪಾಡಿದನಂತಲ್ಲ. ಮೂರು ಲೋಕವನ್ನೂ ಸಂರಕ್ಷಿಸುವನು, ಮಂಗಳಗಾತ್ರ=ಪರಮ ಮಂಗಳಕರವಾದ ದೇಹ ಉಳ್ಳವನು, ಪರಮಪವಿತ್ರನು, ಸುರಮಿತ್ರ=ದೇವತೆಗಳ ಸಖನು.

ತಾತ್ಪರ್ಯ.— ನಂದಗೋಪ ಯಶೋದೆಯರಿಗೆ ಲೋಕಪ್ರಖ್ಯಾತನಾದನು. ಗೋಪಿಕಾಸ್ತ್ರೀಯರಿಗೆ ಪತಿ ಎನಿಸಿದನು, ಅಥವಾ ನೀಲಾ ಎಂಬ ಗೋಪಕನ್ನಿಕೆಯ ಪತಿ ಎನಿಸಿದನು, ಯದ್ಯಪಿ ಈ ಪದ್ಯದಲ್ಲಿ ವ್ರಜದನಾರಿಯರುಕ್ತಿ ಲಾಲಿಸಿ ಭರ್ತೃವೆನಿಸಿದ ಎಂಬುವುದರಿಂದ ಗೋಪಿಕಾಸ್ತ್ರೀಯರ ಪ್ರಾರ್ಥನೆಯನ್ನು ಲಾಲಿಸಿ ಅವರಿಗೆ ಪತಿ ಎನಿಸಿದನೆಂದು ಅರ್ಥವು ತೋರುವದು, ಆದರೆ ಗೋಪಿಕಾಸ್ತ್ರೀಯರಿಗೆ ಪತಿಗಳು ಬೇರೆ ಇರುವುದರಿಂದ ಇವನನ್ನು ಜಾರನೆಂದು ಹೇಳಬಹುದೇ ಹೊರತು ಭರ್ತೃ ಎಂದಾಗಲಿ, ಪತಿ ಎಂದಾಗಲೀ ಹೇಳಲು ಸಾಧ್ಯವಲ್ಲ, ಏಕೆಂದರೆ, " ಭರಣಾದ್ಭರ್ತಾ ಪಾಲನಾತ್ಪತಿಃ " ಎಂಬ ನಿರ್ವಚನದಿಂದ ಮನೆಯಲ್ಲೇ ಇಟ್ಟುಕೊಂಡು

ಅನ್ನಾದಿಗಳನ್ನು ಕೊಟ್ಟು ಸಂರಕ್ಷಣೆ ಮಾಡುವವನು ಮಾತ್ರ ಭರ್ತೃ ಎಂತಲೂ ಪತಿ ಎಂತಲೂ ಎನಿಸುವನು. ಮುಖ್ಯ ತಾತ್ಪರ್ಯ ಯಾವಾಕೆಯನ್ನು ಮದುವೆ ಮಾಡಿಕೊಂಡನೋ ಆಕೆಗೆ ಪತಿ ಎಂದು ಹೇಳಬಹುದು. ಗೋಪಿಯರೆಲ್ಲರೂ ಮದುವೆಯಾದವರಲ್ಲ. ಆದ್ದರಿಂದ ಈ ಪದ್ಯದಲ್ಲಿರುವ "ಭರ್ತೃವೆನಿಸಿದ ವ್ರಜದನಾರಿಯರುಕ್ತಿಲಾಲಿಸಿ" ಎಂಬಲ್ಲಿ ರ-ಲ-ಳ ಈ ಅಕ್ಷರಗಳಿಗೆ ಭೇದವಿಲ್ಲೆಂದು ಭಾಗವತಾದಿಗಳಲ್ಲಿ "ತಪ್ರೋರರಾಟಂ" ಎಂಬ ವಾಕ್ಯದಿಂದ ಲಲಾಟ ಎಂಬ ವಾಕ್ಯಕ್ಕೆ ಬದಲು ರರಾಟವೆಂದು ಪ್ರಯೋಗ ಮಾಡಿರುವರು ಅವರಂತೆ ಇಲ್ಲೂ ನಾರಿಯರುಕ್ತಿ ಎಂಬಲ್ಲಿ ರು ಎಂಬಕ್ಷರಕ್ಕೆ ಳು ಎಂದು ಅರ್ಥ ಮಾಡಬಹುದು. ನಾರಿಯಳುಕ್ತಿ ಎಂದು ಪದ ಮಾಡುವುದರಿಂದ ವ್ರಜನಾರಿಯರ ಪೈಕಿ ಒಬ್ಬಳಿಗೆ ಪತಿಯಾಗಿರುವನೆಂದು ಅರ್ಥವು ದೊರಕುವದು. ಆ ಒಬ್ಬಾಕೆಯು ನೀಲಾ ಎಂಬ ಹೆಸರುಳ್ಳ ಗೋಪಕನ್ನಿಕೆಯೆಂದು ನಿರ್ಣಯಾದಿಗಳಲ್ಲಿ ಸಿದ್ಧ ಮಾಡಿರುವರು. ಮಹಾಭಾರತ ತಾತ್ಪರ್ಯ ನಿರ್ಣಯ ೧೩ ನೆಯ ಅಧ್ಯಾಯದಲ್ಲಿ "ಸಪ್ತೋಕ್ಷಣೋತಿಬಲವೀರ್ಯಯುತಾನದರ್ಮ್ಯಾ ಸರ್ವೇ ಗಿರೀಶವರತೋ ದಿತಿಜಪ್ರಧಾನಾಃ ॥ ಹತ್ವಾಸುತಾಮಲಭದಾಶು ವಿಭುರ್ಯಶೋದಾ ಭ್ರಾತುಃ ಸಕುಂಭಕಸಮಾಹ್ವಯಿನೋಪಿನೀಲಾಂ ॥೪೯॥ ಯಾ ಪೂರ್ವಜನ್ಮನಿ ತಪಃ ಪ್ರಥಮೈವಭಾರ್ಯಾಭೂಯಾಸಮಿತ್ಯಚರದಸ್ಯಹಿ ಸಂಗಮೋಮೇ ॥ ಸ್ಯಾತ್ಕೃಷ್ಣಜನ್ಮನಿ ಸಮಸ್ತವರಾಂಗನಾಭ್ಯಃ ಪೂರ್ವಂತ್ವಿತಿಸ್ಮ ತದಿಮಾಂ ಪ್ರಥಮಂ ಸ ಆಪ ॥೫೦॥ ಅಗ್ರೇದ್ವಿಜತ್ವತ ಉವಾವಹದೇವ ನೀಲಾಂ ಗೋಪಾಂಗನಾ ಅಪಿ ಪುರಾವರಮಾಪಿರೇ ಯತ್ ॥ ಸಂಸ್ಕಾರತಃ ಪ್ರಥಮಮೇವ ಸುಸಂಗಮೋನೋ ಭೂಯಾತ್ತವೇತಿ ಪರಮಾಪ್ಸರಸಃಪುರಾಯಾಃ॥೫೧॥ " ಈ ಶ್ಲೋಕಗಳ ಸಾರಾಂಶವೇನೆಂದರೆ, ಯಶೋದಾದೇವಿಗೆ ಅಣ್ಣನಾದ ಕುಂಭಕನೆಂಬ ಗೋಪಾಲಕನಿಗೆ ನೀಲಾ ಎಂಬ ಕನ್ನಿಕೆ ಇದ್ದಳು. ಆ ಕುಂಭಕನು ಆಕೆಯ ರೂಪ ಸೌಂದರ್ಯ ಗುಣಾತಿಶಯಗಳಿಗೆ ತಕ್ಕ ವರನನ್ನು ಪರೀಕ್ಷಿಸುವುದಕ್ಕಾಗಿ ಅಡವಿಯಲ್ಲಿ ಸ್ವೇಚ್ಛೆಯಾಗಿ ಮೇಯುತ್ತಿದ್ದ ಏಳುಹೋರಿಗಳನ್ನು ಹಿಡಿದು ಸ್ವಾಧೀನ ಮಾಡಿ ಕೊಡುವವನಿಗೆ ತನ್ನ ಮಗಳನ್ನು ಕೊಡುವುದಾಗಿ ಪ್ರಸಿದ್ಧಿ ಪಡಿಸಿದನು. ಆ ಏಳು ಹೋರಿಗಳು ಸಾಧಾರಣವಾದವುಗಳಲ್ಲ. ರುದ್ರ ದೇವರ ವರದಿಂದ ಅವಧ್ಯರಾದ ಮಹಾ ದೈತ್ಯರೇ

ಘೋಳಿಗಳ ರೂಪಗಳಿಂದ ಇದ್ದರು. ಅವುಗಳ ಇದಿರಿನಲ್ಲಿ ಯಾರೂ ನಿಲ್ಲುತ್ತಿರಲಿಲ್ಲ. ಅಂತಹಾ ಘೋಳಿಗಳನ್ನು ಹಿಡಿಯಲು ಯಾರಿಂದಲೂ ಸಾಧ್ಯವಾಗದಿರಲು ಶ್ರೀ ಕೃಷ್ಣನು ೬ ವರ್ಷದ ಪ್ರಾಯದಲ್ಲಿರುವಾಗಲೇ ಆ ಘೋಳಿಗಳನ್ನು ಹಿಡಿದು ಸಂಹಾರಮಾಡಿ ಆ ನೀಲೆ ಎಂಬ ಕನ್ನಿಕೆಯನ್ನು ಮದುವೆ ಮಾಡಿಕೊಂಡನು. ಈಕೆಯು ಪೂರ್ವ ಜನ್ಮದಲ್ಲಿ ತಪಸ್ಸು ಮಾಡಿ ನೀನು ಕೃಷ್ಣಾವತಾರದಲ್ಲಿ ಉಪನಯನವಾಗುವುದಕ್ಕೆ ಮುಂಚಿತವಾಗಿ, ಮತ್ತಾರನ್ನು ಮುಟ್ಟುವುದಕ್ಕೆ ಮುಂಚೆ ನನ್ನನ್ನು ಮದುವೆಯಾಗಬೇಕೆಂದು ವರ ಬೇಡಿದಳು. ಅದರಂತೆ ಪರಮಾತ್ಮನು ವರ ಕೊಟ್ಟಿದ್ದನು. ಅದನ್ನು ಸತ್ಯ ಮಾಡುವುದಕ್ಕಾಗಿ ಮೊದಲು ನೀಲೆಯನ್ನು ಮದುವೆ ಮಾಡಿಕೊಂಡನು. ಇದೇ ನೀಲೆಯು, ನಗ್ನಜಿದ್ರಾಜನ ಮಗಳಾಗಿ ಹುಟ್ಟಿ ಅಲ್ಲೂ ಇದೇ ರೀತಿಯಾಗಿ ಸ್ವಯಂವರದಲ್ಲಿ ಕೃಷ್ಣನಿಗೆ ಪತ್ನಿಯಾದಳು. ಅವಳ ಮದುವೆಯಾದ ಮೇಲೆ ಆ ನೀಲೆಯಲ್ಲಿ ಈ ನೀಲೆಯೂ ಸೇರಿ ಹೋದಳು. ಅಂತು ಕೃಷ್ಣನ ಅಷ್ಟ ಮಹಿಷಿಯರ ಪೈಕಿ ಪ್ರಸಿದ್ಧಿಯಾದ ನೀಳೆ ಎಂಬಾಕೆಯೇ ಗೋಪ ಕನ್ನಿಕೆ ಎಂದು ತಿಳಿಯಬೇಕು. ದೇವೇಂದ್ರನಿಗೆ ಅಹಂಕಾರ ಬಂದಿರಲು ಅದನ್ನು ಪರಿಹರಿಸುವುದಕ್ಕಾಗಿ ಇಂದ್ರಯಾಗವನ್ನು ಮಾಡುವುದಕ್ಕಾಗಿ ಪ್ರಯತ್ನ ಮಾಡುತ್ತಿದ್ದ ಗೋಪಾಲಕರನ್ನು ತಡೆದು, ಗಿರಿಯಜ್ಞವೆಂಬ ಬೆಟ್ಟಕ್ಕೆ ಬಲಿ ರೂಪವಾದ ಯಾಗವನ್ನು ಮಾಡಿಸಲು ಇಂದ್ರನು ಕೋಪದಿಂದ ಗೋಕುಲದ ನಾಶಕ್ಕಾಗಿ ಮಳೆ ಕರೆಯಲು ಗೋವರ್ಧನ ಪರ್ವತವನ್ನು ಕೊಡೆ ಮಾಡಿ ಗೋವುಗಳನ್ನೂ, ಗೋಪಾಲಕರನ್ನೂ ಸಂರಕ್ಷಿಸಿದನು. ಅಗ್ನಿದೇವರ ಮಕ್ಕಳಾದ ೧೬ಸಹಸ್ರದ ೧೦೦ಮಂದಿ ಋಷಿಗಳು ತಪಸ್ಸುಮಾಡಿ ಕೃಷ್ಣನ ಅಂಗಸಂಗಕ್ಕಾಗಿ ಅಪ್ಸರ ಸ್ತ್ರೀಯರಾಗಿ ಹುಟ್ಟಿ ಕೆಲವು ಕಾಲವಿದ್ದು ರಾಜ ಕನ್ನಿಕೆಯರಾಗಿ ಹುಟ್ಟಿ ನರಕಾಸುರನ ಕೈಸೇರಿ ಅವನ ಮನೆಯಲ್ಲಿ ಸೆರೆಯಲ್ಲಿದ್ದರು. ಕೃಷ್ಣನು ನರಕಾಸುರನನ್ನು ಕೊಂದು ಅವರನ್ನು ಮದುವೆ ಮಾಡಿಕೊಂಡನು. ಅದೇ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ಹೇಳಿದರು. ೧೬,೧೦೦ಮಂದಿ ಹೆಂಡತಿಯರನ್ನು ರಕ್ಷಿಸಿದನೆಂಬುವುದು ಆಶ್ಚರ್ಯವಲ್ಲವೆಂದು ತೋರಿಸುವುದಕ್ಕಾಗಿ ತ್ರಿಜಗದ್ಧಾತ್ರನೆಂದರು. ಮೂರು ಲೋಕವನ್ನೇ ಪಾಲಿಸುವವನಿಗೆ ೧೬ ಸಾವಿರ ಸಂಖ್ಯಾ ಉಳ್ಳವರನ್ನು ಪಾಲಿಸುವುದೇನಾಶ್ಚರ್ಯ?

ಉಪನಯನಕ್ಕೆ ಮುಂಚೆ ನೀಲೆಯನ್ನು ಮದುವೆಯಾದನೆಂತಲೂ ಗೋಪಿಕಾ ಸ್ತ್ರೀಯರಿಗೆ ಜಾರನಾದನೆಂತಲೂ ಹೇಳಿರುದರಿಂದ ಪರಮಾತ್ಮನಿಗೆ ದೋಷ ಸಂಭವ ಉಂಟೋ ಹೇಗೆ ಎಂಬ ಸಂಶಯವನ್ನು ಪರಿಹರಿಸುವುದಕ್ಕಾಗಿ, ಮಂಗಳಗಾತ್ರ ಪರಮಪವಿತ್ರ ಎಂದು ಹೇಳಿದರು. ಸುರಮಿತ್ರ ಎಂಬ ಪದದಿಂದ ದೇವತೆಗಳು ದೇವಸ್ತ್ರೀಯರು ಪರಮಾತ್ಮನಿಗೆ ಪ್ರಿಯರು, ಆದುದರಿಂದ ಗೋಪಕನ್ನಿಕೆಯರೆಲ್ಲರೂ ಅಪ್ಸರಸ್ತ್ರೀಯರಾದುದರಿಂದ ಅವರ ತಪಸ್ಸಿಗೆ ಮೆಚ್ಚಿ ಪೂರ್ವದಲ್ಲಿ ಅವರಿಗೆ ಕೊಟ್ಟ ವರವನ್ನು ಸತ್ಯಮಾಡುವುದಕ್ಕಾಗಿ ಬಾಲ್ಯದಲ್ಲೇ ಅವರನ್ನು ಪರಿಗ್ರಹಿಸಿದನೇ ಹೊರತು ತನ್ನ ಇಂದ್ರಿಯ ಪ್ರೀತಿಗಾಗಲ್ಲವೆಂದು ಸೂಚಿಸಿರುವರು.

**ರೂಪನಾಮವಿಹೀನ ಗರ್ಗಾ**
**ರೋಪಿತ ಸುನಾಮದಿ ಕರೆಸಿದ**
**ವ್ಯಾಪಕ ಪರಿಚ್ಛಿನ್ನರೂಪದಿತೋರ್ದ ಲೋಕರಿಗೆ ||**
**ದ್ವಾಪರಾಂತದಿ ದೈತ್ಯರನ ಸಂ**
**ತಾಪವಗೊಳಿಸುವೆನೆಂದು ಶ್ವೇತ**
**ದ್ವೀಪಮಂದಿರನವತರಿಸಿ ಸಲಹಿದನು ತನ್ನವರ　　||೨||**

ಪದ್ಯಾರ್ಥ.—ರೂಪನಾಮವಿಹೀನ=ಶ್ರೀ ಪರಮಾತ್ಮನು ಪ್ರಾಕೃತವಾದ ಪಾಂಚಭೌತಿಕ ಶರೀರ ಉಳ್ಳ ರೂಪವಿಲ್ಲದವನು. ಅಂತಹಾ ರೂಪವಿಲ್ಲದ ಮೇಲೆ ಅದಕ್ಕೆ ನಾಮವೆಲ್ಲಿಯದು ? ಆದ್ದರಿಂದ ಪ್ರಾಕೃತವಾದ ರೂಪ ನಾಮಗಳಿಲ್ಲವವನೆಂದರ್ಥ. ಹಾಗಿದ್ದರೂ ಕೃಷ್ಣಾದಿ ಅವತಾರಗಳಲ್ಲಿ ತನ್ನ ರೂಪಗಳನ್ನು ಪ್ರಾಕೃತರಾದ ಮನುಷ್ಯರಂತೆ ತೋರಿದನು. ಪ್ರಾಕೃತ ಹೆಸರಿಲ್ಲದವನಾದರೂ, ಗರ್ಗಾರೋಪಿತ=ಗರ್ಗಾಚಾರ್ಯರಿಂದ ಆರೋಪಿಸಲ್ಪಟ್ಟ ಸುನಾಮದಲಿ=ಉತ್ಕೃಷ್ಟವಾದ (ಅಪ್ರಾಕೃತವಾದ) ಕೃಷ್ಣನೆಂಬ ನಾಮದಿಂದ, ಕರೆಸಿದ=ಜನರಿಂದ ಕರೆಸಿಕೊಳ್ಳಲ್ಪಟ್ಟನು. ವ್ಯಾಪಕ=ಸರ್ವತ್ರ ವ್ಯಾಪ್ತನಾದರೂ, ಪರಿಚ್ಛಿನ್ನರೂಪದಿ=ಇವನೇ ಕೃಷ್ಣನು; ಮತ್ತಾರೂ ಅಲ್ಲ ಇವನು ಇಲ್ಲಿ ಇರುವನು. ಮತ್ತೆಲ್ಲಿಯೂ ಇಲ್ಲವೆಂದು ಇವನೊಬ್ಬನೆಂಬ ಪರಿಮಿತಿಯುಳ್ಳ ರೂಪದಿಂದ, ಲೋಕರಿಗೆ=ಜನರಿಗೆ, ತೋರ್ದ=ತೋರಿದನು. ದ್ವಾಪರಾಂತದಿ=ದ್ವಾಪರಯುಗದ ಅಂತ್ಯದಲ್ಲಿ, ದೈತ್ಯರನು ಸಂ

ತಾಪಗೊಳಿಸುವೆನೆಂದು=ಭೂಮಿಗೆ ಭಾರರಾದ ದೈತ್ಯ ರಾಜರನ್ನು ಸಂಹಾರ ರೂಪವಾದ ಸಂತಾಪವನ್ನು ಕೊಡಿಸುವೆನೆಂದು, ಶ್ವೇತದ್ವೀಪ ಮಂದಿರನು, ಶ್ವೇತದ್ವೀಪ ನಿವಾಸಿಯಾದ ಶ್ರೀನಾರಾಯಣನು, ಅವತರಿಸಿ=ಭೂಮಿಯಲ್ಲಿ ಕೃಷ್ಣನೆಂದವತರಿಸಿ, ತನ್ನವರ=ತನ್ನ ಭಕ್ತರಾದ ದೇವತೆಗಳು ದೇವಾಂಶರಾದ ಇತರರನ್ನು ಸಹ, ಸಲಹಿದನು=ಸಂರಕ್ಷಣೆ ಮಾಡಿದನು.

ತಾತ್ಪರ್ಯ.—ಶ್ರೀ ಪರಮಾತ್ಮನಿಗೆ ಸಾಮಾನ್ಯ ಮನುಷ್ಯರಂತೆ ಚಕ್ಷುರಾದಿ ಇಂದ್ರಿಯಗಳಿಂದ ಕೂಡಿದ ಪ್ರಾಕೃತವಾದ ಪಾಂಚಭೌತಿಕ ಶರೀರವಿಲ್ಲ. ಅಪ್ರಾಕೃತವಾದ=ಆನಂದಮಯವಾದ ಕರಚರಣಾದ್ಯವಯವಗಳಿಂದ ಕೂಡಿದ ಶರೀರವುಳ್ಳವನು. ಆನಂದ ಜ್ಞಾನಾದಿಸೂಚಕವಾದ ನಾಮ ಉಳ್ಳವನು. ಆದರೂ, ದೇವಕಾರ್ಯಕ್ಕಾಗಿ ಮನುಷ್ಯರಂತೆ ಅವತರಿಸಿ ಆಯಾ ಕುಲಾಚಾರ ಪ್ರಾಪ್ತಿಯಾದ ಹೆಸರನ್ನು ಪಡೆಯುವನು. ಅದರಂತೆಯೇ ಕೃಷ್ಣಾವತಾರದಲ್ಲಿ ಗರ್ಗಾಚಾರ್ಯರು ಮಾಡಿದ ನಾಮಕರಣದಿಂದ ಕೃಷ್ಣನೆಂದು ಪ್ರಖ್ಯಾತಿ ಪಡೆದನು. ಆ ಕೃಷ್ಣ ರೂಪವಾದರೂ ಅಪ್ರಾಕೃತವಾಮದೆ; ಕೃಷ್ಣನೆಂಬ ಹೆಸರಾದರೂ ಅಪ್ರಾಕೃತನಾದ ನಾರಾಯಣನ ನಾಮವೇ ಆಗಿರುವುದು. ಭಾರತ ಆದಿ ಮಂಗಳಾ ಚರಣದಲ್ಲಿ "ಕೃಷ್ಣೋ ಮುಕ್ತೈರಿಜ್ಯತೆವೀತಮೋಹೈಃ" ಮುಕ್ತರಿಂದಲೂ ಕೃಷ್ಣನು ಪೂಜಿತನಾಗುವನೆಂಬ ವಾಕ್ಯದಿಂದ ನಾರಾಯಣನಿಗೆ ಕೃಷ್ಣನೆಂದು "ಕೃಷ್ಣತಿ ದಾರಯತಿ ಪಾಪಾನೀತಿ ಕೃಷ್ಣಃ ಪಾಪಗಳನ್ನು ಶೀಳಿ ಬಿಡುವುನಾದುದರಿಂದ ಕೃಷ್ಣನೆಂದು ನಾರಾಯಣನಿಗೆ ಹೆಸರು, ಅದನ್ನೇ ಗರ್ಗಾಚಾರ್ಯರು ನಾಮಕರಣ ಮಾಡಿರುವರು. ಆದ್ದರಿಂದ ಪ್ರಾಕೃತ ರೂಪನಾಮಗಳಿಂದ ತೋರಿದನು. ಎಂಬ ತಾತ್ಪರ್ಯ. ಸರ್ವತ್ರ ವ್ಯಾಪ್ತನಾದರೂ, ಮನುಷ್ಯಾದಿ ಅವತಾರದಲ್ಲಿ ಪರಿಚ್ಛಿನ್ನನಾಗಿ ನಾಲ್ವರೊಳಗೆ ಒಬ್ಬನಾಗಿ ತೋರುವನು. ದ್ವಾಪರಾಂತ್ಯದಲ್ಲಿ ದೈತ್ಯರೆಲ್ಲರೂ ರಾಜರಾಗಿ ಹುಟ್ಟಿ ಭೂಮಿಗೆ ಭಾರವಾಗಿರಲು, ಶ್ರೀಹರಿಯು ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ದೈತ್ಯರ ಸಂಹಾರಕ್ಕೋಸ್ಕರ ಭೂಮಿಯಲ್ಲಿ ಕೃಷ್ಣಾವತಾರ ಮಾಡಿ ಕಂಸಾದಿಗಳನ್ನು ಸಂಹರಿಸಿ ದೇವ ಪಕ್ಷದವರನ್ನು ಸಂರಕ್ಷಿಸಿದನು.

ಶ್ರೀವಿರಿಂಚಾದ್ಯಮರನುತನಾ
ನಾವತಾರವ ಮಾಡಿಸಲಹಿದ
ದೇವತೆಗಳನು ಋಷಿಗಳನು ಕ್ಷಿತಿಪರನು ಮಾನವರ ||
ಸೇವೆಗಳ ಕೈಕೊಂಡು ಫಲಗಳ
ನೀವ ನಿತ್ಯಾನಂದ ಮಯನು
ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ||೧೦||

ಪದ್ಯಾರ್ಥ—ಶ್ರೀವಿರಿಂಚಾದ್ಯಮರನುತ=ಲಕ್ಷ್ಮೀದೇವಿಯರು, ಬ್ರಹ್ಮಾದಿ ದೇವತೆಗಳು ಇವರುಗಳಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟ ಶ್ರೀಮನ್ನಾರಾಯಣನು, ನಾನಾವತಾರಮಾಡಿ=ಮತ್ಸ್ಯ, ಕೂರ್ಮ, ವೇದವ್ಯಾಸ ಮೊದಲಾದ ನಾನಾವಿಧ ಅವತಾರಗಳನ್ನು ಮಾಡಿ, ದೇವತೆಗಳನ್ನೂ, ಕ್ಷಿತಿಪರನ್ನೂ=ರಾಜರುಗಳನ್ನೂ, ಋಷಿಗಳನ್ನೂ, ಮಾನವರ=ಮನುಷ್ಯರನ್ನೂ, ಸಲಹಿದ=ಸಂರಕ್ಷಣೆ ಮಾಡಿದನು. ನಿತ್ಯಾನಂದಮಯ=ನಿತ್ಯಾನಂದ ಸ್ವರೂಪನಾದರೂ, ಸೇವೆಗಳ ಕೈಕೊಂಡು=ಭಕ್ತರು ಮಾಡುವ ಸೇವೆಗಳನ್ನು ಸ್ವೀಕರಿಸಿ, ಫಲಗಳನೀವ=ಫಲಗಳನ್ನು ಕೊಡುವನು. ಸುಗ್ರೀವ, ಧ್ರುವ ಮೊದಲಾದ ಭಕ್ತರಿಗೆ, ಪುರುಷಾರ್ಥ=ಪುರುಷಾರ್ಥಗಳನ್ನು, ಇತ್ತ=ಕೊಟ್ಟನು.

ತಾತ್ಪರ್ಯ—ಲಕ್ಷ್ಮೀ ಬ್ರಹ್ಮಾದಿ ವಂದ್ಯನಾದ ಶ್ರೀಮನ್ನಾರಾಯಣನು ಮತ್ಸ್ಯಾದ್ಯನಂತಾವತಾರ ಮಾಡಿ, ಅಜಿತ, ವಾಮನ ಮೊದಲಾದ ಅವತಾರಗಳಿಂದ ದೇವತೆಗಳನ್ನೂ, ವ್ಯಾಸ ಕಪಿಲಾದಿ ರೂಪಗಳಿಂದ ಋಷಿಗಳನ್ನೂ, ಋಷಭಾದಿ ಅವತಾರಗಳಿಂದ ರಾಜರುಗಳನ್ನೂ, ರಾಮ ಕೃಷ್ಣಾದಿ ರೂಪಗಳಿಂದ ಮನುಷ್ಯರನ್ನು ಸಲಹಿದನೆಂಬ ತಾತ್ಪರ್ಯ. ಆಯಾ ಕಾಲೀನರಾದ ಜನರಿಂದ ಸಾಕ್ಷಾತ್ತಾಗಿಯೂ, ಇತರ ಕಾಲದಲ್ಲಿ ಪ್ರತಿಮಾದಿ ರೂಪಗಳಿಂದ ಇತರ ಜನರಿಂದಲೂ ಸೇವೆಗಳನ್ನು ಸ್ವೀಕರಿಸಿ, ಅಪರಪರಿಗೆ ಸುಗ್ರೀವ, ಧ್ರುವ ಮೊದಲಾದವರಿಗೆ ಕೊಟ್ಟಂತೆ ಪುರುಷಾರ್ಥಗಳನ್ನು ಕೊಡುವನೆಂಬ ತಾತ್ಪರ್ಯ.

ದುಷ್ಟದಾನವಸಂಹರಣ ಸರ್ವೋ
ತ್ಕೃಷ್ಟ ಸದ್ಗುಣಭರಿತ ಭಕ್ತಾ
ಭೀಷ್ಟದಾಯಕ ಭವವಿನಾಶಕ ವಿಗತಭಯಶೋಕ ||
ನಷ್ಟ ತುಷ್ಟಿಗಳಿಲ್ಲ ಸೃಷ್ಟ್ಯಾ
ದ್ಯಷ್ಟ ಕರ್ತನಿಗಾವ ಕಾಲದಿ
ಕೃಷ್ಣನಾಗುವ ಸ್ಮರಣೆಮಾತ್ರದಿ ಹೃದ್ಗುಹಾವಾಸಿ ||೧೧||

ಪದ್ಯಾರ್ಥ.—(ಶ್ರೀಪರಮಾತ್ಮನು) ದುಷ್ಟದಾನವಹರಣ=ದುಷ್ಟರಾದ ಕಂಸ, ಸೃಗಾಳ=ಪೌಂಡ್ರಕ, ವಾಸುದೇವ, ನರಕಾಸುರ ಮೊದಲಾದ ದಾನವರನ್ನು, ಸಂಹಾರ ಮಾಡಿದವನು, ಸರ್ವೋತ್ಕೃಷ್ಟ ಸದ್ಗುಣಭರಿತ=ಸರ್ವೋತ್ತಮನು, ಅಥವಾ ಸರ್ವೋತ್ತಮವಾದ ಉತ್ತಮ ಗುಣಗಳಿಂದ ಪೂರ್ಣನು. ಭಕ್ತಾಭಿಷ್ಟದಾಯಕ=ಭಕ್ತರ ಅಭೀಷ್ಟವನ್ನು ಪೂರೈಸುವವನು. ಭವವಿನಾಶಕ=ಸಂಸಾರವೆಂಬ ರೋಗವನ್ನು ನಾಶ ಮಾಡುವವನು, ವಿಗತಭಯಶೋಕ=ಯಾವ ಕಾಲದಲ್ಲೂ ಭಯವಾಗಲೀ, ದುಃಖಗಳಾಗಲಿ ಇಲ್ಲದವನು. ಸೃಷ್ಟ್ಯಾದ್ಯಷ್ಟಕರ್ತನಿಗೆ=ಸೃಷ್ಟಿ, ಸ್ಥಿತಿ ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ೮ ಕರ್ತೃತ್ವ ಉಳ್ಳ ಶ್ರೀಪರಮಾತ್ಮನಿಗೆ, ಅವಕಾಲದಲಿ=ಯಾವ ಕಾಲದಲ್ಲೂ, ನಷ್ಟತುಷ್ಟಿಗಳಿಲ್ಲ=ಆನಂದಾದಿಗಳಲ್ಲಿ ಕಮ್ಮಿಯಾಗುವುದಾಗಲಿ, ಹೆಚ್ಚಿಗಾಗುವುದಾಗಲಿ ಇಲ್ಲ. ಹೃದ್ಗುಹಾವಾಸೀ=ಎಲ್ಲರ ಹೃದಯಾಕಾಶದಲ್ಲಿ ವಾಸಮಾಡುತ್ತಿರುವ ಶ್ರೀಹರಿಯು, ಸ್ಮರಣೆಮಾತ್ರದಿ, ಹೃಷ್ಟನಾಗುವ=ಹರ್ಷಪಡುವನು. ಪ್ರಸನ್ನನಾಗುವನೆಂಬ ಭಾವ.

ತಾತ್ಪರ್ಯ.—ಶ್ರೀಪರಮಾತ್ಮನು ನಾನಾವತಾರಮಾಡಿದನೆಂದು ಪೂರ್ವಪದ್ಯದಲ್ಲಿ ಹೇಳಿದರು. ಇದರಿಂದ ನಮ್ಮಂತೆ ಪರಮಾತ್ಮನಿಗೂ ಬಲವಂತವಾಗಿ ಜನ್ಮಗಳು ಬರುವವೊ ಏನೊ ಎಂಬ ಸಂಶಯವನ್ನು ಪರಿಹರಿಸುವುದಕ್ಕಾಗಿ ದುಷ್ಟದಾನವಹರಣನೆಂದರು. ಒಂದೊಂದು ಅವತಾರದಲ್ಲೂ ಕೇವಲ ತನ್ನ ಪ್ರಯೋಜನಕ್ಕಾಗಿ ಕರ್ಮಾನುಸಾರವಾಗಿ ಹುಟ್ಟಿದನಂತಲ್ಲ. ಬ್ರಹ್ಮಾದಿಗಳಿಂದ ಪ್ರಾರ್ಥನೆ ಮಾಡಿಸಿಕೊಂಡು ದುಷ್ಟರಾದ ರಾವಣ, ಕಂಸ ಮೊದಲಾದವರ ನಿಗ್ರಹಕ್ಕಾಗಿ ತನ್ನ ಇಚ್ಛೆಯಿಂದ ಅವತಾರ ಮಾಡಿರುವನೆಂಬ ತಾತ್ಪರ್ಯ. ದೈತ್ಯರ ಸಂಹಾರ, ದೇವತೆಗಳ ರಕ್ಷಣೆ ಮಾಡಿದುದರಿಂದ ಪರಮಾತ್ಮನಿಗೆ ಮನುಷ್ಯರಂತೆ ವೈಷಮ್ಯಾದಿಗಳುಂಟೆಂಬ ಸಂಶಯವನ್ನು ಪರಿಹರಿಸುತ್ತಾ ಸರ್ವೋತ್ಕೃಷ್ಟ ಸದ್ಗುಣಭರಿತನೆಂದರು. ಸರ್ವೋತ್ತಮವಾದ ಗುಣಪೂರ್ಣನೆಂದಮೇಲೆ ವೈಷಮ್ಯಾದಿ ದೋಷಗಳಿಲ್ಲವೆಂದು ಪ್ರತ್ಯೇಕ ಹೇಳಬೇಕಾಗಿಲ್ಲವೆಂಬ ತಾತ್ಪರ್ಯ. ಹಾಗಾದರೆ ದೈತ್ಯರನ್ನೇಕೆ ಕೊಂದನೆಂದರೆ ಭಕ್ತಾಭೀಷ್ಟದಾಯಕನೆಂದರು; ಭಕ್ತರ ಕಷ್ಟನಿವಾರಣ ಪೂರ್ವಕ

ಇಷ್ಟಾರ್ಥಸಿದ್ಧಿಗೋಸ್ಕರ ಕೊಂದನೆಂದು ತಾತ್ಪರ್ಯ. ಅಷ್ಟುಮಾತ್ರವಲ್ಲದೆ ಸಂಸಾರದಿಂದಲೂ ಸಹ ಉದ್ಧಾರ ಮಾಡುವನು. ದೈತ್ಯರ ಭಯದಿಂದಾಗಲಿ, ಅವರು ತನ್ನ ಮೇಲೆ ದ್ವೇಷಮಾಡುವುದರಿಂದ ಪರಮಾತ್ಮನಿಗೆ ಅವರಲ್ಲಿ ಅಸೂಯೆ ಉಂಟಾಗಿ ಆ ಕಾರಣದಿಂದಾಗಲಿ, ಅಥವಾ ತನ್ನ ನಷ್ಟಲಾಭಗಳ ಉದ್ದೇಶದಿಂದಾಗಲೀ ದೈತ್ಯರನ್ನು ಕೊಲ್ಲಲಿಲ್ಲ. ಅವರವರ ಕರ್ಮಾನುಸಾರವಾಗಿ ಅವರವರಿಗೆ ಫಲವನ್ನು ಕೊಡುವನಾದುದರಿಂದ ದೇವತೆಗಳ ರಕ್ಷಣೆಗಾಗಿ ದೈತ್ಯರನ್ನು ಕೊಲ್ಲುವನೇ ಹೊರ್ತು ತನ್ನ ಪ್ರಯೋಜನಕ್ಕಲ್ಲವೆಂಬುವುದನ್ನು ವಿಗತಭಯಶೋಕ, ನಷ್ಟತುಷ್ಟಿಗಳಿಲ್ಲ ಎಂಬ ಪದಗಳಿಂದ ಹೇಳಿದರು. ಇಂತಹಾ, ಸರ್ವ ಜೀವರ ಹೃದಯಾಕಾಶ ನಿವಾಸಿಯಾದ ಶ್ರೀಪರಮಾತ್ಮನು, ತನ್ನನ್ನು ಸ್ಮರಣೆ ಮಾಡುವ ಮಾತ್ರದಿಂದಲೆ ಪ್ರಸನ್ನನಾಗುವನು. ಭಕ್ತಿಯಿಂದ ಮಾತ್ರ ಸ್ಮರಣೆಮಾಡಬೇಕು. ಅಭಕ್ತರು ಮಾಡುವ ಸ್ಮರಣೆಗೆ ಫಲವಿಲ್ಲವೆಂದು "ಅಭಕ್ತ್ಯೋದಾಹೃತಂನ್ನೈವಫಲದಾತೃ ಭವಿಷ್ಯತಿ" ಎಂಬ ಶ್ರೀಮದಾಚಾರ್ಯರ ವಾಕ್ಯದಿಂದ ಸಿದ್ಧನಾಗುವುದು.

**ಹಿಂದೆ ಪ್ರಳಯೋದಕಧಿ ತಾವರೆ**
**ಕಂದನಂಜಿಸಿ ಕಾಯ್ದ ತಲೆಯೊಳು**
**ಬಾಂದೊರೆಯ ಪೊತ್ತವಗೊಲಿದು ಪರಿಯಂಕಪದವಿತ್ತ ||**
**ವಂದಿಸಿದ ವೃಂದಾರಕರ ಸ**
**ದ್ವೃಂದಕುಣಿಸಿದ ಸುಧೆಯ ಕರುಣಾ**
**ಸಿಂಧುಕಮಲಾಕಾಂತ ಬಹುನಿಶ್ಚಿಂತ ಜಯವಂತ ||೧೨||**

ಪದ್ಯಾರ್ಥ.—ಹಿಂದೆಪ್ರಳಯೋದಕಧಿ=ಹಿಂದಿನ ಬ್ರಹ್ಮಕಲ್ಪದ ಪ್ರಳಯದ ನೀರಿನಲ್ಲಿ, ತಾವರೆಕಂದನ=ಕಮಲ ಸಂಭವರಾದ ಬ್ರಹ್ಮದೇವರನ್ನು, ಅಂಜಿಸಿ=ಭಯಪಡಿಸಿ, ಕಾಯ್ದ=ರಕ್ಷಿಸಿದನು. ತಲೆಯೊಳು, ಬಾಂದೊರೆಯ ಪೊತ್ತವಗೆ=ಆಕಾಶ ಗಂಗೆಯನ್ನು ಧರಿಸಿದ ರುದ್ರದೇವರಿಗೆ, ಒಲಿದು=ತಪಸ್ಸಿಗೆ ಮೆಚ್ಚಿ, ಪರ್ಯಂಕಪದವಿತ್ತ=ಶೇಷ ಪದವಿಯನ್ನು ಕೊಟ್ಟನು. ವಂದಿಸಿದ=ರಾಜ್ಯವನ್ನು ಕಳೆದುಕೊಂಡು ದುಃಖ ಪಡುತ್ತಿದ್ದ ದೇವತೆಗಳು ನಮಸ್ಕಾರಮಾಡಿ ಪರಮಾತ್ಮನನ್ನು ರಾಜ್ಯಕ್ಕಾಗಿ ಬೇಡಿಕೊಳ್ಳಲು, ವೃಂದಾರಕರ ಸದ್ವೃಂದಕೆ=ಆ ದೇವತೆಗಳ ಉತ್ತಮವಾದ ಸಮೂಹಕ್ಕೆ, ಕರುಣಾ

ಸಿಂಧು=ಕರುಣಾಸಮುದ್ರನಾದ, ಬಹು ನಿಶ್ಚಿಂತ=ಎಂದೆಂದಿಗೂ ಚಿಂತೆ ಇಲ್ಲದಿರುವ, ಜಯವಂತ=ಯಾವಾಗಲೂ ಜಯಶೀಲನಾದ, ಕಮಲಾಕಾಂತ=ಲಕ್ಷ್ಮೀಪತಿಯಾದ ಶ್ರೀನಾರಾಯಣನು, ಸುಧೆಯ=ಅಮೃತವನ್ನು, ಉಣಿಸಿದ=ಪಾನಮಾಡಿಸಿದನು.

ತಾತ್ಪರ್ಯ.—ಹಿಂದಿನ ಬ್ರಹ್ಮ ಕಲ್ಪಾವಸಾನದಲ್ಲಿ ಪರಮಾತ್ಮನ ನಾಭಿಯ ಕಮಲದಿಂದ ಹುಟ್ಟಿದ ಬ್ರಹ್ಮದೇವರನ್ನು ಅಂಜಿಸಿ ಕಾಯ್ದನು. ವಿಷ್ಣುರಹಸ್ಯ ೨೪ನೆಯ ಅಧ್ಯಾಯದಲ್ಲಿ "ಸವಿಷ್ಣುಃ ಪದ್ಮನಾಭಾಖ್ಯಃ ತನ್ನಾಭಿ ಕಮಲಾದಭೂತ್ ‖ ಹಿರಣ್ಯಗರ್ಭನಾಮಾಸೌ ಸಜಾತೋ ದದೃಶೇ ದಿಶಃ ‖೩೬‖ ಚತುರ್ದಿಕ್ಷುಚ ಚತ್ವಾರಿ ಮುಖಾನ್ಯಾಸನ್ ಮಹಾತ್ಮನಃ | ಪದ್ಮಸ್ಯ ಕರ್ಣಿಕಾಮಧ್ಯೇ ನಿಷಣ್ಣಃ ಸ್ವಸ್ತಿಕಾಸನೇ ‖ ತದಾ ವಿಷ್ಣ್ವಾಜ್ಞಯಾ ದುರ್ಗಾಜಲಬಿಂದುಭಿರನ್ವಿತಂ ‖ ವಿಸಸರ್ಜ ಮಹಾವಾತಂ ತೇನಾಭೂತ್ಪೀಡಿತೋವಿಧಿಃ ‖೪೦‖ ತದಾಗಾಢಾಂಧಕಾರೇಸ್ಮಿ ಮಸಹಾಯಂ ವಿಲೋಕ್ಯಸಃ‖ ಪೀಡ್ಯಮಾನೋ ವರ್ಷವಾತೈಃ ಕ್ಷಣಂ ಭೀತೋಸ್ಮರದ್ಧರಿಂ ‖೪೧‖ ತತಸ್ತಪಸ್ತಪೇತ್ಯಾಸೀದಶರೀರೈವ ಭಾರತೀ ‖ ಸಮಾಧಿ ಯೋಗಮಾಸ್ಥಾಯ ನಿರುಚ್ಛ್ವಾಸೋ ಭವತ್ತತಃ‖೪೨‖ ದಧ್ಯಾವಾಂತರಮಾತ್ಮಾನಂ ಬ್ರಹ್ಮಾ ರೂಪಂ ಸದಾಶಿವಂ ‖ ದಿವ್ಯವರ್ಷಾಯುತಂ ಪಶ್ಚಾದುತ್ಥಿತಃ ಸಸಮಾಧಿತಃ ‖೪೩‖ ಪ್ರೀತೋಥ ತಪಸಾತೇನ ಪದ್ಮನಾಭೋ ಹರಿಃ ಸ್ವಯಂ ‖ ಕೌಮಾರಂ ರೂಪಮಾಸ್ಥಾಯ ನಿಜರೂಪಮದರ್ಶಯತ್ ‖೪೪‖ " ನಾಭಿಯಲ್ಲಿ ಕಮಲವಿದ್ದುದರಿಂದ ಆ ವಿಷ್ಣುವಿಗೆ ಪದ್ಮನಾಭನೆಂದು ಹೆಸರಾಯಿತು. ಆ ನಾಭಿಯ ಕಮಲದಿಂದ ಹಿರಣ್ಯಗರ್ಭನೆಂಬ ಹೆಸರುಳ್ಳ ಬ್ರಹ್ಮದೇವರು ಜನಿಸಿದರು. ಅವರು ನಾಲ್ಕು ದಿಕ್ಕುಗಳನ್ನು ನೋಡುವಾಗ ೪ ಮುಖಗಳಾದವು. ಪದ್ಮದ ಕರ್ಣಿಕೆಯ ಮಧ್ಯದಲ್ಲಿ ಪದ್ಮಾಸನದಿಂದ (ಸ್ವಸ್ತಿಕಾಸನ) ಕೂತಿದ್ದ ತನ್ನನ್ನು ತಾನು ನೋಡಿಕೊಂಡನು. ಆ ಸಮಯದಲ್ಲಿ ದುರ್ಗಾದೇವಿಯರು ಶ್ರೀವಿಷ್ಣುವಿನ ಆಜ್ಞಾ ಪ್ರಕಾರ ಉದಕಬಿಂದುಗಳಿಂದ ಕೂಡಿದ ಮಹತ್ತರವಾದ ಗಾಳಿಯನ್ನು ಸೃಷ್ಟಿಸಲು, ಬ್ರಹ್ಮದೇವರು ಅದರಿಂದ ಬಹಳವ್ಯಥೆ ಹೊಂದಿದರು. ಮಹತ್ತರವಾದ ಗಾಢಾಂಧಕಾರವಾಗಿದ್ದಿತು. ಮತ್ತೊಬ್ಬರ ಸಹಾಯವಿಲ್ಲದ್ದೆ, ಉದಕ ಬಿಂದುಗಳಿಂದ ಕೂಡಿದ ಮಹಾ ವಾತದಿಂದ

ಪೀಡಿತರಾಗಿ ಒಂದು ಕ್ಷಣ ಭಯಪಟ್ಟರು. ತದನಂತರದಲ್ಲಿ ಶ್ರೀಪರಮಾತ್ಮನನ್ನು ಸ್ಮರಣೆ ಮಾಡಿದರು. ಆ ಸಮಯದಲ್ಲಿ "ತಪ! ತಪ!!" ಎಂದು ೨ ಸಲ ಶಬ್ದವು ಅಶರೀರವಾಕ್ಕಾಗಿ ಕೇಳಬಂದಿತು. ಆಗ ಬ್ರಹ್ಮದೇವರು ಸಮಾಧಿ ಯೋಗದಿಂದ ಶ್ವಾಸವನ್ನು ವಿರೋಧಿಸಿ, ಹೃದಯಾಕಾಶದಲ್ಲಿ ಸದಾ ಮಂಗಳ ಮೂರ್ತಿಯಾದ ಶ್ರೀಪರಮಾತ್ಮನನ್ನು ಧ್ಯಾನ ಮಾಡುತ್ತಾ ದೇವತಾಮಾನದಿಂದ ೧೦ ಸಹಸ್ರ ವರ್ಷಗಳವರೆಗೂ ಇದ್ದು ಸಮಾಧಿಯಿಂದ ಎದ್ದರು. ಆಗ ಪರಮಾತ್ಮನು ಪ್ರೀತನಾಗಿ ಅವರ ತಪಸ್ಸಿಗೆ ಮೆಚ್ಚಿ ದಿವ್ಯವಾದ ಕೌಮಾರ ರೂಪವನ್ನು ಧರಿಸಿ ಆ ರೂಪವನ್ನು ಬ್ರಹ್ಮದೇವರಿಗೆ ತೋರಿಸಿದನು ಎಂದು ಹೇಳಿರುವರು. ಆ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ತಾವರೆಕಂದನಂಜಿಸಿ ಕಾಯ್ದನೆಂದು ಹೇಳಿರುವರು. ರುದ್ರದೇವರ ತಪಸ್ಸಿಗೆ ಮೆಚ್ಚಿ ಶೇಷ ಪದವಿಯನ್ನಿತ್ತನು. ದುರ್ವಾಸರ ಶಾಪದಿಂದ ರಾಜ್ಯಭ್ರಷ್ಟರಾಗಿ ದೇವತೆಗಳು ರಾಜ್ಯವನ್ನು ಕಳೆದುಕೊಂಡು ಪರಮಾತ್ಮನನ್ನು ಮೊರೆ ಹೋಗಲು ಪರಮಾತ್ಮನು, ದೇವದೈತ್ಯರ ಸಂಧಿಯನ್ನು ಮಾಡಿಸಿ, ಕ್ಷೀರ ಸಮುದ್ರವನ್ನು ಮಥನ ಮಾಡಲು ಅದರಿಂದ ಅಮೃತ ಹುಟ್ಟಿತು. ದೈತ್ಯರು ಆ ಅಮೃತ ಕಲಶವನ್ನು ಅಪಹರಿಸಿದರು. ಪರಮಾತ್ಮನು ಮೋಹಿನೀ ರೂಪವನ್ನು ಧರಿಸಿ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನುಣಿಸಿದನು. ಈ ಕಥೆಯನ್ನು ಭಾಗವತ ಅಷ್ಟಮಸ್ಕಂಧದಲ್ಲೂ, ಮಹಾಭಾರತ ತಾತ್ಪರ್ಯ ನಿರ್ಣಯ ೧೦ನೆಯ ಅಧ್ಯಾಯದಲ್ಲೂ ಹೇಳಿರುವರು. ಪರಮಾತ್ಮನಿಗೆ ಯಾವ ವಿಧವಾದ ಉಪಯೋಗವೂ ಇವರಿಂದಿಲ್ಲ. ನಿತ್ಯ ಜಯಶೀಲನು, ಬಹು ನಿಶ್ಚಿಂತನು, ಸಾಕ್ಷಾತ್ ಲಕ್ಷ್ಮೀಪತಿಯು, ಹೀಗಿರುವಾಗ ದೇವತೆಗಳಿಂದಿವನಿಗಾಗುವುದೇನು ? ದೈತ್ಯರಿಂದ ಹಾನಿಯಾಗುವುದೇನು ? ಏನೂ ಇಲ್ಲ. ಆದರೂ ಕರುಣಾಸಮುದ್ರನಾದುದರಿಂದ ಭಕ್ತರಾಗಿ ತನ್ನನ್ನು ಮೊರೆಹೊಕ್ಕ ದೇವತೆಗಳ ರಕ್ಷಣೆಗಾಗಿ ಅಮೃತವನ್ನುಣಿಸಿದನೆಂಬ ತಾತ್ಪರ್ಯ.

ಅವತಾರಿಕೆ.—ಮೇಲಿನ ಪದ್ಯದಲ್ಲಿ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನುಣಿಸಿದನೆಂದು ಹೇಳಿದರು. ಇದರಿಂದ ಸ್ವಪ್ರಯೋಜನಕ್ಕಾಗಿ ವಂಚಿಸಿದನೆಂಬ ವೈಷಮ್ಯವು ಪರಮಾತ್ಮನಿಗೆ ತೋರುವುದು. ಅದನ್ನು ಈ ಪದ್ಯದಿಂದ ಪರಿಹರಿಸುತ್ತಾರೆ.

ಸತ್ಯ ಸಂಕಲ್ಪಾನುಸಾರ ಪ್ರ
ವರ್ತಿಸುವ ಪ್ರಭುತನಗೆ ತಾನೆ
ಭೃತ್ಯನೆನಿಸುವ ಭೋಕ್ತೃಭೋಗ್ಯ ಪದಾರ್ಥಗಳೊಳಿದ್ದು ॥
ತತ್ತದಾಹ್ವಯನಾಗಿ ತರ್ಪಕ
ತೃಪ್ತಿಪಡಿಸುವ ತತ್ವಪತಿಗಳ
ಮತ್ತರಾದಸುರರ್ಗೆ ಅಸಮೀಚೀನಫಲವೀವ ॥೧೩॥

ಪದ್ಯಾರ್ಥ—ಸತ್ಯ ಸಂಕಲ್ಪಾನುಸಾರ ಪ್ರವರ್ತಿಸುವನು. ತನಗೆ ತಾನೇ ಪ್ರಭು, ತಾನೇ ಭೃತ್ಯನೆನಿಸುವನು. ಭೋಕ್ತೃ ಭೋಗ್ಯ ಪದಾರ್ಥಗಳೊಳಗಿದ್ದು=ಭೋಗಿಸುವವರಲ್ಲೂ, ಭೋಗಿಸಲು ಯೋಗ್ಯವಾದ ಪದಾರ್ಥಗಳಲ್ಲೂ ತಾನೇ ಇದ್ದು, ತತ್ತದಾಹ್ವಯನಾಗಿ=ಆಯಾ ಹೆಸರುಗಳಿಂದ, ತರ್ಪಕ=ತರ್ಪಕನೆನಿಸಿ, ತತ್ವ ಪತಿಗಳ=ಭೋಗಿಸುವವರ ದೇಹಗಳೊಳಿರುವ ತತ್ವಾಭಿಮಾನಿ ದೇವತೆಗಳನ್ನು, ತೃಪ್ತಿ ಪಡಿಸುವನು. ಮತ್ತರಾದ ಅಸುರರ್ಗೆ=ದೈತ್ಯರುಗಳಿಗೆ, ಅಸಮೀಚೀನ ಫಲವೀವ=ಪಾಪ ಫಲವನ್ನು ಕೊಡುವನು.

ತಾತ್ಪರ್ಯ—"ಸತ್ಯ ಸಂಕಲ್ಪ ತೋ ವಿಷ್ಣುರ್ನಾನ್ಯಥಾತು ಕರಿಷ್ಯತಿ" ಎಂಬ ವಾಕ್ಯದಂತೆ ಪರಮಾತ್ಮನು ಸತ್ಯ ಸಂಕಲ್ಪನು. ಅದಕ್ಕನ್ಯಥಾ ಎಂದಿಗೂ ಮಾಡುವುದಿಲ್ಲ. ಸರ್ವ ಪ್ರಕಾರದಿಂದಲೂ ತನ್ನ ಭಕ್ತರಿಗೆ ಬರುವ ಕಷ್ಟಗಳನ್ನು ಪರಿಹರಿಸಿ ಅವರ ಇಷ್ಟಾರ್ಥವನ್ನು ಪೂರೈಸುವದೆ ಇವನ ಸಂಕಲ್ಪವು. ಆದುದರಿಂದ ದೇವತೆಗಳಿಗೆ ಅನುಕೂಲನಾಗಿಯೂ, ದೈತ್ಯರಿಗೆ ಪ್ರತಿಕೂಲನಾಗಿಯೂ, ಇರುವನೇ ಹೊರತು ತನಗೆ ಯಾರಿಂದಾದರೂ ಆಗುವದೇನು? ಪ್ರಭುವಿನಲ್ಲಿದ್ದು ಪ್ರಭುವೆನಿಸುವವನೂ ತಾನೆ, ಭೃತ್ಯನಲ್ಲಿದ್ದು ಭೃತ್ಯ ಕಾರ್ಯಗಳನ್ನು ಮಾಡಿಸಿ ಭೃತ್ಯನೆನಿಸುವವನೂ ತಾನೆ, ಸುಖಾದಿಗಳನ್ನು ಭೋಗಿಸುವ ಜನರಲ್ಲೂ ಅವರು ಭೋಗಿಸಲು ಯೋಗ್ಯವಾದ ಪದಾರ್ಥಗಳಲ್ಲೂ ತಾನೇ ಇದ್ದು ಆಯಾ ಹೆಸರುಗಳಿಂದ ತರ್ಪಕನೆನಿಸಿ ತತ್ವಾಭಿಮಾನಿ ದೇವತೆಗಳನ್ನು ತೃಪ್ತಿ ಪಡಿಸುವನು ದೈತ್ಯರಿಗೆ ಪಾಪ ಫಲಗಳನ್ನು ಕೊಡುವನು.

ಅವತಾರಿಕೆ.—ತನ್ನ ಭಕ್ತರು ಯಾವ ರೀತಿಯಿಂದ ತನ್ನನ್ನು ಸ್ಮರಿಸಿದರೂ ಅವರನ್ನುದ್ಧರಿಸುವನೆಂದು ಹೇಳುತ್ತಾರೆ.

**ಬಿಟ್ಟಿಗಳ ನೆವದಿಂದಲಾಗಲಿ**
**ಹೊಟ್ಟೆಗೋಸುಗವಾದಡಾಗಲಿ**
**ಕೆಟ್ಟರೋಗ ಪ್ರಯುಕ್ತವಾಗಲಿ ಯಣಕದಿಂದೊಮ್ಮೆ ||**
**ನಿಟ್ಟುಸುರಿನಿಂ ಬಾಯ್ದೆರದು ಹರಿ**
**ವಿಠ್ಠಲಾ ಸಲಹೆಂದೆನಲು ಕೈ**
**ಗೊಟ್ಟುಕಾವಕೃಪಾಳು ಸಂತತ ತನ್ನ ಭಕುತರನ　　||೧೪||**

ಪದ್ಯಾರ್ಥ.—ಬಿಟ್ಟಿಗಳನೆವದಿಂದಲಾಗಲಿ=ದೊರೆಯಾದವನು ಬಿಟ್ಟಿ ಕೆಲಸಗಳಿಗೆ ಹಿಡಿದು ಹಾಕಿದಾಗ, ಆ ಬಿಟ್ಟಿ ಕೆಲಸಗಳನ್ನು ಮಾಡುವ ಕಷ್ಟದಿಂದಲಾಗಲಿ, ಹೊಟ್ಟೆಗೋಸುಗವಾದಡಾಗಲಿ=ಇವನು ಭಕ್ತನೆಂದು ತಿಳಿದು ಜನರು ಮರುಳಾಗಿ ತನಗೆ ದುಡ್ಡು ಕೊಟ್ಟಾರೆಂಬ ಹೊಟ್ಟೆಯನ್ನು ಪೋಷಿಸುವ ಆಶೆಯಿಂದಲಾಗಲಿ, ಕೆಟ್ಟ ರೋಗವನ್ನನುಭವಿಸುವಾಗ ತಾಳಲಾರದ ಕಾಲದಲ್ಲಾಗಲಿ, ಅಣಕದಿಂದೊಮ್ಮೆ=ವಿನಯಪೂರ್ವಕವಾಗಿ ಭಕ್ತಿಯಿಂದ ಏಕಾಗ್ರಚಿತ್ತನಾಗಿ, ನಿಟ್ಟುಸುರಿನಿಂ=ನಿಟ್ಟುಸುರು ಬಿಡುತ್ತಾ, ಬಾಯ್ದೆರದು ಬಾಯಿ ತೆರದು, ಹರಿ ವಿಠಲಾ! ಸಲಹು ಎನಲು, ಕೃಪಾಳು=ಕರುಣಾಳುವಾದ ಶ್ರೀಹರಿಯು, ಸಂತತ=ಸರ್ವ ಕಾಲದಲ್ಲೂ, ತನ್ನ ಭಕುತರನ=ತನ್ನ ಭಕ್ತರನ್ನು, ಕೈಗೊಟ್ಟುಕಾವ=ಕೈ ಕೊಟ್ಟು ಸಂರಕ್ಷಣೆ ಮಾಡುವನು.

ತಾತ್ಪರ್ಯ.—ಬಿಟ್ಟಿ ಕೆಲಸಗಳನ್ನು ಮಾಡುವಾಗ ಆ ಸಂಕಟ ಕಾಲದಲ್ಲಾಗಲಿ, ಹೊಟ್ಟೆಗಿಲ್ಲದೆ ಕಷ್ಟಪಡುವಾಗ ಒಬ್ಬರಿಗೋಸ್ಕರವಾಗಲಿ, ಕೆಟ್ಟ ರೋಗವನ್ನನುಭವಿಸಲಾರದೇ ದುಃಖಪಡುವಾಗಲಾಗಲಿ, ಭಕ್ತಿ ವೈರಾಗ್ಯದಿಂದ ಏಕಾಗ್ರಚಿತ್ತನಾಗಿ ನಿಟ್ಟುಸುರು ಬಿಡುತ್ತಾ ಬಾಯಿ ತೆರೆದು ಅಯ್ಯೋ ಅಪ್ಪಾ ಎನ್ನದೆ, ಹರೇ! ವಿಠ್ಠಲಾ! ಸಲಹು ಎಂದು ಸ್ಮರಿಸಿದರೆ ಸಾಕು. ಕರುಣಾಳುವಾದ ಶ್ರೀಹರಿಯು ತನ್ನ ಭಕ್ತರ ಸ್ಮರಣೆಗೆ ಮೆಚ್ಚಿ ಅವರನ್ನು ಕೈಕೊಟ್ಟು ರಕ್ಷಿಸುವನು.

ಅವತಾರಿಕೆ.—ಮೇಲಿನ ಪದ್ಯದಲ್ಲಿ ಹೇಳಿದುದನ್ನೇ ವಿವರಿಸುತ್ತಾರೆ

**ಈವಸುಂಧರೆಯೊಳಗೆ ಶ್ರೀಭೂ**
**ದೇವಿಯರರಸನ ಸುಗುಣಕರ್ಮಗ**
**ಳಾವಬಗೆಯಿಂದಾದಡಾಗಲಿ ಕೀರ್ತಿಸುವ ನರರ ||**
**ಕಾವಕಮಲದಳಾಯತಾಕ್ಷ ಕೃ**
**ಪಾವಲೋಕನದಿಂದ ಕಪಿಸು**
**ಗ್ರೀವಗೊಲಿದಂದದಲಿ ಯೊಲಿದಭಿಲಾಷೆಪೂರೈಪ　　||೧೫||**

ಪದ್ಯಾರ್ಥ.—ಕಮಲದಳಾಯತಾಕ್ಷ=ಕಮಲ ದಳದಂತೆ ವಿಶಾಲವಾದ ನೇತ್ರಗಳುಳ್ಳ ಶ್ರೀಹರಿಯು, ಈ ವಸುಂಧರೆಯೊಳಗೆ=ಈ ಭೂಮಿಯಲ್ಲಿ, ಶ್ರೀ ಭೂದೇವಿಯರಸನ=ಶ್ರೀದೇವಿ ಭೂದೇವಿಯರಿಗೆ ಅರಸನಾದ, (ಶ್ರೀ ಪರಮಾತ್ಮನ) ಸುಗುಣಕರ್ಮಗಳ=ಉತ್ತಮವಾದ ಗುಣ ಕರ್ಮಗಳನ್ನು, ಆವಬಗೆಯಿಂದಾದಡಾಗಲಿ=ಯಾವ ಬಗೆ ಇಂದಲಾದರೂ ಆಗಲಿ, ಕೀರ್ತಿಸುವ ನರರ=ಬಾಯಿಂದ ಹೇಳುತ್ತಾ ಕಿವಿಯಲ್ಲಿ ಕೇಳುತ್ತಾ ಇರುವ ಜನರನ್ನು, ಕಾವ=ಸಂರಕ್ಷಿಸುವನು. ಕೃಪಾವಲೋಕನದಿಂದ=ಕೃಪಾಕಟಾಕ್ಷದಿಂದ ನೋಡಿ, ಕಪಿ ಸುಗ್ರೀವಗೊಲಿದಂದದಲಿ=ಕಪಿಯಾದ ಸುಗ್ರೀವನಿಗೆ ಪ್ರಸನ್ನನಾಗಿ ಇಹದಲ್ಲಿ ವಾಲಿಯನ್ನು ಸಂಹಾರಮಾಡಿ ಕಪಿ ರಾಜ್ಯವನ್ನು ಕೊಡಿಸಿ, ಪರಲೋಕದಲ್ಲೂ ದಿವ್ಯಗತಿಯನ್ನಿತ್ತಂತೆ. ಒಲಿದು=ಭಕ್ತರಿಗೆ ಪ್ರಸನ್ನನಾಗಿ, ಅಭಿಲಾಷೆಪೂರ್ತೈಸ=ಮನೋಭಿಷ್ಟವನ್ನು ಪೂರ್ತೈಸುವನು.

ತಾತ್ಪರ್ಯ.—ಈ ಭೂಮಿಯಲ್ಲಿ ಶ್ರೀದೇವಿ ಭೂದೇವಿಯರ ಅರಸನಾದ ಶ್ರೀಮನ್ನಾರಾಯಣನ ಗುಣ ಕರ್ಮಗಳನ್ನು ಯಾವುದಾದರೂ ಒಂದು ಬಗೆಯಿಂದ ಕೀರ್ತಿಸುತ್ತಿದ್ದರೆ, ಕಮಲ ದಳಗಳಂತೆ ವಿಸ್ತಾರವಾದ ನೇತ್ರಗಳುಳ್ಳ ಶ್ರೀ ಹರಿಯು ಪ್ರಸನ್ನನಾಗಿ ತನ್ನ ಕೃಪಾ ಕಟಾಕ್ಷದಿಂದ ಅವರನ್ನು ರಕ್ಷಿಸುತ್ತಾ, ಕಪಿಯಾದ ಸುಗ್ರೀವನಿಗೆ ಪ್ರಸನ್ನನಾದಂತೆ ಪ್ರಸನ್ನನಾಗಿ ಅವರ ಮನೋಭಿಷ್ಟವನ್ನು ಪೂರ್ತೈಸುವನು.

**ಚೇತನಾಂತರ್ಯಾಮಿ ಲಕ್ಷ್ಮೀ**
**ನಾಥ ಕರ್ಮಗಳನುಸರಿಸಿ ಜನಿ**
**ತೋತವಿಷ್ಣೂ ಎಂಬಶ್ರುತಿಪ್ರತಿಪಾದ್ಯನೆಂವೊಡನೆ ||**
**ಜಾತನಾಗುವ ಜನ್ಮರಹಿತಾ**
**ಕೂತಿನಂದನ ಭಕ್ತರಿಂದಾ**
**ಹೂತನಾಗಿ ಮನೋರಥವ ಬೇಡಿಸಿಕೊಳದಲೀವ ||೧೬||**

ಪದ್ಯಾರ್ಥ —ಚೇತನಾಂತರ್ಯಾಮಿ=ಸಕಲ ಪ್ರಾಣಿಗಳ ಅಂತರ್ಯಾಮಿಯೂ, ಲಕ್ಷ್ಮೀನಾಥ=ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು, ಜನಿತೋತವಿಷ್ಣೂಯೆಂಬ ಶ್ರುತಿಪ್ರತಿಪಾದ್ಯ=ಜನಿತೋತವಿಷ್ಣೂ ಎಂಬ ಶ್ರುತಿಯಲ್ಲಿ ಹೇಳಿದಂತೇ, ಎಮ್ಮೊಡನೆ=ನಮ್ಮಗಳೊಂದಿಗೆ, ಕರ್ಮಗಳನುಸರಿಸಿ=

ನಮ್ಮ ಕರ್ಮಗಳನ್ನನುಸರಿಸಿ, ಸನ್ಮರಹಿತ=ಹುಟ್ಟುವಿಕೆ ಇಲ್ಲದವನಾದರೂ, ಜಾತನಾಗುವ=ಜನಿಸುವನು. ಆಕೂತಿನಂದನ-ಯಜ್ಞನಾಮಕನಾದ ಶ್ರೀ ಹರಿಯು, ಭಕ್ತರಿಂದ, ಆಹೂತನಾಗಿ=ಕರಸಿಕೊಳ್ಳಲ್ಪಟ್ಟು, ಬೇಡಿಸಿಕೊಳ ದಲೆ=ಅವರಿಂದ ಯಾವ ಮನೋರಥವನ್ನೂ ಬೇಡಿಸಿಕೊಳ್ಳದೆ, ಮನೋರ ಥವ=ಭಕ್ತರ ಇಷ್ಟಾರ್ಥವನ್ನು, ಈವ=ಕೊಡುವನು.

ತಾತ್ಪರ್ಯ.---ಸಕಲ ಪ್ರಾಣಿಗಳ ಅಂತರ್ಯಾಮಿಯಾದ ಶ್ರೀಪರ ಮಾತ್ಮನು, ಜೀವನ ಕರ್ಮಾನುಸಾರವಾಗಿ ಭೂಮಿಯಲ್ಲಿ ಹುಟ್ಟುವಾಗ ಜೀ ವನೊಂದಿಗೆ ಪರಮಾತ್ಮನು ತಾನೂ ಜನಿಸುವನು. " ಜನಿತೋತವಿಷ್ಣೋ ' " ಅಜಾಯಮಾನೋ ಭಹುಧಾವ್ಯಜಾಯತ " ಇತ್ಯಾದಿ ಶೃತಿಗಳಲ್ಲಿ ಹೇಳಿ ದಂತೆ ತಾನು ಜನನ ರಹಿತನಾದರೂ, ಜೀವರಿಗೆ ತಾವಾಗಿ ಕರ್ಮಗಳನ್ನು ಮಾಡುವ ಶಕ್ತಿಯಿಲ್ಲದ್ದುದರಿಂದ ಅವರಿಂದ ಕರ್ಮಗಳನ್ನು ಮಾಡಿಸುವುದ ಕ್ಕಾಗಿ ತದ್ರೂಪನಾಗಿ ಜನಿಸುವನು. ಭಕ್ತರು ತನ್ನ ನಾಮವನ್ನುಚ್ಚರಿಸಿ ಕರೆಯಲು, ಅಷ್ಟಕ್ಕೆ ಪ್ರೀತನಾಗಿ ಅವರು ಯಾವುದನ್ನು ಕೇಳದೇ ಇದ್ದರೂ ತಾನೇ ಅವರ ಮನೋಭೀಷ್ಟವನ್ನು ತಿಳಿದು ಅದನ್ನು ಪೂರೈಸುವನು.

ನೃಷತು ಯೆನಿಸುವ ಮನುಜರೊಳು ಸುರ
ಋಷಭನಿಂದ್ರಿಯಗಳೊಳು ತತ್ತ
ದ್ವಿಷಯಗಳ ಭುಂಜಿಸುವ ಹೋತಾಹ್ವಯನು ತಾನಾಗಿ |
ವ್ಯುಷರಹಿತ ವೇದದೊಳು ಋತುಸತು
ಪೆಸರಿನಿಂದಲಿ ಕರೆಸುತ ಜಗ
ತ್ಪ್ರಸವಿತ ನಿರಂತರದಿ ಸಂತೈಸುವನು ಭಕತರನ ||೧೭||

ಪದ್ಯಾರ್ಥ.—ಸುರಋಷಭ=ದೇವಶ್ರೇಷ್ಟನಾದ ಶ್ರೀಹರಿಯು. ಮನು ಜರೊಳು = ಮನುಷ್ಯರುಗಳಲ್ಲಿದ್ದು, ನೃಷತುಎನಿಸುವ = ನೃಷತು ಎಂದು ಕರೆಸುವನು. ಇಂದ್ರಿಯಗಳೊಳು=ಪ್ರಾಣಿಗಳ ಕಣ್ಣು ಮೊದಲಾದ ಇಂದ್ರಿ ಯಗಳಲ್ಲಿದ್ದು, ಹೋತಾಹ್ವಯನುತಾನಾಗಿ = ಹೋತಾ ಎಂಬ ಹೆಸರುಳ್ಳವ ನಾಗಿ, ತತ್ತದ್ವಿಷಯಗಳ=ಆಯಾ ಇಂದ್ರಿಯಗಳಿಂದಾಗುವ, ನೋಡುವದು, ಕೇಳುವುದು ಮೊದಲಾದ ಕಾರ್ಯಗಳನ್ನು ಮಾಡಿಸಿ, ಭುಂಜಿಸುವ=ಅವುಗ ಳಿಂದಾಗುವ ಸುಖವನ್ನು ಸ್ವೀಕರಿಸುವನು. ವ್ಯುಷರಹಿತ = ಸುಳ್ಳಿಲ್ಲದ, ವೇ

ದದೊಳು, ಋತುಸತುಪೆಸರಿನಿಂದಲಿ=ಋತುಸತು ಎಂಬ ಹೆಸರಿನಿಂದ, ಕರೆಸುವ ಜಗತ್ಪ್ರಸೂತ=ಜಗತ್ತನ್ನು ಸೃಷ್ಟಿಸುವ ಶ್ರೀಹರಿಯು, ನಿರಂತರದಿ, ಭಕುತರನು=ಭಕ್ತರನ್ನು, ಸಂತೈಸುವನು=ಸಮಾಧಾನಗೊಳಿಸುವನು.

ತಾತ್ಪರ್ಯ.--ದೇವೋತ್ತಮನಾದ ಶ್ರೀಪರಮಾತ್ಮನು ಮನಸ್ಸಿನಲ್ಲಿದ್ದು ನೃಷತ ಎಂದು ಕರೆಸುವನು. ಇಂದ್ರಿಯಗಳಲ್ಲಿದ್ದು ಹೋತನೆಂಬ ಹೆಸರಿನಿಂದ ಆಯಾ ವಿಷಯಗಳನ್ನು ಭುಂಜಿಸುವನು. ಸತ್ಯಭೂತವಾದ ವೇದಗಳಲ್ಲಿದ್ದು ಋತುಸತು ಎಂದು ಕರೆಸುವನು. ಸೃಷ್ಟಿಕರ್ತನಾದ ಹರಿಯು, ಭಕ್ತರನ್ನು ನಿತ್ಯದಲ್ಲೂ ಸಮಾಧಾನಪಡಿಸಿ ಇಷ್ಟಾರ್ಥವನ್ನು ಪೂರೈಸುವನು.

**ಅಬ್ಜಭವ ಪಿತ ಜಲಧರಾದ್ರಿಯೊ**
**ಳಬ್ಜಗೋಜಾದ್ರಿಜನೆನಿಸಿ ಜಲ**
**ದುಬ್ಬುಳೀಪೀಯೂಷತಾವರೆ ಶ್ರೀಶಶಾಂಕರೊಳು ।**
**ಕಬ್ಬುಕದಲಿ ಲತಾತೃಣದ್ರುಮ**
**ಹೆಬ್ಬುಗೆಯ ಮಾಡುತಿಹ ಗೋಜನು**
**ಯಿಬ್ಬಗೆಯಪ್ರತಿಕದೊಳು ಮಣಿಮೃಗ ಸೃಜಿಪನದ್ರಿಜನು॥೧೮॥**

ಪದ್ಯಾರ್ಥ --ಅಬ್ಜಭವಪಿತ - ಬ್ರಹ್ಮದೇವರ ತಂದೆಯಾದ ಶ್ರೀಪರಮಾತ್ಮನು, ಜಲ=ಉದಕದಲ್ಲೂ, ಧರೆ=ಭೂಮಿಯಲ್ಲೂ, ಅದ್ರಿಯೊಳು=ಪರ್ವತದಲ್ಲೂ, ಕ್ರಮವಾಗಿ ಅಬ್ಜ ಗೋಜ, ಅದ್ರಿಜನೆನಿಸಿ=ಈ ಹೆಸರುಗಳಿಂದ ಕರೆಸುವನು. ಜಲದುಬ್ಬುಳಿ–ನೀರುಗುಳ್ಳೆ ಅಥವಾ ಅಲೆಗಳು ಇವುಗಳಲ್ಲೂ, ಪೀಯೂಷ=ಉದಕದಲ್ಲೂ ಅಥವಾ ಕ್ಷೀರಸಮುದ್ರದಿಂದ ಜನಿಸಿದ ಅಮೃತದಲ್ಲೂ, ತಾವರೆ=ನೀರಿನಲ್ಲಿ ಹುಟ್ಟುವ ತಾವರೆ ( ಕಮಲಪುಷ್ಪದ) ಹೂವಿನ, ಶ್ರೀ=ಕಾಂತಿಯಲ್ಲೂ, ಶಶಾಂಕರೊಳು = ಚಂದ್ರಮಂಡಲದಲ್ಲೂ ಅಬ್ಜನಾಮಕ ಪರಮಾತ್ಮನಿರುವನು. ಕಬ್ಬು ಕದಳಿ=ಬಾಳೆ, ಲತಾ=ಬಳ್ಳಿಗಳು, ತೃಣ=ಹುಲ್ಲು, ದ್ರುಮ=ವೃಕ್ಷ ಮೊದಲಾದವುಗಳಲ್ಲಿದ್ದು, ಗೋಜನು=ಗೋಜ ನಾಮಕನಾಗಿ, ಹೆಬ್ಬುಗೆಯ=ವೃದ್ಧಿಯನ್ನು, ಮಾಡುತಿಹ=ಮಾಡುವನು. ಅದ್ರಿಜನು–ಪರ್ವತವಾಸಿಯಾದ ಅದ್ರಿಜನಾಮಕನು, ಯಿಬ್ಬಗೆಪ್ರತೀಕದೊಳು=ಜಡಚೇತನ ರೂಪವಾದ ಎರಡು ವಿಧ ಪ್ರತಿಮೆಯೊಳಗಿದ್ದು, ಮಣಿ=ಜಡವಾದ ಮಾಣಿಕ್ಯ ಮೊದಲಾದವುಗಳನ್ನೂ, ಮೃಗ=ಪರ್ವ

ತಾದಿಗಳಲ್ಲಿ ಸಂಚರಿಸುವ ಕಾಡುಮೃಗ ಮೊದಲಾದವುಗಳನ್ನು, ಸೃಜಿಪ-ಸೃಷ್ಟಿಮಾಡುವನು.

ತಾತ್ಪರ್ಯ—ಶ್ರೀಬ್ರಹ್ಮದೇವರ ತಂದೆಯಾದ ಶ್ರೀಪದ್ಮನಾಭನು, ಉದಕದಲ್ಲಿ ಅಬ್ಜನೆಂಬ ಹೆಸರಿನಿಂದಿದ್ದು ನೀರುಗುಳ್ಳಿ, ಅಮೃತ, ತಾವರೆ ಹುವ್ವು, ಚಂದ್ರಮಂಡಲ ಇವುಗಳ ಕಾಂತಿಯನ್ನು ವೃದ್ಧಿಪಡಿಸುವನು. ಭೂಮಿಯಲ್ಲಿ ಗೋಜನೆಂಬ ಹೆಸರಿನಿಂದಿದ್ದು, ಕಬ್ಬು ಬಾಳೆ ಮೊದಲಾದವುಗಳನ್ನೂ, ಬಳ್ಳಿ, ಹುಲ್ಲು, ಗಿಡ, ಮರ ಮೊದಲಾದವುಗಳನ್ನು ವೃದ್ಧಿಗೊಳಿಸುವನು. ಅದ್ರಿಜನಾಮಕನು ಬೆಟ್ಟಗಳಲ್ಲಿ ಹುಟ್ಟುವ ಮಾಣಿಕ್ಯ ಮೊದಲಾದ ಜಡಪ್ರತಿಮೆಯೆಂತಲೂ, ಮೃಗ ಮೊದಲಾದವು ಚೇತನ ಪ್ರತಿಮೆಯೆಂತಲೂ, ಹೀಗೆ ಎರಡು ವಿಧ ಪ್ರತಿಮೆಗಳನ್ನು ಸೃಷ್ಟಿಸಿ ಅವುಗಳಲ್ಲಿ ವಾಸಮಾಡುವನು. ಪರಮಾತ್ಮನು ವಾಸಮಾಡಲು ಯೋಗ್ಯವಾದ ಪದಾರ್ಥಗಳಿಗೆ ಪ್ರತಿಮೆಯೆಂದು ಹೆಸರು, ಅವನು ಸರ್ವತ್ರ ವಾಸಮಾಡುವುದರಿಂದ ಜಡಚೇತನಾತ್ಮಕವಾದ ಸಕಲವೂ ಅವನಿಗೆ ಪ್ರತಿಮೆಗಳೆಂದು ತಾತ್ಪರ್ಯ.

ಶ್ರುತಿವಿನುತ ಸವ್ರತ್ರದಲಿ
ಭಾರತಿರಮಣನೊಳಗಿದ್ದು ತಾ ಶುಚಿ
ಷತುವೆನಿಸಿ ಜಡಚೇತನರನು ಪವಿತ್ರಮಾಡುತಿಹ।
ಅತುಳಮಹಿಮಾನಂತ ರೂಪಾ
ಚ್ಯುತನೆನಿಸಿ ಚಿದ್ದೇಹದೊಳು ಪ್ರಾ
ಕೃತಪುರುಷನಂದವಲಿ ನಾನಾಚೇಷ್ಟೆಗಳ ಮಾಳ್ಪ ॥೧೯॥

ಪದ್ಯಾರ್ಥ—ಶ್ರುತಿವಿನುತ=ವೇದಗಳಿಂದ ಸ್ತುತ್ಯನಾದ ಶ್ರೀಪರಮಾತ್ಮನು, ಸವ್ರತ್ರದಲಿ=ಸರ್ವ ಪ್ರಾಣಿಗಳಲ್ಲೂ ಅಂತರ್ನಿಯಾಮಕರಾಗಿರುವ, ಭಾರತಿರಮಣನೊಳಗಿದ್ದು=ವಾಯುದೇವರಲ್ಲಿದ್ದು, ತಾ-ತಾನು, ಶುಚಿಷತು ಎನಿಸಿ, ಜಡಚೇತನರ, ಪವಿತ್ರಮಾಡುತಿಹ=ಜಡಚೇತನರೂಪವಾದ ಸಕಲವನ್ನೂ ಪವಿತ್ರವನ್ನಾಗಿ ಮಾಡುವನು. ಅತುಳಮಹಿಮ – ಅಸಮವಾದ (ಸಮವಿಲ್ಲದ) ಮಹಿಮೆಯುಳ್ಳ, ಅನಂತರೂಪ=ಸಂಖ್ಯೆ ಮಾಡಿ ಕೊನೆಕಾಣಲಶಕ್ಯವಾದ ರೂಪಗಳುಳ್ಳ ಶ್ರೀಹರಿಯು, ಅಚ್ಯುತನೆನಿಸಿ – ಅಚ್ಯುತನೆಂಬ

ಹೆಸರಿನಿಂದ, ಚಿದ್ದೇಹದೊಳು = ಜೀವರ ಸ್ವರೂಪ ದೇಹದೊಳಗಿದ್ದು, ಪ್ರಾಕೃತಪುರುಷನಂದದಲಿ = ಸಾಮಾನ್ಯರಾದ ಪ್ರಾಕೃತ ಮನುಷ್ಯರಂತೆ, ಚೇಷ್ಟೆಗಳಮಾಳ್ಪ = ಕರ್ಮಗಳನ್ನು ಮಾಡುವನು.

ತಾತ್ಪರ್ಯ.--ವೇದಗಳಿಂದ ಸ್ತುತ್ಯನಾದ ಶ್ರೀಹರಿಯು, ಸರ್ವ ಪ್ರಾಣಿಗಳ ಅಂತರ್ಯಾಮಿಯಾಗಿರುವ, ಚಿತ್ತಾಭಿಮಾನಿಯಾದ, ಭಾರತೀರಮಣ ಮುಖ್ಯಪ್ರಾಣದೇವರಲ್ಲಿ ಶುಚಿಷತು ಎಂಬ ಹೆಸರಿನಿಂದಿದ್ದು, ಜಡಚೇತನಾತ್ಮಕವಾದ ಈ ಪ್ರಪಂಚವನ್ನೇ ಪವಿತ್ರವನ್ನಾಗಿ ಮಾಡುವನು. ಮತ್ತೊಬ್ಬರಿಗೆ ಹೋಲಿಸಲು ಸಾಧ್ಯವಿಲ್ಲದ ಮಹಿಮೆಯುಳ್ಳ, ಅನಂತರೂಪಿಯಾದ ಶ್ರೀಹರಿಯು, ನಾಶರಹಿತನಾದುದರಿಂದ ಅಚ್ಯುತನೆಂಬ ಹೆಸರಿನಿಂದ ಕರೆಸುತ್ತಾ ಎಲ್ಲರ ಸ್ವರೂಪ ದೇಹಗಳಲ್ಲಿದ್ದು ಸಾಮಾನ್ಯರಾದ ಮನುಷ್ಯರಂತೆ ನಾನಾ ವಿಧವಾದ ಕಾರ್ಯಗಳನ್ನು ಮಾಡುತ್ತಿರುವನೆಂಬ ತಾತ್ಪರ್ಯ.

ಅವತಾರಿಕೆ:--ಪಂಚಕೋಶಗಳಲ್ಲಿ ಭಗವಂತನನ್ನು ಚಿಂತಿಸಬೇಕಾದ ಪ್ರಕಾರವನ್ನು ಹೇಳುತ್ತಾರೆ.—

ಅತಿಥಿಯೆನಿಸುವನನ್ನಮಯ ಭಾ
ರತೀರಮಣನೊಳು ಪ್ರಾಣಮಯ ಪ್ರಾ
ಕೃತ ವಿಷಯ ಚಿಂತನೆಯಮಾಡಿಸುವನು ಮನೋಮಯನು ।
ಯತನವಿಜ್ಞಾನಮಯಬರಲದ
ಜಿತನಮಾಡಿಸಿಯಾತ್ಮಜ ಯಾ
ಸುತರಸಂಗದಿ ಸುಖವನೀವಾನಂದಮಯನೆನಿಸಿ ॥೨೦॥

ಪದ್ಯಾರ್ಥ.--ಅತಿಥಿ=ಅತಿಥಿಗಳ ಒಳಗಿದ್ದು, ಅನ್ನಮಯನೆನಿಸುವನು. ಭಾರತಿರಮಣನೊಳು-ಭಾರತೀ ಪತಿಯಾದ ಮುಖ್ಯಪ್ರಾಣದೇವರಲ್ಲಿದ್ದು, ಪ್ರಾಣಮಯ=ಪ್ರಾಣಮಯನೆನಿಸುವನು. ಮನೋಮಯನು= ಮನೋಮಯನಾಗಿ ಎಲ್ಲರ ಮನಸ್ಸಿನಲ್ಲಿದ್ದು, ಪ್ರಾಕೃತವಿಷಯಚಿಂತನೆಯ= ಕಣ್ಣು ಕಿವಿ ಮೊದಲಾದ ಸಕಲೇಂದ್ರಿಯಗಳಿಂದ ಅನುಭವಿಸುವ ವಿಷಯ ಸಂಬಂಧವಾದ ಯೋಚನೆಯನ್ನು ಮಾಡಿಸುವನು. ವಿಜ್ಞಾನಮಯ-

ವಿಜ್ಞಾನಮಯನು, ಯತನಕರೆಲು=ಪ್ರಯತ್ನ ಮಾಡಬೇಕಾದ ಸಂದರ್ಭಗಳು ಬಂದ ಕಾಲದಲ್ಲಿ, ಅದ=ಅದನ್ನು, ಜತನಮಾಡಿಸಿ=ಆ ಪ್ರಯತ್ನವನ್ನು ಸರಿಯಾಗಿ ಮಾಡಿಸುವನು. ಆನಂದಮಯನೆನಿಸಿ, ಆತ್ಮ=ತಾನು=ಜಾಯಾ=ಹೆಂಡತಿ, ಸುತರ=ಮಕ್ಕಳು ಇವರ, ಸಂಗದಿ=ಸಹವಾಸದಿಂದ ಅವರುಗಳಲ್ಲಿ ಅಭಿಮಾನವನ್ನು ಕೊಡಿಸಿ, ಸುಖವನೀವ=ಸುಖವನ್ನು ಕೊಡುವನು.

ತಾತ್ಪರ್ಯ.— ಮಧ್ಯಾಹ್ನ ಕಾಲಕ್ಕೆ ಮನೆಗೆ ಬರುವ ಅತಿಥಿಗಳಲ್ಲಿದ್ದು ಅನ್ನಮಯನೆನಿಸುವನು. ಭಾರತೀ ರಮಣರಾದ ಮುಖ್ಯ ಪ್ರಾಣದೇವರಲ್ಲಿದ್ದು ಪ್ರಾಣಮಯನೆನಿಸುವನು. ಮನಸ್ಸಿನಲ್ಲಿ ಮನೋಮಯನೆಂಬ ಹೆಸರುಳ್ಳವನಾಗಿದ್ದು ಪ್ರಕೃತಿ ಸಂಬಂಧವಾದ ವಿಷಯ ಚಿಂತನೆಯನ್ನು ಕೊಡಿಸುವನು. ವಿಜ್ಞಾನಮಯನೆಂದೆನಿಸಿ ಪ್ರಯತ್ನ ಮಾಡಬೇಕಾದ ಕಾಲದಲ್ಲಿ ಜನರಿಂದ ಪ್ರಯತ್ನವನ್ನು ಮಾಡಿಸುವನು. ಆನಂದಮಯನು-ತಾನು, ತನ್ನ ಹೆಂಡರು ಮಕ್ಕಳೆಂಬ ಅಭಿಮಾನವನ್ನು ಹುಟ್ಟಿಸಿ ಅವರ ಸಂಗದ ಸುಖವನ್ನು ಕೊಡಿಸುವನು.

ಅವತಾರಿಕೆ.—ಅನಂತಾನಂತ ರೂಪದಿಂದಿದ್ದು ಅವರವರ ಕರ್ಮಾನುಸಾರವಾಗಿ ಕರ್ಮಗಳನ್ನು ಮಾಡಿಸುವುದರಿಂದ ಪರಮಾತ್ಮನಿಗೆ ವೈಷಮ್ಯಾದಿ ದೋಷಗಳಿಲ್ಲವೆಂದು ಹೇಳುತ್ತಾರೆ.

**ಇನಿತು ರೂಪಾತ್ಮನಿಗೆ ದೋಷಗ**
**ಳೆನಿತು ಬಪ್ಪವು ಪೇಳಿರೈ ಬ್ರಾ**
**ಹ್ಮಣಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ ||**
**ಗುಣನಿಯಾಮಕ ತತ್ತ್ವದಾಹ್ವಯ**
**ನೆನಿಸಿ ಕಾರ್ಯವ ಮಾಳ್ಪ ದೇವನ**
**ನೆನೆದಮಾತ್ರದಿ ದೋಷರಾಶಿಗಳೆಲ್ಲ ಕೆಡುತಿಹವು** ||೨೧||

ಪದಾರ್ಥ.—ಇನಿತು=ಈ ಪ್ರಕಾರವಾಗಿ, ರೂಪಾತ್ಮನಿಗೆ=ಅನಂತಾನಂತ ರೂಪಗಳಿಂದ ಅವರವರ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸುತ್ತಿರುವ ಪರಮಾತ್ಮನಿಗೆ, ದೋಷಗಳು=ವೈಷಮ್ಯಾದಿ ದೋಷಗಳು, ಎನಿತುಬಪ್ಪವು=ಹೇಗೆ ಬರುವವು? ಬ್ರಾಹ್ಮಣ ಕುಲೋತ್ತಮರಾದವರು=ಉತ್ತಮವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ನೀವುಗಳು, ನಿಷ್ಕಪಟ ಬುದ್ಧಿಯು

ಲಿ=ಪಕ್ಷಪಾತವನ್ನು ಬಿಟ್ಟು ನ್ಯಾಯವಾಗಿ ಎಂಬ ತಾತ್ಪರ್ಯ. ಪೇಳಿದ್ವೆ ! ಗುಣನಿಯಾಮಕ=ಸತ್ವ ರಜಸ್ತಮೋ ಗುಣಗಳ ಪ್ರೇರಕನಾದ, ತತ್ತದಾಹ್ವ ಯನೆನಿಸಿ=ಆಯಾ ಹೆಸರುಳ್ಳವನೆಂದು ಪ್ರಸಿದ್ಧನಾಗಿ, ಕಾರ್ಯವಮಾಳ್ಪ= ಕರ್ಮಗಳನ್ನು ಮಾಡಿಸುವ, ದೇವನ=ಸೃಷ್ಟ್ಯಾದಿ ಕರ್ತನಾದ ಶ್ರೀ ಹರಿಯು, ನೆನದಮಾತ್ರದಿ=ಸ್ಮರಣೆ ಮಾತ್ರದಿಂದ, ದೋಷ ರಾಶಿಗಳೆಲ್ಲ, ಕೆಡುತಿಹವು= ನಾಶ ಹೊಂದುವವು.

ತಾತ್ಪರ್ಯ.—ಹೀಗೆ ಅನಂತಾನಂತ ರೂಪಗಳಿಂದ ಸಾತ್ವಿಕ ರಾಜಸ ತಾಮಸ ಜೀವರಲ್ಲಿದ್ದು ಅವರವರ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸಿ ಫಲವನ್ನು ಕೊಡುವ ಶ್ರೀ ಹರಿಗೆ, ವೈಷಮ್ಯಾದಿ ದೋಷಗಳೆಲ್ಲಿಯ ದು ? ಉತ್ತಮವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿರುವ ನೀವೆಲ್ಲರೂ ಯೋ ಚಿಸಿ ನೋಡಿರೆಂದು ದೃಡೀಕರಣ ಮಾಡಿರುವರು. ಆದರೆ ಉಪಾತ್ರದಿಗಳಲ್ಲಿ, ಅಥವಾ ಇತರ ಮತಗಳಲ್ಲಿ ಪಕ್ಷಪಾತವಿಟ್ಟುಕೊಂಡು ನೋಡಿದರೆ ಸರಿಯಾದ ನ್ಯಾಯವು ತೋರದು. ಆ ಪಕ್ಷಪಾತವನ್ನು ಬಿಟ್ಟು ಸಮಬುದ್ಧಿಯಿಂದ ನೋ ಡಿದರೆ ಗೊತ್ತಾಗುವುದೆಂಬ ತಾತ್ಪರ್ಯ. ಸತ್ವಾದಿ ಗುಣನಿಯಾಮಕನಾಗಿ ಸಾತ್ವಿಕಾದಿ ಹೆಸರಿನಿಂದ ಕಾರ್ಯಗಳನ್ನು ಮಾಡಿ ಮಾಡಿಸುತ್ತಿರುವ ಶ್ರೀ ಪರ ಮಾತ್ಮನ ಸ್ಮರಣೆ ಮಾತ್ರದಿಂದ ದೋಷ ರಾಶಿಗಳೆಲ್ಲವೂ ನಾಶ ಹೊಂದುವವು.

ಕುಸ್ಥನೆನಿಸುವ ಭೂಮಿಯೊಳು ಆ
ಶಸ್ಥನೆನಿಸುವ ದಿಗ್ವಲಯದೊಳು
ಖಸ್ಥನೆನಿಸಾಕಾಶದೊಳು ವೊಬ್ಬೊಬ್ಬರೊಳಗಿದ್ದು ||
ವ್ಯಸ್ತನೆನಿಸುವ ಸರ್ವರೊಳಗೆ ಸ
ಮಸ್ತನೆನಿಸುವ ಬಳಿಯಲಿದ್ದುವು
ಪಸ್ಥನೆನಿಪ ವಿಶೋಧನ ವಿಶುದ್ಧಾತ್ಮ ಲೋಕದೊಳು ||೨೨||

ಪದ್ಯಾರ್ಥ.—ಭೂಮಿಯೊಳು=ಭೂಮಿಯಲ್ಲಿದ್ದು, ಕುಸ್ಥನೆನಿಸುವನು. ದಿಗ್ವಲಯದೊಳು=ದಿಙ್ಮಂಡಲದೊಳಗೆ, ಆಶಸ್ಥನೆನಿಸುವ=ಆಶಸ್ಥನೆಂದು ಹೆಸ ರುಳ್ಳವನಾಗಿರುವನು. ಆಕಾಶದೊಳು ಖಸ್ಥನೆನಿಪ=ಖಸ್ಥನೆಂದು ಕರೆಸುವನು ಒಬ್ಬೊಬ್ಬರೊಳಗಿದ್ದು=ಒಂದೊಂದು ಪಾತ್ರಗಳಲ್ಲೂ ಪ್ರತ್ಯೇಕ ರೂಪದಿಂದ ವಾಸ ಮಾಡುವಾಗ, ವ್ಯಸ್ತನೆನಿಸುವನು. ಸಮಸ್ತರೊಳಗ=ಎಲ್ಲರೊಳಗೂ

ವ್ಯಾಪ್ತವಾದ ರೂಪದಿಂದ ಸಮಸ್ತನೆನಿಸುವನು. ಬಳಿಯಲಿದ್ದು=ಪಕ್ಕದಲ್ಲಿದ್ದು=ಉಪಸ್ಥನೆನಿಸುವನು. ಹೀಗೆ ಲೋಕದೊಳು, ವಿಶೋಧನ=ವಿಶೇಷ ಶೋಧಕನೆಂತಲೂ, ವಿಶುದ್ಧಾತ್ಮನೆಂತಲೂ, ಚಿಂತಿಸಬೇಕೆಂದರ್ಥ.

ತಾತ್ಪರ್ಯ.—ಭೂಮಿಯೊಳಗೆ ಇರುವ ಪರಮಾತ್ಮನಿಗೆ ಕುಸ್ಥನೆಂದು ಹೆಸರು. ಗೋತ್ರಾ ಕುಃ ಪೃಥಿವೀ ಪೃಥ್ವೀ ಎಂಬ ಅಮರಕೋಶದಂತೆ ಕು ಅಂದರೆ ಭೂಮಿಗೆ ಹೆಸರು. “ಕೌ ಸ್ಥೀಯತೆ ಇತಿ ಕುಸ್ಥಃ” ಎಂಬ ನಿರ್ವಚನದಿಂದ ಭೂಮಿಯಲ್ಲಿದ್ದುದರಿಂದ ಕುಸ್ಥನೆಂದು ಹೆಸರು. ದಿಕ್ಕುಗಳಿಗೆ ಆಶಾ ಎಂದು ಹೆಸರು; ಅಲ್ಲಿರುವುದರಿಂದ ಆಶಸ್ಥನೆಂದು ಹೆಸರು. ಆಕಾಶಕ್ಕೆ ಖಂ ಎಂದು ಹೆಸರು. ಆಕಾಶದಲ್ಲಿರುವುದರಿಂದ ಖಸ್ಥನೆಂದು ಹೆಸರು. ಒಬ್ಬೊಬ್ಬರೊಳಗೂ ಪ್ರತ್ಯೇಕ ಪ್ರತ್ಯೇಕ ರೂಪವಾಗಿರುವುದರಿಂದ ವ್ಯಸ್ತನೆಂದು ಹೆಸರು. ಸರ್ವತ್ರ ವ್ಯಾಪ್ತವಾದ ರೂಪಕ್ಕೆ ಸಮಸ್ತನೆಂದು ಹೆಸರು. ಸಮೀಪದಲ್ಲಿರುವುದರಿಂದ ಉಪಸ್ಥನೆಂದು ಹೆಸರು. ಹೀಗೆ ವಿಶೇಷ ಶೋಧಕನಾಗಿಯೂ, ವಿಶುದ್ಧವಾದ ಸ್ವರೂಪ ಉಳ್ಳವನಾಗಿಯೂ ಇರುವ ಶ್ರೀಹರಿಯು, ಲೋಕದಲ್ಲಿ ಇಂತಹ ಅನೇಕ ರೂಪಗಳಿಂದ, ಅನೇಕ ನಾಮಗಳಿಂದ ಕೂಡಿ ವಾಸ ಮಾಡುವನೆಂದು ಚಿಂತಿಸಬೇಕೆಂಬ ತಾತ್ಪರ್ಯ.

ಜ್ಞಾನದನು ಎಂದೆನಿಪ ಶಾಸ್ತ್ರದಿ
ಮಾನದನು ಎಂದೆನಿಪ ವಸನದಿ
ದಾನಶೀಲಸುಬುದ್ಧಿಯೊಳಗೆ ವದಾನ್ಯನೆನಿಸುವನು ||
ವೈನತೇಯ ವರೂಥ ತತ್ತತ್
ಸ್ಥಾನದಲಿ ತತ್ತತ್ಸ್ವಭಾವಗ
ಳಾನುಸಾರ ಚರಿತ್ರೆಗಳ ಮಾಡುತಲೆ ನೆಲಸಿಪ್ಪ ||೨೩||

ಪದ್ಯಾರ್ಥ.—ಶಾಸ್ತ್ರದಿ=ಶಾಸ್ತ್ರದಲ್ಲಿ, ಜ್ಞಾನದನು ಎಂದೆನಿಪ=ಜ್ಞಾನದನೆಂದು ಕರೆಸುವನು. ವಸನದಿ=ವಸ್ತ್ರದೊಳಗೆ, ಮಾನದನು, ಎಂದೆನಿಪ=ಎಂದು ಕರೆಸುವನು. ದಾನಶೀಲಸುಬುದ್ಧಿಯೊಳಗೆ=ದಾನವನ್ನು ಸರ್ವದಾ ಮಾಡುತ್ತಿರಬೇಕೆಂಬ ಉತ್ತಮ ಬುದ್ಧಿಯಲ್ಲಿ, ವದಾನ್ಯನು ಎನಿಸುವನು. ವೈನತೇಯವರೂಥ=ಗರುಡನೇ ಧ್ವಜವಾಗುಳ್ಳ ಶ್ರೀಹರಿಯು, ತತ್ತತ್ಸ್ಥಾನದಲಿ=ಆಯಾ ಸ್ಥಳಗಳಲ್ಲಿ, ತತ್ತತ್ಸ್ವಭಾವಗಳಾನುಸಾರ=ಆಯಾ ವಸ್ತುಗಳ

ಸ್ವಭಾವಗಳನ್ನನುಸರಿಸಿ, ಚರಿತ್ರೆಗಳ=ಕರ್ಮಗಳನ್ನು, ಮಾಡುತಲಿ, ನೆಲಸಿಪ್ಪ=ವಾಸವಾಗಿರುವನು.

ತಾತ್ಪರ್ಯ.—ಶಾಸ್ತ್ರದೊಳಗೆ, ಜ್ಞಾನವನ್ನು ಕೊಡುವವನಾದುದರಿಂದ ಜ್ಞಾನದನೆಂದು ಕರೆಸುವನು. ವಸ್ತ್ರದಲ್ಲಿದ್ದು ಮಾನವನ್ನುಳಿಸುವುದರಿಂದ ಮಾನದನೆಂದು ಕರೆಸುವನು. ವದಾನ್ಯನೆಂಬುದು ದಾನಶೂರನಿಗೆ ಹೆಸರು. ದಾನಶೀಲರಲ್ಲಿ ವದಾನ್ಯನೆಂದು ಕರೆಸುವನು. ಹೀಗೆ ಗರುಡವಾಹನನಾದ ಶ್ರೀ ಪರಮಾತ್ಮನು ಆಯಾ ಸ್ಥಳಗಳಲ್ಲಿದ್ದು, ಆಯಾ ಸ್ವಭಾವಗಳನ್ನನುಸರಿಸಿ ಕಾರ್ಯಗಳನ್ನು ಮಾಡುತ್ತಾ ನಿತ್ಯದಲ್ಲೂ ವಾಸ ಮಾಡುತ್ತಿರುವನು.

**ಗ್ರಾಮಪನೊಳಗ್ರಣಿ ಯೆನಿಸುವನು**
**ಗ್ರಾಮಣೀ ಯೆನಿಸುವನು ಜನರೊಳು**
**ಗ್ರಾಮುಪಗ್ರಾಮಗಳೊಳಗೆ ಶ್ರೀಮಾನೆನಿಸುತಿಪ್ಪ ||**
**ಶ್ರೀ ಮನೋರಮ ತಾನೆ ಯೋಗ**
**ಕ್ಷೇಮನಾಮಕನಾಗಿ ಸಲಹುವ**
**ಯೀ ಮಹಿಮೆ ಮಿಕ್ಕಾದ ದೈವರಿಗುಂಟೆ ಲೋಕದೊಳು ||೨೪||**

ಪದ್ಯಾರ್ಥ.—ಗ್ರಾಮಪನೊಳು=ಗ್ರಾಮಾಧಿಪತಿಯೊಳಗೆ, ಅಗ್ರಣಿ ಯೆನಿಸುವನು; ಜನರೊಳು=ಊರಿನ ಜನರಲ್ಲಿದ್ದು, ಗ್ರಾಮಣೀ ಯೆನಿಸುವನು; ಗ್ರಾಮ, ಉಪಗ್ರಾಮಗಳೊಳಗೆ, ಇದ್ದು ಶ್ರೀಮಾನ್ ಎನಿಸುತಿಪ್ಪ; ಶ್ರೀ ಮನೋರಮ=ಲಕ್ಷ್ಮೀ ಮನೋರಮನಾದ (ಮನಸ್ಸಿಗೆ ಅಭಿರಾಮನಾದ) ಶ್ರೀ ಪರಮಾತ್ಮನು, ಯೋಗಕ್ಷೇಮನಾಮಕನಾಗಿ, ಸಲಹುವ=ಸಂರಕ್ಷಿಸುವನು. ಈಮಹಿಮೆ=ಇಂತಹಾ ಮಹಿಮೆಯು, ಲೋಕದೊಳು ಮಿಕ್ಕಾವ ದೇವರಿಗುಂಟೆ=ಮಿಕ್ಕ ಯಾವ ದೇವತೆಗಳಿಗಾದರೂ ಉಂಟೆ? ಇಲ್ಲವೆಂಬ ಭಾವ.

ತಾತ್ಪರ್ಯ.—ಗ್ರಾಮಾಧಿಪತಿ ಶಬ್ದದಿಂದ, ದೇಶಾಧಿಪತಿ, ಮಹಾರಾಜ ಮತ್ತೂ ಚಕ್ರವರ್ತಿಗಳು; ಇವರುಗಳಲ್ಲಿದ್ದು ಅಗ್ರಣಿ ಎಂದೆನಿಸುವನು. ಪ್ರಭುವೆಂದೆನಿಸುವನೆಂದರ್ಥ. ಪ್ರಜೆಗಳಲ್ಲಿದ್ದು ಗ್ರಾಮಣೀ ಎನಿಸುವನು. ಗ್ರಾಮಗಳಲ್ಲೂ ಉಪಗ್ರಾಮಗಳಲ್ಲೂ ಇದ್ದು ಶ್ರೀಮಂತನೆನಿಸುವನು. ಇದರಭಿಪ್ರಾಯವೇನೆಂದರೆ:—ವಿಭೂತಿಯನ್ನು ಚಿಂತಿಸುವಂತೆ, ಗ್ರಾಮಗಳಲ್ಲಿ ಗ್ರಾಮಾಧಿಪತಿಯಲ್ಲಿದ್ದು ಪ್ರಭು ಎನಿಸುವನು. ಸಾಮಾನ್ಯ ಪ್ರಜರಲ್ಲಿ ರಾಜ

ನಲ್ಲಿದ್ದು ಪ್ರಭುವೆನಿಸುವನು. ರಾಜರುಗಳ ಮಧ್ಯದಲ್ಲಿ ಚಕ್ರವರ್ತಿಯಲ್ಲಿದ್ದು ಪ್ರಭುವೆನಿಸುವನು. ಅಂತು ಆಯಾ ಗುಂಪುಗಳಿಗೆ ಅಧಿಪತಿ ಸ್ಥಾನದಲ್ಲಿದ್ದು ಆ ಪ್ರಭು ಕಾರ್ಯವನ್ನು ತಾನು ಮಾಡುವನೆಂಬ ತಾತ್ಪರ್ಯ. ಲಕ್ಷ್ಮೀ ಮನೋಹರನಾದ ಶ್ರೀಮನ್ನಾರಾಯಣನು ಸಕಲ ಪ್ರಜೆಗಳಲ್ಲೂ ಯೋಗ ಕ್ಷೇಮನೆಂಬ ಹೆಸರಿನಿಂದ ತಾನಿದ್ದು ಯೋಗಕ್ಷೇಮವನ್ನು ತಾನು ವಹಿಸಿ ಸಂರಕ್ಷಿಸುವನು. ಇಂತಹಾ ಮಹಿಮೆಯು ಮಿಕ್ಕ ಯಾವ ದೇವತೆಗಳಿಗಾದರೂ ಉಂಟೆ? ಎಂದಿಗೂ ಇಲ್ಲವೆಂಬ ತಾತ್ಪರ್ಯ.

**ವಿಜಯಸಾರಥಿಯೆಂದು ಗರುಡ**
**ಧ್ವಜನಮೂರ್ತಿಯ ಭಕ್ತಿಪೂರ್ವಕ**
**ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿ ಯೊಲಿದು ||**
**ವಿಜಯದನು ತಾನಾಗಿ ಸಲಹುವ**
**ಭುಜಗ ಭೂಷಣ ಪೂಜ್ಯ ಚರಣಾಂ**
**ಬುಜವಿಭೂತಿದ ಭುವನ ಮೋಹನ ರೂಪನಿರ್ಲೇಪ ||೨೫||**

ಪದ್ಯಾರ್ಥ.—ವಿಜಯಸಾರಥಿಯೆಂದು=ಅರ್ಜುನನ ಸಾರಥಿ ಎಂದು (ಪಾರ್ಥ ಸಾರಥಿ ಎಂದು) ಗರುಡಧ್ವಜನ ಮೂರ್ತಿಯನ್ನು ಭಕ್ತಿ ಪೂರ್ವಕವಾಗಿ, ಭಜಿಸುತಿಪ್ಪ ಮಹಾತ್ಮರಿಗೆ, ಭುಜಗಭೂಷಣಪೂಜ್ಯ ಚರಣಾಂಬುಜ=ಸರ್ಪ ಭೂಷಣರಾದ ರುದ್ರದೇವರಿಂದ ಪೂಜ್ಯವಾದ ಪಾದ ಕಮಲಗಳುಳ್ಳ, ವಿಭೂತಿದ=ಭಕ್ತರಿಗೆ ಪರಮೈಶ್ವರ್ಯವನ್ನು ಕೊಡುವವನಾದ, ಭುವನ ಮೋಹನರೂಪ=ಲೋಕವನ್ನು ಮೋಹಿಸುವ ರೂಪವುಳ್ಳ, ನಿರ್ಲೇಪ=ನಿರ್ಲಿಪ್ತನಾದ ಶ್ರೀ ಹರಿಯು, ಸರ್ವತ್ರದಲಿ=ಸರ್ವ ದೇಶದಲ್ಲೂ, ಸರ್ವ ಕಾಲದಲ್ಲೂ, ಒಲಿದು=ಪ್ರಸನ್ನನಾಗಿ, ವಿಜಯದನುತಾನಾಗಿ=ವಿಶೇಷವಾದ ಜಯಪ್ರದನಾಗಿ, ಸಲಹುವ=ಸಂರಕ್ಷಣೆ ಮಾಡುವನು.

ತಾತ್ಪರ್ಯ—ಗರುಡಧ್ವಜನಾದ ಶ್ರೀಕೃಷ್ಣಮೂರ್ತಿಯನ್ನು ಪಾರ್ಥ ಸಾರಥಿ ಎಂದು ಭಕ್ತಿ ಪೂರ್ವಕವಾಗಿ ಭಜಿಸುವ ಮಹಾತ್ಮರಿಗೆ ಪರಮಾತ್ಮನು ಪ್ರಸನ್ನನಾಗಿ ಅವರಿಗೆ ಎಲ್ಲಾ ಕಾರ್ಯಗಳಲ್ಲೂ ಜಯವನ್ನು ಕೊಡಿಸಿ ರಕ್ಷಿಸುವನು. ರುದ್ರಾದಿ ದೇವತೆಗಳನ್ನು ಭಜಿಸಿದರೆ ಎಂತಹ ವರವು ದೊರಕುವುದೆಂದರೆ, ರುದ್ರದೇವರು ಪರಮಾತ್ಮನಿಗೆ ಭೃತ್ಯರಾದುದರಿಂದ

ಮಹಾರಾಜನ ಸಾಕ್ಷಾತ್ಪ್ರಸಾದಕ್ಕೂ, ಅವನ ಭೃತ್ಯನ ಪ್ರಸಾದಕ್ಕೂ ಎಷ್ಟು ಭೇದ ವಿರುವುದೋ ಇಲ್ಲೂ ಅಷ್ಟು ಭೇದವಿರುವುದೆಂದು ತೋರಿಸುವುದ ಕ್ಕಾಗಿ ಭುಜಗ ಭೂಷಣಪೂಜ್ಯ ಚರಣಾಂಬುಜನೆಂದರು ರುದ್ರದೇವರಿಂದ ಪೂಜ್ಯವಾದ ಪಾದಕಮಲಗಳುಳ್ಳವನೆಂದ ಮೇಲೆ ರುದ್ರದೇವರು ಭೃತ್ಯ ರೆಂದು ಬೇರೆ ಹೇಳಬೇಕೆ? ಆದ್ದರಿಂದ ವಿಭೂತಿದನೆಂದರು ; ಇಹ ಪರಂಗ ಳಲ್ಲೂ ಪರಮಾತ್ಮನು ಕೊಡುವ ಐಶ್ವರ್ಯಕ್ಕೆ ಹಾನಿ ಇಲ್ಲವು. ಮಿಕ್ಕವರು ಕೊ ಟ್ಟರೂ ಅಲ್ಪ ಫಲವನ್ನು ಕೊಡುವರು. ಪರಮಾತ್ಮನು ಮಹಾ ಫಲವನ್ನು ಕೊಡುವನೆಂಬ ತಾತ್ಪರ್ಯ. ಬ್ರಹ್ಮ, ವಿಷ್ಣು, ಮಹೇಶ್ವರರು ಮೂವರೂ ವರ ಗಳನ್ನು ಕೊಡುವವರೆ; ಆದರೂ, (ಭಾಗವತ ದಶಮಸ್ಕಂಧ ಉತ್ತರಾರ್ಧ ದಲ್ಲಿ ೯೧ನೆಯ ಅಧ್ಯಾಯ) " ಸದ್ಯಃ ಶಾಪಪ್ರಸಾದೋಂಗ ಶಿವೋ ಬ್ರಹ್ಮಾ ನಚಾಚ್ಯುತಃ " ರುದ್ರದೇವರಾಗಲಿ, ಬ್ರಹ್ಮದೇವರಾಗಲಿ ಇವರುಗಳು ಪ್ರಸ ನ್ನರಾಗಬೇಕಾದರೂ, ಕೋಪಿಸಿಕೊಳ್ಳಬೇಕಾದರೂ ತಕ್ಷಣದಲ್ಲೇ ; ಅಂದರೆ ಸ್ವಲ್ಪವಾದ ತಪಸ್ಸಿಗೆ ಮೆಚ್ಚಿ ತಕ್ಷಣವೇ ವರವನ್ನು ಕೊಡುವರು. ಸ್ವಲ್ಪ ಅಪರಾಧಕ್ಕೆ ಕುಪಿತರಾಗಿ ಶಾಪವನ್ನೂ ಕೊಡುವರು. ಇವೆರಡೂ ಸ್ಥಿರವಾ ದವಲ್ಲ. ರುದ್ರದೇವರು ಕೊಟ್ಟ ವರವನ್ನು ವಾಯುದೇವರು ಶ್ರೀಪರಮಾ ತ್ಮನೂ ಸಹ ನಾಶ ಮಾಡುವನು. ಬ್ರಹ್ಮದೇವರ ವರವನ್ನೂ ಕೆಲವು ಕಡೆ ವಾಯು ದೇವರೂ, ಕೆಲವು ಸ್ಥಳಗಳಲ್ಲಿ ಪರಮಾತ್ಮನೂ ಧ್ವಂಸ ಮಾಡು ವರು. ಪರಮಾತ್ಮನು ಕೊಟ್ಟ ವರಕ್ಕೆ ಹಾನಿ ಇಲ್ಲವೆಂದು ಭಾಗವತಾದಿ ವಚ ನವಿರುವುದರಿಂದ ಆ ಆಧಾರದ ಮೇಲೆ ಈ ಅರ್ಥವು ಇಲ್ಲಿ ಬರೆಯಲ್ಪಟ್ಟಿದೆ

ಅವತಾರಿಕೆ.—ಜೀವರು ಅನಾದಿ ಕಾಲದಿಂದಲೂ ಕರ್ಮ ಬದ್ಧರಾಗಿ ತಾವು ಅನುಭವಿಸಬೇಕಾದ ಸುಖ ದುಃಖಗಳನ್ನು ಸೃಷ್ಟಿಗೆ ಪೂರ್ವದಲ್ಲಿ ತಾವು ಅರಿಯದೆ ಇರುವುದನ್ನು ಪರಮಾತ್ಮನು ತಿಳಿದು ಕರುಣದಿಂದ ಸೃ ಷ್ಟಿಸಿ ಜೀವರಿಗೆ ಸುಖ ದುಃಖಗಳನ್ನು ಉಣಿಸುವನೆಂದು ಹೇಳುತ್ತಾರೆ.

**ಅನಭಿಮತ ಕರ್ಮಪ್ರವಹದೊಳ**
**ಗನಿಮಿಷಾದಿ ಸಮಸ್ತ ಚೇತನ**
**ಗಣವಿಹುದು ತತ್ಫಲಗಳುಣ್ಣದೆ ಸೃಷ್ಟಿಸದಮುನ್ನ ॥**
**ವನಿತೆಯಿಂದೊಡಗೂಡಿ ಕರುಣಾ**
**ವನಧಿನಿರ್ಮಿಸೆ ತಮ್ಮ ತಮ್ಮಯ**
**ಅನುಚಿತೋಚಿತಕರ್ಮಫಲಗಳ ನುಣುತ ಚರಿಸುವರು ॥೨೬॥**

ಪದ್ಯಾರ್ಥ.—ಸೃಷ್ಟಿಸದಮುನ್ನ=ಜೀವರನ್ನು ಸೃಷ್ಟಿಗೆ ತಾರದ ಮುಂಚೆ, ಅನಭಿಮತಕರ್ಮಪ್ರವಹದೊಳು=ಅವರವರು ತಮ್ಮ ತಮ್ಮ ಕರ್ಮಗಳಿಂತಹುದೆಂದು ಅರಿಯದೆ, ಆ ಕರ್ಮಗಳನ್ನು ಅಪೇಕ್ಷಿಸದೆ, ತತ್ಫಲಗಳುಣದೆ=ಆ ಕರ್ಮ ಫಲಗಳನ್ನು ಅನುಭವಿಸದೆ, ಅನಿಮಿಷಾದಿ–ದೇವತೆಗಳು ಮೊದಲಾದ. ಸಮಸ್ತಚೇತನಗಣವಿಹುದು – ಜೀವರಾಶಿಗಳಿರುವವು ವನಿತೆಯಿಂದೊಡಗೂಡಿ=ಶ್ರೀಲಕ್ಷ್ಮೀ ದೇವಿಯರಿಂದೊಡಗೂಡಿ, ಕರುಣಾವನಧಿ=ಕರುಣಾ ಸಮುದ್ರನು, ನಿರ್ಮಿಸೆ= ಸೃಷ್ಟಿ ಮಾಡಲು, ತಮ ತಮ್ಮಯ, ಅನುಚಿತೋಚಿತ ಕರ್ಮಗಳ=ಒಳ್ಳೆಯದು ಮತ್ತು ಕೆಟ್ಟ ಕರ್ಮಗಳು (ಅಥವಾ ಪುಣ್ಯ ಪಾಪ ಕರ್ಮಗಳು) ಇವುಗಳನ್ನು, ಉಣುತ=ಭುಂಜಿಸುತ, ಚರಿಸುವರು.

ತಾತ್ಪರ್ಯ.—ಜೀವರನ್ನು ಸೃಷ್ಟಿಗೆ ಬಾರದ ಮುಂಚೆ, ಅನಾದಿ ಕಾಲೀನವಾದ ಕರ್ಮದಿಂದ ಬದ್ಧರಾಗಿದ್ದರೂ ಕರ್ಮವನ್ನು ಮಾಡುವ ಇಚ್ಛೆಯು ಇರುವುದಿಲ್ಲ. ಕರ್ಮಫಲವನ್ನನುಭವಿಸುವುದಿಲ್ಲ ತಮ್ಮ ಯೋಗ್ಯತೆ ಇಂತಹುದೆಂದೂ ಗೊತ್ತಾಗಿರುವದಿಲ್ಲ. ಇಂತಹಾ ಜೀವರು ಸಾತ್ವಿಕ ರಾಜಸ ತಾಮಸ ಭೇದದಿಂದ, ದೇವತೆಗಳು, ದೈತ್ಯರು ಮನುಷ್ಯರು ಮೊದಲಾದ ಜಾತಿಯಲ್ಲಿ ಹುಟ್ಟಿ ಕರ್ಮವನ್ನು ಮಾಡಲು ಯೋಗ್ಯರಾದ ರಾಶಿಗಳು ಅನೇಕವಿರುವವು. ಕರುಣಾ ಸಮುದ್ರನಾದ ಶ್ರೀಹರಿಯು, ತನ್ನ ಪತ್ನಿಯಾದ ರಮಾದೇವಿಯಿಂದೊಡಗೂಡಿ, ದೇವ ದೈತ್ಯ ಮನುಷ್ಯಾದಿಗಳನ್ನು ಸೃಷ್ಟಿಸಲು, ಅವರವರ ಯೋಗ್ಯತಾನುಸಾರವಾಗಿ ಪುಣ್ಯ ಪಾಪಾದಿ ಕರ್ಮಗಳನ್ನು ಮಾಡಿ ಫಲಗಳನ್ನು ಭುಂಜಿಸುತ್ತ ಭೂಮಿ, ಸ್ವರ್ಗ, ನರಕಾದಿಗಳಲ್ಲಿ ಸಂಚರಿಸುವರು.

ಅವತಾರಿಕೆ.—ಕ್ಷಣಿಕವಾದ ಸಂಸಾರ ಸುಖವನ್ನು ನಂಬಿ, ಅಲ್ಪ ಜನರ ಸಹವಾಸವನ್ನು ಮಾಡಿ ಕೆಡದೆ ಸಜ್ಜನರ ಸಂಗದಿಂದ ಶ್ರೀವಲ್ಲಭನ ಭಜಿಸಿ ಪರಮ ಪದವಿಯನ್ನು ಪಡೆಯಬೇಕೆಂದು ಹೇಳುತ್ತಾರೆ.

**ಝಲ್ಲಡಿಯನೆಳಲಂತೆ ಭವಸುಖ**
**ತಲ್ಲಣವಗೊಳಿಸುವದು ನಿಚ್ಚಯ**
**ವಲ್ಲಸಾಲನಮಾಡಿಸಕ್ಕರೆ ಮೆದ್ದತೆರನಂತೆ ||**
**ಕ್ಷುಲ್ಲಕರಕೂಡಾಡದಲೆ ಶ್ರೀ**
**ವಲ್ಲಭನ ಸದ್ಗುಣಗಣಂಗಳ**
**ಬಲ್ಲವರಕೂಡಾಡಿಸಂಪಾದಿಸು ಪರಂಪದವ ||೨೭||**

ಪದ್ಯಾರ್ಥ.—ಝುಲ್ಲಡಿಯನೆಳಲಂತೆ=ಬಂದರಿಗೆಯ ನೆಳಲಂತೆ, ಭವ ಸುಖ=ಸಂಸಾರ ಸುಖವು, ತಲ್ಲಣವೆಗೊಳಿಸುವದು=ದುಃಖವೇ ಅಧಿಕವಾಗಿ ರುವುದು. ನಿಶ್ಚಯವಲ್ಲ=ಆ ಸ್ವಲ್ಪ ಸುಖವೂ ನಿಶ್ಚಯವಲ್ಲ. ಸಾಲವಮಾಡಿ ಸಕ್ಕರೆ ಮೆದ್ದಂತೆ=ಸಾಲಮಾಡಿ ಸಕ್ಕರೆ ತಿನ್ನುವುದರಲ್ಲಿ ಸಕ್ಕರೆ ತಿನ್ನುವಾಗ ಸ್ವಲ್ಪ ಸಿಹಿಯಾಗಿ ಸುಖ ಕಂಡು ಬಂದರೂ, ಸಾಲಗಾರನು ಪೀಡಿಸುವಾಗ ಬಹಳ ಕಷ್ಟವಾಗುವದು. ಅದರಂತೆ ಸಂಸಾರದಲ್ಲಿ ಸ್ತ್ರೀಯಾದಿ ಭೋಗಗ ಳಿಂದ ಸ್ವಲ್ಪ ಸುಖ ಕಂಡು ಬಂದರೂ ಅನಂತರದಲ್ಲಿ ಅನಂತ ದುಃಖವನ್ನು ಅನುಭವಿಸಬೇಕೆಂಬರ್ಥ. ಇಂತಹಾ ಸಂಸಾರದಲ್ಲಿ, ಕ್ಷುಲ್ಲಕರ ಕೂಡಾಡದ ಲೆ=ಅಜ್ಞರಾದ ಅಲ್ಪಜನರ ಸಹವಾಸವನ್ನು ಮಾಡದೆ, ಅಥವಾ ತಮೋ ಯೋಗ್ಯ ಜನರೊಂದಿಗೆ ಮಾತಾಡುತ್ತಿರದೆ, ಬಲ್ಲವರಕೂಡಾಡಿ=ಜ್ಞಾನಿಗಳ ಸಹವಾಸವನ್ನು ಮಾಡುತ್ತಾ ಅವರ ಕೂಡಾಡುವುದೆಂದರೆ, ಅವರ ಮುಖ ದಿಂದ ಶ್ರವಣಾದಿಗಳನ್ನು ಮಾಡುತ್ತಾ, ಪರಂಪದವ=ಉತ್ತಮವಾದ ಪರ ಮಾತ್ಮನ ಪರಮ ಪದವಿಯನ್ನು ಸಂಪಾದಿಸು.

ತಾತ್ಪರ್ಯ.—ಝುಲ್ಲಡಿಯ ನೆಳಲು ಛಿದ್ರಗಳು ಬಹಳವಾಗಿರುವುದರಿಂ ದ ನೆಳಲು ಸ್ವಲ್ಪವಾಗಿಯೂ, ಬಿಸಿಲು ಹೆಚ್ಚಾಗಿಯೂ, ಕಂಡುಬರುವುದು. ಅದರಂತೆ ಸಂಸಾರದಲ್ಲಿ ದುಃಖ ಬಹಳವಾಗಿಯೂ, ಸುಖ ಸ್ವಲ್ಪವಾಗಿಯೂ ಇರುವದೆಂಬ ತಾತ್ಪರ್ಯ. ಹೀಗೆ ದುಃಖವೇ ಹೆಚ್ಚಾಗಿರುವುದರಿಂದ ಸು ಖವು ಅತ್ಯಲ್ಪವಾಗಿರುವುದು. ಅದೂ ನಿಶ್ಚಯವಲ್ಲ. ಇದರಿಂದ ಸಂಸಾರದಲ್ಲಾ ಗುವ ಸುಖವು ಎಂತಹುದೆಂದರೆ ಸಾಲವನ್ನು ಮಾಡಿ ಸಕ್ಕರೆ ತಿನ್ನುವಾಗ ಹೇಗೆ ಸಕ್ಕರೆ ತಿನ್ನುವಾಗ ಸ್ವಲ್ಪ ಸುಖ ಕಂಡುಬಂದರೂ ಸಾಲಗಾರನು ಬಂದು ಸಾಲವನ್ನು ಬೇಡಿ ಪೀಡಿಸುವಾಗ ಬಹಳ ಕಷ್ಟವು ಕಂಡು ಬರು ವದೋ ಹಾಗೆ ಸಂಸಾರದಲ್ಲೂ ಸ್ತ್ರೀಯಾದಿ ಭೋಗಗಳಿಂದ ಅಲ್ಪವಾದ ಸುಖವು ಕಂಡುಬಂದರೂ ಅನಂತರದಲ್ಲಿ ಅಪಾರವಾದ ದುಃಖವನ್ನನುಭವಿಸ ಬೇಕಾಗುವುದು. ಆದ್ದರಿಂದ ಅಯೋಗ್ಯರ ಸಹವಾಸವನ್ನೂ ಸಂಭಾಷಣೆ ಯನ್ನೂ ಬಿಟ್ಟು ಜ್ಞಾನಿಗಳ ಸಹವಾಸವನ್ನು ಮಾಡಿ ಶ್ರೀಲಕ್ಷ್ಮೀ ಪತಿ ಯಾದ ಶ್ರೀ ಪರಮಾತ್ಮನ ಗುಣ ಗಣಂಗಳನ್ನು ಶ್ರವಣಾದಿಗಳನ್ನು ಮಾ ಡುತ್ತಾ ಪರಮಪದವಿಯನ್ನು ಸಂಪಾದಿಸು.

ಅವತಾರಿಕೆ.—ಪ್ರಾರಬ್ಧಕರ್ಮವು ಜೀವರಿಗೆ ಅನಾದಿಕಾಲವಾಗಿ ಇರುವುದರಿಂದ ಈ ದುಃಖಮಯವಾದ ಸಂಸಾರವನ್ನು ದಾಟುವುದಕ್ಕಾಗಿ ಸತ್ಸಾಧನವನ್ನು ಮಾಡಿಕೊಳ್ಳೆಂದು ಹೇಳುತ್ತಾರೆ.—

**ಝುಲ್ಲಡಿಯ ನೆಳಲಂತೆ ತೋರ್ಪದು**
**ಯೆಲ್ಲಕಾಲದಿ ಭವದಸೌಖ್ಯವು**
**ಯೆಲ್ಲಿಪೋಕ್ಕರು ಬಿಡದೆ ಬೆಂಬತ್ತಿಹದು ಜೀವರಿಗೆ ||**
**ಒಲ್ಲೆನೆಂದರೆ ಬಿಡದು ಹರಿನಿ**
**ರ್ಮಾಲ್ಯ ನೈವೇದ್ಯವನೆ ಭುಂಜಿಸಿ**
**ಬಲ್ಲವರ ಕೂಡಾಡು ಭವದುಃಖಗಳನೀಡಾಡು ||೨೫||**

ಪದ್ಯಾರ್ಥ.—ಭವದಸೌಖ್ಯವು=ಸಂಸಾರದ ಸುಖವು, ಯೆಲ್ಲಕಾಲದಿ =ಸರ್ವಕಾಲದಲ್ಲೂ, ಝುಲ್ಲಡಿಯನೆಳಲಂತೆ ತೋರ್ಪದು=ಝುಲ್ಲಡಿಯ ನೆಳಲಂತೆ ದುಃಖ ಬಹಳವಾಗಿಯೂ, ಅತ್ಯಲ್ಪ ಸುಖವಾಗಿಯೂ ಕಂಡುಬರುವುದು. ಜೀವರಿಗೆ, ಯಲ್ಲಿಪೊಕ್ಕರುಬಿಡದೆ=ಎಲ್ಲಿಗೆ ಹೋದರೂ ಬಿಡದೆ, ಬೆಂಬತ್ತಿಹದು=ಸುಖದುಃಖರೂಪವಾದ ಪ್ರಾರಬ್ಧ ಕರ್ಮವು ಬೆನ್ನು ಹತ್ತಿರುವುದು (ನಮ್ಮ ಕೂಡಲೇ ಇರುವುದು) ಒಲ್ಲೆನೆಂದರೆ ಬಿಡದು-ನನಗೆ ಬೇಡವೆಂದರೂ ಬಿಡುವಂತಿಲ್ಲ. ಹರಿನಿರ್ಮಾಲ್ಯನೈವೇದ್ಯವನುಭುಂಜಿಸಿ=ಪರಮಾತ್ಮನ ನಿರ್ಮಾಲ್ಯವನ್ನು ಅಘ್ರಾಣಿಸಿ ನೈವೇದ್ಯವನ್ನು ಭೋಜನಮಾಡಿ, ಬಲ್ಲವರಕೂಡಾಡು-ಜ್ಞಾನಿಗಳ ಸಹವಾಸವನ್ನು ಮಾಡು, ಭವದುಃಖಗಳನು-ಸಂಸಾರ ದುಃಖಗಳನ್ನು, ಈಡಾಡು=ಕಳೆದುಕೊಳ್ಳುವ ಮಾರ್ಗವನ್ನು ಹುಡುಕು.

ತಾತ್ಪರ್ಯ.—ಈ ಸಂಸಾರ ಸುಖವು ಝುಲ್ಲಡಿಯ ನೆಳಲಂತೆ ಅತ್ಯಲ್ಪ ಸುಖವು, ದುಃಖಪೂರ್ಣವಾಗಿರುವುದು. ಆದ್ದರಿಂದಲೇ ಭಾಗವತ ಸಪ್ತಮಸ್ಕಂಧದಲ್ಲಿ ಪ್ರಹ್ಲಾದನು ಸ್ತೋತ್ರಮಾಡುವಾಗ "ಕಂಡೂಯನೇನಕರಯೋರಿವ ದುಃಖ ದುಃಖಂ" "ತ್ರಸ್ತೋಸ್ಮ್ಯಹಂ ಕೃಪಣವತ್ಸಲ ದುಃಸಹೋಗ್ರ ಸಂಸಾರ ಚಕ್ರಕದನಾಕ್ಕ್ರಶತಾಂಪ್ರಣೀತಃ || ಯಸ್ಮಾತ್ಪ್ರಿಯಾಪ್ರಿಯವಿಯೋಗ ಸಯೋಗ ಜನ್ಮ ಶೋಕಾಗ್ನಿನಾ ಸಕಲಯೋನಿಷುದಹ್ಯಮಾನಃ ದುಃಖೌಷಧಂ ತದಪಿ ದುಃಖಮತದ್ಧಿಯಾಹಂ ಭೂಮನ್ ಭ್ರಮಾಮಿವದ ಮೇತವದಾಸ್ಯಯೋಗಂ ||" ಕೈಯಲ್ಲಿ ತುರಿಹಿಡಿದವನು ತಿಂಡಿಹತ್ತಿ ತುರಿಸು

ವಾಗ ಸ್ವಲ್ಪ ಸುಖವು ಕಂಡುಬಂದರೂ, ತುರಿಸಿ ಆದಮೇಲೆ ಉರಿಹತ್ತಲು ಹೇಗೆ ಬಾಯಿಬಡಿದುಕೊಳ್ಳುವಷ್ಟು ದುಃಖಪಡುವನೋ ಅಂತಹ ಸುಖ ದುಃಖಗಳೇ ಈ ಸಂಸಾರದಲ್ಲಿ ಕಾಣುವುದು. ಎಲೈ ನರಸಿಂಹ! ನಿನ್ನ ಈ ಭಯಂಕರವಾದ ರೂಪವನ್ನು ಕಂಡು ನಾನು ಭಯಪಡುವುದಿಲ್ಲ. ಮಹಾ ಉಗ್ರವಾದ ಸಹಿಸಲಶಕ್ಯವಾದ ಸಂಸಾರ ಚಕ್ರದಲ್ಲಿ ತಗಲಿ ಎಲ್ಲಿ ಕಷ್ಟವನ್ನ ನುಭವಿಸಬೇಕಾಗುವುದೋ ಎಂದು ಆ ಒಂದಕ್ಕೆ ನಾನು ಬಹಳ ಭಯಪಡು ವೆನು. ಅದರಲ್ಲಿ ಹೆಚ್ಚಿನ ದುಃಖವೇನೆಂದರೆ, ಯಾವವಸ್ತು ನಮಗೆ ಪ್ರಿಯ ವೆಂದು ತಿಳಿದು ನಾವು ಅದನ್ನು ಬಿಡಬಾರದೆಂದಿರುವೆವೋ ಅದು ನಮ್ಮನ್ನು ಬಿಟ್ಟು ಹೋಗುವುದು. ಯಾವುದು ನಮಗಾಗದೆಂದು ನಾವು ನಿರಾಕರಿಸು ತ್ತಿರುವೆವೋ ಅದು ನಮ್ಮನ್ನು ಬಿಡಲೊಲ್ಲದು. ಇದಲ್ಲದೆ ಜನನಮರಣ ರೂಪವಾದ ದುಃಖ, ಹೀಗೆ ಯಾವ ಯೋನಿಯಲ್ಲಿ ಹುಟ್ಟಿದರೂ ಶೋಕಾ ಗ್ನಿಯಿಂದ ದಹ್ಯಮಾನನಾಗಿ ಕಷ್ಟಪಟ್ಟೇ ತೀರಬೇಕು. ಆ ದುಃಖಪರಿಹಾ ರಕ್ಕೆ ಏನಾದರೂ ಮಾರ್ಗಮಾಡಿದರೂ ಅದರಿಂದ ದುಃಖವೇ ಬರುವುದು. ಆದ್ದರಿಂದ ಆ ಸಂಸಾರಕ್ಕೆ ಹೆದರಿ ನಿನ್ನನ್ನು ಮೊರೆಹೊಕ್ಕಿರುವೆನು; ಹೇ ಪ್ರಭೋ! ನಿನ್ನ ದಾಸ್ಯವನ್ನು ಕೊಟ್ಟು ನನ್ನನ್ನುದ್ಧರಿಸು; ಎಂದು ಕೇಳಿ ಕೊಂಡಿರುವನು. ಆದ್ದರಿಂದಲೇ ದಾಸಾರ್ಯರು ಬಹಳ ದುಃಖಮಯವಾದ ಸಂಸಾರವಿದೆಂದು ಹೇಳಿದರು. ಇದನ್ನು ಪ್ರಕಾರಾಂತರದಿಂದ ಪರಿಹರಿಸಿ ಕೊಳ್ಳಲು ಸಾಧ್ಯವಲ್ಲ. ಸುಖದುಃಖ ರೂಪವಾದ ಪ್ರಾಚೀನಕರ್ಮವು ಇವ ನು ಎಲ್ಲಿ ಹೋದರೂ ಬಿಡದೆ ಇವನನ್ನು ಅನುಸರಿಸಿಕೊಂಡೇ ಇರುವುದು. ಆದ್ದರಿಂದ ದಾಸಾರ್ಯರು "ಪ್ರಾಚೀನಕರ್ಮವಿದು ಬೆನ್ನಬಿಡದು" ಎಂದು ಪದಮಾಡಿರುವರು. ಆದ್ದರಿಂದ ಐಹಿಕದ ಅಲ್ಪ ಸುಖಕ್ಕಾಶೆಪಡದೆ ಶಾಶ್ವತ ಸುಖರೂಪವಾದ ಮುಕ್ತಿಗೋಸ್ಕರವಾಗಿ ಪರಮಾತ್ಮನ ಪಾದಕ್ಕರ್ಪಿತವಾದ ತುಲಸೀ ಪುಷ್ಪಗಳನ್ನು ಆಘ್ರಾಣಿಸುತ್ತಾ ಹರಿನೈವೇದ್ಯವನ್ನುಣ್ಣುತ್ತಾ ಸಜ್ಜ ನರ ಸಂಗದಿಂದ ಕಾಲಕಳೆಯುತ್ತಾ ಹರಿಕಥಾಶ್ರವಣಾದಿಗಳನ್ನು ಮಾಡಿ ಸಂ ಸಾರದಿಂದ ಮುಕ್ತನಾಗಬೇಕೆಂಬ ತಾತ್ಪರ್ಯ. ನಿರ್ಮಾಲ್ಯವನ್ನಾಘ್ರಾಣಿ ಸುವುದು; ನೈವೇದ್ಯವನ್ನು ಸ್ವೀಕರಿಸುವುದೆಂಬ ಎರಡೇ ಅಲ್ಲ. ಇದನ್ನು ಉ ಪಲಕ್ಷಣವನ್ನಾಗಿ ತೆಗೆದುಕೊಂಡು ಕರಚರಣಾದಿ ಎಲ್ಲಾ ಇಂದ್ರಿಯಗಳನ್ನು

ಭಗವತ್ಸೇವಾಕ್ಕೆ ಉಪಯೋಗಿಸಬೇಕೆಂಬ ತಾತ್ಪರ್ಯ. ಭಾಗವತ ನವನು ಸ್ಕಂಧದಲ್ಲಿ ಇಂದ್ರಿಯಗಳನ್ನು ಉಪಯೋಗಿಸುವ ಪ್ರಕಾರವನ್ನು ಹೇಳಿರುವರು. ಅದೆಂತೆನೆ:—ಸವೈಮನಃ ಕೃಷ್ಣಪದಾರವಿಂದಯೋರ್ವಚಾಂಸಿ ವೈಕುಂಠಗುಣಾನು ವರ್ಣನೇ॥ ಕರೌಹರೇರ್ಮಂದಿರಮಾರ್ಜನಾದಿಷು ಶ್ರುತೀ ಚಕಾರಾಚ್ಯುತ ಸತ್ಕಥೋದಯೇ॥ ಮುಕುಂದ ಲಿಂಗಾಲಯ ದರ್ಶನೇದೃಶೌತದ್ಭೃತ್ಯಗಾತ್ರ ಸ್ಪರ್ಶೇಂಗ ಸಂಗಂ॥ ಘ್ರಾಣಂಚ ತತ್ಪಾದ ಸರೋಜ ಸೌಂಭ ಶ್ರೀಮತ್ತುಲಸ್ಯಾಂ ರಸನಾಂತದರ್ಪಿತೆ॥ ಪಾದೌಹರೇಃ ಕ್ಷೇತ್ರಪಥಾನುಸರ್ಪಣೇಶಿರೋ ಹೃಷೀಕೇಶ ಪದಾಭಿವಂದನೆ॥ ಕಾಮಂತು ದಾಸ್ಯೇನತು ಕಾಮಕಾಮ್ಯಯಾತಥೋತ್ತಮ ಶ್ಲೋಕ ಜನಾಶ್ರಯಾಂರತಿಂ॥" ಅಂಬರೀಷರಾಜನು ಇದ್ದ ಸ್ಥಿತಿಯನ್ನು ಹೇಳಿರುವರು. ಮನಸ್ಸನ್ನು ಕೃಷ್ಣನ ಪಾದಾರವಿಂದದಲ್ಲಿ ಇಟ್ಟಿದ್ದನು. ವಾಕ್ಯವನ್ನು ವೈಕುಂಠನಾಮಕ ಪರಮಾತ್ಮನ ಗುಣಗಳನ್ನು ಅನುವಾದನಮಾಡಲು ಉಪಯೋಗಿಸಿದ್ದನು. ಕೈಗಳನ್ನು ಪರಮಾತ್ಮನ ಮನೆಯನ್ನು ಕಸತೆಗೆದು ಸಾರಿಸುವುದಕ್ಕೆ ಉಪಯೋಗಿಸಿದ್ದನು. ಕಿವಿಗಳನ್ನು ಪರಮಾತ್ಮನ ಕಥಾಶ್ರವಣಕ್ಕೂ, ಕಣ್ಣುಗಳನ್ನು ಪ್ರತಿಮಾದಿಗಳ ದರ್ಶನಕ್ಕೂ ಪರಮಾತ್ಮನ ಭೃತ್ಯರ ಸ್ಪರ್ಶನಕ್ಕಾಗಿ ಅಂದರೆ ಅಂಗ ಸಂಗಕ್ಕಾಗಿ, ಮೂಗುಗಳನ್ನು ಪರಮಾತ್ಮನಿಗೆ ಸಮರ್ಪಿಸಿದ ತುಲಸೀ ಮೊದಲಾದವುಗಳನ್ನು ಆಘ್ರಾಣಿಸುವುದಕ್ಕೂ, ನಾಲಿಗೆಯನ್ನು ಪರಮಾತ್ಮನ ನೈವೇದ್ಯವನ್ನು ಭುಂಜಿಸುವುದಕೂ, ಪಾದಗಳನ್ನು ಶ್ರೀಹರಿಯ ತೀರ್ಥಕ್ಷೇತ್ರಗಳ ಸಂಚಾರಕ್ಕೂ ಶಿರಸ್ಸನ್ನು ಹೃಷೀಕೇಶನ ಪಾದಗಳಲ್ಲಿ ನಮಸ್ಕಾರಮಾಡುವುದಕ್ಕೂ ಉಪಯೋಗಿಸಿದ್ದನು, ಕಾಮವನ್ನು ಅಂದರೆ ಇಚ್ಛೆಯನ್ನು ಪರಮಾತ್ಮನ ದಾಸ್ಯದಲ್ಲಿಟ್ಟಿದ್ದನು. ರತಿಸುಖವೆಂದರೆ ಉತ್ತಮ ಶ್ಲೋಕನಾದ ಪರಮಾತ್ಮನ ಭಕ್ತಜನರ ಸಹವಾಸದಿಂದಲೇ ಸುಖವನ್ನು ಹೊಂದುತ್ತಿದ್ದನು ಎಂದು ಹೇಳಿರುವರು. ಹೀಗೆ ಎಲ್ಲಾ ಇಂದ್ರಿಯಗಳನ್ನು ಭಗವತ್ಸೇವಾಕ್ಕೆ ಉಪಯೋಗಿಬೇಕೆಂಬ ತಾತ್ಪರ್ಯ.

ಅವತಾರಿಕೆ.—ಮೋಚಿದ ಅಡಿಗೆಯನ್ನು ಪರಮಾತ್ಮನಿಗೆ ನೈವೇದ್ಯ ವೈಶ್ವದೇವವಿಲ್ಲದೆ ಭೋಜನಮಾಡಬಾರದೆಂದು ಹೇಳುತ್ತಾರೆ.

ಕುಟ್ಟಿಕೊಯ್ದು ದನಟ್ಟು ಯಿಟ್ಟದ
ಸುಟ್ಟಿಕೊಟ್ಟದ ಮುಟ್ಟಲಘು ಹಿ
ಟ್ಟಿಟ್ಟು ಮಾಳ್ಪದು ವಿಠಲುಂಡುಚ್ಛಿಷ್ಟ ಸಜ್ಜನರ ||
ಬಿಟ್ಟು ತನ್ನಯ ಹೊಟ್ಟೆಗೋಸುಗ
ಥಟ್ಟನುಣುತಿಹ ಕೆಟ್ಟಮನುಜರ
ಕಟ್ಟವೈದಿಮಪಟ್ಟಣದೊಳೊತ್ತಟ್ಟಲಿಡುತಿಹರು ||೨೯||

ಪದ್ಯಾರ್ಥ.—ಕೊಯ್ದುದನ=ನೆಲ್ಲು ( ಭತ್ತವನ್ನು ) ಕೊಯ್ದು ಆದ ಮೇಲೆ, ಕುಟ್ಟಿ=ಕುಟ್ಟಿ ಅಕ್ಕಿ ಮಾಡಿ, ಅಟ್ಟು=ಅಡಿಗೆಮಾಡಿ, ಇಟ್ಟದ=ನೈವೇದ್ಯವಿಟ್ಟುದುದನ್ನು, ಸುಟ್ಟು=ವೈಶ್ವದೇವವನ್ನು ಮಾಡಿ, ಕೊಟ್ಟದ=ಬ್ರಾಹ್ಮಣಾಂತರ್ಯಾಮಿಯಾದ ಶ್ರೀಪರಮಾತ್ಮನಿಗೆ ಸಮರ್ಪಣೆಮಾಡಿದುದನ್ನು ಬ್ರಾಹ್ಮಣರಿಗೆ ಭೋಜನಮಾಡಿಸಿದ ಶೇಷವನ್ನು ಮುಟ್ಟಲು, ಭುಂಜಿಸಲು, ವಿಠಲ=ಶ್ರೀಹರಿಯು ಉಂಡ, ಉಚ್ಛಿಷ್ಟ=ಶೇಷವು, ಸಜ್ಜನರ=ಭಗವದ್ಭಕ್ತರ, ಅಘ=ಪಾಪಗಳನ್ನು, ಹಿಟ್ಟಿಟ್ಟುಮಾಳ್ಪದು – ಪುಡಿಪುಡಿ ಮಾಡುವುದು, ಬಿಟ್ಟು=ನೈವೇದ್ಯ ವೈಶ್ವದೇವಾದಿಗಳನ್ನು ಮಾಡದೆ ಬಿಟ್ಟು, ತನ್ನಯ ಹೊಟ್ಟೆಗೋಸುಗ=ತನ್ನ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೋಸ್ಕರ, ಥಟ್ಟನೆ, ಅಡಿಗೆಯನ್ನು ಮಾಡಿದಕೂಡಲೆ ನೈವೇದ್ಯ ವೈಶ್ವದೇವವಿಲ್ಲದೆ, ಅತಿಥಿಗಳಿಗೆ ಇಡದೇ, ಹಾಗೇ, ಉಣುತಿಹ=ಭುಂಜಿಸುವ, ಕೆಟ್ಟಮನುಜರ ಕಟ್ಟವೈದುಯಮಪಟ್ಟಣದೊಳು, ಒತ್ತಟ್ಟಲಿ=ಒಂದು ನರಕದಲ್ಲಿ, ಇಡುತಿಹರು=ಹಾಕಿಬಿಡುವರು.

ತಾತ್ಪರ್ಯ.—ನಾವು ಅಡಿಗೆಮಾಡುವ ಅನ್ನದಲ್ಲಿ ೫ ವಿಧವಾದ ಹತ್ಯಾದೋಷವು ಬರುವದು. ನೆಲ್ಲನ್ನು (ಭತ್ತವನ್ನು) ಕೊಯ್ಯುವುದು ೧. ತುಳಿಸುವದು ೨. ಸುಟ್ಟುವದು ೩. ಪೋಟುಹಾಕುವುದು ೪. ಬೇಯಿಸುವುದೆಂಬ ಪಂಚಸೂನಾ ದೋಷವು ಬರುವುದು. ಆ ದೋಷಪರಿಹಾರಕ್ಕೋಸ್ಕರ ಅಡಿಗೆಮಾಡಿದಮೇಲೆ ದೇವರನೈವೇದ್ಯಮಾಡಿ ವೈಶ್ವದೇವವನ್ನು ಮಾಡಬೇಕು. ಅವರಮೇಲೆ ಅತಿಥಿ ಭೋಜನವಂ ಮಾಡಿಸಿ, ಬ್ರಾಹ್ಮಣಾಂತರ್ಗತ ಶ್ರೀಪರಮಾತ್ಮನಿಗೆ ಸಮರ್ಪಿಸಿ ಆ ಶೇಷಾನ್ನವನ್ನು ನಾವು ಭೋಜನ ಮಾಡಿದರೆ ಈ ಪಾಪಗಳೆಲ್ಲವೂ ಪರಿಹಾರವಾಗುವುವು. ನೈವೇದ್ಯ ವೈಶ್ವದೇವವಿಲ್ಲದೆ ಮಾಡಿದ ಅಡಿಗೆಯನ್ನು ತಾನೇ ಉಂಡರೆ "ಆತ್ಮಾರ್ಥಂಪಾಚಿತ

ಪನ್ನಂ ಆಮಿಷಮಿತ್ಯುತ್ಯತೇ" ತನಗೋಸ್ಕರ ಮಾಡಿದ ಅಡಿಗೆಯು ಮಾಂಸಕ್ಕೆ ಸಮವೆಂದು ಧರ್ಮಶಾಸ್ತ್ರದಲ್ಲಿ ಹೇಳಿರುವರು. ಆದ್ದರಿಂದ ಯಾವ ನೀಚಪುರುಷನು ಮಾಡಿದ ಅಡಿಗೆಯನ್ನು ತಕ್ಷಣ ಉಂಡುಬಿಡುವನೋ ಅವನನ್ನು ಯಮದೂತರು ವೈದು ನರಕದಲ್ಲಿ ಹಾಕಿಬಿಡುವರು. ಆದ್ದರಿಂದ ವೈಶ್ವದೇವ ಮೊದಲಾದವುಗಳನ್ನು ಮಾಡಿಯೇ ಭುಂಜಿಸಬೇಕೆಂಬ ಭಾವ.

ಅವತಾರಿಕೆ.—ಭಕ್ತಿಯಿಂದ ನಾಮೋಚ್ಚಾರಣೆ ಮಾಡಲು ಪರಮಾತ್ಮನು ಉದ್ಧರಿಸುವನೆಂದು ಹೇಳುತ್ತಾರೆ.—

**ಜಾಗುಮಾಡದೆ ಭೋಗದಾಸೆಯ**
**ನೀಗಿ ಪರಮನುರಾಗದಲಿ ವರ**
**ಭೋಗಿಶಯನನ ಆಗರದ ಹೆಬ್ಬಾಗಿಲಲಿ ನಿಂದು ||**
**ಕೂಗುತಲಿ ಶಿರಬಾಗಿ ಕರುಣಾ**
**ಸಾಗರನೆ ಭವರೋಗಭೇಷಜ**
**ಕೈಗೊಡೆಂದೆನೆ ಬೇಗಲೊದಗುವ ಭಾಗವತರರಸ ||೩೦||**

ಪದ್ಯಾರ್ಥ.—ಜಾಗುಮಾಡದೇ-ಆಲಸ್ಯಮಾಡದೆ, ಭೋಗದಾಸೆಯ—ಅಲ್ಪವಾದ ವಿಷಯಭೋಗದ ಆಶೆಯನ್ನು, ನೀಗಿ=ಬಿಟ್ಟು, ಪರಮನುರಾಗದಲಿ=ಪರಮ ಭಕ್ತಿಯಿಂದ, ವರಭೋಗಿಶಯನನ=ಉತ್ತಮವಾದ ಸರ್ಪಶಯನನಾದ (ಶೇಷಶಾಯಿಯಾದ) ಶ್ರೀಪರಮಾತ್ಮನ, ಆಗರದ=ಆಲಯದ ಹೆಬ್ಬಾಗಿಲಲಿ-ತಲೆ ಬಾಗಿಲಲ್ಲಿ (ಗೇಟುಬಾಗಿಲಿನಲ್ಲಿ) ನಿಂದು, ಶಿರಬಾಗಿ=ನಮಸ್ಕರಿಸಿ, ಕೂಗುತಲೆ, ಉಚ್ಚಸ್ವರದಿಂದ, ಕರುಣಾಸಾಗರನೇ ! ಭವರೋಗಭೇಷಜ=ಸಂಸಾರವೆಂಬ ರೋಗಕ್ಕೆ ವೈದ್ಯನೇ ! ಕೈಕೊಡು ! ಎಂದೆನೆ=ಹೀಗೆ ಬೇಡಲು, ಭಾಗವತರರಸ=ಭಗವದ್ಭಕ್ತರ ಪ್ರಭುವಾದ ಶ್ರೀಹರಿಯು, ಬೇಗಲೊದುಗುವ=ಅತಿ ಬೇಗನೆ ಬಂದೊದಗುವನು.

ತಾತ್ಪರ್ಯ.—ಸಂಸಾರದಲ್ಲಿ ನಶ್ವರವಾದ, ವಿಷಯದಭಿಲಾಷೆಯನ್ನು ಬಿಟ್ಟು ಆಲಸ್ಯಮಾಡದೆ ಪರಮ ಭಕ್ತಿಯಿಂದ ಶೇಷಶಾಯಿಯಾದ ಶ್ರೀಪರಮಾತ್ಮನ ಆಲಯದ ತಲೆಬಾಗಿಲಿನಲ್ಲಿ ನಿಂತು ಉಚ್ಚವಾದ ಸ್ವರದಿಂದ, ಎಲೈ ಕರುಣಾಸಮುದ್ರನೇ ! ಭವರೋಗಭೇಷಜ ! ಕೈಗೊಡು ! ಎಂದು ಬೇಡಲು ಭಕ್ತರಿಗೆ ಅರಸನಾದ ಶ್ರೀಹರಿಯು ತಕ್ಷಣವೇ ಬಂದೊದಗುವನು.

ಅವತಾರಿಕೆ— ಪರಮಾತ್ಮನ ದಯಾಳತ್ವವನ್ನು ಸಿದ್ಧಪಡಿಸುತ್ತಾರೆ.

ಏನು ಕಾರಣವೊ ತನ್ನವರಲಿ ದ
ಯಾನಿಧಿಗೆ ಸದ್ಭಕ್ತಜನರತಿ
ಹೀನಕರ್ಮವಮಾಡಿದರು ಸರಿ ಸ್ವೀಕರಿಸಿ ಪೊರೆವ ॥
ಪ್ರಾಣಹಿಂಸಕ ಲುಬ್ಧಕಗೆ ಸು
ಜ್ಞಾನಪಾಲಿಸಿ ತನ್ನಮಹಿಮೆ ಪು
ರಾಣರೂಪದಿ ಪೇಳಿಸಿದ ರಘುಸೂನು ಸುಚರಿತ್ರ ॥೩೧॥

ಪದ್ಯಾರ್ಥ.— ದಯಾನಿಧಿಗೆ-ದಯಾನಿಧಿಯಾದ ಶ್ರೀಹರಿಗೆ, ತನ್ನವರಲಿ=ತನ್ನ ಭಕ್ತರಲ್ಲಿ, ಏನುಕರುಣವೋ, ಸದ್ಭಕ್ತ ಜನರು, ಅತಿಹೀನಕರ್ಮವಮಾಡಿದರೂ, ಸ್ವೀಕರಿಸಿ, ಪೊರೆವ=ರಕ್ಷಿಸುವನು, ಪ್ರಾಣಹಿಂಸಕ=ಅನೇಕವಾದ ಪ್ರಾಣಿಗಳನ್ನು ಸಂಹರಿಸುತ್ತಿದ್ದ ಮತ್ತು ಮಾರ್ಗಸ್ಥರಾದ ಬ್ರಾಹ್ಮಣಾದಿ ಜನರನ್ನೂ ಸಹ ಹೊಡದು ಅವರಲ್ಲಿದ್ದ ದ್ರವ್ಯವನ್ನು ಅಪಹರಿಸುತ್ತಿದ್ದ, ಲುಬ್ಧಕಗೆ-ಬೇಡಜಾತಿಯವನಿಗೆ, ಸುಜ್ಞಾನಪಾಲಿಸಿ=ಉತ್ತಮವಾದ ಜ್ಞಾನವನ್ನು ಕೊಡಿಸಿ, ರಘುಸೂನು=ರಘುವಂಶದಲ್ಲಿ ಅವತರಿಸಿದ ಶ್ರೀರಾಮಚಂದ್ರದೇವರ, ಸುಚರಿತ್ರ-ಉತ್ತಮವಾದ ಚರಿತ್ರೆ ರೂಪವಾದ, ತನ್ನ ಮಹಿಮೆ=ತನ್ನ ರಾಮಾವತಾರದ ಮಹಿಮೆಯನ್ನು, ಪುರಾಣರೂಪದಿ=ರಾಮಾಯಣ ರೂಪವಾಗಿ, ಪೇಳಿಸಿದ=ಹೇಳಿಸಿದನು.

ತಾತ್ಪರ್ಯ.— ದಯಾನಿಧಿಯಾದ ಶ್ರೀಹರಿಗೆ ಭಕ್ತರಲ್ಲಿರುವ ಕಾರುಣ್ಯವನ್ನು ಎಷ್ಟೆಂದು ವರ್ಣಿಸುವ! ಅವರು ಏನೇ ನೀಚಕರ್ಮಗಳನ್ನು ಮಾಡಿರಲಿ, ಅವುಗಳನ್ನು ಕ್ಷಮಿಸಿ ಆ ಪಾಪರಾಶಿಗಳನ್ನು ಭಸ್ಮಮಾಡಿ ಅವರನ್ನು ರಕ್ಷಿಸುವನು. ಹಾಗೆ ಯಾರನ್ನು ರಕ್ಷಿಸಿದನೆಂದರೆ, ವಾಲ್ಮೀಕಿಋಷಿಗಳು ಪೂರ್ವದಲ್ಲಿ ಬೇಡಜಾತಿಯವರಾಗಿದ್ದು ಮಾರ್ಗಸ್ಥರಾದ ಜನರನ್ನು ಹೊಡೆದು ದ್ರವ್ಯಗಳನ್ನು ಅಪಹರಿಸುತ್ತಾ, ಹೊಟ್ಟೆಗೋಸ್ಕರ ಅನೇಕ ಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಇವರಿಗೆ ದಿವ್ಯ ಜ್ಞಾನವನ್ನು ಕೊಡಿಸಿದನು. ಅದು ಹೇಗೆಂದರೆ— ಮಾರ್ಗಸ್ಥರನ್ನು ಹೊಡೆಯುವಾಗ ಆಕಸ್ಮಿಕವಾಗಿ ಒಬ್ಬ ಋಷಿಗಳು ದೊರಕಲು, ಅವರ ದರ್ಶನ ಮಾತ್ರದಿಂದ ಅವನಿಗೆ ಸದ್ಬುದ್ಧಿ ಹುಟ್ಟುವಂತೆಮಾಡಿ, ತನಗೆ ಉಪದೇಶಕೊಡಬೇಕೆಂದು ಕೇಳಿದ ಬೇಡನಿಗೆ,

ಋಷಿಗಳು ಪಾಪಿಯಾದ ಬೇಡನಿಗೆ ಮಂತ್ರವನ್ನು ಉಪದೇಶ ಕೊಡಲಿಷ್ಟವಿಲ್ಲದೆ ರಾಮ ಶಬ್ದವನ್ನು ವಿಪರೀತವಾಗಿ ಉಪದೇಶಮಾಡಿ ಹೋಗಲು ಅವನು ಮರಾ, ಮರಾ ಎಂದು ಜಪಿಸುತ್ತಿದ್ದು ಅದರಿಂದಲೇ ಅವನಲ್ಲಿ ಪರಮಾತ್ಮನು ಪರಮಾನುಗ್ರಹಮಾಡಿ ದಿವ್ಯ ಜ್ಞಾನವನ್ನುಂಟುಮಾಡಿಸಿ ಕಡೆಗೆ ನಾರದರ ಮುಖದಿಂದ ರಾಮ ಚರಿತ್ರೆಯನ್ನು ಶ್ರವಣಮಾಡಿ ಬ್ರಹ್ಮದೇವರ ಆಜ್ಞಾಪ್ರಕಾರ ಏಳುಕಾಂಡ ರಾಮಾಯಣವನ್ನು ಸೃಷ್ಟಿಸಿದರು. ಅದೇ ವಾಲ್ಮೀಕಿರಾಮಾಯಣವೆಂದು ಲೋಕದಲ್ಲಿ ಪ್ರಖ್ಯಾತಿ ಪಡೆದಿರುವದು. ಇಂತಹಾ ನೀಚಜಾತಿಯವನಿಗೆ ಈ ಜ್ಞಾನವು ಆಗಬೇಕಾದರೆ ಸಂಪೂರ್ಣವಾದ ಭಗವದನುಗ್ರಹವು ಹೊರತು ಆಗುವದೆಂತು? ಆದುದರಿಂದಲೇ ಪರಮ ದಯಾಳುವೆಂದು ಹೇಳಿರುವರು.

ಅವತಾರಿಕೆ.—ನಿಷ್ಕಾಮ ಭಕ್ತಿಯನ್ನೂ, ಸಜ್ಜನರ ಸಹವಾಸವನ್ನೂ ಮಾಡಬೇಕೆಂದು ಹೇಳುತ್ತಾರೆ.—

ಮೂಢಮಾನವನೆಲ್ಲ ಕಾಲದಿ
ಬೇಡಿಕೊಂಬೆನಿತೆಂದು ದೈನ್ಯದಿ
ಬೇಡದಂದದಿ ಮಾಡು ಪುರುಷಾರ್ಥ ಸ್ವಪ್ನದಲಿ।
ನೀಡುವರೆ ನಿನ್ನಮಲಗುಣ ಕೊಂ
ಡಾಡಿ ಹಿಗ್ಗುವ ಭಾಗವತರೊಡ
ನಾಡಿಸೆನ್ನನು ಜನ್ಮಜನ್ಮಂಗಳಲ್ಲಿ ಮರೆಯದಲೆ ॥೩೨॥

ಪದ್ಯಾರ್ಥ.—ಮೂಢಮಾನವನು-ಅಜ್ಞಾನಿಯಾದವನು, ಇನಿತೆಂದು-ಇದು ಬೇಕು, ಅದು ಬೇಕೆಂದು, ದೈನ್ಯದಿ=ದೈನ್ಯದಿಂದ, ಬೇಡಿಕೊಂಬನು=ಬೇಡುವನು, ನಾನಾದರೋ ಹಾಗೆ ಬೇಡುವುದಿಲ್ಲ. ನೀಡುವರೆ-ನೀಡುವರೆ=ಕೊಡುವದಾದರೆ, ಪುರುಷಾರ್ಥಗಳ-ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ೪ ವಿಧ ಪುರುಷಾರ್ಥಗಳನ್ನು, ಸ್ವಪ್ನದಲಿ=ಸ್ವಪ್ನದಲ್ಲಾದರೂ, ಬೇಡದಂದದಿ=ಬೇಡಿಕೊಳ್ಳದಂತೆ ಮಾಡು! ಜನ್ಮ ಜನ್ಮಂಗಳಲ್ಲಿ, ಮರೆಯದಲೆ, ನಿನ್ನಮಲಗುಣಕೊಂಡಾಡಿ ಹಿಗ್ಗುವ=ನಿನ್ನ ನಿರ್ದುಷ್ಟವಾದ ಗುಣಗಳನ್ನು ಕೊಂಡಾಡುತ್ತಾ ಆನಂದಪಡುತ್ತಿರುವ, ಭಾಗವತರೊಡನೆ=ಭಗವದ್ಭಕ್ತರೊಡನೆ ಎನ್ನನ್ನು, ಆಡಿಸು-ಸಹವಾಸದಲ್ಲಿರುವಂತೆ ಮಾಡು.

ತಾತ್ಪರ್ಯ —ಅಜ್ಞಾನಿಗಳು ಮಾತ್ರವೇ ದೀನರಾಗಿ ಇದು ಬೇಕು ಅದು ಬೇಕೆಂದು ವಿಷಯ ಸುಖವನ್ನು ಬೇಡುವರು. ಜ್ಞಾನಿಗಳು ೪ ವಿಧ ಪುರುಷಾರ್ಥದಲ್ಲಿ ಸೇರಿದ ಮುಕ್ತಿಯನ್ನಾದರೂ ಬೇಡುವರೆ ? ಭಾಗವತ ತೃತೀಯ ಸ್ಕಂಧದಲ್ಲಿ " ಸಾಲೋಕ್ಯಸಾರ್ಷ್ಟಿ ಸಾಮೀಪ್ಯ ಸಾರೂಪ್ಯೈಕತ್ವಮಿತ್ಯುತ || ದೀಯಮಾನಂ ನಗೃಹ್ಣಂತಿವಿನಾಮತ್ಸೇವನಂ ಜನಾಃ ||" ಸಾಲೋಕ್ಯವೆಂದರೆ- ಪರಮಾತ್ಮನ ಲೋಕದಲ್ಲಿ ಎಲ್ಲಾದರೂ ಇರುವದು. ಸಾರ್ಷ್ಟಿ=ಪರಮಾತ್ಮನಿಗೆ ಸಮಾನವಾದ ಐಶ್ವರ್ಯ ಹೊಂದುವದು. ಸಾಮೀಪ್ಯ-ಸಮೀಪದಲ್ಲೇ ವಾಸಮಾಡುವದು. ಸಾರೂಪ್ಯ=ಪರಮಾತ್ಮನಂತರೂಪವನ್ನು ಹೊಂದುವದು; ಏಕತ್ವ=ಪರಮಾತ್ಮನ ಶರೀರದಲ್ಲಿ ಪ್ರವೇಶಮಾಡಿ ಯಾವದಾದರೂ ಒಂದು ಅಂಗದ ಸುಖವನ್ನನುಭವಿಸುವದೆಂಬ ೫ ವಿಧ ಮುಕ್ತಿಯನ್ನೂ ಕೂಡ ನನ್ನ ಏಕಾಂತ ಭಕ್ತರು ಬೇಡುವುದಿಲ್ಲ. ನನ್ನ ಸೇವೆಯನ್ನ ಮಾತ್ರವೇ ಬೇಡುವರೆಂದು ದೇವಹೂತಿಗೆ ಕಪಿಲನಾಮಕ ಪರಮಾತ್ಮನು ಹೇಳಿರುವರು ಅದೇ ಅಭಿಪ್ರಾಯವನ್ನೇ ಇಲ್ಲಿ ಸೂಚಿಸಿರುವರು. ದಾಸಾರ್ಯರೂ ಅದನ್ನೇ ಬೇಡುತ್ತಾರೆ. ವಿಷಯ ಸುಖವನ್ನಾಗಲಿ, ಪುರುಷಾರ್ಥಗಳನ್ನಾಗಲೀ ನನ್ನನ್ನು ಬೇಡದಂತೆ ಮಾಡೆಂದು ೧ ವರವನ್ನೂ, ನಿನ್ನ ನಿರ್ದುಷ್ಟವಾದ ಮಹಿಮೆಯನ್ನು ಕೊಂಡಾಡುತ್ತಿರುವ ಭಾಗವತರ ಸಹವಾಸವನ್ನು ಸರ್ವದಾ ಕೊಡೆಂದು ಈ ಎರಡು ವರಗಳನ್ನು ಮಾತ್ರ ಬೇಡುವೆನ್ನು ಎಂದು ಬೇಡಿರುವರು. ಈ ವಾಕ್ಯದಿಂದ ಇವೆರಡೂ ಅವಶ್ಯವಾಗಿ ಬೇಡತಕ್ಕವೆಂದು ಸೂಚಿಸಿದರು-

ಅವತಾರಿಕೆ.—ಜ್ಞಾನಿಗಳಿಗೆ ಪರಮಾತ್ಮನೇ ಪುರುಷಾರ್ಥರೂಪನೆಂದು ಸೂಚಿಸುತ್ತಾರೆ —

ಚತುರವಿಧ ಪುರುಷಾರ್ಥರೂಪನು
ಚತುರಮೂರ್ತ್ಯಾತ್ಮಕನಿರಲು ಮು
ಕ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು ||
ಮತಿವಿಹೀನರು ಅಹಿತಸುಖ ಶಾ
ಶ್ವತವಿದೆಂದರಿದನುದಿನದಿ ಗಣ
ಪತಿಯೆ ಮೊದಲಾದನ್ಯದೇವತೆಗಳನೆ ಭಜಿಸುವರು ||೩೩

ಪದ್ಯಾರ್ಥ.—ಚತುರವಿಧಪುರುಷಾರ್ಥರೂಪನು=ಧರ್ಮ ಮೊದಲಾದ

೪ ವಿಧ ಪುರುಷಾರ್ಥ ಸ್ವರೂಪನಾಗಿ, ಚತುರ ಮೂರ್ತ್ಯಾತ್ಮಕನಿರಲು=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ೪ ರೂಪಿಯಾದ ಪರಮಾತ್ಮನಿರಲು, ಬಲ್ಲವರು – ಜ್ಞಾನಿಗಳಾದವರು, ಮತ್ತಿತರ ಪುರುಷಾರ್ಥಗಳ ಬಯಸುವರೇನು ? ಇಲ್ಲವೆಂದರ್ಥ. ಮತಿವಿಹೀನರು=ಬುದ್ಧಿ ಇಲ್ಲದವರು, ಅಹಿಕಸುಖ-ಅಲ್ಪವಾದ, ನಶ್ವರವಾದ ವಿಷಯಸುಖವನ್ನೇ, ಶಾಶ್ವತವಿದೆಂದು=ಇದೇ ಶಾಶ್ವತವೆಂದು, ಅರಿತು=ತಿಳಿದು, ಅನುದಿನದಿ=ಪ್ರತಿದಿವಸದಲ್ಲೂ, ಗಣಪತಿಯೇ ಮೊದಲಾದನ್ಯ ದೇವತೆಗಳನ್ನೇ ಭಜಿಸುವರು.

ತಾತ್ಪರ್ಯ.—ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸ್ವರೂಪನಾದ, ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವನೆಂಬ ೪ ರೂಪಾತ್ಮಕನಾದ ಪರಮಾತ್ಮನಿರಲು, ಜ್ಞಾನಿಗಳು ಇತರ ಪುರುಷಾರ್ಥಗಳನ್ನು ಅಪೇಕ್ಷಿಸುವರೇ ? ಬುದ್ಧಿ ಇಲ್ಲದವರು ಐಹಿಕ ಸುಖವನ್ನೇ ಶಾಶ್ವತವನ್ನಾಗಿ ಭಾವಿಸಿ, ಪ್ರತಿ ದಿವಸದಲ್ಲೂ ಗಣಪತಿ ಮೊದಲಾದ ಅನ್ಯದೇವತೆಗಳನ್ನು ಭಜಿಸಿ ಅಲ್ಪವಾದ ನಶ್ವರ ಸುಖವನ್ನು ಬೇಡುವರು. ಜ್ಞಾನಿಗಳೆಂದಿಗೂ ಹಾಗೆ ಮಾಡುವರಲ್ಲವೆಂದು ಭಾವನೆ.

ದ್ರುಹಿಣ ಮೊದಲಾದಮರಗಣ ಸ
ನ್ನಹಿತ ಸರ್ವಪ್ರಾಣಿಗಳ ಹೃ
ದ್ಗುಹನಿವಾಸಿ ಗಭೀರ ಹರಿ ಸರ್ವಾರ್ಥದಾಯಕನು ॥
ಅಹಿಕಪಾರತ್ರದಲಿ ವಿಹಿತಾ
ವಿಹಿತಕರ್ಮಗಳರಿತು ಫಲ ಸ
ನ್ನಿಹಿತನಾಗಿದ್ದೆಲ್ಲರಿಗೆ ಕೊಡುತಿಪ್ಪ ಸರ್ವಜ್ಞ ॥೩೪॥

ಪದ್ಯಾರ್ಥ.—ದ್ರುಹಿಣ ಮೊದಲಾದ=ಬ್ರಹ್ಮದೇವರು ಮೊದಲಾದ, ಅಮರಗಣ-ದೇವತಾಗಣದಿಂದ, ಸನ್ನಹಿತ=ಚೆನ್ನಾಗಿ ಪೂಜಿತನಾದ, ಸರ್ವಪ್ರಾಣಿಗಳಹೃದ್ಗುಹನಿವಾಸಿ-ಎಲ್ಲಾ ಪ್ರಾಣಿಗಳ ಹೃದಯಾಕಾಶನಿವಾಸಿಯಾದ ಗಭೀರ=ಮಹಾ ಗೌರವ ಯುಕ್ತನಾದ, ಸರ್ವಾರ್ಥದಾಯಕನು = ಸರ್ವಾರ್ಥವನ್ನು ಕೊಡುವ ಸ್ವಭಾವವುಳ್ಳ, ಸರ್ವಜ್ಞ=ಸರ್ವಜ್ಞನಾದ, ಹರಿ=ಶ್ರೀಹರಿಯು. ಸನ್ನಿಹಿತನಾಗಿ=ಎಲ್ಲರಲ್ಲೂ ಅಂತರ್ಯಾಮಿಯಾಗಿದ್ದು, ಅಹಿಕಪಾರತ್ರದಲಿ – ಇಹಲೋಕದಲ್ಲೂ ಪರಲೋಕದಲ್ಲೂ ವಿಹಿತಾ ವಿಹಿತ

ಕರ್ಮಗಳ-ತು-ಪುಣ್ಯಕರ್ಮಗಳನ್ನು ತಿಳಿದು, ಎಲ್ಲರಿಗೆ ಸನ್ನಿಹಿತನಾಗಿದ್ದು =ಸಮೀಪದಲ್ಲಿದ್ದು, ಫಲ=ಫಲವನ್ನು ಕೊಡುತ್ತಿಪ್ಪ.

ತಾತ್ಪರ್ಯ.—ಬ್ರಹ್ಮಾದಿ ದೇವತೆಗಳಿಂದ ಪೂಜ್ಯನಾದ, ಸರ್ವ ಪ್ರಾಣಿಗಳ ಹೃದಯಾಕಾಶವಾಸಿಯಾದ, ಸರ್ವರ ಸಕಲ ಮನೋಭೀಷ್ಟವನ್ನೂ ಪೂರೈಸುವ ಸರ್ವಜ್ಞನಾದ ಶ್ರೀಹರಿಯು, ಸರ್ವ ಪ್ರಾಣಿಗಳ ಪುಣ್ಯ ಪಾಪ ಕರ್ಮಗಳನ್ನು ತಿಳಿದು, ಅವರವರ ಯೋಗ್ಯತಾನುಸಾರವಾಗಿ ಅವರವರಲ್ಲಿ ಸನ್ನಿಹಿತನಾಗಿದ್ದು ಫಲವನ್ನು ಕೊಡುತ್ತಿರುವನು.

ಅವತಾರಿಕೆ.—ಶ್ರೀಹರಿಯು ತ್ರಿವಿಧ ಜೀವರಲ್ಲೂ ದ್ವೇಷಸೂಯೆಗಳಿಲ್ಲದೇ ಅವರವರ ಯೋಗ್ಯತಾನುಸಾರ ಫಲಕೊಡುವನೆಂದು ಹೇಳಿ ಸಂಧಿಯನ್ನು ಮುಗಿಸುತ್ತಾರೆ-

**ಒಮ್ಮೆಗಾದರು ಜೀವರೊಳು ವೈ**
**ಷಮ್ಯ ದ್ವೇಷಾಸೂಯವಿಲ್ಲ ಸು**
**ಧರ್ಮನಾಮಕ ಸಂತಯಿಸುವನು ಸರ್ವರನು ನಿತ್ಯ।**
**ಬ್ರಹ್ಮಕಲ್ಪಾಂತದಲಿ ವೇದಾ**
**ಗಮ್ಯ ಶ್ರೀಜಗನ್ನಾಥವಿಠಲ**
**ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ ॥೩೫॥**

ಪದ್ಯಾರ್ಥ.—ಒಮ್ಮೆಗಾದರೂ=ಯಾವಕಾಲದಲ್ಲಾದರೂ, ವೈಷಮ್ಯ ದ್ವೇಷಾಸೂಯವಿಲ್ಲ=ವೈಷಮ್ಯ-ಜನರಲ್ಲಿ ಒಬ್ಬರಲ್ಲಿ ಪ್ರೀತಿ, ವಿಶ್ವಾಸವನ್ನು ಮತ್ತೊಬ್ಬರಲ್ಲಿ ಅವಿಶ್ವಾಸವನ್ನೂ ತೋರಿಸುವದು, ದ್ವೇಷ= ಶತ್ರುವನ್ನಾಗಿ ಭಾವಿಸುವುದು, ಅಸೂಯೆ=ಹೊಟ್ಟೆಯಕಿಚ್ಚು, ಇವುಗಳಿಲ್ಲವು. ಸುಧರ್ಮನಾಮಕ=ಸುಧರ್ಮನೆಂಬ ಹೆಸರುಳ್ಳ ಶ್ರೀಹರಿಯು, ಸರ್ವರನು ನಿತ್ಯದಲ್ಲೂ ಸಂತಯಿಸುವನು, ಬ್ರಹ್ಮಕಲ್ಪಾಂತದಲ=ಬ್ರಹ್ಮಕಲ್ಪದ ಅವಸಾನಕಾಲದಲ್ಲಿ ವೇದಗಮ್ಯ=ವೇದಗಳಿಂದಲೂ ಸಹ ತಿಳಿಯಲಶಕ್ಯವಾದ ಗುಣಗಳುಳ್ಳ, ಶ್ರೀಜಗನ್ನಾಥವಿಠಲ=ಜಗನ್ನಾಥವಿಠಲನು. ತ್ರಿವಿಧರಿಗೆ=ಮೂರು ವಿಧ ಜೀವರಾಶಿಗಳಿಗೂ, ಅವರವರ ನಿಜಗತಿಯ-ಅವರವರ ಯೋಗ್ಯತಾನುಸಾರವಾದ ಗತಿಯನ್ನು, ಸುಮ್ಮನೀವನು-ಅವರವರಿಗೆ ಯಾವುದನ್ನೂ ತಿಳಿಸದೆ ಮೌನದಿಂದ ಕೊಡುವನು.

ತಾತ್ಪರ್ಯ.—ಪರಮಾತ್ಮನಿಗೆ ಯಾವಕಾಲದಲ್ಲೂ ಜೀವರಲ್ಲಿ ದ್ವೇಷವಾಗಲೀ, ಅಸೂಯೆಯಾಗಲೀ, ವಂಚನೆಯಾಗಲೀ ಇಲ್ಲ. ಎಲ್ಲರನ್ನೂ ಸಮವಾಗಿ ತಿಳಿದು ಸಮಾಧಾನಗೊಳಿಸುವನು. ಹಾಗಾದರೆ ತಮೋಯೋಗ್ಯರು ಮುಕ್ತಿಯೋಗ್ಯರೆಂಬ ಭೇದವೇನು ? ಅವರ ಗತಿ ಏನೆಂದರೆ, ತನ್ನ ವಂಚನೆಯಿಂದ ಫಲ ವ್ಯತ್ಯಾಸ ಮಾಡುವುದಿಲ್ಲ. ಅವರವರು ಮಾಡುವ ಪುಣ್ಯ ಪಾಪ ಕರ್ಮಗಳನ್ನನುಸರಿಸಿ ಮುಕ್ತಿಯೋಗ್ಯರಿಗೆ ಮುಕ್ತಿಯನ್ನೂ, ಮಧ್ಯಮರಿಗೆ ನಿತ್ಯ ಸಂಸಾರವನ್ನೂ, ತಮೋಯೋಗ್ಯರಿಗೆ ತಮಸ್ಸನ್ನೂ ಮೂವರ ಯೋಗ್ಯತಾನುಸಾರ ಬ್ರಹ್ಮಕಲ್ಪವಸಾನದಲ್ಲಿ ಅವರವರಿಗೆ ಕೊಡುವನು. ಇಂತಹ ಶ್ರೀಜಗನ್ನಾಥ ವಿಠಲನು, ವೇದಗಳಿಂದಲೂ ಸಹ ತಿಳಿಯಲಶಕ್ಯವಾದ ಮಹಿಮೆಯುಳ್ಳವನು.

ಎಂಬಲ್ಲಿಗೆ ಹರಿಕಥಾಮೃತಸಾರ ಭಾವಪ್ರಕಾಶಿಕೆಯಲ್ಲಿ ಭಕ್ತಾಪರಾಧಸಹಿಷ್ಣು ಸಂಧಿ ಎಂಬ ೨೨ನೆಯ ಸಂಧಿ ಸಮಾಪ್ತಮಾದುದು.

|| ಶ್ರೀಕೃಷ್ಣಾರ್ಪಣಮಸ್ತು ||

## ಕ ಲ್ಪ ಸಾ ಧ ನ ಸಂ ಧಿ.

### ಸಂಧಿ ೨೩.

ಈ ಸಂಧಿಯಲ್ಲಿ ಬ್ರಹ್ಮದೇವರು ಮೊದಲಾದ ಸರ್ವ ದೇವತೆಗಳ ಕ ಲ್ಪಸಾಧನವನ್ನೂ, ಯಾವ ದೇವತೆಗಳಿಗೆ ಎಷ್ಟು ಕಲ್ಪ ಸಾಧನದ ವೇಲೆ ಅಪರೋಕ್ಷವಾಗುವುದೆಂಬುದನ್ನೂ ಸಹ ಹೇಳುತ್ತಾರೆ.

**ಹರಿಕಥಾಮೃತಸಾರ ಗುರುಗಳ ಕರುಣದಿಂದ ॥ಪಲ್ಲವಿ॥**

**ಅವತಾರಿಕೆ.**—ದಾಸಾರ್ಯರು ಕಲ್ಪಸಾಧನ ಸಂಧಿಯನ್ನುಪಕ್ರಮಿಸುತ್ತಾ, ಹರಿಗುರುಗಳನುಗ್ರಹವಿಲ್ಲದೆ ಇದನ್ನು ರಚಿಸುವುದು ಅಸಾಧ್ಯವೆಂದು ತಿಳಿದು ಕಲ್ಪಸಾಧನವನ್ನು ತೋರಿಸಿ ಕೊಟ್ಟಿರುವ, ಈ ಮತಪ್ರವರ್ತಕರಾದ ಜಗದ್ಗುರುಗಳಾದ ಶ್ರೀಮನ್ಮಧ್ವಾಚಾರ್ಯರನ್ನು ಪ್ರಾರ್ಥಿಸುತ್ತಾರೆ.

**ಏಕವಿಂಶತಿ ಮತಪ್ರವರ್ತಕ**
**ಕಾಕುಮಾಯ್ಗಳ ಊಹಕಯುಕ್ತಿ ನಿ**
**ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ।**
**ಶ್ರೀಕಳತ್ರನ ಸದನ ದ್ವಿಜಪ ಪಿ**
**ನಾಕಿಸನ್ನುತ ಮಹಿಮ ಪರಮ ಕೃ**
**ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ॥೧॥**

ಪದ್ಯಾರ್ಥ.—ಏಕವಿಂಶತಿಮತಪ್ರವರ್ತಕ=೨೧ ಮತಗಳನ್ನು ಲೋಕದಲ್ಲಿ ಸ್ಥಾಪಿಸಿ ಪ್ರಸಿದ್ಧಿ ಪಡಿಸಿರುವ, ಕಾಕುಮಾಯ್ಗಳ – ಕುತ್ಸಿತ ಬುದ್ಧಿಯುಳ್ಳ ಮಾಯಿಗಳ, ಊಹಕಯುಕ್ತಿ–ಕಪಟ ಯುಕ್ತಿಗಳನ್ನು, ನಿರಾಕರಿಸಿ =ಖಂಡನಮಾಡಿ, ಸರ್ವೋತ್ತಮನು ಹರಿ ಎಂದು ಸ್ಥಾಪಿಸಿದ=ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಸ್ಥಾಪಿಸಿದ ಶ್ರೀಕಳತ್ರನ–ಲಕ್ಷ್ಮೀದೇವಿ

ಯರನ್ನು ಪತ್ನಿಯನ್ನಾಗಿ ಮಾಡಿಕೊಂಡಿರುವ ಶ್ರೀಪರಮಾತ್ಮನ, ಸದನ=ವಾಸಸ್ಥಾನರಾದ ಶೇಷದೇವರು, ದ್ವಿಜಪ=ಪಕ್ಷಿಶ್ರೇಷ್ಠರಾದ ಗರುಡದೇವರು ಪಿನಾಕಿ=ರುದ್ರದೇವರು ಇವರುಗಳಿಂದ, ಸನ್ನುತ=ಚೆನ್ನಾಗಿ ಸ್ತುತ್ಯವಾದ, ಮಹಿಮ=ಮಹಿಮೆಯುಳ್ಳ, ಮಧ್ವಾಚಾರ್ಯ = ಶ್ರೀಮನ್ಮಧ್ವಾಚಾರ್ಯರೆಂಬ, ಗುರುವರ್ಯ=ಎಲೈ ಗುರುಶ್ರೇಷ್ಠ! ಪರಮ ಕೃಪಾಕಟಾಕ್ಷದಿ=ನನ್ನನ್ನು ಪರಮ ಕರುಣಾಕಟಾಕ್ಷದಿಂದ ನೋಡು, ಅಂದರೆ ಈಗ ಉಪಕ್ರಮಿಸುವ ಸಂಧಿಯು ನಿರ್ವಿಘ್ನವಾಗಿ ಮುಗಿಯಬೇಕಾದುದಲ್ಲದೆ ಈ ಸಂಧಿಯಲ್ಲಿ ಹೇಳುವ ವಾಕ್ಯಗಳು ನಿಮ್ಮ ವಾಕ್ಯಕ್ಕೆ ಅವಿರೋಧವಾಗಿ, ಸರ್ವ ಜನಸಮ್ಮತವಾಗುವಂತೆ ಮಾಡಿರೆಂದು ಬೇಡಿದರೆಂಬ ತಾತ್ಪರ್ಯ.

ತಾತ್ಪರ್ಯ.—ಸೌರ, ಶಕ್ತಿ, ಗಾಣಪತ್ಯ ಮೊದಲಾದ 21 ಮತಗಳ ಕುಯುಕ್ತಿಗಳನ್ನು ನಿರಾಕರಿಸಿ "ಏಕವಿಂಶತಿಕುಭಾಷ್ಯದೂಷಕಂ" ಎಂಬ ಮಧ್ವವಿಜಯದ ವಾಕ್ಯದಂತೆ ಬ್ರಹ್ಮಸೂತ್ರಕ್ಕೆ ೨೨ನೆಯ ಭಾಷ್ಯವನ್ನು ರಚಿಸಿ, ಹರಿ ಸರ್ವೋತ್ತಮನೆಂದು ಸ್ಥಾಪಿಸಿದ ಗರುಡ, ಶೇಷ ರುದ್ರಾದಿಗಳಿಂದ ಸ್ತುತ್ಯವಾದ ಮಹಿಮೆಯುಳ್ಳ ಗುರು ಶ್ರೇಷ್ಠರಾದ ಹೇ ಮಧ್ವಾಚಾರ್ಯರೇ! ನಿಮ್ಮ ಕೃಪಾಕಟಾಕ್ಷದಿಂದ ನನ್ನನ್ನು ನೋಡಿ, ಈ ಸಂಧಿಯಲ್ಲಿ ನಾನು ಹೇಳುವುದೆಲ್ಲವೂ ನಿಮ್ಮ ವಾಕ್ಯಗಳಿಗೆ ಅವಿರೋಧವಾಗಿ ಸರ್ವ ಜನಸಮ್ಮತವಾಗುವಂತೆ ಮಾಡಿರಿ.

ಅವತಾರಿಕೆ.—ಬ್ರಹ್ಮಾದಿ ಜೀವರ ಕಲ್ಪಸಾಧನವನ್ನು ಶ್ರೀಪರಮಾತ್ಮನು ನನ್ನಲ್ಲಿದ್ದು ಹೇಳಿಸಿದಂತೆ ನಾನು ಹೇಳುತ್ತೇನೆಂದು ಹೇಳುತ್ತಾರೆ.—

**ವೇದಮೊದಲಾಗಿಪ್ಪಮಲ ಮೋ**
**ಕ್ಷಾಧಿಕಾರಿಗಳಾದ ಜೀವರ**
**ಸಾಧನಗಳಪರೋಕ್ಷನಂತರ ಲಿಂಗಭಂಗವನು ।**
**ಸಾಧುಗಳು ಚಿತ್ತೈಪುದೆನ್ನಪ**
**ರಾಧಗಳನೋಡದಲೆ ಚಕ್ರಗ**
**ದಾಧರನು ಪೇಳಿಸಿದ ತೆರಸಂದದಲಿ ಪೇಳುವೆನು ॥೨॥**

ಪದ್ಯಾರ್ಥ.—ವೇದಮೊದಲಾಗಿಪ್ಪ=ಬ್ರಹ್ಮದೇವರು ಮೊದಲಾಗಿರುವ, ಅಮಲ=ನಿರ್ದೋಷವಾದ, ಮೋಕ್ಷಾಧಿಕಾರಿಗಳಾದ, ಜೀವರಸಾಧನಗ

ಳ=ಸಾಧನಗಳನ್ನು, ಅಪರೋಕ್ಷನಂತರ=ಅಪರೋಕ್ಷವಾದ ಮೇಲೆ, ಲಿಂಗ ಭಂಗವನ್ನು=ಲಿಂಗ ಶರೀ[illegible]ವಾಗುವ ಕಾಲವನ್ನೂ, ಚಕ್ರಗದಾಧರನು ಪೇಳಿಸಿದತೆರದಂದದಲಿ=ಶ್ರೀಹರಿಯು ನನ್ನಲ್ಲಿದ್ದು ನುಡಿಸಿದಂತೆ ಪೇಳುವೆನು. ಸಾಧುಗಳು ಎನ್ನಪರಾಧಗಳ ನೋಡದಲೆ, ಚಿತ್ತೈಪುದು=ಸ್ವೀಕರಿಸಬೇಕು.

ತಾತ್ಪರ್ಯ.—ಬ್ರಹ್ಮದೇವರು ಮೊದಲು ಮಾಡಿ ಮೋಕ್ಷಯೋಗ್ಯರಾದ ಸರ್ವ ಜೀವರು ಎಷ್ಟೆಷ್ಟು ಕಲ್ಪಗಳ ಸಾಧನಾನಂತರ ಅಪರೋಕ್ಷವನ್ನು ಹೊಂದುವರು ಮತ್ತೆ ತದನಂತರ ಮುಕ್ತಿಗೆಷ್ಟು ಕಲ್ಪಸಾಧನಗಳೆಂಬುವುದ ನ್ನು ಶ್ರೀಹರಿಯು ನನ್ನೊಳಗಿದ್ದು ಪ್ರೇರಿಸಿದಂತೆ ಹೇಳುವೆನು. ಇದರಲ್ಲಿ ನನ್ನ ಪರಾಧವೇನಾದರೂ ಇದ್ದರೆ ಕ್ಷಮಿಸಿ ಸಾಧುಗಳು ಇದನ್ನು ಲಾಲಿಸಬೇಕೆಂದು ಬೇಡುವೆನು. ಇದರಿಂದ ತಮ್ಮ ಸ್ವಾತಂತ್ರ್ಯ ಕರ್ತೃತ್ವವನ್ನು ದಾಸಾರ್ಯರು ನಿವಾರಣೆ ಮಾಡಿಕೊಂಡಿರುವರೆಂಬ ತಾತ್ಪರ್ಯ.

ಅವತಾರಿಕೆ.—ಕರ್ಮಯೋಗಿಗಳಾದ ಪ್ರತೀಕಾಲಂಬನ ಜೀವರ ಲಕ್ಷಣವನ್ನು ಹೇಳುತ್ತಾರೆ.

**ತೃಣಕ್ರಿಮಿ ದ್ವಿಜಪಶು ನರೋತ್ತಮ**
**ಜನಪ ನರಗಂಧರ್ವಗಣರಿವ**
**ರೆನಿಪರಂಶ ವಿಹೀನ ಕರ್ಮಸುಯೋಗಿಗಳುಯೆಂದು ॥**
**ತನುಪ್ರತೀಕದಿ ಬಿಂಬನ ಉಪಾ**
**ಸನವಗೈಯ್ಯುತಯಿಂದ್ರಿಯ ಜ ಕ**
**ರ್ಮನವರತಹರಿಗರ್ಪಿಸುತ ನಿರ್ಮಮರು ಎನಿಸುವರು ॥೩॥**

ಪದ್ಯಾರ್ಥ.—ತೃಣ=ತೃಣಜೀವರು, ಕ್ರಿಮಿ, ದ್ವಿಜ=ಪಕ್ಷಿ[illegible], [illegible] ಕಾಡುಮೃಗ ಗ್ರಾಮ್ಯವಾದ ನಾಯಿ, ದನ ಮೊದಲಾದ [illegible] ಪಶುಗಳು, ನರೋತ್ತಮ=ಮನುಷ್ಯೋತ್ತಮರು, ಜನಪ=ಚಕ್ರವರ್ತಿಗಳು ನರಗಂಧರ್ವಗಣ–ಮನುಷ್ಯಗಂಧರ್ವಗಣ=ಇವರು ಈ 7 ಗಣಗಳು, ಅಂಶ ವಿಹೀನರು–ಅಂಶ ಹೀನರಾದ ಕರ್ಮಸುಯೋಗಿಗಳು ಎಂದೆನಿಸುವರು. ತನು ಪ್ರತೀಕದಿ–ತನ್ನ ಶರೀರವೆಂಬ, [illegible]ತೀಕದಿ=ಪ್ರತಿಮೆಯಲ್ಲಿ, ಬಿಂಬನ–ಬಿಂ ಬಮೂರ್ತಿಯಾದ ಶ್ರೀಹರಿಯು, ಉಪಾಸನಗೈಯ್ಯುತ=ಉಪಾಸನೆಯನ್ನು ಮಾಡುತ್ತಾ, ಇಂದ್ರಿಯಜಕರ್ಮ–ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮ ತ್ತು ಮನಸ್ಸಂಬಂಧದಿಂದ ಮಾಡುವ ಎಲ್ಲಾ ಕರ್ಮಗಳನ್ನು, ಅನವ[illegible]

ತ=ನಿತ್ಯದಲ್ಲೂ (ಸರ್ವಕಾಲದಲ್ಲೂ) ಹರಿಗೆ=ಶ್ರೀಪರಮಾತ್ಮನಿಗೆ, ಅರ್ಪಿತ-ಸಮರ್ಪಣೆ ಮಾಡುತ್ತಾ, ನಿರ್ಮಮರು-ನಾನು ನನ್ನದು ಎಂಬ ಅಭಿಮಾನವನ್ನು ಬಿಟ್ಟವರು, ಎನಿಸುವರು.

ತಾತ್ಪರ್ಯ-—ತೃಣ, ಕ್ರಿಮಿ, ಪಶು, ಮನುಷ್ಯೋತ್ತಮರು, ಚಕ್ರವರ್ತಿಗಳು, ಮನುಷ್ಯ ಗಂಧರ್ವರೆಂಬ ಈ ಏಳು ವಿಧ ಜೀವರು ನಿರಂಶರೆನಿಸುವರು. ಸಾಂಶರೆಂದರೆ, ತತ್ವಾಭಿಮಾನಿ ದೇವತೆಗಳಾದ ಸೂರ್ಯಾದಿಗಳೆಂದು ತಿಳಿಯಬೇಕು. ಸೂರ್ಯಮಂಡಲದಲ್ಲೂ ಎಲ್ಲರ ಕಣ್ಣುಗಳಲ್ಲೂ ಇರುವವನು ಒಬ್ಬನೇ ಆದರೂ ಸೂರ್ಯನು ಅಂಶದಿಂದ ಬಹುರೂಪಿಯಾಗಿರುವನು ಹೀಗೆ ಎಲ್ಲಾ ತತ್ವಾಭಿಮಾನಿಗಳೂ ಇರುವರು. ಇಲ್ಲದವರು ನಿರಂಶರು. ಇವರು ಒಂದು ಸ್ಥಳದಲ್ಲಿದ್ದರೆ ಮತ್ತೊಂದು ಸ್ಥಳದಲ್ಲಿ ರೂಪಾಂತರದಿಂದ ಇರುವ ಯೋಗ್ಯತೆ ಇಲ್ಲದವರೆಂದು ತಾತ್ಪರ್ಯ. ಇವರೆಲ್ಲರೂ ಕರ್ಮಯೋಗಿಗಳೆನಿಸುವರು. ಇವರಿಗೆ ಪ್ರತೀಕಾಲಂಬನರೆಂತಲೂ ಮತ್ತೊಂದು ಹೆಸರು. ಪ್ರತೀಕವೆಂದರೆ ತನ್ನ ಶರೀರವು- ತನ್ನ ಶರೀರದಲ್ಲೇ ಹರಿಯನ್ನು ಅಪರೋಕ್ಷದಲ್ಲಿ ಕಾಣುವವರಾದುದರಿಂದ ಪ್ರತೀಕಾಲಂಬನರೆಂದು ಹೆಸರು. "ತೃಣಾದಿಮರ್ತ್ಯಗಂಧರ್ವಪರ್ಯಂತಾಸ್ತೇಹ್ಯನಂತಶಃ" ನಿರಂಶಾಸ್ತೇಪ್ರತೀಕಾಖ್ಯಾಲಂಬಾಸ್ತೇ ಕರ್ಮಯೋಗಿನಃ ॥ ಪ್ರತೀಕಾಖ್ಯ ಶರೀರಸ್ಥಂಪಶ್ಯಂತೀತಿ ತದಾಹ್ವಯಾಃ ।" ಎಂಬ ಪ್ರಕಾಶಸಂಹಿತೆಯ ವಾಕ್ಯದಿಂದ ಈ ಅರ್ಥವು ಸಿದ್ಧವಾಗುವುದು. ಈ ತೃಣ ಮೊದಲು ಮನುಷ್ಯ ಗಂಧರ್ವರವರೆವಿಗೂ ಇರುವ ೭ ಗಣಗಳು ತಮ್ಮ ದೇಹದೊಳಗೆ ಬಿಂಬ ರೂಪಿಯಾದ ಶ್ರೀಹರಿಯನ್ನು ಉಪಾಸನೆ ಮಾಡುತ್ತಾ ತಮ್ಮ ಇಂದ್ರಿಯಗಳಿಂದ ಮಾಡುವ ಎಲ್ಲಾ ಕರ್ಮಗಳನ್ನೂ, ಮಮತೆಯನ್ನು ಬಿಟ್ಟು ಸಮರ್ಪಿಸುತ್ತಾ ತಾವು ನಿರ್ಲಿಪ್ತರಾಗಿರುವರು.

ಏಳುವಿಧಜೀವಗಣ ಬಹಳ ಸು
ರಾಳಿಸಂಖ್ಯಾನೇಮವುಳ್ಳದು
ತಾಳಿ ನರದೇಹವನು ಬ್ರಾಹ್ಮರ ಕುಲದಲುದ್ಭವಿಸಿ ।
ಸ್ಥೂಲಕರ್ಮವತೊರೆದು ಗುರುಗಳು
ಪೇಳಿದರ್ಥವ ತಿಳಿದು ತತ್ತ
ತ್ಕಾಲಧರ್ಮ ಸಮರ್ಪಿಸುತಿಹರು ಕರ್ಮಯೋಗಿಗಳು ॥೪॥

ಪದ್ಯಾರ್ಥ—ಏಳುವಿಧಜೀವಗಣ-ಮೇಲಿನ ಪದ್ಯದಲ್ಲಿ ಹೇಳಿದ ತೃಣ

ಪದ್ಯಾರ್ಥ.—ದೇವಗಾಯಕ=ದೇವಗಂಧರ್ವರು, ಆಜಾನ=ಆಜಾನಜ ದೇವರು, ಚಿರಪಿತೃ=ಚಿರಪಿತೃಗಣಗಳು, ದೇವರೆಲ್ಲರೂ=ಈ ದೇವತೆಗಳೆಲ್ಲರೂ, ಆವಕಾಲಕು=ಅನಾದಿಕಾಲದಲ್ಲೂ, ಜ್ಞಾನಯೋಗಿಗಳು. ಪುಷ್ಕರ, ಶನೈಶ್ಚರ, ಉಷಾ, ಸ್ವಾಹಾದೇವಿ, ಬುಧ, ಸನಕಾದಿಗಳು, ಮೇಘಾವಳಿಪ=ಮೇಘಪಂಗ್ತಿಗಳಿಗೆ ಅಧಿಪತಿಯಾದ, ಪರ್ಜನ್ಯ, ಇವರು ಸಾಂಶರು. ಈ ಉಭಯಗಣದೊಳಗೆ=ಮೇಲೆ ಹೇಳಿದ ಸಾಂಶರೆಂಬ ಎರಡು ಗಣಗಳ ಪೈಕಿ ಇವರು ವಿಜ್ಞಾನಯೋಗಿಗಳು.

ತಾತ್ಪರ್ಯ.—ದೇವಗಂಧರ್ವರು, ಆಜಾನಜರು, ಚಿರಪಿತೃಗಳು ಇವರು ಸಾಂಶರಲ್ಲಿ, ಪ್ರತೀಕಾಲಂಬನರೆನಿಸುವರು. ಇವರು ಜ್ಞಾನಯೋಗಿಗಳು "ದೇವಗಂಧರ್ವಪೂರ್ವಾಶ್ಚಾಜಾನಜಾಂತಾಃ ಸಮಸ್ತಶಃ || ಪ್ರತೀಕಾಲಂಬನಾಃ ಸಾಂಶಾಃ ಕ್ರಮಾಚ್ಚ ಜ್ಞಾನಯೋಗಿನಃ ||" ಎಂಬ ಪ್ರಕಾಶ ಸಂಹಿತೆಯ ವಾಕ್ಯದಿಂದ ಈ ಅರ್ಥವು ಸಿದ್ಧವಾಗುವುದು. ಪುಷ್ಕರ, ಶನೈಶ್ಚರ, ಉಷಾ, ಸ್ವಾಹಾ, ಬುಧ, ಸನಕಾದಿಗಳು, ಪರ್ಜನ್ಯ ಇವರು ಸಾಂಶರಲ್ಲಿ ಅಪ್ರತೀಕಾಲಂಬನರು ಮತ್ತೂ ವಿಜ್ಞಾನಯೋಗಿಗಳೆನಿಸುವರು. "ಅಪ್ರತೀಕಾಲಂಬನಾಶ್ಚ ಪ್ರಾಯೋವಿಜ್ಞಾನಯೋಗಿನಃ ||" ಪ್ರಾಯಃ=ಅಪ್ರತೀಕಾಲಂಬನರೆಲ್ಲರೂ ವಿಜ್ಞಾನಯೋಗಿಗಳೆನಿಸುವರೆಂಬ ಪ್ರಕಾಶ ಸಂಹಿತೆಯ ವಾಕ್ಯವು ಇದಕ್ಕೆ ಆಧಾರವಾಗಿರುವುದು.

ಅವತಾರಿಕೆ.—ಇವರ ಸಾಧನವನ್ನು ಹೇಳುತ್ತಾರೆ

**ಭರತಖಂಡದಿ ನೂರುಜನ್ಮವ**
**ಧರಿಸಿ ನಿಷ್ಕಾಮುಕ ಸುಕರ್ಮಾ**
**ಚರಿಸಿದಾನಂತರದಿ ದಶಸಾಹಸ್ರ ಜನ್ಮದಲಿ ||**
**ಉರುತರ ಜ್ಞಾನವನು ಪಡ**
**ದೆರಡೊಂದು ಶತದೇಹದಲಿ ಭಕುತಿಯ**
**ನಿರವಧಿಕ(ದ)ನಲಿ ಮಾಡಿಕಾಂಬರು ಬಿಂಬರೂಪವನು ||೯||**

ಪದ್ಯಾರ್ಥ.—ಭರತಖಂಡದಿ, ನೂರು ಜನ್ಮವ ಧರಿಸಿ, ನಿಷ್ಕಾಮುಕ=ಫಲಾಪೇಕ್ಷೆಯನ್ನು ಬಿಟ್ಟು ಸುಕರ್ಮಾಚರಿಸಿ = ಸತ್ಕರ್ಮಾನುಷ್ಠಾನವನ್ನು ಮಾಡಿದನಂತರದಿ ದಶಸಾಹಸ್ರ ಜನ್ಮದಲಿ=೧೦ ಸಹಸ್ರ ಜನ್ಮಗಳಲ್ಲಿ ಉರುತರ ಜ್ಞಾನವನು ಪಡದು ಎರಡೊಂದುಶತದೇಹದಲಿ=೩೦೦ ಜನ್ಮಗಳಲ್ಲಿ=

ನಿರವಧಿಕನಲ್ಲಿ=ಸಮ ರಹಿತನಾದ ಹರಿಯಲ್ಲಿ, ಭಕುತಿಯ ಮಾಡಿ ನಿರವಧಿಕದಲಿ ಎಂದು ಪಾಠಾಂತರ; ಆ ಪಾಠದ ರೀತ್ಯಾ ನಿರವಧಿಕವಾದ ಭಕ್ತಿಯನ್ನು ಮಾಡಿ ಎಂದರ್ಥ ಬಿಂಬ ರೂಪವನ್ನು ಕಾಂಬುವರು.

ತಾತ್ಪರ್ಯ.—"ಸತ್ಕರ್ಮಕೃತ್ವಾನಿಷ್ಕಾಮಂ ಲಭಂತೇಗುರುಸಂತತಿಂ॥ ಅತಾತ್ವಿಕಾದೇವದಾಸಾಃ ಸತ್ಕರ್ಮಶತಜನ್ಮಭಿಃ ॥ ಕೃತ್ವಾದಶಸಹಸ್ರೈರುಜನ್ಮಭಿರ್ಜ್ಞಾನಮಾಪ್ಯಚ ॥ ಭಕ್ತಿಂತ್ರಿಶತಕೈರಾಪ್ಯ ಮುಚ್ಯಂತೇ ಜ್ಞಾನಯೋಗಿನಃ ॥" ಎಂಬ ಪ್ರಕಾಶ ಸಂಹಿತೆಯ ವಾಕ್ಯದಿಂದ ಈ ಪದ್ಯಾರ್ಥವು ಸಿದ್ಧಿಸುವುದು. ಇವರ ಸಾಧನ ಕ್ರಮವೆಂತೆನೆ; ಭರತ ಖಂಡದಲ್ಲಿ ೧೦೦ ಜನ್ಮಗಳಲ್ಲಿ ನಿಷ್ಕಾಮ್ಯ ಕರ್ಮಗಳನ್ನಾಚರಿಸಿ, ಅನಂತರದಲ್ಲಿ ೧೦ ಸಹಸ್ರ ಜನ್ಮಗಳಲ್ಲಿ ಉತ್ಕೃಷ್ಟವಾಗಿ ಜ್ಞಾನವನ್ನು ಪಡೆದು, ೩೦೦ ಜನ್ಮಗಳಲ್ಲಿ ಉತ್ತಮವಾದ ಭಕ್ತಿಯನ್ನು ಮಾಡಿ ಅಪರೋಕ್ಷದಲ್ಲಿ ಪರಮಾತ್ಮನನ್ನು ಕಾಣುವರು.

ಅವತಾರಿಕೆ.—ಜ್ಞಾನ ವಿಜ್ಞಾನ ಯೋಗಿಗಳ ಲಕ್ಷಣವನ್ನು ಹೇಳುತ್ತಾರೆ.

**ಸಾಧನಾತ್ಪೂರ್ವದಲಿ ಯಿವರಿಗ**
**ನಾದಿಕಾಲಪರೋಕ್ಷವಿಲ್ಲ ನಿ**
**ಷೇಧಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ ॥**
**ವೇದಶಾಸ್ತ್ರಗಳಲ್ಲಿ ಯಿಪ್ಪವಿ**
**ರೋಧವಾಕ್ಯದ ಪರಿಹರಿಸಿ ಮಧು**
**ಸೂದನನೆ ಸರ್ವೋತ್ತಮೋತ್ತಮನೆಂದು ಸ್ಮರಿಸುವರು ॥೧೦॥**

ಪದ್ಯಾರ್ಥ—ಮೇಲೆ ಹೇಳಿದ ಜ್ಞಾನ ವಿಜ್ಞಾನಯೋಗಿಗಳಿಗೆ ಸಾಧನಾತ್ಪೂರ್ವದಲಿ=ಸಾಧನವಾಗುವುದಕ್ಕೆ ಮುಂಚೆ. ಅನಾದಿಕಾಲ=ಅನಾದಿ ಕಾಲದಿಂದ ಅಪರೋಕ್ಷವಿಲ್ಲ. ಸಾಧನಾನಂತರವೇ ಅಪರೋಕ್ಷವೆಂದರ್ಥ, ನಿಷೇಧ ಕರ್ಮಗಳಿಲ್ಲ. ನರಕಪ್ರಾಪ್ತಿ ಮೊದಲಿಲ್ಲ; ವೇದಶಾಸ್ತ್ರಗಳಲ್ಲಿ, ಯಿಪ್ಪ=ಇರುವ, ವಿರೋಧವಾಕ್ಯದ ಪರಿಹರಿಸಿ, ಮಧುಸೂದನನೆ ಸರ್ವೋತ್ತಮನೆಂದು ಸ್ಮರಿಸುವರು.

ತಾತ್ಪರ್ಯ—ದೇವಗಂಧರ್ವರು ಮೊದಲು, ಪರ್ಜನ್ಯನವರೆಗೂ ಹೇಳಿದ ಸಾಂಶರಾದ ಜ್ಞಾನ ವಿಜ್ಞಾನ ಯೋಗಿಗಳಿಗೆ ಮೇಲಿನ ಪದ್ಯದಲ್ಲಿ ಹೇಳಿದ ಸಾಧನ ಮಾಡುವುದಕ್ಕೆ ಮುಂಚೆ ಅನಾದಿಕಾಲದ ಅಪರೋಕ್ಷವಿಲ್ಲ. ನಿಷೇಧ ಕರ್ಮಾಚರಣೆ ಇಲ್ಲ. ನರಕಪ್ರಾಪ್ತಿ ಇಲ್ಲ. ವೇದ ಶಾಸ್ತ್ರಗಳಲ್ಲಿ ಪರಸ್ಪರ ಬರುವ ವಿರೋಧ ವಾಕ್ಯಗಳನ್ನು ಪರಿಹರಿಸಿ, ನಿಸ್ಸಂಶಯ ಜ್ಞಾನದಿಂದ ಹರಿಯೇ ಸರ್ವೋತ್ತಮೋತ್ತಮನೆಂದು ಸ್ಮರಿಸಿ ಆನಂದಪಡುತ್ತಿರುವರು.

ಅವತಾರಿಕೆ.—ಭಕ್ತಿಯೋಗಿಗಳ ವಿಷಯವನ್ನು ಹೇಳುತ್ತಾರೆ.

**ಸತ್ಯಲೋಕಾಧಿಪನ ಪಿಡಿದು ಶ**
**ತಸ್ಥದೇವಗಣಾಂತ ಎಲ್ಲರು**
**ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ ||**
**(ಮುಕ್ತಿ) ಭಕ್ತಿಯೋಗ್ಯರ ಮಧ್ಯದಲಿ ಸ**
**ದ್ಭಕ್ತಿವಿಜ್ಞಾನಾದಿಗುಣದಿಂ**
**ಮುತ್ತಮೋತ್ತಮ ಬ್ರಹ್ಮವಾಯೂ ವಾಣಿವಾಗ್ದೇವೀ ||೧೦||**

ಪದ್ಯಾರ್ಥ.—ಸತ್ಯಲೋಕಾಧಿಪನಪಿಡಿದು = ಸತ್ಯಲೋಕಾಧಿಪತಿಯಾದ ಬ್ರಹ್ಮದೇವರ ಮೊದಲು ಮಾಡಿ, ಶತಸ್ಥದೇವಗಣಾಂತರೆಲ್ಲರೂ= ಉಕ್ತಶೇಷಶತಸ್ಥ ದೇವತೆಗಳವರೆಗೂ ಇರುವ ಎಲ್ಲರೂ, ಆವಕಾಲದಲಿ= ಅನಾದಿಕಾಲದಲ್ಲೂ, ಭಕ್ತಿಯೋಗಿಗಳೆಂದು ಕರೆಸುವರು. ಭಕ್ತಿಯೋಗ್ಯರ ಮಧ್ಯದಲ್ಲಿ=ಮೇಲೆ ಹೇಳಿದ ಭಕ್ತಿಯೋಗಿಗಳ ಮಧ್ಯದಲ್ಲಿ, ಸದ್ಭಕ್ತಿವಿಜ್ಞಾನಾದಿ ಗುಣದಿಂದ, ಬ್ರಹ್ಮ= ಬ್ರಹ್ಮದೇವರು, ವಾಯು=ವಾಯುದೇವರು, ವಾಣಿ=ಸರಸ್ವತೀದೇವಿಯರು, ವಾಗ್ದೇವಿ=ಭಾರತೀದೇವಿಯರು. ಇವರು ಉತ್ತಮೋತ್ತಮರು.

ತಾತ್ಪರ್ಯ.—ಬ್ರಹ್ಮದೇವರ ಮೊದಲು, ಬೃಹತ್ತಾರತಮ್ಯ ಸಂಧಿಯಲ್ಲಿ ಹೇಳಿದ ೪೯ ಮರುದ್ಗಣರು, ದ್ವಾದಶಾದಿತ್ಯರು ಮೊದಲಾದ ದೇವತೆಗಳ ಪೈಕಿ ಮೇಲಿನ ಕಕ್ಷೆಯಲ್ಲಿ ಸೇರಿದ ದೇವತೆಗಳನ್ನು ಬಿಟ್ಟು ಉಳಿದವರು ಉಕ್ತಶೇಷ ಶತರೆಂದು ೧೦೦ ದೇವತೆಗಳ ಕಡೆಯಾಗಿ ಮಧ್ಯವರ್ತಿಗಳಾದ ಎಲ್ಲಾ ದೇವತೆಗಳೂ ಭಕ್ತಿಯೋಗಿಗಳೆನಿಸುವರು. ಈ ಭಕ್ತಿಯೋಗಿಗಳ ಮಧ್ಯದಲ್ಲಿ, ಬ್ರಹ್ಮದೇವರು, ವಾಯುದೇವರು, ಸರಸ್ವತೀ ದೇವಿಯರು,

ಭಾರತೀದೇವಿಯರು ಇವರು ಸದ್ಭಕ್ತಿ ಜ್ಞಾನಾದಿಗಳಿಂದ ಉತ್ತಮೋತ್ತಮರೆನಿಸುವರು.

ಅವತಾರಿಕೆ :—ಋಜುಗಣದವರ ಲಕ್ಷಣವನ್ನು ಹೇಳುತ್ತಾರೆ

**ಋಜುಗಣಕೆ ಭಕ್ತ್ಯಾದಿ ಗುಣಸಾ**
**ಹಜವೆನಿಸುವುದು ಕ್ರಮದಿವೃಧ್ಯಾ**
**ಬ್ಜಜ ಪದವಿಪರ್ಯಂತ ಬಿಂಬೋಪಾಸನವು ಅಧಿಕ ||**
**ವೃಜಿನವರ್ಜಿತರಿವರೊಳಗೆ ತ್ರಿಗು**
**ಣಜ ವಿಕಾರಗಳಿಲ್ಲ ವೆಂದಿಗ,**
**ದ್ವಿಜಫಣಿಪಮೃಡಶಕ್ರ ಮೊದಲಾದವರೊಳಿರುತಿಹವು ||೧೨||**

ಪದ್ಯಾರ್ಥ :—ಋಜುಗಣಕೆ=ಬ್ರಹ್ಮಪಟ್ಟಕ್ಕೆ ಯೋಗ್ಯರಾದ ಋಜುಗಣದವರಿಗೆ, ಭಕ್ತ್ಯಾದಿಗುಣ ಸಹಜವೆನಿಸುವದು=ಅನಾದಿಕಾಲದಿಂದಲೂ ಇದ್ದೇ ಇರುವದು. ಕ್ರಮದಿ-ಕಲ್ಪಸಾಧನವಾಗುತ್ತಾ ಆಗುತ್ತಾ ವೃಧ್ಯಾ=ವೃದ್ಧಿ ಹೊಂದುತ್ತಾ, ಅಬ್ಜಜಪದವಿಪರ್ಯಂತ-೧೦೦ ಕಲ್ಪಸಾಧನರೂಪವಾದ ಬ್ರಹ್ಮಪದವಿ ಬರುವವರೆಗೂ, ಬಿಂಬೋಪಾಸನವು ಅಧಿಕ-ಕಲ್ಪಕಲ್ಪಕ್ಕೂ ಹೆಚ್ಚುತ್ತಾ ಬರುವದು. ವೃಜಿನವರ್ಜಿತರು=ಇವರಿಗೆ ಪಾಪ ಲೇಶವೂ ಇರುವುದಿಲ್ಲ. ಇವರೊಳಗೆ-ಈ ಋಜುಗಣದವರೊಳಗೆ, ತ್ರಿಗುಣಜವಿಕಾರಗಳು ಸತ್ವರಜಸ್ತಮೋಗುಣಗಳ ಸಂಬಂಧವಾದ ವಿಕಾರಗಳು ಎಂದಿಗೂ ಇಲ್ಲ. ದ್ವಿಜ=ಗರುಡ, ಫಣಿಪ ಶೇಷ ಮೃಡ=ರುದ್ರ ಶಕ್ರ=ಇಂದ್ರ ಮೊದಲಾದವರೊಳು ಇರುತಿಹವು=ತ್ರಿಗುಣ ಸಂಬಂಧವಾದ ವಿಕಾರಗಳಿರುವವು

ತಾತ್ಪರ್ಯ:—೧೦೦ ಕಲ್ಪಸಾಧನೆಯಿಂದ ಬ್ರಹ್ಮಪದವಿಯನ್ನು ಹೊಂದುವ ಯೋಗ್ಯತೆ ಉಳ್ಳವರು ಋಜುಗಣದವರು ; ಇವರಿಗೆ ಭಕ್ತ್ಯಾದಿ ಗುಣಗಳು ಅಪರೋಕ್ಷವೂ ಸಹ, ಅನಾದಿ ಕಾಲದಿಂದಿರುವದು ಕ್ರಮವಾಗಿ ಕಲ್ಪಸಾಧನವಾಗುತ್ತಾ ಆಗುತ್ತಾ ಭಕ್ತ್ಯಾದಿಗಳು ಬಿಂಬೋಪಾಸನೆ ಮೊದಲಾದವುಗಳು ಹೆಚ್ಚುತ್ತಾ ಬಂದು ಬ್ರಹ್ಮ ಪದವಿಯನ್ನು ಹೊಂದುವಾಗ ಪೂರ್ಣವಾಗುವದು. ಈ ಋಜುಗಣದವರಿಗೆ ಪಾಪ ಸಂಬಂಧವು ಲೇಶವೂ ಇರುವುದಿಲ್ಲ. ಸತ್ವಾದಿ ಪ್ರಾಕೃತ ಗುಣಜನ್ಯವಾದ ಯಾವ ವಿಧ ವಿಕಾರಗಳೂ ಇರುವುದಿಲ್ಲ. ಈ ವಿಕಾರಾದಿಗಳು ಗರುಡ, ಶೇಷ, ರುದ್ರ, ಇಂದ್ರ ಮೊದಲಾದ ದೇವತೆಗಳಲ್ಲಿರುವವು. " ಋಜವೋನಾಮಯೇದೇವಾಃ ಯೋಗ್ಯಾ

ಬ್ರಹ್ಮಪದಸ್ಯ ತು" ಎಂಬಿವೇ ಮೊದಲಾದ ಭಾಗವತ ತಾತ್ಪರ್ಯ ವಚನಗಳಿಂದ ಬ್ರಹ್ಮಪದವಿಯು ಈ ಋಜುಗಣದವರು ಹೊರತು ಮತ್ತಾರಿಗೂ ಪ್ರಾಪ್ತ ವಾಗುವುದಿಲ್ಲ.

**ಸಾಧನಾತ್ಪೂರ್ವದಲಿ ಈ ಋ-**
**ಜ್ವಾದಿ ತಾತ್ವಿಕರೆನಿಪ ಸುರಗಣ-**
**ನಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ।**
**ಸಾಧನೋತ್ತರ ಸ್ವಸ್ವಬಿಂಬವು-**
**ಪಾಧಿರಹಿತಾದಿತ್ಯನಂದದಿ**
**ಸಾದರದಿ ನೋಡುವರು ಅಧಿಕಾರಾನುಸಾರದಲಿ ॥ ೧೩ ॥**

ಪದ್ಯಾರ್ಥ— ಸಾಧನಾತ್ಪೂರ್ವದಲಿ ಸಾಧನವಾಗುವುದಕ್ಕೆ ಮುಂಚೆ, ಈ ಋಜ್ವಾದಿ=ಋಜುಗಣ ಮೊದಲಾದ, ತಾತ್ವಿಕರೆನಿಪ=ತತ್ವಾಭಿಮಾನಿಗಳೆನಿಸುವ, ಸುರಗಣ=ದೇವತಾಗಣವು, ಅನಾದಿ=ಅನಾದಿಕಾಲದಿಂದಲೂ, ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು. ಸಾಧನೋತ್ತರ=ತಮ್ಮ ತಮ್ಮ ಸಾಧನ ಪೂರ್ತಿಯಾದ ಮೇಲೆ. ಸ್ವಸ್ವ ಬಿಂಬ=ತಮ್ಮ ತಮ್ಮ ಬಿಂಬರೂಪಿಯಾದ ಶ್ರೀ ಹರಿಯನ್ನು, ಅಧಿಕಾರಾನುಸಾರದಲಿ=ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಉಪಾಧಿರಹಿತ ಮೇಘ ಮೊದಲಾದವುಗಳಿಂದ ಮುಚ್ಚಲ್ಪಡದಿರುವ, ಆದಿತ್ಯ ನಂದದಿ=ಸೂರ್ಯನಂತೆ, ಸಾದರದಿ=ಆದರದಿಂದ ನೋಡುವರು.

ತಾತ್ಪರ್ಯ—ಈ ಋಜುಗಣ ಮೊದಲಾದ ತತ್ವಾಭಿಮಾನಿಗಳು ಅನಾದಿ ಕಾಲದಿಂದಲೂ ಸಾಮಾನ್ಯಾಕಾರವಾದ ಅಪರೋಕ್ಷ ಜ್ಞಾನವುಳ್ಳವರಾಗಿರುವರು. ಸಾಧನೋತ್ತರದಲ್ಲಿ ತಮ್ಮ ತಮ್ಮ ಯೋಗ್ಯತಾನುಸಾರವಾಗಿ, ಮೇಘಾದಿಗಳ ಆವರಕವಿಲ್ಲದ ನಿರ್ಮಲಾಕಾಶದ ಮಧ್ಯದಲ್ಲಿನ ಸೂರ್ಯನಂತೆ, ತಮ್ಮ ಬಿಂಬ ರೂಪಿಯಾದ ಶ್ರೀಪರಮಾತ್ಮನನ್ನು ಕಾಣುವರು. ನೋಡುವರು ಅಧಿಕಾರಾನು ಸಾರದಲಿ ಎಂಬುವುದರಿಂದ ಎಲ್ಲರೂ ಒಂದು ಸೂರ್ಯನಂತೆ ನೋಡುವರೆಂಬ ಸಂಶಯವನ್ನು ಪರಿಹರಿಸಿದಂತಾಯಿತು. ಕೆಲವರು ಒಬ್ಬ ಸೂರ್ಯನಂತೆ, ಕೆಲವರು ೧೦ ಸೂರ್ಯಪ್ರಕಾಶ, ಕೆಲವರು ೧೦೦, ಕೋಟಿ, ಹೀಗೆ ಅವರವರ ಯೋಗ್ಯತಾನುಸಾರವಾದ ಪ್ರಕಾಶವುಳ್ಳ ಪರಮಾತ್ಮನನ್ನು ಕಾಣುವರು. ।೧೩।

ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವ, ದ್ವಿತೀಯ ರೂಪದಲಿ=ಎರಡನೆಯ ರೂಪವಾದ, ಕೂರ್ಮರೂಪದಲಿ=ಕೂರ್ಮರೂಪದಿಂದ,ಈ ವಿರಿಂಚಾಂಡವನು=ಬ್ರಹ್ಮಾಂಡವನ್ನುಬೆನ್ನಿಲಿ, ತಾ ವಹಿಸಿ=ತಾನು ಹೊತ್ತುಕೊಂಡು, ಲೋಕಗಳ=ಸಕಲ ಪ್ರಾಣಿಗಳನ್ನು, ಪೊರೆವನು=ರಕ್ಷಿಸುವನು.

ತಾತ್ಪರ್ಯ—ದೇವತೆಗಳು, ಋಷಿಗಳು, ಪಿತೃಗಳು, ಚಕ್ರವರ್ತಿಗಳು, ಮನುಷ್ಯರೆಂಬ ಐದು ವಿಧ ಮುಕ್ತಿಯೋಗ್ಯ ಜೀವರಲ್ಲಿ ವಾಯುದೇವರು ವಾಸ ಮಾಡುತ್ತಾ, ಅವರವರ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿ, ಮಾಡಿಸಿ ಜನರನ್ನು ಒಂದು ರೂಪದಿಂದ ಉದ್ಧರಿಸುವರು. ೨ನೆಯ ಕೂರ್ಮ ರೂಪವನ್ನು ಧರಿಸಿ ಬ್ರಹ್ಮಾಂಡವನ್ನು ಬೆನ್ನಿಲಿ ಪೊತ್ತು ಸಕಲ ಪ್ರಾಣಿಗಳನ್ನು ರಕ್ಷಿಸುವರು. ॥ ೧೬ ॥

**ಗುಪ್ತನಾಗಿದ್ದನಿಲದೇವ ದ್ವಿ-**
**ಸಪ್ತ ಲೋಕದ ಜೀವರೊಳಗೆ ತ್ರಿ-**
**ಸಪ್ತ ಸಾವಿರದಾರುನೂರು ಶ್ವಾಸ ಜಪಗಳನು ।**
**ಸುಪ್ತಿ ಸ್ವಪ್ನದಿ ಜಾಗ್ರತೀಗಳ-**
**ಲಾಪ್ತನಂದದಿ ಮಾಡಿ ಮಾಡಿಸಿ**
**ಕ್ಲೃಪ್ತಭೋಗಗಳೀವ ಪ್ರಾಂತಕೆ ತೃತಿಯರೂಪದಲಿ ॥ ೧೭॥**

ಪದ್ಯಾರ್ಥ—ಅನಿಲದೇವರು= ವಾಯುದೇವರು, ತೃತಿಯರೂಪದಲಿ=ಮೂರನೆಯ ರೂಪದಿಂದ, ದ್ವಿಸಪ್ತಲೋಕದ ಜೀವರೊಳಗ=೧೪ ಲೋಕಗಳಲ್ಲಿ ರುವ ಸರ್ವಪ್ರಾಣಿಗಳ ಒಳಗೆ ಗುಪ್ತನಾಗಿದ್ದು, ಸುಪ್ತಿ=ನಿದ್ರೆಮಾಡುತ್ತಿರು ವಾಗಲೂ, ಸ್ವಪ್ನದಿ=ಒಳಗೆ ಸ್ವಪ್ನಾವಸ್ಥೆಯಲ್ಲೂ, ಜಾಗ್ರತೀಗಳಲಿ=ಜಾಗ್ರದ ವಸ್ಥೆಯಲ್ಲೂ, ಅಂತೂ ಸರ್ವಕಾಲದಲ್ಲೂ, ಆಪ್ತನಂದದಿ= ಪರಮಮಿತ್ರ ನಂತೆ, ತ್ರಿಸಪ್ತಸಾವಿರದಾರುನೂರು ಶ್ವಾಸಜಪಗಳನು=3 x 7 =21 ಸಾವಿರದ 600 ಶ್ವಾಸಜಪಗಳನ್ನು, ಮಾಡಿ=ತಾವು ಮಾಡಿ, ಮಾಡಿಸಿ=ಜೀವರುಗಳಿಂದ ಮಾಡಿಸಿ, ಪ್ರಾಂತಕೆ=ಕಡೆಗೆ, ಕ್ಲೃಪ್ತ ಭೋಗಗಳೀವ=ಅವರವರ ಯೋಗ್ಯತೆಗೆ ತಕ್ಕ ಭೋಗಗಳನ್ನು ಕೊಡುವರು.

ತಾತ್ಪರ್ಯ—ವಾಯುದೇವರು 14 ಲೋಕದ ಪ್ರಾಣಿಗಳಲ್ಲೂ ಯಾರಿಗೂ ಗೊತ್ತಾಗದಂತಿದ್ದು, ಸ್ವಪ್ನಾವಸ್ಥೆ, ಜಾಗ್ರದವಸ್ಥೆ, ಸುಷುಪ್ತ್ಯವಸ್ಥೆ

ಗಳೆಂಬ ಮೂರು ಅವಸ್ಥೆಗಳಲ್ಲೂ ಮುಖ್ಯವಾಗಿ ಸರ್ವ ಕಾಲದಲ್ಲೂ ಎಂಬ ತಾತ್ಪರ್ಯ, ಪರಮಾಪ್ತನಂತೇ ೨೧ಸಾವಿರದ ೬೦೦ ಶ್ವಾಸಜಪಗಳನ್ನು ಮಾಡಿ, ಮಾಡಿಸಿ ಮೂರನೆಯ ರೂಪದಿಂದ ಕಡೆಗೆ ಅವರವರ ಯೋಗ್ಯತಾನುಸಾರವಾಗಿ ಭೋಗವನ್ನು ಕೊಡಿಸುವನು. ॥ ೧೭ ॥

**ಶುದ್ಧ ಸತ್ವಾತ್ಮಕ ಶರೀರದೊ-**
**ಳಿದ್ದ ಕಾಲಕು ಲಿಂಗ ದೇಹವು**
**ಬದ್ಧವಾಗದು ದಗ್ಧಪಟದೋಪಾದಿ ಇರುತಿಹದು ।**
**ಸಿದ್ಧ ಸಾಧನ ಸರ್ವರೊಳಗನ-**
**ವದ್ಯನೆನಿಸುವ ಗರುಡ ಶೇಷ ಕ-**
**ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ॥ ೧೮ ॥**

ಪದ್ಯಾರ್ಥ—ಶುದ್ಧಸತ್ವಾತ್ಮಕ ಶರೀರದೊಳಿದ್ದ ಕಾಲಕು= ವಾಯುದೇವರು ವಿಶುದ್ಧವಾದ ಸತ್ವಾತ್ಮಕ ದೇಹದೊಳಿದ್ದ ಕಾಲಕ್ಕು, ಲಿಂಗದೇಹವು, ಬದ್ಧವಾಗದು=ಇವರನ್ನು ಬದ್ಧಪಡಿಸುವುದಿಲ್ಲ, ದಗ್ಧಪಟದೋಪಾದಿ=ಸುಟ್ಟ ವಸ್ತ್ರವಿದ್ದಂತೆ ಆಕಾರ ಮಾತ್ರವಿರುವುದು, ಕಾರ್ಯದಲ್ಲಿ ಯಾವುದಕ್ಕೂ ಪ್ರಯೋಜನವಿಲ್ಲವೆಂಪರ್ಥ. ಸಿದ್ಧಸಾಧನ= ಇವರು ಯಾವಾಗಲೂ ಸಿದ್ಧ ಸಾಧನರು. ಎಲ್ಲಾ ಸಾಧನವೂ ಸಂಪೂರ್ಣವಾಗಿರುವುದೆಂಪರ್ಥ. ಮುಂದೆ ಸಾಧ್ಯವಾಗುವ ಸಾಧನವಾವುದೂ ಇಲ್ಲ. ಇಂಥ ವಾಯುದೇವರು, ಎಲ್ಲಾ ದೇವತೆಗಳ ಮಧ್ಯದಲ್ಲಿ, ಅನವದ್ಯನನಿಸುವ- ನಿರ್ದುಷ್ಟರೆನಿಸುವರು, ಇವರಿಗೆ ಗರುಡ, ಶೇಷ, ಕಪರ್ದಿ ಮೊದಲಾದ=ರುದ್ರದೇವರು ಮೊದಲಾದ, ಅಮರರೆಲ್ಲರು=ದೇವತೆಗಳೆಲ್ಲರೂ, ದಾಸರೆನಿಸುವರು.

ತಾತ್ಪರ್ಯ—ಬ್ರಹ್ಮ ವಾಯುಗಳ ಶರೀರಗಳು, "ವಿಶುದ್ಧಸತ್ವಂ ಬ್ರಹ್ಮಾಖ್ಯಂ" ಎಂಬ ಭಾಗವತ ದಶಮಸ್ಕಂಧ ತಾತ್ಪರ್ಯ ವಾಕ್ಯದಂತೆ ವಿಶುದ್ಧವಾದ ಅಂದರೆ ರಜೋಗುಣ ತಮೋಗುಣ ಮಿಶ್ರವಿಲ್ಲದ ಶುದ್ಧಸತ್ವ ಸ್ವರೂಪವಾದವು. ಲಿಂಗಶರೀರವಿದ್ದರೂ ಅದರಿಂದ ಬದ್ಧರಾಗುವುದಿಲ್ಲ. ಬಟ್ಟೆಯನ್ನು ಸುಟ್ಟರೆ ಅದು ಬಟ್ಟೆಯಾಕಾರವಾಗಿ ಕಾಣುವುದು. ಕೈಲಿ ಹಿಸಿಕಿದರೆ ಬೂದಿಯಾಗುವುದು. ಇದರಂತೆ ದಗ್ಧಪಟನ್ಯಾಯವಾಗಿ ಅವರಿಗೆ ಲಿಂಗ ಶರೀರವಿರುವುದು. ಇವರಿಗೆ ಸಾಧನಗಳು ಪೂರ್ತಿಯಾಗಿರುವುದರಿಂದ ಸಿದ್ಧ

ಸಾಧನರೆಂದು ಕರೆಯಲ್ಪಡುವರು. ಸರ್ವಪ್ರಾಣಿಗಳಲ್ಲಿದ್ದರೂ ನಿರ್ದುಷ್ಟರಾಗಿರುವರು. ಗರುಡ, ಶೇಷ ರುದ್ರಾದಿ ದೇವತಾಗಣರು ಇವರಿಗೆ ದಾಸರೆನಿಸುವರು. ॥ ೧೮ ॥

**ಗಣದೊಳಗೆ ತಾನಿದ್ದು ಋಜುವೆಂ-**
**ದೆನಿಸಿಕೊಂಬನು ಕಲ್ಪಶತ ಸಾ-**
**ಧನವ ಗೈದಾನಂತರದಿ ತಾ ಕಲ್ಕಿಯೆನಿಸುವನು ।**
**ದ್ವಿನವತೀತಿಯ ಪ್ರಾಂತಭಾಗದ-**
**ಲನಿಲ ಹನುಮದ್ಭೀಮ ರೂಪದಿ**
**ದನುಜರೆಲ್ಲರ ಸದೆದು ಮಧ್ವಾಚಾರ್ಯನೆನಿಸಿದನು ॥ ೧೯ ॥**

ಪದ್ಯಾರ್ಥ—ಗಣದೊಳಗೆ ತಾನಿದ್ದು= ಋಜುಗಣದೊಳಗೆ ತಾವೂ ಇದ್ದು, ಋಜುವೆಂದೆನಿಸಿಕೊಂಬನು= ಋಜುಗಣಕ್ಕೆ ಸೇರಿದವರೆಂದು ಪ್ರಖ್ಯಾತರಾಗಿರುವರು ಕಲ್ಪಶತಸಾಧನವ ಗೈದಾನಂತರದಿ= ೧೦೦ ಕಲ್ಪಗಳ ಸಾಧನ ಸಂಪೂರ್ಣವಾಗಲು, ತಾ ಕಲ್ಕಿ ಎನಿಸುವನು. ದ್ವಿನವತೀತಿಯ ಪ್ರಾಂತಭಾಗದಲಿ= ೯೮ನೆಯ ಕಲ್ಪದ ಕಡೆಯ ಭಾಗದಲ್ಲಿ ಅಂದರೆ ೯೯ನೆಯ ಕಲ್ಪದಲ್ಲಿ, ಹನುಮದ್ಭೀಮರೂಪದಿ= ರಾಮಾವತಾರದಲ್ಲಿ ಹನುಮಂತರೂಪದಿಂದಲೂ, ಕೃಷ್ಣಾವತಾರದಲ್ಲಿ ಭೀಮಸೇನರೂಪದಿಂದಲೂ, ದನುಜರೆಲ್ಲರ= ದಾನವರೆಲ್ಲರನ್ನೂ ಸದೆದು= ಸಂಹರಿಸಿ, ಮಧ್ವಾಚಾರ್ಯನೆನಿಸಿದನು= ಶ್ರೀಮನ್ಮಧ್ವಾಚಾರ್ಯರೆಂದು ಅವತರಿಸಿದರು.

ತಾತ್ಪರ್ಯ— ವಾಯುದೇವರು ಪೂರ್ವದಲ್ಲಿ ಋಜುಗಣದಲ್ಲಿ ಸೇರಿ ಋಜು ಎಂಬ ಹೆಸರಿನಿಂದ ನಿದ್ರಾವಸ್ಥೆಯಲ್ಲಿರುತ್ತಾರೆ. ಮೊದಲು ಸೃಷ್ಟಿಗೆ ಬಂದಮೇಲೆ ೧೦೦ ಕಲ್ಪಸಾಧನವಾದ ಮೇಲೆ ಇವರಿಗೆ ಋಜುವೆಂಬ ಹೆಸರು ಹೋಗಿ ಕಲ್ಕಿ ಎಂಬ ಹೆಸರು ಬರುವುದು. ಕಲ್ಕಿಯಾದ ಮೇಲೆ ೧೦೦ ಕಲ್ಪ ಸಾಧನದಿಂದ ಬ್ರಹ್ಮಪದವಿಯನ್ನು ಹೊಂದುವರೆಂದು ತಾತ್ಪರ್ಯ. ಈ ವಿಷಯದಲ್ಲಿ ಪುರಂದರದಾಸಾರ್ಯರ ಸುಳಾದಿ ಇರುವುದು. "ಹರಮುಖಾದ್ಯಮರರಿಗೆ ವರನೆನಿಸಿ ಋಜುವೊಬ್ಬ ಹರುಷದಿ ಶತಕಲ್ಪಸಾಧನವ ಗೈದು ತಾನು । ಕರೆಸುವ ಕಲ್ಕಿಯೆಂದ ಎರಡೈದು ದಶಕಲ್ಪ ಸಾಧನಮಾಡುತಲಿ ವಿರಿಂಚಿಯೆ ತಾನೆನಿಸಿ ಸತ್ಯಲೋಕವನಾಳಿ ಸರ್ವಾಂಗ ಸಾಯುಜ್ಯಾನ ಪತಿ

ವಾನು ಇದರಂತೆ ಚರಿಪಾರು ಪ್ರತಿದಿನ ಋಜುಗಣ ಚೇತನರು ಧರಣೀಶ ಪುರಂದರವಿಠಲಾನ ಪೂರ್ಣಾಕರುಣಾ ಪೂರ್ಣಪಾತ್ರರು ಕೇಳೋ ಅಚ್ಛಿನ್ನ ಭಕ್ತರಿವರು" ಎಂಬ ಸುಳಾದಿಯಿಂದ ಋಜುಗಣದವರು ೧೦೦ ಕಲ್ಪಸಾಧನ ವಾದ ಮೇಲೆ ಕಲ್ಕಿ ಎನಿಸಿ ಮತ್ತು ೧೦೦ ಕಲ್ಪಸಾಧನದಿಂದ ಬ್ರಹ್ಮಪಟ್ಟಕ್ಕೆ ಬರುವರೆಂಬರ್ಥವು ಸಿದ್ಧಿಸುವುದು. ಅದೇ ಅರ್ಥವನ್ನೇ ದಾಸಾರ್ಯರು ಇಲ್ಲಿ ಹೇಳಿರುವರು. ಹೀಗೆ ೧೦೦ ಕಲ್ಪಸಾಧನವಾದ ಮೇಲೆ ಕಲ್ಕಿ ಎನಿಸಿ, ಆಮೇಲೆ ೯೮ ಕಲ್ಪಗಳ ಸಾಧನವ ಕಳೆದು ೯೯ನೆಯ ಕಲ್ಪಾರಂಭದಲ್ಲಿ ವಾಯುವೆನಿಸಿ, ರಾಮಾವತಾರದಲ್ಲಿ ಹನುಮಂತರೂಪದಿಂದಲೂ, ಕೃಷ್ಣಾವತಾರದಲ್ಲಿ ಭೀಮ ಸೇನರೂಪದಿಂದಲೂ ದೈತ್ಯರನ್ನು ಸಂಹರಿಸಿ ಕಡೆಗೆ ಆ ದಾನವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ ಕುಭಾಷ್ಯಾದಿಗಳನ್ನು ರಚಿಸಿ ಭಗವದ್ಗುಣಗಳನ್ನು ಆಚ್ಛಾ ದಿಸಲು ಪರಮಾತ್ಮನ ಅಪ್ಪಣೆಯನ್ನು ಪಡೆದು ಮಧ್ವಾಚಾರ್ಯರಾಗಿ ಅವತರಿಸಿದರು. ॥ ೧೯ ॥

**ವಿಶ್ವವ್ಯಾಪಕ ಹರಿಗೆ ತಾ ಸಾ-**
**ದೃಶ್ಯ ರೂಪವ ಧರಿಸಿ ಬ್ರಹ್ಮ ಸ-**
**ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ ।**
**ಶಾಶ್ವತ ಸುಭಕ್ತಿಯುಲಿ ಸುಜ್ಞಾ-**
**ನ ಸ್ವರೂಪನ ರೂಪ ಗುಣಗಳ-**
**ನಶ್ವರವು ಎಂದೆನುತ ಪೊಗಳುವ ಶ್ರುತಿಗಳೊಳಗಿದ್ದು ॥೨೦॥**

ಪದ್ಯಾರ್ಥ—ವಿಶ್ವವ್ಯಾಪಕ=ಪ್ರಪಂಚದಲ್ಲಿ ಸರ್ವತ್ರದಲ್ಲಿ ವ್ಯಾಪ್ತರಾಗಿ ತಾನು, ಹರಿಗೆ, ಸಾದೃಶ್ಯರೂಪವ ಧರಿಸಿ=ಸಮಾನವಾದ ರೂಪವುಳ್ಳವರಾಗಿ, ಬ್ರಹ್ಮ, ಸರಸ್ವತೀ, ಭಾರತಿಗಳಿಂದೊಡಗೂಡಿ, ಪವಮಾನ= ವಾಯುದೇವರು, ಶ್ರುತಿಗಳೊಳಗಿದ್ದು=ವೇದಗಳೊಳಗಿದ್ದು, ಶಾಶ್ವತ ಸುಭಕ್ತಿಯುಲಿ=ಶಾಶ್ವತವಾದ (ಅವಿಚ್ಛಿನ್ನವಾದ) ಉತ್ತಮ ಭಕ್ತಿಯಿಂದ, ಸುಜ್ಞಾನ ಸ್ವರೂಪನ=ಉತ್ತಮ ಜ್ಞಾನಸ್ವರೂಪನಾದ ಶ್ರೀಹರಿಯ, ರೂಪ ಗುಣಗಳು, ಅನಶ್ವರವೆಂದು, ಪೊಗಳುವ=ಸ್ತುತಿಸುವರು.

ತಾತ್ಪರ್ಯ—ವಾಯುದೇವರು ಪ್ರಪಂಚದಲ್ಲಿ ಸರ್ವತ್ರದಲ್ಲೂ ವ್ಯಾಪ್ತ ರಾಗಿ ಪರಮಾತ್ಮನ ಸಾರೂಪ್ಯದಿಂದ ಬ್ರಹ್ಮದೇವರು, ಸರಸ್ವತೀ ದೇವಿಯರು

ಭಾರತೀದೇವಿಯರಿಂದೊಡಗೂಡಿ ವೇದಗಳಲ್ಲಿದ್ದು ಅವಿಚ್ಛಿನ್ನವಾದ ಭಕ್ತಿಯಿಂದ ಪರಮಾತ್ಮನ ರೂಪ ಗುಣಗಳು ಶಶ್ವದೇಕಪ್ರಕಾರವಾಗಿರುವುವೆಂದು ಹೊಗಳು ತ್ತಿರುವರು. ಯದ್ಯಪಿ ವೇದಾತ್ಮಿಕರು ದುರ್ಗಾದೇವಿಯರಾದರೂ, ವೇದದಲ್ಲಿ ಪ್ರವಿಷ್ಟರಾಗಿ ಪರಮಾತ್ಮನನ್ನು ಸ್ತುತಿಸುವರೆಂದರ್ಥ. ಅಥವಾ ಮಧ್ವಾ ಚಾರ್ಯರ ರೂಪದಿಂದ ವೇದಾರ್ಥವನ್ನು ವಿಶದಪಡಿಸಿದರೆಂದರ್ಥ. ॥ ೨೦ ॥

**ಖೇಟ ಕುಕ್ಕುಟ ಜಲಟವೆಂಬ ತ್ರಿ-**
**ಕೋಟ ರೂಪವ ಧರಿಸಿ ಸತತ ನಿ-**
**ಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರ ।**
**ಕೈಟಭಾರಿಯ ಪುರದ ರತ್ನ ಕ-**
**ವಾಟವೆನಿಸುವ ಗರುಡ ಶೇಷ ಲ-**
**ಲಾಟಲೋಚನ ಮುಖ್ಯ ಸುರರಿಗೆ ಆವ ಕಾಲದಲಿ ॥ ೨೧ ॥**

ಪದಾರ್ಥ—ಖೇಟ= ಅಂತರಿಕ್ಷದಲ್ಲ ಸಂಚರಿಸುವ ಪ್ರಾಣಿಗಳು, ಕುಕ್ಕುಟ=ಭೂಮಿಯಲ್ಲ ಸಂಚರಿಸುವ ಪ್ರಾಣಿಗಳು, ಜಲಟ=ನೀರಿನಲ್ಲಿ ಸಂಚರಿ ಸುವ ಪ್ರಾಣಿಗಳು, ಎಂಬ ತ್ರಿಕೋಟಿರೂಪವ=ಇಂತಹ ರೂಪಗಳು ಮೂರು ಕೋಟಿ ರೂಪಗಳನ್ನು ಧರಿಸಿ, ಸತತ=ಸರ್ವ ಕಾಲದಲ್ಲೂ, ನಿಶಾಟರನು= ರಾತ್ರಿಯಲ್ಲಿ ಸಂಚರಿಸುವ ರಾಕ್ಷಸ ಮೊದಲಾದವರನ್ನು ಸಂಹರಿಸಿ, ಸರ್ವ ಸಜ್ಜನರ ಸಲಹುವ=ರಕ್ಷಿಸುವರು ಗರುಡ, ಶೇಷ ಲಲಾಟಲೋಚನ=ರುದ್ರ ದೇವರು, ಮುಖ್ಯ ಸುರರಿಗೆ=ಮೊದಲಾದ ದೇವತೆಗಳಿಗೆ, ಆವ ಕಾಲದಲಿ=ಅನಾದಿ ಕಾಲದಿಂದಲೂ, ಕೈಟಭಾರಿಯಪುರದ=ಮಧುಕೈಟಭರನ್ನು ಸಂಹರಿಸಿದ ಹರಿಯ ಪಟ್ಟಣದ, ರತ್ನಕವಾಟವೆನಿಸುವ=ರತ್ನಮಯವಾದ ಕದವೆನಿಸುವರು.

ತಾತ್ಪರ್ಯ—ವಾಯುದೇವರು ಮೂರುಕೋಟಿ ರೂಪಗಳನ್ನು ಧರಿಸಿ ರಾಕ್ಷಸರನ್ನು ಕೊಂದು ಸಜ್ಜನರನ್ನು ರಕ್ಷಿಸಿರುವರು. “ಮಹಾಬಲೋಽಹಂ ಕಪಿಲಾಖ್ಯರೂಪಸ್ತ್ರಿಕೋಟಿರೂಪಃ ಪವನಶ್ಚ ಮೇ ಸುತಃ” ಎಂಬ ನಿರ್ಣಯ ಲನೆಯ ಅಧ್ಯಾಯದಲ್ಲಿ ರಾಮದೇವರು ಹೇಳಿದ ವಾಕ್ಯದಿಂದ ವಾಯುದೇವರು ೩ಕೋಟಿ ರೂಪಉಳ್ಳವರೆಂದು ಸಿದ್ಧವಾಗುವುದು. ಆ ರೂಪಗಳಲ್ಲಿ ಕೆಲವು ಅಂತರಿಕ್ಷದಲ್ಲಿ ಸಂಚರಿಸುವ ರೂಪಗಳು, ಕೆಲವು ಭೂಮಿಯಲ್ಲಿ ಚರಿಸುವುವು.

ಕೆಲವು ಜಲಚರ ಪ್ರಾಣಿಗಳ ರೂಪಗಳು, ಈ ರೂಪಗಳಿಂದ ದುಷ್ಟನಿಗ್ರಹ ಮಾಡಿ ಸಜ್ಜನರನ್ನು ಪಾಲಿಸುವರು. ಗರುಡ, ಶೇಷ, ಋದ್ರಾದಿದೇವತೆಗಳಲ್ಲಿ ವಾಯುದೇವರು ಪರಮಾತ್ಮನ ಪಟ್ಟಣದ ಬಾಗಿಲಿನಲ್ಲಿ ಮೊದಲನೆಯ ದ್ವಾರಪಾಲಕರಂತೆ ಇರುವರು. ಅಂದರೆ ಇವರ ಮೂಲಕ ಉಪಾಸನೆಯನ್ನು ಮಾಡಿ ಪರಮಾತ್ಮನನ್ನು ಹೊಂದಬೇಕೆಂಬ ತಾತ್ಪರ್ಯ. ಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ ಪರಮಾತ್ಮನನ್ನು ಭಜಿಸಬೇಕಲ್ಲದೆ ಸಾಕ್ಷಾತ್ತಾಗಿ ಪರಮಾತ್ಮನನ್ನು ಭಜಿಸಲು ಅಧಿಕಾರವಿಲ್ಲವೆಂದರ್ಥ.

**ಈ ಋಜುಗಳೊಳಗೊಬ್ಬ ಸಾಧನ**
**ನೂರುಕಲ್ಪದಿ ಮಾಡಿಕರೆಸುವ**
**ಚಾರುತರಮಂಗಳಸುನಾಮದಿ ಕಲ್ಪಕಲ್ಪದಲಿ ||**
**ಸೂರಿಗಳು ಸಂತುತಿಸಿ ವಂದಿಸೆ**
**ಘೋರದುರಿತಗಳಳಿದು ಪೋಪವು**
**ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ ||೨೩||**

ಪದ್ಯಾರ್ಥ.—ಈ ಋಜುಗಳೊಳಗೆ=ಈ ಋಜುಗಣದವರ ಪೈಕಿ, ಒಬ್ಬ=ಒಬ್ಬ ವಾಯುದೇವರು ಮಾತ್ರ, ನೂರುಕಲ್ಪದಿ ಸಾಧನಮಾಡಿ, ಕಲ್ಪಕಲ್ಪದಲಿ, ಚಾರುತರಮಂಗಳಸುನಾಮದಿ=ಮನೋಹರವಾದ ರೂಪದಿಂದಲೂ, ಮಂಗಳಕರವಾದ ನಾಮದಿಂದಲೂ ಕರೆಸುವರು. ಸೂರಿಗಳು=ಜ್ಞಾನಿಗಳು, ಸಂತುತಿಸಿ=ಸ್ತೋತ್ರಮಾಡಿ, ವಂದಿಸೆ-ನಮಸ್ಕಾರಮಾಡಲು, ಘೋರದುರಿತಗಳು=ಘೋರವಾದ ಪಾಪಗಳು, ಅಳಿದುಪೋಪವು=ನಾಶಹೊಂದುವವು. ಸರ್ವಕಾಲದಲ್ಲಿ, ಮಾರಮಣ=ಲಕ್ಷ್ಮೀಪತಿಯು, ಸಂಪ್ರೀತನಾಗುವನು=ಬಹಳವಾಗಿ ಪ್ರೀತನಾಗುವನು.

ತಾತ್ಪರ್ಯ.—ಋಜುಗಣಗಳ ಮಧ್ಯದಲ್ಲಿ ನೂರು ಕಲ್ಪಗಳು ಸಾಧನಮಾಡಿ ಸುರೂಪವನ್ನೂ ಸುನಾಮವನ್ನೂ ಪಡೆದವರು ವಾಯುದೇವರೊಬ್ಬರೇ. ಹೀಗೆ ಪ್ರತಿಕಲ್ಪದಲ್ಲೂ ಒಬ್ಬ ಬ್ರಹ್ಮದೇವರು ಮುಕ್ತರಾದಕೂಡಲೇ ಈಗಿನ ವಾಯುದೇವರು ಆ ಪದವಿಗೆ ಬರುವರು. ಋಜುಗಣದಲ್ಲಿ ೯೮ ಕಲ್ಪ ಸಾಧನದವರೊಬ್ಬರು ವಾಯುದೇವರ ಪದವಿಗೆ ಬರುವರು. ಇವರನ್ನು ಸ್ತುತಿಸಿ ವಂದಿಸುವ ಜನರಿಗೆ ಪಾಪಗಳೆಲ್ಲವೂ ಪರಿಹಾರವಾಗುವದು ಪರಮಾತ್ಮನು ಪ್ರಸನ್ನನಾಗುವನು.

ಅವತಾರಿಕೆ.— ಈ ಪದ್ಯ ಮೊದಲು ೨೯ನೆಯ ಪದ್ಯದವರೆಗೂ ವಾಮನಪು ರಾಣೋಕ್ತವಾದ ವಾಯುದೇವರ ಶತನಾಮಗಳಿಂದ ಸ್ತೋತ್ರಮಾಡುತ್ತಾರೆ

ಪಾಹಿ ಕಲ್ಕಿ ಸುತೇಜದಾಸನೆ
ಪಾಹಿ ಧರ್ಮಾಧರ್ಮಖಂಡನ
ಪಾಹಿ ವರ್ಚಸ್ವಿಯೆ ಋಷಣ ನಮೋ ಸಾಧು ಮಹಿಪತಿಯೆ ||
ಪಾಹಿ ಸದ್ಧರ್ಮಜ್ಞ ಧರ್ಮಜ
ಪಾಹಿ ಸಂಪೂರ್ಣಶುಚಿ ವೈಕೃತ
ಪಾಹಿ ಅಂಜನ ಸರ್ಷಪನೆ ಖರ್ಪಟನೆ ಶ್ರದ್ಧಾಹ್ವ ||೨೩||

ಪದ್ಯಾರ್ಥ.— ಕಲ್ಕಿ-ಕಲ್ಕಿ ಎಂಬ ಹೆಸರನ್ನು ಪಡೆದ ಎಲೈ ವಾಯು ದೇವ ! ಪಾಹಿ=ನಮ್ಮನ್ನು ರಕ್ಷಿಸು ! ಸುತೇಜನೆ ! ದಾಸನೆ ! ಪಾಹಿ=ರ ಕ್ಷಿಸು, ಎಲೈ ಧರ್ಮ ಪಾಹಿ ! ಎಲೈ ಧರ್ಮ ಖಂಡನ ! ಪಾಹಿ ಎಲೈ ವರ್ಚ ಸ್ವಿಯೇ ! ಋಷಣ ! ನಿನಗೆ ನಮಸ್ಕಾರವು, ಎಲೈ ಸಾಧೋ ! ಮಹೀಪ ತಿಯೇ ! ರಕ್ಷಿಸು. ಸದ್ಧರ್ಮಜ್ಞ ಪಾಹಿ; ಎಲೈ ಧರ್ಮಜ ! ಪಾಹಿ; ಎಲೈ ಸಂಪೂರ್ಣ ! ಶುಚಿಯೇ ! ವೈಕೃತನೆ ! ಪಾಹಿ; ಎಲೈ ಅಂಜನ ! ಸರ್ಷಪನೆ ! ಎಲೈ ಖರ್ಷಣನೆ ! ಶ್ರದ್ಧನಾಮಕನೇ ಪಾಹಿ.

ತಾತ್ಪರ್ಯ.— ಋಜುಗಣದವರು, ಮೊದಲು ನೂರು ಕಲ್ಪದ ಸಾ ಧನವಾಗುವವರೆಗೂ ಋಜುವೆನಿಸುವರು. ನೂರುಕಲ್ಪ ಸಾಧನವಾದಕೂ ಡಲೆ ಋಜು ಎಂಬ ಹೆಸರು ಹೋಗಿ ೧೦೧ನೆಯ ಕಲ್ಪದಲ್ಲಿ ಕಲ್ಕಿ ಎಂಬ ಹೆ ಸರು ಬರುವುದು. ಹೀಗೆ ಕಲ್ಕಿ ಎಂಬ ಹೆಸರಾದಮೇಲೆ ಪ್ರತಿ ಒಂದು ಕಲ್ಪ ದಲ್ಲೂ ಒಂದೊಂದು ಹೆಸರಿನಂತೆ ನೂರು ಕಲ್ಪದಲ್ಲೂ ನೂರು ಹೆಸರು ಬರು ವುದು. ಆ ಹೆಸರುಗಳನ್ನು ಹೇಳುತ್ತಾರೆ.— ಮೊದಲನೆಯ ಕಲ್ಪದ ಹೆಸರು ಕಲ್ಕಿ, ಕಲಿಯನ್ನು ನಿರಾಕರಿಸುವುದರಿಂದ ಈ ಹೆಸರು. ಎರಡನೆಯ ಕಲ್ಪ ದಲ್ಲಿ ಸುತೇಜಾ ಎನ್ನುವರು. ತೇಜಸ್ವಿಯಾದುದರಿಂದ ಆ ಹೆಸರು ಬಂದಿತು ಮೂರನೆಯ ಕಲ್ಪದಲ್ಲಿ ಹರಿಗೆ ಮುಖ್ಯ ದಾಸರಾಗಿರುವುದರಿಂದ ದಾಸನೆಂ ದು ಹೆಸರು. ಧರ್ಮ ಸ್ವರೂಪರಾದುದರಿಂದ ಧರ್ಮನೆಂದು ನಾಲ್ಕನೆಯ ಹೆಸರು. ಅಧರ್ಮ ಖಂಡಿಸುವುದರಿಂದ ಅಧರ್ಮಖಂಡನನೆಂದು ಐನೇದು. ೬ನೆಯ ಹೆಸರು ವರ್ಚಸ್ವಿ- ಶತ್ರುಭಯಂಕರನಾದುದರಿಂದ ಋಷಣನೆಂದು

೭ನೆಯ ಹೆಸರು. ಸಜ್ಜನರಿಗೆ ಉಪಕಾರಿಯಾದುದರಿಂದ ಸಾಧು ಎಂದು ೮ನೆಯ ಹೆಸರು. ಪೂಜ್ಯರಾದ ಗರುಡ, ಶೇಷ, ರುದ್ರಾದಿಗಳಿಗೆ ಪ್ರಭು ವಾದುದರಿಂದ ಮಹಿಪತಿ ಎಂದು ೯ನೆಯ ಹೆಸರು. ಉತ್ತಮವಾದ ಧರ್ಮ ರಹಸ್ಯವನ್ನು ತಿಳಿದವರಾದುದರಿಂದ ಸದ್ಧರ್ಮಜ್ಞನೆಂದು ೧೦ನೆಯ ಹೆಸರು ಧರ್ಮವು ಯಾರ ದೆಶೆಯಿಂದ ಪ್ರಸಿದ್ಧಿ ಹೊಂದಿತೋ ಅವರಿಗೆ ಧರ್ಮಜ ರೆಂದು ಹೆಸರು. ಆ ಗುಣವು ವಾಯುದೇವರಲ್ಲಿದ್ದುದರಿಂದ ೧೧ನೆಯ ಹೆಸರು ಧರ್ಮಜ ಎಂದು. ಸಂಪೂರ್ಣಗುಣ ಉಳ್ಳವರಾದುದರಿಂದ ಸಂಪೂರ್ಣನೆಂದು ೧೨ನೆಯ ಹೆಸರು. ಶುಚಿರ್ಭೂತರಾದುದರಿಂದ ೧೩ನೆಯ ನಾಮ ಶುಚಿ ಎಂದು. ಬ್ರಹ್ಮಾಂಡದೊಳಗೆ ಸ್ಥಾವರ ಜಂಗಮ ಪ್ರಾಣಿಗಳಲ್ಲಿ ವ್ಯಾಪ್ತರಾಗಿರುವುದರಿಂದ ವೈಕೃತರೆಂದು ಹದಿನಾಲ್ಕನೆಯ ಹೆಸರು. ಅಕಾಗನಾಮಕ ಪರಮಾತ್ಮನನ್ನು ಜನರಲ್ಲಿ ಪ್ರಸಿದ್ಧಪಡಿಸುವುದರಿಂದ ಅಂಜನನೆಂದು ಹದಿನೈದನೆಯ ಹೆಸರು. ಸರ್ವಪ= ಋಷ ಎಂದರೆ ಜ್ಞಾನ ಶರ್ವಯೆಂದರೆ ಜ್ಞಾನವುಳ್ಳವರೆಂದರ್ಥ, ಅವರನ್ನ ಪಾಲಿಸುವುದರಿಂದ ಸರ್ವಪನೆಂದು ಹದಿನಾರನೆಯ ಹೆಸರು. ನೀಚರಾದ ಕಲಿ ಮೊದಲಾದವರಲ್ಲಿದ್ದು ಅವರ ವರ ಸಾಧನವಾಡಿಸುವುದರಿಂದ ಹದಿನೇಳನೆಯ ಹೆಸರು ಖರ್ಪಯೆಂದು. ಹದಿನೆಂಟನೆಯ ಹೆಸರು ಶ್ರದ್ಧ

**ಪಾಹಿ ಸಂಧ್ಯಾನ ವಿಜ್ಞಾನನೆ**
**ಪಾಹಿ ಮಹಸುಜ್ಞಾನ ಕೀರ್ತನ**
**ಪಾಹಿ ಸಂಕೀರ್ಣಾಖ್ಯ ತತ್ಥನ ಪಾಹಿ ಬುದ್ಧಿಜಯ ॥**
**ಪಾಹಿ ಮಹತ್ತರ ಸುವೀರ್ಯನೆ**
**ಪಾಹಿಮಾಂ ಮೇಧಾವಿ ಜಯಜಯ**
**ಪಾಹಿಮಾಂ ರಂತಿವ್ಮ್ನಮನು ಮಾಂಪಾಹಿಮಾಂಪಾಹಿ ॥೨೪॥**

ಪದ್ಯಾರ್ಥ.—ಎಲೈ ಸಂಧ್ಯಾನ! ಪಾಹಿ; ವಿಜ್ಞಾನನೆ! ಪಾಹಿ; ಮಹಾ ಸುಜ್ಞಾನ, ಎಲೈ ಕೀರ್ತನ! ಪಾಹಿ ಸಂಕೀರ್ಣಾಖ್ಯ! ಶತ್ಥನ! ಎಲೈ ಬುದ್ಧಿಜಯ! ಪಾಹಿ; ಎಲೈ ಮಹತ್ತರ! ಸುವೀರ್ಯನೆ! ಎಲೈ ಮೇಧಾವಿಯೆ! ಮಾಂಪಾಹಿ=ನನ್ನನ್ನು ರಕ್ಷಿಸು; ಎಲೈ ವಿಜಯನಾಮಕನೆ! ಎಲೈ ಜಯ! ಎಲೈ ರಂತಿವ್ಮ್ನ! ಪಾಹಿ; ಎಲೈ ಮನುವೆ! ಪಾಹಿ, ಮಾಂ ಪಾಹಿ.

ತಾತ್ಪರ್ಯ.—ಸದಾ ಧ್ಯಾನರತರಾದುದರಿಂದ ಸಧ್ಯಾತ ಅಥವಾ ಸಂಧ್ಯಾನನೆಂದು ೧೯ನೆಯ ಹೆಸರು. ವಿಶೇಷ ಜ್ಞಾನವುಳ್ಳವರಾದುದರಿಂದ ವಿಜ್ಞಾನನೆಂದು ೨೦ನೆಯ ಹೆಸರು. ಮಹಾಜ್ಞಾನ ೨೧ನೆಯ ಹೆಸರು. ಸದಾ ಭಗವಂತನ ಗುಣ ಕೀರ್ತನ ಮಾಡುವುದರಿಂದ ಕೀರ್ತನನೆಂದು ೨೨ ನೆಯ ಹೆಸರು. ಮಧ್ಯಮ ಜೀವರಿಗೆ ಮಿಶ್ರಬುದ್ಧಿಯನ್ನು ಹುಟ್ಟಿಸುವುದರಿಂದ ಸಂಕೀರ್ಣನೆಂದು ೨೩ನೆಯ ಹೆಸರು. ವೇದಶಾಸ್ತ್ರಗಳನ್ನು ಸಿದ್ಧಾಂತ ಮಾಡಿ ವಾದಿಗಳನ್ನು ಗೆದ್ದಿರುವುದರಿಂದ ಕತ್ಥನಯೆಂದು ೨೪ನೆಯ ಹೆಸರು ಬುದ್ಧಿ ಜಯ ೨೫ನೆಯ ಹೆಸರು. ಮಹತ್ತರ ೨೬ನೆಯ ಹೆಸರು. ಸುವೀರ್ಯ ೨೭ನೆಯ ಹೆಸರು. ಮಹಾಜ್ಞಾನಿಯಾದುದರಿಂದ ಮೇಧಾವಿ ಎಂದು ೨೮ನೆಯ ಹೆಸರು. ವಿಜಯ ೨೯ನೆಯ ಹೆಸರು. ಜಯ ೩೦ ರಂ ಅಂದರೆ ಅಗ್ನಿ ಬೀಜಾಕ್ಷರವು. ಅದು ಪರಮಾತ್ಮನಲ್ಲಿರುವುದರಿಂದ ರಂತಿಯೆಂಬ ಸಂಕರ್ಷಣಮೂರ್ತಿಯಾದ ಶ್ರೀಹರಿಗೆ ಹೆಸರು. ಅಂತಹಾ ಹರಿಯನ್ನು ಸರ್ವದಾ ಮನಸ್ಸಿನಲ್ಲಿ ಧರಿಸಿರುವದರಿಂದ ರಂತಿಮನೆಂದು ೩೧ನೆಯ ಹೆಸರು. ಮಂತ್ರಪ್ರತಿಪಾದ್ಯನಾದುದರಿಂದ ಮನು ಎಂದು ೩೨ನೆಯ ಹೆಸರು.

ಪಾಹಿಮೋದ ಪ್ರಮೋದ ಸಂತನೆ
ಪಾಹಿ ಆನಂದ ಸಂತುಷ್ಟನೆ
ಪಾಹಿಮಾಂ ಚಾರ್ವಾಂಗ ಚಾರು ಸುಭಾಹು ಚಾರುಪದ ||
ಪಾಹಿ ಪಾಹಿ ಸುಲೋಚನನೆ ಮಾಂ
ಪಾಹಿ ಸಾರಸ್ವತ ಸುವೀರನೆ
ಪಾಹಿಪ್ರಾಜ್ಞನೆ ಕಪಿಯಲಂಪಟ ಪಾಹಿ ಸರ್ವಜ್ಞ ||೨೫||

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನು ವಿಶದಮಾಡುವುದರಿಂದ ಪದ್ಯಾರ್ಥವನ್ನು ಬೇರೆ ಕೊಡಲಿಲ್ಲ.

ತಾತ್ಪರ್ಯ.—ಯಾವಾಗಲೂ ಆನಂದಪಡುತ್ತಿರುವುದರಿಂದ ಮೋದನನೆಂದು ಹೆಸರು. ಪ್ರಮೋದ ೩೪ನೆಯ ಹೆಸರು. ಸತ್ವಗುಣ ಪ್ರಧಾನರಾದುದರಿಂದ ಸಂತನೆಂದು ೩೫ನೆಯ ಹೆಸರು. ಆನಂದನೆಂದು ೩೬ನೆಯ ಹೆಸರು. ಸಂತುಷ್ಟ ೩೭ನೆಯ ಹೆಸರು. ಮನೋಹರವಾದ ಅಂಗವುಳ್ಳ

ವರಾದುದರಿಂದ ಚಾರ್ವಾಂಗನೆಂದು ೩೮ನೆಯ ಹೆಸರು. ಮನೋಹರ ವಾದ ಬಾಹುಳ್ಳವರಾದುದರಿಂದ ಚಾರುಬಾಹು ೩೯ನೆಯ ಹೆಸರು. ಚಾರು ಪದ ೪೦ನೆಯ ಹೆಸರು. ದಿವ್ಯಜ್ಞಾನ ದೃಷ್ಟಿಯುಳ್ಳವರಾದುದರಿಂದ ಸುಲೋಚನ ೪೧ನೆಯ ಹೆಸರು. ಶಾಂಶ್ವತನೆಂದರೆ ಸಕಲ ಶೃತಿಗಳಲ್ಲಿ ಯಥಾರ್ಥ ಜ್ಞಾನ ಉಳ್ಳವರೆಂದರ್ಥ. ೪೨ನೆಯ ಹೆಸರು ಸುವೀರ, ೪೩ನೆಯ ಹೆಸರು ಪ್ರಾಜ್ಞ. ೪೪ನೆಯ ಹೆಸರು ಸುಖವನ್ನೇ ಅನುಭವಿಸುವದರಿಂದ ಕಪಿ ಕಂ ಅಂದರೆ ಸುಖ. ಅದನ್ನು ಪಾನಮಾಡುವುದೆಂದರೆ ಅನುಭವಿಸುವುದೆಂದರ್ಥ. ಆದ್ದರಿಂದ ಕಪಿಯೆಂದು ೪೫ನೆಯ ಹೆಸರು. ವಿಷಯಾಸಕ್ತಿಯನ್ನು ಬಿಟ್ಟವರಾದುದರಿಂದ ಅಲಂಪಟ ೪೬ನೆಯ ಹೆಸರು. ಸರ್ವಜ್ಞ ೪೭ನೇದು.

ಪಾಹಿಮಾಂ ಸರ್ವಜಿನ್ಮಿತ್ರನೆ
ಪಾಹಿ ಪಾಪವಿನಾಶಕನೆ ಮಾಂ
ಪಾಹಿ ಧರ್ಮವಿನೀತಶಾರದ ಓಜ ಸುತಪಸ್ವಿ ||
ಪಾಹಿಮಾಂ ತೇಜಸ್ವಿ ನಮೋಮಾಂ
ಪಾಹಿ ದಾನ ಸುಶೀಲ ನಮೋಮಾಂ
ಪಾಹಿಯಜ್ಞ ಸುಕರ್ತ ಯಜ್ವಿಯಾಗವರ್ತಕನೆ ||೨೬||

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನು ವಿಶದಮಾಡುವುದರಿಂದ ಪದ್ಯಾರ್ಥವನ್ನು ಬೇರೆ ಕೊಡಲಿಲ್ಲ.

ತಾತ್ಪರ್ಯ.— ಸರ್ವಜಿತ್=ಜಗತ್ತನ್ನು ಜಯಿಸುವರೆಂದರ್ಥ. ೪೮ನೆಯ ಹೆಸರು. ಜಗನ್ಮಿತ್ರನಾದುದರಿಂದ ಮಿತ್ರ ೪೯ನೆಯ ಹೆಸರು. ಪಾಪವಿನಾಶಕ ೫೦ನೆಯ ಹೆಸರು. ಸದಾ ಧರ್ಮರತರಾದುದರಿಂದ ಧರ್ಮ ೫೧. ವಿನೀತ ೫೨. ಶತೃಗಳಿಗೆ ಹಿಂಸೆಯನ್ನು ಕೊಡುವದರಿಂದ ಶಾರದ ೫೩. ಓಜಸ್ವಿ ೫೪. ತಪಸ್ವಿ ೫೫ನೆಯ ಹೆಸರು. ತೇಜಸ್ವಿ ೫೬. ದಾನ ಶೀಲನಾದುದರಿಂದ ದಾನ ೫೭ನೆಯ ಹೆಸರು. ಸುಶೀಲ ೫೮. ಯಜ್ಞ ೫೯. ಕರ್ತ ೬೦ನೆಯ ಹೆಸರು. ಯಜ್ವೀ ೬೧ನೆಯ ಹೆಸರು. ಯಾಗವರ್ತಕ ೬೨ನೆಯ ಹೆಸರು.

ಪಾಹಿ ಪ್ರಾಣತ್ರಾಣ ಅಮುಋುಷಿ
ಪಾಹಿಮಾಂ ಉಪದೇಷ್ಟತಾರಕ
ಪಾಹಿ ಕಾಲಕ್ರೀಡನ ಸುಕರ್ತಾಸುಕಾಲಜ್ಞ ।
ಪಾಹಿ ಕಾಲಸುಸೂಚಕನೆ ಮಾಂ
ಪಾಹಿ ಕಲಿಸಂಹರ್ತ ಕಲಿ ಮಾಂ
ಪಾಹಿ ಕಾಲಸ್ವಾ (ಶ್ಯಾ) ಮಗೇತ ಸದಾರತಸುಬಲನೆ ॥೨೭॥

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನು ವಿಶದಮಾಡುವುದರಿಂದ ಪದ್ಯಾರ್ಥವನ್ನು ಬೇರೆ ಕೊಡಲಿಲ್ಲ.

ತಾತ್ಪರ್ಯ.—ಪ್ರಾಣ ೬೩ನೆಯ ಹೆಸರು. ಮಹಾಶಕ್ತಿಯುಳ್ಳವರಾದುದರಿಂದ ೬೪ನೆಯ ಹೆಸರು. ಶತ್ರುಗಳಲ್ಲಿ ಕೋಪವುಳ್ಳವರಾದುದರಿಂದ ಅಮರ್ಷಿ ಎಂದು ೬೫ನೆಯ ಹೆಸರು. ಉಪದೇಷ್ಟಾ=ಲೋಕಗುರು ೬೬ನೆಯ ಹೆಸರು. ತಾರಕ=ಉದ್ಧಾರಕನು ೬೭ನೆಯ ಹೆಸರು; ಕಾಲಕ್ರೀಡನ=ಕಾಲಾನುಸಾರವಾಗಿ ಕ್ರೀಡಿಸುವವನು ೬೮ನೆಯ ಹೆಸರು; ಸುಕರ್ತಾ=ಸತ್ಕಾರ್ಯ ಮಾಡಿಸುವವನು ೬೯ನೆಯ ಹೆಸರು. ಸುಕಾಲಜ್ಞ=ಲಕ್ಷಣವನ್ನು ಚನ್ನಾಗಿ ತಿಳಿದವನು ೭೦ನೆಯ ಹೆಸರು. ಕಾಲಸೂಚಕ=ಕಾಲನಾಮಕ ಪರಮಾತ್ಮನನ್ನು ಜನರಿಗೆ ತಿಳಿಸುವವನು ೭೧ನೆಯ ಹೆಸರು. ಕಲಿಸಂಹರ್ತ ೭೨ನೆಯ ಹೆಸರು. ಕಲೀ=ಕಾಲಜ್ಞಾನ ಉಳ್ಳವನು, “ಕಲಾಅಸ್ಮಿನ್ನಸ್ತೀತಿಕಲೀ” ೭೩ನೆಯ ಹೆಸರು. ಕಾಲ ೭೪ನೆಯ ಹೆಸರು. ಶ್ಯಾಮಗೇತ ೭೫ನೆಯ ಹೆಸರು. ಸದಾರ=ಸದಾ ಸುಖಮಯನು ೭೬ನೆಯ ಹೆಸರು. ಸುಬಲ ೭೭ನೆಯ ಹೆಸರು, ಪಾಹಿ.

ಪಾಹಿಪಾಹಿ ಸಹೋಸದಾಕಪಿ
ಪಾಹಿ ಗಮ್ಯ ಜ್ಞಾನದಶಕಲ
ಪಾಹಿಮಾಂ ಶ್ರೋತವ್ಯನನೋ ಸಂಕೀರ್ತವ್ಯನನೋ ।
ಪಾಹಿಮಾಂ ಮಂತವ್ಯ ಕವ್ಯನೆ
ಪಾಹಿ ದ್ರಷ್ಟವ್ಯನೆ ಸುಸಖ್ಯನೆ
ಪಾಹಿಮಾಂ ಗಂತವ್ಯ ಕ್ರವ್ಯನೆ ಪಾಹಿಸ್ಮರ್ತವ್ಯ ॥೨೮॥

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನು ವಿಶದಮಾಡುವುದರಿಂದ ಪದ್ಯಾರ್ಥವನ್ನು ಬೇರೆ ಕೊಡಲಿಲ್ಲ

ತಾತ್ಪರ್ಯ.— ಸಹ=ಸಹನ ಶಕ್ತಿಯುಳ್ಳವನು ೭೮ನೆಯ ಹೆಸರು. ಸದಾಕಪಿ=ಸರ್ವಕಾಲದಲ್ಲೂ "ಆಕಪೇ:ದುಃಖಪೇಷಣತ್ವಾತ್" ದುಃಖನಾಶಕನು ೭೯ನೆಯ ಹೆಸರು. ಗಮ್ಯಜ್ಞಾನ=ಹೊಂದಲು ಯೋಗ್ಯವಾದ ಜ್ಞಾನವುಳ್ಳವನು ೮೦ನೆಯ ಹೆಸರು. ದಶಕುಲ=ದಶ=ಅನಂತವಾದ (ಪೂರ್ಣವಾದ) ಕಲ=ಜ್ಞಾನವುಳ್ಳವನು ೮೧ನೆಯ ಹೆಸರು, ಶ್ರೋತವ್ಯ-ಶ್ರವಣಕ್ಕೆ ಅರ್ಹವಾದ ಮಹಿಮೆಯುಳ್ಳವನು ೮೨ನೆಯ ಹೆಸರು. ಸಂಕೀರ್ತಿತವ್ಯ=೮೩ನೆಯ ಹೆಸರು; ಮಂತವ್ಯ=ಮನನ ಯೋಗ್ಯನು ೮೪ನೆಯ ಹೆಸರು, ಕಪಿಗಳಿಂದ (ಜ್ಞಾನಿಗಳಿಂದ) ವರ್ಣಿಸಲು ಯೋಗ್ಯನಾದುದರಿಂದ ಕವ್ಯ ೮೫ನೆಯ ಹೆಸರು. ದ್ರಷ್ಟವ್ಯ – ನೋಡಲು ಯೋಗ್ಯನು ೮೬ನೆಯ ಹೆಸರು. ಸಖ್ಯ=ಸಖ್ಯಕ್ಕೆ ಯೋಗ್ಯನು ೮೭ನೆಯ ಹೆಸರು, ಗಂತವ್ಯ = ಹೊಂದಲು ಯೋಗ್ಯನು ೮೮ನೆಯ ಹೆಸರು, ಕೃಷ್ಯ=ಸೇವೆ ಮಾಡಿಸಿಕೊಳ್ಳಲು ಯೋಗ್ಯನು "ಕೃಕರಣೆ ೮೯ನೆಯ ಹೆಸರು. ಸ್ಮರ್ತವ್ಯ=ಸ್ಮರಣೆ ಮಾಡಲು ಯೋಗ್ಯನು ೯೦ನೆಯ ಹೆಸರು.

ಪಾಹಿ ಸೇವ್ಯಸುಭವ್ಯ ನಮೋ ಮಾಂ
ಪಾಹಿ ಸ್ವರ್ಗವ್ಯ ನಮೋ ಭಾವ್ಯನೆ
ಪಾಹಿಮಾಂ ಜ್ಞಾತವ್ಯ ನಮೋವಕ್ತವ್ಯಗವ್ಯ ನಮೋ ||
ಪಾಹಿಮಾಂ ಲಾತವ್ಯ ವಾಯುವೆ
ಪಾಹಿ ಬ್ರಹ್ಮ ಬ್ರಾಹ್ಮಣಪ್ರಿಯ
ಪಾಹಿ ಪಾಹಿ ಸರಸ್ವತೀಪತೆ ಜಗದ್ಗುರುವರ್ಯ ||೨೯||

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನು ವಿಶದಮಾಡುವುದರಿಂದ ಪದ್ಯಾರ್ಥವನ್ನು ಬೇರೆ ಕೊಡಲಿಲ್ಲ.

ತಾತ್ಪರ್ಯ.— ಸೇವ್ಯ ೯೧ನೆಯ ಹೆಸರು; ಸುಭವ್ಯ=ಪರಮ ಚತುರನು, ಕಾರ್ಯಕುಶಲನು ೯೨ನೆಯ ಹೆಸರು, ಸ್ವರ್ಗವ್ಯ=ಸ್ವನಾಮಕ ಪರಮಾತ್ಮನನ್ನು ಸೇರಿಸುವ ಯೋಗ್ಯತೆಯುಳ್ಳವನು, ಸ್ವತಂತ್ರತ್ವಾತಃ=ಸ್ವತಂತ್ರನಾದುದರಿಂದ ಸ್ವಪರಮಾತ್ಮನು, ಅವನು ವಾಸಮಾಡುವದರಿಂದ ಸ್ವರ್ಗವೆಂದರೆ ವೈಕುಂಠವು ಭಜಕರಿಗೆ ವೈಕುಂಠವನ್ನು ಕೊಡಿಸುವ ಯೋಗ್ಯತೆಯುಳ್ಳವರಾದುದರಿಂದ ಸ್ವರ್ಗವೆಂದು ೯೩ನೆಯ ಹೆಸರು, ಭಾವಿಸಲು ಯೋಗ್ಯನಾದುದರಿಂದ ಭಾವ್ಯ ೯೪ನೆಯ ಹೆಸರು. ಜ್ಞಾತವ್ಯ-ತಿಳಿದುಕೊಳ್ಳಲು ಯೋ

ಗ್ಯನು ೯೫ನೆಯ ಹೆಸರು, ವ್ಯಕ್ತವ್ಯ=ಹೇಳಿಸಿಕೊಳ್ಳಲು ಸ್ತೋತ್ರಾದಿಗಳಿಂದ ಹೊಗಳಿಸಿಕೊಳ್ಳಲು ಯೋಗ್ಯನು ೯೬ನೆಯ ಹೆಸರು. ಗಮ್ಯ=ವೇದಗೋಚರನು ೯೭ನೆಯ ಹೆಸರು, ಲಾತವ್ಯ = ವಾಯುಪದವಿಗೆ ಹಿಂದಿನ ಪದವಿಯು ೯೮ನೆಯ ಹೆಸರು, ವಾಯು ೯೯ನೆಯ ಹೆಸರು, ಬ್ರಹ್ಮ ೧೦೦ನೆಯ ಹೆಸರು ಹೀಗೆ ೧೦೦ ಕಲ್ಪಗಳಲ್ಲಿ ನೂರು ನಾಮಗಳಿಂದ ಪ್ರಸಿದ್ಧನಾಗಿರುವ ಬ್ರಾಹ್ಮಣಪ್ರಿಯನಾದ ಎಲೈ ಸರಸ್ವತೀ ಪತೇ ! ಜಗದ್ಗುರುವರ್ಯ ! ನಿನಗೆ ನಮಸ್ಕಾರ, ನಮ್ಮನ್ನು ರಕ್ಷಿಸು.

ಅವತಾರಿಕೆ—ಮೇಲೆ ಹೇಳಿದ ನೂರು ನಾಮಗಳು ವಾಯುದೇವರಿಗೆ ಪೂರ್ವ ಕಲ್ಪಗಳಲ್ಲಿದ್ದವೆಂಬುದಕ್ಕೆ ಆಧಾರವೇನು ? ಇದರ ಶ್ರವಣಾದಿಗಳಿಂದ ಫಲವೇನೆಂಬುದನ್ನು ಈ ಪದ್ಯದಿಂದ ಹೇಳುತ್ತಾರೆ.—

ವಾಮನ ಪುರಾಣದಲಿ ಪೇಳಿದ
ಈ ಮಹಾತ್ಮರ ಪರಮಮಂಗಳ
ನಾಮಗಳ ಸಂಪ್ರೀತಿಪೂರ್ವಕ ನಿತ್ಯ ಸ್ಮರಿಸುವವರ ||
ಶ್ರೀಮನೋರಮನವರು ಬೇಡಿದ
ಕಾಮಿತಾರ್ಥಗಳಿತ್ತು ತನ್ನ ತ್ರಿ
ಧಾಮದೊಳಗನುದಿನದಲಿಟ್ಟಾನಂದ ಪಡಿಸುವನು ||೩೦||

ತಾತ್ಪರ್ಯಾರ್ಥವೇ ಪದ್ಯಾರ್ಥವನ್ನುವಿಶದಮಾಡುವುದರಿಂದ ಪದ್ಯಾರ್ಥವನ್ನುಬೇರೆ ಕೊಡಲಿಲ್ಲ.

ತಾತ್ಪರ್ಯ.—ವಾಮನಪುರಾಣದಲ್ಲಿ ಹೇಳಿದ, ಈ ಮಹಾತ್ಮರ ಪರಮಮಂಗಳಕರವಾದ ಮೇಲೆ ಹೇಳಿದ ನೂರು ನಾಮಗಳನ್ನು ಪ್ರೀತಿಪೂರ್ವಕವಾಗಿ ನಿತ್ಯದಲ್ಲೂ ಸ್ಮರಿಸುವವರನ್ನು, ಲಕ್ಷ್ಮೀಮನೋಹರನಾದ ಶ್ರೀಹರಿಯು, ಅವರು ಬೇಡಿದ ಇಷ್ಟಾರ್ಥವನ್ನು ಪೂರೈಸಿ ತನ್ನ ಶ್ವೇತದ್ವೀಪ, ಅನಂತಾಸನ ವೈಕುಂಠವೆಂಬ ಲೋಕಗಳಲ್ಲಿಟ್ಟು ಆನಂದಪಡಿಸುವನು.

ಅವತಾರಿಕೆ.—ವಾಯುದೇವರು ಸಾಧನದಿಂದ ಬ್ರಹ್ಮದೇವರಾಗುವ ಆಶ್ಚರ್ಯವಲ್ಲವೆಂದು ಸದೃಷ್ಟಾಂತವಾಗಿ ತೋರಿಸುತ್ತಾರೆ.—

**ಈ ಸಮೀರಗೆ ನೂರು ಜನ್ಮ ಮ-**
**ಹಾಸುಖ ಪ್ರಾರಬ್ಧ ಭೋಗ ಪ್ರ-**
**ಯಾಸವಿಲ್ಲದಲೈದಿದನು ಲೋಕಾಧಿಪತ್ಯವನು ।**
**ಭೂಸುರನ ಒಪ್ಪಿಡಿಯವಲಿಗೆ ವಿ-**
**ಶೇಷ ಸೌಖ್ಯವನಿತ್ತ ದಾತನ**
**ದಾಸವರ್ಯನು ಲೋಕಪತಿಯೆನಿಸುವುದು ಅಚ್ಚರವೆ ॥೩೧॥**

ಪದ್ಯಾರ್ಥ—ಈ ಸಮೀರಗೆ=ಈ ವಾಯುದೇವರಿಗೆ, ನೂರುಜನ್ಮ ಮಹಾ ಸುಖ ಪ್ರಾರಬ್ಧಭೋಗ=ಮಹಾ ಸುಖಮಯವಾದ ಪ್ರಾರಬ್ಧಭೋಗವಿರುವುದು, ಇವರು ಪ್ರಯಾಸವಿಲ್ಲದೆ, ಲೋಕಾಧಿಪತ್ಯವನು=ಸತ್ಯಲೋಕಾಧಿಪತ್ಯವನ್ನು ಅಥವಾ ಸರ್ವಲೋಕಾಧಿಪತ್ಯವನ್ನು, ಯ್ಯೆದಿದನು= ಹೊಂದಿದರು. ಭೂಸುರನ=ಕುಚೇಲನೆಂಬ ಬ್ರಾಹ್ಮಣನ, ಒಪ್ಪಿಡಿಯವಲಿಗೆ=೧ಹಿಡಿ ಅವಲಕ್ಕಿಗೆ, ವಿಶೇಷ ಸೌಖ್ಯವನಿತ್ತ, ದಾತನ=ಕೊಡುವವರಲ್ಲಿ ಅಗ್ರಗಣ್ಯನಾದ ಶ್ರೀಹರಿಯ, ದಾಸವರ್ಯನು= ದಾಸಶ್ರೇಷ್ಠರೆನಿಸುವ ವಾಯುದೇವರು ಲೋಕಾಧಿಪತಿ ಎನಿಸುವುದು, ಅಚ್ಚರವೆ=ಆಶ್ಚರ್ಯವೆ? ಎಂದಿಗೂ ಆಶ್ಚರ್ಯವಲ್ಲವೆಂದರ್ಥ.

ತಾತ್ಪರ್ಯ—ಈ ವಾಯುದೇವರು ಒಟ್ಟು ೧೦೦ ಕಲ್ಪ ಸುಖಪ್ರಾರಬ್ಧವನ್ನನುಭವಿಸಿ ಬ್ರಹ್ಮಪದವಿಯನ್ನು ಹೊಂದಿದರು. ಶ್ರೀಕೃಷ್ಣರೂಪಿಯಾದ ಪರಮಾತ್ಮನು ಕುಚೇಲನ ಒಂದುಹಿಡಿ ಅವಲಕ್ಕಿಗೆ ಮೆಚ್ಚಿ ಅವನಿಗೆ ಇಹದಲ್ಲಿ ಮಹದೈಶ್ವರ್ಯವನ್ನು ಕೊಟ್ಟು ಪರಲೋಕದಲ್ಲಿ ಮುಕ್ತಿಯನ್ನು ಕೊಟ್ಟನು. ಇಂತಹ ದಾತನ ದಾಸವರ್ಯರಾದ ವಾಯುದೇವರಿಗೆ ಲೋಕಾಧಿಪತ್ಯವು ಬರುವುದು ಆಶ್ಚರ್ಯವೇನು? ॥ ೩೧ ॥

**ದ್ವಿಶತ ಕಲ್ಪಗಳಲ್ಲಿ ಬಿಡದೀ**
**ಪೆಸರಿನಿಂದಲಿ ಕರೆಸಿದನು ತ-**
**ನ್ನೊಶಗರಮರರೊಳಿಟ್ಟು ಮಾಡುವನವರ ಸಾಧನವ ।**
**ಅಸದುಪಾಸನೆ ಗೈವ ಕಲ್ಯಾ-**
**ದ್ಯಸುರಪರ ಸಂಹರಿಸಿ ತಾ ಪೊಂ-**
**ಬಸುರಪದವೈದಿದನು ಗುರುಪವಮಾನ ಸತಿಯೊಡನೆ ॥ ೩೨ ॥**

ಪದ್ಯಾರ್ಥ—ದ್ವಿಶತಕಲ್ಪಗಳಲ್ಲಿ=೨೦೦ ಕಲ್ಪಗಳಲ್ಲಿ, ಬಿಡದೆ, ಈ ಪೆಸರಿನಿಂದಲಿ=ಮೇಲೆ ಹೇಳಿದಂತೆ ೧೦೦ ಜನ್ಮಗಳಲ್ಲಿ ಋಜುವೆಂತಲೂ, ೧೦೧ನೆಯ ಕಲ್ಪ ಮೊದಲು ಕಲ್ಕಿ ಮೊದಲು ಮಾದಿ ಬ್ರಹ್ಮ ಎಂಬ ಹೆಸರಿನವರಿವಿಗೂ ೧೦೦ ಹೆಸರುಗಳಿಂದ ಕರೆಸಿದವನು. ಅಮರರ=ದೇವತೆಗಳನ್ನು, ತನ್ನೊಳಗ=ತನ್ನ ಸ್ವಾಧೀನವಲ್ಲಿರುವಂತೆ, ಒಳಗಿಟ್ಟು=ಇಟ್ಟುಕೊಂಡು, ಅವರ ಸಾಧನವ=ದೇವತೆಗಳು ಮೊದಲಾದವರು ಮಾಡಬೇಕಾದ ಸಾಧನವನ್ನು ಮಾಡಿಸುವರು. ಅಸದುಪಾಸನೆ ಗೈವ=ಸೋಽಹಂ ಇತ್ಯಾದಿ ಉಪಾಸಕರಾದ, ಕಲ್ಯಾದ್ಯಸುರಪರ=ಕಲಿ ಮೊದಲಾದ ದೈತ್ಯಾಧಿಪತಿಗಳನ್ನು ಸಂಹರಿಸಿ, ಗುರುಪವಮಾನ=ಜಗದ್ಗುರುವೆನಿಸುವ ವಾಯುದೇವರು, ಸತಿಯೊಡನೆ=ತಮ್ಮ ಸತಿಯರಾದ ಭಾರತೀದೇವಿಯರೊಡನೆ, ತಾ=ತಾವು, ವೊಂಬಸುರಪದವ=ಬ್ರಹ್ಮಪದವಿಯನ್ನು, ಐದಿದನು=ಹೊಂದಿದರು.

ತಾತ್ಪರ್ಯ— ಋಜುಗಣದವರಿಗೆ ಒಟ್ಟು ೨೦೦ ಕಲ್ಪಸಾಧನವೆಂದು ಮೇಲೆ ಹೇಳಲ್ಪಟ್ಟಿದೆ. ಮೊದಲು ೧೦೦ ಕಲ್ಪಗಳ ವರೆಗೂ ಋಜುವೆಂತಲೂ, ೧೦೦ ಮೊದಲು ಕಲ್ಕಿ ಮೊದಲಾದ ೯೭ನೆಯ ಹೆಸರಿನ ವರೆಗೂ ಹೇಳಿದ ಹೆಸರುಗಳಿಂದ ೯೭ ಕಲ್ಪಗಳನ್ನು ಕಳೆದು ೯೮ ಲಾತವ್ಯರೆಂಬ ಹೆಸರು ಪಡೆಯುವರು. ೯೯ನೆಯ ಕಲ್ಪದಲ್ಲಿ ವಾಯು ಪದವಿಗೆ ಬರುವರು. ೧೦೦ನೆಯ ಕಲ್ಪ ಬ್ರಹ್ಮದೇವರು, ಅಲ್ಲಿಯವರೆಗೆ ೨೦೦ ಕಲ್ಪಸಾಧನವಾಗಬೇಕು. ವಾಯು ಪದವಿಯಲ್ಲಿರುವಾಗ ತತ್ತ್ವಾಭಿಮಾನಿ ದೇವತೆಗಳನ್ನು ತನ್ನೊಳಗಿಟ್ಟುಕೊಂಡು ತ್ರಿವಿಧಜೀವರು ಮಾಡಬೇಕಾದ ಸಾಧನಗಳನ್ನು ಅವರಿಂದ ಮಾಡಿಸಿ ಅವರವರ ಯೋಗ್ಯತಾನುಸಾರವಾದ ಗತಿಕೊಡಿಸುವನು. ಅನ್ಯಥಾ ಉಪಾಸನೆಮಾಡುತ್ತಿರುವ ಕಲಿ ಮೊದಲಾದ ದೈತ್ಯರನ್ನು ಸಂಹರಿಸಿ, ಭಾರತೀದೇವಿಯರಿಂದೊಡಗೂಡಿ ಬ್ರಹ್ಮಪದವಿಯನ್ನು ಹೊಂದುವರು. ॥ ೩೨ ॥

**ಅನಿಮಿಷರ ನಾಮದಲಿ ಕರೆಸುವ**
**ಅನಿಲದೇವನು ಒಂದು ಕಲ್ಪದಿ**
**ವನಜಸಂಭವನೆನಿಸಿ ಎಂಭತ್ತೇಳುವರೆ ವರುಷ ॥**
**ಗುಣತ್ರಯ ವಿವರ್ಜಿತನ ಮಂಗಳ**
**ಗುಣಕ್ರಿಯಗಳ ಸುರೂಪಗಳುಪಾ-**
**ಸನವು ಅವ್ಯಕ್ತಾದಿ ಪೃಥಿವ್ಯಂತರದಿ ಇರುತಿಹದು ॥ ೩೩ ॥**

ಪದ್ಯಾರ್ಥ—ಅನಿಲದೇವನು= ವಾಯುದೇವರು, ಒಂದು ಕಲ್ಪದಿ= ಎಸೆಯು ಕಲ್ಪವಲ್ಲಿ, ಅನಿಮಿಷರ ನಾಮದಲಿ-ದೇವತೆಗಳ ಮಧ್ಯವಲ್ಲಿ ಗಣನೆ ಮಾಡಿಸಿಕೊಂಡು ಜೀವೋತ್ತಮರೆಂದು ಕರೆಸುವರು. ವನಜಸಂಭವನೆನಿಸಿ= ಬ್ರಹ್ಮದೇವರೆಂದು ಹೆಸರುಬಂದಮೇಲೆ ೧೦೦ ಕಲ್ಪದ ೧೦೦ ವರ್ಷಗಳ ಮಧ್ಯ ದಲ್ಲಿ, ಎಂಭತ್ತೇಳುವರೆ ವರುಷ= ಪ್ರಳಯದ ಸಂಧಿಕಾಲವು ೧೨॥ ವರ್ಷ ಹೋಗುತ್ತಾ ಉಳಿದ ೮೭॥ ವರ್ಷಗಳು, ಅವ್ಯಕ್ತಾದಿ ಪೃಥಿವ್ಯಂತರದಿ=ಅವ್ಯಕ್ತ ತತ್ವ ಮೊದಲು ಪೃಥಿವೀ ತತ್ವದ ವರೆಗೂ ಇರುವ ತತ್ವಗಳಲ್ಲಿ ವ್ಯಾಪ್ತ ರಾಗಿದ್ದು, ಗುಣತ್ರಯವರ್ಜಿತನ= ಪ್ರಾಕೃತವಾದ ಸತ್ವಾದಿ ಗುಣಗಳಿಂದ ಬದ್ಧನಾಗದಿರುವ ಶ್ರೀಹರಿಯ. ಗುಣಕ್ರಿಯ ಸುರೂಪಗಳ=ಆನಂದಾದಿ ಗುಣ ಗಳು, ಸೃಷ್ಟ್ಯಾದಿ ಕರ್ಮಗಳು, ರಾಮಕೃಷ್ಣಾದಿ ಅನಂತಾನಂತ ರೂಪಗಳು ಇವುಗಳ ಉಪಾಸನವು ಇರುತಿಹುದು.

ತಾತ್ಪರ್ಯ—ವಾಯುದೇವರು ವಾಯುಪದವಿಯಲ್ಲಿ ಒಂದು ಕಲ್ಪದಲ್ಲಿ ಜೀವೋತ್ತಮರೆನಿಸಿ, ದೇವತೆಗಳೊಂದಿಗೆ ಗಣನೆಯಲ್ಲಿರುವರು. ಬ್ರಹ್ಮಪದವಿಗೆ ಬಂದನಂತರ ಬ್ರಹ್ಮಮಾನದಿಂದ ೧೦೦ ವರ್ಷದ ಕಲ್ಪದ ಮಧ್ಯದಲ್ಲಿ ೧೨॥ ವರ್ಷ ಸಂಧಿಕಾಲ ಹೋಗುವುದು. ಉಳಿದ ೮೭॥ ವರ್ಷಗಳು ಅವ್ಯಕ್ತ ತತ್ವದ ವರೆಗೂ ಇರುವ ತತ್ವಗಳಲ್ಲಿ ವ್ಯಾಪ್ತರಾಗಿದ್ದು ಪ್ರಾಕೃತ ಗುಣಗಳಿಂದ ಬದ್ಧನಲ್ಲದ ಶ್ರೀಪರಮಾತ್ಮನ ಮಂಗಳಕರವಾದ, ಆನಂದಾದಿ ಗುಣಗಳನ್ನು, ಸೃಷ್ಟ್ಯಾದಿ ಕ್ರಿಯೆಗಳನ್ನು, ರಾಮಕೃಷ್ಣಾದಿ ಅನಂತಾನಂತ ರೂಪಗಳನ್ನು ಉಪಾಸನೆಮಾಡುವರು. ॥ ೩೩ ॥

**ಮಹಿತ ಋಜುಗಣಕೊಂದೆ ಪರಮೋ-**
**ತ್ಸಾಹ ವರ್ಜಿತವೆಂಬ ದೋಷವು**
**ವಿಹಿತವೇ ಸರಿ ಇದನು ಪೇಳ್ದರೆ ಮುಕ್ತ ಬ್ರಹ್ಮರಿಗೆ ।**
**ಬಹುದು ಸಾಮ್ಯ ಜ್ಞಾನ ಭಕ್ತಿಯು**
**ದ್ರುಹಿಣಪದ ಪರ್ಯಂತ ವೃದ್ಧಿಯು**
**ಬಹಿರುಪಾಸನೆಯುಂಟನಂತರ ಬಿಂಬದರ್ಶನವು ॥ ೩೪ ॥**

ಪದ್ಯಾರ್ಥ—ಮಹಿತ= ಪೂಜ್ಯವಾದ ಋಜುಗಣಕ್ಕೆ ಪರಮೋತ್ಸಾಹ ವರ್ಜಿತವೆಂಭ= ಭಗವಂತನ ಉಪಾಸನೆಯಲ್ಲಿ ಅತ್ಯಂತವಾಗಿ ಉತ್ಸಾಹ

ಇರುವುದಿಲ್ಲವೆಂಬ ಒಂದೇ ದೋಷವು. ಆ ದೋಷವು ವಿಹಿತವೇ ಸರಿ. ಇದನು ಪೇಳ್ದಿರೆ= ಈ ದೋಷವನ್ನು ಹೇಳದಿದ್ದರೆ ಮುಕ್ತಬ್ರಹ್ಮರಿಗೆ, ಸಾಮ್ಯ ಬಹುದು= ಸಮರೆಂದಾಗುವುದು. ಜ್ಞಾನ, ಭಕ್ತಿಯು, ದ್ರುಹಿಣಪದ ಪರ್ಯಂತ=ಬ್ರಹ್ಮಪದವಿಯವರೆಗೂ, ವೃದ್ಧಿಯು=ಕಲ್ಪಕಲ್ಪಕ್ಕೆ ಸ್ವಲ್ಪವಾಗಿ ಹೆಚ್ಚುತ್ತಲೇ ಬರುವುದು. ಬಹಿರುಪಾಸನೆಯುಂಟು=ಹೊರಗೆ ವ್ಯಾಪ್ತವಾದ ಭಗವದ್ರೂಪಗಳ ಉಪಾಸನೆಯುಂಟು. ಅನಂತರದಲ್ಲಿ ಬಿಂಬದರ್ಶನವು.

ತಾತ್ಪರ್ಯ—ಪೂಜ್ಯರಾದ ಋಜುಗಣದವರಿಗೆ ಒಂದು ದೋಷ ಮಾತ್ರ ವಿರುವುದು. ಒಬ್ಬೊಬ್ಬರಿಗೂ ೨೦೦ ಕಲ್ಪ ಸಾಧನವಾಗಬೇಕಾದುದರಿಂದ ಈಗೆಲ್ಲಿ ನಾವು ಭಗವಂತನನ್ನು ನೋಡುವುದೆಂಬ ಕಾಲವಿಳಂಬದಿಂದ ಉಪಾಸನೆಯ ವಿಷಯದಲ್ಲಿ ಅತ್ಯಂತ ಉತ್ಸಾಹವಿರುವುದಿಲ್ಲ. ಲೋಕದಲ್ಲಿ ಯಾರಿಗಾದರೂ ನಾಳೆ ಬೆಳಗಾದರೆ ನನಗೆ ದೊಡ್ಡ ಪದವಿಯು ಬರುವುದೆಂದು ತಿಳಿದವನಿಗೆಷ್ಟು ಉತ್ಸಾಹವಿರುವುದೋ ೫೦-೬೦ ವರ್ಷಗಳ ಮೇಲೆ ದೊಡ್ಡ ಪದವಿ ಬರುತ್ತದೆಂದು ತಿಳಿದವನಿಗೆ ಆ ಉತ್ಸಾಹವು ಬರುವುದೇ? ಅದರಂತೆ ಋಜುಗಣದವರಿಗೂ ಆ ದೋಷ ಒಂದಿದ್ದೇ ಇರುವುದು. ಆದರೆ ಆ ದೋಷವು ಅವರಿಗಿದೆ ಎಂದು ಹೇಳುವುದು ಯುಕ್ತವೇ ಸರಿ! ಇಲ್ಲವಾದರೆ ಮುಕ್ತರಾದ ಬ್ರಹ್ಮದೇವರು ಋಜುಗಣದವರು, ಪದವಿಗೆ ಬಂದವರು, ಬಾರದವರು ಎಲ್ಲರೂ ಸಮರೆಂದು ಹೇಳಬೇಕಾಗುತ್ತದೆ. ಆದ್ದರಿಂದ ಆ ದೋಷವು ಯುಕ್ತವೇ ಸರಿ ಎಂದರು. ಕಲ್ಪಸಾಧನೆ ಹೆಚ್ಚಿದ ಹಾಗೆಲ್ಲಾ ಜ್ಞಾನಭಕ್ತಿಯು ಹೆಚ್ಚುತ್ತಲೇ ಇರುವುದು. ಇವರಿಗೆ ವ್ಯಾಪ್ತ್ಯೋಪಾಸನೆಯುಂಟು. ಬಿಂಬಾಪರೋಕ್ಷಸಾಧನಾನಂತರದಲ್ಲಿ ಆಗುವುದು. ಅದಕ್ಕೆ ಪೂರ್ವದಲ್ಲಿ ಸಾಮಾನ್ಯವಾಗಿ ಅಪರೋಕ್ಷವೂ ಸಾಧನಾನಂತರ ವಿಶೇಷಾಪರೋಕ್ಷವೂ ಉಂಟೆಂಬ ತಾತ್ಪರ್ಯ. ॥ ೩೪ ॥

ಅವತಾರಿಕೆ—ಬ್ರಹ್ಮವಾಯುಗಳಿಗೆ ಅಜ್ಞಾನವನ್ನೂ ಭಯವನ್ನೂ ಸೂಚಿಸುವ ಕೆಲವು ಪುರಾಣವಾಕ್ಯಗಳಿರುವುವು. ಅವುಗಳು ಮೋಹಕವೆಂದು ಹೇಳುತ್ತಾರೆ—

ಜ್ಞಾನರಹಿತ ಭಯತ್ವಪೇಳ್ವ ಪು
ರಾಣದೈತ್ಯರ ಮೋಹಕವು ಚತು
ರಾನನಗೆ ಕೂಡುವದೆ ಮೋಹಾಜ್ಞಾನಭಯಶೋಕ ||
ಭಾನುಮಂಡಲ ಚಲಿಸಿದಂದದಿ
ಕಾಣುವದು ದೃಗೋಷದಿಂದಲಿ
ಶ್ರೀನಿವಾಸನ ಪ್ರೀತಿಗೋಸುಗತೋರ್ದನಲ್ಲದಲೆ ||೩೫||

ಪದ್ಯಾರ್ಥ.—ಬ್ರಹ್ಮವಾಯುಗಳಿಗೆ, ಜ್ಞಾನರಹಿತ=ಜ್ಞಾನವಿಲ್ಲದಿರುವಿಕೆ ಅಂದರೆ ಅಜ್ಞಾನ ಉಂಟೆಂದರ್ಥ. ಭಯತ್ವ=ಭಯಪಡುವಿಕೆ ಇವುಗಳನ್ನು, ಪೇಳ್ವಪುರಾಣ=ಪುರಾಣವಚನವು, ದೈತ್ಯರಮೋಹಕವು-ದೈತ್ಯರನ್ನು ಮೋಹಿಸುವುದಕ್ಕಾಗಿ ಹೇಳಿದ ವಚನಗಳು, ಚತುರಾನನಗೆ = ಬ್ರಹ್ಮದೇವರಿಗೆ, ಮೋಹ, ಅಜ್ಞಾನ, ಭಯ, ಶೋಕ, ಇವುಗಳು, ಕೂಡುವುದೇ ಉಂಟೆಂದು ಹೇಳಲು ಸಾಧ್ಯವೆ? ಶ್ರೀನಿವಾಸನ ಪ್ರೀತಿಗೋಸುಗ, ತೋರ್ದನಲ್ಲದಲೆ=ಅಜ್ಞಾನ, ಭಯ ಮೊದಲಾದವು ಇದ್ದಂತೆ ತೋರಿಸಿದನಲ್ಲದೆ ನಿಜವಾಗಿ ಅಜ್ಞಾನಾದಿಗಳು ಎಂದಿಗೂ ಇಲ್ಲ. ದೃಗ್ದೋಷದಿಂದಲಿ =ಕಣ್ಣಿಗೆ ಕಾಚ ಕಾಮಲ ಮೊದಲಾದ ದೋಷದಿಂದಲೋ ಅಥವಾ ಪಿತ್ತದಿಂದ ಕಣ್ಣು ತಿರುಗುವಾಗಲೋ, ಭಾನುಮಂಡಲ ಚಲಿಸುವಂದದಿ=ಸೂರ್ಯಮಂಡಲವು ತಿರುಗಿದಂತೆ ತೋರುವಹಾಗೆ, ಕಾಣುವದು-ಜನರ ಅಜ್ಞಾನಾದಿಗಳು ಇದ್ದಂತೆ ಕಾಣುವುದು.

ತಾತ್ಪರ್ಯ.—ಪುರಾಣಗಳಲ್ಲಿ ಅಂದರೆ ರಾಮಾಯಣ ಸುಂದರಕಾಂಡದಲ್ಲಿ, ಹನುಮಂತದೇವರು ಸೀತೆಯನ್ನು ರಾವಣಾಂತಃಪುರವೆಲ್ಲಾ ಹುಡುಕಿ ಕಾಣದೇ ಬಹಳ ಶೋಕಪಟ್ಟು ಕಡೆಗೆ ಅಶೋಕವನದಲ್ಲಿ ಸೀತೆಯನ್ನು ಕಂಡರೆಂಬ ವಿಷಯದಲ್ಲಿ ಹನುಮಂತದೇವರಿಗೆ ಬಹಳ ಅಜ್ಞಾನವು ಕಂಡುಬರುವುದು. ಈ ವಿಷಯವಾದ ಸಂಶಯಪರಿಹಾರವು ಮಹಾಭಾರತ ತಾತ್ಪರ್ಯನಿರ್ಣಯ ೭ನೆಯ ಅಧ್ಯಾಯದಲ್ಲಿ " ಯದ್ಯಪ್ಯೇತೇ ನಪಶ್ಯಂತಿ ನಿಶಾಚರಗಣಾಸ್ತುಯೇ || ದ್ಯುಲೋಕಚಾರಿಣಃ ಸರ್ವೇ ಪಶ್ಯಂತ್ಯೃಷಯ ಏವಚ || ತೇಷಾಂ ವಿಡಂಬನಾಯೈವ ದೈತ್ಯಾನಾಂ ವಂಚನಾಯಚ || ಪಶ್ಯತಾಂ ಕಲಿಮುಖ್ಯಾನಾಂ ವಿಡಂಭೋಯಂ ಕೃತೋ ಭವೇತ್ || " ಹನುಮಂತದೇವರು

ಸೀತೆಯನ್ನು ಹುಡುಕಿದುದು ರಾತ್ರಿ ರಾಕ್ಷಸರೆಲ್ಲರೂ ಮಲಗಿರುವಾಗ, ಹೀಗಿರಲು ದೈತ್ಯರನ್ನು ವಂಚಿಸಲು ಎಂಬ ಸಮಾಧಾನವು ಹೇಗೆ ಕೂಡುವುದೆಂದರೆ ಯದ್ಯಪಿ ರಾವಣನ ಮನೆಯಲ್ಲಿರುವ ರಾಕ್ಷಸರು ಮಾತ್ರ ನೋಡಲಿಲ್ಲ ಆದರೂ ಅಂತರಿಕ್ಷವಾಸಿಗಳಾದ ಎಲ್ಲರೂ ನೋಡುತ್ತಿರುವರು. ಜ್ಞಾನಿಗಳಾದ ಋಷಿಗಳೂ ನೋಡುತ್ತಿರುವರು. ಆ ದೇವತೆಗಳೂ ಋಷಿಗಳು ಇವರುಗಳಲ್ಲಿ ತನ್ನ ವಿಡಂಬನನನ್ನು ಪ್ರದರ್ಶನಮಾಡುವುದಕ್ಕೂ ದೈತ್ಯರನ್ನು ವಂಚಿಸುವುದಕ್ಕೂ ನೋಡುತ್ತಿರುವ ಕಲಿ ಮೊದಲಾದವರನ್ನು ಮೋಹಪಡಿಸುವದಕ್ಕೂ ಈ ವಿಡಂಬನವನ್ನು ಹನುಮಂತದೇವರು ಮಾಡಿದರೆಂದು ಹೇಳಿರುವರು. ಇದರಂತೆ ಭೀಮಾವತಾರದಲ್ಲಿ ಕೆಲವು ಕಡೆಯಲ್ಲಿ ಕಂಡುಬರುವುದು. ಇವೆಲ್ಲವೂ ನಿಜವಾದುವಲ್ಲ, ಮೋಹಕ್ಕೆಂದು ತಾತ್ಪರ್ಯ; ಸರ್ವಜ್ಞರಾದ ಬ್ರಹ್ಮವಾಯುಗಳಿಗೆ ಅಜ್ಞಾನ ಭಯ ಶೋಕಾದಿಗಳು ಎಲ್ಲಿಯವು, ಭಗವದ್ವಿಷಯದಲ್ಲಿಮಾತ್ರ ಸ್ವಲ್ಪ ಅಜ್ಞಾನವು ಕಿಂಚಿದ್ಭಯವೂ ಬ್ರಹ್ಮದೇವರಿಗಿರುವುದು. ಮತ್ತು ಜಗದ್ವಿಷಯದಲ್ಲಿ ಇಲ್ಲವೆಂಬ ತಾತ್ಪರ್ಯ. ಭಗವದ್ವಿಷಯದ ಅಜ್ಞಾನವೂಕೂಡ ಭಗವತ್ಪ್ರೀತಿಗಾಗಿ ತೋರ್ಪಡಿಸುವರು ಕಣ್ಣಿನಲ್ಲಿರುವ ಕಾಚ ಕಾಮಲಾದಿ ದೋಷದಿಂದ ಸೂರ್ಯಮಂಡಲವು ಚಲಿಸುವಂತೆ ಕಾಣುವುದು ಹೇಗೋ ಹಾಗೆ ಅಜ್ಞಾನಿಗಳುಮಾತ್ರ ಬ್ರಹ್ಮವಾಯುಗಳು ಭಯಶೋಕಾದಿಗಳನ್ನು ಅನುಭವಿಸುವರೆಂದು ತಮ್ಮ ದೋಷದಿಂದ ತಿಳಿದುಕೊಳ್ವರೆಂಬ ತಾತ್ಪರ್ಯ.

ಕಮಲಸಂಭವ ಸರ್ವರೊಳಗು
ತ್ತಮನೆನಿಸುವನು ಎಲ್ಲಕಾಲದಿ
ವಿಮಲಭಕುತಿಜ್ಞಾನ ವೈರಾಜ್ಞಾದಿ ಗುಣದಿಂದ ||
ಸಮಭ್ಯಧಿಕ ವಿವರ್ಜಿತನ ಗುಣ
ರಮೆಯಮುಖದಿಂದರಿತು ನಿತ್ಯದಿ
ದ್ಯುಮಣಿ ಕೋಟಿಗಳಂತೆ ಕಾಂಬನು ಬಿಂಬರೂಪವನು

ಪದ್ಯಾರ್ಥ.— ಕಮಲಸಂಭವ-ಬ್ರಹ್ಮದೇವರು, ವಿಮಲಭಕ್ತಿಜ್ಞಾನ ವೈರಾಜ್ಞ್ಯಾದಿ ಗುಣಗಳಿಂದ, ಎಲ್ಲಕಾಲದಲಿ-ಅನಾದಿ ಕಾಲದಿಂದಲೂ, ಸರ್ವರೊಳಗೆ ಉತ್ತಮರೆನಿಸುವರು. ಸಮಭ್ಯಧಿಕವಿವರ್ಜಿತನ-ಸಮ ಮತ್ತು

ಉತ್ತಮರು ಇಲ್ಲದವನ, ಗುಣ=ಗುಣಗಳನ್ನು, ರಮೆಯ=ರಮಾದೇವಿಯರ ಮುಖದಿಂದ ಅರಿತು ನಿತ್ಯದಿ, ದ್ಯುಮಣಿಕೋಟಿಗಳಂತೆ=ಕೋಟಿ ಸೂರ್ಯ ನಂತೆ ಬಿಂಬರೂಪವನ್ನು, ಕಾಂಬನು=ಕಾಣುವರು.

ತಾತ್ಪರ್ಯ.—ಬ್ರಹ್ಮದೇವರು ಸರ್ವಕಾಲದಲ್ಲೂ ನಿರ್ಮಲವಾದ ಭಕ್ತಿ, ಜ್ಞಾನ, ವೈರಾಗ್ಯಾದಿ ಗುಣಗಳಲ್ಲಿ ವಿಶ್ವ ಗರುಡ, ಶೇಷ, ರು ದ್ರಾದಿ ಸಕಲ ದೇವತೆಗಳಿಗಿಂತಲೂ ಉತ್ತಮರೆನಿಸುವರು. ಸಮರು ಅಧಿ ಕರು ಇಲ್ಲದ ಶ್ರೀಹರಿಯ ಗುಣಾತಿಶಯಗಳನ್ನು ರಮಾದೇವಿಯರ ಮುಖ ದಿಂದ ಶ್ರವಣಮಾಡುತ್ತಾ ಬಿಂಬರೂಪಿಯಾದ ಶ್ರೀಪರಮಾತ್ಮನನ್ನು ಕೋಟಿ ಸೂರ್ಯಪ್ರಕಾಶ ಉಳ್ಳವನನ್ನಾಗಿ ಕಾಂಬುವರು.

**ಜ್ಞಾನಭಕ್ತ್ಯಾದ್ಯಖಿಳಗುಣ ಚತು**
**ರಾನನೊಳಗಿಪ್ಪಂತೆ ಮುಖ್ಯ**
**ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ ||**
**ನ್ಯೂನಋಜುಗಣ ಜೀವರಲಿ ಕ್ರ**
**ಮೇಣ ವೃದ್ಧಿ ಜ್ಞಾನ ಭಕುತಿ ಸ**
**ಮಾನ ಭಾರತಿವಾಣಿಗಳಲಿ ಪದಪ್ರಯುಕ್ತ್ಯಧಿಕ ||**

ಪದ್ಯಾರ್ಥ.—ಜ್ಞಾನಭಕ್ತ್ಯಾದ್ಯಖಿಳಗುಣ = ಜ್ಞಾನ, ಭಕ್ತಿ ಮೊದ ಲಾದ ಎಲ್ಲಾ ಗುಣಗಳು, ಚತುರಾನನೊಳಗಿಪ್ಪಂತೆ=ಬ್ರಹ್ಮದೇವರಲ್ಲಿರುವಂತೆ ಯತ್ಕಿಂಚಿತ್ಕೊರತೆಯಾಗಿ=ಪದಪ್ರಯುಕ್ತ ಯತ್ಕಿಂಚಿತ್ ಕಡ್ಮೆಯಾಗಿ, ಮುಖ್ಯಪ್ರಾಣನಲಿ=ವಾಯುದೇವರಲ್ಲಿ, ಚಿಂತಿಪುದು=ಚಿಂತನೆಮಾಡತಕ್ಕದ್ದು ಋಜುಗಣಜೀವರಲಿ, ನ್ಯೂನ=ಕಮ್ಮಿಯಾಗಿದ್ದು, ಕ್ರಮೇಣ ವೃದ್ಧಿ=ಕ್ರಮ ವಾಗಿ ಕಲ್ಪಸಾಧನವಾದ ಹಾಗೆಲ್ಲಾ ವೃದ್ಧಿ ಹೊಂದುವವು, ಭಾರತಿವಾಣಿಗ ಳಲ್ಲಿ=ಭಾರತಿ, ಸರಸ್ವತೀದೇವಿಯರಲ್ಲಿ, ಜ್ಞಾನಭಕ್ತಿಸಮಾನ-ಜ್ಞಾನ, ಭಕ್ತಿ ಸಮಾನ=ಜ್ಞಾನ, ಭಕ್ತಿ ಮೊದಲಾದವು ಸಮಾನವಾಗಿರುವವು. ಆದರೆ, ಪದಪ್ರಯುಕ್ತ್ಯಧಿಕ=ಸರಸ್ವತೀದೇವಿಯರಲ್ಲಿ ಪದವಿಪ್ರಯುಕ್ತವಾಗಿ ಸ್ವಲ್ಪ ಹೆಚ್ಚಿಗಿರುವುದೆಂದು ಚಿಂತಿಸಬೇಕು.

ತಾತ್ಪರ್ಯ.—ಬ್ರಹ್ಮದೇವರಲ್ಲಿ ಜ್ಞಾನ, ಭಕ್ತಿ, ಮೊದಲಾದವುಗ ಳು ಎಷ್ಟಿರುವವೋ ಅಷ್ಟು ವಾಯುದೇವರಲ್ಲೂ ಇರುವವು. ಆದರೆ ಬ್ರಹ್ಮ

ದೇವರಿಗೆ ವಾಯುದೇವರಿಗಿಂತಲೂ ಒಂದು ಕಲ್ಪಸಾಧನ ಹೆಚ್ಚಾಗಿರುವುದರಿಂದ ಪದವಿಪ್ರಯುಕ್ತವಾದ ಆಧಿಕ್ಯವು ಬ್ರಹ್ಮದೇವರಲ್ಲಿ ಕಿಂಚನ್ಮಾತ್ರ ಇರುವುದು. ಇವು ಋಜುಗಣದವರಲ್ಲಿ ಮೊದಲಿಗೆ ಕಮ್ಮಿಯಾಗಿದ್ದು ಕಲ್ಪ ಕಲ್ಪಗಳಲ್ಲಿ ಹೆಚ್ಚುತ್ತಲೇ ಬರುವುವು. ಸರಸ್ವತೀ, ಭಾರತಿಯರಲ್ಲೂ ಬ್ರಹ್ಮವಾಯುಗಳಂತೆ ಜ್ಞಾನಭಕ್ತ್ಯಾದಿಗಳು ಸಮವಾಗಿದ್ದರೂ ಸರಸ್ವತೀದೇವಿಯರಲ್ಲಿ ಪದವಿಪ್ರಯುಕ್ತವಾದ ಆಧಿಕ್ಯವು ಕೊಂಚವಿರುವದು. "ಯಾವಜ್ಞಾನಂಚಾಸ್ತಿ ಸೋ ವಾಸುದೇವ ತಾವತ್ ಜ್ಞಾನಂ ವಾಯುದೇವ ಚಾಸ್ತಿ" ಇತ್ಯಾದಿ ಗರುಡಪುರಾಣ ಬ್ರಹ್ಮಕಾಂಡ ವಚನವು ಇದಕ್ಕಾಧಾರವು.

ಸೌರಿಸೂರ್ಯನ ತೆರದಿ ಬ್ರಹ್ಮ ಸ
ಮೀರ ಗಾಯತ್ರಿಗಿರಿಗಳೊಳು
ತೋರುವದು ಅಸ್ಪಷ್ಟರೂಪದಿ ಮುಕ್ತಿಪರ್ಯಂತ ||
ವಾರಿಜಾಸನ ವಾಯುವಾಣೀ
ಭಾರತಿಗಳಿಗೆ ಮಹಾಪ್ರಳಯದಿ
ಬಾರದಜ್ಞಾನಾದಿ ದೋಷವು ಹರಿಕೃಪಾಬಲದಿ ||೩೮||

ಪದ್ಯಾರ್ಥ.—ಸೌರಿಸೂರ್ಯನತೆರದಿ=ಸೌರಿ ಎಂದರೆ ಶನೈಶ್ಚರನಿಗೆ ಹೆಸರು. ಆ ಗ್ರಹವನ್ನು ನೋಡಿದರೆ ಸಾಧಾರಣವಾದ ದೀಪದಂತೆ ಕಾಣುವುದು. ಆದ್ದರಿಂದ ಉಪಲಕ್ಷಣದಿಂದ ದೀಪವನ್ನು ಗ್ರಹಿಸಬಹುದು. ಹೀಗೆ ದೀಪದಂತೆ ಹೃದಯಾಕಾಶದಲ್ಲಿ ನೋಡುವಾಗ ಸ್ಪಷ್ಟರೂಪದಿಂದಲೂ ಸೂರ್ಯಪ್ರಕಾಶವನ್ನು ನೋಡುವಾಗ ಹೇಗೆ ಸ್ಪಷ್ಟವಾಗಿ ಕಾಣದೋ ಹಾಗೆ ಅನ್ಯತ್ರ ವ್ಯಾಪ್ತವಾದ ಭಗವದ್ರೂಪಗಳನ್ನು ನೋಡಬೇಕಾದರೆ, ಸೂರ್ಯನ ಪ್ರಕಾಶವನ್ನು ಮಾತ್ರ ಕಾಣುವಂತೆ ಪ್ರಕಾಶವನ್ನು ಕಾಣುವರು. ಸೂರ್ಯಮಂಡಲಗತ ಪದಾರ್ಥವು ಹೇಗೆ ಸ್ಪಷ್ಟವಾಗಿ ಕಾಣಲು ಸಾಧ್ಯವಲ್ಲವೋ ಹಾಗೆ ಭಗವದ್ಗತ ರೂಪಗಳನ್ನು ಸ್ಪಷ್ಟವಾಗಿ ಕಾಣರೆಂಬ ತಾತ್ಪರ್ಯ. ಅದರಂತೆ ಬ್ರಹ್ಮ, ಸಮೀರ=ವಾಯುದೇವರೇ, ಗಾಯತ್ರೀ=ಸರಸ್ವತೀದೇವಿಯರು, ಗಿರಿ=ಭಾರತೀದೇವಿಯರು ಇವರುಗಳೊಳು, ಮುಕ್ತಿಪರ್ಯಂತ, ಅಸ್ಪಷ್ಟರೂಪದಿ=ಚೆನ್ನಾಗಿ ಸ್ಪಷ್ಟವಾಗದೆ ತೋರುವುದು. ವಾರಿಜಾಸನ=ಬ್ರಹ್ಮ

ದೇವರು, ವಾಯುದೇವರು, ವಾಣಿ=ಸರಸ್ವತೀದೇವಿಯರು, ಭಾರತಿಗಳಿಗೆ =ಭಾರತೀದೇವಿಯರು ಇವರುಗಳಿಗೆ, ಮಹಾಪ್ರಳಯದಿ-ಮಹಾ ಪ್ರಳಯ ಕಾಲದಲ್ಲಿ, ಹರಿಕೃಪಾಬಲದಿ, ಅಜ್ಞಾನಾದಿ ದೋಷವು ಬಾರದು.

ತಾತ್ಪರ್ಯ.—ದೀಪಗಳನ್ನು ಸಾಧಾರಣವಾಗಿ ಎಲ್ಲರೂ ನೋಡಬಹುದು. ಸೂರ್ಯಮಂಡಲವನ್ನು ಹಾಗೆ ನೋಡಲು ಸಾಧ್ಯವಲ್ಲ ಅದರಂತೆ ಬ್ರಹ್ಮದೇವರು, ವಾಯುದೇವರು, ಸರಸ್ವತೀಭಾರತೀಯರು ಅಪರೋಕ್ಷವಲ್ಲ ದೀಪ ಪ್ರಕಾಶದಂತೆ ಸ್ಪಷ್ಟವಾಗಿ ಭಗವದ್ರೂಪವನ್ನು ಕಾಣುವರು. ಸರ್ವತ್ರಗತ ಭಗವದ್ರೂಪಗಳು ಸೂರ್ಯಮಂಡಲ ಪ್ರಕಾಶವು ಕಾಣುವಂತೆ ಅಸ್ಪಷ್ಟವಾಗಿ ಕಾಣುವುದು. ಬ್ರಹ್ಮಾದಿಗಳಿಗೆ ಮುಕ್ತಿ ಪರ್ಯಂತರವೂ ಅಸ್ಪಷ್ಟವಾಗಿಯೇ ಕಾಣುವುದು. ವಾಯುದೇವರಿಗೆ ಬ್ರಹ್ಮಪದವಿಯಿಂದ ಮುಕ್ತಿಯಾದುದರಿಂದ ವಾಯುದೇವರು ಅಸ್ಪಷ್ಟವಾಗಿಯೇ ಭಗವದ್ರೂಪವನ್ನು ಕಾಣುವರು. ಬ್ರಹ್ಮದೇವರು ಮುಕ್ತರಾದಮೇಲೆ ಸ್ಪಷ್ಟವಾಗಿ ಕಾಣುವರು. ಭಗವದ್ರೂಪವನ್ನು ಕಾಣುವುದರಲ್ಲಿ ವಾಯುದೇವರಿಗಿಂತಲೂ ಬ್ರಹ್ಮದೇವರು ಸ್ಪಷ್ಟವಾಗಿ ಕಾಣುವರು. ಮುಕ್ತರಾದಮೇಲೆ ಅಧಿಕ ಸ್ಪಷ್ಟವಾಗುವುದು. ಈ ತಾರತಮ್ಯವು ಬ್ರಹ್ಮ ವಾಯುಗಳಲ್ಲಿ ಇರುವುದೆಂದು ಚಿಂತಿಸಬೇಕು. ಬ್ರಹ್ಮದೇವರು. ವಾಯುದೇವರು, ಸರಸ್ವತೀ, ಭಾರತೀದೇವಿಯರು ಇವರಿಗೆ ಮಹಾಪ್ರಳಯದಲ್ಲೂ ಕೂಡ ಪರಮಾತ್ಮನ ಕೃಪಾಬಲದಿಂದ ಅಜ್ಞಾನಾದಿ ದೋಷಗಳು ಬರುವುದಿಲ್ಲ. ಈ ವಿಷಯದಲ್ಲಿ ಗರುಡ ಪುರಾಣ ಬ್ರಹ್ಮಕಾಂಡದಲ್ಲಿ ಹೇಳಿರುವ " ಅಸ್ಪಷ್ಟ ರೂಪೇ ಜ್ಞಾನ ಬಲೇ ವಿಶೇಷಃ ಸೌರಿಪ್ರಕಾಶಸ್ಯ ಯಥೈವ ದರ್ಶನಂ ॥ ತಥಾಮಮ ಜ್ಞಾನಗತೋ ವಿಶೇಷಃ ದೀಪಪ್ರಕಾಶಸ್ಯ ಯಥೈವ ದರ್ಶನಂ ॥ ತಥಾ ಜ್ಞಾನಂ ವಾಯುದೇವಸ್ಯ ಚಾಸ್ತಿ ಅಸ್ಪಷ್ಟತಾ ನ್ಯೂನತಾಸ್ತ್ಯಸ್ತಿ ವಾಯೋಃ ॥ ತಥಾ ಜ್ಞಾನಂನ್ಯೈವ ಸಂಚಿಂತನೀಯಂ ಚೈತಾದೃಶ ಜ್ಞಾನವ್ಯಕ್ತಿರ್ಮುರಾರೆ ॥ ವಾಯ್ವಾದೀನಾಂ ಮೋಕ್ಷ ಪರ್ಯಂತಮಸ್ತಿ ವಾಯೋ ಮಮ ಪ್ರಳಯೇ ಸೃಷ್ಟಿಕಾಲೆ ॥ ತಥಾಗಾಯತ್ರ್ಯಾಶನಾಸ್ತಿ ನಾಸ್ತ್ಯೇವ ಮೋಹಃ ಗಾಯತ್ರೀವದ್ಭಾರತೀದೇವದೇವ ॥ " ಇತ್ಯಾದಿ ವಾಕ್ಯಗಳಾಧಾರವಾಗಿರುವುವು. ಈ ಪದ್ಯಾರ್ಥವೇ ಈ ಶ್ಲೋಕಗಳಲ್ಲಿರುವುದರಿಂದ ಶ್ಲೋಕಾರ್ಥವನ್ನು ಬೇರೆಯಾಗಿ ಬರೆಯಲಿಲ್ಲ.

ನೂರುವರುಷಾನಂತರದಲಿ ಸ
ರೋರುಹಾಸನ ತನ್ನ ಕಲ್ಪದ
ಲಾರು ಮುಕ್ತಿಯನೈದುವರೊ ಅವರವರ ಕರದೊಯ್ದು ।
ಶೌರಿಪುರದೊಳಗಿಪ್ಪ ನದಿಯಲಿ
ಕಾರುಣಿಕ ಸುಸ್ನಾನ ನಿಜಪರಿ
ವಾರಸಹಿತದಿ ಮಾಡಿ ಹರಿವುದರ ಪ್ರವೇಶಿಸುವ ॥೩೯॥

ಪದಾರ್ಥ.—ನೂರುವರ್ಷಾನಂತರದಿ- ಬ್ರಹ್ಮಮಾನದಿಂದ ನೂರು ವರ್ಷಾತ್ಮಕವಾದ ಒಂದು ಕಲ್ಪವು ಕಳೆದಮೇಲೆ, ಸರೋರುಹಾಸನ= ಪದ್ಮಾಸನರಾದ ಬ್ರಹ್ಮದೇವರು. ತನ್ನ ಕಲ್ಪದಲಿ–ತಮ್ಮ ಕಲ್ಪದಲ್ಲಿ, ಆರು ಮುಕ್ತಿಯನೈದುವರೊ=ಆ ಕಲ್ಪದಲ್ಲಿ ಮುಕ್ತಿಯನ್ನು ಹೊಂದುವರು ಯಾರಿರುವರೋ, ಅವರವರ ಕರದೊಯ್ದು=ಅವರುಗಳೊಂದೊಡಗೂಡಿ, ಶೌರಿಪುರದೊಳಗಿಪ್ಪ=ಪರಮಾತ್ಮನ ಲೋಕದ ಮಧ್ಯದೊಳಗಿರುವ, ನದಿಯಲಿ = ವಿರಜಾ ನದಿಯಲ್ಲಿ, ನಿಜಪರಿವಾರಸಹಿತದಿ–ವಾಣೀ, ಶೇಷ ಗರುಡಾದಿ ತಮ್ಮ ಪರಿವಾರಗಳಿಂದ ಸಹಿತರಾಗಿ, ಸುಸ್ನಾನ ಮಾಡಿ ಚೆನ್ನಾಗಿ ಸ್ನಾನವನ್ನು ಮಾಡಿದಮೇಲೆ ಲಿಂಗ ಶರೀರಗಳು ಭಂಗವಾಗುವುವು ತದನಂತ ದಲ್ಲಿ, ಕಾರುಣಿಕ=ಕರುಣಾಳುವಾದ ಬ್ರಹ್ಮದೇವರು, ಹರಿಉದರ–ಪರಮಾತ್ಮನ ಉದರವನ್ನು, ಪ್ರವೇಶಿಸುವ=ಪ್ರವೇಶ ಮಾಡುವರು.

ತಾತ್ಪರ್ಯ.—ಬ್ರಹ್ಮದೇವರ ನೂರು ವರ್ಷಗಳಿಗೆ ಒಂದು ಬ್ರಹ್ಮಕಲ್ಪವೆಂದು ಹೆಸರು. ತತ್ವಾಭಿಮಾನಿಗಳಾದ ಸೂರ್ಯಾದಿ ದೇವತೆಗಳು ಮೊದಲಾದ ಮುಕ್ತಿಯೋಗ್ಯರಲ್ಲಿ ೧೦–೨೦ ಕಲ್ಪ ಸಾಧನವನ್ನು ಹೇಳಿರುವವರನ್ನು ಬಿಟ್ಟು ಮಿಕ್ಕ ಸಾಮಾನ್ಯ ಜೀವರೆಲ್ಲರಿಗೂ ಒಂದೇ ಕಲ್ಪದ ಸಾಧನ ಎಂದು ನಿಶ್ಚಯವು. ಈ ಬ್ರಹ್ಮಕಲ್ಪದಲ್ಲಿ ಸೃಷ್ಟಿಗೆ ಬಂದವರು ಇದೇ ಕಲ್ಪದಲ್ಲೇ ಮುಕ್ತಿಯನ್ನು ಹೊಂದಬೇಕೆಂಬ ನಿಶ್ಚಯವುಂಟು. ಇವರೆಲ್ಲರಿಗೂ ಬ್ರಹ್ಮದೇವರೊಂದಿಗೆ ವಿರಜಾನದೀ ಸ್ನಾನದಿಂದ ಲಿಂಗ ಶರೀರ ಭಂಗವಾಗಿ ಮುಕ್ತಿಯಾಗಬೇಕು. ಹೀಗೆ ನಿಯಮವಿರುವುದರಿಂದ ಈ ಬ್ರಹ್ಮದೇವರಿಗೆ ನೂರು ವರ್ಷಗಳಾದ ಮೇಲೆ ಈ ಬ್ರಹ್ಮ ಕಲ್ಪವು ಮುಗಿಯುವುದು. ಆ ಸಮಯದಲ್ಲಿ ಈ ಕಲ್ಪದಲ್ಲಿ ಮುಕ್ತರಾಗಬೇಕಾದ ಜೀವರಿಂದೊಡಗೂಡಿ ಗರುಡ ಶೇಷ

ಇಂದ್ರರು ಮೊದಲಾದ ಈ ಕಲ್ಪದಲ್ಲಿ ಮುಕ್ತರಾಗುವ, ತಮ್ಮ ಪರಿವಾರದಿಂದೊಡಗೂಡಿ, ವೈಕುಂಠಲೋಕದ ಮಧ್ಯದಲ್ಲಿರುವ ವಿರಜಾನದಿಯಲ್ಲಿ ಸ್ನಾನವನ್ನು ಮಾಡಿ ಲಿಂಗ ಭಂಗವಾದಕೂಡಲೇ ಎಲ್ಲರಿಂದಲೂ ಕೂಡಿ ಪರಮಾತ್ಮನುದರವನ್ನು ಪ್ರವೇಶಮಾಡುವರು.

ಅವತಾರಿಕೆ.—ಮುಕ್ತರಾದವರ ಸ್ಥಿತಿಯನ್ನು ಹೇಳುತ್ತಾರೆ.—

ವಾಸುದೇವನ ಉದರದಲಿ ಪ್ರ
ವೇಶಗೈದಾನಂತರದಿ ನಿ
ರ್ದೋಷಮುಕ್ತರು ಉದರದಿಂ ಪೊರಮಟ್ಟು ಹರುಷದಲಿ ।
ಈಶನಿಂದಾಜ್ಞೆಯಪಡೆದನಂ
ತಾಸನ ಶ್ವೇತದ್ವೀಪ ಮೋಕ್ಷದಿ
ವಾಸವಾಗಿ ವಿಮುಕ್ತ ದುಃಖರು ಸಂಚರಿಸುತಿಹರು ॥೪೦॥

ಪದ್ಯಾರ್ಥ.—ನಿರ್ದೋಷಮುಕ್ತರು=ದೋಷರಹಿತರಾದ ಮುಕ್ತರಾದವರು, ವಾಸುದೇವನ ಉದರದಲ್ಲಿ ಪ್ರವೇಶಗೈದಾನಂತರದಿ=ಪರಮಾತ್ಮನ ಉದರದಲ್ಲಿ ಪ್ರವೇಶಮಾಡಿದಮೇಲೆ, ಉದರದಿಂ=ಉದರದಿಂದ (ಹೊಟ್ಟೆಯಿಂದ) ಪೊರಮಟ್ಟು=ಹೊರಗೆ ಬಂದು, ಹರುಷದಲಿ = ಸಂತೋಷದಿಂದ, ಈಶನಿಂದ=ಪರಮಾತ್ಮನಿಂದ, ಆಜ್ಞೆಯ ಪಡೆದು=ಅಪ್ಪಣೆಯನ್ನು ಪಡೆದು, ಮೋಕ್ಷದಿ-ಮುಕ್ತಸ್ಥಾನಗಳಲ್ಲಿ, ಶ್ವೇತದ್ವೀಪದಲ್ಲೂ, ಅನಂತಾಸನದಲ್ಲೂ, ವಾಸವಾಗಿ=ವಾಸಮಾಡುತ್ತಾ, ವಿಮುಕ್ತದುಃಖರು = ದುಃಖರಹಿತರಾಗಿ, ಸಂಚರಿಸುತ್ತಿಹರು.

ತಾತ್ಪರ್ಯ.—ಮುಕ್ತರಾದವರು ಲಿಂಗಭಂಗಾನಂತರದಲ್ಲಿ ಪ್ರವೇಶಮಾಡುವರೆಂದು ಮೇಲಿನ ಪದ್ಯದಲ್ಲಿ ಹೇಳಿದರು. ಆಮೇಲೆ ಅವರು ಏನು ಮಾಡುವರೆಂದರೆ; ಪರಮಾತ್ಮನ ಉದರದಿಂದ ಹೊರಗೆ ಬಂದ ಸಂತೋಷದಿಂದ ಅನಂತಾಸನ ಶ್ವೇತದ್ವೀಪ ಮೊದಲಾದ ಸ್ಥಳಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಾ ಸ್ವರೂಪಾನಂದವನ್ನು ಅನುಭವಿಸುತ್ತಾ ಮುಕ್ತಿಯಲ್ಲಿ ವಾಸಮಾಡುವರು.

ಸತ್ವಸತ್ವ ಮಹಾಸೂಕ್ಷ್ಮವು
ಸತ್ವಸತ್ವಾತ್ಮಕ ಕಳೇವರ
ಸತ್ಯಲೋಕಾಧಿಪನೆನಿಪಗತ್ಯಲ್ಪವೆರಡುಗುಣ ।
ಮುಕ್ತಿ ಭೋಗ್ಯವಿದಲ್ಲ ಜಾಂಡೋ
ತ್ಪತ್ತಿಕಾರಣವಲ್ಲ ಹರಿ ಪ್ರೀ
ತ್ಯರ್ಥವಾಗಿ ಜಗದ್ವ್ಯಾಪಾರಗಳನು ಮಾಡುವನು ॥೪೧॥

ಪದ್ಯಾರ್ಥ-—ಸತ್ವಸತ್ವಮಹಾಸುಸೂಕ್ಷ್ಮವು ಸತ್ವ ಸತ್ವಾತ್ಮಕಕಳೇವರ= "ಸತ್ವ ಸತ್ವ ಮಹಾಸತ್ವ ಸೂಕ್ಷ್ಮಸತ್ವಶ್ಚತು ರ್ಮುಖಃ" ಎಂಬ ಎಂಬ ಗರುಡಪುರಾಣದಂತೆ ವಿಶುದ್ಧ ಸತ್ವವೆಂದು ಬ್ರಹ್ಮದೇವರಿಗೆ ಹೆಸರು. ಅದರ ವಿವರ ಸಾತ್ವಿಕ ಸಾತ್ವಿಕ ಸಾತ್ವಿಕ ಸೂಕ್ಷ್ಮ ಸಾತ್ವಿಕ ಸ್ವರೂಪಾತ್ಮಕವಾದುದು. ಅವರ ಸ್ವರೂಪದೇಹವೆಂದರ್ಥ. ಸತ್ಯಲೋಕಾಧಿಪನೆನಿಪಗೆ-ಸತ್ಯಲೋಕಾಧಿಪತಿ ಎನಿಸುವ ಬ್ರಹ್ಮದೇವರಿಗೆ, ಎರಡುಗುಣ=ರಜೋಗುಣ ತಮೋಗುಣಗಳೆರಡೂ, ಅತ್ಯಲ್ಪ=ಬಹಳ ಸೂಕ್ಷ್ಮವಾಗಿರುವುವು ( ಬ್ರಹ್ಮ ಪದವಿಯಲ್ಲಿರುವಾಗ ಮಾಡಿದ ) ಇದು=ಈ ಒಂದು ಕಲ್ಪಸಾಧನೆಯು, ಮುಕ್ತಿಭೋಗ್ಯವಲ್ಲ=ಮುಕ್ತಿಯಲ್ಲಿ ಅನುಭವಿಸುವ ಸುಖಸಾಧನಕ್ಕಾಗಿ ಅಲ್ಲ. ಅಜಾಂಡೋತ್ಪತ್ತಿಗೆ=ಬ್ರಹ್ಮಾಂಡೋತ್ಪತ್ತಿಗೆ ಕಾರಣವಲ್ಲ. ಹರಿ ಪ್ರೀತ್ಯರ್ಥವಾಗಿ, ಜಗದ್ವ್ಯಾಪಾರಗಳ ಮಾಡುವನು=ಸೃಷ್ಟ್ಯಾದಿಗಳನ್ನು ಭಗವತ್ಸೇವೆ ಎಂತಲೂ ಇದರಿಂದ ಭಗವತ್ಪ್ರೀತಿಯಾಗಲೆಂತಲೂ ಮಾಡಿರುವರೆಂದರ್ಥ.

ತಾತ್ಪರ್ಯ:—ಸತ್ವಗುಣ, ರಜೋಗುಣ, ತಮೋಗುಣವೆಂಬ ಮೂರು ಗುಣಗಳಲ್ಲಿ ಗುಣಗಳ ಪ್ರಾಧಾನ್ಯದಿಂದ ಸತ್ವಗುಣ ಪ್ರಧಾನರು ಸಾತ್ವಿಕರೆಂತಲೂ, ರಜೋಗುಣ ಪ್ರಧಾನರು ರಾಜಸರೆಂತಲೂ, ತಮೋಗುಣ ಪ್ರಧಾನರು ತಾಮಸರೆಂತಲೂ, ವ್ಯವಹರಿಸಲ್ಪಡುವರು. ಒಬ್ಬೊಬ್ಬರಲ್ಲೂ ಮೂರು ಗುಣಗಳು ಇದ್ದೇ ಇರುವುವು. ಸತ್ವ ಗುಣವಧಿಕವಾಗಿ ರಜೋಗುಣ ತಮೋಗುಣಗಳು ಅಲ್ಪವಾಗಿ ಇರುವವರು ಸಾತ್ವಿಕ ಸಾತ್ವಿಕ ರಾಜಸರೆಂದು ವ್ಯವಹರಿಸಲ್ಪಡುವರು. ಇದರಂತೆಯೇ ಸಾತ್ವಿಕ ಸಾತ್ವಿಕ ತಾಮಸರೆಂಬಿವೇ ಮೊದಲಾದ ಭೇದಗಳುಂಟು. ಈ ಭೇದಗಳಲ್ಲಿ ಬ್ರಹ್ಮದೇವರು ಸಾತ್ವಿಕ ಸಾತ್ವಿಕ ಸೂಕ್ಷ್ಮಸಾತ್ವಿಕರೆಂಬ ಪ್ರಭೇದದಲ್ಲಿ ಸೇರಿದವರೆಂಬ ಭಾವ ರಾಜಸ ತಾಮಸ

ಗುಣಗಳು ಅವರಲ್ಲಿ ಅತ್ಯಲ್ಪವಾಗಿರುವುವು. ವಾಯು ಪದವಿಯಲ್ಲೇ ಇವರ ಸಾಧನವೆಲ್ಲಾ ಪೂರ್ತಿಯಾಗುವುವು ಬ್ರಹ್ಮಪದವಿಗೆ ಬಂದಮೇಲೆ ಮಾಡುವ ಸಾಧನವು ಕೇವಲ ಪ್ರೀತಿಗೋಸ್ಕರ, ಇದರಿಂದ ಮುಕ್ತಿಸಾಧನವೂ ಅಲ್ಲ, ಬ್ರಹ್ಮಾಂಡದ ಉತ್ಪತ್ತಿ ಕಾರಣವೆಂಬುದಲೂ ಅಲ್ಲ ಮುಕ್ತಿ ಸಾಧನವೆಲ್ಲಾ ವಾಯುಪದವಿಯ ಪರ್ಯಂತದಲ್ಲೇ ಪೂರೈಸಿರುವುದೆಂಬ ತಾತ್ಪರ್ಯ.

ಅವತಾರಿಕೆ —ರುದ್ರದೇವರ ಸಾಧನವನ್ನು ಹೇಳುತ್ತಾರೆ.—

**ಪಾದನ್ಯೂನಶತಾಬ್ಧ ಪರಿಯಂ**
**ತೋದಿವುಗ್ರತಪಾಹ್ವಯದಿ ಲವ**
**ಣೋದಧಿಯೊಳಗೆ ಕಲ್ಪದಶತಪವಿದ್ದನಂತರದಿ ।**
**ಸಾದಿಸಿದಮಹದೇವ ಪದವಾ**
**ರೈದು ನವಕಲ್ಪಾವಸಾನಕೆ**
**ಐದುವನು ಶೇಷನಪದವ ಪಾರ್ವತೀ ಸಹಿತಾ ॥೬೨॥**

ಪದಾರ್ಥ.—ಪಾದನ್ಯೂನಶತಾಬ್ದಪರಿಯಂತ=ಒಂದು ಪಾದ ಕಮ್ಮಿ ೧೦೦ ಎಂದರೆ ೭೫ ವರ್ಷಗಳವರೆಗೂ, ಓದಿ=೯೭ನೆಯ ಕಲ್ಪ ಸಾಧನೆಯಲ್ಲಿ ಅಂದರೆ ವಾಯುಪದವಿಗೆ ಹಿಂದಿನ ಕಲ್ಪದಲ್ಲಿ ಇದೇ ವಾಯುದೇವರು ಉಗ್ರ ತಪರೆಂಬ ಹೆಸರನ್ನು ಪಡೆದಿದ್ದರು. ಅವರಲ್ಲಿ ಭಗವಂತನ ಗುಣಾತಿಶಯಗಳನ್ನು ಶ್ರವಣಮಾಡಿ, ಅದರಮೇಲೆ ಉಗ್ರತಪಾಹ್ವಯದಿ=ಉಗ್ರತಪಾ ಎಂಬ ಹೆಸರಿನಿಂದ, ಲವಣೋದಧಿಯೊಳಗೆ=ಲವಣ ಸಮುದ್ರದಲ್ಲಿ, ಕಲ್ಪದಶ=೧೦ ಕಲ್ಪಗಳವರೆಗೂ, ತಪವಿದ್ದು—ಉಗ್ರವಾದ ತಪಸ್ಸನ್ನು ಮಾಡಿ, ಅನಂತರದಿ= ಅನಂತರದಲ್ಲಿ, ೩೮ ಕಲ್ಪಸಾಧನಾನಂತರ ೩೯ನೆಯ ಕಲ್ಪದಲ್ಲಿ, ಮಹದೇವ ಪದವ=ರುದ್ರಪದವಿಯನ್ನು, ಸಾಧಿಸಿ—ಸಾಧಿಸಿದರು. ಆರೈದುನವಕಲ್ಪಾವಸಾನಕೆ=೬×೫=೩೦+೯ ಅಂತು ೩೯ ಹೀಗೆ ಇಷ್ಟು ಕಲ್ಪಾಂತ್ಯದಲ್ಲಿ ೩೯ಕಲ್ಪವು ಪೂರೈಸಿದನಂತರದಲ್ಲಿ ೪೦ನೆಯ ಕಲ್ಪದಲ್ಲಿ ಪಾರ್ವತೀ ಸಹಿತ ಶೇಷಪದವಿಯನ್ನು ಐದುವನು.

ತಾತ್ಪರ್ಯ.— " ಸುಶ್ರಾವ್ಯೋಗ್ರತಪಾನಾಮ ಯೋಗೋ ರುದ್ರಪದಸ್ಯಯಃ । ಸಾರ್ಥಂಪತಾರ್ಥಂ ವಿಷ್ಣೋಸ್ತುಗುಣಾ ಭಕ್ತ್ಯಾಸದೋದ್ಯತಃ ॥

ಎಂಬ ಅನುವ್ಯಾಖ್ಯಾನ ವಾಕ್ಯಪ್ರಕಾರವಾಗಿ ರುದ್ರಪದವಿಗೆ ಅರ್ಹರಾದವರ ಪೈಕಿ ಒಬ್ಬರು ೩೫ ವರ್ಷಗಳವರೆಗೂ ಲಾತವ್ಯದಲ್ಲಿ ಪರಮಾತ್ಮನ ಗುಣಾತಿಶಯಗಳನ್ನು ಶ್ರವಣಮಾಡಿ ಅದರ ಮೇಲೆ ಲವಣ ಸಮುದ್ರದಲ್ಲಿ ಉಗ್ರತಪಾ ಎಂಬ ಹೆಸರಿನಿಂದ ೧೦ ಕಲ್ಪ ತಪಸ್ಸನ್ನು ಮಾಡಿ, ತದನಂತರ ೩೮ ಬ್ರಹ್ಮಕಲ್ಪ ಮುಗಿದು ೩೯ನೆಯ ಕಲ್ಪದಲ್ಲಿ ರುದ್ರಪದವಿಯನ್ನು ಹೊಂದಿ ಆ ಕಲ್ಪಾವಸಾನದಲ್ಲಿ ಅಂದರೆ ೪೦ನೇ ಕಲ್ಪದಲ್ಲ ಪಾರ್ವತೀ ಸಮೇತನಾಗಿ ಶೇಷ ಪದವಿಯನ್ನು ಹೊಂದುವರು.

ಅವತಾರಿಕೆ:—ಇಂದ್ರಕಾಮರ ಸಾಧನವನ್ನು ಹೇಳುತ್ತಾರೆ.--

**ಇಂದ್ರಮನು ದಶಕಲ್ಪಗಳಲಿ ಸು**
**ನಂದನಾಮದಿ ಶ್ರವಣಗೈದು ಮು**
**ಕುಂದನಪರೋಕ್ಷಾರ್ಥ ನಾಲ್ಕುಸುಕಲ್ಪತಪವಿದ್ದು ।**
**ನೊಂದು ಪೊಗೆಯೊಳು ಕೋಟಿವರ್ಷ ಪು**
**ರಂದರನು ಅದನುಂಡನಂತರ**
**ಹೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ ॥೪೩॥**

ಪದ್ಯಾರ್ಥ.—ಇಂದ್ರ=ಇಂದ್ರನು, ಮನುದಶಕಲ್ಪಗಳಲಿ=೧೦ಮನ್ವಂತರಗಳಲ್ಲಿ, ಸುನಂದನಾಮದಿ=ಸುನಂದನೆಂಬ ಹೆಸರಿಸಿಂದ, ಶ್ರವಣಗೈದು= ಗರುಡಪದ ಯೋಗ್ಯರಾದ ಸುಮನಸು ಎಂಬುವರಿಂದ ಭಗವನ್ಮಹಿಮೆಯನ್ನು ಶ್ರವಣಮಾಡಿ, ಮುಕುಂದನ=ಮೋಕ್ಷದಾಯಕನಾದ ಶ್ರೀಪರಮಾತ್ಮನ ಅಪರೋಕ್ಷಾರ್ಥ–ಅಪರೋಕ್ಷ ಹೊಂದುವದಕ್ಕಾಗಿ, ನಾಲ್ಕುಸುಕಲ್ಪ=4ಮನ್ವಂತರಗಳಲ್ಲಿ, ತಪವಿದ್ದು=ತಪಸ್ಸನ್ನು ಮಾಡಿ, ಪೊಗೆಯೊಳು=ಹೊಗೆಯಲ್ಲಿ ನೊಂದು–ಕಷ್ಟಪಟ್ಟು, ಕೋಟಿವರ್ಷ, ಅದನುಂಡು=ಆ ಹೊಗೆಯನ್ನೇ ಪಾನಮಾಡಿ, ಅನಂತರ ಪುರಂದರನು=ಪುರಂದರನೆಂಬ ಹೆಸರುಳ್ಳ ೭ನೆಯ ಮನ್ವಂತರದಲ್ಲಿ ಇಂದ್ರ ಪದವಿಗೆ ಬಂದ್ಧ, ಸುರಪತಿ=ದೇವಾಧಿಪತಿಯು, ನಿಜಲೋಕ=ತನ್ನ ಯೋಗ್ಯತಾನುಸಾರವಾದ ಸ್ವರೂಪ ಸುಖವನ್ನು ಮುಕ್ತಿಯಲ್ಲಿ ಹೊಂದುವನು. ಅಥವಾ ನಿಜಲೋಕವೆಂದರೆ, ಇಂದ್ರಾಧಿಪತ್ಯವನ್ನು ಹೊಂದಿ ವಾಸಮಾಡುವ ಸ್ವರ್ಗಲೋಕವನ್ನು ಹೊಂದಿದನೆಂದರ್ಥ. ಆ ಕಲ್ಪಾಂತ್ಯದಲ್ಲೇ ದೇವೇಂದ್ರನಿಗೆ ಮುಕ್ತಿ ಎಂಬ ತಾತ್ಪರ್ಯ. ಕಾಮನು = ಮನ್ಮಥನು, ಇದರಂತೆ = ಇದೇ ರೀತಿಯಾಗಿ ಸಾಧನೆಯುಳ್ಳವನೆಂದರ್ಥ.

ತಾತ್ಪರ್ಯ. — " ಮುಮನ್ವಂತರಂ ಶಕ್ರಪದಯೋಗ್ಯೋಗುರುತ್ಮಕಃ ॥ ಪದಯೋಗ್ಯಾತ್ಸುಮನಸೋ ಸುನಂದೋನಾಮ ಜಾಶ್ರಣೋತ್ ॥ ಉಪಾಸಾಂ ಚಕ್ರ ಉದ್ಯುಕ್ತೋ ಮನ್ವಂತರ ಚತುಷ್ಟಯಂ " ಎಂಬ ಅನುವ್ಯಾಖ್ಯಾನ ವಾಕ್ಯದ ಪ್ರಕಾರ ಈ ಪದ್ಯಾರ್ಥವನ್ನು ಹೀಗೆ ತಿಳಿಯಬೇಕು.— ದೇವೇಂದ್ರನು ಇಂದ್ರಪದವಿಗೆ ಬರುವುದಕ್ಕೆ ಮುಂಚಿತವಾಗಿ ಸುನಂದನೆಂಬ ಹೆಸರಿನಿಂದ, ಗರುಡಪದವಿಯನ್ನು ಹೊಂದಲು ಯೋಗ್ಯನಾದ, ಸುಮನಸ ಎಂಬುವರಿಂದ ೧೦ ಮನ್ವಂತರಗಳು ಭಗವನ್ಮಹಿಮೆಯನ್ನು ಶ್ರವಣಮಾಡಿ ತದನಂತರ ಪರಮಾತ್ಮನ ಅಪರೋಕ್ಷಕ್ಕೋಸ್ಕರ ೮ ಮನ್ವಂತರಗಳು ತಪಸ್ಸುಮಾಡಿ ಒಂದು ಕೋಟಿ ವರ್ಷ ಹೊಗೆಯೊಳಗೆ ತಪಸ್ಸು ಮಾಡಿ ಕಷ್ಟದಿಂದ ಧೂಮಪಾನವನ್ನು ಮಾಡಿ, ಇಂದ್ರಪದವಿಯನ್ನು ಪಡೆದು ಸ್ವರ್ಗದಲ್ಲಿ ವಾಸಮಾಡುವನು. ಮನ್ಮಥನೂ ಇದರಂತೆಯೇ ಸಾಧನೆಮಾಡಿಕೊಂಡು ಪರಮಾತ್ಮನ ಪುತ್ರನಾಗಿರುವನು.

ಅವತಾರಿಕೆ:—ಚಂದ್ರ ಸೂರ್ಯರ ವಿಷಯವನ್ನು ಹೇಳುತ್ತಾರೆ:—

**ಕರೆಸುವರು ಪೂರ್ವದಲಿ ಚಂದ್ರಾ**
**ರ್ಕರತಿಶಾಂತಸುರೂಪನಾಮದಿ**
**ಎರಡೆರಡು ಮನುಕಲ್ಪ ಶ್ರವಣವಗೈದು ಮನುಕಲ್ಪ ॥**
**ವರತಪೋಬಲದಿಂದಲರ್ವಾಕ್**
**ಶಿರಗಳಾಗೀರ್ಕೈದುಸಾವಿರ**
**ವರುಷ ದುಃಖವನೀಗಿ ಕಾಂಬರು ಬಿಂಬರೂಪವನು ॥೪೪॥**

ಪದ್ಯಾರ್ಥ.--ಚಂದ್ರಾರ್ಕರು—ಚಂದ್ರ ಸೂರ್ಯರು, ಪೂರ್ವದಲಿ=ಪದವಿ ಹೊಂದುವುದಕ್ಕೆ ಪೂರ್ವದಲ್ಲಿ, ಅತಿಶಾಂತಸುರೂಪನಾಮದಿ=ಅತಿಶಾಂತರೆಂತಲೂ, ಸುರೂಪರೆಂತಲೂ ಹೆಸರುಳ್ಳವರಾಗಿ, ಎರಡೆರಡು ಮನುಕಲ್ಪ= ಎರಡೆರಡು ಮನ್ವಂತರಗಳು, ಶ್ರವಣಗೈದು ಮೇಲಿನ ಪದ್ಯದಲ್ಲಿ ಹೇಳಿದ ಸುಮನಸ ಎಂಬುವರಿಂದ ಭಗವನ್ಮಹಿಮೆಯನ್ನು ಶ್ರವಣಮಾಡಿ, ಮನುಕಲ್ಪ= ಒಂದು ಮನ್ವಂತರದಲ್ಲಿ ಸುಮನಸರ ಉಪಾಸನೆಯನ್ನು ಮಾಡಿ, ವರತಪೋಬಲದಿಂದ – ಉತ್ಕೃಷ್ಟವಾದ ತಪೋಬಲದಿಂದ. ಅಥವಾ

ವರಬಲದಿಂದಲೂ ತಪೋಬಲದಿಂದಲೂ, ಅರ್ವಾಕ್ಶಿರಗಳಾಗಿ=ತಲೆಕೆಳಗಾಗಿ, ಈರೈದುಸಾವಿರ-೧೦ ಸಾವಿರ ವರ್ಷಗಳು ತಪಸ್ಸುಮಾಡಿ, ದುಃಖವನೀಗಿ-ದುಃಖವನ್ನು ಕಳೆದುಕೊಂಡು, ಬಿಂಭರೂಪವನು, ಕಾಂಬರು-ಅಪರೋಕ್ಷದಲ್ಲಿ ಬಿಂಭರೂಪವನ್ನು ಕಾಣುವರು.

ತಾತ್ಪರ್ಯ.—“ ಸುರೂಪಶ್ಶಾಂತರೂಪಶ್ಚ ಮನ್ವಂತರ ಚತುಷ್ಟಯಂ ಅಶೃಣ್ವತಾಂಸುಮನಸೋ ಮನ್ವಂತರ ಮುಪಾಸತಾಂ । ವರ್ಷಾಯುತಸಹಸ್ರೇಣ ತಪೋಽರ್ವಾಕ್ ಶಿರಸಾಕೃತಃ ॥ ” ಇತ್ಯಾದಿ ಅನುವ್ಯಾಖ್ಯಾನ ವಾಕ್ಯದಂತೆ ಚಂದ್ರ ಸೂರ್ಯರು ಪದವಿಗಳನ್ನು ಹೊಂದುವುದಕ್ಕೆ ಪೂರ್ವದಲ್ಲಿ ಅತಿ ಶಾಂತರೂಪ ಸುರೂಪರೆಂಬ ಹೆಸರುಗಳಿಂದ ಗರುಡ ಪದವಿಗೆ ಯೋಗ್ಯರಾದ ಸುಮನಸರನ್ನು ೧ ಮನ್ವಂತರ ಕಾಲ ಉಪಾಸನೆ ಮಾಡಿ ನಾಲ್ಕು ಮನ್ವಂತರ ಕಾಲ ಅವರಲ್ಲಿ ಭಗವನ್ಮಹಿಮೆಗಳನ್ನು ಶ್ರವಣಮಾಡಿ ತದನಂತರದಲ್ಲಿ ಹತ್ತು ಸಹಸ್ರವರ್ಷಕಾಲ ತಲೆಕೆಳಗಾಗಿ ನಿಂತು ಉಗ್ರವಾದ ತಪಸ್ಸನ್ನು ಬಹಳ ಕಷ್ಟದಿಂದ ಮಾಡಿ, ಮತ್ತೊಂದು ಸಹಸ್ರ ವರ್ಷ ಆಕಾಶದಲ್ಲಿ ಶಯನಮಾಡಿ ಸೂರ್ಯ ಕಿರಣಗಳನ್ನೇ ಪಾನಮಾಡಿ, ಅಪರೋಕ್ಷದಲ್ಲಿ ಪರಮಾತ್ಮನನ್ನು ಕಾಣುವರು.

ಅವತಾರಿಕೆ.—ಮೇಲಿನ ಪದ್ಯಗಳಲ್ಲಿ ಖದ್ರಾದಿ ಪದ ಯೋಗ್ಯರಾದ ಜೀವರು ಮಾಡಬೇಕಾದ ತಪಸ್ಸನ್ನು ಮಾತ್ರ ಹೇಳಿದರೆ ಹೊರತು ಯಾರ್ಯಾರಿಗೆ ಎಷ್ಟೆಷ್ಟು ಕಲ್ಪಸಾಧನದ ಮೇಲೆ ಅಪರೋಕ್ಷದ ಪ್ರಾಪ್ತಿ ಎಂಬುವುದನ್ನು ಹೇಳಲಿಲ್ಲ. ಮುಂದಿನ ಮೂರು ಪದ್ಯಗಳಿಂದ ಅವರವರ ಒಟ್ಟು ಕಲ್ಪಸಾಧನವನ್ನು ಹೇಳುತ್ತಾರೆ.—

ಸಾಧನಗಳಪರೋಕ್ಷನಂತರ
ವೈದುವರು ಮೋಕ್ಷವನು ಶಿವ ಶ
ಕ್ರಾದಿ ದಿವಿಜರುಪುಕ್ತ ಕ್ರಮದಿ ಕಲ್ಪಸಂಖ್ಯೆಯಲಿ ।
ಐದಲೆಯಗೈವತ್ತು ಉಪೇಂದ್ರ ಸ
ಹೋದರಿಗಿಪ್ಪತ್ತು ದ್ವಿನವತ್ಸ
ಗಾಧಿಪತಿ ಪ್ರಾಣನಿಗೆ ಗುರುಮನುಗಳಿಗೆ ಷೋಡಶವು ॥೪೫॥

ಪದ್ಯಾರ್ಥ.—ಶಿವಶಕ್ರಾದಿ=ರುದ್ರ ಇಂದ್ರ ಮೊದಲಾದ, ದಿವಿಜರು= ದೇವತೆಗಳು, ಉಕ್ತಕ್ರಮದಿಂ ಕಲ್ಪಸಂಖ್ಯೆಯಲಿ=ಮುಂದೆ ಹೇಳುವ ಪ್ರಕಾರ ಕಲ್ಪಗಳ ಸಂಖ್ಯೆಗಳ ಕ್ರಮವಾಗಿ, ಸಾಧನಗಳು–ಸಾಧನಗಳಾದ ಮೇಲೆ, ಅಪರೋಕ್ಷ – ಅಪರೋಕ್ಷದಲ್ಲಿ ಭಗವದ್ರೂಪವನ್ನು ಕಂಡು, ಮೋಕ್ಷವನು ಐದುವರು. ಐದಲೆಯಗೆ–೫ ತಲೆಗಳುಳ್ಳ ರುದ್ರದೇವರಿಗೆ, ಐವತ್ತು= ೫೦ ಕಲ್ಪಸಾಧನವು, ಉಪೇಂದ್ರ ಸಹೋದರನಿಗೆ=ದೇವೇಂದ್ರನಿಗೆ, ಇಪ್ಪತ್ತು= ೨೦ ಕಲ್ಪಸಾಧನವು, ತ್ವಗಾಧಿಪತಿ ಪ್ರಾಣನಿಗೆ=ತ್ವಗಿಂದ್ರಿಯಾಭಿಮಾನಿಯಾದ ಅಹಂಕಾರಿಕಪ್ರಾಣನಿಗೆ, ದ್ವಿನವ=೨×೯=೧೮ ಕಲ್ಪಸಾಧನವೂ, ಗುರು ಮನುಗಳಿಗೆ=ಬೃಹಸ್ಪತಿ, ಸ್ವಾಯಂಭುವ ಮೊದಲಾದವರಿಗೆ, ಷೋಡಶವು=೧೬ ಕಲ್ಪಸಾಧನವೆಂದು ತಿಳಿಯಬೇಕು.

ತಾತ್ಪರ್ಯ.—ರುದ್ರ ಇಂದ್ರಾದಿಗಳಿಗೆ ಮುಂದೆಹೇಳುವ ರೀತಿಯಾಗಿ ಕಲ್ಪಸಾಧನಗಳಾದಮೇಲೆ ಅಪರೋಕ್ಷಾನಂತರ ಮುಕ್ತಿಯಾಗುವುದು ಯಾರುಯಾರಿಗೆ ಎಷ್ಟೆಷ್ಟು ಕಲ್ಪಸಾಧನವೆಂದರೆ, ರುದ್ರದೇವರಿಗೆ ೫೦ ಕಲ್ಪವೂ ಇಂದ್ರದೇವರಿಗೆ ೨೦ ಕಲ್ಪವೂ ಆಗಬೇಕು. ರುದ್ರದೇವರಿಗೆ ಹೇಳಿದುದರಿಂದ ಗರುಡದೇವರೂ ಇವರಿಗೆ ಸಮರಾದುದರಿಂದ ಇವರಂತೆಯೇ ಅವರಿಗೂ ಸಾಧನವೆಂದು ತಿಳಿಯಬೇಕು. ಶೇಷಪದವಿಯನ್ನು ಹೊಂದುವವರು ರುದ್ರದೇವರೇ ಆದುದರಿಂದ ಅವರ ಸಾಧನವು ಬೇರೆ ಹೇಳಲಿಲ್ಲ. ಇಂದ್ರನಿಗೆ ಹೇಳಿದಂತೆ ಮನ್ಮಥನಿಗೆ ತಿಳಿಯಬೇಕು. ಅಹಂಕಾರಿಕಪ್ರಾಣನಿಗೆ 18 ಕಲ್ಪಗಳೂ, ಗುರು, ಮನು, ರತಿ, ದಕ್ಷ, ಶಚಿಗಳಿಗೆ ೧೬ ಕಲ್ಪಗಳೆಂದು ತಾತ್ಪರ್ಯ. ಈ ಕಲ್ಪಸಾಧನ ವಿಷಯದಲ್ಲಿ ರುದ್ರದೇವರಿಗೆ 50 ಕಲ್ಪಸಾಧನವೆಂದು ಮೊದಲನೆಯ ಸಂಧಿಯ " ಕೃತ್ತಿವಾಸನೆ ನೀಸಾಲ್ವತ್ತು ಕಲ್ಪ " ಎಂಬ ಪದ್ಯದ ವಿಶೇಷಾರ್ಥದಲ್ಲಿ ಸಪ್ರಮಾಣವಾಗಿ ವಿವರಮಾಡಿರುತ್ತದೆ. ಮತ್ತೂ ಇಲ್ಲಿ ಬರೆಯುವ ಅವಶ್ಯವಿಲ್ಲ. " ವಿಂಶತ್ಕಲ್ಪಮಿತಾಸ್ತ್ವಿಂದ್ರ ಜೀವಾದ್ವಿನವಕಲ್ಪತಾಃ ಅಹಂಪ್ರಾಣಪದಾರ್ಥಶ್ಚ ಗುರ್ವಾದ್ಯಾದ್ವ್ಯಷ್ಟಕಲ್ಪಕಾಃ ಎಂಬ ಪ್ರಕಾಶಸಂಹಿತೆಯ ವಾಕ್ಯವು ಮೇಲಿನ ವಾಕ್ಯಕ್ಕೆ ಆಧಾರವೆಂದು ತಿಳಿಯಬೇಕು.

ಪ್ರವಹಮರುತಗೆ ಹನ್ನೆರಡು ಸೈಂ
ಧವದಿವಾಕರ ಧರ್ಮರಿಗೆ ದಶ
ನವಸುಕಲ್ಪವು ಮಿತ್ರರಿಂಗೆ ಶೇಷಶತಜನಕೆಂಟು ॥
ಕವಿಸನಕ ಸನಂದನ ಸನ
ತ್ಕುವರ ಮುನಿಗಳಿಗೇಳು ವರುಣನ
ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ॥೪೬॥

ಪದ್ಯಾರ್ಥ.--ಪ್ರವಹಮಾರುತಗೆ=ಪ್ರವಹವಾಯುವಿಗೆ, ಹನ್ನೆರಡು ೧೨ ಕಲ್ಪಗಳು, ಸೈಂಧವ=ಸಮುದ್ರದಲ್ಲಿ ಜನಿಸಿದ ಚಂದ್ರ, ದಿವಾಕರ = ಸೂರ್ಯ ಧರ್ಮ–ಯಮಧರ್ಮ ಇವರಿಗೆ, ದಶ=೧೦ ಕಲ್ಪಗಳು, ಮಿತ್ರರಿಗೆ–ಮಿತ್ರ, ತಾರೆ ಮೊದಲಾದವರಿಗೆ ಅಂದರೆ ಆ ಕಕ್ಷ್ಯದಲ್ಲಿ ಸೇರಿದವರಿಗೆ, ನವಸುಕಲ್ಪವು=೯ ಕಲ್ಪಗಳು ಶೇಷಶತಸ್ಥ ಜನಕೆ=ಉಕ್ತಶೇಷಶತರಿಗೆ ಎಂಟು=೮ ಕಲ್ಪಗಳು ಕವಿ=ಶುಕಾಚಾರ್ಯರು ಸನಕ ಸನಂದನ ಸನತ್ಕುಮಾರ ಮುನಿಗಳಿಗೆ=ಈ ಋಷಿಗಳಿಗೆ ಏಳು=೭ ಕಲ್ಪಸಾಧನವೂ ವರುಣನಯುವತಿ=ಗಂಗಾ ಪರ್ಜನ್ಯ ಮೊದಲಾಗಿ ಪುಷ್ಕರಗೆ- ಪುಷ್ಕರನವರಿವಿಗೂ ಇರುವ ಕಕ್ಷ್ಯದವರಿವಿಗೆ ಆರು ಕಲ್ಪದಲಿ=೬ ಕಲ್ಪಗಳಿಂದಲೂ ಮುಕ್ತಿಗೆ ಸಾಧನವು

ತಾತ್ಪರ್ಯ.-- "ಪ್ರವಹಸ್ತು ದ್ವಿಷಟ್ಕಲ್ಪೈಃಸೂರ್ಯಾ ದ್ವಾದಶಕಲ್ಪಕಾಃ || ಮಿತ್ರಾದೀನಾಂಚನವ ಭಿಸ್ತೂಕ್ತಶೇಷಗಣಸ್ಯತು | ಅಷ್ಟಭಿಃ ಸಪ್ತಭಿಃ ಕಲ್ಪೈಃ ಸನಕಾದಿಗಣಸ್ಯತು || ಷಡ್ಭಿಃ ಪರ್ಜನ್ಯಮಾರಭ್ಯ ಪುಷ್ಕರಾಂತಗಣಸ್ಯವೈ ||" ಎಂಬ ಪ್ರಕಾಶಸಂಹಿತೆಯ ವಾಕ್ಯದಿಂದ ಈ ಪದ್ಯಾರ್ಥವು ಹೀಗೆ ತಿಳಿಯಬೇಕು. ಪ್ರವಹವಾಯುವಿಗೆ ೧೨ ಕಲ್ಪಸಾಧನದಿಂದಲೂ, ಸೂರ್ಯ, ಚಂದ್ರ ಯಮ ಮೊದಲಾದವರಿಗೆ ೧೦ ಕಲ್ಪಗಳಿಂದಲೂ, ಮಿತ್ರತಾರೆ ಮೊದಲಾದವರಿಗೆ ೯ ಕಲ್ಪಗಳಿಂದಲೂ. ಹಿಂದೆ ಹೇಳಿದ ಮನು ಸೂರ್ಯ ಇಂದ್ರ, ಮೊದಲಾದ ಸೋಮಪಾನಾರ್ಹರಾದ ದೇವತೆಗಳು ೧೦೦ ಜನರ ಪೈಕಿ ಪ್ರಧಾನವಾಯು ಮೊದಲಾದ ೧೫ಜನದೇವತೆಗಳನ್ನು ಬಿಟ್ಟು ಉಳಿದವರು ೮೫ ದೇವತೆಗಳು. ಇವರಿಗೆ ಉಕ್ತಶೇಷಶತಸ್ಥರೆಂದು ಹೆಸರು. ಇವರಿಗೆ ೮ಕಲ್ಪ ಸಾಧನದಿಂದಲೂ, ಭಾರ್ಗವ, ಸನಕ, ಸನಂದನ ಸನತ್ಕುಮಾರ ಇವರುಗಳಿಗೆ ೭ಕಲ್ಪ ಸಾಧನದಿಂದಲೂ, ಗಂಗೆ ಪರ್ಜನ್ಯ ಮೊದಲು ಪುಷ್ಕರನವರೆಗು

ಇರುವ ದೇವತೆಗಳಿಗೆ 6 ಕಲ್ಪ ಸಾಧನದಿಂದಲೂ ಅಪರೋಕ್ಷವಾಗಿ ಮುಕ್ತಿ ಯಾಗುವುದೆಂಬ ಭಾವ.

ಐದು ಕರ್ಮಜಸುರರಿಗಾಜಾ
ನಾದಿಗಳಿಗೀರೆರಡು ಕಲ್ಪಾ
ರ್ಧಾಧಿಕತ್ರಯ ಗೋಪಿಕಾಸ್ತ್ರೀಯರಿಗೆ ಪಿತೃತ್ರಯವು ।
ಈ ದಿವೌಕಸಮನುಜ ಗಾಯಕ
ರೈದುವರು ಎರಡೊಂದು ಕಲ್ಪನ
ರಾಧಿಪರಿಗರೆತೃಣಗಳಿಗಪರೋಕ್ಷವಿರುತಿಹದು ॥೪೭॥

ಪದ್ಯಾರ್ಥ.—ಕರ್ಮಜಸುರರಿಗೆ=ಕರ್ಮದೇವತೆಗಳಿಗೆ, ಐದು ಕಲ್ಪಗಳಿಂದಲೂ, ಅಜಾನಾದಿಗಳಿಗೆ=ಆಜಾನಜ ದೇವತೆ ಮೊದಲಾದವರಿಗೆ, ಈರೆರಡುಕಲ್ಪ–4 ಕಲ್ಪಗಳಿಂದಲೂ, ಗೋಪಿಕಾಸ್ತ್ರೀಯರಿಗೆ–ಕೃಷ್ಣನ ಅಂಗಸಂಗವನ್ನು ಪಡೆದ ಗೋಪಿಕಾ ಸ್ತ್ರೀಯರಿಗೆ, ಅರ್ಧಾಧಿಕತ್ರಯ=ಮೂರುವರೆ ಕಲ್ಪಗಳಿಂದಲೂ, ಪಿತೃ–ಪಿತೃಗಣಗಳಿಗೆ, ತ್ರಯವು=ಮೂರು ಕಲ್ಪಗಳಿಂದಲೂ, ಈ ದಿವೌಕಸಮನುಜಗಾಯಕರು = ದೇವಗಂಧರ್ವರು, ಮನುಷ್ಯಗಂಧರ್ವರೂ, ಎರಡು=ಎರಡು ಕಲ್ಪಗಳಿಂದಲೂ, ಐದುವರು–ಅಪರೋಕ್ಷವನ್ನು ಹೊಂದುವರು. ನರಾಧಿಪರಿಗೆ–ಮನುಷ್ಯೋತ್ತಮರಿಗೆ, ಒಂದುಕಲ್ಪ=೧ ಕಲ್ಪ ಸಾಧನದಿಂದಲೂ, ತೃಣಗಳಿಗೆ=ತೃಣಜೀವರುಗಳಿಗೆ, ಅರೆ=ಅರ್ಧ ಕಲ್ಪಸಾಧನಗಳಿಂದಲೂ, ಅಪರೋಕ್ಷವಿರುತಿಹದು=ಅಪರೋಕ್ಷವಾಗುವದು.

ತಾತ್ಪರ್ಯ.—ಕರ್ಮದೇವತೆಗಳಿಗೆ 5 ಕಲ್ಪಗಳೂ, ಆಜಾನಜದೇವತೆಗಳಿಗೆ ೪ ಕಲ್ಪಗಳೂ, ಕೃಷ್ಣನ ಅಂಗಸಂಗವನ್ನು ಪಡೆದ ಗೋಪಿಕಾಸ್ತ್ರೀಯರಿಗೆ ೩ ॥ ಕಲ್ಪಗಳೂ, ಪಿತೃಗಣಕ್ಕೆ ೩ ಕಲ್ಪಗಳೂ, ದೇವಗಂಧರ್ವ, ಮನುಷ್ಯ ಗಂಧರ್ವರಿಗೆ ಎರಡು ಕಲ್ಪಗಳೂ, ಮನುಷ್ಯರಿಗೆ ೧ ಕಲ್ಪವೂ, ತೃಣ ಜೀವರಿಗೆ ಅರ್ಧ ಕಲ್ಪವೂ, ಸಾಧನಾನಂತರ ಅಪರೋಕ್ಷವಾಗುವುದು. ಇವುಗಳಿಗೆ ಆಧಾರ ವಾಕ್ಯಗಳು ಪ್ರಕಾಶಸಂಹಿತೆಯಲ್ಲಿ, “ ಕರ್ಮದೇವಾಃ ಪಂಚ ಕಲ್ಪಾಪರೋಕ್ಷಿಣಃ । ಚತುರ್ಭಿರಾಜಾನಜಾನಾಂಸಾರ್ಧ ಕಲ್ಪತ್ರಯೇಣಹಿ । ಕೃಷ್ಣಾಂಗ ಸಂಗ ಗೋಪೀನಾಂ ತ್ರಿಭಿಃ ಪಿತೃಗಣಸ್ಯತು

ಗಂಧರ್ವಾಣಾಂತು ಕಲ್ಯಾಭ್ಯಾಂ ಮರ್ತಾನಾಂತು ತಥೈಕತಃ ¦ ಅರ್ಧಕಲ್ಪಂ ತೃಣಾಂತಾನಾಂ ಯೋಗ್ಯಾನಾಂ ಹರಿದರ್ಶನೇ। ನಿಯಮೋಽಯಂ ಸರ್ವಕಲ್ಪೇಷ್ವೇವ ಮೇವನಚಾನ್ಯಥಾ। ಪ್ರೋಕ್ತೈಃ ಕಲ್ಪೈರ್ವಿಮುಚ್ಯಂತೇ ತಾವತ್ಕಲ್ಪೈಸ್ತುಸಾಧನಂ | ತತ್ಪೂರ್ವಮಪರೋಕ್ಷಸ್ಯ ಕರ್ತವ್ಯಮಿತಿ ನಿಶ್ಚಯಃ || ಎಂಬ ಪ್ರಮಾಣ ವಾಕ್ಯಗಳೇ ಇವುಗಳಿಗೆ ಆಧಾರವು. ಪದ್ಯಾರ್ಥವೇ ಶ್ಲೋಕಾರ್ಥವಾಗಿರುವುದು. ಕಡೆಯ ಭಾಗದ ಎರಡು ಶ್ಲೋಕದಲ್ಲಿ ವಿಶೇಷಾರ್ಥವುಂಟು. ಅದು ಯಾವುದೆಂದರೆ ಮೇಲೆ ಹೇಳಿದ ಕಲ್ಪ ಸಂಖ್ಯೆಯು ಬ್ರಹ್ಮಕಲ್ಪವೆಂದು ತಿಳಿಯಬೇಕು. ಒಬ್ಬೊಬ್ಬರಿಗೆ ಎಷ್ಟೆಷ್ಟು ಕಲ್ಪಸಾಧನ ಹೇಳಲ್ಪಟ್ಟಿದೆಯೋ ಅಷ್ಟಷ್ಟು ಕಲ್ಪಸಂಖ್ಯೆಗಳು ಅಪರೋಕ್ಷಾನಂತರ ಮುಕ್ತಿಗೋಸ್ಕರ ಸಾಧನ ಮಾಡಬೇಕು. ಯಾರುಯಾರಿಗೆ ಎಷ್ಟೆಷ್ಟು ಕಲ್ಪಸಾಧನವೆಂದು ಹೇಳಲ್ಪಟ್ಟಿದೆಯೋ ಅಷ್ಟಷ್ಟು ಕಲ್ಪ ಅಪರೋಕ್ಷಕ್ಕೆ ಪೂರ್ವದಲ್ಲಿ ಮಾಡಿದನಂತರ ಅಪರೋಕ್ಷವಾಗುವುದು. ಉದಾಹರಣ ಇಂದ್ರದೇವರಿಗೆ ೨೦ ಕಲ್ಪವೆಂದು ಹೇಳಿದೆ. ಅಪರೋಕ್ಷಕ್ಕೆ ಪೂರ್ವದಲ್ಲ ೨೦ ಕಲ್ಪಸಾಧನ ಮಾಡಿದಮೇಲೆ ಅಪರೋಕ್ಷವಾಗುವುದು, ಅಪರೋಕ್ಷಾನಂತರ ಮುಕ್ತಿಗಾಗಿಯೂ ೨೦ ಕಲ್ಪ ಸಾಧನ ಮಾಡಬೇಕೆಂದು ತಾತ್ಪರ್ಯ. ಇದರಂತೆಯೇ ಎಲ್ಲರಿಗೂ ಸಾಧನವಾಗಬೇಕೆಂಬ ತಾತ್ಪರ್ಯ.

**ದೀಪಗಳನನುಸರಿಸಿ ದೀಪ್ತಿಯು**
**ವ್ಯಾಪಿಸಿಮಹಾತಿಮಿರ ಕಳೆದು ಪ**
**ರೋಪಕಾರವ ಮಾಳ್ಪತೆರದಂದದಲಿ ಪರಮಾತ್ಮ ।**
**ಆಪಯೋಜಾಸನರೊಳಿದ್ದು ಸ್ವ**
**ರೂಪಶಕ್ತಿಯವ್ಯಕ್ತಿಗೈಸುತ**
**ತಾ ಪೊಳೆವನದರಂತೆ ಚೇಷ್ಟೆಯಮಾಡಿಮಾಡಿಸುತ ॥೪೮॥**

ಪದ್ಯಾರ್ಥ.—ದೀಪಗಳನನುಸರಿಸಿ–ಮನೆಗಳಲ್ಲಿ ಇಟ್ಟಿರುವ ದೀಪಗಳ ಯೋಗ್ಯತೆಗಳನ್ನು ಅನುಸರಿಸಿ, ದೀಪ್ತಿಯು–ಪ್ರಕಾಶವು, ವ್ಯಾಪಿಸಿ–ಮನೆಯಲ್ಲೆಲ್ಲಾ ವ್ಯಾಪಿಸಿಕೊಂಡು, ಮಹಾತಿಮಿರವ=ಬಲವಾದ ಕಗ್ಗತ್ತಲೆಯನ್ನು ಕಳೆದು = ಪರಿಹರಿಸಿ, ಪರೋಪಕಾರವ ಮಾಳ್ಪತೆರದಂದದಲಿ, ಪರಮಾತ್ಮ = ಶ್ರೀಪರಮಾತ್ಮನು, ಅಪಯೋಜಾಸನರೊಳಿದ್ದು = ಬ್ರಹ್ಮದೇವರು

ಮೊದಲಾದ ಸಕಲರಲ್ಲೂ ಇದ್ದು, ಸ್ವರೂಪ ಶಕ್ತಿಯ ವ್ಯಕ್ತಿಗೈಸುತ=ಅವ ರವರ ಯೋಗ್ಯತಾನುಸಾರವಾಗಿ ಶಕ್ತಿಯನ್ನು ವ್ಯಕ್ತಿ ಮಾಡಿಸುತ್ತಾ, ಅವ ರಂತೆ-ಆಯಾ ಪ್ರಾಣಿಗಳಂತೆ, ಚೇಷ್ಟೆಯ=ಕರ್ಮಗಳನ್ನು ಮಾಡಿ ಮಾಡಿ ಸುತ್ತಾ, ತಾ-ತಾನು (ಪರಮಾತ್ಮನು) ಪೊಳೆವನು – ಪ್ರಕಾಶಮಾನನಾಗಿ ಶೋಭಿಸುವನು.

ತಾತ್ಪರ್ಯ.—ಮನೆಯಲ್ಲಿರುವ ದೀಪಗಳು ೪-೫ ಬತ್ತಿಗಳನ್ನು ಸೇರಿಸಿ ಹಾಕಿ ದೊಡ್ಡದ ದ ದೀಪವನ್ನಿಟ್ಟರೆ ಪ್ರಕಾಶ ಅಧಿಕವಾಗಿಯೂ, ಸಣ್ಣದಾದ ಒಂದೇ ಬತ್ತಿ ಹಾಕಿ ಸಣ್ಣ ದೀಪವನ್ನಿಟ್ಟರೆ ಅಲ್ಪ ಪ್ರಕಾಶಧಿಂದಲೂ ಹೇಗೆ ಶೋಭಿಸುವುದೋ ಹಾಗೆ ಶ್ರೀಪರಮಾತ್ಮನು ಬ್ರಹ್ಮಾದಿ ದೇವತೆಗಳು ಮೊದ ಲು ತೃಣಾಂತ ಜೀವರಲ್ಲಿದ್ದು ಅವರವರು ಮಾಡಬೇಕಾದ ಕರ್ಮಗಳನ್ನು ತಾನು ಮಾಡಿ ಅವರಿಂದಲೂ ಮಾಡಿಸುತ್ತಾ ಅವರವರ ಯೋಗ್ಯತಾನುಸಾರ ವಾಗಿ ಸ್ವರೂಪ ಶಕ್ತಿಯನ್ನು ವ್ಯಕ್ತಿಪಡಿಸುತ್ತಾ ದೀಪದ ಯೋಗ್ಯತಾನುಸಾ ರವಾಗಿ ಪ್ರಕಾಶವು ಹೆಚ್ಚು ಕಮ್ಮಿಯಾಗಿ ಕತ್ತಲು ಪರಿಹಾರ ಮಾಡಿ ಅಲ್ಲಲ್ಲಿ ರುವ ಪದಾರ್ಥಗಳನ್ನು ವ್ಯಕ್ತಿಮಾಡಿ ಕೊಡುವಂತೆ ಬ್ರಹ್ಮಾದಿಗಳಲ್ಲಿ ಅತ್ಯಂತ ಪ್ರಕಾಶಮಾನನಾಗಿ ಪೂರ್ಣ ಜ್ಞಾನ ಭಕ್ತ್ಯಾದಿಗಳಿಂದ ಅವರ ಸ್ವರೂಪ ಶಕ್ತಿಯನ್ನೂ, ತೃಣಾಂತ ಜೀವರಲ್ಲಿ ಅಲ್ಪ ಪ್ರಕಾಶದಿಂದ ಅಲ್ಪ ಜ್ಞಾನಾದಿ ಗಳಿಂದ ಅವರ ಸ್ವರೂಪ ಶಕ್ತಿಯನ್ನೂ ವ್ಯಕ್ತಿಪಡಿಸಿ, ತನ್ನ ಪ್ರಕಾಶವನ್ನೂ ಸಹ ಕೆಲವರಲ್ಲಿ ಅಧಿಕ ಪ್ರಕಾಶದಿಂದಲೂ ಕೆಲವರಲ್ಲಿ ಅಲ್ಪ ಪ್ರಕಾಶ ದಿಂದಲೂ ಪ್ರಕಾಶಗೊಳಿಸುವನು.

ಸ್ವೋದರಸ್ಥಿತ ಪ್ರಾಣರುದ್ರೇಂ
ದ್ರಾದಿಸುರರಿಗೆ ದೇಹಗಳ ಕೊ
ಟ್ಟಾದರದಲವರವರ ಸೇವೆಯ ಕೊಂಬನನವರತ ||
ಮೋದಭೋಧದಯಾಬ್ಧಿ ತನ್ನ
ವರಾಧಿರೋಗವಕಳೆದು ಮಹದಪ
ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ ||೪||

ಪದ್ಯಾರ್ಥ.—ಸ್ವೋದರಸ್ಥಿತ=ಸೃಷ್ಟಿಗೆ ಪೂರ್ವದಲ್ಲಿ ತನ್ನ ಉದರ ದಲ್ಲಿ ವಾಸವಾಗಿರುವ, ಪ್ರಾಣ-ವಾಯುದೇವರು, ಖುದ್ರ-ಖುದ್ರಧೇವರು,

ಇಂದ್ರಾದಿ- ಇಂದ್ರ ಮೊದಲಾದ, ಸುರರಿಗೆ=ದೇವತೆಗಳಿಗೆ, ದೇಹಗಳ ಕೊಟ್ಟು, ಆದರದಲಿ ಅವರವರ ಸೇವೆಯ=ಸೇವೆಯನ್ನು, ಅನವರತ = ಸರ್ವಕಾಲದಲ್ಲೂ, ಕೊಂಬನು=ಸ್ವೀಕರಿಸುವನು. ಮೋದಬೋಧದಯಾಬ್ಧಿ- ಮೋದ-ಆನಂದವು, ಬೋಧ-ಜ್ಞಾನವೂ ಇವುಗಳೇ ಸ್ವರೂಪವಾಗುಳ್ಳ, ದಯಾಬ್ಧಿ-ದಯಾ ಸಮುದ್ರನಾದ ಶ್ರೀಹರಿಯು, ತನ್ನವರ=ತನ್ನ ಭಕ್ತರ, ಆಧಿ-ಮನೋವ್ಯಾಧಿಯನ್ನೂ, ರೋಗವ=ಶರೀರ ಸಂಬಂಧವಾದ ರೋಗಗಳನ್ನು, ಕಳೆವ=ಪರಿಹರಿಸಿ, ಸತತ=ಸರ್ವದಾ, ಸ್ಮರಿಸುವರ-ತನ್ನನ್ನು ಸ್ಮರಿಸುವವರ ಮಹಾಪರಾಧಗಳ ನೋಡದಲೆ ಸಲಹುವನು.

ತಾತ್ಪರ್ಯ.—ಪ್ರಳಯ ಕಾಲದಲ್ಲಿ ತನ್ನ ಉದರದಲ್ಲಿ ವಾಸಮಾಡುತ್ತಿರುವ ವಾಯುದೇವರು, ರುದ್ರದೇವರು, ಇಂದ್ರದೇವರು ಮೊದಲಾದ ದೇವತೆಗಳಿಗೆ ಶರೀರಗಳನ್ನು ಕೊಟ್ಟು ಆದರದಿಂದ ಅವರವರು ಮಾಡುವ ಸೇವೆಯನ್ನು ಸರ್ವದಾ ಸ್ವೀಕರಿಸಿ ಜ್ಞಾನಾನಂದ ಸ್ವರೂಪನಾದ, ದಯಾಸಮುದ್ರನಾದ ಶ್ರೀಹರಿಯು ತನ್ನ ಭಕ್ತರ ಆಧಿವ್ಯಾಧಿಗಳನ್ನು ಪರಿಹರಿಸಿ, ತನ್ನನ್ನ ಸರ್ವದಾ ಸ್ಮರಿಸುತ್ತಿರುವವರು ಏನು ಅಪರಾಧಗಳನ್ನು ಮಾಡಿದರೂ ಅವುಗಳನ್ನು ನೋಡದೇ ಅಂದರೆ ಲಕ್ಷೀಕರಿಸದೆ, ಅವರುಗಳನ್ನು ರಕ್ಷಿಸುವನು.

ಪ್ರತಿಪ್ರತಿ ಕಲ್ಪದಲಿ ಸೃಷ್ಟಿ
ಸ್ಥಿತಿಲಯ ಮಾಡುತಲೆ ಮೋದಿಪ
ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ ||
ಘೃತವೆ ಮೃತ್ಯುಂಜಯನೆನಿಸಿ ದೇ
ವತೆಗಳೆಂಬುಪಸೇಚನರು ಶ್ರೀ
ಪತಿಗೆ ಮೂಜಗವೆಲ್ಲವೋದನತಿಥಿಯೆನಿಸಿಕೊಂಬ ||೩೦||

ಪದ್ಯಾರ್ಥ.—ಪ್ರತಿ ಪ್ರತೀಕಲ್ಪದಲಿ = ಪ್ರತಿಯೊಂದು ಕಲ್ಪದಲ್ಲೂ, ಸೃಷ್ಟಿ, ಸ್ಥಿತಿ, ಲಯ ಮಾಡುತಲೆ, ಸೃಷ್ಟಿ, ರಕ್ಷಣೆ, ಸಂಹಾರ ಇವುಗಳನ್ನು ಮಾಡುತ್ತಾ, ಮೋದಿಪ-ಆನಂದಪಡುವನು. ಚತುರಮುಖಪವಮಾನರ=ಬ್ರಹ್ಮವಾಯುಗಳನ್ನು ಅನ್ನವಮಾಡಿ, ಭುಂಜಿಸುವ=ಭೋಜನ ಮಾಡುವನು, ಮೃತ್ಯುಂಜಯನು-ರುದ್ರದೇವರು, ಘೃತವೆನಿಸಿ-ತುಪ್ಪವೆನಿಸುವರು,

ದೇವತೆಗಳೆಂಬುಪಸೇಚನರು= ದೇವತೆಗಳೆಂಬುವರೆಲ್ಲರು ಶಾಕಪಾಕಾದಿ ವ್ಯಂಜನ ಪದಾರ್ಥಗಳೆನಿಸುವರು, ಶ್ರೀಪತಿಗೆ=ಲಕ್ಷ್ಮೀಪತಿಯಾದ ಶ್ರೀಹರಿಗೆ, ಮೂಜಗವೆಲ್ಲ=ಮೂರು ಲೋಕವೂ ಅಂದರೆ ಮೂರು ಲೋಕದಲ್ಲಿರುವ ಎಲ್ಲ ಪ್ರಾಣಿಗಳೂ ಓದನ – ಅನ್ನವೆನಿಸುವರು. ಶ್ರೀಹರಿಯು ಅತಿಥಿ ಎನಿಸಿಕೊಂಬನು.

ತಾತ್ಪರ್ಯ.—ಶ್ರೀಪರಮಾತ್ಮನು ಪ್ರತಿಯೊಂದು ಕಲ್ಪದಲ್ಲೂ ಬ್ರಹ್ಮದೇವರಲ್ಲಿ ಬ್ರಹ್ಮನಾಮಕನಾಗಿದ್ದು ಸೃಷ್ಟಿಯನ್ನೂ, ವಿಷ್ಣುನಾಮಕನಾಗಿ ರಕ್ಷಣೆಯನ್ನು ರುದ್ರದೇವರಲ್ಲಿ ರುದ್ರ ರೂಪಿಯಾಗಿದ್ದು ಸಂಹಾರವನ್ನು ಮಾಡುತ್ತಾ ಆನಂದಪಡುತ್ತಿರುವನು. ಪ್ರತಿ ಪ್ರಳಯ ಕಾಲದಲ್ಲೂ ಪರಮಾತ್ಮನಿಗೆ ಬ್ರಹ್ಮ ವಾಯುಗಳು ಅನ್ನವಾಗುವರು. ರುದ್ರದೇವರು ತುಪ್ಪವಾಗುವರು. ಮಿಕ್ಕ ದೇವತೆಗಳು ವ್ಯಂಜನರಾಗುವರು. ಹೀಗೆ ಮೂರು ಲೋಕದಲ್ಲಿರುವವರು ಭಕ್ಷ್ಯಭೋಜ್ಯಾದಿ ರೂಪವಾದ ಅನ್ನವೆಂತಲೂ, ಪರಮಾತ್ಮನು ಅತಿಥಿ ಎಂತಲೂ ಭಾವಿಸಬೇಕು.

ಅವತಾರಿಕೆ.—ಶ್ರೀಹರಿಯು ಸರ್ವ ಪ್ರಾಣಿಗಳ ದೇಹಗತನಾಗಿದ್ದು ಭೋಜನ ಮಾಡುವುದರಿಂದ ಜೀವರು ತೃಪ್ತರಾಗುವರೆಂದು ಸದೃಷ್ಟಾಂತವಾಗಿ ಹೇಳುತ್ತಾರೆ.

ಗರ್ಭಿಣಿಸ್ತ್ರೀ ಉಂಡಭೋಜನ
ಗರ್ಭಗತಶಿಶು ಉಂಬತೆರದಲಿ
ನಿರ್ಭಯನು ತಾನುಂಡುಣಿಸುವನು ಸರ್ವಜೀವರಿಗೆ ||
ನಿರ್ಬಲತಿಪರಮಾಣುಜೀವರಿ
ಗಬ್ಬುವದೆ ಸ್ಥೂಲಾನ್ನ ಭೋಜನ
ವರ್ಭಕರು ಪೇಳುವರು ಕೋವಿದರಿದನೊಡಂಬಡರು ||೩೦||

ಪದ್ಯಾರ್ಥ.—ಗರ್ಭಿಣಿ ಸ್ತ್ರೀ ಉಂಡ ಭೋಜನ, ಗರ್ಭಗತಶಿಶುವುಂಬತೆರದಲಿ=ಬಸುರಾದಹೆಂಗಸು ಭೋಜನ ಮಾಡಿದ ಅನ್ನವು, ಆಕೆಯ ಗರ್ಭದಲ್ಲಿರುವ ಮಗುವಿಗೆ ಬಾಯಿಗೆ ನಾಡೀ ದ್ವಾರಾ ಸೇರುವುದರಿಂದ ಮಗು ತೃಪ್ತಿಪಡುವಂತೆ ನಿರ್ಭಯನು=ಭಯರಹಿತನಾದ ಶ್ರೀಹರಿಯು, ತಾನುಂ

ಡು=ತಾನು ಭುಂಜಿಸಿ, ಸರ್ವ ಜೀವರಿಗೆ ಉಣಿಸುವನು. ನಿರ್ಬಲ=ಅತ್ಯಂತ ಬಲಹೀನರಾದ ಅತಿ ಪರಮಾಣು ಜೀವರಿಗೆ, ಸ್ಥೂಲಾನ್ನ ಭೋಜನ=ಭಕ್ಷ್ಯ ಭೋಜ್ಯಾದಿಗಳಿಂದ ಕೂಡಿದ ಈ ಭೋಜನವು, ಅಬ್ಬುವದೆ-ಮಾಡಲು ಸಾಧ್ಯವೆ ? ಪೇಳುವರು=ಸಾಧ್ಯವೆಂದು ಹೇಳುವವರು, ಅರ್ಭಕರು=ಅಲ್ಪ ಬುದ್ಧಿಯುಳ್ಳ ಹುಡುಗರೆನಿಸುವರು. ಇದನು=ಜೀವರು ಭುಂಜಿಸುವರೆಂಬುವುದನ್ನು, ಕೋವಿದರು=ತಿಳಿದವರು, ಒಡಂಬಡರು=ಒಪ್ಪಿಕೊಳ್ಳುವದಿಲ್ಲ.

ತಾತ್ಪರ್ಯ.—ಗರ್ಭಿಣಿ ಸ್ತ್ರೀಯರ ಗರ್ಭದಲ್ಲಿರುವ ಮಗುವಿಗೆ "ಕಲಿಲಂತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಂ || ದಶಾಹೇನತುಕರ್ಕಂಧುಃ ಪೇಶ್ಯಂಡಂ ವಾ ತತಃಪರಂ || ಮಾಸೇನತು ಶಿರೋದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗ ವಿಗ್ರಹಃ | ನಖರೋಮಾಸ್ಥಿಚರ್ಮಾಣಿ ಲಿಂಗಚ್ಛಿದ್ರೋದ್ಭವಸ್ತ್ರಿಭಿಃ || ಚತುರ್ಭಿರ್ಧಾತವಸ್ಸಪ್ತ ಪಂಚಭಿಃ ಕ್ಷುತ್ತೃಡುದ್ಭವಃ ಎಂಬ ತೃತೀಯ ಸ್ಕಂಧ ಭಾಗವತ ವಚನದಿಂದ, ಒಂದು ರಾತ್ರಿಯಲ್ಲಿ ಶುಕ್ರಶೋಣಿತಮಿಶ್ರವಾಗುವುದು. ೫ ದಿವಸಗಳಲ್ಲಿ ನೊರೆಯಂತೆ ಆಗುವುದು. ೧೦ ದಿವಸಗಳಲ್ಲಿ ಬೋರೆ ಹಣ್ಣಿನಂತೆ ಘಟ್ಟಿಯಾಗುವುದು. ೧ ತಿಂಗಳಿಗೆ ತಲೆಯೂ, ಎರಡನೆಯ ತಿಂಗಳಲ್ಲಿ ಕೈ ಕಾಲು ಮೊದಲಾದ ಅಂಗಗಳೂ, ಮೂರನೆಯ ತಿಂಗಳಲ್ಲಿ ನಖ, ರೋಮ, ಅಸ್ಥಿ, ಚರ್ಮ, ಲಿಂಗ ಛಿದ್ರ ಮೊದಲಾದವು ಹುಟ್ಟುವುವು. ನಾಲ್ಕನೆಯ ತಿಂಗಳಲ್ಲಿ, ರಕ್ತ ಮಾಂಸ, ಮೇದಸ್ ಮೊದಲಾದ ಸಪ್ತ ಧಾತುಗಳು ಹುಟ್ಟುವವು. ೫ನೆಯ ತಿಂಗಳಲ್ಲಿ ಹಸಿವು ಹುಟ್ಟುವದೆಂದು ಹೇಳಿರುವರು. ಹಸಿವು ಹುಟ್ಟಿದಮೇಲೆ ಮತ್ತೂ ೪ ತಿಂಗಳು ಗರ್ಭದಲ್ಲಿದ್ದು ಅನ್ನವಿಲ್ಲದೆ ಬದುಕುವುದು ಹೇಗೆಂದರೆ; " ಮಾತುರ್ಜಗ್ಧಾನ್ನಪಾನಾದ್ಯೈರೇಧತ್ಧಾತು ರಸಮ್ಮತಃ ' ತಾಯಿಯು ಭೋಜನ ಪಾನಮಾಡಿದ ಅನ್ನಪಾನಗಳಿಂದ ತೃಪ್ತನಾಗಿ ಗರ್ಭದಲ್ಲಿ ವೃದ್ಧಿ ಹೊಂದುವನು ಎಂದು ಹೇಳಿರುವರು; ಆ ಉಪಮಾನವನ್ನು ಇಲ್ಲಿ ಕೊಟ್ಟಿರುತ್ತಾರೆ, ಗರ್ಭಿಣಿಯು ಉಂಡ ಅನ್ನದಿಂದ ಗರ್ಭದಲ್ಲಿರುವ ಮಗು ಹೇಗೆ ಉಂಡು ತೃಪ್ತಿ ಪಡುವುದೋ ಅದರಂತೆಯೇ ಪರಮಾತ್ಮನು, ಸರ್ವ ಪ್ರಾಣಿಗತನಾಗಿ ತಾನಿದ್ದು ಉಂಡು ಉಣಿಸುವನು. ಹಾಗಿಲ್ಲದಿದ್ದರೆ ಕೇವಲ ಪರಮಾಣು ಸ್ವರೂಪನಾದ ಜೀವನು ಮಹತ್ತರವಾದ ಭೋಜನ ಮಾಡಲು ಸಾಧ್ಯವೇ? ಕೇವಲ ಅಜ್ಞಾನಿಗಳಾದ ಹುಡುಗರಂತೆ

ಕಾಲದಲ್ಲೂ, ಉಪಾಸನೆಯಗೈದು - ಉಪಾಸನೆಯನ್ನು ಮಾಡಿ, ಮುಕ್ತ ರಾಗಿಹರು.

ತಾತ್ಪರ್ಯ.—ಶ್ರೀಪರಮಾತ್ಮನು, ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆ ಹಸಿವು ಬಾಯಾರಿಕೆ, ಭಯ, ಶೋಕ, ಮೋಹ, ಆಯಾಸ, ವಿಸ್ಮೃತಿ, ಮಾತ್ಸರ್ಯ, ಮದ, ಪುಣ್ಯ, ಪಾಪ ಮೊದಲಾದ ಯಾವ ದೋಷವೂ ಇಲ್ಲದ ವನೆಂದು ತಿಳಿದು, ಬ್ರಹ್ಮ ಖುದ್ರಾದಿ ದೇವತೆಗಳು ಸರ್ವ ಕಾಲದಲ್ಲೂ ಉ ಪಾಸನೆಯನ್ನು ಮಾಡಿ ಮುಕ್ತಿ ಹೊಂದುವರು.

ಅವತಾರಿಕೆ.—ಬ್ರಹ್ಮ ಕಲ್ಪದ ಕಾಲವನ್ನು ಹೇಳುವುದಕ್ಕಾಗಿ ಈ ಈ ಪದ್ಯ ಮೊದಲು ೬೧ನೆಯ ಪದ್ಯದವರೆಗೂ ಪರಮ ಸೂಕ್ಷ್ಮಕಾಲ ಮೊ ದಲು ದ್ವಿಪರಾರ್ಧದವರೆಗೂ ಕಾಲ ನಿರ್ಣಯವನ್ನು ಹೇಳುತ್ತಾರೆ.

ಪರಮ ಸೂಕ್ಷ್ಮ ಕ್ಷಣವೈದು ತೃಟಿ
ಕರೆಸುವದು ಐವತ್ತು ತೃಟಿ ಲವ
ವೆರಡುಲವವು ನಿಮೇಷ ನಿಮಿಷಗಳೆಂಟು ಮಾತ್ರಯುಗ ||
ಗುರುದಶ ಪ್ರಾಣಾರು ಪಳ ಹ
ನ್ನೆರಡು ಬಾಣವು ಘಟಿಕತ್ರಿಶಂತಿ
ಇರುಳು ಹಗಲರವತ್ತು ಘಟಿಕಗಳಹೋರಾತ್ರಿಗಳು ||೫೬||

ಪದ್ಯಾರ್ಥ.—ಪರಮಸೂಕ್ಷ್ಮ - ಪರಮ ಸೂಕ್ಷ್ಮ ಕಾಲವು, ಕ್ಷಣ ವು=ಕ್ಷಣವೆನಿಸುವುದು, ಕ್ಷಣವೈದುತೃಟಿ=೫ ಕ್ಷಣಕಾಲವಾದರೆ ೧ ತೃಟಿಕಾ ಲವೆನಿಸುವದು. ಐವತ್ತುತೃಟಿಲವ=೫೦ ತೃಟಿಕಾಲವಾದರೆ ೧ ಲವವೆಂದು ಕರೆಸುವುದು. ೨ ಲವನಿಮೇಷವು=೨ ಲವ ಕಾಲವಾದರೆ ೧ ನಿಮೇಷವಾ ಗುವುದು. ನಿಮಿಷಗಳೆಂಟು ಮಾತ್ರ-೮ ನಿಮಿಷ ಕಾಲವಾದರೆ ೧ ಮಾತ್ರ ಕಾಲವಾಗುವುದು. ಮಾತ್ರಯುಗ-೨ ಮಾತ್ರಗಳ ಕಾಲವಾದರೆ ೧ ಗುರು ಕಾಲವಾಗುವುದು. ಗುರುದಶಪ್ರಾಣ=ಗುರುಕಾಲವು ೧೦ ಆದರೆ ೧ ಪ್ರಾಣ ಕಾಲವಾಗುವುದು. ಪ್ರಾಣಾರುಪಳವು=೬ ಪ್ರಾಣಕಾಲವಾದರೆ ೧ ಪಳವೆನಿ ಸುವುದು. ಪಳವು ಹನ್ನೆರಡುಬಾಣವು ಘಟಿಕ=ಬಾಣ ಸಂಖ್ಯೆ ಎಂದರೆ ೫ ಎಂದರ್ಥ. ೧೨×೫-೬೦= ಹೀಗೆ ೧೨ ಬಾಣ ೬೦ ಪಳಗಳಾದರೆ ಒಂದು

ಘಟಿಕ-೧ಘಳಿಗೆಯ ಕಾಲವು. ಘಟಿಕೆತ್ರಿಂಶತಿ ಇದುಳು ಹಗಲು=ಘಳಿಗೆ ಗಳು ೩೦ ಆದರೆ ೧ ಹಗಲು ಮತ್ತು ೩೦ ಆದರೆ ೧ ರಾತ್ರಿ, ಹೀಗೆ, ಅರವತ್ತು ಘಳಿಗೆಗಳಹೋರಾತ್ರಿಗಳು=೬೦ ಘಳಿಗೆಗಳಾದರೆ ಹಗಲೂ ರಾತ್ರಿಗಳಾಗುವುವು.

ಈ ದಿವಾರಾತ್ರಿಗಳೆರಡು ಹದಿ
ನೈದು ಪಕ್ಷಗಳೆರಡು ಮಾಸಗ
ಳಾದಪವು ಮಾಸದ್ವಯವೆ ಋತು ಋತುತ್ರಯುಗಳೆನಯನ ||
ಐದುವವು ಅಯನದ್ವಯಾಬ್ದ ಕೃ
ತಾದಿ ಯುಗಗಳು ದೇವಮಾನದಿ
ದ್ವಾದಶ ಸಹಸ್ರವರ್ಷಗಳಹವದನು ಪೇಳುವೆನು ||೫೭||

ಪದ್ಯಾರ್ಥ.—ಈ ದಿವರಾತ್ರಿಗಳೆರಡು=ಮೇಲೆ ಹೇಳಿದಂತೆ ಹಗಲೂ ರಾತ್ರಿಗಳೆರಡೂ, ಹದಿನೈದುಪಕ್ಷ=೧೫ ಆದರೆ ಒಂದು ಪಕ್ಷವೆನಿಸುವುದು, ಪಕ್ಷಗಳೆರಡು ಮಾಸಗಳಾದಪವು=೨ ಪಕ್ಷಗಳಾದರೆ ಒಂದು ಮಾಸವು ಆಗುವುದು. ಮಾಸದ್ವಯವೆಋತು-೨ ತಿಂಗಳುಗಳಾದರೆ ಒಂದು ಋತುವೆನಿಸುವುದು. ಋತುತ್ರಯಗಳಯನ-೩ ಋತುಗಳಾದರೆ ಒಂದು ಆಯನವೆನಿಸುವುದು. ಆಯನದ್ವಯವು-೨ ಆಯನಗಳು, ಅಬ್ದ ಐದುವದು-೧ ವರ್ಷವೆನಿಸುವುದು. ಕೃತಾದಿಯುಗಗಳ=ಕೃತ, ತ್ರೇತಾ, ದ್ವಾಪರ, ಕಲಿ, ಎಂಬ ೪ ಯುಗಗಳಾಗಬೇಕಾದರೆ, ದೇವಮಾನದಿ=ದೇವತಾಮಾನ ವರ್ಷಗಳಿಂದ, ದ್ವಾದಶಸಹಸ್ರವರ್ಷಗಳಹವು=೧೨ ಸಹಸ್ರ ವರ್ಷಗಳಾಗುವುವು ಅದನುಪೇಳುವೆನು=ದೇವಮಾನ ವರ್ಷಗಳ ಲಕ್ಷಣವನ್ನೂ ಒಂದೊಂದು ಯುಗದ ಕಾಲವನ್ನೂ ವಿವರವಾಗಿ ಹೇಳುವೆನು.

ಚತುಸ್ಸಾವಿರದೆಂಟುನೂರವು
ಕೃತಯುಗಕೆ ತ್ರಿಸಹಸ್ರಸಲೆ ಷಟ್
ಶತವು ತ್ರೈತೆಗೆ ದ್ವಾಪರಕೆ ದ್ವಿಸಹಸ್ರಸಾನೂರು ।
ದಿತಿಜಪತಿ ಕಲಿಯುಗಕೆ ಸಾವಿರ
ಶತಗಳದ್ವಯಕೂಡಿ ಈ ದೇ
ವತೆಗಳಿಗೆ ಹನ್ನೆರಡುಸಾವಿರವಹವು ವರುಷಗಳು ||೫೮||

ಪದ್ಯಾರ್ಥ.— ಚತುಸ್ಸಾವಿರದೆಂಟುನೂರು- ೪ ಸಾವಿರದ ೮ ನೂರು

ಅವುಕೃತಯುಗಕೆ=ಕೃತಯುಗಕ್ಕೆ ಈಸಂಖ್ಯೆಗಳ ವರ್ಷಗಳಾಗಬೇಕೆಂದರ್ಥ ತ್ರೇತೆಗೆ-ತ್ರೇತಾಯುಗಕ್ಕೆ, ತ್ರಿಸಹಸ್ರಸಲೆಷಟ್=೩ ಸಾವಿರದ೬ನೂರು ವರ್ಷಗಳಾಗಬೇಕು. ದ್ವಾಪರಕೆ-ದ್ವಾಪರಯುಗಕ್ಕೆ, ದ್ವಿಸಹಸ್ರನಾನೂರು=೨ಸಾವಿರದನಾನೂರುವರ್ಷಗಳು, ದಿವಿಜಪತಿಕಲಿಯುಗಕೆ-ದೈತ್ಯರಾಜನಾದ ಕಲಿಯುಗಕ್ಕೆ, ಸಾವಿರಶತಳದ್ವಯ – ೧ ಸಾವಿರದ ೨ ನೂರು ವರ್ಷಗಳು, ಕೂಡಿ=ಈ ಎಲ್ಲಾ ವರ್ಷಗಳನ್ನೂ ಒಟ್ಟುಗೂಡಿಸಿದರೆ, ದೇವತೆಗಳಿಗೆ-ದೇವಮಾನದಿಂದ ಹನ್ನೆರಡುಸಾವಿರ ವರ್ಷಗಳು, ಅಹವು=ಆಗುವುವು.

ಅವತಾರಿಕೆ.—ಪ್ರತಿ ಯುಗದ ಮನುಷ್ಯ ಮಾನದ ವರ್ಷಗಳನ್ನು ಹೇಳುತ್ತಾರೆ.—

ಪ್ರಥಮಯುಗಕೇಳಧಿಕವರೆ ವಿಂ
ಶತಿಸಲಕ್ಷಾಷ್ಟೋತ್ತರ ಮೇಲೆ ವಿಂ
ಶತಿ ಸಹಸ್ರ ಮನುಷ್ಯಮಾನಾಬ್ಧಗಳು ಷಣ್ಣವತೀ ||
ಮಿತ ಸಹಸ್ರದ ಲಕ್ಷ ದ್ವಾದಶ
ದ್ವಿತೀಯ ತೃತಿಯಕೆ ಎಂಟುಲಕ್ಷದ
ಚತುಷಷ್ಟಿ ಸಹಸ್ರಕಲಿಗಿರದರರ್ಥ ಚಿಂತಿಪುದು ||೫೯||

ಪದ್ಯಾರ್ಥ.—ಪ್ರಥಮುಯುಗಕೆ=ಕೃತಯುಗಕ್ಕೆ, ಏಳಧಿಕವರೆವಿಂಶತಿಲಕ್ಷ=ಏಳು ಹೆಚ್ಚಾದ ೨೦ರಲ್ಲಿ ಅರ್ಧ ೧೦ ಲಕ್ಷ = ೧೭ಲಕ್ಷವೆಂದರ್ಥ, ಅಷ್ಟೋತ್ತರ ಮೇಲೆ ವಿಂಶತಿಸಹಸ್ರ-೮ ಹೆಚ್ಚಿನ ಮೇಲೆ ೨೦ಸಹಸ್ರ ಅಂದರೆ ೨೮ ಸಹಸ್ರವೆಂದರ್ಥ. ಅಂತು ಮನುಷ್ಯಮಾನಾಬ್ಧಗಳು=ಮನುಷ್ಯಮಾನ ವರ್ಷಗಳು ೧೭ ಲಕ್ಷದ ೨೮ ಸಾವಿರ ವರ್ಷಗಳೆಂದರ್ಥ. ದ್ವಿತೀಯ=ಎರಡನೆಯ ತ್ರೇತಾಯುಗಕ್ಕೆ. ಲಕ್ಷದ್ವಾದಶ=೧೨ ಲಕ್ಷದ, ಷಣ್ಣವತಿಮಿತಸಹಸ್ರ-೯೬ ಸಹಸ್ರ, ಒಟ್ಟು ೧೨ ಲಕ್ಷದ ೯೬ ಸಾವಿರ ವರ್ಷಗಳೆಂದರ್ಥ, ತೃತೀಯಕೆ=ಮೂರನೆಯದಾದ ದ್ವಾಪರ ಯುಗಕ್ಕೆ, ಎಂಟು ಲಕ್ಷದ, ಚತುಷ್ಷಷ್ಟಿಸಹಸ್ರ – ೮ಲಕ್ಷದ ೬೪ ಸಹಸ್ರ ವರ್ಷಗಳು, ಕಲಿಗೆ – ಕಲಿಯುಗಕ್ಕೆ, ಇದರರ್ಧ = ೪ ಲಕ್ಷದ ೩೨ ಸಾವಿರ ವರ್ಷಗಳು, ಚಿಂತಿಪುದು.

ಸೂಚನೆ.—ಮೇಲಿನ ೫೬ನೆಯ ಪದ್ಯ ಮೊದಲು ಈ ಪದ್ಯದವರೆಗೂ ತಾತ್ಪರ್ಯವು ಪದ್ಯಾರ್ಥದಿಂದ ಸ್ಪಷ್ಟವಾಗಿ ಕಾಣುವುದರಿಂದ ಪುನರುಕ್ತಿಯಾಗ ವುದೆಂತಲೂ ಗ್ರಂಥ ವಿಸ್ತಾರ ಭಯದಿಂದಲೂ ಬರಿಯಲಿಲ್ಲ. ಆದರೆ ಕ್ಷಣ ಕಾಲ ಮೊದಲು ದಿನಕಾಲದವರೆಗೂ ಹೇಳಿದ ತ್ರುಟಿ, ಲವ ಮೊದಲಾದ ಕಾಲಗಳಲ್ಲಿ ಒಂದೊಂದು ಪುರಾಣದಲ್ಲಿ ಒಂದೊಂದು ಪ್ರಕಾರ ಹೇಳಿರುವರು. ಕಡೆಗೆ ದಿವಸಕ್ಕೆ ೬೦ ಘಳಿಗೆ ಎಂದು ಘಳಿಗೆಗಳನ್ನು ಹೇಳುವಾಗ ಎಲ್ಲಾ ಸಂಖ್ಯೆಯು ಸರಿಹೋಗುವುವು. ಪ್ರಕೃತ ದಾಸಾರ್ಯರು ಹೇಳಿದ ಸಂಖ್ಯೆಯು ವಿಷ್ಣುರಹಸ್ಯದಲ್ಲಿ ಹೇಳಿದಂತೆ ಹೇಳಿರುತ್ತಾರೆ. ಆ ಮೂಲವನ್ನು ಅನುಸರಿಸಿ ಈ ಪದ್ಯಗಳಿಗೆ ಅರ್ಥವು ಬರಿಯಲ್ಪಟ್ಟಿದೆ, ವಿಷ್ಣುರಹಸ್ಯದ ಪ್ರಮಾಣ.—ಅತಿ ಸೂಕ್ಷ್ಮಸ್ತ್ರುಯಃ ಕಾಲಃ ಸಕ್ಷಣಃ ಪರಿಕೀರ್ತಿತಃ ॥ ಕ್ಷಣಾಃ ಪಂಚತ್ರುಟಿಃ ಪ್ರೋಕ್ತಾ ಪಂಚಾ ಶತ್ತಾಲವಃ ಸ್ಮೃತಃ ॥ ಲವದ್ವಯ ನಿಮೇಷಃ ಸ್ಯಾನ್ಮಾತ್ರಾಸ್ಯಾದಷ್ಟಭಿಶ್ಚತೈಃ ॥ ಯಚ್ಚಾಯಂ ವದತೇ ಚಾಷೋ ಮಾತ್ರಯೋ ದ್ವಿತಯಂಗುರುಃ ॥ ಗುರೂಣಾಂ ದಶಕಂ ಪ್ರಾಣಃಪ್ರಾಣಶಟ್ಕಂಪಳಂ ಭವೇತ್ ॥ ಪಳಷಷ್ಟಿರ್ಘಟೀ ಪ್ರೋಕ್ತಾತಾಃ ಷಷ್ಟಿರ್ದಿನಮುಚ್ಯತೇ " ಇತ್ಯಾದಿ ವಾಕ್ಯಗಳು ಮೇಲಿನ ಪದ್ಯಾರ್ಥಗಳಿಗೆ ಆಧಾರಗಳು, ದೇವಮಾನ ವರ್ಷಗಳಿಂದಲೂ 12 ಸಹಸ್ರ ವರ್ಷಗಳಾದರೆ ಒಂದು ಮಹಾಯುಗವಾಗುವುದು. ಮಹಾಯುಗವೆಂದರೆ ಕೃತ, ತ್ರೇತಾ, ದ್ವಾಪರಾ, ಕಲಿ ಎಂಬ 4 ಯುಗಗಳು ಸೇರಿದುದಕ್ಕೆ ಹೆಸರು, " ಕೃತಂ ತ್ರೇತಾ ದ್ವಾಪರಶ್ಚ ಕಲಿಶ್ಚೇತಿ ಚತುರ್ಯುಗಂ ॥ ದಿವ್ಯೈಃ ದ್ವಾದಶ ಸಾಹಸ್ರೈಸ್ಸಾವಧಾನಂ ನಿರೂಪಿತಂ ॥ ಎಂದು ಭಾಗವತ ತೃತೀಯ ಸ್ಕಂಧ ವಾಕ್ಯವಿರುವುದು. ಒಂದೊಂದು ಯುಗಕ್ಕೆ ಎಷ್ಟೆಷ್ಟು ವರ್ಷಗಳೆಂಬುವುದನ್ನು ಪದ್ಯಾರ್ಥಗಳಲ್ಲಿ ಬರೆದಿದೆ. ೪೮೦೦, ೩೬೦೦, ೨೪೦೦, ೧೨೦೦, ಅಂತು ೧೨ ಸಾವಿರವೆಂದು ದೇವಮಾನದಿಂದ ತಿಳಿಯಬೇಕು. ದೇವಮಾನವೆಂದರೇನು? ಕೇಳಿ! ಮನುಷ್ಯಮಾನದಿಂದ ೧ ವರ್ಷವಾದರೆ ದೇವತೆಗಳಿಗೆ ಒಂದು ದಿವಸವಾಗುವುದು. ಉತ್ತರಾಯಣ ಹಗಲು, ದಕ್ಷಿಣಾಯನ ರಾತ್ರಿ ಎಂದು ತಿಳಿಯಬೇಕು. ಈ ದಿವಸ ೩೬೦ಕ್ಕೆ ಒಂದು ವರ್ಷವು, ಅಂತು ಮನುಷ್ಯಮಾನದಿಂದ ೩೬೦ ವರ್ಷಗಳಾದರೆ ದೇವತೆಗಳಿಗೆ ೧ ವರ್ಷವಾಗುವುದು. ಇದಕ್ಕೆ ದೇವಮಾನ

ವರ್ಷವೆಂದು ಹೇಳುವರು. ಮೇಲೆ ಹೇಳಿದ ಕೃತಾದಿ ಯುಗಗಳಿಗೆ ಹೇಳಿದ ದೇವಮಾನ ಸಂಖ್ಯೆಯನ್ನು ೩೬೦ ರಿಂದ ಗುಣಾಕಾರ ಮಾಡಿದರೆ ಮನುಷ್ಯ ಮಾನವು ತಿಳಿಯುವದು. ಕೃತಯುಗದ ಪ್ರಮಾಣವು ದೇವಮಾನದಿಂದ ೪೮೦೦ರೆಂದು ಹೇಳಿರುವರು. ಮನುಷ್ಯಮಾನದಿಂದ ೧೭೨೮೦೦೦ ವರ್ಷಗಳೆಂದು ಹೇಳಿರುವರು. ೪೮೦೦×೩೬೦=೧೭೨೮,೦೦೦ ಹೀಗೆ ಗುಣಾಕಾರ ಮಾಡಿದರೆ ದಾಸಾರ್ಯರು ಹೇಳಿದ ಮನುಷ್ಯಮಾನ ವರ್ಷಗಳು ಸರಿಹೋಗುನವು. ಇದರಂತೆ ಎಲ್ಲಾ ಯುಗಗಳ ಸಂಖ್ಯೆಗಳನ್ನೂ ತಿಳಿಯತಕ್ಕದ್ದು ಮನುಷ್ಯ ಮಾನದಿಂದ ಕೃತಾದಿ ಯುಗಗಳ ಸಂಖ್ಯೆಯನ್ನು ದಾಸಾರ್ಯರು ಹೇಳಿದುದಕ್ಕೆ ಆಧಾರ ವಾಕ್ಯವು ಪ್ರಕಾಶಸಂಹಿತೆಯಲ್ಲಿ ಹೇಳಿರುವರು. "ಅಷ್ಟಾವಿಂಶತ್ಸಹಸ್ರೇತಲ್ಲಕ್ಷಸಪ್ತದಶಾಬ್ದತಃ || ಕ್ಲಪ್ತಃ ಕೃತಯುಗಸ್ತಸ್ಮಾತ್ರೇತಾ ಪಾದೋನ ಉಚ್ಯತೆ || ಸಹಸ್ರಷಣ್ಣವತ್ಯೈತಲ್ಲಕ್ಷದ್ವಾದಶ ಸಮ್ಮಿತಃ || ತ್ರೇತಾಯುಗಸ್ತು ತತ್ಪಾದನ್ಯೂನೋದ್ವಾಪರ ಈರಿತಃ || ಚತುಷ್ಷಷ್ಠಿ ಸಹಸ್ರೇತದಷ್ಟ ಲಕ್ಷಾತ್ಮ ಈರಿತಃ || ದ್ವಾಪರಸ್ತು ಕಲಿಸ್ತಸ್ಮಾದರ್ಧಪಾದ ಇತಿಸ್ಮೃತಃ|| ದ್ವಿಷೋಡಶಸಹಸ್ರೇತಚ್ಚತುರ್ಲಕ್ಷಾತ್ಮ ಕಲ್ಪಿತಃ|| ಚತುರ್ಯುಗಾತ್ಮಕಃ ಕಾಲೋ ಮಹಾಯುಗ ಇತೀರಿತಃ||" ಇತ್ಯಾದಿ. ಈ ಶ್ಲೋಕಗಳ ಅರ್ಥವು ಪದ್ಯಾರ್ಥದಿಂದ ವಿವರವಾಗಿರುವದು.

ಅವತಾರಿಕೆ.—ನಾಲ್ಕು ಯುಗಗಳ ಒಟ್ಟು ಮನುಷ್ಯಮಾನ ವರ್ಷಗಳನ್ನೂ ಬ್ರಹ್ಮದೇವರ ದಿನಮಾನವನ್ನು ಹೇಳುತ್ತಾರೆ:—

**ಮೂರಧಿಕ ನಾಲ್ವತ್ತು ಲಕ್ಷದ**
**ಆರು ಮೂರೆರಡಧಿಕಸಾವಿರ**
**ಈರೆರಡುಯುಗವರ್ಷ ಸಂಖ್ಯೆಯಗೈಯಲೆನಿತಿಹದೋ ||**
**ಸೂರುಪೆಚ್ಚಿಸೆ ಸಾವಿರದಿ ನಾ**
**ನೂರುಮೂವತ್ತೆರಡು ಕೋಟಿ ಸ**
**ರೋರುಹಾಸನಿಗಿದು ಹಗಲು ಎಂಬರು ವಿಪಶ್ಚಿತರು ||೬೦||**

ಪದ್ಯಾರ್ಥ.—ಮೂರಧಿಕನಾಲ್ವತ್ತು ಲಕ್ಷದ – ೪೩ ಲಕ್ಷದ, ಆರು ಮೂರೆರಡಧಿಕ ಸಾವಿರ ೬×೩ = ೧೮+೨=೨೦ ಸಾವಿರಅಧಿಕ; ಅಂತು

೪೩ ಲಕ್ಷದ ೨೦ಸಾವಿರ ವರ್ಷಗಳಾದರೆ, ಈರೆರಡುಯುಗ–ನಾಲ್ಕು ಯುಗಗಳಾಗುವುವು. ವರ್ಷಸಂಖ್ಯೆಯಗೈಯಲೆನಿತಿಹದೋ=ಮೇಲೆ ಹೇಳಿದ ಸಂಖ್ಯೆಯ ಪ್ರಕಾರ ೪ ಯುಗಗಳಿಗೆ ಎಷ್ಟು ವರ್ಷಗಳಾಗುವುವೋ ಆ ಸಂಖ್ಯೆಯನ್ನು, ಸೂರಿ–ಜ್ಞಾನಿಯಾದವನು, ಸಾವಿರದಿಪೆಚ್ಚಿಸೆ=೧ ಸಹಸ್ರದಿಂದ ಗುಣಾಕಾರ ಮಾಡಲು (೪೩ ೨೦, ೦೦೦×೧೦೦೦–೪೩೨೦೦,೦೦,೦೦೦) ನಾನೂರು ಮೂವತ್ತೆರಡು ಕೋಟಿಯಾಗುವುವು. ವಿಪಶ್ಚಿತರು–ಜ್ಞಾನಿಗಳು ಇದು=ಈ ಸಂಖ್ಯೆಯು, ಸರೋರುಹಾಸನಗೆ–ಬ್ರಹ್ಮದೇವರಿಗೆ, ಹಗಲು ಎಂಬುವರು.

ತಾತ್ಪರ್ಯ.—೪ ಯುಗಗಳ ವರ್ಷ ಸಂಖ್ಯೆಯನ್ನು ಒಟ್ಟುಗೂಡಿಸಿದರೆ ೪೩೨೦೦೦೦ ವರ್ಷಗಳಾಗುವುವು. “ ಚತುರ್ಯುಗ ಸಹಸ್ರಾಣಿ ಬ್ರಹ್ಮಣೋ ದಿನ ಮುಚ್ಯತೇ ಎಂಬ ಪ್ರಮಾಣಾನುಸಾರ ೪ ಯುಗಗಳೂ, ೧ ಸಹಸ್ರಾವರ್ತಿಯಾದರೆ ಬ್ರಹ್ಮದೇವರಿಗೆ ೧ ಹಗಲು ಆಗುವುದು, ಮತ್ತೂ ಅಷ್ಟು ಆದರೆ ಒಂದು ರಾತ್ರಿಯಾಗುವುದು. ಅಂತೂ ೪ ಯುಗಗಳೂ ೨೦೦೦ ಸಲ ತಿರುಗಿ ಬಂದರೆ ಬ್ರಹ್ಮದೇವರಿಗೆ ಒಂದು ದಿವಸವೆಂದರ್ಥ- ಬ್ರಹ್ಮದೇವರ ದಿವಸ ಒಂದಕ್ಕೆ ಮನುಷ್ಯ ಮಾನದ ವರ್ಷಗಳು ಎಷ್ಟೆಂದರೆ ೪ ಯುಗಗಳ ಒಟ್ಟು ವರ್ಷಗಳು ೪೩೨೦೦೦೦ ಇದನ್ನು ೧೦೦೦ದಿಂದ ಗುಣಾಕಾರಮಾಡಲು (೪೩೨ ೦೦೦೦೦೦೦) ನಾನೂರ ಮೂವತ್ತೆರಡು ಕೋಟಿ ವರ್ಷಗಳಾಗುವವು. ಈ ವರ್ಷ ಸಂಖ್ಯೆಯೇ ಬ್ರಹ್ಮದೇವರಿಗೆ ಹಗಲು ಎಂಬ ತಾತ್ಪರ್ಯ.

**ಶತಧೃತಿಗೆ ಈ ದಿವಸಗಳು ತ್ರಿಂ**
**ಶತಿಯು ಮಾಸದ್ವಾದಶಾಬ್ಧವು**
**ಶತವೆರಡರೊಳು ಸರ್ವಜೀವೋತ್ಪತ್ತಿ ಸ್ಥಿತಿಲಯವೂ ।**
**ಶೃತಿಸ್ಮೃತಿಗಳು ಪೇಳುತಿಹ ವ**
**ಚ್ಯುತಗೆ ನಿಮಿಷವಿದೆಂದು ಸುಖ ಶಾ**
**ಶ್ವತಗೆ ಪಾಸಲೆ ಎಂಬುವರೆ ಬ್ರಹ್ಮಾದಿ ದಿವಿಜರನು ॥೬೧॥**

ಪದ್ಯಾರ್ಥ.—ಶತಧೃತಿಗೆ=ಬ್ರಹ್ಮದೇವರಿಗೆ, ಈ ದಿವಸಗಳು=ಮೇಲೆ ಹೇಳಿದ ನಾನ್ನೂರು ಮೂವತ್ತೆರಡುಕೋಟಿ ವರ್ಷಗಳ ಸಂಖ್ಯೆಯುಳ್ಳದ್ದು ಒಂದು ಹಗಲು. ಈ ಸಂಖ್ಯೆಯನ್ನು ಎರಡರಿಂದ ಗುಣಾಕಾರ ಮಾಡಿದರೆ

೧ ದಿವಸ; ಅಂದರೆ ೬೦ಘಳಿಗೆಯುಳ್ಳ ಒಂದು ದಿವಸಕ್ಕೆ ಮನುಷ್ಯಮಾನದ ವರ್ಷಗಳು (೮೬೪೦೦,೦೦೦೦೦) ೮೬೪ ಕೋಟಿ ದಿವಸಗಳು ಎಂದು ತಿಳಿಯ ಬೇಕು. ತ್ರಿಂಶತಿಯು=೩೦ ಆದರೆ, ಮಾಸ=೧ ತಿಂಗಳಾಗುವುದು, ಮಾಸ ದ್ವಾದಶ – ೧೨ ತಿಂಗಳುಗಳಾದರೆ, ಅಬ್ದವು – ಒಂದು ವರ್ಷವೆನಿಸುವುದು. ಇಂತಹಾ ಬ್ರಹ್ಮದೇವರ ವರ್ಷಗಳ ಶತವೆರಡರೊಳು – ೨೦೦ ವರ್ಷಗಳಲ್ಲಿ ಸರ್ವ ಜೀವರ ಉತ್ಪತ್ತಿ, ಸ್ತಿತಿ=ಸಂರಕ್ಷಣೆ, ಲಯವೂ, ಪ್ರಳಯವೂ ಸಹ ಆಗುವವು. ಅಚ್ಯುತಗೆ=ನಾಶರಹಿತನಾದ ಶ್ರೀಹರಿಗೆ, ಇದು=ಬ್ರಹ್ಮದೇವರ ಆಯುಃಮಾನದ ವರ್ಷಗಳು ನಿಮಿಷರೆಂದು, ಶೃತಿಸ್ಮೃತಿಗಳು ಪೇಳುತಿಹವು ಸುಖಶಾಶ್ವತಗೆ=ಶಶ್ವದೇಕಪ್ರಕಾರವಾದ ಸುಖ ಸ್ವರೂಪನಾದ ಪರಮಾತ್ಮ ನಿಗೆ ಬ್ರಹ್ಮಾದಿ ದಿವಿಜನ=ಬ್ರಹ್ಮ ಮೊದಲಾದ ದೇವತೆಗಳನ್ನು, ಪಾಸಲೆ ಎಂಬುವರೆ=ಸಾಟಿ ಎಂದು ಹೋಲಿಸುವರೆ ? ಇಲ್ಲವೆಂಡರ್ಥ

ತಾತ್ಪರ್ಯ.—ಬ್ರಹ್ಮದೇವರಿಗೆ ಮೇಲೆ ಹೇಳಿದ ಸಂಖ್ಯೆಯುಳ್ಳ ದಿವಸ ಗಳು ೩೦ ಆದರೆ ಒಂದು ತಿಂಗಳು. ತಿಂಗಳು ೧೨ಕ್ಕೆ ಒಂದು ವರ್ಷವು ಇಂ ತಹಾ ವರ್ಷಗಳು ನೂರು ಬ್ರಹ್ಮದೇವರ ಪರಮಾಯುಸ್ಸೆಂದು ತಾತ್ಪರ್ಯ. ಈ ಬ್ರಹ್ಮಾಯುಷ್ಯದಲ್ಲಿ ಅಂದರ ಬ್ರಹ್ಮದೇವರ ನೂರು ವರ್ಷಗಳಲ್ಲಿ ಸೃಷ್ಟಿ, ಸಂರಕ್ಷಣೆಯಾಗುವವು. ಬ್ರಹ್ಮಮಾನ ವರ್ಷಗಳು ನೂರಾದಮೇಲೆ ಬ್ರಹ್ಮ ಕಲ್ಪವು ಮುಗಿದು ಮಹಾಪ್ರಳಯವಾಗುವುದು. ಅದರ ಕಾಲವು ನೂರು ವರ್ಷಗಳು. ಒಟ್ಟು ೨೦೦ ವರ್ಷಗಳಿಗೆ ಸೃಷ್ಟಿ, ಸ್ಥಿತಿ, ಪ್ರಳಯವಾಗು ವವು. ಪರಮಾತ್ಮನಿಗೆ ಬ್ರಹ್ಮಕಲ್ಪವು ಒಂದು ನಿಮೇಷವೆಂದು ಶೃತಿ, ಸ್ಮೃ ತಿಗಳು ಹೇಳುತ್ತವೆ. ಇಂತಹಾ ಮಹಾಮಹಿಮೆಯುಳ್ಳ ಪರಮಾತ್ಮನಿಗೆ ಹೋಲಿಸಲು ಬ್ರಹ್ಮಾದಿಗಳು ಯಾರೂ ಸಾಟಿಯಲ್ಲವೆಂಬ ತಾತ್ಪರ್ಯ.

ಅವತಾರಿಕೆ.—ಬ್ರಹ್ಮಾದಿಗಳಿಗೆ ಕಾಲ ನಿರ್ಣಯವನ್ನು ಮಾಡಿದಂತೆ, ಬ್ರಹ್ಮಕಲ್ಪವು ಒಂದಾದರೆ ಪರಮಾತ್ಮನಿಗೆ ಒಂದು ನಿಮಿಷವೆಂದು ಹೇಳಿದ ಮೇಲೆ ಪರಮಾತ್ಮನಿಗೂ ಆ ಆಯುಷ್ಯವನ್ನು ಕಲ್ಪಿಸಬೇಕಾಗುವುದೆಂದು ಶಂಕೆಯು ಬರುವುದು. ಅದರ ಪರಿಹಾರವನ್ನು ಮಾಡುತ್ತಾರೆ.—

ಆದಿಮಧ್ಯಾಂತಗಳು ಇಲ್ಲದ
ಮಾಧವಗಿದುಪಚಾರವೆಂದು ಋ
ಗಾದಿವೇದ ಪುರಾಣಗಳು ಪೇಳುವವು ನಿತ್ಯದಲಿ ।
ಮೋದಮಯನಾನುಗ್ರಹವ ಸಂ
ಪಾದಿಸಿ ರಮಾಬ್ರಹ್ಮರುದ್ರೇಂ
ದ್ರಾದಿಗಳು ತಮತಮ್ಮ ಪದವಿಯನೈದಿಸುವರು ॥೬೨॥

ಪದ್ಯಾರ್ಥ.—ಆದಿ, ಮಧ್ಯ, ಅಂತ್ಯಗಳು ಹುಟ್ಟುವಿಕೆ, ಬೆಳೆಯುವಿಕೆ, ಸಾಯುವಿಕೆ ಇಲ್ಲದ, ಮಾಧವನಿಗೆ=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನಿಗೆ, ಇದು-ಬ್ರಹ್ಮಕಲ್ಪವನ್ನು ನಿಮೇಷ ಕಾಲವೆಂದು ಹೇಳಿದುದು ಉಪಚಾರವೆಂದು ಋಗಾದಿವೇದ, ಪುರಾಣಗಳು ಋಗ್ವೇದ, ಯಜುರ್ವೇದ ವೇದಗಳು, ಭಾಗವತಾದಿ ಪುರಾಣಗಳು, ಹೇಳುವವು ನಿತ್ಯದಲಿ, ಮೋದಮಯನ-ಆನಂದ ಸ್ವರೂಪನಾದ ಪರಮಾತ್ಮನ ಅನುಗ್ರಹವನ್ನು ಸಂಪಾದಿಸಿ ರಮಾ=ಲಕ್ಷ್ಮೀದೇವಿಯರು, ಬ್ರಹ್ಮದೇವರು, ರುದ್ರ-ರುದ್ರದೇವರು, ಇಂದ್ರಾದಿಗಳು, ತಮ್ಮ ತಮ್ಮ ಪದವಿಯನ್ನು, ಐದಿ ಹೊಂದಿ ಸುಖಿಸುವರು.

ತಾತ್ಪರ್ಯ.—ಶ್ರೀಪರಮಾತ್ಮನು ಕೆಲವು ಕಾಲಕ್ಕೆ ಮುಂಚೆ ಇರಲಿಲ್ಲ. ಆಮೇಲೆ ಹುಟ್ಟಿದನೆಂಬುವುದು. ಆದಿ=ಆರಂಭವು ಇಲ್ಲ, ಇವತ್ತು ಹುಟ್ಟಿ ದಿನೇ ದಿನೇ ಬೆಳೆಯುತ್ತಾ ಬಂದನು ಎಂಬುವುದಿಲ್ಲ. ವೃದ್ಧಾಪ್ಯ ಕಾಲ ಬಂದಿತು, ಮರಣ ಹೊಂದಿದನೆಂಬುವುದಿಲ್ಲ. ಅನಾದಿ ಕಾಲದಿಂದಲೂ ಇದ್ದೇ ಇರುವನು. ಜೀವರು ಅನಾದಿಯಾಗಿ ಇದ್ದೇ ಇರುವರು, ಪರಮಾತ್ಮನದು ಹಾಗಲ್ಲ ವಿಲಕ್ಷಣವೆಂದರೆ; ಜೀವನಿಗೆ ದೇಹ ಪ್ರಾಪ್ತಿಯಿಂದ ಹುಟ್ಟಿದನೆಂತಲೂ, ಆ ದೇಹ ವೃದ್ಧಿ ಹೊಂದುವುದರಿಂದ ಬೆಳೆದನೆಂತಲೂ, ಶರೀರವನ್ನು ಬಿಡಲು ಮೃತನಾದನೆಂತಲೂ, ವ್ಯವಹಾರ ಉಂಟು. ಪರಮಾತ್ಮನಿಗೆ ಆ ವಿಧವಾದ ಶರೀರ ಸಂಯೋಗ ವಿಯೋಗಗಳೂ ಇಲ್ಲ. ಇಂತಹಾ ಪರಮಾತ್ಮನಿಗೆ ನಿಮಿಷ ಕಾಲವೆಂದು ಹೇಳಿದುದು, " ನಿಮೇಷ ಉಪಚರ್ಯತೆ " ನಿಮೇಷವೆಂದು ಬ್ರಹ್ಮಕಲ್ಪವನ್ನು ಸಂಕೇತವಾಗಿ ಮಾಡಿಕೊಂಡಿರುವನೇ ಹೊರತು, ಒಂದು ನಿಮಿಷವಾದರೆ ೨೪ ಘಳಿಗೆ ಎಂಬುವ ನಿಯಮವೇ ಮೊದಲಾದವು ಅವನಿಗಿಲ್ಲ. ಪ್ರಳಯವನ್ನು ಸೃಷ್ಟಿಯನ್ನು ಮಾಡುವುದಕ್ಕೂ ಒಂದು ಕಾಲ

ನಿರ್ಣಯವಾಗಬೇಕಾಗಿರುವುದರಿಂದ ನಿಮೇಷಕಾಲವನ್ನಾಗಿ ಬ್ರಹ್ಮಕಲ್ಪವನ್ನು ಸಂಕೇತಮಾಡಿಕೊಂಡಿರುವನು. ಆದ್ದರಿಂದ ಆಯುರ್ಮಾನಾದಿಗಳು ಹೇಳಿದಂತಾಗುವುದಿಲ್ಲವೆಂಬ ತಾತ್ಪರ್ಯ. ಈ ಪ್ರಕಾರವಾಗಿ ಋಗ್ವೇದ ಮೊದಲಾದ ವೇದಗಳಲ್ಲೂ ಭಾಗವತಾದಿ ಪುರಾಣಗಳಲ್ಲೂ ಹೇಳಲ್ಪಟ್ಟಿವೆ. ನಿತ್ಯಾನಂದ ಸ್ವರೂಪನಾದ ಶ್ರೀಪರಮಾತ್ಮನ ಅನುಗ್ರಹವನ್ನು ಸಂಪಾದಿಸಿ ರಮಾಬ್ರಹ್ಮಾದಿ ದೇವತೆಗಳು ತಮ್ಮ ತಮ್ಮ ಪದವಿಯನ್ನು ಪಡೆದು ಸುಖ ಹೊಂದಿರುವರು.

ಅವತಾರಿಕೆ.—ಸಂಧಿಯನ್ನು ಮುಗಿಸುತ್ತಾ ಈ ಸಂಧಿಯ ಶ್ರವಣಾದಿಗಳಿಂದಾಗುವ ಫಲವನ್ನು ಹೇಳುತ್ತಾರೆ.—

ಈ ಕಥಾಮೃತಪಾನ ಸುಖ ಸುವಿ
ವೇಕಿಗಳಿಗಲ್ಲದಲೆ ವೈಷಿಕ
ವ್ಯಾಕುಲಕುಚಿತ್ತರಿಗೆ ದೊರೆವುದೆ ಆವಕಾಲದಲಿ ॥
ಲೋಕವಾರ್ತೆಯ ಬಿಟ್ಟು ಇದನವ
ಲೋಕಿಸುತ ಮೋದಿಪರಿಗೊಲಿದು ಕೃ
ಪಾಕರ ಜಗನ್ನಾಥವಿಠಲ ಪೊರೆವನುದಿನದಿ ॥೬೩॥

ಪದ್ಯಾರ್ಥ.—ಈ ಕಥಾಮೃತಪಾನ–ಈ ಭಗವತ್ಕಥೆ ಎಂಬ ಅಮೃತದ ಪಾನಸುಖವು, ಸುವಿವೇಕಿಗಳಿಗಲ್ಲದಲೆ = ಉತ್ತಮರಾದ ವಿವೇಕಿಗಳಿಗಲ್ಲದೇ, ವೈಷಿಕ= ವಿಷಯಸುಖಲೋಲುಪರಾಗಿ, ವ್ಯಾಕುಲಚಿತ್ತರಿಗೆ=ವ್ಯಸನಪಡುತ್ತಿರುವ, ಕುಭ್ಭಿತಬುದ್ಧಿಯುಳ್ಳವರಿಗೆ, ದೊರೆವುದೆ=ದೊರಕುವುದೇ ? ಆವ ಕಾಲದಲಿ–ಸರ್ವಕಾಲದಲ್ಲೂ, ಲೋಕವಾರ್ತೆಯಬಿಟ್ಟು=ಲೌಕಿಕ ಹಂಟಿಯನ್ನು ಬಿಟ್ಟು, ಇದನು–ಈ ಗ್ರಥವನ್ನು, ಅವಲೋಕಿಸುತ=ನೋಡಿ, ಮೋದಿಪರಿಗೆ=ಆನಂದಪಡುವವರಿಗೆ, ಕೃಪಾಕರ=ಕರುಣಾಳುವಾದ ಜಗನ್ನಾಥ ವಿಠಲನು, ಒಲಿದು=ಪ್ರಸನ್ನನಾಗಿ, ಅನುದಿನದಿ=ನಿತ್ಯದಲ್ಲೂ. ಪೊರೆವ–ಸಂರಕ್ಷಣೆ ಮಾಡುವನು.

ತಾತ್ಪರ್ಯ.—ಈ ಕಥಾಮೃತದ ಪಾನರುಚಿಯು ಮಹಾ ವಿವೇಕಿಗಳೂ, ಜ್ಞಾನಿಗಳೂ ಆದ ಭಗವದ್ಭಕ್ತರಿಗೆ ಗೊತ್ತಲ್ಲದೆ ಕೇವಲ ವಿಷಯ

ನಿರತರಾಗಿ ಸರ್ವಕಾಲದಲ್ಲೂ ವ್ಯಸನಪಡುತ್ತಾ ಕಾಲವನ್ನು ಕಳೆಯುತ್ತಿರುವ ಕುಚ್ಛಿತಬುದ್ಧಿಯುಳ್ಳವರಿಗೆ ಈ ರುಚಿಯು ಗೊತ್ತಾಗುವುದೇ ? ಆಗಲಾರದು ಲೋಕವಾರ್ತೆಯನ್ನು ಬಿಟ್ಟು ಈ ಗ್ರಂಥವನ್ನು ನೋಡಿ ಆನಂದಪಡುವವರಿಗೆ ಪ್ರಸನ್ನನಾಗಿ ಕೃಪಾಳುವಾದ ಶ್ರೀಜಗನ್ನಾಥವಿಠಲಾತ್ಮಕ ಶ್ರೀಪರಮಾತ್ಮನು ನಿತ್ಯದಲ್ಲೂ ರಕ್ಷಿಸುವನು.

ಎಂಬಲ್ಲಿಗೆ ಶ್ರೀಹರಿಕಥಾಮೃತಸಾರ ಭಾವಪ್ರಕಾಶಿಕೆಯಲ್ಲಿ ೨೩ನೆಯ ಕಲ್ಪಸಾಧನ ಸಂಧಿಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||



## ಬಿಂಬಾಪರೋಕ್ಷ ಸಂಧಿ.

— : 0 :

### ಸಂಧಿ ೨೪.

ಸೂಚನೆ || ಹರಿಕಥಾಮೃತಸಾರ ಗುರುಗಳ

"ಮಮೈವಾಂಶೋಜೀವಲೋಕೇ ಜೀವಭೂತಃ ಸನಾತನಃ ||"
ಎಂಬ ಗೀತಾವಾಕ್ಯದ ರೀತಿಯಾಗಿ ಪರಮಾತ್ಮನ ಅಂಶವೇ ಜೀವರೂಪರಾಗಿರುವರು. ಅಂಶರಲ್ಲಿ—ಸ್ವಾಂಶರೆಂತಲೂ, ಪ್ರತಿಬಿಂಬಾಂಶರೆಂತಲೂ ಎರಡು ಪ್ರಕಾರಗಳುಂಟು. ಪರಮಾತ್ಮನ ರಾಮ ಕೃಷ್ಣಾದ್ಯವತಾರಗಳೇ ಸ್ವಾಂಶರೂಪಗಳು, ಜೀವರುಗಳು ಪ್ರತಿಬಿಂಬಾಂಶರೆಂದು ತಿಳಿಯ ಬೇಕು. ಈ ಸಂಧಿಯಲ್ಲಿ ಯಾವಯಾವ ಪ್ರತಿಬಿಂಬಜೀವರಿಗೆ ಯಾವ ರೂಪದಿಂದ ಬಿಂಬರೂಪಿಯಾಗಿರುವನೆಂಬುವುದನ್ನು ಹೇಳುತ್ತಾರೆ.—

ಮುಕ್ತ ಬಿಂಬನು ತುರ್ಯ ಜೀವ
ನ್ಮುಕ್ತ ಬಿಂಬನು ವಿಶ್ವಭವ ಸಂ
ಸಕ್ತ ಬಿಂಬನು ತೈಜಸನು ಅಸೃಜ್ಯರಿಗೆ ಪ್ರಾಜ್ಞಾ ।
ಶಕ್ತನಾದರು ಸಗಿಯೆ ಸರ್ವೋ
ದಿಕ್ತ ಮಹಿಮನು ದುಃಖಸುಖಗಳ
ವ್ಯಕ್ತಿ ಮಾಡುತಲಿಪ್ಪ ಕಲ್ಪಾಂತರದಲಿ ಬಪ್ಪರಿಗೆ ||೧||

ಪದ್ಯಾರ್ಥ.—ಮುಕ್ತ=ಮುಕ್ತ ಜೀವರಿಗೆ, ತುರ್ಯ=ತುರ್ಯಮೂರ್ತಿಯು ಬಿಂಬನು=ಬಿಂಬಮೂರ್ತಿಯು, ಜೀವನ್ಮುಕ್ತ=ಬಿಂಬಾಪರೋಕ್ಷವಾದವರಿಗೆ ವಿಶ್ವ=ವಿಶ್ವಮೂರ್ತಿಯು ಬಿಂಬನು, ಭವಸಂಸಕ್ತ ಬಿಂಬನು = ಸಂಸಾರದಲ್ಲಿರುವವರಿಗೆ ಬಿಂಬನು, ತೈಜಸನು, ಅಸೃಜ್ಯರಿಗೆ=ಸೃಷ್ಟಿಗೆ ಬಾರದವರಿಗೆ, ಪ್ರಾಜ್ಞ=ಪ್ರಾಜ್ಞಮೂರ್ತಿಯು ಬಿಂಬನು, ಶಕ್ತನಾದರು ಸರಿಯೇ = ಸೃಷ್ಟಿ ಮೊದಲಾದವು ಮಾಡದೇನೆ ಜೀವರಿಗೆ ಸುಖದುಃಖಾದಿಗಳನ್ನು ಕೊಡುವ ಶಕ್ತಿ ಇದ್ದರೂ, ಸತ್ಯ ಸಂಕಲ್ಪನಾದುದರಿಂದ ಸರ್ವೋ

ದ್ರಿಕ್ತಮಹಿಮನು=ಎಲ್ಲರಿಗಿಂತಲೂ ಅಧಿಕವಾದ ಮಹಿಮೆಯುಳ್ಳ ಪರಮಾತ್ಮನು, ಕಲ್ಪಾಂತದಲಿ=ಬ್ರಹ್ಮಕಲ್ಪದ ಅಂತ್ಯದಲ್ಲಿ, ಬಪ್ಪರಿಗೆ = ಅವರವರ ಯೋಗ್ಯತಾನುಸಾರವಾಗಿ, ಸಾಧನವನ್ನು ಮಾಡಿಕೊಂಡು ಬರುವವರಿಗೆ. ದುಃಖಸುಖಗಳ=ಅವರವರ ಯೋಗ್ಯತಾನುಸಾರ ಸುಖದುಃಖಗಳನ್ನು, ವ್ಯಕ್ತಿಮಾಡುತಲಿಪ್ಪ-ಸಾತ್ವಿಕರಿಗೆ ಸ್ವರೂಪಾನಂದವನ್ನೂ ರಾಜಸರಿಗೆ ಸುಖದುಃಖಮಿಶ್ರವಾದ ಸಂಸಾರವನ್ನೂ ತಾಮಸರಿಗೆ ಅಂಧಂತಮಸ್ಸಿನಲ್ಲಿ ದುಃಖವನ್ನು ಅಭಿವ್ಯಕ್ತಿಮಾಡಿಸಿ ಕೊಡುತ್ತಲಿರುವನು.

ತಾತ್ಪರ್ಯ.—ಮುಕ್ತರಾದವರಿಗೆ ತುರ್ಯನಾಮಕ ಪರಮಾತ್ಮನು ಬಿಂಬಮೂರ್ತಿಯು. ಲಿಂಗಭಂಗವಾಗದೆ ಅಮುಕ್ತರಾಗಿದ್ದು ಬಿಂಬಾಪರೋಕ್ಷವಾದವರಿಗೆ ವಿಶ್ವನಾಮಕಪರಮಾತ್ಮನು ಬಿಂಬನು. ಸಂಸಾರದಲ್ಲಿರುವವರಿಗೆ ತೈಜಸ ರೂಪಿಯಾದ ಪರಮಾತ್ಮನು ಬಿಂಬನು. ಈ ಕಲ್ಪದಲ್ಲಿ ಸೃಷ್ಟಿಗೆ ಬಾರದೇನೇ ಇರುವವರಿಗೆ ಪ್ರಾಜ್ಞನಾಮಕ ಪರಮಾತ್ಮನು ಬಿಂಬನು, ಬ್ರಹ್ಮಾದಿ ಸಕಲ ದೇವತೆಗಳಿಗಿಂತಲೂ ಉತ್ತಮನಾದ ಮಹಾಮಹಿಮೆಯುಳ್ಳ ಶ್ರೀಹರಿಯು ಸೃಷ್ಟ್ಯಾದಿಗಳನ್ನು ಮಾಡದೇನೆ ಅವರವರಿಗೆ ಸ್ವರೂಪಭೂತವಾದ ಸುಖದುಃಖಾದಿಗಳನ್ನು ವ್ಯಕ್ತಿಮಾಡಿಸುವ ಯೋಗ್ಯತೆ ಇದ್ದರೂ ಸತ್ಯಸಂಕಲ್ಪನು. ಅವರವರ ಯೋಗ್ಯತಾನುಸಾರವಾದ ಕರ್ಮವನ್ನು ಅವರವರಿಂದ ಮಾಡಿಸಿ ಕಲ್ಪಾಂತದಲ್ಲಿ ಅವರವರ ಕರ್ಮಾನುಸಾರವಾಗಿ ಸುಖದುಃಖ ಮಿಶ್ರವೆಂಬ ಮೂರುವಿಧ ಫಲವನ್ನು ಮೂರು ಜೀವರಿಗೆ ಕೊಡಿಸುವನು. "ಮುಕ್ತಾನಾಂ ಬಿಂಬರೂಪಸ್ತು ತುರ್ಯೋ ವಿಶ್ವೋಽಪರೋಕ್ಷಿಣಾಂ|| ಸಂಸಾರಿಣಾಂ ತೈಜಸಸ್ತ್ವ ಸೃಜ್ಯಾನಾಂ ಪ್ರಾಜ್ಞ ಉಚ್ಯತೇ" ಎಂಬ ಸಂಗ್ರಹವಾಕ್ಯವು ಈ ಪದ್ಯಾರ್ಥವನ್ನು ಹೇಳುವುದು.

ಅನ್ನನಾಮಕ ಪ್ರಕೃತಿಯೊಳಗಾ
ಚ್ಛನ್ನನಾಗಿಹ ಪ್ರಾಜ್ಞನಾಮದಿ
ಸೊನ್ನೊಡಲ ಮೊದಲಾದವರೊಳನ್ನಾದ ತೈಜಸರು ||
ಅನ್ನದಾಂಬುಜನಾಭ ವಿಶ್ವನು
ಭಿನ್ನನಾಮಕ್ರಿಯಗಳಿಂದಲಿ
ತನ್ನೊಳಗೆ ತಾರಮಪೂರ್ಣಾನಂದಜ್ಞಾನಘನ ||೨||

ಪದ್ಯಾರ್ಥ.— ಅನ್ನನಾಮಕ=ಅನ್ನನಾಮಕನಾದ ಶ್ರೀಪರಮಾತ್ಮನು, ಪ್ರಾಜ್ಞನಾಮದಿ=ಪ್ರಾಜ್ಞನೆಂಬ ಹೆಸರಿನಿಂದ, ಪ್ರಕೃತಿಯೊಳಗೆ-ಪ್ರಕೃತಿ ಎಂಬ ಹೆಸರುಳ್ಳ ಶ್ರೀದೇವಿಯಲ್ಲಿ, ಅಚ್ಛನ್ನನಾಗಿಹ=ಗೋಚರನಾಗದಂತೆ ವಾಸವಾಗಿರುವನು. ಸೊನ್ನೊಡಲ=ಬ್ರಹ್ಮದೇವರು, ಮೊದಲಾದವರೊಳು-ಮೊದಲಾದ ದೇವತೆಗಳೊಳಗೆ, ಅನ್ನಾದ=ಅನ್ನಾದನಾಮಕ ಪರಮಾತ್ಮನು, ತೈಜಸನಾಮಕನಾಗಿಯೂ, ಅನ್ನದ=ಅನ್ನದನೆಂಬ ಹೆಸರುಳ್ಳ, ಅಂಬುಜನಾಭ=ಪದ್ಮನಾಭನ, ವಿಶ್ವ=ವಿಶ್ವನಾಮಕನಾಗಿಯೂ, ಭಿನ್ನನಾಮಕ್ರಿಯಗಳಿಂದಲಿ=ಬೇರೆಬೇರೆ ಹೆಸರುಗಳಿಂದಲೂ, ಬೇರೆಬೇರೆ ಕರ್ಮಗಳಿಂದಲೂ, ಪೂರ್ಣಾನಂದಜ್ಞಾನಘನ=ಪೂರ್ಣಾನಂದ ಜ್ಞಾನರೂಪನಾದ ಹರಿಯು, ತನ್ನೊಳಗೆ ತಾರಮಿಸುವ-ತನ್ನೊಳಗೆ ತಾನೇ ಆನಂದಪಡುತ್ತಿರುವನು.

ತಾತ್ಪರ್ಯ.— ಅನ್ನನಾಮಕನಾದ ಶ್ರೀಹರಿಯು ಪ್ರಕೃತಿಯಲ್ಲಿ ಪ್ರಾಜ್ಞನೆಂಬ ಹೆಸರಿನಿಂದ ಇತರರಿಗೆ ಗೋಚರನಾಗದೇ ಮರೆಯಾಗಿರುವನು. ಅನ್ನಾದನೆಂಬ ಹರಿಯು ತೈಜಸನಾಮದಿಂದ ಬ್ರಹ್ಮಾದಿಗಳಲ್ಲಿದ್ದು ಅನ್ನವನ್ನು ಭುಂಜಿಸುವನು. ಅನ್ನದನೆಂಬ ಶ್ರೀಹರಿಯು ವಿಶ್ವನಾಮಕನಾಗಿ ಅನೇಕವಾದ ನಾಮರೂಪಗಳಿಂದ ಭಿನ್ನ ಜೀವರಲ್ಲಿದ್ದು ಅನ್ನ ಪ್ರದನಾಗಿ, ತನ್ನೊಳಗೆ ತಾನೇ ಆನಂದಪಡುತ್ತಿರುವನು.

ಅವತಾರಿಕೆ.— ಪ್ರಕೃತಿಯೊಳಗೆ ಪರಮಾತ್ಮನು ಗೋಚರನಾಗದೆ ಇರುವದೆಂತೆಂಬುದನ್ನು ದೃಷ್ಟಾಂತದಿಂದ ತೋರಿಸುತ್ತಾರೆ.—

ಬೂದಿಯೊಳಗಡಗಿಪ್ಪನಲನೋ
ಪಾದಿ ಚೇತನ ಪ್ರಕೃತಿಯೊಳಗ
ನ್ನಾದನನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪಿ ।
ಓದನಪ್ರದ ವಿಷ್ಣು ಪರಮಾ
ಹ್ಲಾದಪೀವುತ ತೃಪ್ತಿಬಡಿಸುವಾ
ಗಾಧಮಹಿಮನ ಚಿತ್ರಕರ್ಮವನಾವಬಣ್ಣಿಸುವ ೫೩॥

ಪದ್ಯಾರ್ಥ.— ಬೂದಿಯೊಳಗಡಗಿಪ್ಪನಲನೋಪಾದಿ=ಬೂದಿ ಮುಚ್ಚಿದ ಕೆಂಡದಂತೆ, ಚೇತನಪ್ರಕೃತಿಯೊಳಗೆ, ಅನ್ನಾಹ್ವಯದಿ-ಅನ್ನನೆಂಬಹೆಸರಿ

ನಿಂದ ಇರುವನು. ಬ್ರಹ್ಮ ಶಿವರೂಪಿ-ಬ್ರಹ್ಮರೂಪದಿಂದಲೂ, ರುದ್ರರೂಪದಿಂದಲೂ, ಅವರಿಬ್ಬರಲ್ಲಿ, ಅನ್ನಾದನು=ಅನ್ನಾದನೆಂಬ ಹೆಸರಿನಿಂದಿದ್ದು ಅನ್ನವನ್ನು ಸ್ವೀಕರಿಸುವನು. ವಿಷ್ಣು-ವಿಷ್ಣು ರೂಪದಿಂದ, ಓದನಪ್ರದ=ಅನ್ನದನೆಂಬ ಹೆಸರಿನಿಂದ, ಪರಮಾಹ್ಲಾದವೀವುತ = ಸರ್ವಪ್ರಾಣಿಗಳಿಗೂ ಅನ್ನವನ್ನು ಕೊಡುತ್ತಾ ಪರಮಾಹ್ಲಾದವನ್ನು ಕೊಟ್ಟು, ತೃಪ್ತಿಬಡಿಸುವ=ತೃಪ್ತಿಪಡಿಸುವನು. ಅಗಾಧಮಹಿಮನ=ಇಂತಹಾ ಪಾರಗಾಣದ ಮಹಿಮೆಯುಳ್ಳ ಪರಮಾತ್ಮನ, ಚಿತ್ರಕರ್ಮವ-ವಿಚಿತ್ರ ವ್ಯಾಪಾರವನ್ನು, ಆವಬಣ್ಣಿಸುವ=ವರ್ಣಿಸಲು ಯಾರಿಗೆ ಸಾಧ್ಯವು ?

ತಾತ್ಪರ್ಯ:—ಬೂದಿ ಮುಚ್ಚಿದ ಕೆಂಡದಂತೆ ಶ್ರೀದೇವಿಯಲ್ಲಿ ಅನ್ನನಾಮಕನಾಗಿ ಪರಮಾತ್ಮನು ಅಡಗಿರುವನು, ಅನ್ನಾದನೆಂಬ ಹೆಸರಿನಿಂದ ಬ್ರಹ್ಮದೇವರಲ್ಲೂ, ರುದ್ರದೇವರಲ್ಲೂ, ಬ್ರಹ್ಮರೂಪ, ರುದ್ರರೂಪದಿಂದಿದ್ದು ಅನ್ನವನ್ನು ಭುಂಜಿಸುವನು. ವಿಷ್ಣು ರೂಪದಿಂದ ಅನ್ನದನೆಂಬ ಹರಿಯು ಸಕಲರಿಗೂ ಅನ್ನವನ್ನುಕೊಟ್ಟು ಪರಮಾಹ್ಲಾದವನ್ನುಂಟು ಮಾಡಿಸಿ ಚೆನ್ನಾಗೆಲ್ಲರನ್ನೂ ತೃಪ್ತಿಪಡಿಸುವನು. ಇಂತಹಾ ಅಪಾರ ಮಹಿಮೆಯುಳ್ಳ ಪರಮಾತ್ಮನ ವಿಚಿತ್ರವಾದ ಕರ್ಮವನ್ನು ಬಣ್ಣಿಸಲು ಯಾರಿಂದ ಸಾಧ್ಯವು ? ರಮಾಬ್ರಹ್ಮಾದಿಗಳಿಗಿಂತಲೂ ತರವಲ್ಲ. ಇನ್ನು ಮಿಕ್ಕವರ ಪಾಡೇನು ಎಂಬ ತಾತ್ಪರ್ಯ.

ಅವತಾರಿಕೆ.—ಪರಮಾತ್ಮನ ನಾದ, ಬಿಂದು, ಘೋಷ, ಶಾಂತ, ಅತಿಶಾಂತಗಳೆಂಬ ಪಂಚರೂಪಗಳ ಅಧಿಷ್ಠಾನವನ್ನು ಹೇಳುತ್ತಾರೆ.—

**ನಾದ ಭೋಜನ ಶಬ್ದದೊಳು ಬಿಂ**
**ದೋದನೋದಕದೊಳಗೆ ಘೋಷನು**
**ವಾದದೊಳು ಶಾಂತಾಖ್ಯ ಜಠರಾಗ್ನಿಯೊಳಗಿರುತಿಪ್ಪ ॥**
**ವೈದಿಕ ಸುಶಬ್ದದೊಳು ಪುತ್ರ ಸ**
**ಹೋದರಾನುಗರೊಳತಿಶಾಂತನ**
**ಪಾದಕಮಲವನನವರತ ಚಿಂತಿಸು ಈ ಪರಿಯಲಿಂದ ॥೪॥**

ಪದ್ಯಾರ್ಥ.—ಭೋಜನ ಶಬ್ದದೊಳು=ಭೋಜನ ಮಾಡುವಾಗ ಹೊರಡುವ ಧ್ವನಿಯು, ನಾದದ=ನಾದರೂಪದಿಂದಲೂ, ಓದನೋದಕದೊಳಗೆ=

ಅನ್ನ, ಮತ್ತು ಉದಕ ಇವುಗಳಲ್ಲಿ, ಬಿಂಷ=ಬಿಂದು ರೂಪದಿಂವಲೂ, ವಾದದೊಳು = ಅನುವಾದ ಮಾಡುವ ಕಾಲದಲ್ಲಿ ಆಗುವ ಶಬ್ಧದೊಳಗೆ, ಘೋಷನು=ಘೋಷರೂಪದ್ದಿಂದಲೂ, ಜಠರಾಗ್ನಿಯೊಳು, ಪ್ರಾಣಿಗಳ ಉದ ರದಲ್ಲಿದ್ದು ಅನ್ನಾದಿಗಳನ್ನು ಪಕ್ವಮಾಡುತ್ತಿರುವ ಜಠರಾಗ್ನಿಯೊಳಗೆ, ಶಾಂ ತಾಖ್ಯ=ಶಾಂತನಾಮಕನೂ, ಇರುತಿಪ್ಪ=ವಾಸವಾಗಿರುವನು. ವೈದಿಕಸು ಶಬ್ಧದೊಳು=ವೇದಾಧ್ಯಯನ ಮಾಡುವಾಗ ಹೊರಡುವ ಸುಶಬ್ಧದೊಳಗೂ, ಪುತ್ರ, ಸಹೋದರ-ಅಣ್ಣತಮ್ಮಂದಿರು, ಅನುಗ=ಭೃತ್ಯ ಜನರು ಮೊದಲಾ ದವರಲ್ಲೂ, ಅತಿಶಾಂತನ-ಅತಿಶಾಂತನಾಮಕನಾದ ಶ್ರೀಹರಿಯ, ಪಾದಕ ಮಲ=ಪಾದಕಮಲವನ್ನು, ಈ ಪರಿಯಲಿಂದ=ಮೇಲೆ ಹೇಳಿದ ರೀತಿಯಾಗಿ ಅನವರತ-ಸರ್ವಕಾಲದಲ್ಲೂ ಚಿಂತಿಸು.

ತಾತ್ಪರ್ಯ.— ಪರಮಾತ್ಮನು ಪ್ರಣವದಲ್ಲಿ ಅಂದರೆ "ಓಂ" ಎಂಬ ಅಕ್ಷರದಲ್ಲಿ ಇರುವ ಅಕಾರ, ಉಕಾರ, ಮಕಾರಗಳಲ್ಲಿ, ನಾದ, ಬಿಂದ, ಘೋಷನಾಮಕನಾಗಿರುವುದಲ್ಲದೆ ಭೋಜನಾದಿಶಬ್ಧಗಳಲ್ಲೂ ಇರುವನೆಂದು ಚಿಂತಿಸಬೇಕು. ಬೋಜನಶಬ್ಧದಲ್ಲಿ ನಾದರೂಪಿಯಾನ ಪರಮಾತ್ಮನನ್ನು ಅನ್ನೋದಕಗಳಲ್ಲಿ ಬಿಂದುನಾಮಕನನ್ನು, ಶಾಸ್ತ್ರಗಳ ಅನುವಾದದಲ್ಲಿ ಘೋ ಷನಾಮಕನನ್ನೂ ಜಠರಾಗ್ನಿಯಲ್ಲಿ ಶಾಂತರೂಪಿಯನ್ನೂ ವೇದಾಧ್ಯಯನ ಶಬ್ಧದೊಳಗೂ ಮಕ್ಕಳು ಅಣ್ಣತಮ್ಮಂಧಿರು ಮತ್ತೂ ತಮ್ಮಿಂಡ ಜೀವನ ಮಾಡುತ್ತಿರುವವರು ಇವರುಗಳಲ್ಲೂ ಅತಿಶಾಂತರೂಪಿಯಾದ ಪರಮಾತ್ಮನ ನ್ನೂ ತಿಳಿದು ಸರ್ವಕಾಲದಲ್ಲೂ ಈಪ್ರಕಾರವಾಗಿ ಅವನ ಪಾದಕಮಲವನ್ನು ಚಿಂತಿಸುತ್ತಿರಬೇಕೆಂದು ತಾತ್ಪರ್ಯ. "ನಾದಾಭಿಮಾನೀ ಕ್ರೋಡಸ್ತು ಭೋ ಜನಸ್ಥರವೇಷುಚ' ಬಿಂದುಮಾನೀ ವಿಷ್ಣುದೇವೋ ಜಲಾನ್ನಸ್ಥೋತ್ರಿವೃ ತ್ರಭುಃ ॥ ಘೋಷಾನುವಾದ ಶಬ್ದೇಷು ಶಾಂತಾಖ್ಯೋ ಜಠರೇ ಸ್ಥಿತಃ ॥ ಪುತ್ರ ಮಿತ್ರ ಕಳತ್ರಾದೌ ವೇದಶಾಸ್ತ್ರೇಷು ಸರ್ವದಾ ॥ ಅತಿಶಾಂತಾಖ್ಯ ಕೃ ಷ್ಣಸ್ಯಪಾದ ಪದ್ಮಂ ನಿಬೋಧಯ' ಎಂಬ ಪ್ರಮೇಯ ರತ್ನಾಕರದ ವಚನ ವು ಮೇಲಿನ ವಾಕ್ಯಗಳಿಗೆ ಆಧಾರವು.

ಅವತಾರಿಕೆ.--ಪರಮಾತ್ಮನು ಅನಂತ ಗುಣಪರಿಪೂರ್ಣನೆಂಬುವುದು ಶೃತಿಸಮ್ಮತವೆಂದು ಸೂಚಿಸುತ್ತಾರೆ.--

ವೇದಮಾನಿ ರಮಾನುಪಾಸ್ಯ ಗು
ಣೋದಧಿ ಗುಣತ್ರಯ ವಿವರ್ಜಿತ
ಸ್ವೋದರಸ್ಥಿತ ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು ॥
ಸಾಧುಸಮ್ಮತವೆನಿಸುತಿಹ ನಿಷು
ಸೀದಗಣಪತಿ ಎಂಬ ಶೃತಿ ಪತಿ
ಪಾದಿಸುವದನವರತವನಗುಣ ಪ್ರಾಂತಗಾಣಧಲೆ ॥೫॥

ಪದ್ಯಾರ್ಥ.—ವೇದಮಾನಿ=ವೇದಾಭಿಮಾನಿಯಾದ, ರಮಾ=ರಮಾ ದೇವಿಯರಿಂದಲೂ. ಅನುಪಾಸ್ಯ = ಉಪಾಸನೆ ಮಾಡಲು ಅಸಾಧ್ಯವಾದ, ಗುಣೋದಧಿ=ಗುಣಸಮುದ್ರನು, ಗುಣತ್ರಯವಿವರ್ಜಿತ = ಪ್ರಾಕೃತ ಗುಣ ವಿಲ್ಲದವನು, ಸ್ವೋದಸ್ಥಿತ=ತನ್ನ ಉದರದಲ್ಲಿರುವ, ನಿಖಿಲ=ಸಮಸ್ತವಾದ ಬ್ರಹ್ಮಾಂಡಾದ್ವಿಲಕ್ಷಣನು=ಬ್ರಹ್ಮಾಂಡದಿಂದ ವಿಲಕ್ಷಣನು, ಸಾಧುಸಮ್ಮತವೆ ನಿಸುತಿಹ=ಸಾಧುಗಳೆಲ್ಲರೂ ಪ್ರಮಾಣತ್ವೇನ ಅಂಗೀಕರಿಸುತ್ತಿರುವ, ನಿಷು ಸೀದಗಣಪತಿ ಎಂಬ, ಶೃತಿ=ಶೃತಿಯು, ಅನವರತ=ಸರ್ವಕಾಲದಲ್ಲೂ, ಅವನಗುಣ=ಪರಮಾತ್ಮನ ಗುಣಗಳ, ಪ್ರಾಂತಗಾಣದಲೆ=ಕೊನೆಗಾಣದಲೆ, ಪ್ರತಿಪಾದಿಸುವುದು-ಸರ್ವೋತ್ತಮನು, ಸರ್ವಕರ್ತನೆಂದುಸಾರುತ್ತಿರುವುದು

ತಾತ್ಪರ್ಯ.—ವೇದಾಭಿಮಾನಿಯಾದ ರಮಾ ದೇವಿಯರಿಂದಲೂ ಸಹ ಪರಮಾತ್ಮನ ಗುಣಗಳನ್ನು ಪೂರ್ಣಕಂಡು ಉಪಾಸನಮಾಡಲು ಅಸಾಧ್ಯವಾಗಿರುವುದು. ಸತ್ವಾದಿ ಪ್ರಾಕೃತ ಗುಣಗಳಿಂದ ಒದ್ಧನಾಗದವನು. ತನ್ನ ಉದರದಲ್ಲಿರುವ ಬ್ರಹ್ಮಾಂಡದಿಂದ ವಿಲಕ್ಷಣನು. ಸಕಲ ಸಜ್ಜನರೂ ಪ್ರಮಾಣವೆಂದು ಅಂಗೀಕರಿಸುತ್ತಿರುವ ನಿಷುಸೀದ ಗಣಪತಿ ಎಂಬ ಶೃತಿ ಯು ಪರಮಾತ್ಮನ ಅನಂತಗುಣಗಳನ್ನು ಸ್ತುತಿಸಿ ಕೊನೆಗಾಣದೆ ಅನಂತ ಗುಣಪರಿಪೂರ್ಣನೆಂದು ಸರ್ವದಾ ಸ್ಪಷ್ಟವಾಗಿ ಹೇಳುತ್ತಿರುವುದು. ಟೀಕಾ ಕಾರ್ಯರು ಈ ಪದ್ಯದಲ್ಲಿ ಉದಾಹರಿಸಿರುವ ಶೃತಿಯು " ನಿಷಸೀದ ಗಣಪತೇ ಗುಣೇಷುತ್ವಾಮಾಹುರ್ವಿಪ್ರತಮಂಕವೀನಾಂ ॥ ನಋತೇತ್ವತ್ಕ್ರತೇ ಕಿಂಚನಾ ರೇಮಹಾಮರ್ಕಂ ಮಘವನ್ ಚಿತ್ರಮರ್ಚ " ಇದರ ತಾತ್ಪರ್ಯ:— ಎಲೈ ಗಣಪತೇ-ಇಂದ್ರಿಯಾಭಿಮಾನಿದೇವತೆಗಳ ಗಣಕ್ಕೆ ಅಧಿಪತಿಯೇ ! ನಿನ್ನನ್ನು ಜ್ಞಾನಿಗಳು ಇಂದ್ರಿಯಾಭಿಮಾನಿಗಳಲ್ಲಿ ಉತ್ತಮನೆಂದು ಹೇಳುತ್ತಿರುವರು,

ನಿನ್ನನ್ನು ಬಿಟ್ಟರೆ ಯಾವ ಕಾರ್ಯವೂ ಯಾರಿಂದಲೂ ಆಗುವಂತಿಲ್ಲ. ನೀನು ರಮಾ ಬ್ರಹ್ಮಾದಿ ದೇವತೆಗಳಲ್ಲಿದ್ದು ನಿನ್ನ ಪೂಜೆಯನ್ನು ನೀನೆ ಮಾಡಿಕೊಳ್ಳುತ್ತಿರುವೆ! ಎಲೈ ತತ್ವಪ್ರದೇಶಪ್ರಕಾಶನಾದ ಐಶ್ವರ್ಯವಂತನೇ! ಅಯೋಗ್ಯರಲ್ಲಿದ್ದು ಅವರ ದ್ವೇಷಾದಿಗಳನ್ನು ನೀನೇ ಮಾಡಿಸಿಕೊಳ್ಳುವೆ, ಅದು ಅವರಿಗೆ ತಮಸ್ಸಾಧನವು. ಮುಖ್ಯವಾಗಿ ಸಕಲ ಕರ್ತೃತ್ವವೂ ನಿನ್ನದೇ ಇರುವುದು ಎಂದು ಶ್ರುತಿಯ ತಾತ್ಪರ್ಯವು. ಶ್ರುತ್ಯರ್ಥಕ್ಕೂ ಈ ಪದ್ಯಾರ್ಥಕ್ಕೂ ಸಂಬಂಧವೇನೆಂದರೆ, ಶ್ರುತಿಯ ಮುಖ್ಯ ತಾತ್ಪರ್ಯವು, ಭಾಗವತ ಶ್ರುತಿಗೀತೆಯ ತಾತ್ಪರ್ಯದಲ್ಲಿ "ಶ್ರೀ ಬ್ರಹ್ಮ ರುದ್ರ ಪೂರ್ವೇಷು ಕ್ರಮಾತ್ತ್ವಿನ್ತ್ವಾಜನಾರ್ದನಃ ॥ ಸ್ವಾತ್ಮಾನಾಮರ್ಚಯತ್ಯದ್ಧಾ ಬಹಿರಂತರ ಸತ್ವತಃ" ರಮಾ ಬ್ರಹ್ಮಾದಿಗಳಲ್ಲಿದ್ದು ಕ್ರಮವಾಗಿ ತನ್ನನ್ನು ಪೂಜಿಸಿಕೊಳ್ಳಬೇಕು. ಒಳಗೂ ಹೊರಗೂ ವ್ಯಾಪ್ತನಾಗಿದ್ದು ಯೋಗ್ಯರಿಂದ ಪೂಜೆಯನ್ನು ಅಯೋಗ್ಯರಿಂದ ದ್ವೇಷವನ್ನು ತಾನೇ ಮಾಡಿಸಿಕೊಳ್ಳುವನೆಂದು ಈ ಶ್ಲೋಕದ ತಾತ್ಪರ್ಯವು. ಶ್ರುತಿಯ ತಾತ್ಪರ್ಯವೂ ಇದೇ ಆಗಿರುವುದು. ಸರ್ವ ಕರ್ತೃತ್ವವೂ ಪರಮಾತ್ಮನದು ಎಂದು ಹೇಳಿದ್ದರಿಂದ ರಮಾ ಬ್ರಹ್ಮಾದಿಗಳಿಗಿಂತಲೂ ಉತ್ತಮನೆಂದು ಹೇಳಿದಂತಾಯಿತು. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಆಚಾರ್ಯರು ಈ ಶ್ರುತಿಯನ್ನುದಾಹರಿಸಿರುವರೆಂದು ತಿಳಿಯಬೇಕು.

> ಕರೆಸುವನು ಮಾಯಾರಮಣ ತಾ
> ಪುರುಷರೂಪದಿ ತ್ರಿಸ್ಥಳಗಳೊಳು
> ಪರಮಸತ್ಪುರುಷಾರ್ಥನೆಂದ ಮಹತ್ತತ್ವದೊಳಗಿದ್ದು ।
> ಸರಸಿಜಭವಾಂಡ ಸ್ಥಿತ ಸ್ತ್ರೀ
> ಪುರುಷ ತನ್ಮಾತ್ರಗಳ ಏಕೋ
> ತ್ತರ ದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದಾ ॥೬॥

ಪದ್ಯಾರ್ಥ.—ಮಾಯಾರಮಣ–ಮಾಯಾಪತಿಯಾದ ಶ್ರೀವಾಸುದೇವಮೂರ್ತಿಯು, ತ್ರಿಸ್ಥಳಗಳೊಳು=ಶ್ವೇತದ್ವೀಪ ಮೊದಲಾದ ಮೂರು ಸ್ಥಳಗಳಲ್ಲಿ, ತಾ=ತಾನು, ಪುರುಷರೂಪದಿ=ಪುರುಷರೂಪದಿಂದಿದ್ದು, ಪರಮಸತ್ಪುರುಷಾರ್ಥದನೆಂದು ಕರೆಸುವನು=ಮುಕ್ತರಾದವರಿಗೆ ಸ್ವರೂಪಾನಂದವನ್ನು ಕೊಡುವನೆಂದು ಕರೆಸುವನು, ಮಹತ್ತತ್ವದೊಳಿದ್ದು, ಸರಸಿಜಭ

ವಾಂಡಸ್ಥಿತ-ಬ್ರಹ್ಮಾಂಡದೊಳಗಿನ, ಸ್ತ್ರೀಪುರುಷ-ಸ್ತ್ರೀಯರು, ಪುರುಷರು ತನ್ಮಾತ್ರ-ಶಬ್ದ ಸ್ಪರ್ಶಾದಿ ತನ್ಮಾತ್ರಾ ಗುಣಗಳನ್ನು, ಏಕೋತ್ತರದಶೇಂದ್ರಿಯಗಳ=ಮನಸ್ಸು ೧, ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫, ಅಂತು ೧೧ ಇಂದ್ರಿಯಗಳನ್ನು, ಮಹಾಭೂತಗಳ=ಪಂಚ ಮಹಾಭೂತಗಳನ್ನು, ನಿರ್ಮಿಸಿದ=ಸೃಷ್ಟಿಸಿದನು.

ತಾತ್ಪರ್ಯ.—ಮಾಯಾನಾಮಕಳಾದ ಲಕ್ಷ್ಮೀಪತಿಯಾದ ಶ್ರೀವಾಸುದೇವನು ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಸ್ಥಳಗಳಲ್ಲಿದ್ದು ಮುಕ್ತ ಜನರಿಗೆ ಸಕಲ ಪುರುಷಾರ್ಥಗಳನ್ನೂ ಕೊಡುವನು. ಸೃಷ್ಟಿಕಾಲದಲ್ಲಿ ಪುರುಷ ರೂಪವನ್ನು ಸ್ವೀಕರಿಸಿ ಮಹತ್ತತ್ವದೊಳಗಿದ್ದು ಬ್ರಹ್ಮಾಂಡದೊಳಗಿರುವ ಸ್ತ್ರೀಯರು, ಪುರುಷರು, ಮೊದಲಾದವರನ್ನೂ ಮನಸ್ಸು, ಜ್ಞಾನೇಂದ್ರಿಯಗಳು ೫, ಕರ್ಮೇಂದ್ರಿಯಗಳು ೫. ಪಂಚಮಹಾಭೂತಗಳು ತನ್ಮಾತ್ರಾಗುಣಗಳನ್ನು ಸೃಷ್ಟಿಸಿದನು. ಈ ಪದ್ಯಕ್ಕೆ ಪ್ರಕಾರಾಂತರವೂ ಅರ್ಥವಾಗುವುದು. ಪರಮಾತ್ಮನು ಮೂರು ಸಲ ಮೂರು ಪುರುಷ ರೂಪಗಳನ್ನು ಸ್ವೀಕರಿಸಿರುವನು. ಮೊದಲು ಮಾಯಾನಾಮಕಳಾದ ಲಕ್ಷ್ಮೀದೇವಿಯಲ್ಲಿ ಪುರುಷನಾಮಕನಾಗಿ ವೀರ್ಯಾಧಾನಮಾಡಿದನೆಂದು ಭಾಗವತ ವಾಕ್ಯವಿರುವುದು. ಎರಡನೆಯ ಪುರುಷರೂಪವು ಬ್ರಹ್ಮದೇವರಿಗೆ ಶರೀರಭೂತವಾದ ಮಹತ್ತತ್ವದಲ್ಲೂ ಬ್ರಹ್ಮಾಂಡದಲ್ಲೂ ಇದ್ದ ರೂಪವು. ಆ ರೂಪದಿಂದಲೇ ಇಂದ್ರಿಯಾದಿಗಳ ಸೃಷ್ಟಿ ಎಂದು ತಾತ್ಪರ್ಯ.

ಅವತಾರಿಕೆ.—ಮೂರನೆಯ ಪುರುಷರೂಪಿಯ ಕೃತ್ಯವನ್ನು ಹೇಳುತ್ತಾರೆ.—

**ಈ ಶರೀರಗ ಪುರುಷ ತ್ರಿಗುಣದಿ**
**ಶ್ರೀಸಹಿತ ತಾನಿದ್ದು ಜೀವರಿ**
**ಗಾಶಲೋಭಾ ಜ್ಞಾನ ಮದಮತ್ಸರಕುಮೋಹ ಕ್ಷುಧಾ ।**
**ಹಾಸಹರುಷ ಸುಷುಪ್ತಿ ಸ್ವಪ್ನ ಪಿ**
**ಪಾಸ ಜಾಗ್ರತಿ ಜನ್ಮಸ್ಥಿತಿ ಮೃತಿ**
**ದೋಷ ಪುಣ್ಯ ಜಯಾಪಜಯ ದ್ವಂದ್ವಗಳ ಕಲ್ಪಿಸಿದ ॥೮॥**

ಪದ್ಯಾರ್ಥ.—ಈ ಶರೀರಗ-ಎಲ್ಲಾ ಪ್ರಾಣಿಗಳ ದೇಹದೊಳಗೆ ಪ್ರತಿ

ಷ್ಟನಾದ ಪುರುಷ=ಪುರುಷನಾಮಕನು, ತ್ರಿಗುಣದಿ=ಸತ್ವ ರಜಸ್ತಮೋ ಗುಣಗಳಲ್ಲಿ, ಶ್ರೀಸಹಿತ=ಶ್ರೀ, ಭೂ, ದುರ್ಗಾ, ಸಮೇತನಾಗಿದ್ದು, ಜೀವರಿಗೆ ಆಶಾ, ಲೋಭ, ಅಜ್ಞಾನ, ಮದ, ಮತ್ಸರ, ಕು-ಕುತ್ಸಿತವಾದ ಮೋಹ ಕ್ಷುಧಾ=ಹಸಿವು, ಹಾಸ-ನಗುವಿಕೆ, ಹರುಷ=ಸಂತೋಷ, ಸುಷುಪ್ತಿ-ನಿದ್ರೆ, ಸ್ವಪ್ನ, ಪಿಪಾಸ=ಬಾಯಾರಿಕೆ, ಜಾಗ್ರತೆ=ಎಚ್ಚರ, ಜನ್ಮ=ಹುಟ್ಟುವಿಕೆ, ಸ್ಥಿತಿ=ರಕ್ಷಣೆ, ಮೃತಿ=ಮರಣ, ದೋಷ, ಪಾಪ, ಪುಣ್ಯ, ಜಯ, ಅಪಜಯ, ದ್ವಂದ್ವಗಳ-ಇವೇ ಮೊದಲಾದ ದ್ವಂದ್ವಗಳನ್ನು ಕಲ್ಪಿಸಿದ.

ತಾತ್ಪರ್ಯ.—ಸರ್ವ ಪ್ರಾಣಿಗಳ ದೇಹದೊಳಗೂ ಪುರುಷರೂಪದಿಂದ ಪರಮಾತ್ಮನು, ತ್ರಿಗುಣಾತ್ಮಕರಾದ ಶ್ರೀದೇವಿ, ಭೂದೇವಿ, ದುರ್ಗಾದೇವಿಯರಿಂದ ಕೂಡಿ ತಾನಿದ್ದು, ಜೀವರಿಗೆ ಆಶೆ, ಲೋಭ ಮೊದಲಾದ ದ್ವಂದ್ವವಾದ ಸುಖ ದುಃಖಗಳನ್ನು ಕಲ್ಪಿಸುವನು.

ಅವತಾರಿಕೆ.—ತ್ರಿವಿಧ ಜೀವರಿಗೂ ದೇಹವನ್ನು ಕೊಡಿಸಿ ಸಾಧನವಾದವರಿಗೆ ಬಂಧ ವಿಮೋಚನ ಮಾಡುವನೆಂದು ಹೇಳುತ್ತಾರೆ.—

**ತ್ರಿವಿಧಗುಣಮಯ ದೇಹಜೀವಕೆ**
**ಕವಚದಂದದಿತೊಡಿಸಿ ಕರ್ಮ**
**ಪ್ರವಹದೊಳು ಸಂಚಾರಮಾಡಿಸುತಿಪ್ಪ ಜೀವರನು ||**
**ಕವಿಸಿ ಮಾಯಾರಮಣ ಮೋಹವ**
**ಭವಕೆ ಕಾರಣನಾಗುವನು ಸಂ**
**ಶ್ರವಣಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ ||೮||**

ಪದ್ಯಾರ್ಥ.—ತ್ರಿವಿಧಗುಣಮಯ= ಸಾತ್ವಿಕ. ರಾಜಸ, ತಾಮಸರೆಂಬ ಮೂರು ವಿಧರಾದ, ಜೀವಕೆ=ಜೀವರಿಗೆ, ದೇಹ=ದೇಹಗಳನ್ನು, ಕವಚದಂದದಿ-ಕವಚದಂತೆ, ತೊಡಿಸಿ, ಕರ್ಮಪ್ರವಹದೊಳು=ಕರ್ಮಪ್ರವಾಹದೊಳಗೆ, ಜೀವರನ್ನು, ಸಂಚಾರಮಾಡಿಸುತಲಿಪ್ಪ, ಮಾಯಾರಮಣ-ಮಾಯಾಪತಿಯಾದ ವಾಸುದೇವನು, ಮೋಹವಕವಿಸಿ=ಮೋಹದಿಂದ, ಆವರಣ ಮಾಡಿಸಿ, ಭವಕೆ = ಸಂಸಾರಕ್ಕೆ, ಕಾರಣನಾಗುವನು, ಶ್ರವಣ ಮನನವ ಮಾಳ್ಪರಿಗೆ, ಮೋಚಕನೆನಿಸುತಿಪ್ಪ = ಮೋಕ್ಷಪ್ರದನೆನಿಸುವನು.

ತಾತ್ಪರ್ಯ.— ಲಿಂಗದೇಹಗಳಿಂದ ಯುಕ್ತರಾದ ತ್ರಿವಿಧ ಜೀವರಿಗೂ ಮೇಲೆ ಕವಚ ಹಾಕಿದಂತೆ ಸ್ಥೂಲದೇಹವನ್ನು ತೊಡಿಸಿ ಕರ್ಮ ಪ್ರವಾಹ ದೊಳಗೆ ಜೀವರನ್ನು ಸಂಚಾರಮಾಡಿಸುತ್ತಿರುವನು. ಮಾಯಾರಮಣ ನಾದ ಶ್ರೀವಾಸುದೇವನು ಮೋಹದಿಂದ ಜೀವರನ್ನು ಆಚ್ಛಾದಿಸುವನು. ಅವರಿಂದ ಸಂಸಾರಕ್ಕೆ ಜೀವರು ಕಾರಣರಾಗುವರು. ಭಗವತ್ಕಥಾಶ್ರವಣ ಮನನಾದಿಗಳಿಂದ ಪರಮಾತ್ಮನು ಪ್ರೀತನಾಗಿ ಸಂಸಾರದಿಂದ ಮುಕ್ತರ ನ್ನಾಗಿ ಮಾಡಿಸುವನು.

ಸಾಶನಾಹ್ವಯ ಸ್ತ್ರೀಪುರುಷರೊಳು
ವಾಸವಾಗಿಹನೆಂದರಿದು ವಿ
ಶ್ವಾಸಪೂರ್ವಕ ಭಜಿಸಿ ತೋಷಿಸುಸ್ವಾವರೋತ್ತಮರ ।
ಕ್ಲೇಶನಾಶನನಾಚಲಗಳೊಳು ಪ್ರ
ಕಾಶಿಸುತಲಿಹನಶನ ರೂಪೋ
ಪಾಸನವಮಾಳ್ಪರಿಗೆ ತೋರ್ವನು ತನ್ನ ನಿಜರೂಪವ ॥೯॥

ಪದ್ಯಾರ್ಥ.— ಸಾಶನಾಹ್ವಯ= ಭೋಜನಾದಿಗಳನ್ನು ಮಾಡುವ ಸ್ವ ಭಾವ ಉಳ್ಳವರಾದುದರಿಂದ ಸಾಶನರೆಂದು ಚಲಪ್ರಾಣಿಗಳಿಗೆ ಹೆಸರು. ಪರ ಮಾತ್ಮನು ಸ್ತ್ರೀಯರುಗಳಲ್ಲೂ, ಪುರುಷರುಗಳಲ್ಲೂ ವಾಸವಾಗಿಹನೆಂದು ತಿಳಿದು, ವಿಶ್ವಾಸಪೂರ್ವಕ ಭಜಿಸಿ, ಸ್ವಾವರ= ನಿಮಗಿಂತಲೂ ಕಮ್ಮಿಯಾದ ವರನ್ನು, ನಿಮಗಿಂತಲೂ ಉತ್ತಮರನ್ನು ಸಹ, ತೋಷಿಸು – ಸಂತೋಷ ಪಡಿಸಿರಿ ! ಕ್ಲೇಶನಾಶನ= ಕಷ್ಟ ಪರಿಹಾರಕನಾದ ಶ್ರೀಹರಿಯು, ಅಚಲಗ ಳೊಳು= ಪರ್ವತ ಸಾಲಿಗ್ರಾಮ ಮೊದಲಾದವುಗಳೊಳಗೆ, ಅನಶನರೂಪ– ಆಹಾರವಿಲ್ಲದುದರಿಂದ ಅನಶನನೆಂಬ ಹೆಸರುಳ್ಳವನಾಗಿ. ಪ್ರಕಾಶಿಸುತಲಿಹ –ಶೋಭಿಸುತ್ತಲಿರುವನು, ಉಪಾಸನಮಾಳ್ಪರಿಗೆ= ಮೇಲೆ ಹೇಳಿದಂತೆ, ಚಲ ಪ್ರಾಣಿಗಳಲ್ಲಿ ಸಾಶನರೆಂತಲೂ, ಅಚಲಗಳಲ್ಲಿ ಅನಶನನೆಂಬ ರೂಪಗಳಿಂದ ಲೂ ಭಗವಂತನಿರುವನೆಂದು ಉಪಾಸನೆಮಾಡುವವರಿಗೆ, ತನ್ನ ನಿಜರೂಪ ವನ್ನು, ತೋರ್ವನು– ತೋರುವನು.

ತಾತ್ಪರ್ಯ.— ಭೋಜನ ಪಾನಾದಿಗಳನ್ನು ಮಾಡುವವರು ಸಾಶನರೆಂ ತಲೂ, ಅದಿಲ್ಲದವರು ಅನಶನರೆಂತಲೂ ಕರೆಸಿಕೊಳ್ಳುವರು, ಚಲಪ್ರಾಣಿಗಳು

ಸಾಶನರು, ಅಚಲ ಪ್ರಾಣಿಗಳು ಅನಶನರೆಂತಲೂ ತಿಳಿಯಬೇಕು. ಚರ ಪ್ರಾಣಿಗಳಲ್ಲಿ ಮನುಷ್ಯರು ಉತ್ತಮರು. ಲೋಕದಲ್ಲಿರುವ ಸಾಮಾನ್ಯ ಸ್ತ್ರೀಪುರುಷರುಗಳಲ್ಲಿ ಸಾಶನನಾಮಕನಾಗಿ ಪರಮಾತ್ಮನು ವಾಸಮಾಡುವ ನೆಂದು ತಿಳಿದು ವಿಶ್ವಾಸಪೂರ್ವಕವಾಗಿ ಭಜಿಸುತ್ತಾ ತನಗಿಂತಲೂ ವಿದ್ಯಾ ಜ್ಞಾನ ಮೊದಲಾದ ವಿಷಯಗಳಲ್ಲಿ ಕಮ್ಮಿಯಾಗಿದ್ದರೂ ತನಗಿಂತಲೂ ಉತ್ತಮರಾಗಿದ್ದರೂ ಅವರಲ್ಲಿ ಸಾಶನನಾಮಕ ಪರಮಾತ್ಮನು ಚಿಂತಿಸಿ ಎಲ್ಲರನ್ನು ಸಂತೋಷಪಡಿಸಬೇಕು. ಕಷ್ಟ ನಿವಾರಕನಾದ ಸ್ವಾಮಿಯು ಅಚಲವಾದ ಪರ್ವತ, ಸಾಲಿಗ್ರಾಮ ಮೊದಲಾದವುಗಳಲ್ಲಿ ಅನಶನನಾಮಕ ನಾಗಿರುವನೆಂದು ಉಪಾಸನೆ ಮಾಡಬೇಕು. ಹೀಗೆ ಉಪಾಸನ ಮಾಡುವ ವರಿಗೆ ಶ್ರೀಹರಿಯು ತನ್ನ ನಿಜರೂಪವನ್ನು ತೋರುವನು.

ಅವತಾರಿಕೆ.—ಪ್ರಕಾರಾಂತರದಿಂದ ಹರಿಯನ್ನು ಚಿಂತಿಸುವ ಮಾರ್ಗ ವನ್ನು ಹೇಳುತ್ತಾರೆ.

**ಪ್ರಕಾರಾಂತ ಚಿಂತಿಸುವದೀ**
**ಪ್ರಕೃತಿಯೊಳು ವಿಶ್ವಾದಿರೂಪವ**
**ಪ್ರಕಟಮಾಳ್ಪೆನು ಯಥಾಮತಿಯೊಳು ಗುರು ಕೃಪಾಬಲದಿ ||**
**ಮುಕುರ ನಿರ್ಮಿತ ಸದನದೊಳು ಪೋಗೆ**
**ಸ್ವಕಿಯ ರೂಪವ ಕಾಂಬತೆರದಂ**
**ತಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ||೧೦||**

ಪದ್ಯಾರ್ಥ.—ಪ್ರಕಾರಾಂತರ=ಮತ್ತೊಂದು ಪ್ರಕಾರವಾಗಿ, ಚಿಂತಿ ಸುವದು=ಚರಾಚರಾತ್ಮಕ ಪ್ರಪಂಚದಲ್ಲಿ ಪರಮಾತ್ಮನ ವ್ಯಾಪ್ತಿಯನ್ನು ಚಿಂ ತಿಸಬಹುದು. ಈ ಪ್ರಕೃತಿಯೊಳು, ವಿಶ್ವಾದಿ=ವಿಶ್ವ, ತೈಜಸ, ಮೊದಲಾದ ರೂಪವನ್ನು ಉಪಾಸನೆ ಮಾಡುವ ರೀತಿಯನ್ನು, ಗುರುಕೃಪಾಬಲದಿ=ನಮ್ಮ ಗುರುಗಳ ಕೃಪಾಬಲದಿಂದ, ಯಥಾಮತಿಯೊಳಗೆ-ನನ್ನ ಬುದ್ಧಿಗೆ ಗೋಚ ರವಾದಮಟ್ಟಿಗೆ ಪ್ರಕಟಮಾಳ್ಪೆನು. ಮುಕುರನಿರ್ಮಿತಸದನದೊಳು=ಕನ್ನ ಡಿಯಿಂದ ರಚಿತವಾದ ಮನೆಯಲ್ಲಿ, ಪೋಗೆ=ಯಾವನಾದರು ಒಬ್ಬನು ಹೋ ಗಲು, ಸ್ವಕಿಯರೂಪವಕಾಂಬ ತೆರದಲಿ-ತನ್ನ ಪ್ರತಿಬಿಂಬ ರೂಪವನ್ನು

ತಾನು ಕಾಣುವಂತೆ, ಅಕುಟಿಲಾತ್ಮಕ=ವಕ್ರ ಸ್ವಭಾವವಲ್ಲದ, ಋಜು ಸ್ವಭಾವಾತ್ಮಕನಾದ ಶ್ರೀಹರಿಯು, ಚರಾಚರಾದಿ=ಚರರಾದ ಮನುಷ್ಯಾಧಿಗಳು ಅಚರವಾದ ಪರ್ವತಾದಿಗಳು ಇವುಗಳಲ್ಲಿ, ಸರ್ವತ್ರ ತೋರುವನು.

ತಾತ್ಪರ್ಯ.—ಪ್ರಕಾರಾಂತರವಾಗಿಯೂ ಪರಮಾತ್ಮನ ರೂಪಗಳನ್ನು ಸರ್ವತ್ರ ಚಿಂತಿಸಬಹುದು. ಪ್ರಕೃತಿಯೊಳಗೆ ವಿಶ್ವಾದಿ ರೂಪದಿಂದ ಪರಮಾತ್ಮನು ಕಾಣುವನು. ನಮ್ಮ ಗುರುಗಳ ಕೃಪಾಬಲದಿಂದ ಪ್ರಕೃತಿಯೊಳಗೆ ವಿಶ್ವಾದಿ ರೂಪವನ್ನು ಚಿಂತಿಸುವ ಪ್ರಕಾರವನ್ನು ನನಗೆ ತೋರಿದಷ್ಟು ಹೇಳುವೆನು. ರಸ ಸಂಬಂಧವಾದ ಕನ್ನಡಿಯಿಂದ ಮನೆ ಕಟ್ಟಿ ಆ ಮನೆಯಲ್ಲಿ ಯಾವನಾದರೂ ಪ್ರವೇಶ ಮಾಡಿದರೆ, ೪ ಭಾಗದಲ್ಲೂ ಕನ್ನಡಿ ಇರುವುದರಿಂದ, ಒಂದು ಕನ್ನಡಿಗೆ ಮತ್ತೊಂದು ಕನ್ನಡಿಯು ಪ್ರತಿಬಿಂಭವಾಗಿ ೪ ಕಡೆಯಲ್ಲೂ ಒಳ ಹೊಕ್ಕವನ ರೂಪವು ಅನಂತವಾಗಿ ಕಾಣುವುದು. ಹೋದವನು ಒಬ್ಬನೇ ಆದರೂ ಎದುರೆದುರಿಗೆ ಕನ್ನಡಿಗಳ ಪ್ರತಿಬಿಂಭದಿಂದ ಅನಂತ ರೂಪ ಕಾಣುವಂತೆ ಪರಮಾತ್ಮನು ಚರಾಚರಾತ್ಮಕ ಪ್ರಪಂಚದಲ್ಲಿ ಸ್ವರೂಪ ಭೂತವಾದ ಶರೀರೋಪಾಧಿಯಿಂದ ಅನಂತಾನಂತ ರೂಪಿಯಾಗಿ ಕಾಣುವನು.

ಪರಿಚ್ಛೇದತ್ರಯ ಪ್ರಕೃತಿಯೊಳ
ಗಿರುತಿಹನು ವಿಶ್ವಾದಿ ರೂಪವ
ಧರಿಸುತಾತ್ಮಾದಿ ತ್ರಿರೂಪವ ಈಷಣತ್ರಯದಿ ||
ಸುರುಚಿ ಜ್ಞಾನಾತ್ಮ ಸ್ವರೂಪದಿ
ತುರ‍್ಯನಾಮಕ ವಾಸುದೇವನ
ಸ್ಮರಿಸು ಮುಕ್ತಿಪ್ರದಾಯಕನೀತನಹುದೆಂದು ||೧೧||

ಪದ್ಯಾರ್ಥ.—ಪರಿಚ್ಛೇದತ್ರಯ ಪ್ರಕೃತಿಯೊಳಗೆ = ಸತ್ವಪರಿಚ್ಛೇದ, ರಜೋಪರಿಚ್ಛೇದ, ತಮಃಪರಿಚ್ಛೇದವೆಂಬ ಮೂರು ಪರಿಚ್ಛೇದ ಉಳ್ಳ ಪ್ರಕೃತಿಯೊಳಗೆ, ವಿಶ್ವಾದಿರೂಪವ=ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳನ್ನು ಧರಿಸುತ್ತಾ ಇರುತಿಹನು, ಈಷಣತ್ರಯದಿ=ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ, ಆತ್ಮಾದಿತ್ರಿರೂಪವ=ಆತ್ಮ

ಅಂತರಾತ್ಮ, ಪರಮಾತ್ಮನೆಂಬ ಮೂರು ರೂಪಗಳನ್ನು ಧರಿಸಿ ಇರುತಿಹನು ಸುರುಚಿ=ವಿಶೇಷವಾದ ಕಾಂತಿ ಸಂಪನ್ನನಾದ ಶ್ರೀಹರಿಯು ಜ್ಞಾನಾತ್ಮ ಸ್ವರೂಪನಾಗಿ, ತುರ್ಯನಾಮಕನಾಗಿಯೂ, ವಾಸುದೇವನಾಮಕನಾಗಿಯೂ, ಇದ್ದು, ಈತನು, ಈ ಪರಮಾತ್ಮನೇ, ಮುಕ್ತಿಸುಖಪ್ರದಾಯಕನೆಂದು-ಮುಕ್ತಿ ಸುಖವನ್ನು ಕೊಡುವವನೆಂದು, ಸ್ಮರಿಸು.

ತಾತ್ಪರ್ಯ.—ಪ್ರಕೃತಿಯು ಮೂರು ಪರಿಚ್ಛೇದ ಸ್ವರೂಪಳು, ಸತ್ವ ಪರಿಚ್ಛೇದ, ರಜಃಪರಿಚ್ಛೇದ, ತಮಃಪರಿಚ್ಛೇದವೆಂದು ಈ ಮೂರರಲ್ಲಿ ವಿಶ್ವ ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿಂದ ಶ್ರೀಪರಮಾತ್ಮನು ವಾಸ ಮಾಡುವನು. ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸ ಮಾಡುವನು. ಜ್ಞಾನಾತ್ಮ ಸ್ವರೂಪನು ತುರ್ಯ, ವಾಸುದೇವ ಎಂಬ ರೂಪಗಳಿಂದ ಮುಕ್ತಿಯನ್ನಿತ್ತು ಸುಖವನ್ನು ಕೊಡುವನೆಂದು ಸ್ಮರಿಸತಕ್ಕದ್ದು.

**ಕಮಲಸಂಭವ ಜನಕ ಜಡ ಜಂ**
**ಗಮರೊಳಗೆ ನೆಲಸಿದ್ದು ಕ್ರಮ ವ್ಯ**
**ತ್ಕ್ರಮದಿ ಕರ್ಮಮಾಡಿ ಮಾಡಿಸುತಿಪ್ಪ ಬೇಸರದೇ ||**
**ಕ್ಷಮಕ್ಷಾಮ ಸಮೀಹನಾಹ್ವಯ**
**ಸುಮನಸಾಸುರರೊಳಿತಲಹಂ**
**ಮಮ ನಮಮ ಎಂದೀವುಪಾಸನೆಗೈವ ಪ್ರಾಂತದಲಿ ||೧೨||**

ಪದ್ಯಾರ್ಥ.—ಕಮಲಸಂಭವಜನಕ=ಬ್ರಹ್ಮದೇವರ ತಂದೆಯಾದ ಶ್ರೀ ವಾಸುದೇವನು, ಜಡಜಂಗಮರೊಳಗೆ=ಜಡಜೀವರಲ್ಲೂ, ತ್ರಿವಿಧರಾದ ಚೇತನರಲ್ಲೂ, ನೆಲಸಿದ್ದು-ವಾಸವಾಗಿದ್ದು, ಕ್ರಮ=ಮಾಡಬೇಕಾದ ಕೃತ್ಯ, ಪುಣ್ಯ; ವ್ಯತ್ಕ್ರಮದಿ=ಅದರ ವಿರುದ್ಧ ಪಾಪ; ಇಂತಹಾ ಪುಣ್ಯ ಪಾಪ ಕರ್ಮಗಳನ್ನು, ಬೇಸರದೆ ಮಾಡಿ ಅವರಿಂದಲೂ ಮಾಡಿಸುತಲಿಪ್ಪನು. ಕ್ಷಮ-ಸಹನಶೀಲನಾದುದರಿಂದ ಕ್ಷಮನೆಂತಲೂ, ಕ್ಷಾಮ=ಪ್ರಳಯ ಕಾಲದಲ್ಲಿ ಎಲ್ಲಾ ಪ್ರಾಣಿಗಳನ್ನೂ ಸೂಕ್ಷ್ಮರೂಪ ಉಳ್ಳವರನ್ನಾಗಿ ಮಾಡಿ ತನ್ನ ಉದರದಲ್ಲಿ ಇಟ್ಟುಕೊಳ್ವನಾದುದರಿಂದ ಕ್ಷಾಮನೆಂತಲೂ, ಸಮೀಹನ=ಸೃಷ್ಟ್ಯಾದಿ ಕರ್ಮವನ್ನು ಮಾಡುವುದರಲ್ಲಿ ಚೆನ್ನಾಗಿ ಇಚ್ಛೈಸುವುದರಿಂದ ಸಮೀಹನ

ನೆಂತಲೂ ಹೆಸರು, ಈ ನಾಮಗಳಿಂದ, ಸುಮನಸಾಸುರರೊಳಿರುತಲಿ=ದೇವತೆಗಳು, ದೈತ್ಯರು, ಸಾಹಚರ್ಯರಾದುದರಿಂದ ಮಧ್ಯಮರನ್ನು ತೆಗದುಕೊಳ್ಳಬೇಕು ನಿತ್ಯ ಸಂಸಾರಿಗಳೆಂದರ್ಥ. ಈ ಮೂವರಲ್ಲಿ ವಾಸಮಾಡುತ್ತ, ಅಹಂ=ನಾನೇ ಪರಮಾತ್ಮನೆಂದು ದೈತ್ಯರಲ್ಲೂ, ಮಮ = ನನ್ನ ಹೆಂಡರು, ಮಕ್ಕಳು ನನ್ನವರೆಂಬುವ ಮಮತೆಯಿಂದ ( ಫಲಾಪೇಕ್ಷೆಯಿಂದ ) ನಿತ್ಯ ಸಂಸಾರಿಗಳಲ್ಲೂ, ನಮಮ=ಸಕಲವೂ ಪರಮಾತ್ಮನದು, ನನ್ನದೇನೂ ಇಲ್ಲವೆಂದು ಸಾತ್ವಿಕರಾದ ದೇವತೆಗಳಲ್ಲೂ, ಪ್ರಾಂತದಲಿ=ಕಡೆಯ ಕಾಲದಲ್ಲಿ, ಈ ಉಪಾಸನೆಗೈವ=ಮಾಡಿಮಾಡಿಸುವನು.

ತಾತ್ಪರ್ಯ.—ಶ್ರೀವಾಸುದೇವನು ತ್ರಿವಿಧ ರಾಶಿಗಳಲ್ಲೂ ಇದ್ದು ಪುಣ್ಯಪಾಪಗಳನ್ನು ಮಾಡಿಮಾಡಿಸುವನು. ದೇವತೆಗಳಲ್ಲಿ ಕ್ಷಮ ಎಂಬ ಹೆಸರಿನಿಂದಲೂ, ದೈತ್ಯರಲ್ಲಿ ಕ್ಷಾಮನೆಂಬ ಹೆಸರಿನಿಂದಲೂ, ಮಧ್ಯಮ ಜೀವರಲ್ಲಿ ಸುಮೋಹನನೆಂಬ ಹೆಸರಿನಿಂದಲೂ, ಇದ್ದು ದೈತ್ಯರಲ್ಲಿ ನಾನೇ ಈಶ್ವರನು, ನಾನೇ ಭೋಗಿಯೂ, ಎಂದು ಅಸದುಪಾಸನೆಯನ್ನು ಸಾಧನ ಪೂರ್ತಿಯಾಗುವ ಕಾಲದಲ್ಲಿ ಮಾಡಿ ಅವರಿಂದಲೂ ಮಾಡಿಸುವನು. ರಾಜಸಜೀವರಲ್ಲಿದ್ದು ತನ್ನ ಹೆಂಡರು ಮಕ್ಕಳೆಂಬ ಮಮತೆಯನ್ನು ಕೊಟ್ಟು ಹೆಂಡರು ಮಕ್ಕಳು ಮೊದಲಾದವರ ಕ್ಷೇಮಕ್ಕಾಗಿ ಫಲಾಪೇಕ್ಷೆಯಿಂದ ಉಪಾಸನೆ ಮಾಡಿಮಾಡಿಸುವನು. ಸಾತ್ವಿಕರಾದ ದೇವತೆಗಳಲ್ಲಿದ್ದು ಸಕಲವೂ ಪರಮಾತ್ಮನದು. ಅವನು ಸ್ವತಂತ್ರನು, ನಾನು ಪರತಂತ್ರನೆಂದು ಉಪಾಸನೆ ಮಾಡಿಮಾಡಿಸುವನು. ಕಡೆಗೆ ಆ ಉಪಾಸನೆಯನ್ನನುಸರಿಸಿ ಫಲವನ್ನು ಕೊಡುವನೆಂಬ ತಾತ್ಪರ್ಯ. ಇದರಿಂದ ಜೀವನಿಗೆ ಸ್ವತಂತ್ರದಿಂದ ಒಂದು ತೃಣ ಚಲನ ಶಕ್ತಿಯೂ, ಪರಮಾತ್ಮನು ಕೊಟ್ಟ ಹೊರತು ಉಂಟಾಗುವದಿಲ್ಲವೆಂದು ದೃಢವಾಗಿ ಹೇಳಿದಂತಾಯಿತು.

ಈ ಸಮಸ್ತ ಜಗತ್ತು ಈಶಾ
ವಾಸ್ಯವೆನಿಪದು ಕಾರ್ಯರೂಪವು
ನಾಶವಾದುದು ನಿತ್ಯವೆಸರಿ ಕಾರಣಪ್ರಕೃತೀ ।
ಶ್ರೀಶಗೆ ಜಡಪ್ರತಿಮ ಎನಿಪುದು
ಮಾಸದೊಮ್ಮಗು ಸನ್ನಿಧಾನವು
ವಾಸವಾಗಿಹ ನಿತ್ಯಶಾಲಿಗ್ರಾಮದೋಃಪಾದಿ ॥೧೩॥

ಪದ್ಯಾರ್ಥ.— ಈ ಸಮಸ್ತ ಜಗತ್ತು, ಈಶಾವಾಸ್ಯವೆನಿಪುದು=ಪರಮಾತ್ಮನ ಆ ವಾಸಸ್ಥಾನವಾಗಿರುವದು, ಕಾರ್ಯರೂಪವು=ಕಾರ್ಯರೂಪವಾದ ಈ ಜಗತ್ತು, ನಾಶವಾದರು=ಪ್ರಳಯಕಾಲದಲ್ಲಿ ನಾಶಹೊಂದಿದರೂ, ಕಾರಣಪ್ರಕೃತಿ=ಪ್ರಪಂಚಸೃಷ್ಟಿಗೆ ಕಾರಣಭೂತಳಾದ ಪ್ರಕೃತಿಯು, ನಿತ್ಯವೇಸರಿ. ಕಾರ್ಯರೂಪವಾದ ಪ್ರಪಂಚವು, ಶ್ರೀಶಗೆ=ಶ್ರೀಲಕ್ಷ್ಮೀಪತಿಗೆ ಜಡಪ್ರತಿಮೆ ಎನಿಪುದು. ಸನ್ನಿಧಾನವು, ವಾಸದೊಳ್ಮೆಗು=ಎಂದಿಗೂ ಕಮ್ಮಿಯಾಗದು (ನಾಶವಾಗದು) ಸಾಲಿಗ್ರಾಮದೋಪಾದಿ, ನಿತ್ಯವಾಸವಾಗಿಹ=ವಾಸಮಾಡುತ್ತಿರುವನು.

ತಾತ್ಪರ್ಯ.—" ಈಶಾವಾಸ್ಯಮಿದಂ ಸರ್ವಂ " ಎಂಬ ಈಶಾವಾಸ್ಯೋಪನಿಷದ್ವಾಕ್ಯದಂತೆ ಈ ಜಗತ್ತೆಲ್ಲವೂ ಶ್ರೀಪರಮಾತ್ಮನ ಆವಾಸಸ್ಥಾನವಾಗಿರುವದು. ಘಟಕ್ಕೆ ಕಾರಣ ಮೃತ್ತಿಕೆ, ಕಾರ್ಯರೂಪವು ಘಟವು. ಘಟನಾಶವಾದರೂ ಕಾರಣರೂಪವಾದ ಮೃತ್ತಿಕೆಯು ನಿತ್ಯವಾದುದರಿಂದ ಮತ್ತೂ ಘಟಸೃಷ್ಟಿಯಾಗುವುದು. ಅದರಂತೆ ಪ್ರಕೃತಿಯಲ್ಲಿ ಚೇತನಪ್ರಕೃತಿಯು ಚೇತನಸೃಷ್ಟಿಗೆ ಕಾರಣಳು, ಜಡಪ್ರಕೃತಿಯು ಜಡಸೃಷ್ಟಿಗೆ ಕಾರಣರೂಪವು. ಕಾರ್ಯರೂಪವಾದ ಜಗತ್ತು ನಾಶವಾದರೂ ಕಾರಣರೂಪಪ್ರಕೃತಿ ನಿತ್ಯವಾದುದರಿಂದ ಮತ್ತು ಸೃಷ್ಟಿಯಾಗುವುದು. ಜಡಚೇತನಾತ್ಮಕವಾದದು ಪ್ರಪಂಚವು. ಇದರಲ್ಲಿ ಜಡರೂಪವಾದ ಪ್ರಪಂಚವೆಲ್ಲವೂ ಪರಮಾತ್ಮನಿಗೆ ಜಡಪ್ರತಿಮೆ ಎನಿಸುವದು. • ಚೇತನರೆಲ್ಲರೂ ಪರಮಾತ್ಮನ ಚೇತನಪ್ರತಿಮೆ ಎಂದು ಹಿಂದಿನ ಪದ್ಯದಲ್ಲೇ ಸೂಚಿಸಿರುವರು. ಕಾರ್ಯರೂಪ ಪ್ರಪಂಚವಿರುವವರೆಗೂ ಪರಮಾತ್ಮನ ಸನ್ನಿಧಾನವಿದ್ದೇ ಇರುವದು. ಪ್ರಳಯದಲ್ಲೂ ಸಹ ಕಾರಣದಲ್ಲಿ ವಾಸವಾಗಿರುವನು. ಸಾಲಿಗ್ರಾಮದಲ್ಲಿ ಹೇಗೆ ನಿತ್ಯದಲ್ಲೂ ಸನ್ನಿಧಾನವಿದ್ದೇ ಇರುವದೋ ಹಾಗೆಯೇ ಪ್ರಪಂಚದಲ್ಲೂ ನಿತ್ಯಸನ್ನಿಧಾನವು ಇದ್ದೇ ಇರುವದು.

**ಏಕಮೇವಾದ್ವಿತೀಯ ರೂಪಾ**
**ನೇಕ ಜೀವರೊಳಗಿದ್ದು ತಾ ಪ್ರ**
**ತ್ಯೇಕ ಕರ್ಮವಮಾಡಿ ಮೋಹಿಸುತಿಪ್ಪ ತಿಳಿಸದಲೆ ||**
**ಮೂಕಬಧಿರಾಂಧಾದಿ ನಾಮಕ**
**ನೀಕಳೇವರದೊಳಗೆ ಕರೆಸುವ**
**ಮಾಕಳತ್ರನ ಲೌಕಿಕ ಮಹಾಮಹಿಮೆಗೇನೆಂಬೆ ||೧೪||**

ಅವುಗಳಲ್ಲಿ ತನ್ನದೆಂಬ ಅಭಿಮಾನಮಾಡದೆ, ಅವುಗಳಲ್ಲಿ ಅಂತರ್ಗತನಾದ ಸರ್ವನಾಮಕನಾದ ಪರಮಾತ್ಮನನ್ನು ಪೂಜಿಸು.

ಶ್ರೀತರುಣಿವಲ್ಲಭಗೆ ಜೀವರು
ಚೇತನ ಪ್ರತಿಮೆಗಳು ಓತ
ಪ್ರೋತನಾಗಿದ್ದೆಲ್ಲರೊಳು ವ್ಯಾಪಾರಮಾಡುತಿಹ ||
ಹೋತ ಸರ್ವೇಂದ್ರಿಯಗಳೊಳು ಸಂ
ಪ್ರೀತಿಯಿಂದುಂಡುಣಿಸಿ ವಿಷಯದಿ
ರ್ವಾತದೇಶಗದೀಪದಂದದಲಿಪ್ಪ ನಿರ್ಭಯದಿ ||೧೭||

ಪದ್ಯಾರ್ಥ.—ಶ್ರೀತರುಣಿವಲ್ಲಭಗೆ=ಲಕ್ಷ್ಮೀಪತಿಯಾದ ಶ್ರೀಹರಿಗೆ, ಜೀವರು, ಚೇತನಪ್ರತಿಮೆಗಳು ಎಲ್ಲರೊಳು ಓತಪ್ರೋತನಾಗಿದ್ದು=ವಸ್ತ್ರದಲ್ಲಿ ದಾರವು ಹೇಗೆ ಅಡ್ಡವಾಗಿಯೂ, ಉದ್ದವಾಗಿಯೂ, ಶೇರಿಕೊಂಡಿರುವದೋ ಹಾಗೆ ಪರಮಾತ್ಮನು ಶೇರಿಕೊಂಡಿದ್ದು, ವ್ಯಾಪಾರ=ಕರ್ಮಗಳನ್ನು ಮಾಡುತಿಹನು, ಸರ್ವೇಂದ್ರಿಯಗಳೊಳು, ಹೋತ = ಹೋತನೆಂಬ ಹೆಸರಿನಿಂದ ಇದ್ದು ಸಂಪ್ರೀತಿಯಿಂದ, ವಿಷಯ=ವಿಷಯಭೋಗಗಳನ್ನು, ಉಂಡು=ಉಣಿಸಿ, ನಿರ್ವಾತದೇಶಗ=ಹೆಚ್ಚು ಗಾಳಿಯಿಲ್ಲದ ಪ್ರದೇಶದಲ್ಲಿರುವ, ದೀಪದಂದದಲಿ=ನಿರ್ಭಯದಿ=ನಿರ್ಭಯದಿಂದ, ಇಪ್ಪ=ಇರುತ್ತಿರುವನು.

ತಾತ್ಪರ್ಯ.—ಪರಮಾತ್ಮನಿಗೆ ಜೀವರೆಲ್ಲರೂ ಚೇತನಪ್ರತಿಮೆಗಳೆನಿಸುವರು. ದಾರಗಳಿಂದ ನೇಯ್ದ ವಸ್ತ್ರದಲ್ಲಿ ಹೇಗೆ ದಾರವು ಅಡ್ಡವಾಗೂ ಉದ್ದವಾಗಿಯೂ ವ್ಯಾಪಿಸಿಕೊಂಡು ದಾರವಾಗಿ ಕಾಣದೇ ವಸ್ತ್ರವಾಗಿ ಕಾಣುವದೋ ಹಾಗೆಯೇ ಪರಮಾತ್ಮನು ಎಲ್ಲಾ ಪ್ರಾಣಿಗಳಲ್ಲೂ ಅಡ್ಡವಾಗಿಯೂ, ಉದ್ದವಾಗಿಯೂ ಶೇರಿಕೊಂಡು ಪ್ರಾಣಿಗಳಂತೆ ಕಾಣುತ್ತಾ ಕರ್ಮಗಳನ್ನು ಮಾಡುತ್ತಿರುವನು. ಸರ್ವೇಂದ್ರಿಯಗಳಲ್ಲೂ ಹೋತನಾಮಕನಾಗಿದ್ದು ವಿಷಯಸುಖವನ್ನು ತಾನುಂಡು ಅವರಿಗೂ ಪ್ರೀತಿಯಿಂದುಣಿಸಿ, ಹೆಚ್ಚಾದ ಗಾಳಿ ಇಲ್ಲದ ಪ್ರದೇಶದಲ್ಲಿರುವ ದೀಪಕ್ಕೆ ಹೇಗೆ ಆರಿಹೋಗುವ ಭಯವಿಲ್ಲವೋ ಹಾಗೆ ಸರ್ವತ್ರದಲ್ಲೂ ನಿರ್ಭೀತನಾಗಿ ವಾಸಮಾಡುವನು.

ಭೂತಸೋಕಿದ ಮಾನವನು ಬಹು
ಮಾತನಾಡುವತೆರದಿ ಮಹದ
ದ್ಭುತ ವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವು ।
ಕೈತವೋಕ್ತಿಗಳಲ್ಲ ಶೇಷ ಫ
ಣಾತಪತ್ರಗೆ ಜೀವಪಂಚಕ
ವ್ರಾತವೆಂದಿಗು ಭಿನ್ನಪಾದಾಹ್ವಯದಿ ಕರೆಸುವದು ॥೧೪॥

ಪದ್ಯಾರ್ಥ.—ಭೂತಸೋಕಿದಮಾನವನು=ಭೂತಪಿಶಾಚ ಮೊದಲಾದವುಗಳಿಂದ ಹಿಡಿಸಿಕೊಳ್ಳಲ್ಪಟ್ಟ ಮನುಷ್ಯನು, ಬಹುಮಾತನಾಡುವತೆರದಿ, ಮಹದದ್ಭುತವಿಷ್ಣ್ವಾವೇಶದಿಂದಲಿ=ಮಹ ಭೂತನಾದ ವಿಷ್ಣುವಿನ ಆವೇಶದಿಂದ, ಜಗವು, ವರ್ತಿಪುದು-ವರ್ತಿಸುವುದು, ಕೈತವೋಕ್ತಿಗಳಲ್ಲ=ಈ ವಾಕ್ಯಗಳು ಕಪಟವಾದ ಮಾತಲ್ಲ (ಸುಳ್ಳು ಮಾತಲ್ಲ,) ಶೇಷಫಣಾತಪತ್ರಗೆ=ಶೇಷದೇವರ ಹೆಡೆಗಳೆಂಬುವ ಕೊಡೆಯಂತೆ ಶೋಭಿಸದೆಂದರ್ಥ. ಇಂತಹ ಪರಮಾತ್ಮನಿಗೆ, ಜೀವಪಂಚಕವ್ರಾತ-ದೇವತೆಗಳು, ಗಂಧರ್ವರು, ಪಿತೃಗಳು, ಮನುಷ್ಯರು, ಅಸುರರೆಂಬ ಭೇದವುಳ್ಳ ಈ ಸಮೂಹವು, ಎಂದಿಗೂ ಭಿನ್ನಪಾದಾಹ್ವಯದಿ=ಭಿನ್ನಾಂಶರೆಂದು ಕರೆಸುವರು.

ತಾತ್ಪರ್ಯ.—ಪಿಶಾಚಗ್ರಸ್ತನಾದ ಮನುಷ್ಯನು ಅತಿ ಮಾತುಗಳನ್ನಾಡುವಂತೆ, ಪರಮಾತ್ಮನೆಂಬ ಮಹಾಭೂತಗ್ರಸ್ತವಾದ ಈ ಜಗತ್ತು ಅಂದರೆ ಜಗತ್ತಿನಲ್ಲಿರುವ ಪ್ರಾಣಿಗಳು, ಅನೇಕ ಪ್ರಕಾರ ಅದ್ಭುತವಾದ ಕಾರ್ಯಗಳನ್ನು ಮಾಡುತ್ತಿರುವರು. ಈ ಮಾತು ಸುಳ್ಳಲ್ಲ. ಶೇಷದೇವರ ಹೆಡೆಯನ್ನೇ ಕೊಡೆಯನ್ನಾಗಿ ಮಾಡಿಕೊಂಡಿರುವ ಪರಮಾತ್ಮನಿಗೆ ಜೀವಪಂಚಕವ್ರಾತವು ಯಾವಾಗಲೂ ಭಿನ್ನಪಾದವೆಂದು ಕರೆಸುವದು. ಜೀವಪಂಚಕವು ಯಾವುದೆಂದರೆ ಭಾಗವತ ದಶಮಸ್ಕಂಧದ ಮೊದಲನೆಯ ಅಧ್ಯಾಯದ ೪೨ನೆಯ ಶ್ಲೋಕದಲ್ಲಿ " ಆತ್ಮಪಂಚಸು " ಎಂಬ ಪದಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಆತ್ಮಪಂಚಸು=ದೇವ, ಗಂಧರ್ವ, ಪಿತೃ, ಮನುಷ್ಯ, " ಅಸುರಭೇಧೇನ ಪಂಚಾನಾಂ ಆತ್ಮಾನಾಂ ಮಧ್ಯೆ " ಎಂದು ಅರ್ಥಮಾಡಿರುವರು. ಆ ಅಭಿಪ್ರಾಯವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಭಿನ್ನಪಾದವೆಂದರೆ.—" ಪಾದೋಽಸ್ಯ ವಿಶ್ವಾಭೂತಾನಿ " ಎಂದು ಶ್ರುತಿಯೂ, ಭಾಗವತ ದ್ವಿತೀಯ

ಸ್ಕಂಧ ೬ನೆಯ ಅಧ್ಯಾಯದಲ್ಲಿ ಪಾದೋಽಸ್ಯ ಸರ್ವಭೂತಾನಿ ಪುಂಸಃ ಸ್ಥಿತಿ ವಿದೋವಿದುಃ ॥ ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ, ಸರ್ವಭೂತಾನಿ=ಸರ್ವ ಜೀವಾಃ ಅಸ್ಯಪುರುಷಸ್ಯಪಾದಃ ಭಿನ್ನಾಂಶಃ ಇತಿಸ್ಥಿತಿವಿದಃ ವಿದುಃ ಎಂದು ಮಾಡಿರುವರು. ಇದರಿಂದ ಸರ್ವಜೀವರೂ ಪರಮಾತ್ಮನ ಭಿನ್ನಾಂಶರೆಂದ ರ್ಥವಾಯಿತು. ಅದೇ ಅರ್ಥವನ್ನೇ ಇಲ್ಲೂ ತಿಳಿಯಬೇಕು.

ದಿವಿಯೊಳಿಪ್ಪವು ಮೂರುಪಾದಗ
ಳವನಿಯೊಳಗಿಹದೊಂದು ಈ ವಿಧ
ಕವಿಭಿರೀಡಿತ ಕರೆಸುವ ಚತುಷ್ಪಾತು ತಾನೆಂದು ॥
ಇವನಪಾದ ಚತುಷ್ಟಯಗಳನು
ಭವಕೆತಂದು ನಿರಂತರದಿ ವು
ದ್ಧವನ ಸಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರು ॥೧೯॥

ಪದ್ಯಾರ್ಥ.—ಮೂರುಪಾದಗಳು–ಅನಂತಾಸನ, ವೈಕುಂಠ, ನಾರಾ ಯಣರೆಂಬ ಮೂರು ಸ್ವರೂಪಾಂತಗಳು, ಧಿವಿಯೊಳಿಪ್ಪವು=ಬ್ರಹ್ಮಾಂಡಕ್ಕೆ ಹೊರಭಾಗದಲ್ಲಿರುವುವು. ಅವನಿಯೊಳಗಿಹದೊಂದು = ಈ ಭೂಮಿಯಲ್ಲಿ ಮೇಲಿನ ಪದ್ಯದಲ್ಲಿ ಹೇಳಿದ ಪ್ರಕಾರವಾಗಿ ಸಕಲ ಪ್ರಾಣಿಗಳು ಭಿನ್ನಾಂಶರೆಂ ಬುವುದೊಂದು ಪಾದವು, ಈವಿಧಕವಿಭಿರೀಡಿತ–ಜ್ಞಾನಿಗಳಿಂದ ಸ್ತುತ್ಯನಾದ ಶ್ರೀಹರಿಯು, ಚತುಷ್ಪಾತು ತಾನೆಂದು–೪ ವಿಧವಾದ ಅಂಶಗಳುಳ್ಳವನೆಂದು ಕರೆಸುವನು. ಇವನ ಪಾದಚತುಷ್ಟಯಗಳ–ಈ ಪರಮಾತ್ಮನ ೪ ಅಂಶಗ ಳನ್ನು ಅನುಭವಕ್ಕೆ ತಂದು, ನಿರಂತರದಿ, ಉದ್ಧವನಸಖ=ಶ್ರೀಕೃಷ್ಣನು ಸ ರ್ವಾಂತರಾತ್ಮಕನೆಂದು ಸ್ಮರಿಸುತಿರು.

ತಾತ್ಪರ್ಯ.—ಹಿಂದಿನ ಪದ್ಯದಲ್ಲೂ, ಈ ಪದ್ಯದಲ್ಲೂ ಹೇಳಿದ ಪಾದ ಶಬ್ದಕ್ಕೆ ಅಂಶವೆಂದರ್ಥ. ಪರಮಾತ್ಮನಿಗೆ ೪ ಪಾದಗಳು ಅಂದರೆ, ೪ಅಂಶ ಗಳೆಂದರ್ಥ. ಭೂಮಿಯಲ್ಲಿರುವದೊಂದಂಶ, ಅದನ್ನು ಭಿನ್ನಾಂಶಗೆಂದು ಹಿಂದಿನ ಪದ್ಯದಲ್ಲಿ ಹೇಳಿದರು. ಉಳಿದ ಮೂರು ಪಾದಗಳು " ತ್ರಿಪಾದ ಸ್ಯಾಮೃತಂದಿವಿಃ " ಎಂದು ಶೃತಿ ಹೇಳುವುದು. ಇದೇ ಅರ್ಥವನ್ನೇ ಭಾಗ ವತ ದ್ವಿತೀಯಸ್ಕಂಧ ೬ನೆಯ ಅಧ್ಯಾಯದಲ್ಲಿ " ಪಾದಾಸ್ತ್ರಯೋ ಬಹಿಸ್ತ್ವಾ ಸನ್ನಪ್ರಜಾನಾಂಯ ಆಶ್ರಯಾಃ ॥ " ಮೂರು ಪಾದಗಳು ಬ್ರಹ್ಮಾಂಡಕ್ಕೆ

ಹೊರಗೆ ಇರುವವು- ಆ ಪಾದಗಳೇ ಅಪ್ರಜರಾದ ಬ್ರಹ್ಮಾದಿದೇವತೆಗಳಿಗೆ ಆಶ್ರಯಭೂತವಾದವು. ಆ ಪಾದಗಳು ಯಾವುವೆಂದರೆ.—ಆ ಶ್ಲೋಕದ ವ್ಯಾಖ್ಯಾನದಲ್ಲಿ, ಅನಂತಾಸನ ವೈಕುಂಠ ನಾರಾಯಣಾಃ ಏಷು ಲೋಕೇಷು ವಸಂತೀತಿ ಭಾವಃ ॥ ಮತ್ತು ತಾತ್ಪರ್ಯ ವಾಕ್ಯ.—“ ಅನಂತಾಸನ ವೈಕುಂಠ ನಾರಾಯಣ ಪುರಾಣಿತು ” ಎಂಬೀ ವಾಕ್ಯಗಳಿಂದ ಅನಂತಾಸನದಲ್ಲಿರುವ ಶೇಷಪರ್ಯಂಕಶಾಯಿಯಾದ ಪದ್ಮನಾಭರೂಪ ಒಂದು. ವೈಕುಂಠಲೋಕ ದಲ್ಲಿರುವ ವಾಸುದೇವರೂಪ ಒಂದು. ಸೃಷ್ಟ್ಯಾರಂಭದಲ್ಲಿ ಬ್ರಹ್ಮಾಂಡ ವನ್ನು ಸೃಷ್ಟಿಮಾಡಿ ನೀರಿನಲ್ಲಿ ವಿಹರಿಸುತ್ತಿದ್ದ ನಾರಾಯಣರೂಪ ಒಂದು. “ ಅಪೋನಾರಾ ಇತಿಪ್ರೋಕ್ತಾಃ ಆಪೋಲೈ ನರಸೂನಃ ॥ ಅಯನಂತಸ್ಯತಾಃ ಪೂರ್ವಂತೇನ ನಾರಾಯಣಃಸ್ಮೃತಃ ” ಎಂಬ ಭಾಗವತ ವಾಕ್ಯಾನುಸಾರ ವಾಗಿ ಉದಕಕ್ಕೆ ನಾರ ಎಂದು ಹೆಸರು. ಅವುಗಳಿಗೆ ಆಶ್ರಯಭೂತನಾದು ದರಿಂದ ನಾರಾಯಣನೆಂದು ಹೆಸರೆಂದು ಹೇಳಿರುವರು. ಈ ಆಧಾರದ ಮೇಲೆ ಉದಕಾಶ್ರಯನಾದ ನಾರಾಯಣರೂಪ ಒಂದು. ಅಂತು ಇವು ಮೂರು ಪಾದಗಳು ಅಂದರೆ ಮೂರು ಸ್ವರೂಪಾಂಶಗಳೆಂದರ್ಥ. ಇಂತಹ ೪ ಅಂಶಗಳುಳ್ಳವನು ಪರಮಾತ್ಮನೆಂದು ತಿಳಿದು ನಿಮ್ಮ ಅನುಭವಕ್ಕೆ ತಂದು ಕೊಂಡು ನಿತ್ಯದಲ್ಲೂ ಸರ್ವಾಂತರಾತ್ಮಕನಾದ ಪರಮಾತ್ಮನನ್ನು ಸ್ಮರಿಸಬೇ ಕೆಂಬ ತಾತ್ಪರ್ಯ.

**ವಂಶಬಾಗಲು ಬೆಳೆಯೆ ಕಂಡು ನ**
**ರಾಂಸದಲಿ ಶೋಭಿಪದು ಬಾಗದ**
**ವಂಶಪಾಶದಿ ಕಟ್ಟಿ ಏರುವಡೊಂಬ ಮಸ್ತಕಕೆ ।**
**ಕಂಸಮರ್ದನ ದಾಸರಿಗೆ ನಿ**
**ಸ್ಸಂಶಯದಿ ಯೆರಗದಲೆ ನಾವಿ**
**ದ್ವಾಂಸನೆಂದಹಂಕರಿಸೆ ಭವಗುಣದಿ ಬಂಧಿಸುವ ॥೨೦॥**

ಪದ್ಯಾರ್ಥ-—ವಂಶ=ದಪ್ಪವಾದ ಬಿದರು, ಬಾಗಲು=ಬೊಗ್ಗಿರಲು, ಬೆಳೆಯುವದುಕಂಡು- ಅದು ಪಲ್ಲಕ್ಕಿಗೆ ಉಪಯೋಗಿಸಬಹುದೆಂದು ಕಂಡು ಬಂದುದರಿಂದ, ನರಾಂಸದಲಿ=ಪಲ್ಲಕ್ಕಿಯಲ್ಲಿ ಸೇರಿ ಮನುಷ್ಯರ ಹೆಗಲಮೇ ಲೇರಿ, ಶೋಭಿಪುದು, ಬಾಗದವಂಶ=ಬೊಗ್ಗದ ದಪ್ಪ ಬಿದರನ್ನು ಕಟ್ಟಿ-

ಳ ಪಾರ್ಶ್ವಗಳಲ್ಲೂ ಹಗ್ಗದಿಂದ ಕಟ್ಟಿ ಕದಲದಂತೆ ಮಾಡಿ, ಡೊಂಬನು, ಮಸ್ತಕಕ್ಕೆ=ತಲೆಯಮೇಲೆ (ಬಿದರಿನ ಅಗ್ರಭಾಗಕ್ಕೆ) ಏರುವನು. ಇದರಂತೆ, ಕಂಸಮರ್ದನ=ಶ್ರೀಕೃಷ್ಣನ, ದಾಸರಿಗೆ=ಆತನ ದಾಸರಾದ ಭಕ್ತ ಜನರಿಗೆ ನಿಸ್ಸಂಶಯದಿ, ಎರಗದೆ=ನಮಸ್ಕರಿಸದೆ, ನಾನು ವಿದ್ವಾಂಸನೆಂದಹಂಕರಿಗೆ=ಅಹಂಕಾರಪಡಲು, ಭವಗುಣದಿಂದ=ಸಂಸಾರವೆಂಬ ಪಾಶದಿಂದ, ಬಂಧಿಸುವ=ಕಟ್ಟುವನು.

ತಾತ್ಪರ್ಯ.—ದಪ್ಪವಾದ ಬಿದುರು ಬೆಳೆಯುವಾಗಲೆ ಬೊಗ್ಗಿ ಬೆಳೆದರೆ ಅದನ್ನು ತಂದು ಪಲ್ಲಕ್ಕಿಯ ಮೇಲುಭಾಗಕ್ಕೆ ಶೇರಿಸಿ ಅದನ್ನು ಮನುಷ್ಯರು ತಮ್ಮ ಹೆಗಲಮೇಲೆ ಇಟ್ಟುಕೊಂಡು ಹೋಗುವರು. ಹಾಗೆ ಬೊಗ್ಗದೇ ನೆಟ್ಟಗೆ ನಿಂತಿರುವ ಬಿದರನ್ನು ಡೊಂಬರನು ತಂದು ಗಡೆಕಟ್ಟಿ ನಿಲ್ಲಿಸಿ ಆ ಪಾರ್ಶ್ವದಲ್ಲೂ ಹಗ್ಗದಿಂದ ಬೊಗ್ಗದಂತೆ ಕಟ್ಟಿ ಆ ಬಿದರಿನ ತಲೆಗೆ ಮೇಲಿರುವರು. ಇದರಂತೆ ಶ್ರೀಪರಮಾತ್ಮನ ಭಕ್ತರಿಗೆ, ಶಿರಬೊಗ್ಗಿಸಿ ನಮಸ್ಕಾರ ಮಾಡದವನನ್ನು ಸಂದೇಹವಿಲ್ಲದೆ ಸಂಸಾರಪಾಶದಿಂದ ಕಟ್ಟುವನು. ತಲೆಬಾಗಿದವರನ್ನುದ್ಧರಿಸುವನೆಂಬ ಭಾವ.

ಅವತಾರಿಕೆ.—ಪರಮಾತ್ಮನ ಅಧಿಷ್ಠಾನಭೂತವಾದ ಸ್ಥಾನವನ್ನು ಹೇಳುತ್ತಾರೆ.—

**ಜ್ಯೋತಿರೂಪಗೆ ಪ್ರತಿಮೆಗಳು ಸಾಂ**
**ಕೇತಿಕಾರೋಪಿತ ಸುಪೌರುಷ**
**ಧಾತು ಸಪ್ತಕಧೈರ್ಯಶೌರ್ಯೋದಾರ್ಯಚಾತುರ್ಯ ॥**
**ಮಾತುಮಾನ ಮಹತ್ವ ಸಹನ ಸು**
**ನೀತಿ ನಿರ್ಮಲ ದೇಶಬ್ರಾಹ್ಮಣ**
**ಭೂತಪಂಚಕ ಬುದ್ಧಿಮೊದಲಾದಿಂದ್ರಿಯಸ್ಥಾನ ॥೨೧॥**

ಪದ್ಯಾರ್ಥ.—ಜ್ಯೋತಿರೂಪಗೆ=ಸ್ವತಃ ಪ್ರಕಾಶಮಾನನಾದ ಪರಮಾತ್ಮನಿಗೆ, ಪ್ರತಿಮೆಗಳು=ಜಡರೂಪವಾದ ಶಿಲಾಪ್ರತಿಮೆಗಳು, ಪಂಚಲೋಹಗಳು=ಇವುಗಳಲ್ಲಿ ಸಾಂಕೇತಿಕವು, ರಾಮಕೃಷ್ಣಾದಿನಾಮಗಳು, ಆರೋಪಿತ = ಪರಮಾತ್ಮನ ಸ್ಮರಣೆಯ ಜ್ಞಾಪಕಕ್ಕಾಗಿ ಆರೋಪಿತವಾಗಿರು

ವದು. ಸ್ವಭಾವದಿಂದಲೂ ಅನೇಕ ಸ್ಥಳಗಳಲ್ಲಿ ಯಾವಾಗಲೂ ವಾಸ ಮಾಡುತ್ತಿರುವನು- ಅವುಗಳೆಲ್ಲವನ್ನೂ ಪ್ರತಿಮೆಗಳೆಂತ ತಿಳಿಯಬೇಕು- ಅವು ಗಳು ಯಾವುವೆಂದರೆ,—ಸುಪೌರುಷ—ಪುರುಷ ಸಂಬಂಧಿಯಾದ, ಧಾತು ಸಪ್ತಕ—ತ್ವಕ್ ಚರ್ಮ ಮೊದಲಾದ ೭ ಧಾತುಗಳು, ಧೈರ್ಯ, ಶೌರ್ಯ, ಔದಾರ್ಯ—ಧಾತೃತ್ವ, ಚಾತುರ್ಯ—ಬುದ್ಧಿ ಕುಶಲತೆ, ವಾತು—ಭಗವತ್ಸಂಬಂಧವಾದ ಸತ್ಯವಾದ ಮಾತುಗಳು, ಮಾನ—ಗೌರವಸ್ಥಾನ, ಮಹತ್ವ—ಪೂಜ್ಯತೆ, ಸಹಸ—ಕ್ಷಮೆ, ಉತ್ತಮವಾದ ನೀತಿ ನಿರ್ಮಲದೇಶ ಬ್ರಾಹ್ಮಣರು, ಭೂತಪಂಚಕ—ಪೃಥಿವ್ಯಾಧಿ ಪಂಚ ಭೂತಗಳು, ಬುದ್ಧಿ ಮೊದಲಾದ ಇಂದ್ರಿಯಗಳು, ಇವು ಗಳೆಲ್ಲವೂ, ಸ್ಥಾನ—ಪರಮಾತ್ಮನ ಆವಾಸಸ್ಥಾನವು.

ತಾತ್ಪರ್ಯ—ಲೋಕದಲ್ಲಿ—ತಾಮ್ರ, ಹಿತ್ತಾಳೆ, ಬೆಳ್ಳಿ, ಭಂಗಾರಗ ಳಿಂದ ಮನುಷ್ಯಾಕಾರವಾಗಿ ಮಾಡಿ ಅದಕ್ಕೆ ರಾಮ ಕೃಷ್ಣನೆಂದು ಹೆಸರಿಟ್ಟು ಪೂಜೆ ಮಾಡುತ್ತಿರುವರು. ತೇಜೋಮಯನಾದ ಪರಮಾತ್ಮನೆ ಈ ಪ್ರತಿಮೆ ಗಳಲ್ಲ, ಪರಮಾತ್ಮನು ಜಡನಲ್ಲ. ನಮಗೆ ಧ್ಯಾನ ಗೋಚರಕ್ಕಾಗಿ ಯಾವು ದಾದರೂ ಒಂದು ರೂಪವನ್ನು ಧ್ಯಾನಮಾಡಬೇಕಾಗುವದು ಅದರ ಉಪ ಯೋಗಕ್ಕಾಗಿ ಪ್ರತಿಮೆಗಳಲ್ಲಿ ಸಾಂಕೇತಿಕವಾದ ರಾಮಕೃಷ್ಣಾದಿ ನಾಮಗ ಳನ್ನು ಆರೋಪಿಸುವರು. ಆದುದರಿಂದ ಅವುಗಳಲ್ಲಿ ಪರಮಾತ್ಮನ ಅಧಿಷ್ಠಾ ನವನ್ನು ತಿಳಿಯಬೇಕು. ಆದರೆ ಪ್ರತಿಮೆಯೇ ದೇವರೆಂದು ತಿಳಿದ. ಅನ್ಯತ್ರ ಇರುವ ಭಗವದ್ರೂಪಗಳನ್ನರಿಯದೆ ಅವೆಲ್ಲವನ್ನೂ ತಿರಸ್ಕರಿಸಿ, ಪ್ರತಿಮೆ ಗಳ ಪೂಜೆಯನ್ನು ಮಾಡಿದರೂ ಆ ಪೂಜೆಯನ್ನು ಸ್ವೀಕರಿಸುವುದಿಲ್ಲ. ಆದು ದರಿಂದ ಈ ಪದ್ಯದಲ್ಲಿ ಹೇಳಿದ ಧಾತುಸಪ್ತಕ ಧೈರ್ಯ ಮೊದಲಾದವುಗಳಲ್ಲೂ ಭಗವದ್ರೂಪಗಳನ್ನು ಚಿಂತಿಸಬೇಕು. ಧೈರ್ಯಾದಿಗಳು ಕಣ್ಣಿಗೆ ಗೋಚರ ವಲ್ಲ. ಅವುಗಳಲ್ಲಿ ಭಗವದ್ರೂಪ ಚಿಂತನೆ ಹೇಗೆಂದರೆ,—ಧೈರ್ಯಾದಿಗಳುಳ್ಳ ಪುರುಷನಲ್ಲಿ ಧೈರ್ಯರೂಪಿಯಾಗಿದ್ದು ಇವನು ಧೈರ್ಯವಂತನು! ಇವನು ಶೌರ್ಯ ವಂತನು ಎಂಬ ಹೆಸರು ಪರಮಾತ್ಮನೇ ಪಡೆಯುವನೆಂದು ತಿಳಿದು ಉಪಾ ಸ್ತನೆ ಮಾಡಬೇಕೆಂಬ ತಾತ್ಪರ್ಯ.

ಜೀವರಾಶಿಯೊಳಮೃತ ಶಾಶ್ವತ
ಸ್ಥಾವರಗಳೊಳು ಸ್ಥಾಣುನಾಮಕ
ನಾವಕಾಲದಲಿಪ್ಪನಜಿತಾನಂತನೆಂದೆನಿಸಿ ||
ಗೋವಿದಾಂಪತಿ ಗಾಯನಪ್ರಿಯ
ಸಾವಯವ ಸಾಹಸ್ರನಾಮ ಪ
ರಾವರೇಶ ಪವಿತ್ರಕರ್ಮ ವಿಪಶ್ಚಿತ ಸುಧಾಮ ||೨೨||

ಪದ್ಯಾರ್ಥ—ಗೋವಿದಾಂಪತಿ–ವೇದ ವೇದಾಂತಗಳಲ್ಲಿ ನಿಸ್ಸಂಶಯವಾದ ಅರ್ಥ ಜ್ಞಾನವುಳ್ಳ ಜ್ಞಾನಿಗಳಿಗೆ ಸ್ವಾಮಿಯಾದ, ಗಾಯನಪ್ರಿಯ–ಸಾಮಗಾನ ಮತ್ತು ತೋಡಿ ಭೈರವಿ ಮುಂತಾದ ರಾಗ ಜ್ಞಾನದಿಂದ ಸುಸ್ವರದಿಂದ ತನ್ನ ಮಹಿಮೆಯನ್ನು ಗಾನ ಮಾಡಿದರೆ ಬಹಳ ಪ್ರೀತನಾಗುವ, ಸಾವಯವ–ಆನಂದಮಯವಾದ ಕರಚರಣಾದಿ ಅಂಗಗಳಿಂದ ಯುಕ್ತನಾದ, ಸಾಹಸ್ರನಾಮ–ಸಹಸ್ರ ನಾಮಗಳಿಂದ ಕರೆಸಿಕೊಳ್ಳುವ, ಪರಾವರೇಶ–ಉತ್ತಮರಾದ ಬ್ರಹ್ಮಾದಿಗಳು, ಅಮರರಾದ ತೃಣಾಂತ ಜೀವರು, ಇವರಿಗೆ ಈಶ್ವರನಾದ, ಪವಿತ್ರಕರ್ಮ–ಮಂಗಳಕರವಾದ ಕರ್ಮಗಳುಳ್ಳ, ವಿಪಶ್ಚಿತ–ಜ್ಞಾನಿಗಳಿಗೆ, ಸುಧಾಮ–ಉತ್ತಮವಾದ ವಾಸಯೋಗ್ಯ ಸ್ಥಾನನಾದ ಶ್ರೀ ಪರಮಾತ್ಮನು, ಜೀವರಾಶಿಯೊಳು, ಅಮೃತ–ಮರಣರಹಿತನಾದುದರಿಂದ ಅಮೃತನಾಮಕನಾಗಿಯೂ, ಶಾಶ್ವತ–ಶಶ್ವದೇಕಪ್ರಕಾರನಾಗಿರುವುದರಿಂದ ಶಾಶ್ವತನೆಂತಲೂ, ಸ್ಥಾವರಗಳೊಳು, ಸ್ಥಾಣುನಾಮಕನು–ಸ್ಥಾಣು ಎಂಬ ಹೆಸರಿನಿಂದ, ಅಜಿತಾನಂತನೆಂದೆನಿಸಿ–ಅಜಿತನೆಂತಲೂ, ಅನಂತನೆಂತಲೂ ಅನಿಸಿಕ್ಕೊಂಡು ಆವಕಾಲದಲಿ–ಸರ್ವಕಾಲದಲ್ಲೂ ಇಪ್ಪ.

ತಾತ್ಪರ್ಯ—ಯಾವಾಗಲೂ, ಯಾರಿಂದಲೂ ಸೋಲದವನಾದುದರಿಂದ ಅಜಿತನೆಂದು ಹೆಸರು. ಜೀವರಾಶಿಯೊಳಗೆ ಅಮೃತನೆಂಬ ಹೆಸರಿನಿಂದ ಶಾಶ್ವತವಾಗಿ ಇರುವನು. ಸ್ಥಾವರಗಳಲ್ಲಿ ಸ್ಥಾಣುನಾಮಕನಾಗಿ ಸರ್ವ ಕಾಲದಲ್ಲೂ ಇರುವನು. ಮಿಕ್ಕ ಪದಗಳಿಗೆ ಅರ್ಥವು ಪದ್ಯಾರ್ಥದಲ್ಲಿ ವಿವರ ಮಾಡಲ್ಪಟ್ಟಿದೆ.

ಮಾಧವನ ಪೂಜಾರ್ಥವಾಗಿ ನಿ
ಷೇಧಕರ್ಮವ ಮಾಡಿಧನ ಸಂ
ಪಾದಿಸಲು ಸತ್ಪುಣ್ಯ ಕರ್ಮಗಳೆನಿಸಿಕೊಳುತಿಹವು ||
ಸ್ವೋದರಂಭರಣಾರ್ಥ ನಿತ್ಯದಿ
ಸಾಧುಕರ್ಮವ ಮಾಡಿದರು ಸರಿ
ಯೈದುದನು ದೇಹಾಂತರವ ಸಂದೇಹವಿನಿತಿಲ್ಲ ||೨೩||

ಪದ್ಯಾರ್ಥ—ಮಾಧವನ ಪೂಜಾರ್ಥವಾಗಿ, ನಿಷೇಧಕರ್ಮವ ಮಾಡಿ, ಧನ ಸಂಪಾದಿಸಲು, ಸತ್ಪುಣ್ಯಕರ್ಮಗಳೆನಿಸಿಕೊಳ್ಳುವುವು. ಸ್ವೋದರಂಭರಣಾರ್ಥ–ತನ್ನ ಹೊಟ್ಟೆಯನ್ನು ತುಂಬಿಸಿಕ್ಕೊಳ್ಳುವುದಕ್ಕಾಗಿ (ತನ್ನ ದೇಹ ಪೋಷಣಕ್ಕಾಗಿ) ನಿತ್ಯದಲ್ಲೂ, ಸಾಧುಕರ್ಮವನ್ನು ಮಾಡಿದರೂ ಸರಿ, ದೇಹಾಂತರವ–ಮತ್ತೂ ಭೂಮಿಯಲ್ಲಿ ಜನ್ಮಗಳನ್ನು, ಯ್ಯೆದುವನು–ಸಂದೇಹವಿನಿತಿಲ್ಲ–ಈ ವಿಷಯದಲ್ಲಿ ಸಂದೇಹವಿಲ್ಲ.

ತಾತ್ಪರ್ಯ—ಭಗವತ್ಪ್ರೀತಿಗೋಸ್ಕರವಾಗಿ ದೇವಾಲಯ, ಉದ್ಯಾನವನ ಮೊದಲಾದವುಗಳನ್ನು ರಚಿಸುವ ಉದ್ದೇಶ ಮಾಡಿ ಯಾಚನಾದಿಗಳನ್ನು ಮಾಡಿ, ಯಥೇಷ್ಟವಾಗಿ ಧನ ಸಂಪಾದನೆ ಮಾಡಿ ಆ ಸತ್ಕಾರ್ಯಗಳನ್ನು ಭಗವತ್ಪ್ರೀತಿಗಾಗಿ ಮಾಡಿದರೆ ಅವು ಸತ್ಕಾರ್ಯವೆಂದೆನಿಸಿಕೊಳ್ಳುವವು. ಮನಸ್ಸಿನಲ್ಲಿ ತನ್ನ ದೇಹ ಪೋಷಣೆ ನಿಮಿತ್ತವನ್ನು ಇಟ್ಟುಕೊಂಡು ಬ್ರಾಹ್ಮಣ ಭೋಜನಾದಿ ನಿಮಿತ್ತವನ್ನು ಹೊರಗೆ ತೋರಿಸಿ ಹಣ ಸಂಪಾದನವನ್ನು ಮಾಡಿ ಬ್ರಾಹ್ಮಣ ಸಂತರ್ಪಣೆ ಮೊದಲಾದವುಗಳನ್ನು ಮಾಡಿದರೂ, ಪಾಪ ಕರ್ಮದ ಫಲವಾದ ಮತ್ತೂ ಜನ್ಮವನ್ನು ಹೊಂದುವದು, ಸಾಯುವದು ಈ ಫಲವೇ ಪ್ರಾಪ್ತಿಯಾಗುವದು. ಅದುದರಿಂದ ಯಾವ ಕರ್ಮವನ್ನು ಮಾಡಿದರೂ ಭಗವತ್ಪ್ರೀತಿಗಾಗಿ ಮಾಡಬೇಕೆಂಬ ತಾತ್ಪರ್ಯ.

**ಅಪಗತಾಶ್ರಯ ಎಲ್ಲರೊಳಗಿ**
**ದ್ದುಪಮನೆನಿಸಾನುಪಮರೂಪನು**
**ಶಫರಕೇತನ ಜನಕಮೋಹಿಸಮೋಹಕನ ತೆರದಿ ||**

**ತಪನಕೋಟಿ ಸಮುಪ್ರಭಾಸಿತ**
**ವಪುವೆನಿಪ ಕೃಷ್ಣಾದಿರೂಪಕ**
**ದ್ವಿಪದನಂತುಂಡುಣಿಸ ಸರ್ವತ್ರ ನೆಲಸಿದ್ದು　　　　||೨೪||**

ಪದ್ಯಾರ್ಥ—ಅಪಗತಾಶ್ರಯ–ಮತ್ತೊಬ್ಬರನ್ನು ಆಶ್ರಯಿಸದ, ಅನುಪಮರೂಪನು–ಉಪಮಾನರಹಿತವಾದ ಸ್ವರೂಪವುಳ್ಳವನಾದರೂ, ಎಲ್ಲರೊಳಗಿದ್ದು, ಉಪಮನೆನಿಪ–ಮನುಷ್ಯರಂತೆ, ಮೃಗದಂತೆ ಎಂದು ಉಪಮೆಯುಳ್ಳವನೆಂದು ಕರೆಸಿಕೊಳ್ಳುವನು. ಶಫರಕೇತನ ಜನಕ–ಮನ್ಮಥನ ತಂದೆಯಾದ ಶ್ರೀ ಹರಿಯು, ತಪನಕೋಟಿಸಮುಪ್ರಭಾ–ಸೂರ್ಯ ಕೋಟಿ ಸಮ

ವಾದ ಪ್ರಭೆಯುಳ್ಳವನಾದರೂ, ಕೃಷ್ಣಾದಿ ರೂಪಕ–ಕೃಷ್ಣಾದಿ ಅವತಾರ ಗಳಲ್ಲಿ, ದ್ವಿಪದನಂತೆ–ಸಾಮಾನ್ಯ ಮನುಷ್ಯನಂತೆ, ಅಸಿತ–ಕಪ್ಪಾದ, ವಪು ವೆನಿಪ–ಬಣ್ಣವುಳ್ಳ ಶರೀರವುಳ್ಳವನೆಂದೆನಿಪನು. ಹೀಗೆ ಮೋಹಕನತೆರದಿ– ಮೋಹಿಪ ಸರ್ವತ್ರ ನೆಲಸಿದ್ದು–ಎಲ್ಲಾ ಸ್ಥಳಗಳಲ್ಲೂ ಇದ್ದು, ಉಂಡುಣಿಪ– ತಾನುಂಡು ಜೀವರಿಗೆ ಉಣಿಸುವನು.

ತಾತ್ಪರ್ಯ—ತಾನು ಎಲ್ಲರಿಗೂ ಆಶ್ರಯನಾಗಿರುವನು. ತನಗೆ, ಆಶ್ರ ಯರು ಮತ್ತೊಬ್ಬರಿಲ್ಲ. ತಾನು ಅನುಪಮನಾದರೂ ಮನುಷ್ಯಾದಿಗಳಲ್ಲಿದ್ದು ಉಪಮಿತನಾಗಿ ತೋರುವನು. ಕೋಟಿ ಸೂರ್ಯ ಸಮ ಪ್ರಭನಾದರೂ ಕೃಷ್ಣಾದ್ಯವತಾರದಲ್ಲಿ ಮನುಷ್ಯಾಕಾರನಾಗಿ ಕಪ್ಪು, ಬಿಳುಪು ಮೊದಲಾದ ಸಾಧಾರಣ ಬಣ್ಣವುಳ್ಳವನಾಗಿ ಜನರನ್ನು ಮೋಹಿಸುವನು. ಸರ್ವತ್ರ ವಾಸ ವಾಗಿದ್ದು ವಿಷಯಭೋಗಾದಿಗಳನ್ನೂ ಅನ್ನಾದಿಗಳನ್ನೂ ತಾನುಂಡು ಜೀವ ರಿಗೂ ಉಣಿಸುವನು.

**ಅಡವಿಯೊಳು ಬಿತ್ತದಲೆ ಬೆಳದಿಹ**
**ಗಿಡದ ಮೂಲಿಕೆ ಸಕಲಜೀವರ**
**ಒಡಲೊಳಿಪ್ಪಾಮಯವ ಪರಿಹರ ಗೈಸುವಂದದಲಿ ||**
**ಜಡಜಸಂಭವ ಜನಕತ್ರಿಜಗ**
**ದ್ವಡೆಯ ಸಂತೈಸೆನಲು ಅವರಿ**
**ದ್ದೆಡೆಗ ಬಂದೊದಗುವನು ಭಕ್ತರ ಭಿಡಿಯ ಮೀರದಲೆ ||೨೫||**

ಪದ್ಯಾರ್ಥ—ಅಡವಿಯೊಳಗೆ, ಬಿತ್ತದಲೆ ಬೆಳದಿರುವ ಗಿಡದ ಮೂ ಲಿಕೆ, ಸಕಲಜೀವರ, ಒಡಲೊಳಿಪ್ಪ–ಶರೀರ ಸಂಬಂಧವಾದ, ಆಮಯವ-- ರೋಗವನ್ನು, ಪರಿಹರಗೈಸುವಂದದಲಿ--ಪರಿಹಾರ ಮಾಡುವಂತೆ, ತ್ರಿಜಗದ್ವ ಡೆಯ--ಮೂರು ಲೋಕದ ಪ್ರಭುವೆ! ಸಂತೈಸು! ಎನಲು--ಉದ್ಧಾರ ಮಾ ಡೆಂದು ಬೇಡಲು, ಜಡಜಸಂಭವ ಜನಕ--ಜಡಜ ಎಂಬ ಪದದಲ್ಲಿರುವ ಡ ಎಂಬಕ್ಷರವು ಲ ಎಂದೆನಿಸುವುದು. ರ-ಡ ಲ- ಇವುಗಳಿಗೆ ಪರಸ್ಪರ ಭೇದವಿಲ್ಲ ಆದ್ದರಿಂದ ಜಡಜ--ಜಲಜ ಸಂಭವರು ಬ್ರಹ್ಮದೇವರು ಅವರ ಜನಕ--ತಂದೆ ಯಾದ ಶ್ರೀ ಪರಮಾತ್ಮನು, ಭಕ್ತರ ಭಿಡಿಯ--ದಾಕ್ಷಿಣ್ಯವನ್ನು ಮೀರದಲೆ, ಅವರಿದ್ದೆಡೆಗೆ ಬಂದೊದಗುವನು.

ತಾತ್ಪರ್ಯ—ನಮ್ಮ ಪ್ರಯತ್ನವಿಲ್ಲದೆ, ನಾವು ಬೀಜವನ್ನು ಬಿತ್ತದೆ, ಕಾಡಿನಲ್ಲಿ ತಾನಾಗಿ ಬೆಳೆಯುವ ಗಿಡದ ಮೂಲಿಕೆಯು ರೋಗಿಗಳ ಸಕಲ ರೋಗವನ್ನು ಪರಿಹಾರ ಮಾಡುವದು. ಅದರಂತೆ ಶ್ರೀಪರಮಾತ್ಮನು ನಾವು ಹೆತ್ತ ಪುತ್ರನಾಗಲಿ, ಮಿತ್ರನೆಂತಾಗಲಿ ಅಲ್ಲದಿದ್ದರೂ, ಮೂರು ಲೋಕದೊಡ ಯನೇ! ನನ್ನನ್ನು ರಕ್ಷಿಸೆಂದು ಬೇಡಲು ಭಕ್ತರ ದಾಕ್ಷಿಣ್ಯಕ್ಕೆ ಒಳಗಾಗಿ ಅವರು ಇದ್ದ ಸ್ಥಳಕ್ಕೆ ಬಂದು ಅವರ ಕಷ್ಟಕ್ಕೊದಗುವನು.

ಅವತಾರಿಕೆ—ನಿಷ್ಕಾಮೋಪಾಸನೆಯಿಂದ ಭಗವಂತನು ಪ್ರೀತನಾಗು ವನೆಂದು ಹೇಳುತ್ತಾರೆ.

ಶ್ರೀನಿಕೇತನ ತನ್ನವರ ದೇ
ಹಾನುಬಂಧಿಗಳಂತೆ ಅನ್ಯವ
ಧಾನದಲಿ ನೆಲಸಿಪ್ಪ ಸರ್ವದ ಸಕಲಕಾಮದನು ||
ಏನುಕೊಟ್ಟರು ಭುಂಜಿಸುತ ಮ
ದ್ದಾನೆಯಂದದಿ ಸಂಚರಿಸು ಮ
ತ್ತೇನು ಬೇಡದೆಭಜಿಸುತಿರು ಅವನಂಘ್ರಿಕಮಲಗಳ ||೨೬||

ಪದ್ಯಾರ್ಥ—ಶ್ರೀನಿಕೇತನ--ಲಕ್ಷ್ಮೀ ವಾಸಸ್ಥಾನಭೂತನಾದ ಶ್ರೀ ಹರಿಯು, ತನ್ನವರ--ತನ್ನ ಭಕ್ತರನ್ನು, ದೇಹಾನುಬಂಧಿಗಳಂತೆ ಸರ್ವದಾ, ಸಕಲಕಾಮದನು--ಸಕಲ ಮನೋಭೀಷ್ಟವನ್ನು ಪೂರೈಸುವನಾಗಿ, ಅನ್ಯವ ಧಾನದಲಿ--ಸಮೀಪದಲ್ಲಿ ಸ್ವಲ್ಪ ಹೊತ್ತಾದರೂ ವಿರಾಮವಿಲ್ಲದೆ, ನೆಲಶಿಪ್ಪ-- ವಾಸ ಮಾಡುತ್ತಿರುವನು. ಏನುಕೊಟ್ಟರೂ--ದೇವರು ಏನು ಕೊಟ್ಟರೂ, ಅದನ್ನು ಭುಂಜಿಸುತ, ಮದ್ದಾನೆಯಂದದಿ--ಮದ್ದಾನೆಯಂತೆ ಸಂಚರಿಸು! ಮತ್ತೇನು ಬೇಡದೆ, ಅವನಂಘ್ರಿಕಮಲಗಳ, ಭಜಿಸುತಿರು.

ತಾತ್ಪರ್ಯ—ಶ್ರೀ ಪರಮಾತ್ಮನು ತನ್ನ ಭಕ್ತರನ್ನು ದೇಹಾನುಬಂಧಿಗ ಳಂತೆ ಸಮೀಪದಲ್ಲೇ ಇದ್ದು ಅವರವರ ಮನೋಭೀಷ್ಟವನ್ನು ಪೂರೈಸುತ್ತಿ ರುವನು- ಈಶ್ವರ ಸಂಕಲ್ಪದಿಂದ ಏನು ಬಂದರೂ ಅಷ್ಟಕ್ಕೆ ಸಂತೋಷ ಪಡುತ್ತಾ, ಕಾಮ್ಯ ಫಲವನ್ನು ಬೇಡದೆ ಅವನ ಪಾದಕಮಲವನ್ನು ಭಜಿಸು ತ್ತಾ ಮತ್ತಾರನ್ನೂ ಲಕ್ಷೀಕರಿಸದೆ ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ಮದ ಗಜದಂತೆ ಸಂಚರಿಸು.

ಅವತಾರಿಕೆ—ಪರಮಾತ್ಮನು ಎಂಥ ಎಂಥಾ ಭಕ್ತರಿಗೆ ಯಾವಯಾವ ರೀತಿಯಲ್ಲಿ ಇಷ್ಟಾರ್ಥವ ಕೊಡುತ್ತಾನೆಂಬುವುದನ್ನು ಹೇಳುತ್ತಾರೆ.

**ಬೇಡದಲೆ ಕೊಡುತಿಪ್ಪ ಸುರರಿಗೆ**
**ಬೇಡಿದರೆ ಕೊಡುತಿಹನು ನರರಿಗೆ**
**ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆಪುರುಷಾರ್ಥ ||**
**ಮೂಢರನುದಿನ ಧರ್ಮಕರ್ಮವ**
**ಮಾಡಿದರು ಸರಿ ಯಿಹಿಕ ಫಲಗಳ**
**ನೀಡಿ ಉನ್ಮತ್ತರನಮಾಡಿ ಮಹಾನಿರಯವೀವ ||೨೭||**

ಪದ್ಯಾರ್ಥ—ಸುರರಿಗೆ--ದೇವತೆಗಳಿಗೆ, ಬೇಡದಲೆ ಕೊಡುತಿಪ್ಪ; ನರರಿಗೆ--ಮನುಷ್ಯರಿಗೆ, ಬೇಡಿದರೆ ಕೊಡುತಿಹನು; ಬೇಡಿ ಬಳಲುವ ದೈತ್ಯರಿಗೆ, ಪುರುಷಾರ್ಥಗಳನ್ನು ಒಮ್ಮೆಗಾದರೂ ಕೊಡನು. ಮೂಢರು ಅನುದಿನದಲ್ಲೂ ಧರ್ಮ ಫಲವನ್ನು ಕೊಡುವ ಪುಣ್ಯ ಕರ್ಮಗಳನ್ನು ಮಾಡಿದರೂ ಸರಿ, ಅಹಿಕ ಫಲಗಳನ್ನು, ನೀಡಿ--ಕೊಟ್ಟು, ಉನ್ಮತ್ತರನ--ಮದಾಂಧರನ್ನಾಗಿ ಮಾಡಿ, ಮಹಾನಿರಯವ--ಮಹಾ ಘೋರವಾದ ನರಕವನ್ನು (ಅಂಧಂತಮಸ್ಸನ್ನು) ಕೊಡುವನು.

ತಾತ್ಪರ್ಯ—ಉತ್ತಮ, ಮಧ್ಯಮ, ಅಧಮ ಅಧಮಾಧಮ ಭಕ್ತರುಗಳ ಸಾಧನೆಯ ಫಲಗಳನ್ನು ಹೇಳುತ್ತಾ, ಉತ್ತಮ ಭಕ್ತರಿಗೆ ಅವರು ಕೇಳಿಕೊಳ್ಳದೆ ಇದ್ದರೂ ಉತ್ತಮಗತಿಯನ್ನು ಕೊಡುತ್ತಾನೆ. ಮಧ್ಯಮ ಭಕ್ತರು ಬೇಡಿಕೊಂಡರೆ ಅವರಿಗೆ ಕೊಡುತ್ತಾನೆ. ಅಧಮ ಭಕ್ತರು ಬೇಡಿಕೊಂಡರೂ ಕೊಡುವುದಿಲ್ಲ. ಅಧಮಾಧಮರು ಪುಣ್ಯ ಕರ್ಮಗಳನ್ನು ಮಾಡಿದರೂ ಅವುಗಳ ಫಲ ರೂಪವಾದ ಉತ್ತಮಗತಿಯನ್ನು ಕೊಡದೆ ನಶ್ವರವಾದ ಅಹಿಕ ಫಲಗಳನ್ನು ಕೊಟ್ಟು ಅವರನ್ನು ಅಹಂಕಾರಕ್ಕೆ ಗುರಿ ಮಾಡಿ ತನ್ಮೂಲಕ ನರಕಕ್ಕೆ ಗುರಿಮಾಡುವನು.

**ತರಣಿ ಸರ್ವತ್ರದಲಿ ಕಿರಣವ**
**ಹರಹಿ ತತ್ತದ್ವಸ್ತುಗಳನನು**
**ಸರಿಸಿಯದರದರಂತೆ ಛಾಯವು ಕಂಗೊಳಿಪತೆರದಿ ||**
**ಅಂಧರೇಜಾನೇಜ ಜಗದೊಳ**
**ಗಿರುವ ಛಾಯಾತಪನೆನಿಸಿ ಸಂ**
**ಕರುಷಣಾಹ್ವಯ ನವರವರ ಯೋಗ್ಯತೆಗಳಂತಿಪ್ಪ ||೨೮||**

ಪದ್ಯಾರ್ಥ—ತರಣಿ--ಸೂರ್ಯನು, ಸರ್ವತ್ರವಲಿ, ಕಿರಣವಹರಹಿ, ತತ್ತದ್ವಸ್ತುಗಳನ್ನನುಸರಿಸಿ--ಅಲ್ಲಲ್ಲಿ ಕಾಣುವ ವಸ್ತುಗಳು ಯಾವ ಯಾವ ಆಕಾರವಾಗಿರುವದೋ ಆಯಾ ಆಕಾರವನ್ನನುಸರಿಸಿ, ಅದರದರಂತೆ, ಛಾಯವು ಕಂಗೊಳಿಪತೆರದೀ ; ಅರಿಧರ--ಚಕ್ರಪಾಣಿಯಾದ, ಸಂಕರುಷಣಾಹ್ವಯನು - ಸಂಕರ್ಷಣ ನಾಮಕನು, ಏಜ--ಚೇತನರು, ಅನೇಜ--ಜಡರು, ಹೀಗೆ ಜಡ ಚೇತನಾತ್ಮಕವಾದ, ಜಗದೊಳಗೆ, ಇರುವ, ಛಾಯಾತಪನೆನಿಸಿ--ನೆಳಲು ಬಿಸಲೆನಿಸಿ ಅಂದರೆ ಕೆಲವರಿಗೆ ನೆಳಲು ರೂಪನಾಗಿಯೂ, ಕೆಲವರಿಗೆ ಬಿಸಲು ರೂಪನಾಗಿಯೂ, ಅವರವರ ಯೋಗ್ಯತೆಗಳಂತಿಪ್ಪ.

ತಾತ್ಪರ್ಯ—ಸೂರ್ಯನ ಕಿರಣವು, ಭೂಮಿಯಲ್ಲಿ ಮನುಷ್ಯ ಪಶು ವೃಕ್ಷಾದಿಗಳ ಮೇಲೆ ಬೀಳಲು ಅವುಗಳಂತೆಯೇ ಛಾಯದ ಆಕಾರವು ಕಾಣುವದು. ಗಿಡದ ನೆಳಲು ಗಿಡದ ಆಕಾರವಾಗಿಯೂ, ಮನುಷ್ಯಾದಿಗಳ ನೆಳಲು ತದಾಕಾರವಾಗಿಯೂ ಕಾಣುವದು. ಅದರಂತೆ ಚಕ್ರಪಾಣಿಯಾದ ಶ್ರೀ ಸಂಕರ್ಷಣನು, ಸ್ಥಾವರ ಜಂಗಮಾತ್ಮಕ ಪ್ರಪಂಚದಲ್ಲಿ ತತ್ತದಾಕಾರನಾಗಿ ಅಲ್ಲಲ್ಲಿದ್ದು ಭೂಮಿಯಲ್ಲಿ ಹೇಗೆ ಕೆಲವೆಡೆಯಲ್ಲಿ ನೆಳಲು, ಕೆಲವು ಕಡೆಯಲ್ಲಿ ಬಿಸಲು ಇರುವದೋ ಹಾಗೆಯೇ ತಾನೂ ಭಕ್ತ ಜನರಿಗೆ ನೆಳಲಂತೆಯೂ, ದೈತ್ಯಾದಿಗಳಿಗೆ ಬಿಸಲಂತೆಯೂ, ಅವರವರ ಯೋಗ್ಯತಾನುಸಾರವಾಗಿ ಇರುತ್ತಿರುವನು.

ಈ ವಿಧದಿ ಸರ್ವತ್ರ ಲಕುಮಿಾ
ಭೂವನಿತೆಯರ ಕೂಡಿ ತನ್ನಕ
ಳಾವಿಶೇಷಗಳೆಲ್ಲ ಕಡೆಯಲಿ ತುಂಬಿಸೇವ್ಯತಮ ||
ಸೇವಕನುತಾನೆನಿಸಿ ಮಾಯಾ
ದೇವಿ ರಮಣ ಪ್ರವಿಷ್ಟರೂಪಕ
ಸೇವೆಮಾಳ್ಪ ಶರಣ್ಯಶಾಶ್ವತ ಕರುಣಿ ಕಮಲಾಕ್ಷ ||೨೫||

ಪದ್ಯಾರ್ಥ—ಈ ವಿಧದಿ--ಈ ಪ್ರಕಾರವಾಗಿ, ಸರ್ವತ್ರ, ಲಕುಮಿಾ ಭೂವನಿತೆಯರ ಕೂಡಿ--ಶ್ರೀದೇವಿ ಭೂದೇವಿಯರೆಂಬ ಸತಿಯರಿಂದೊಡಗೂಡಿ, ತನ್ನ ಕಳಾವಿಶೇಷಗಳ, ಎಲ್ಲ ಕಡೆಯಲಿ ತುಂಬಿ, ಶರಣ್ಯ--ಮೊರೆ ಹೋಗಲ್ಪಡಲು ಯೋಗ್ಯನಾದ, ಶಾಶ್ವತಕರುಣಿ--ಭಕ್ತರಲ್ಲಿ ಏಕರೀತಿಯಾದ ದಯೆ

ಯುಳ್ಳ, ಕಮಲಾಕ್ಷನಾದ, ಮಾಯಾದೇವಿರಮಣ--ಶ್ರೀ ವಾಸುದೇವನು, ಸೇವ್ಯತಮ -ಎಲ್ಲರಿಂದಲೂ ಸೇವೆಯನ್ನು ತೆಗೆದುಕೊಳ್ಳುವವನಾದರೂ, ಪ್ರವಿಷ್ಟರೂಪಕ--ಜಗತ್ತಿನಲ್ಲಿ ಪ್ರವಿಷ್ಟವಾದ ರೂಪಗಳಿಂದ, ಸೇವಕನು ತಾನೆನಿಸಿ, ಸೇವೆಮಾಳ್ಪನು.

ತಾತ್ಪರ್ಯ—ಈ ಪ್ರಕಾರವಾಗಿ ಮಾಯಾರಮಣನಾದ ವಾಸುದೇವನು ಶ್ರೀ ಭೂ ಸಮೇತನಾಗಿ ಸರ್ವತ್ರ ವ್ಯಾಪ್ತನಾಗಿದ್ದು ತಾನು ವಾಸುದೇವಾದಿ ರೂಪಗಳಿಂದ ಸೇವೆಯನ್ನು ಕೈಗೊಳ್ಳುವನು. ಬ್ರಹ್ಮಾದಿಗಳಲ್ಲಿ ಪ್ರವಿಷ್ಟ ರೂಪದಿಂದ ತನ್ನ ಸೇವೆಯನ್ನು ತಾನೇ ಸೇವಕನಾಗಿ ಮಾಡುತ್ತಿರುವನು.

ಅವತಾರಿಕೆ—ಮುಂದಿನ ಪದ್ಯದಿಂದ ಸಂಧಿಯನ್ನು ಮುಗಿಸುತ್ತಾ ಈ ಪದ್ಯದಿಂದ ಪರಮಾತ್ಮನ ಗುಣ ವರ್ಣನ ಮಾಡುತ್ತಾರೆ.

ಪ್ರಣವಕಾರಣಕಾರ್ಯ ಪ್ರತಿಪಾ
ದ್ಯನು ಪರಾತ್ಪರ ಚೇತನಾ ಚೇ
ತನವಿಲಕ್ಷಣನಂತಸತ್ಕಲ್ಯಾಣ ಗುಣ ಪೂರ್ಣ ||
ಅನುಪಮನು ಪಾಸಿತಗುಣೋದಧಿ
ಯ ನಘನಜಿತಾನಂತ ನಿಷ್ಕಿಂ
ಚನ ಜನಪ್ರಿಯ ನಿರ್ವಿಕಾರನಿರಾಶ್ರಯಾವ್ಯಕ್ತ ||೩೦||

ಪದ್ಯಾರ್ಥ—ಪ್ರಣವಕಾರಣ--ಕಾರ್ಯ ರೂಪವು ವೇದವು ! ಕಾರಣವು ಪ್ರಣವ, ಪರಮಾತ್ಮನು ಪ್ರಣವರೂಪಿಯಾಗಿ ಕಾರಣನಾಗಿದ್ದು ಕಾರ್ಯರೂಪ ವಾದ ವೇದ ಪ್ರತಿಪಾದ್ಯನಾಗಿರುವನು. ಪರಾತ್ಪರ--ಪರಾತ್--ಉತ್ತಮ ರಾದ ಲಕ್ಷ್ಮೀ ಬ್ರಹ್ಮಾದಿಗಳಕಿಂತಲೂ, ಪರನು--ಉತ್ತಮನು, ಚೇತನಾ ಚೇತನವಿಲಕ್ಷಣ--ಪರಮಾತ್ಮನು ಜಡಾತ್ಮಕನೂ ಅಲ್ಲ, ಬ್ರಹ್ಮಾದಿ ಚೇತನನೂ ಅಲ್ಲ, ಇವೆರಡರಿಂದಲೂ ಭಿನ್ನನೆಂದರ್ಥ, ಅನಂತಸತ್ಕಲ್ಯಾಣ ಗುಣಪೂರ್ಣ--ಅಪರಿಮಿತವಾದ ಮಂಗಳಕರವಾದ ಗುಣಗಳಿಂದ ಪೂರ್ಣನು. ಅನುಪಮನು--ಉಪಮಾನರಹಿತನು, ಉಪಾಸಿತಗುಣೋದಧಿಯು--ಸೇವ್ಯವಾದ ಗುಣ ಸಮುದ್ರನು, ಅನಘ--ಪಾಪರಹಿತನು, ಅಜಿತ--ಯಾರಿಂದಲೂ ಸೋಲದವ ನು, ಅನಂತ ರೂಪನು, ನಿಷ್ಕಿಂಚನಜನಪ್ರಿಯನು--ಲೌಕಿಕವಾದ ದ್ರವ್ಯಾ

ವದು. ಸ್ವಭಾವದಿಂದಲೂ ಅನೇಕ ಸ್ಥಳಗಳಲ್ಲಿ ಯಾವಾಗಲೂ ವಾಸ ಮಾಡುತ್ತಿರುವನು. ಅವುಗಳೆಲ್ಲವನ್ನೂ ಪ್ರತಿಮೆಗಳೆಂತ ತಿಳಿಯಬೇಕು. ಅವು ಗಳು ಯಾವುವೆಂದರೆ,—ಸುಪೌರುಷ—ಪುರುಷ ಸಂಬಂಧಿಯಾದ, ಧಾತು ಸಪ್ತಕ—ತ್ವಕ್ ಚರ್ಮ ಮೊದಲಾದ ೭ ಧಾತುಗಳು, ಧೈರ್ಯ, ಶೌರ್ಯ, ಔದಾರ್ಯ—ಧಾತೃತ್ವ, ಚಾತುರ್ಯ—ಬುದ್ಧಿ ಕುಶಲತೆ, ವಾತು—ಭಗವತ್ಸಂಬಂಧವಾದ ಸತ್ಯವಾದ ಮಾತುಗಳು, ಮಾನ—ಗೌರವಸ್ಥಾನ, ಮಹತ್ವ—ಪೂಜ್ಯತೆ, ಸಹನ—ಕ್ಷಮೆ, ಉತ್ತಮವಾದ ನೀತಿ ನಿರ್ಮಲದೇಶ ಬ್ರಾಹ್ಮಣರು, ಭೂತಪಂಚಕ—ಪೃಥಿವ್ಯಾಧಿ ಪಂಚ ಭೂತಗಳು, ಬುದ್ಧಿ ಮೊದಲಾದ ಇಂದ್ರಿಯಗಳು, ಇವು ಗಳೆಲ್ಲವೂ, ಸ್ಥಾನ—ಪರಮಾತ್ಮನ ಆವಾಸಸ್ಥಾನವು.

ತಾತ್ಪರ್ಯ—ಲೋಕದಲ್ಲಿ—ತಾಮ್ರ, ಹಿತ್ತಾಳೆ, ಬೆಳ್ಳಿ, ಭಂಗಾರಗ ಳಿಂದ ಮನುಷ್ಯಾಕಾರವಾಗಿ ಮಾಡಿ ಅದಕ್ಕೆ ರಾಮ ಕೃಷ್ಣನೆಂದು ಹೆಸರಿಟ್ಟು ಪೂಜೆ ಮಾಡುತ್ತಿರುವರು. ತೇಜೋಮಯನಾದ ಪರಮಾತ್ಮನೆ ಈ ಪ್ರತಿಮೆ ಗಳಲ್ಲ, ಪರಮಾತ್ಮನು ಜಡನಲ್ಲ. ನಮಗೆ ಧ್ಯಾನ ಗೋಚರಕ್ಕಾಗಿ ಯಾವು ದಾದರೂ ಒಂದು ರೂಪವನ್ನು ಧ್ಯಾನಮಾಡಬೇಕಾಗುವದು ಅದರ ಉಪ ಯೋಗಕ್ಕಾಗಿ ಪ್ರತಿಮೆಗಳಲ್ಲಿ ಸಾಂಕೇತಿಕವಾದ ರಾಮಕೃಷ್ಣಾದಿ ನಾಮಗ ಳನ್ನು ಆರೋಪಿಸುವರು. ಆದುದರಿಂದ ಅವುಗಳಲ್ಲಿ ಪರಮಾತ್ಮನ ಅಧಿಷ್ಠಾ ನವನ್ನು ತಿಳಿಯಬೇಕು. ಆದರೆ ಪ್ರತಿಮೆಯೇ ದೇವರೆಂದು ತಿಳಿದ. ಅನ್ಯತ್ರ ಇರುವ ಭಗವದ್ರೂಪಗಳನ್ನರಿಯದೆ ಅವೆಲ್ಲವನ್ನೂ ತಿರಸ್ಕರಿಸಿ, ಪ್ರತಿಮೆ ಗಳ ಪೂಜೆಯನ್ನು ಮಾಡಿದರೂ ಆ ಪೂಜೆಯನ್ನು ಸ್ವೀಕರಿಸುವುದಿಲ್ಲ. ಆದು ದರಿಂದ ಈ ಪದ್ಯದಲ್ಲಿ ಹೇಳಿದ ಧಾತುಸಪ್ತಕ ಧೈರ್ಯ ಮೊದಲಾದವುಗಳಲ್ಲೂ ಭಗವದ್ರೂಪಗಳನ್ನು ಚಿಂತಿಸಬೇಕು. ಧೈರ್ಯಾದಿಗಳು ಕಣ್ಣಿಗೆ ಗೋಚರ ವಲ್ಲ. ಅವುಗಳಲ್ಲಿ ಭಗವದ್ರೂಪ ಚಿಂತನೆ ಹೇಗೆಂದರೆ,—ಧೈರ್ಯಾದಿಗಳುಳ್ಳ ಪುರುಷನಲ್ಲಿ ಧೈರ್ಯರೂಪಿಯಾಗಿದ್ದು ಇವನು ಧೈರ್ಯವಂತನು! ಇವನು ಶೌರ್ಯ ವಂತನು ಎಂಬ ಹೆಸರು ಪರಮಾತ್ಮನೇ ಪಡೆಯುವನೆಂದು ತಿಳಿದು ಉಪಾ ಸನೆ ಮಾಡಬೇಕೆಂಬ ತಾತ್ಪರ್ಯ.

ಜೀವರಾಶಿಯೊಳಮೃತ ಶಾಶ್ವತ
ಸ್ಥಾವರಗಳೊಳು ಸ್ಥಾಣುನಾಮಕ
ನಾವಕಾಲದಲಿಪ್ಪನಜಿತಾನಂತನೆಂದೆನಿಸಿ ॥
ಗೋವಿದಾಂಪತಿ ಗಾಯನಪ್ರಿಯ
ಸಾವಯವ ಸಾಹಸ್ರನಾಮ ಪ
ರಾವರೇಶ ಪವಿತ್ರಕರ್ಮ ವಿಪಶ್ಚಿತ ಸುಧಾಮ ॥೨೨॥

ಪದ್ಯಾರ್ಥ—ಗೋವಿದಾಂಪತಿ–ವೇದ ವೇದಾಂತಗಳಲ್ಲಿ ನಿಸ್ಸಂಶಯವಾದ ಅರ್ಥ ಜ್ಞಾನವುಳ್ಳ ಜ್ಞಾನಿಗಳಿಗೆ ಸ್ವಾಮಿಯಾದ, ಗಾಯನಪ್ರಿಯ–ಸಾಮಗಾನ ಮತ್ತೂ ತೋಡಿ ಭೈರವಿ ಮುಂತಾದ ರಾಗ ಜ್ಞಾನದಿಂದ ಸುಸ್ವರದಿಂದ ತನ್ನ ಮಹಿಮೆಯನ್ನು ಗಾನ ಮಾಡಿವರೆ ಬಹಳ ಪ್ರೀತನಾಗುವ, ಸಾವಯವ–ಆನಂದಮಯವಾದ ಕರಚರಣಾದಿ ಅಂಗಗಳಿಂದ ಯುಕ್ತನಾದ, ಸಾಹಸ್ರನಾಮ–ಸಹಸ್ರ ನಾಮಗಳಿಂದ ಕರೆಸಿಕೊಳ್ಳುವ, ಪರಾವರೇಶ–ಉತ್ತಮರಾದ ಬ್ರಹ್ಮಾದಿಗಳು, ಅಮರರಾದ ತೃಣಾಂತ ಜೀವರು, ಇವರಿಗೆ ಈಶ್ವರನಾದ, ಪವಿತ್ರಕರ್ಮ–ಮಂಗಳಕರವಾದ ಕರ್ಮಗಳುಳ್ಳ, ವಿಪಶ್ಚಿತ–ಜ್ಞಾನಿಗಳಿಗೆ, ಸುಧಾಮ–ಉತ್ತಮವಾದ ವಾಸಯೋಗ್ಯಸ್ಥಾನನಾದ ಶ್ರೀ ಪರಮಾತ್ಮನು, ಜೀವರಾಶಿಯೊಳು, ಅಮೃತ–ಮರಣರಹಿತನಾದುದರಿಂದ ಅಮೃತನಾಮಕನಾಗಿಯೂ, ಶಾಶ್ವತ–ಶಶ್ವದೇಕಪ್ರಕಾರನಾಗಿರುವುದರಿಂದ ಶಾಶ್ವತನೆಂತಲೂ, ಸ್ಥಾವರಗಳೊಳು, ಸ್ಥಾಣುನಾಮಕನು–ಸ್ಥಾಣು ಎಂಬ ಹೆಸರಿನಿಂದ, ಅಜಿತಾನಂತನೆಂದೆನಿಸಿ–ಅಜಿತನೆಂತಲೂ, ಅನಂತನೆಂತಲೂ ಅನಿಸಿಕೊಂಡು ಆವಕಾಲದಲಿ–ಸರ್ವಕಾಲದಲ್ಲೂ ಇಪ್ಪ.

ತಾತ್ಪರ್ಯ—ಯಾವಾಗಲೂ, ಯಾರಿಂದಲೂ ಸೋಲದವನಾದುದರಿಂದ ಅಜಿತನೆಂದು ಹೆಸರು. ಜೀವರಾಶಿಯೊಳಗೆ ಅಮೃತನೆಂಬ ಹೆಸರಿನಿಂದ ಶಾಶ್ವತವಾಗಿ ಇರುವನು- ಸ್ಥಾವರಗಳಲ್ಲಿ ಸ್ಥಾಣುನಾಮಕನಾಗಿ ಸರ್ವ ಕಾಲದಲ್ಲೂ ಇರುವನು. ಮಿಕ್ಕ ಪದಗಳಿಗೆ ಅರ್ಥವು ಪದ್ಯಾರ್ಥದಲ್ಲಿ ವಿವರ ಮಾಡಲ್ಪಟ್ಟಿದೆ.

ಮಾಧವನ ಪೂಜಾರ್ಥವಾಗಿ ನಿ
ಷೇಧಕರ್ಮವ ಮಾಡಿಧನ ಸಂ
ಪಾದಿಸಲು ಸತ್ಪುಣ್ಯ ಕರ್ಮಗಳೆನಿಸಿಕೊಳುತಿಹವು ॥
ಸ್ವೋದರಂಭರಣಾರ್ಥ ನಿತ್ಯದಿ
ಸಾಧುಕರ್ಮವ ಮಾಡಿದರು ಸರಿ
ಯೈದುದನು ದೇಹಾಂತರವ ಸಂದೇಹವಿನಿತಿಲ್ಲ ॥೨೩॥

ಪದ್ಯಾರ್ಥ—ಮಾಧವನ ಪೂಜಾರ್ಥವಾಗಿ, ನಿಷೇಧಕರ್ಮವ ಮಾಡಿ, ಧನ ಸಂಪಾದಿಸಲು, ಸತ್ಪುಣ್ಯಕರ್ಮಗಳೆನಿಸಿಕೊಳ್ಳುವುವು. ಸ್ವೋದರಂಭರಣಾರ್ಥ–ತನ್ನ ಹೊಟ್ಟೆಯನ್ನು ತುಂಬಿಸಿಕ್ಕೊಳ್ಳುವುದಕ್ಕಾಗಿ (ತನ್ನ ದೇಹ ಪೋಷಣಕ್ಕಾಗಿ) ನಿತ್ಯದಲ್ಲೂ, ಸಾಧುಕರ್ಮವನ್ನು ಮಾಡಿದರೂ ಸರಿ, ದೇಹಾಂತರವ–ಮತ್ತೂ ಭೂಮಿಯಲ್ಲಿ ಜನ್ಮಗಳನ್ನು, ಯ್ದುವನು–ಸಂದೇಹವಿನಿತಿಲ್ಲ–ಈ ವಿಷಯದಲ್ಲಿ ಸಂದೇಹವಿಲ್ಲ.

ತಾತ್ಪರ್ಯ—ಭಗವತ್ಪ್ರೀತಿಗೋಸ್ಕರವಾಗಿ ದೇವಾಲಯ, ಉದ್ಯಾನವನ ಮೊದಲಾದವುಗಳನ್ನು ರಚಿಸುವ ಉದ್ದೇಶ ಮಾಡಿ ಯಾಚನಾದಿಗಳನ್ನು ಮಾಡಿ, ಯಥೇಷ್ಟವಾಗಿ ಧನ ಸಂಪಾದನೆ ಮಾಡಿ ಆ ಸತ್ಕಾರ್ಯಗಳನ್ನು ಭಗವತ್ಪ್ರೀತಿಗಾಗಿ ಮಾಡಿದರೆ ಅವು ಸತ್ಕಾರ್ಯವೆಂದೆನಿಸಿಕೊಳ್ಳುವವು. ಮನಸ್ಸಿನಲ್ಲಿ ತನ್ನ ದೇಹ ಪೋಷಣೆ ನಿಮಿತ್ತವನ್ನು ಇಟ್ಟುಕೊಂಡು ಬ್ರಾಹ್ಮಣ ಭೋಜನಾದಿ ನಿಮಿತ್ತವನ್ನು ಹೊರಗೆ ತೋರಿಸಿ ಹಣ ಸಂಪಾದನವನ್ನು ಮಾಡಿ ಬ್ರಾಹ್ಮಣ ಸಂತರ್ಪಣೆ ಮೊದಲಾದವುಗಳನ್ನು ಮಾಡಿದರೂ, ಪಾಪ ಕರ್ಮದ ಫಲವಾದ ಮತ್ತೂ ಜನ್ಮವನ್ನು ಹೊಂದುವದು, ಸಾಯುವದು ಈ ಫಲವೇ ಪ್ರಾಪ್ತಿಯಾಗುವದು. ಅದುದರಿಂದ ಯಾವ ಕರ್ಮವನ್ನು ಮಾಡಿದರೂ ಭಗವತ್ಪ್ರೀತಿಗಾಗಿ ಮಾಡಬೇಕೆಂಬ ತಾತ್ಪರ್ಯ.

**ಅಪಗತಾಶ್ರಯ ಎಲ್ಲರೊಳಗಿ**
**ದ್ದುಪಮನೆನಿಪಾನುಪಮರೂಪನು**
**ಶಫರಕೇತನ ಜನಕಮೋಹಿಪಮೋಹಕನ ತೆರದಿ ||**

**ತಪನಕೋಟಿ ಸಮಪ್ರಭಾಸಿತ**
**ವಪುವೆನಿಪ ಕೃಷ್ಣಾದಿರೂಪಕ**
**ದ್ವಿಪದನಂತುಂಡುಣಿಪ ಸರ್ವತ್ರ ನೆಲಸಿದ್ದು ||೨೪||**

ಪದ್ಯಾರ್ಥ—ಅಪಗತಾಶ್ರಯ–ಮತ್ತೊಬ್ಬರನ್ನು ಆಶ್ರಯಿಸದ, ಅನುಪಮರೂಪನು–ಉಪಮಾನರಹಿತವಾದ ಸ್ವರೂಪವುಳ್ಳವನಾದರೂ, ಎಲ್ಲರೊಳಗಿದ್ದು, ಉಪಮನೆನಿಪ–ಮನುಷ್ಯರಂತೆ, ಮೃಗದಂತೆ ಎಂದು ಉಪಮೆಯುಳ್ಳವನೆಂದು ಕರೆಸಿಕೊಳ್ಳುವನು. ಶಫರಕೇತನ ಜನಕ–ಮನ್ಮಥನ ತಂದೆಯಾದ ಶ್ರೀ ಹರಿಯು, ತಪನಕೋಟಿಸಮಪ್ರಭಾ–ಸೂರ್ಯ ಕೋಟಿ ಸಮ

ವಾದ ಪ್ರಭೆಯುಳ್ಳವನಾದರೂ, ಕೃಷ್ಣಾದಿ ರೂಪಕ–ಕೃಷ್ಣಾದಿ ಅವತಾರಗಳಲ್ಲಿ, ದ್ವಿಪದನಂತೆ–ಸಾಮಾನ್ಯ ಮನುಷ್ಯನಂತೆ, ಅಸಿತ–ಕಪ್ಪಾದ, ವಪುವೆನಿಪ–ಬಣ್ಣವುಳ್ಳ ಶರೀರವುಳ್ಳವನೆಂದೆನಿಪನು. ಹೀಗೆ ಮೋಹಕನತೆರದಿ–ಮೋಹಿಪ ಸರ್ವತ್ರ ನೆಲಸಿದ್ದು–ಎಲ್ಲಾ ಸ್ಥಳಗಳಲ್ಲೂ ಇದ್ದು, ಉಂಡುಣಿಪ–ತಾನುಂಡು ಜೀವರಿಗೆ ಉಣಿಸುವನು.

ತಾತ್ಪರ್ಯ—ತಾನು ಎಲ್ಲರಿಗೂ ಆಶ್ರಯನಾಗಿರುವನು. ತನಗೆ, ಆಶ್ರಯರು ಮತ್ತೊಬ್ಬರಿಲ್ಲ. ತಾನು ಅನುಪಮನಾದರೂ ಮನುಷ್ಯಾದಿಗಳಲ್ಲಿದ್ದು ಉಪಮಿತನಾಗಿ ತೋರುವನು. ಕೋಟಿ ಸೂರ್ಯ ಸಮ ಪ್ರಭನಾದರೂ ಕೃಷ್ಣಾದ್ಯವತಾರದಲ್ಲಿ ಮನುಷ್ಯಾಕಾರನಾಗಿ ಕಪ್ಪು, ಬಿಳುಪು ಮೊದಲಾದ ಸಾಧಾರಣ ಬಣ್ಣವುಳ್ಳವನಾಗಿ ಜನರನ್ನು ಮೋಹಿಸುವನು. ಸರ್ವತ್ರ ವಾಸವಾಗಿದ್ದು ವಿಷಯಭೋಗಾದಿಗಳನ್ನೂ ಅನ್ನಾದಿಗಳನ್ನೂ ತಾನುಂಡು ಜೀವರಿಗೂ ಉಣಿಸುವನು.

**ಅಡವಿಯೊಳು ಬಿತ್ತದಲೆ ಬೆಳದಿಹ**
**ಗಿಡದ ಮೂಲಿಕೆ ಸಕಲಜೀವರ**
**ಒಡಲೊಳಿಪ್ಪಾಮಯವ ಪರಿಹರ ಗೈಸುವಂದದಲಿ ||**
**ಜಡಜಸಂಭವ ಜನಕತ್ರಿಜಗ**
**ದ್ವಡೆಯ ಸಂತೈಸೆನಲು ಅವರಿ**
**ದ್ದೆಡೆಗ ಬಂದೊದಗುವನು ಭಕ್ತರ ಭಿಡಿಯ ಮಿಾರದಲೆ ||೨೫||**

ಪದ್ಯಾರ್ಥ—ಅಡವಿಯೊಳಗೆ, ಬಿತ್ತದಲೆ ಬೆಳದಿರುವ ಗಿಡದ ಮೂಲಿಕೆ, ಸಕಲಜೀವರ, ಒಡಲೊಳಿಪ್ಪ–ಶರೀರ ಸಂಬಂಧವಾದ, ಆಮಯವ--ರೋಗವನ್ನು, ಪರಿಹರಗೈಸುವಂದದಲಿ--ಪರಿಹಾರ ಮಾಡುವಂತೆ, ತ್ರಿಜಗದ್ವಡೆಯ--ಮೂರು ಲೋಕದ ಪ್ರಭುವೆ! ಸಂತೈಸು! ಎನಲು--ಉದ್ಧಾರ ಮಾಡೆಂದು ಬೇಡಲು, ಜಡಜಸಂಭವ ಜನಕ--ಜಡಜ ಎಂಬ ಪದದಲ್ಲಿರುವ ಡ ಎಂಬಕ್ಷರವು ಲ ಎಂದೆನಿಸುವುದು. ರ-ಡ ಲ- ಇವುಗಳಿಗೆ ಪರಸ್ಪರ ಭೇದವಿಲ್ಲ ಆದ್ದರಿಂದ ಜಡಜ--ಜಲಜ ಸಂಭವರು ಬ್ರಹ್ಮದೇವರು ಅವರ ಜನಕ--ತಂದೆಯಾದ ಶ್ರೀ ಪರಮಾತ್ಮನು, ಭಕ್ತರ ಭಿಡಿಯ--ದಾಕ್ಷಿಣ್ಯವನ್ನು ಮಿಾರದಲೆ, ಅವರಿದ್ದೆಡೆಗೆ ಬಂದೊದಗುವನು.

ತಾತ್ಪರ್ಯ—ನಮ್ಮ ಪ್ರಯತ್ನವಿಲ್ಲದೆ, ನಾವು ಬೀಜವನ್ನು ಬಿತ್ತದೆ, ಕಾಡಿನಲ್ಲಿ ತಾನಾಗಿ ಬೆಳೆಯುವ ಗಿಡದ ಮೂಲಿಕೆಯು ರೋಗಿಗಳ ಸಕಲ ರೋಗವನ್ನು ಪರಿಹಾರ ಮಾಡುವದು. ಅದರಂತೆ ಶ್ರೀಪರಮಾತ್ಮನು ನಾವು ಹೆತ್ತ ಪುತ್ರನಾಗಲಿ, ಮಿತ್ರನೆಂತಾಗಲಿ ಅಲ್ಲದಿದ್ದರೂ, ಮೂರು ಲೋಕದೊಡಯನೇ! ನನ್ನನ್ನು ರಕ್ಷಿಸೆಂದು ಬೇಡಲು ಭಕ್ತರ ದಾಕ್ಷಿಣ್ಯಕ್ಕೆ ಒಳಗಾಗಿ ಅವರು ಇದ್ದ ಸ್ಥಳಕ್ಕೆ ಬಂದು ಅವರ ಕಷ್ಟಕ್ಕೊದಗುವನು.

ಅವತಾರಿಕೆ—ನಿಷ್ಕಾಮೋಪಾಸನೆಯಿಂದ ಭಗವಂತನು ಪ್ರೀತನಾಗುವನೆಂದು ಹೇಳುತ್ತಾರೆ.

ಶ್ರೀನಿಕೇತನ ತನ್ನವರ ದೇ
ಹಾನುಬಂಧಿಗಳಂತೆ ಅವ್ಯವ
ಧಾನದಲಿ ನೆಲಸಿಪ್ಪ ಸರ್ವದ ಸಕಲಕಾಮದನು ||
ಏನುಕೊಟ್ಟರು ಭುಂಜಿಸುತ ಮ
ದ್ದಾನೆಯಂದದಿ ಸಂಚರಿಸು ಮ
ತ್ತೇನು ಬೇಡದೆಭಜಿಸುತಿರು ಅವನಂಘ್ರಿಕಮಲಗಳ ||೨೬||

ಪದ್ಯಾರ್ಥ—ಶ್ರೀನಿಕೇತನ--ಲಕ್ಷ್ಮೀ ವಾಸಸ್ಥಾನಭೂತನಾದ ಶ್ರೀಹರಿಯು, ತನ್ನವರ--ತನ್ನ ಭಕ್ತರನ್ನು, ದೇಹಾನುಬಂಧಿಗಳಂತೆ ಸರ್ವದಾ, ಸಕಲಕಾಮದನು--ಸಕಲ ಮನೋಭೀಷ್ಟವನ್ನು ಪೂರೈಸುವನಾಗಿ, ಅವ್ಯವಧಾನದಲಿ--ಸಮೀಪದಲ್ಲಿ ಸ್ವಲ್ಪ ಹೊತ್ತಾದರೂ ವಿರಾಮವಿಲ್ಲದೆ, ನೆಲಶಿಪ್ಪ--ವಾಸ ಮಾಡುತ್ತಿರುವನು. ಏನುಕೊಟ್ಟರೂ--ದೇವರು ಏನು ಕೊಟ್ಟರೂ, ಅದನ್ನು ಭುಂಜಿಸುತ, ಮದ್ದಾನೆಯಂದದಿ--ಮದ್ದಾನೆಯಂತೆ ಸಂಚರಿಸು! ಮತ್ತೇನು ಬೇಡದೆ, ಅವನಂಘ್ರಿಕಮಲಗಳ, ಭಜಿಸುತಿರು.

ತಾತ್ಪರ್ಯ—ಶ್ರೀ ಪರಮಾತ್ಮನು ತನ್ನ ಭಕ್ತರನ್ನು ದೇಹಾನುಬಂಧಿಗಳಂತೆ ಸಮೀಪದಲ್ಲೀ ಇದ್ದು ಅವರವರ ಮನೋಭೀಷ್ಟವನ್ನು ಪೂರೈಸುತ್ತಿರುವನು- ಈಶ್ವರ ಸಂಕಲ್ಪದಿಂದ ಏನು ಬಂದರೂ ಅಷ್ಟಕ್ಕೆ ಸಂತೋಷಪಡುತ್ತಾ, ಕಾಮ್ಯ ಫಲವನ್ನು ಬೇಡದೆ ಅವನ ಪಾದಕಮಲವನ್ನು ಭಜಿಸುತ್ತಾ ಮತ್ತಾರನ್ನೂ ಲಕ್ಷೀಕರಿಸದೆ ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ಮದಗಜದಂತೆ ಸಂಚರಿಸು.

ಅವತಾರಿಕೆ—ಪರಮಾತ್ಮನು ಎಂಥ ಎಂಥಾ ಭಕ್ತರಿಗೆ ಯಾವಯಾವ ರೀತಿಯಲ್ಲಿ ಇಷ್ಟಾರ್ಥವ ಕೊಡುತ್ತಾನೆಂಬುವುದನ್ನು ಹೇಳುತ್ತಾರೆ.

**ಬೇಡದಲೆ ಕೊಡುತಿಪ್ಪ ಸುರರಿಗೆ**
**ಬೇಡಿದರೆ ಕೊಡುತಿಹನು ನರರಿಗೆ**
**ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆಪುರುಷಾರ್ಥ ||**
**ಮೂಢರನುದಿನ ಧರ್ಮಕರ್ಮವ**
**ಮಾಡಿದರು ಸರಿ ಯಿಹಿಕ ಫಲಗಳ**
**ನೀಡಿ ಉನ್ಮತ್ತರನಮಾಡಿ ಮಹಾನಿರಯವೀವ ||೨೭||**

ಪದ್ಯಾರ್ಥ—ಸುರರಿಗೆ--ದೇವತೆಗಳಿಗೆ, ಬೇಡದಲೆ ಕೊಡುತಿಪ್ಪ; ನರರಿಗೆ--ಮನುಷ್ಯರಿಗೆ, ಬೇಡಿದರೆ ಕೊಡುತಿಹನು; ಬೇಡಿ ಬಳಲುವ ದೈತ್ಯರಿಗೆ, ಪುರುಷಾರ್ಥಗಳನ್ನು ಒಮ್ಮೆಗಾದರೂ ಕೊಡನು. ಮೂಢರು ಅನುದಿನದಲ್ಲೂ ಧರ್ಮ ಫಲವನ್ನು ಕೊಡುವ ಪುಣ್ಯ ಕರ್ಮಗಳನ್ನು ಮಾಡಿದರೂ ಸರಿ, ಆಹಿಕ ಫಲಗಳನ್ನು, ನೀಡಿ--ಕೊಟ್ಟು, ಉನ್ಮತ್ತರನ--ಮದಾಂಧರನ್ನಾಗಿ ಮಾಡಿ, ಮಹಾನಿರಯವ--ಮಹಾ ಘೋರವಾದ ನರಕವನ್ನು (ಅಂಧಂತಮಸ್ಸನ್ನು) ಕೊಡುವನು.

ತಾತ್ಪರ್ಯ—ಉತ್ತಮ, ಮಧ್ಯಮ, ಅಧಮ ಅಧಮಾಧಮ ಭಕ್ತರುಗಳ ಸಾಧನೆಯ ಫಲಗಳನ್ನು ಹೇಳುತ್ತಾ, ಉತ್ತಮ ಭಕ್ತರಿಗೆ ಅವರು ಕೇಳಿಕೊಳ್ಳದೆ ಇದ್ದರೂ ಉತ್ತಮಗತಿಯನ್ನು ಕೊಡುತ್ತಾನೆ. ಮಧ್ಯಮ ಭಕ್ತರು ಬೇಡಿಕೊಂಡರೆ ಅವರಿಗೆ ಕೊಡುತ್ತಾನೆ. ಅಧಮ ಭಕ್ತರು ಬೇಡಿಕೊಂಡರೂ ಕೊಡುವುದಿಲ್ಲ. ಅಧಮಾಧಮರು ಪುಣ್ಯ ಕರ್ಮಗಳನ್ನು ಮಾಡಿದರೂ ಅವುಗಳ ಫಲ ರೂಪವಾದ ಉತ್ತಮಗತಿಯನ್ನು ಕೊಡದೆ ನಶ್ವರವಾದ ಆಹಿಕ ಫಲಗಳನ್ನು ಕೊಟ್ಟು ಅವರನ್ನು ಅಹಂಕಾರಕ್ಕೆ ಗುರಿ ಮಾಡಿ ತನ್ಮೂಲಕ ನರಕಕ್ಕೆ ಗುರಿಮಾಡುವನು.

**ತರಣಿ ಸರ್ವತ್ರದಲಿ ಕಿರಣವ**
**ಹರಹಿ ತತ್ತದ್ವಸ್ತುಗಳನನು**
**ಸರಿಸಿಯದರದರಂತೆ ಛಾಯವು ಕಂಗೊಳಿಪತೆರದಿ ||**
**ಅಂಧರೇಜಾನೇಜ ಜಗದೊಳ**
**ಗಿರುವ ಛಾಯಾತಪನೆನಿಸಿ ಸಂ**
**ಕರುಷಣಾಹ್ವಯ ನವರವರ ಯೋಗ್ಯತೆಗಳಂತಿಪ್ಪ ||೨೮||**

ಪದ್ಯಾರ್ಥ—ತರಣಿ--ಸೂರ್ಯನು, ಸರ್ವತ್ರವಲಿ, ಕಿರಣವಹರಹಿ, ತತ್ತದ್ವಸ್ತುಗಳನ್ನನುಸರಿಸಿ--ಅಲ್ಲಲ್ಲಿ ಕಾಣುವ ವಸ್ತುಗಳು ಯಾವ ಯಾವ ಆಕಾರವಾಗಿರುವದೋ ಆಯಾ ಆಕಾರವನ್ನನುಸರಿಸಿ, ಅದರದರಂತೆ, ಛಾಯವು ಕಂಗೊಳಿಪತೆರದೀ ; ಅರಿಧರ--ಚಕ್ರಪಾಣಿಯಾದ, ಸಂಕರುಷಣಾಹ್ವಯನು - ಸಂಕರ್ಷಣ ನಾಮಕನು, ಏಜ--ಚೇತನರು, ಅನೇಜ--ಜಡರು, ಹೀಗೆ ಜಡ ಚೇತನಾತ್ಮಕವಾದ, ಜಗದೊಳಗ್ಗೆ, ಇರುವ, ಛಾಯಾತಪನೆನಿಸಿ--ನೆಳಲು ಬಿಸಲೆನಿಸಿ ಅಂದರೆ ಕೆಲವರಿಗೆ ನೆಳಲು ರೂಪನಾಗಿಯೂ, ಕೆಲವರಿಗೆ ಬಿಸಲು ರೂಪನಾಗಿಯೂ, ಅವರವರ ಯೋಗ್ಯತೆಗಳಂತಿಪ್ಪ.

ತಾತ್ಪರ್ಯ—ಸೂರ್ಯನ ಕಿರಣವು, ಭೂಮಿಯಲ್ಲಿ ಮನುಷ್ಯ ಪಶು ವೃಕ್ಷಾದಿಗಳ ಮೇಲೆ ಬೀಳಲು ಅವುಗಳಂತೆಯೇ ಛಾಯದ ಆಕಾರವು ಕಾಣುವದು. ಗಿಡದ ನೆಳಲು ಗಿಡದ ಆಕಾರವಾಗಿಯೂ, ಮನುಷ್ಯಾದಿಗಳ ನೆಳಲು ತದಾಕಾರವಾಗಿಯೂ ಕಾಣುವದು. ಅದರಂತೆ ಚಕ್ರಪಾಣಿಯಾದ ಶ್ರೀ ಸಂಕರ್ಷಣನು, ಸ್ಥಾವರ ಜಂಗಮಾತ್ಮಕ ಪ್ರಪಂಚದಲ್ಲಿ ತತ್ತದಾಕಾರನಾಗಿ ಅಲ್ಲಲ್ಲಿದ್ದು ಭೂಮಿಯಲ್ಲಿ ಹೇಗೆ ಕೆಲವೆಡೆಯಲ್ಲಿ ನೆಳಲು, ಕೆಲವು ಕಡೆಯಲ್ಲಿ ಬಿಸಲು ಇರುವದೋ ಹಾಗೆಯೇ ತಾನೂ ಭಕ್ತ ಜನರಿಗೆ ನೆಳಲಂತೆಯೂ, ದೈತ್ಯಾದಿಗಳಿಗೆ ಬಿಸಲಂತೆಯೂ, ಅವರವರ ಯೋಗ್ಯತಾನುಸಾರವಾಗಿ ಇರುತ್ತಿರುವನು.

ಈ ವಿಧದಿ ಸರ್ವತ್ರ ಲಕುಮಿ<br>
ಭೂವನಿತೆಯರ ಕೂಡಿ ತನ್ನಕ<br>
ಳಾವಿಶೇಷಗಳೆಲ್ಲ ಕಡೆಯಲಿ ತುಂಬಿಸೇವ್ಯತವ ||<br>
ಸೇವಕನುತಾನೆನಿಸಿ ಮಾಯಾ<br>
ದೇವಿ ರಮಣ ಪ್ರವಿಷ್ಟರೂಪಕ<br>
ಸೇವೆಮಾಳ್ಪ ಶರಣ್ಯಶಾಶ್ವತ ಕರುಣಿ ಕಮಲಾಕ್ಷ ||೨೫||

ಪದ್ಯಾರ್ಥ—ಈ ವಿಧದಿ--ಈ ಪ್ರಕಾರವಾಗಿ, ಸರ್ವತ್ರ, ಲಕುಮಿ ಭೂವನಿತೆಯರ ಕೂಡಿ--ಶ್ರೀದೇವಿ ಭೂದೇವಿಯರೆಂಬ ಸತಿಯರಿಂದೊಡಗೂಡಿ, ತನ್ನ ಕಳಾವಿಶೇಷಗಳ, ಎಲ್ಲ ಕಡೆಯಲಿ ತುಂಬಿ, ಶರಣ್ಯ--ಮೊರೆ ಹೋಗಲ್ಪಡಲು ಯೋಗ್ಯನಾದ, ಶಾಶ್ವತಕರುಣಿ--ಭಕ್ತರಲ್ಲಿ ಏಕರೀತಿಯಾವ ಮಮ

ಯುಳ್ಳ, ಕಮಲಾಕ್ಷನಾದ, ಮಾಯಾದೇವಿರಮಣ--ಶ್ರೀ ವಾಸುದೇವನು, ಸೇವ್ಯತಮ -ಎಲ್ಲರಿಂದಲೂ ಸೇವೆಯನ್ನು ತೆಗೆದುಕೊಳ್ಳುವವನಾದರೂ, ಪ್ರವಿಷ್ಟರೂಪಕ--ಜಗತ್ತಿನಲ್ಲಿ ಪ್ರವಿಷ್ಟವಾದ ರೂಪಗಳಿಂದ, ಸೇವಕನು ತಾನೆನಿಸಿ, ಸೇವೆಮಾಳ್ಪನು.

ತಾತ್ಪರ್ಯ—ಈ ಪ್ರಕಾರವಾಗಿ ಮಾಯಾರಮಣನಾದ ವಾಸುದೇವನು ಶ್ರೀ ಭೂ ಸಮೇತನಾಗಿ ಸರ್ವತ್ರ ವ್ಯಾಪ್ತನಾಗಿದ್ದು ತಾನು ವಾಸುದೇವಾದಿ ರೂಪಗಳಿಂದ ಸೇವೆಯನ್ನು ಕೈಗೊಳ್ಳುವನು. ಬ್ರಹ್ಮಾದಿಗಳಲ್ಲಿ ಪ್ರವಿಷ್ಟ ರೂಪದಿಂದ ತನ್ನ ಸೇವೆಯನ್ನು ತಾನೇ ಸೇವಕನಾಗಿ ಮಾಡುತ್ತಿರುವನು.

ಅವತಾರಿಕೆ—ಮುಂದಿನ ಪದ್ಯದಿಂದ ಸಂಧಿಯನ್ನು ಮುಗಿಸುತ್ತಾ ಈ ಪದ್ಯದಿಂದ ಪರಮಾತ್ಮನ ಗುಣ ವರ್ಣನ ಮಾಡುತ್ತಾರೆ.

**ಪ್ರಣವಕಾರಣಕಾರ್ಯ ಪ್ರತಿಪಾ**
**ದ್ಯನು ಪರಾತ್ಪರ ಚೇತನಾ ಚೇ**
**ತನವಿಲಕ್ಷಣನಂತಸತ್ಕಲ್ಯಾಣ ಗುಣ ಪೂರ್ಣ ||**
**ಅನುಪಮನು ಪಾಸಿತಗುಣೋದಧಿ**
**ಯ ನಘನಜಿತಾನಂತ ನಿಷ್ಕಿಂ**
**ಚನ ಜನಪ್ರಿಯ ನಿರ್ವಿಕಾರನಿರಾಶ್ರಯಾವ್ಯಕ್ತ ||೩೦||**

ಪದ್ಯಾರ್ಥ—ಪ್ರಣವಕಾರಣ--ಕಾರ್ಯ ರೂಪವು ವೇದವು! ಕಾರಣವು ಪ್ರಣವ, ಪರಮಾತ್ಮನು ಪ್ರಣವರೂಪಿಯಾಗಿ ಕಾರಣನಾಗಿದ್ದು ಕಾರ್ಯರೂಪ ವಾದ ವೇದ ಪ್ರತಿಪಾದ್ಯನಾಗಿರುವನು. ಪರಾತ್ಪರ--ಪರಾತ್--ಉತ್ತಮ ರಾದ ಲಕ್ಷ್ಮೀ ಬ್ರಹ್ಮಾದಿಗಳಿಕಿಂತಲೂ, ಪರನು--ಉತ್ತಮನು, ಚೇತನಾ ಚೇತನವಿಲಕ್ಷಣ--ಪರಮಾತ್ಮನು ಜಡಾತ್ಮಕನೂ ಅಲ್ಲ, ಬ್ರಹ್ಮಾದಿ ಚೇತನನೂ ಅಲ್ಲ, ಇವೆರಡರಿಂದಲೂ ಭಿನ್ನನೆಂದರ್ಥ, ಅನಂತಸತ್ಕಲ್ಯಾಣ ಗುಣಪೂರ್ಣ--ಅಪರಿಮಿತವಾದ ಮಂಗಳಕರವಾದ ಗುಣಗಳಿಂದ ಪೂರ್ಣನು. ಅನುಪಮನು--ಉಪಮಾನರಹಿತನು, ಉಪಾಸಿತಗುಣೋದಧಿಯು--ಸೇವ್ಯವಾದ ಗುಣ ಸಮುದ್ರನು, ಅನಘ--ಪಾಪರಹಿತನು, ಅಜಿತ--ಯಾರಿಂದಲೂ ಸೋಲದವ ನು, ಅನಂತ ರೂಪನು, ನಿಷ್ಕಿಂಚನಜನಪ್ರಿಯನು--ಲೌಕಿಕವಾದ ದ್ರವ್ಯಾ

ದಿಗಳ ಅಭಿಮಾನವನ್ನು ಬಿಟ್ಟು ಪರಮಾತ್ಮನೇ ಧನವೆಂದು ನಂಬಿದ ನಿಷ್ಕಿಂಚನರಲ್ಲಿ ಪ್ರೀತಿಯುಳ್ಳವನು, ನಿರ್ವಿಕಾರನು, ನಿರಾಶ್ರಯನು, ಅವ್ಯಕ್ತ-ಸಾಮಾನ್ಯರಾದ ಜನರಿಗೆ ಅಗೋಚರನು.

ಅವತಾರಿಕೆ.— ಫಲಸ್ತುತಿಯನ್ನು ಹೇಳಿ ಸಂಧಿಯನ್ನು ಮುಗಿಸುತ್ತಾರೆ

**ಗೋಪಭೀಯುಭವಾಂಧಕಾರಕೆ**
**ದೀಪವಟ್ಟಿಗೆ ಸಕಲಸುಖ ಸದ**
**ನೋಪರಿಗ್ರಹವೆನಿಸುತಿಪ್ಪದು ಹರಿಕಥಾಮೃತವು ||**
**ಗೋಪತಿಜಗನ್ನಾಥವಿಠಲ ಸ**
**ಮೀಪದಲಿ ನೆಲಸಿದ್ದು ಭಕ್ತರ**
**ಅಪವರ್ಗರಮಾಡುವನು ಬಹುದುಃಖಭವದಿಂದ ||೩೧||**

ಪದ್ಯಾರ್ಥ.— ಗೋಪಭೀಯುಭವಾಂಧಕಾರಕೆ=ಗೋ=ವೇದಸ್ವರೂಪರಾದ ದುರ್ಗಾದೇವಿಯು; ಅವರ ಪತಿಯಾಗಿ ಪಾಲಿಸುವುದರಿಂದ ಗೋಪನೆಂದು ಪರಮಾತ್ಮನಿಗೆ ಹೆಸರು, ಭೀಯು=ಪರಮಾತ್ಮನನ್ನು ಕಾಣಗೊಡದೆ, ಅವನನ್ನು ಶೇರಗೊಡದೆ ಅವನಿಂದ ಭಯ ಉಂಟಾಗುವಂತೆ ಮಾಡುವುದು ಸಂಸಾರವು. ಇಂತಹಾ ಪರಮಾತ್ಮನಿಂದ ಭಯವನ್ನು ಕೊಡಿಸುವ ಸಂಸಾರವೆಂಬ ಗಾಂಢಾಂಧಕಾರಕ್ಕೆ, ದೀಪವಟ್ಟಿಗೆ= ಪ್ರಕಾಶಮಾನವಾದ ದೀವಟಿಗೆಯಂತಿರುವ, ಮತ್ತು, ಸಕಲಸುಖಸದನೋಪರಿಗ್ರಹವು=ಸಮಸ್ತವಾದ ಸುಖವೆಂಬ ಮನೆಗೆ ಮೇಲುಪ್ಪರಿಗೆ ಎಂದು, ಎನಿಸುತಿಪ್ಪದು ಹರಿಕಥಾಮೃತವು, ಇದನ್ನು ಪಾನಮಾಡುವವರ, ಸಮೀಪದಲ್ಲಿ ನೆಲಸಿದ್ದು, ಗೋಪತಿ=ವೇದಾಭಿಮಾನಿಯರಾದ ರಮಾಪತಿಯಾದ ಶ್ರೀಜಗನ್ನಾಥವಿಠಲನು, ಬಹು ದುಃಖಭವದಿಂದ=ಬಹು ದುಃಖಮಯವಾದ ಸಂಸಾರದ ದೆಶೆಯಿಂದ ಉದ್ಧರಿಸಿ, ಅಪವರ್ಗಸ=ಮುಕ್ತರನ್ನಾಗಿ ಮಾಡುವನು.

ತಾತ್ಪರ್ಯ.—ಸಂಸಾರದಲ್ಲಿ ಹೆಂಡರು ಮಕ್ಕಳು ನಾನು ನನ್ನದು ಎಂಬ ಅಭಿಮಾನದಿಂದ ಪರಮಾತ್ಮನನ್ನು ಮರೆತು ಬಿಡುವರು. ಆದರಿಂದ ಪರಮಾತ್ಮನು ನಮ್ಮನ್ನು ನರಕದಲ್ಲಿ ಹಾಕಿ ಕಷ್ಟಪಡಿಸುವನೆಂಬ ಭಯಕ್ಕೆ ಕಾರಣವಾಗುವದು. ಆದುದರಿಂದ ದಾಸಾರ್ಯರು ಸಂಸಾರವನ್ನು ಗೋಪಭೀಯುವೆಂ

ದರು; ವೇದಾಭಿಮಾನಿಯು ರಮಾದೇವಿ, ಆಕೆಗೆ ಪತಿಯಾದುದರಿಂದ " ಗಾಂಪಾತೀತಿ ಗೋಪಃ " ಎಂಬ ವ್ಯುತ್ಪತ್ತಿಯಿಂದ ಗೋಪನೆಂದು ಪರಮಾತ್ಮನಿಗೆ ಹೆಸರು. ಸಂಸಾರದಲ್ಲಿ ಅವನ ಭಯವುಂಟೇ ಉಂಟು. ಇಂತಹಾ ಸಂಸಾರವೆಂಬ ಘೋರವಾದ ಅಂಧಕಾರಕ್ಕೆ ಹರಿಕಥೆಯು ದೀವಟಿಗೆಯಂತೆ ಇರುವುದು. ಅಂದರೆ ಅಜ್ಞಾನಂಧಕಾರವನ್ನು ಪರಿಹರಿಸಿ ಜ್ಞಾನೋದಯವನ್ನು ಮಾಡಿಸುವದೆಂದರ್ಥ. ಮತ್ತು ಸಮಸ್ತ ಸುಖಗಳು ವಾಸಿಸುವುದಕ್ಕೆ ಯೋಗ್ಯವಾದ ಮನೆಯಮೇಲುಪ್ಪರಿಗೆಯಂತೆ ಇರುವುದು. ಈ ಹರಿಕಥಾಮೃತವು ಸ್ವರೂಪಾನಂದವನ್ನು ಕೊಡುವ ಯೋಗ್ಯತೆಯುಳ್ಳದೆಂದರ್ಥ. ಇಂತಹಾ ಹರಿಕಥಾಮೃತವನ್ನು ಪಾನಮಾಡುವ ಭಕ್ತರ ಸಮೀಪದಲ್ಲೇ ಶ್ರೀಜಗನ್ನಾಥವಿಠಲಾತ್ಮಕ ಶ್ರೀಹರಿಯು ನೆಲಸಿದ್ದು ಬಹು ದುಃಖಕರವಾದ ಸಂಸಾರದಿಂದ ಬಿಡಿಸಿ ಮುಕ್ತರನ್ನಾಗಿ ಮಾಡುವನು.

ಎಂಬಲ್ಲಿಗೆ ಭಾವಪ್ರಕಾಶಿಕೆಯಲ್ಲಿ ೨೪ನೆಯ ಬಿಂಬಾಪರೋಕ್ಷ ಸಂಧಿಯು ಸಮಾಪ್ತವಾದುದು.

॥ ಶ್ರೀಕೃಷ್ಣಾರ್ಪಣಮಸ್ತು ॥



## ಆರೋಹಣ ತಾರತಮ್ಯ ಸಂಧಿ.

—: ೦ :—

### ಸಂಧಿ ೨೫.

ಹಿಂದೆ ತಾರತಮ್ಯವನ್ನು ಹೇಳಿದ್ದರೂ ಅದು ಬಹಳ ವಿಸ್ತಾರವಾಗಿರುವುದರಿಂದ ಶೀಘ್ರವಾಗಿ ಮನನ ಮಾಡುವ ಅನುಕೂಲಕ್ಕಾಗಿ ಈ ಸಂಧಿಯಲ್ಲಿ ತೃಣಜೀವರ ಮೊದಲುಮಾಡಿ, ಪರಮಾತ್ಮನವರೆಗೂ ಮಧ್ಯವರ್ತಿಗಳಾದ ಮುಕ್ತಾಮುಕ್ತರ ತಾರತಮ್ಯವನ್ನು ಹೇಳುತ್ತಾರೆ.—

**ಸೂಚನೆ || ಹರಿಕಥಾಮೃತಸಾರ ಗುರುಗಳ**

**ಸಂಧಿಸೂಚನೆ :— ಭಕ್ತರೆನಿಸುವ ದಿವ್ಯಪುರುಷರ**
**ವುಕ್ತಿಲಾಲಿಸಿ ಪೇಳ್ದಮುಕ್ತಾ**
**ಮುಕ್ತಜೀವರ ತಾರತಮ್ಯವು ಮುನಿಪ ಶಾಂಡಿಲ್ಯ ||**

ಪದ್ಯಾರ್ಥ.—ಭಕ್ತರೆನಿಸುವ, ದಿವ್ಯಪುರುಷರ, ಉಕ್ತಿಲಾಲಿಸಿ=ಪ್ರಶ್ನೆಯನ್ನು ಕೇಳಿ, ಶಾಂಡಿಲ್ಯಮುನಿಪ=ಶಾಂಡಿಲ್ಯಋಷಿಗಳು, ಮುಕ್ತಾಮುಕ್ತಜೀವರ=ಮುಕ್ತರಾದವರು, ಅಮುಕ್ತಜೀವರು ಇವರುಗಳ ತಾರತಮ್ಯವನ್ನು ಪೇಳಿದರು.

ತಾತ್ಪರ್ಯ.—ವಾಯುಪುರಾಣದಲ್ಲಿ ಹೇಳಿರುವ ಕಥೆ ಇದು. ಪಾಪದಿಂದ ಪಿಶಾಚರಾಗಿದ್ದು ಮುಕ್ತರಾದ ಕೆಲವು ಭಕ್ತರಿಗೂ ಶಾಂಡಿಲ್ಯರಿಗೂ ಸಂವಾದರೂಪವಾಗಿ ನಡೆದ ಶಾಂಡಿಲ್ಯ ತತ್ವದಲ್ಲಿ ಹೇಳಿರುವ ಮುಕ್ತಾಮುಕ್ತ ಜೀವರ ತಾರತಮ್ಯವನ್ನು ಇಲ್ಲಿ ಹೇಳುತ್ತೇವೆಂದು ದಾಸಾರ್ಯರು ಸೂಚಿಸಿರುತ್ತಾರೆ. ಸಂಧಿ ಸೂಚನೆ.

ಪದ್ಯಾರ್ಥ.—ವ್ರಜೌಕಸಸ್ತ್ರೀಯರು=ಗೋಪಿಕಾ ಸ್ತ್ರೀಯರು, ಸುರಾಸ್ಯಾತ್ಮಜರಿಗೆ=ಅಗ್ನಿ ಪುತ್ರರಾದ ೧೬ ಸಾವಿರ ಸ್ತ್ರೀಯರಿಗೆ ಸರಿಯೆನಿಪರು. ಇವರಿಗಿಂತಲೂ ಕರ್ಮಾಭಿಮಾನಿಯಾದ ಪುಷ್ಕರನುತ್ತಮನು. ಪುಷ್ಕರನಿಗೆ ಶನೈಶ್ಚರನುತ್ತಮನು. ತರಣಿಜನಿಗೆ – ಸೂರ್ಯ ಪುತ್ರನಾದ ಶನೈಶ್ಚರನಿಗೆ, ಅಶ್ವಿನಿಸುರರ–ಅಶ್ವಿನೀದೇವತೆಗಳ, ಅರಸಿಉಷಾ=ಹೆಂಡತಿಯಾದ ಉಷಾದೇವಿಯುತ್ತಮಳು. ಆಕೆಗಿಂತಲೂ ಜಲಪ– ಜಲಾಭಿಮಾನಿಯಾದ ಬುಧನು ಉತ್ತಮನು, ಶರಧಿಜ–ಸಮುದ್ರದಲ್ಲಿ ಹುಟ್ಟಿದ ಚಂದ್ರನ, ಆತ್ಮಜಗೆ=ಮಗನಾದ ಬುಧನಿಗೆ, ಸ್ವಾಹಾದೇವಿಯುತ್ತಮಳೆನಿಸುವಳು.

ಅನಲ ಭಾರ್ಯಳಿಗಿಂದ ನಾಖ್ಯಾ
ತನಿಮಿಷರನಾಖ್ಯಾತರಿಂದಲಿ
ಘನಪರ್ಜನ್ಯಾನಿರುದ್ಧನ ಸ್ತ್ರೀಯುಷಾದೇವಿ |
ದ್ಯುನದಿ ಸಂಜ್ಞಾ ಶಾಮಳಾರೋ
ಹಿಣಿಗಳೈವರು ಸಮರನಾಖ್ಯಾ
ತನಿಮಿಹೋತ್ತಮರಿವರಿಗಿಂದಲಿ ನೂರು ಕರ್ಮಜರು ||೫||

ಪದ್ಯಾರ್ಥ.—ಅನಲಭಾರ್ಯಳಿಗಿಂತ=ಅಗ್ನಿದೇವರ ಹೆಂಡತಿಯಾದ ಸ್ವಾಹಾದೇವಿಯುಗಿಂತಲೂ, ಅನಾಖ್ಯಾತನಿಮಿಷರು–ದೇವತೆಗಳಲ್ಲಿ ಅಪ್ರಸಿದ್ಧರಾದವರು ಅನಾಖ್ಯಾತರು. ಇವರು ಉತ್ತಮರು. ಅನಾಖ್ಯಾತರಿಂದಲಿ ಘನಪ=ಮೇಘಾಭಿಮಾನಿಯಾದ, ಪರ್ಜನ್ಯನು ಉತ್ತಮನು. ಇವನಿಗೆ ಅನಿರುದ್ಧನ ಸ್ತ್ರೀಯುಷಾದೇವೀ, ದ್ಯುನದಿ–ಗಂಗಾ, ಸಂಜ್ಞಾ=ಸೂರ್ಯನ ಹೆಂಡತಿ, ಶಾಮಳಾ=ಯಮದೇವರ ಹೆಂಡತಿ, ರೋಹಿಣಿ–ಚಂದ್ರನ ಹೆಂಡತಿ, ಇವರೈವರೂ ಸಮರು. ಅನಾಖ್ಯಾತ ದೇವತೆಗಳಿಗಿಂತಲೂ ಉತ್ತಮರು. ಇವರಿಗಿಂತಲೂ, ನೂರು ಕರ್ಮಜರು=ಕರ್ಮಜರಾದ ದೇವತೆಗಳು ಕರ್ಮದೇವತೆಗಳೆಂದು ನೂರು ಜನರು, ಇವರುತ್ತಮರು.

ಪೃಥುನಹುಷ ಶಶಿಬಿಂಧು ಪ್ರಿಯ
ವ್ರತ ಪರೀಕ್ಷಿತ ನೃಪರು ಭಾಗೀ
ರಥಿಯ ನೋಡಲಿಕಧಿಕ ಬಲ್ಯಾದಿಂದ್ರ ಸಪ್ತಕರು|
ಪಿತೃಗಳೆಂಟಧಿಕವಪ್ಸರ
ಸತಿಯರೀರ್ರೈದೊಂದು ಮನುಗಳು
ದಿತಿಜಗುರು ಚ್ಯಾವನವುಚಿಥ್ಯರು ಕರ್ಮಜರು ಸಮರು ||೬||

ಪದ್ಯಾರ್ಥ.—ಪೃಥು ನಹುಷ ಶಶಿಬಿಂದು, ಪ್ರಿಯವ್ರತ ಪರೀಕ್ಷಿತನೃಪರು=ಈ ರಾಜರುಗಳು, ಭಾಗೀರಥಿಯ ನೋಡಲಿಕಧಿಕ=ತಾರತಮ್ಯದಲ್ಲಿ ನೋಡಲಾಗಿ ಗಂಗೆ ಮೊದಲಾದವರಿಗಿಂತಲೂ ಉತ್ತಮರು. ಬಲ್ಯಾದಿಂದ್ರ ಸಪ್ತಕರು=ಬಲಿಚಕ್ರವರ್ತಿ ಮೊದಲಾದ ೭ ಇಂದ್ರರು, ಆಪಿತೃಗಳು, ಎಂಟಧಿಕವಪ್ಸರ ಸತಿಯರು, ಈರೈದೊಂದು ಮನುಗಳು = ೧೧ ಮನುಗಳು, ದಿತಿಜಗುರುಚ್ಯಾವನ – ಶುಕಾಚಾರ್ಯರು, ಉಚಿಥ್ಯರು ಕರ್ಮಜರು ನಮರು=ಇವರೆಲ್ಲರೂ ಕರ್ಮದೇವತೆಗಳಿಗೆ ಸಮರು.

ಧನಪ ವಿಷ್ವಕ್ಸೇನ ಗಣಪಾ
ಶ್ವಿನಿಗಳೆಂಭತ್ತೈದು ಶೇಷರಿ
ಗೆಣೆ ಎನಿಸುವರು ಮಿತ್ರತಾರಾನಿರ್ಋತಿ ಪ್ರವಹೀ ।
ಗುಣಗಳಿಂದೈದಧಿಕ ಎಂಭ
ತ್ತೆನಿಪಶೇಷರಿಗುತ್ತಮರು ಸ
ನ್ಮುನಿ ಮರೀಚಿ ಪುಲಸ್ತ್ಯ ಪುಲಹಕ್ರತುವಶಿಷ್ಟಮುಖ ॥೭॥

ಪದ್ಯಾರ್ಥ:—ಧನಪ–ಕುಭೇರ, ವಿಷ್ವಕ್ಸೇನ–ಪ್ರಧಾನ ವಾಯುದೇವರ ಪುತ್ರನು ಗಣಪತಿ ಅಶ್ವಿನೀದೇವತೆಗಳು, ೮೫ ಶೇಷಶತಸ್ಥರಿಗೆ, ಎಣೆ ಎನಿಸುವರು=ಸಮರೆನಿಸುವರು. ( ಶೇಷ ಶತಸ್ಥರು ಮೊದಲಾದವರನ್ನು ಬೃಹತ್ತಾರತಮ್ಯ ಸಂಧಿಯಲ್ಲಿ ವಿಸ್ತಾರವಾಗಿ ಹೇಳಿರುತ್ತದೆ ಮತ್ತೂ ಇಲ್ಲಿ ಗ್ರಂಥ ವಿಸ್ತಾರ ಭಯದಿಂದ ಬರಿಯಲಿಲ್ಲ. ಮಿತ್ರ–ಸೂರ್ಯ, ತಾರಾ=ಬೃಹಸ್ಪತ್ಯಾಚಾರ್ಯರ ಹೆಂಡತಿ, ನಿಋಋತಿ–ದಿಕ್ಪಾಲಕ, ಪ್ರವಹಿ – ಪ್ರವಹವಾಯುವಿನ ಪತ್ನಿ, ಇವರುಗಳು ಗುಣಗಳಿಂದ, ಐದಧಿಕ ಎಂಭತ್ತೆನಿಪ ಶೇಷರಿಗೆ=೮೫ ಉಕ್ತಶೇಷಶತಸ್ಥರಿಗಿಂತಲೂ ಉತ್ತಮರು. ಸನ್ಮುನಿ–ಉತ್ತಮಋುಷಿಗಳಾದ ಬ್ರಹ್ಮದೇವರ ಮಕ್ಕಳಾದ ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠಮುಖ–ಇವರು ಮೊದಲಾದವರು.

ಅತ್ರಿಯಂಗಿರರೇಳು ಬ್ರಹ್ಮನ
ಪುತ್ರರಿವರಿಗೆ ಸಮರು ವಿಶ್ವಾ
ಮಿತ್ರ ವೈವಸ್ವತರು ಈಶಾವೇಶಬಲದಿಂದ ।
ಮಿತ್ರರಿಂದುತ್ತಮರು ಸ್ವಾಹಾ
ಭರ್ತೃಭೃಗುವು ಪ್ರಸೂತಿ ವಿಶ್ವಾ
ಮಿತ್ರ ಮೊದಲಾದವರಿಗಿಂದಲಿ ಮೂವರುತ್ತಮರು ॥೮॥

ಪದ್ಯಾರ್ಥ:—ಅತ್ರಿ, ಅಂಗಿರರು=ಮೇಲಿನ ಪದ್ಯದಲ್ಲಿ ಹೇಳಿದ ಮರೀಚಿ ಮೊದಲು ಈಗ ಹೇಳಿದ ಅಂಗೀರರವರೆಗೆ ಏಳು ಮಂದಿ, ಬ್ರಹ್ಮನ ಪುತ್ರರು=ಬ್ರಹ್ಮದೇವರ ಮಕ್ಕಳು; ಇವರಿಗೆ ಈಶಾವೇಶ ಬಲದಿಂದ-ಪರಮಾತ್ಮನ ಆವೇಶ ಬಲದಿಂದ, ವಿಶ್ವಾಮಿತ್ರರು, ವೈವಸ್ವತಮನು ಇವರು ಸಮರಾಗಿರುವರು. ಒಟ್ಟು ೯ ಮಂದಿಗಳು, ಮಿತ್ರರಿಂದುತ್ತಮರು-ಮಿತ್ರ ಮೊದಲಾದವರಿಗಿಂತಲೂ ಸ್ವಾಹಾಭರ್ತೃ=ಅಗ್ನಿದೇವರು, ದಕ್ಷಪ್ರಜೇಶ್ವರನ ಹೆಂಡತಿ ಪ್ರಸೂತಿ, ಇವರು ಮೂವರುತ್ತಮರು.

ತಾತ್ಪರ್ಯ:—ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠ, ಅತ್ರಿ, ಅಂಗಿರರೆಂಬ ಏಳು ಮಂದಿ ಬ್ರಹ್ಮದೇವರ ಮಕ್ಕಳೂ, ವಿಶ್ವಾಮಿತ್ರರು, ವೈವಸ್ವತಮನು ಇವರು ೯ ಮಂದಿಗಳೂ ಸಮರು. ಮಿತ್ರಾದಿಗಳಿಗಿಂತಲೂ ಉತ್ತಮರು. ಇವರಿಗಿಂತಲೂ ಅಗ್ನಿ, ಭೃಗು, ಪ್ರಸೂತಿ ಮೂವರುತ್ತಮರು.

ನಾರದೋತ್ತಮ ನಗ್ನಿಗಿಂದಲಿ
ವಾರಿನಿಧಿಪಾದೋತ್ತಮನು ಯಮ
ತಾರಕೇಶ ದಿವಾಕರನು ಶತರೂಪರುತ್ತಮರು ||
ವಾರಿಜಾಪ್ತನಿಗಿಂತ ಪ್ರವಹ
ಮಾರುತೋತ್ತುಮ ಪ್ರವಹಗಿಂದಲಿ
ಮಾರಪುತ್ರನಿರುದ್ಧ ಗುರುಮನು ದಕ್ಷ ಶಚಿರತಿಯು ||೯||

ಪದ್ಯಾರ್ಥ:—ಅಗ್ನಿಗಿಂದಲಿ, ನಾರದರುತ್ತಮರು, ವಾರಿನಿಧಿಪಾದೋತ್ತಮರು=ಅವರಿಗಿಂತಲೂ ಕಾಲು ಭಾಗ ಮಾತ್ರ ವರುಣನುತ್ತಮನು. ಇವನಿಗಿಂತಲೂ ಯಮ, ತಾರಕೇಶ-ಚಂದ್ರ, ದಿವಾಕರನು-ಸೂರ್ಯ, ಶತರೂಪೆ-ಸ್ವಾಯಂಭುವ ಮನುವಿನ ಹೆಂಡತಿ, ಇವರುತ್ತಮರು. ವಾರಿಜಾಪ್ತನಿಗಿಂದ=ಸೂರ್ಯಾದಿಗಳಿಗಿಂತಲೂ ಪ್ರವಹಮಾರುತನು ಉತ್ತಮನು. ಪ್ರವಹಗಿಂದಲಿ, ಮಾರಪುತ್ರ-ಮನ್ಮಥನ (ಪ್ರದ್ಯುಮ್ನನ) ಮಗ ಅನಿರುದ್ಧ, ಗುರು-ಬೃಹಸ್ಪತಿ, ಸ್ವಾಯಂಭುವಮನು, ದಕ್ಷ, ಶಚೀದೇವಿ = ಇಂದ್ರನ ಹೆಂಡತಿ. ರತೀದೇವಿ ಇವರಾರು ಜನರುತ್ತಮರು.

ಆರುಜನರಗಳಿಂದಲಾಹಂ
ಕಾರಿಕ ಪ್ರಾಣೋತ್ತಮಾಖಿಳ
ಶರೀರಮಾನಿ ಪ್ರಾಣಗಿಂದಲಿ ಕಾಮ ಇಂದ್ರರಿಗೆ ||
ಗೌರಿ ವಾರುಣಿ ಖಗಪರಾಣ್ಣಿಗೆ
ಶೌರಿ ಮಹಿಷಿಯರೊಳಗೆ ಜಾಂಬವ
ತೀ ರಮಾಯುತಳಾದ ಕಾರಣವಧಿಕಳೆನಿಸುವಳು ||೧೦||

ಪದ್ಯಾರ್ಥ.—ಆರುಜನರುಗಳಿಂದಲಿ=ಮೇಲಿನ ಪದ್ಯದಲ್ಲಿ ಹೇಳಿದ ಅನಿರುದ್ಧಾದಿ ಆರು ಜನರಿಗಿಂತಲೂ, ಆಹಂಕಾರಿಕಪ್ರಾಣನುತ್ತಮನು. ಅಖಿಳಶರೀರಮಾನಿಯಾದ ಅಹಂಕಾರಿಕಪ್ರಾಣನಿಗಿಂತಲೂ, ಕಾಮ=ಮನ್ಮಥ ಇಂದ್ರರುತ್ತಮರು. ಕಾಮ, ಇಂದ್ರರಿಗೆ, ಗೌರಿ, ವಾರುಣಿ=ಶೇಷದೇವರ ಹೆಂಡತಿ, ಖಗಪರಾಣೀ=ಗರುಡನ ಹೆಂಡತಿ, ಸೌಪರ್ಣಿ ಇವರು ಮೂವರುತ್ತಮರು. ಗೌರಿ ವಾರುಣಿ ಖಗಪರಾಣಿಗೆ ಶೌರಿ ಮಹಿಷಿಯರು=ಕೃಷ್ಣನ ಹೆಂಡತಿಯರಾದ, ಜಾಂಬವತೀ ಮಿತ್ರವಿಂದ ಮೊದಲಾದ ಆರು ಜನರುತ್ತಮರು. ಇವರೊಳಗೆ ಜಾಂಬವತಿಯು, ರಮಾಯುತಳಾದಕಾರಣ=ಲಕ್ಷ್ಮೀದೇವಿಯರಾವೇಶ ಬಲದಿಂದ ಅಧಿಕಳೆನಿಸುವಳು.

ಹರಫಣಿಪ ವಿಹಗೇಂದ್ರ ಮೂವರು
ಹರಿಮಡದಿಯರಿಗುತ್ತಮರು ಸೌ
ಪರಣಿಪತಿಗುತ್ತಮರು ಭಾರತಿ ವಾಣಿ ಈರ್ವರಿಗೆ |
ಮರುತಬ್ರಹ್ಮರು ಉತ್ತಮರು ಇಂ
ದಿರೆಯು ಪರಮೋತ್ತಮಳು ಲಕ್ಷ್ಮಿಗೆ
ಸರಿಯೆನಿಸುವರಿಲ್ಲವೆಂದಿಗು ದೇಶಕಾಲದೊಳು ||೧೧||

ಪದ್ಯಾರ್ಥ.—ಹರ, ಫಣಿಪ=ಶೇಷದೇವರು, ವಿಹಗೇಂದ್ರ=ಗರುಡ ಮೂವರು, ಹರಿಮಡದಿಯರಿಗೆ=ಕೃಷ್ಣನ ಷಣ್ಮಹಿಷಿಯರಿಗಿಂತಲೂ ಉತ್ತಮರು. ಸೌಪರ್ಣಿಪತಿಗೆ-ಗರುಡಾದಿಗಳಿಗಿಂತಲೂ, ಭಾರತೀದೇವಿಯರು ವಾಣಿ-ಸರಸ್ವತೀದೇವಿಯರು ಉತ್ತಮರು. ಈರ್ವರಿಗೆ=ಇವರಿಬ್ಬರಿಗಿಂತಲೂ, ಮರುತಬ್ರಹ್ಮರು=ವಾಯುದೇವರು, ಬ್ರಹ್ಮದೇವರುತ್ತಮರು. ಇವ

ಗಿಂತಲೂ, ಇಂದಿರೆಯು=ರಮಾದೇವಿಯರು, ಪರಮ ಉತ್ತಮಳು, ಲಕ್ಷ್ಮೀ ದೇವಿಯರಿಗೆ, ದೇಶಕಾಲದೊಳು=ಯಾವ ದೇಶದಲ್ಲಾಗಲೀ, ಯಾವ ಕಾಲ ದಲ್ಲಾಗಲೀ ಎಂದಿಗೂ ಸರಿಯೆನಿಸುವರಿಲ್ಲ.

ಶ್ರೀಮುಕುಂದನ ಮಹಿಳೆಲಕುಮಿ ಮ
ಹಾಮಹಿಮೆಗೇನೆಂಬೆ ಬ್ರಹ್ಮೇ
ಶಾಮರೇಂದ್ರರ ಸೃಷ್ಟಿ ಸ್ಥಿತಿಲಯಗೈಸಿ ಅವರವರ ||
ಧಾಮಗಳ ಕಲ್ಪಿಸಿಕೊಡುವಳಜ
ರಾಮರಣಳಾಗಿರ್ದು ಸರ್ವ
ಸ್ವಾಮಿಮಮ ಗುರುವೆಂದುಪಾಸನೆಮಾಳ್ಪಳಚ್ಯುತನ ||೧೨||

ಪದ್ಯಾರ್ಥ.—ಶ್ರೀಮುಕುಂದನ, ಮಹಿಳೆ-ಹೆಂಡತಿಯಾದ ಲಕ್ಷ್ಮೀ ದೇವಿಯರು, ಬ್ರಹ್ಮಶಾಮರೇಂದ್ರ-ಬ್ರಹ್ಮದೇವರು, ಋದ್ರದೇವರು, ಇಂ ದ್ರದೇವರು, ಮೊದಲಾದವರ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡಿಸಿ ಅವ ರವರಿಗೆ ಸ್ಥಾನಗಳನ್ನು ಕೊಡುವರು. ಅಜರಾಮರಣಳಾಗಿದ್ದು=ಮುದುಕು ತನ ಬರುವಿಕೆ, ಸಾಯುವಿಕೆ ಇವುಗಳಿಲ್ಲದೆ, ಸರ್ವಸ್ವಾಮಿ, ಮಮ-ನನ್ನ ಗುರುವೆಂದು ಅಚ್ಯುತನುಪಾಸನೆ ಮಾಳ್ಪರು. ಇಂತಹಾ ಮಹಾಲಕ್ಷ್ಮಿಯ, ಮಹಾಮಹಿಮೆಗೇನೆಂಬೆ=ಎಷ್ಟೆಂದು ವರ್ಣಿಸುವೆ.

ತಾತ್ಪರ್ಯ.—ಲಕ್ಷ್ಮೀದೇವಿಯರು ಸತ್ವರಜಸ್ತಮೋ ಗುಣಾತ್ಮಕ ರಾದ ಪ್ರಕೃತಿ ಸ್ವರೂಪರು, ಮತ್ತು ಮೂರು ಗುಣಾತ್ಮಕರಾಗಿ ಶ್ರೀ, ಭೂ, ದುರ್ಗಾರೂಪಿಯಾಗಿರುವರು. ಪರಮಾತ್ಮನು ಪ್ರಕೃತಿ ಸಂಬಂಧವಾದ ರ ಜೋಗುಣದಿಂದ—ಸೃಷ್ಟಿ, ಸತ್ವಗುಣದಿಂದ—ಪಾಲನ, ತಮೋಗುಣದಿಂ ದ ಸಂಹಾರ ಮಾಡುವುದರಿಂದ ಪ್ರಕೃತಿ ಗುಣಗಳಿಂದಲೇ ಆಗುವುದರಿಂದ ಸೃಷ್ಟಿ ಸಂಹಾರಾದಿ ಕರ್ತರೆಂದು ಹೇಳಿದರು. ಅವರವರ ಪದವಿಯನ್ನು ಹೊಂದಬೇಕಾದರೂ ಲಕ್ಷ್ಮೀದೇವಿಯರ ಅನುಗ್ರಹದಿಂದಲೇ ಆಗಬೇಕು. ಮುಕ್ತಿಸ್ಥಾನಕ್ಕೆ ಹೋಗಬೇಕಾದರೂ "ಶ್ರಿಯಂಪ್ರಾಪ್ಯಾನುಮೋದಿತಾಃ" ಎಂಬ ಭಾಗವತ ತಾತ್ಪರ್ಯ ವಾಕ್ಯಾನುಸಾರವಾಗಿ ಲಕ್ಷ್ಮೀದೇವಿ ಯರ ಅನುಮತಿಯಿಂದಲೇ ಮುಕ್ತಿಯನ್ನು ಪಡೆಯುವರು. ಜರಾಮರಣ ವರ್ಜಿತರಾಗಿ ಪ್ರಳಯ ಕಾಲದಲ್ಲೂ ಕೂಡ ಪರಮಾತ್ಮನ ಸೇವೆಯನ್ನು

ಮಾಡುತ್ತಿರುವರು. ಯಾವಾಗಲೂ ಸರ್ವಸ್ವಾಮಿ ನನ್ನ ಗುರುವೆಂದು ಪರಮಾತ್ಮನನ್ನುಪಾಸನೆ ಮಾಡುತ್ತಿರುವರು. ಇಂತಹಾ ಮಹಾಲಕ್ಷ್ಮೀದೇವಿಯರ ಮಹಾಮಹಿಮೆಯನ್ನು ಪನೇದು ವರ್ಣಿಸುವೆ.

**ಈಸುಮಹಿಮೆಗಳುಳ್ಳ ಲಕುಮಿಪ**
**ರೇಶನಾನಂತಾಂಶ ಗುಣದೊಳು**
**ಲೇಶಲೇಶಕೆ ಸರಿಯೆನಿಸಳಾವಾವಕಾಲದಲಿ ।**
**ದೇಶಕಾಲಾತೀತ ಲಕುಮಿಗೆ**
**ಕೇಶವನ ವಕ್ಷಸ್ಥಳವೆ ಅವ**
**ಕಾಶವಾಯಿತು ಇವನ ಮಹಿಮೆ ವ್ಯಾಪ್ತಿಗೆಣೆಯುಂಟೆ ॥**

ಪದ್ಯಾರ್ಥ.—ಈಸುಮಹಿಮೆಗಳುಳ್ಳ-ಇಷ್ಟು ಮಹಿಮೆಗಳುಳ್ಳ ಲಕ್ಷ್ಮೀದೇವಿಯರು, ಪರೇಶನ-ಸರ್ವೋತ್ತಮನಾದ ಪರಮಾತ್ಮನ, ಗುಣಗಳ ಅನಂತಾಂಶದೊಳು, ಯಾವಕಾಲದಲ್ಲಾದರೂ ಲೇಶಲೇಶಕ್ಕೆ ಸರಿಯೆನಿಸರು- ಪರಮಾತ್ಮನ ಅನಂತಗುಣಗಳ ಅಂತದೊಳಗೆ ಒಂದು ಅಲ್ಪಾಂಶಕ್ಕೂ ಸಹ ಸಮರಲ್ಲವೆಂದರ್ಥ. ದೇಶಕಾಲಾತೀತಲಕುಮಿಗೆ-ಒಂದಾನೊಂದು ಕಾಲದಲ್ಲಿ ಒಂದು ದೇಶದೊಳಗೆ ಇರಲಿಲ್ಲವೆಂದಿಲ್ಲ. ಸರ್ವ ದೇಶಕಾಲಗಳಲ್ಲೂ ವ್ಯಾಪ್ತರಾಗಿರುವರೆಂದರ್ಥ. ಇಂತಹ ಲಕ್ಷ್ಮೀದೇವಿಯರಿಗೆ, ಕೇಶವನ ವಕ್ಷಸ್ಥಳವೇ, ಅವಕಾಶವಾಯಿತು-ವಾಸಸ್ಥಾನವಾಯಿತು. ಹೀಗೆಂದಮೇಲೆ ಈ ಪರಮಾತ್ಮನ ಮಹಿಮೆಗೂ, ವ್ಯಾಪ್ತಿಗೂ ಎಣೆಯುಂಟೆ ?

**ಒಂದುರೂಪದೊಳೊಂದವಯವದೊ**
**ಳೊಂದು ರೋಮದೊಳೊಂದು ದೇಶದಿ**
**ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣ ॥**
**ಸಿಂದುಸಪ್ತದ್ವೀಪ ಮೇರು ಸು**
**ಮಂದರಾದ್ಯದ್ರಿಗಳು ಬ್ರಹ್ಮ ಪು**
**ರಂದರಾದಿ ಸಮಸ್ತಲೋಕಪರಾಲಯಗಳೆಲ್ಲ ॥೧೪॥**

ಪದ್ಯಾರ್ಥ.—ಒಂದುರೂಪದೊಳು, ಒಂದು ಅವಯವದೊಳಿರುವ ಒಂದು ರೋಮದೊಳು, ಒಂದುದೇಶದಿ-ಒಂದು ಭಾಗದಲ್ಲಿ, ಅಜಭವಾದಿ- ಬ್ರಹ್ಮರುದ್ರಾದಿ ಸಮಸ್ತ ಜೀವಗಣಗಳು, ಸಪ್ತ ಸಮುದ್ರಗಳು, ಸಪ್ತ

ದ್ವೀಪಗಳು, ಮೇರುಪರ್ವತ, ಮಂದರ ಮೊದಲಾದ ಪರ್ವತಗಳು, ಬ್ರಹ್ಮ ಪುರಂದರಾದಿ-ಬ್ರಹ್ಮೇಂದ್ರಾದಿ, ಸಮಸ್ತಲೋಕಪರ=ಲೋಕಪಾಲಕರ, ಆಲಯಗಳೆಲ್ಲಾ, ಪೊಂದಿಕೊಂಡಿರುವವು-ಸೇರಿಕೊಂಡಿರುವವು.

ಸರ್ವದೇವೋತ್ತಮನು ಸರ್ವಗ
ಸರ್ವಗುಣ ಸಂಪೂರ್ಣ ಸರ್ವದ
ಸರ್ವತಂತ್ರ ಸ್ವತಂತ್ರ ಸರ್ವಾಧಾರ ಸರ್ವಾತ್ಮ ||
ಸರ್ವತೋಮುಖ ಸರ್ವನಾಮಕ
ಸರ್ವಜನ ಸಂಪೂಜ್ಯ ಶಾಶ್ವತ
ಸರ್ವಕಾಮದ ಸರ್ವಸಾಕ್ಷಿಗ ಸರ್ವಜಿತ್ಸರ್ವ ||೧೫||

ಪದ್ಯಾರ್ಥ.—ಪರಮಾತ್ಮನು ಸರ್ವದೇವೋತ್ತಮನು, ಸರ್ವಗ-ಸರ್ವತ್ರದಲ್ಲಿರುವವನು. ಸರ್ವಗುಣ ಸಂಪೂರ್ಣನು, ಸರ್ವದಃ ಸರ್ವತಂತ್ರ ಸ್ವತಂತ್ರನು- ಸರ್ವರಿಗೂ ಆಧಾರಭೂತನು- ಸರ್ವಾತ್ಮಕನು. ಸರ್ವತ್ರ ಮುಖವುಳ್ಳವನು. ಸರ್ವ ಜನರಿಂದಲೂ ಪೂಜ್ಯನು. ಸರ್ವನಾಮ ಉಳ್ಳವನು. ಶಾಶ್ವತವಾಗಿರುವವನು. ಸರ್ವರ ಮನೋಭೀಷ್ಟವನ್ನೂ ಪೂರ್ತಿಸುವವನು. ಸರ್ವವನ್ನೂ ಜಯಿಸುವವನು. ಆದ್ದರಿಂದಲೇ ಸರ್ವಯೆಂದು ಹೆಸರುಳ್ಳವನಾಗಿರುವನು.

ಅವತಾರಿಕೆ.— ತಾರತಮ್ಯ ಜ್ಞಾನದ ಫಲವನ್ನು ಹೇಳುತ್ತಾರೆ.—

ತಾರತಮ್ಯಾರೋಹಣವ ಬರ
ದಾರು ಪಠಿಸುವರವರ ಲಕ್ಷ್ಮೀ
ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು ||
ಪೂರಯಿಸುವ ಮನೋರಥಂಗಳ
ಕಾರುಣಿಕ ಕೈವಲ್ಯದಾಯಕ
ದೂರಗೈವ ಸಮಸ್ತ ದುರಿತವವಿಗತಭಯಶೋಕ ||೧೬||

ತಾತ್ಪರ್ಯ.— ಈ ಆರೋಹಣ ತಾರತಮ್ಯವನ್ನು ಯಾರು ಬರೆಯುವರೋ, ಯಾರು ಪಠಿಸುವರೋ, ಅವರ ಮನೋರಥಗಳನ್ನು ಸಮಸ್ತ ದೇವಗಣಾಂತರಾತ್ಮಕನೂ, ಕರುಣಾ ಸಮುದ್ರನೂ, ಮುಕ್ತಿದಾಯಕನೂ, ಭಯಶೋಕರಹಿತನೂ ಆದ ಶ್ರೀಲಕ್ಷ್ಮೀನರಸಿಂಹನು ಪೂರೈಸುವುದಲ್ಲದೆ, ಅವರಿಗೆ ಸಂಭವಿಸುವ ಸಮಸ್ತಪಾಪಗಳನ್ನೂ ಕಷ್ಟಗಳನ್ನೂ ಪರಿಹರಿಸುವನು.

ಪ್ರಣತಕಾಮದ ನಂಘ್ರಿಸಂದರು
ಶನದಪೇಕ್ಷೆಗಳುಳ್ಳವಗೆ ನಿ
ಚ್ಚಣಿಕೆ ಎನಿಪುದು ಜಡಮೊದಲು ಬ್ರಹ್ಮಾಂತತರತಮವು ||
ಮನವಚನದಿಂ ಸ್ಮರಿಸುವರ ಭವ
ವನಧಿಶೋಷಿಸಿ ಪೋಗುವದು ಕಾ
ರಣವೆನಿಸುವದು ಜ್ಞಾನ ಭಕ್ತಿ ವಿರಕ್ತಿ ಸಂಪದಕೆ || ೧೭ ||

ಪದ್ಯಾರ್ಥ.— ಪ್ರಣತಕಾಮದನ=ನಮಸ್ಕರಿಸುವರ ಮನೋಭೀಷ್ಟವನ್ನು ಪೂರೈಸುವ ಶ್ರೀಹರಿಯ ಸಂದರ್ಶನದ ಅಪೇಕ್ಷೆಗಳುಳ್ಳವಗೆ, ಜಡಮೊದಲು ಬ್ರಹ್ಮಾಂತತರತಮವು ಈ ಸಂಧಿಯಲ್ಲಿ ಹೇಳಿದ ಜಡ ಮೊದಲು ಬ್ರಹ್ಮದೇವರ ವರೆಗೂ ಹೇಳಿದ ತಾರತಮ್ಯ ಜ್ಞಾನವು, ನಿಚ್ಚಣಿಕೆ ಎನಿಪದು. ಮನವಚನದಿಂ = ಮನಸ್ಸಿನಿಂದಲೂ ವಾಕ್ಯದಿಂದಲೂ, ಸ್ಮರಿಸುವರ, ಭವವನಧಿ = ಸಂಸಾರ ಸಮುದ್ರವು, ಶೋಷಿಸಿ ಪೋಗುವದು. ಜ್ಞಾನ, ಭಕ್ತಿ, ವಿರಕ್ತಿ, ಸಂಪತ್ತಿಗೆ ಕಾರಣವೆನಿಸುವದು.

ಅನಲನೊಳು ಹೋಮಿಸುವ ಹರಿಚಂ
ದನವೆ ಮೊದಲಾದವರ ಸುವಾ
ಸನೆಯು ಪ್ರತ್ಯಪ್ರತ್ಯೇಕ ತೋರ್ಪದು ಎಲ್ಲಕಾಲದಲಿ ||
ದನುಜ ಮಾನವ ದಿವಿಜರವರ ವ
ರನುಚಿತೋಚಿತ ಕರ್ಮವೃಜಿನಾ
ರ್ದನನು ವ್ಯಕ್ತಿಯ ಮಾಳ್ಪತ್ರಿಗುಣಾತೀತವಿಖ್ಯಾತ || ೧೮ ||

ಪದ್ಯಾರ್ಥ.— ಅನಲನೊಳು = ಅಗ್ನಿಯಲ್ಲಿ ಹೋಮಿಸುವ, ಹರಿಚಂದನ ಮೊದಲಾದದರ ಸುವಾಸನೆಯು, ಎಲ್ಲ ಕಾಲದಲ್ಲೂ ಪ್ರತ್ಯಪ್ರತ್ಯೇಕ ತೋರ್ಪದು. ದನುಜ=ದೈತ್ಯರು. ಮಾನವರು. ದಿವಿಜರು=ದೇವತೆಗಳು ಇವರುಗಳ ಅನುಚಿತೋಚಿತಕರ್ಮ=ಪುಣ್ಯ ಪಾಪ ರೂಪವಾದ ಕರ್ಮಗಳನ್ನು, ತ್ರಿಗುಣಾತೀತ=ಪ್ರಾಕೃತ ಗುಣಗಳನ್ನು ಮೀರಿರುವ, (ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವ) ವಿಖ್ಯಾತ = ಲೋಕ ಪ್ರಖ್ಯಾತನಾದ, ಕಷ್ಟ ಪರಿಹಾರಕನಾದ ಶ್ರೀ ಹರಿಯು, ವ್ಯಕ್ತಿಮಾಳ್ಪನು.

ತಾತ್ಪರ್ಯ.— ಅಗ್ನಿಯಲ್ಲಿ ಚಂದನಕಾಷ್ಟ ಮೊದಲಾದವುಗಳನ್ನು ಹೋಮಮಾಡಿದರೆ, ಯಾವಯಾವ ವಾಸನೆ ದ್ರವ್ಯವನ್ನು ಆಹುತಿ ಕೊಟ್ಟಿದೆಯೋ ಆಯಾ ದ್ರವ್ಯದ ಸುವಾಸನೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ವ್ಯಕ್ತಿ ಮಾಡಿ ಕೊಡುವದು. ಅದರಂತೆಯೇ ದೈತ್ಯರು, ಮನುಷ್ಯರು, ದೇವತೆಗಳು ಮಾಡುವ ಪಾಪ ಪುಣ್ಯಾದಿ ಕರ್ಮಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವ್ಯಕ್ತಿ ಮಾಡಿ ತೋರುವನು.

ಭಕ್ತವತ್ಸಲ ಭಾಗ್ಯಪುರುಷ ವಿ
ವಿಕ್ತವಿಶ್ವಾಧಾರ ಸರ್ವೋ
ದ್ರಿಕ್ತ ದೋಷವಿದೂರ ದುರ್ಗಮ ದುರ್ವಿಭಾವ್ಯಸ್ವಹಿ ||
ಶಕ್ತಶಾಶ್ವತ ಸಕಲ ವೇದೈ
ಕೋಕ್ತಮಾನದ ಮಾನ್ಯಮಾಧವ
ಸೂಕ್ತಸೂಕ್ಷ್ಮ ಸ್ಥೂಲ ಶ್ರೀಜಗನ್ನಾಥವಿಠಲನು ||೧೯||

ಪದ್ಯಾರ್ಥ.—ಭಕ್ತವತ್ಸಲ; ಭಾಗ್ಯಪುರುಷನು, ವಿವಿಕ್ತ = ಏಕಾಂತವಾಸಿಯು, ವಿಶ್ವಾಧಾರ=ಪ್ರಪಂಚಕ್ಕೆ ಆಧಾರಭೂತನಾದವನು, ಸರ್ವೋದ್ರಿಕ್ತ-ಸರ್ವೋತ್ತಮನು, ದೋಷವಿದೂರ=ದೋಷರಹಿತನು, ದುರ್ಗಮ =ಹೊಂದಲಶಕ್ಯನು, ದುರ್ವಿಭಾವ್ಯ=ತಿಳಿಯಲಶಕ್ಯನು, ಸ್ವಹಿ - ತನ್ನಿಂದ ತಾನೇ ಪ್ರಖ್ಯಾತನು, ಅಥವಾ ಸ್ವತಂತ್ರನು, ಶಕ್ತ-ಸಮರ್ಥನು, ಶಾಶ್ವತ =ನಿತ್ಯನು, ಸಕಲವೇದೈಕೋಕ್ತ = ಎಲ್ಲಾ ವೇದಗಳಿಂದ ಮುಖ್ಯವಾಗಿ ಸರ್ವೋತ್ತಮನೆಂದು ಹೇಳಿಸಿಕೊಳ್ಳಲ್ಪಡುವನು. ಮಾನದ=ಭಕ್ತ ಜನರಿಗೆ ಬಹುಮಾನವನ್ನು ಕೊಡುವವನು, ಮಾನ್ಯ=ಮರ್ಯಾದಾರ್ಹನು, ಮಾಧವ= ಲಕ್ಷ್ಮೀಪತಿಯು, ಸೂಕ್ತ=ಚೆನ್ನಾಗಿ ಹೊಗಳಿಸಿಕೊಳ್ಳಲ್ಪಡುವವನು, ಸೂಕ್ಷ್ಮ=ಪರಮಾಣು ರೂಪನು, ಸ್ಥೂಲ=ಬ್ರಹ್ಮಾಂಡದಕಿಂತಲೂ ಬಹಳ ಸ್ಥೂಲಕಾಯನು (ಸ್ಥೂಲ ವಸ್ತುವಿನಕಿಂತಲೂ ಸ್ಥೂಲನಾದವನೆಂದರ್ಥ.) ಇಂತಹಾ ಮಹಾಮಹಿಮೆಯುಳ್ಳವನು ಶ್ರೀಜಗನ್ನಾಥ ವಿಠ್ಠಲನು.

ಇಂತೀ ಭಾವಪ್ರಕಾಶಿಕೆಯಲ್ಲಿ ೨೫ನೆಯ ಆರೋಹಣ ತಾರತಮ್ಯ ಸಂಧಿಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||

## ಅ ವ ರೋ ಹ ಣ  ಸಂ ಧಿ .



### ಸಂಧಿ ೨೬.

ಈ ಸಂಧಿಯಲ್ಲಿ ಪರಮಾತ್ಮನ ಮೊದಲುಮಾಡಿ ಮಾನುಷ್ಯೋತ್ತಮರವರೆಗೂ ಅವರೋಹಣ ಕ್ರಮದಿಂದ ತಾರತಮ್ಯವನ್ನು ಹೇಳುತ್ತಾರೆ.

**ಸೂಚನೆ || ಹರಿಕಥಾಮೃತಸಾರ ಗುರುಗಳ ||ಪ||**

**ಶ್ರೀರಮಣ ನಿಜಭಕ್ತರೆನಿಸುವ**
**ವಾರಿಜಾಸನ ಮುಖ್ಯನಿರ್ಜರ**
**ತಾರತಮ್ಯವಪೇಳ್ವೆ ಸಂಕ್ಷೇಪದಲಿ ಗುರುಬಲದಿ ||**

**ಕೇಶವಗೆ ನಾರಾಯಣಿಗೆ ಕಮ**
**ಲಾಸನ ಸಮೀರ ವಾಣಿಗೆ**
**ವೀಶಫಣಿಪ ಮಹೇಶರಿಗೆ ಷಣ್ಮಹಿಷಿಯರ ಪದಕೆ ||**
**ಶೇಷರುದ್ರರ ಪತ್ನಿಯರಿಗೆ ಸು**
**ವಾಸವ ಪ್ರದ್ಯುಮ್ನರಿಗೆ ಸಂ**
**ತೋಷದಲಿ ವಂದಿಸುವೆ ಭಕ್ತಿ ಜ್ಞಾನ ಕೊಡಲೆಂದು ||೧||**

ಸೂಚನೆ.—ತಾರತಮ್ಯ ವಿಷಯವನ್ನು ಹಿಂದೆ ಬೃಹತ್ತಾರತಮ್ಯ ಸಂಧಿಯಲ್ಲೂ, ಗುಣ ತಾರತಮ್ಯ ಸಂಧಿಯಲ್ಲೂ ವಿವರವಾಗಿ ವ್ಯಾಖ್ಯಾನ ಮಾಡಿರುವುದರಿಂದ ಈ ಸಂಧಿಯಲ್ಲಿ ತಾತ್ಪರ್ಯವು ಮಾತ್ರ ಬರೆಯಲ್ಪಡುತ್ತೆ.

ತಾತ್ಪರ್ಯ.—ಲಕ್ಷ್ಮೀ ಪತಿಯಾದ ಶ್ರೀಪರಮಾತ್ಮನ ನಿಜ ಭಕ್ತರಾದ ಬ್ರಹ್ಮದೇವರ ಮೊದಲಾದ ದೇವತೆಗಳ ತಾರತಮ್ಯವನ್ನು ಗುರು ಕೃಪಾ ಕಟಾಕ್ಷದಿಂದ ಸಂಕ್ಷೇಪವಾಗಿ ಪೇಳುವೆನು, ಎಂದು ಸಂಧಿಯ ಅಭಿಪ್ರಾಯ ವನ್ನು ಸೂಚಿಸಿರುತ್ತಾರೆ.

ತಾತ್ಪರ್ಯ.—ಶ್ರೀಮನ್ನಾರಾಯಣ ದೇವರಿಗೂ, ಆವನ ಪತ್ನಿಯರಾದ ಲಕ್ಷ್ಮೀದೇವಿಯರಿಗೂ, ಬ್ರಹ್ಮ ವಾಯುಗಳಿಗೂ, ಸರಸ್ವತೀ ಭಾರತಿಯರಿಗೂ, ಗರುಡ, ಶೇಷ, ರುದ್ರ, ಕೃಷ್ಣನ ಷಣ್ಮಹಿಷಿಯರು ಇವರುಗಳ ಪಾದ ಕಮಲಗಳಿಗೂ ಸೌಪರ್ಣೀ ವಾರುಣಿ, ಪಾರ್ವತಿಯರಿಗೆ, ಇಂದ್ರ ಕಾಮರಿಗೆ ಭಕ್ತಿ ಜ್ಞಾನ ಕೊಡಲೆಂದು ಸಂತೋಷದಿಂದ ನಮಸ್ಕರಿಸುವೆನು.

ಪ್ರಾಣದೇವಗೆ ನಮಿಪೆ ಕಾಮನ
ಸೂನುಮನುಗುರುದಕ್ಷಶಚಿ ರತಿ
ಮಾನನಿಯರಿಗೆ ಪ್ರವಹದೇವಗೆ ಸೂರ್ಯ ಸೋಮ ಯಮ ||
ಮಾನವಿಗೆ ವರುಣನಿಗೆ ವೀಣಾ
ಪಾಣಿ ನಾರದಮುನಿಗೆ ನಮಿಸುವೆ
ಜ್ಞಾನ ಭಕ್ತಿ ವಿರಕ್ತಿ ಮಾರ್ಗವ ತಿಳಿಸಲೆನಗೆಂದು || ೨ ||

ತಾತ್ಪರ್ಯ.—ಅಹಂಕಾರಿಕ ಪ್ರಾಣ ದೇವರಿಗೆ, ನಮಸ್ಕರಿಸುವೆನು. ಮನ್ಮಥನ ಪುತ್ರ ಅನಿರುದ್ಧ, ಮನು, ಗುರು, ದಕ್ಷ, ಶಚಿ, ರತಿ ಇವರಾರು ಮಂದಿಗಳಿಗೆ, ಪ್ರವಹವಾಯುವಿಗೆ, ಸೂರ್ಯ, ಚಂದ್ರ, ಯಮ, ಶತರೂಪೆ ಇವರು ನಾಲ್ವರಿಗೆ, ವರುಣನಿಗೆ, ನಾರದರಿಗೆ, ಜ್ಞಾನ ಭಕ್ತಿ ವಿರಕ್ತಿ ಮಾರ್ಗವನ್ನು ಎನಗೆ ತಿಳಿಸಲೆಂದು ನಮಸ್ಕರಿಸುವೆನು.

ಅನಲಭೃಗುದಾಕ್ಷಾಯಣಿಯರಿಗೆ
ಕನಕಗರ್ಭಜ ಸಪ್ತ ಋಷಿಗಳಿ
ಗೆಣೆ ಎನಿಪ ವೈವಸ್ವತನುಮನು ಗಾಧಿಸಂಭವಗೆ ||
ದನುಜನಿಋಋತಿ ತಾರಪ್ರಾವಹಿ
ವನಜಮಿತ್ರರ್ಗಶ್ವಿನಿಗಣಪ
ಧನಪವಿಷ್ವಕ್ಸೇನರಿಗೆ ವಂದಿಸುವೆ ನನವರತ || ೩ ||

ತಾತ್ಪರ್ಯ.—ಅನಲ=ಅಗ್ನಿ ದೇವರಿಗೆ, ಭೃಗು= ಭೃಗು ಋಷಿಗಳಿಗೆ ದಾಕ್ಷಾಯಣಿಯಾದ ಪ್ರಸೂತಿ ದೇವಿಯರಿಗೆ, ಬ್ರಹ್ಮದೇವರ ಮಕ್ಕಳಾದ ಏಳು ಋಷಿಗಳಿಗೆ, ಇವರಿಗೆ ಸಮರಾದ ವೈವಸ್ವತ ಮನುವಿಗೂ, ವಿಶ್ವಾಮಿತ್ರರಿಗೂ, ರಾಕ್ಷಸನಾದ ನಿಋಋತಿ, ತಾರೆ, ಪ್ರಾವಹಿ, ಮಿತ್ರನೆಂಬ ಸೂರ್ಯ ಇವರುಗಳಿಗೆ ಅಶ್ವಿನೀ, ಗಣಪತಿ, ಕುಭೇರ, ವಿಷ್ವಕ್ಸೇನ ಇವರೆಲ್ಲರಿಗೂ ಸರ್ವದಾ ನಮಿಸುವೆನು.

ಉಕ್ತದೇವರ್ಕಳೆನುಳಿದು ಎಂ
ಭತ್ತೈದು ಜನರುಗಳು ಮನುಗಳು
ಚಿಥ್ಯ ಚ್ಯಾವನ ಯಮಳರಿಗೆ ಕರ್ಮಜರೆನಿಸುತಿಪ್ಪ ॥
ಕಾರ್ತವೀರ್ಯಾರ್ಜುನ ಪ್ರಮುಖ
ಶತಸ್ಥರಿಗೆ ಪರ್ಜನ್ಯ ಗಂಗಾ
ದಿತ್ಯಯಮ ಸೋಮಾನಿರುದ್ಧರ ಪತ್ನಿಯರಪದಕೆ ॥೪೯॥

ತಾತ್ಪರ್ಯ.—ಉಕ್ತರೇಷಶತಸ್ಥರು, ಉತ್ತಮ ಕಕ್ಷದಲ್ಲಿ ಸೇರಿದವರು ೧೫ ಮಂದಿ ಹೋಗುತ್ತಾ ಉಳಿದ ೮೫ ಜನರು, ಮನುಗಳು, ಉಚಿಥ್ಯರು ಚ್ಯಾವನ ಯಮಳರಿಗೆ - ಇಬ್ಬರಿಗೆ, ಕರ್ಮದೇವರೆನಿಸುವ ಕಾರ್ತವೀರ್ಯಾರ್ಜುನ ಮೊದಲಾದ, ಪ್ರಮುಖ - ಮುಖ್ಯರಾದ, ಶತಸ್ಥರಿಗೆ = ನೂರು ಜನರಿಗೆ, ಪರ್ಜನ್ಯಸಂಜ್ಞ ಸೂರ್ಯ. ಗಂಗಾ, ಸಂಜ್ಞಾ, ರೋಹಿಣಿ, ಶ್ಯಾಮಳೆ ಅನಿರುದ್ಧನ ಹೆಂಡತಿ ಉಷೆ ಇವರುಗಳ ಪಾದಗಳಿಗೆ ನಮಸ್ಕರಿಸುವೆನು.

ಹುತವಹನರ್ಧಾಂಗಿನಿಗೆ ಚಂದ್ರಮ
ಸುತಬುಧನಾಮಾತ್ಮಿಕೊಷಾ
ಸತಿಗೆ ಛಾಯಾತ್ಮಜ ಶನೈಶ್ಚರಗಾನಮಿಪೆ ಸತತ ॥
ಪ್ರತಿದಿವಸದಲಿ ಬಿಡದೆ ಜೀವ
ಪ್ರತತಿಮಾಡುವ ಕರ್ಮಗಳಿಗಧಿ
ಪತಿ ಎನಿಪ ಪುಷ್ಕರನ ಪಾದಾಂಬುಜಗಳಿಗೆ ನಮಿಪೆ ॥೫೦॥

ತಾತ್ಪರ್ಯ.—ಹುತವಹನ=ಅಗ್ನಿಪುರುಷದೇವರು. ಅರ್ಧಾಂಗಿ=ಅವರ ಹೆಂಡತಿ ಸ್ವಾಹಾದೇವಿ. ಬುಧ, ಅಶ್ವಿನೀ ಭಾರ್ಯಾ ಉಷೆ, ಶನೈಶ್ಚರ, ಇವರಿಗೆ ಸರ್ವದಾ ನಮಸ್ಕರಿಸುವೆನು. ಪ್ರತಿ ಜೀವರು ಮಾಡುವ ಕರ್ಮಗಳಭಿಮಾನಿ ಪುಷ್ಕರನ ಪಾದಾಂಬುಜಗಳಿಗೆ ನಮಸ್ಕರಿಸುವೆನು.

ಅನಮಿಷೆಯಾಜಾನಜರಿಗೆ ಕೃ
ಶಾನುಸುತರಿಗೆ ಗೋವ್ರಜದೊಳಿಹ
ಮಾನಿನಿಯರಿಗೆ ಚಿರಪಿ ತೃಶತಶೂನ್ಯ ಶತಕೋಟಿ ।
ಮೌನಿಜನರಿಗೆ ದೇವಮಾನವ
ಗಾನಘೌಘರಿಗವನಿಪರಿಗೆ ರ
ಮಾನಿವಾಸನ ದಾಸವರ್ಗಕೆ ನಮಿಪೆನನವರತ ॥೫೧॥

ತಾತ್ಪರ್ಯ.—ಅಜಾನಜ ದೇವತೆಗಳಿಗೆ, ಅಗ್ನಿ ಪುತ್ರರಾದ ೧೬೧೦೦ ಮಂದಿಯರಿಗೆ, ಕೃಷ್ಣಾಂಗ ಸಂಗ ಹೊಂದಿದ ಗೋಪಿಕಾ ಸ್ತ್ರೀಯರಿಗೆ, ಚಿರ ಪಿತೃಗಳಿಗೆ ೧೦೦ ಕಮ್ಮಿ ೧೦೦ ಕೋಟಿ ಸಂಖ್ಯಾಕರಾದ ಋಷಿಗಳಿಗೆ, ದೇವಗಂಧರ್ವ, ಮನುಷ್ಯ ಗಂಧರ್ವರಿಗೆ, ಚಕ್ರವರ್ತಿಗಳಿಗೆ, ರಮಾಪತಿ ಯಾದ ಶ್ರೀ ಪರಮಾತ್ಮನ ದಾಸರಾದ ಮನುಷ್ಯೋತ್ತಮರಿಗೆ ಇವರೆಲ್ಲರಿಗೂ ಸರ್ವದಾ ನಮಸ್ಕಾರ ಮಾಡುವೆನು.

**ಅನುಕ್ರಮಣಿಕೆ ತಾರತಮ್ಯವ**
**ನನುದಿನದಿ ಸದ್ಭಕ್ತಿ ಪೂರ್ವಕ**
**ನೆನವರಿಗೆ ಧರ್ಮಾರ್ಥಕಾಮಾದಿಗಳು ಫಲಿಸುವವು ||**
**ವನಜಸಂಭವ ಮುಖ್ಯರವಯವ**
**ರೆನಿಸುವರು ಜಗನ್ನಾಥವಿಠಲಗೆ**
**ವಿನಯದಿಂದಲಿ ನಮಿಸಿ ಕೊಂಡಾಡುತಿರು ಮರಿಯದಲೆ || ೭ ||**

ತಾತ್ಪರ್ಯ.—ಅನುಕ್ರಮಣಿಕಾ ತಾರತಮ್ಯವನ್ನು ಪ್ರತಿದಿವಸದಲ್ಲೂ ಪಠಿಸುವವರಿಗೆ ಧರ್ಮಾರ್ಥ, ಕಾಮಮೋಕ್ಷಗಳೆಂಬ ಪುರುಷಾರ್ಥಗಳು ಸಿದ್ಧಿಸುವವು. ಬ್ರಹ್ಮಾದಿ ದೇವತೆಗಳೆಲ್ಲರೂ ಶ್ರೀ ಜಗನ್ನಾಥವಿಠಲನಿಗೆ ಅಂಗಭೂತರಾಗಿರುವರು. ಆದುದರಿಂದ ಅವರೆಲ್ಲರಿಗೂ ವಿನಯದಿಂದ ನಮಸ್ಕಾರ ಮಾಡಿ ಮರಿಯದೆ ಪ್ರತಿಧಿವಸದಲ್ಲೂ ಸ್ತುತಿಸುತ್ತಿರು.

ಇಂತಿ ಭಾವಪ್ರಕಾಶಿಕೆಯಲ್ಲಿ ೨೬ನೆಯ ಅವರೋಹಣ ತಾರತಮ್ಯ ಸಂಧಿಯು ಸಮಾಪ್ತವಾದುದು.

|| ಶ್ರೀ ಕೃಷ್ಣಾರ್ಪಣಮಸ್ತು ||



## ಅನುಕ್ರಮಣಿಕಾ ಸಂಧಿ.

—: ೦ :—

ಸಂಧಿ ೨೭.

ಹಿಂದೆ ಗುಣತಾರತಮ್ಯ ಸಂಧಿ, ಬೃಹತ್ತಾರತಮ್ಯ ಸಂಧಿ, ಆರೋಹಣತಾರತಮ್ಯ ಸಂಧಿ ಎಂದು ತಾರತಮ್ಯ ೩ ಸಂಧಿಯಲ್ಲಿ ಹೇಳಿ ಮತ್ತು ಅವರೋಹಣ, ಅನುಕ್ರಮಣಿಕಾ, ತಾರತಮ್ಯ ಸಂಧಿಗಳನ್ನು ಮಾಡಿರುವರು. ಮತ್ತೂ ಮುಂದೆ ಅಣುತಾರತಮ್ಯವೆಂದು ೨೯ನೆಯ ಸಂಧಿ ಹೇಳುವರು. ಹೀಗೆ ಒಂದು ತಾರತಮ್ಯ ವಿಷಯದಲ್ಲಿ ೬ ಸಂಧಿಗಳನ್ನು ಹೇಳಿದುದರಿಂದ ಪುನರುಕ್ತಿ ದೋಷವನ್ನು ಚಿಂತಿಸಬಾರದು.

"ಪುನಃ ಪುನಃ ಕಥಾಂ ಬ್ರೂಯುಃ ಅಭ್ಯಾಸಾದುತ್ತಮಂ ಫಲಂ" ಎಂಬ ಭಾಗವತ ತಾತ್ಪರ್ಯಾನುಸಾರವಾಗಿ ೧೧ ಕ್ಕೆ ಳ ಆವೃತ್ತಿ ಹೇಳಿದರೆ ಅಭ್ಯಾಸವಾಗಿ ಮನಸ್ಸಿನಲ್ಲಿ ಚೆನ್ನಾಗಿ ಮನನವಾಗುವದು. ಅದರಿಂದ ಫಲಾಧಿಕ್ಯವಾಗುವುದೆಂಬ ಉದ್ದೇಶ ಗುಣತಾರತಮ್ಯದಲ್ಲಿ ಯಾರಿಗಿಂತಲೂ ಯಾರ್ಯಾರು ಎಷ್ಟೆಷ್ಟು ಗುಣಗಳು ನೀಚರೆಂದು ಅವರೋಹಣ ಕ್ರಮವಾಗಿ ಹೇಳಿದರು. ಆರೋಹಣವೆಂದರೆ ಕೆಳಗಿನಿಂದ ಮೇಲೆ ಹೋಗುವುದು, ಅವರೋಹಣವೆಂದರೆ ಮೇಲಿನಿಂದ ಕೆಳಕ್ಕೆ ಇಳಿಯುವುದೆಂದರ್ಥ. ಅದರ ಮೇಲೆ ಬೃಹತ್ತಾರತಮ್ಯದಲ್ಲಿ ತಾರತಮ್ಯವನ್ನು ವಿಸ್ತಾರವಾಗಿ ಅವರೋಹಣ ಕ್ರಮವಾಗಿಯೇ ಹೇಳಿದರು. ಇವೆರಡೂ ಅವರೋಹಣವೇ ಆದುದರಿಂದ ಆರೋಹಣ ಕ್ರಮವನ್ನು ತಿಳಿಸುವುದಕ್ಕಾಗಿ ಮತ್ತೊಂದು ಸಂಧಿಯನ್ನು ಮಾಡಿದರು. ಇವೆಲ್ಲವನ್ನು ನೋಡಿ ತಾರತಮ್ಯ ಜ್ಞಾನವು ದೃಢೀಕರಣವಾದರೂ ನಿತ್ಯದಲ್ಲೂ ತಾರತಮ್ಯ ಪ್ರಕಾರ ಎಲ್ಲರಿಗೂ ನಮಸ್ಕಾರ ಮಾಡಿ ಉಪಾಸನೆ ಮಾಡುವುದಕ್ಕೆ ಗ್ರಂಥವು ಬಾಯಿಪಾಠ ಮಾಡಿ ನಿತ್ಯಪಾರಾಯಣ ಮಾಡಲು, ಬೃಹತ್ತಾರತಮ್ಯಾದಿಗಳು ಹೆಚ್ಚು ಗ್ರಂಥಗಳಿರುವುದರಿಂದ ಲೌಕಿಕ ವ್ಯಾಸಂಗದಲ್ಲಿ ಇರುವವರಿಗೆ ನಿತ್ಯದಲ್ಲೂ ಅಷ್ಟುಗ್ರಂಥ

ವನ್ನು ಪಠಿಸುವದು ಕಷ್ಟವೆಂದು ಯೋಚಿಸಿ ನಿತ್ಯ ಪಾರಾಯಣಕ್ಕಾಗಿ ವಾಚೋವಿಧೇಯುವಾಗಿ ಪಾಠಮಾಡಲೆಂಬ ಉದ್ದೇಶವಾಗಿ ಅವರೋಹಣ ಕ್ರಮದಿಂದ ಸಂಕೋಚವಾಗಿ ೨ ಪದ್ಯಗಳಲ್ಲೀ ತಾರತಮ್ಯವನ್ನು ಹೇಳಿದರು. ಈಗಲೂ ಅದೇ ಉದ್ದೇಶ ಜ್ಞಾಪಕಕ್ಕಾಗಿ ಅಂತ್ಯ ಆದಿಯನ್ನು ತಿಳಿದುಕೊಂಡರೆ ಮಧ್ಯದವರೆಲ್ಲಗೂ ಬಂದಹಾಗೆಯೇ ಆಯಿತೆಂಬ ಉದ್ದೇಶವಾಗಿ ಬಹಳ ಅವಸರವಿದ್ದರೂ ಇಷ್ಟಾದರೂ ಬಾಯಿಂದ ಉಚ್ಚರಿಸಲೆಂದು ಅನುಕ್ರಮಣಿಕಾ ಸಂಧಿಯನ್ನು ಉಪಕ್ರಮಿಸುತ್ತಾರೆ.

**ಸಂಧಿ ಸೂಚನೆ ||** **ಮಾನುಷೋತ್ತಮ ಪಿಡಿದು ಸಂಕರು**
**ಷಣನ ಪರಿಯಂತರದಿ ಪೇಳಿರು**
**ವನುಕ್ರಮಣಿಕೆಯ ಪದ್ಯವನು ಕೇಳುವುದು ಸಜ್ಜನರು ||**

**ಶ್ರೀಮದಾಚಾರ್ಯರಮತಾನುಗ**
**ಧೀಮತಾಂವರರಂಘ್ರಿಕಮಲಕೆ**
**ಸೋಮಪಾನಾರ್ಹರಿಗೆ ತಾತ್ವಿಕ ದೇವತಾಗಣಕೆ ||**
**ಹೈಮವತಿ ಷಣ್ಮಹಿಷಿಯರ ಪದ**
**ವ್ಯೋಮಕೇಶಗೆ ವಾಣಿವಾಯೂ**
**ತಾಮರಸಭವ ಲಕ್ಷ್ಮೀನಾರಾಯಣರಿಗಾ ನಮಿಪೆ ||೧||**

ಪದ್ಯಾರ್ಥ.—ಶ್ರೀಮದಾಚಾರ್ಯರ ಮತಾನುಗರಾದ, ಧೀಮತಾಂವರರಂಘ್ರಿಕಮಲಕೆ=ಜ್ಞಾನಿಗಳಾದ ಮಾನುಷೋತ್ತಮರು ಮೊದಲು ಕರ್ಮದೇವತಾವರೆಗೂ ಇರುವ ಎಲ್ಲರ ಪಾದಕಮಲಗಳಿಗೂ, ಸೋಮಪಾನಾರ್ಹರಿಗೆ=ಸೋಮಪಾನಾರ್ಹರು ೯ ಕೋಟಿ ದೇವತೆಗಳ ಪೈಕಿ ೧೦೦ ಮಂದಿಯೇ ಸೋಮಪಾನಾರ್ಹರು, ಇವರಲ್ಲಿ ಮೇಲಿನ ಕಕ್ಷ್ಯದಲ್ಲಿ ಸೇರಿದ ಇಂದ್ರಾದಿ ೧೫ ಜನರನ್ನು ಬಿಟ್ಟು ಉಕ್ತಶೇಷ ಶತಸ್ಥರೆಂದು ೮೫ ಜನರು, ಅವರ ಪಾದಗಳಿಗೂ, ತಾತ್ವಿಕದೇವತಾಗಣಕೆ=ತತ್ವಾಭಿಮಾನಿ ದೇವತೆಗಳಿಗೆ ಪಾರ್ವತಿ ಮೊದಲಾದ ಮೂವರಿಗೆ, ಕೃಷ್ಣನ ಮಹಿಷಿಯರು ಜಾಂಬವತಿ ಮೊದಲಾದ ೬ ಮಂದಿಯರಿಗೆ, ವ್ಯೋಮಕೇಶಗೆ=ರುದ್ರದೇವರಿಗೆ, ವಾಣಿ=ಸರಸ್ವತಿ ಭಾರತಿಯರಿಗೆ, ವಾಯುದೇವರಿಗೆ, ತಾಮರಸಭವ–ಕಮಲಸಂಭವರಾದ ಬ್ರಹ್ಮದೇವರಿಗೆ, ಲಕ್ಷ್ಮೀದೇವಿಯರಿಗೆ, ನಾರಾಯಣ ಇವರೆಲ್ಲರಿಗೂ, ಅನಮಿಷ=ಚೆನ್ನಾಗಿ ಕರ್ಮಣಾ ಮನಸಾ ವಾಚಾ ನಮಸ್ಕರಿಸುವೆನು.

ಶ್ರೀಮತಾಂವರ ಶ್ರೀಪತೇ ಸ
ತ್ಕಾಮಿತಪ್ರದ ಸೌಮ್ಯತ್ರಿಕ ಕು
ದ್ಧಾಮ ತ್ರಿಚತುಷ್ಪಾದ ಪಾವನಚರಿತ ಸರ್ವಾಂಗ ||
ಗೋಮತಿಪ್ರಿಯ ಗೌಣಗುರುತಮ
ಸಾಮಗಾಯನಲೋಲ ಸರ್ವ
ಸ್ವಾಮಿಮಮಕುಲದೈವ ಸಂತೈಸುವದು ಸಜ್ಜನರ ||೨||

ಪದ್ಯಾರ್ಥ.—ಶ್ರೀಮತಾಂವರ=ಶ್ರೀಮಂತರಾದ, ಸತ್ಯಲೋಕಾಧಿಪತಿಯಾದ ಬ್ರಹ್ಮದೇವರು ಮೊದಲಾದವರಿಗಿಂತಲೂ ಉತ್ತಮವಾದ ಐಶ್ವರ್ಯವಂತನಾದ, ಸತ್ಕಾಮಿತಪ್ರದ-ಸಜ್ಜನರ ಮನೋಭೀಷ್ಟವನ್ನು ಪೂರೈಸುವವನಾದ, ಸೌಮ್ಯ=ಮಾರ್ದವ ಸ್ವಭಾವವುಳ್ಳ, ತ್ರಿಕಕುದ್ಧಾಮ-ಶ್ವೇತದ್ವೀಪ, ಅನಂತಾಸನ, ವೈಕುಂಠವೆಂದು ಮೂರು ಉತ್ತಮ ಸ್ಥಾನವುಳ್ಳ, ತ್ರಿ=ಅಗ್ನ್ಯಂತರಾಮಿಯಾಗಿ ಅಗ್ನಿರೂಪದಿಂದ, ಪ್ರಾತಃಸವನ, ಮಾಧ್ಯಂದಿನಸವನ, ಸಾಯಂಸವನವೆಂಬ ಮೂರು ಪಾದಗಳುಳ್ಳ, " ಚತ್ವಾರಿಶೃಗಾಸ್ತ್ರಯೋಽಸ್ಯ ಪಾದಾಃ ' ಎಂಬ ಶೃತಿಯಿಂದ ಮೂರು ಪಾದಗಳುಳ್ಳವನೆಂಬ ಅರ್ಥವು ಸಿದ್ಧಿಯಾಗುವುದು. ಚತುಷ್ಪಾದ=ಇಲ್ಲಿ ಪಾದವೆಂದರೆ ಅಂಶವೆಂದು ಹೆಸರು "ಪಾದೋಽಸ್ಯವಿಶ್ವಭೂತಾನಿ ತ್ರಿಪಾದಸ್ಯಾಮೃತಂದಿವಿ " ಎಂಬ ಶೃತಿವಾಕ್ಯದಿಂದ ಈ ಪ್ರಪಂಚದಲ್ಲಿರುವ ಸರ್ವ ಪ್ರಾಣಿಗಳು ಒಂದು ಪಾದವು ಅಂದರೆ ಪರಮಾತ್ಮನ ಭಿನ್ನಾಂಶರೆಂದು ತಾತ್ಪರ್ಯ. ಅವಶಿಷ್ಟ ೩ ಪಾದಗಳು, " ಪಾದಾಸ್ತ್ರಯೋ ಬಹಿಸ್ತ್ವಸ್ಯ " ಎಂಬ ಭಾಗವತ ವಚನದಿಂದ ಅನಂತಾಸನ, ವೈಕುಂಠ, ನಾರಾಯಣರೆಂಬ ಮೂರು ಪಾದಗಳು ಬ್ರಹ್ಮಾಂಡಕ್ಕೆ ಹೊರಗಿರುವವು. ಇಲ್ಲಿ ಪಾದವೆಂದರೆ ಸ್ವರೂಪಾಂಶವೆಂದರ್ಥ. ಆದುದರಿಂದ ಚತುಷ್ಪಾದ, ಎಂದು ಪರಮಾತ್ಮನಿಗೆ ಹೆಸರು. ಪಾವನಚರಿತ=ಪವಿತ್ರಕರವಾದ ಮಹಿಮೆಯುಳ್ಳವನು. ಅವನ ಮಹಿಮೆಯು, ಶ್ರವಣಪಠನ ಮಾಡುವವರನ್ನು ಪವಿತ್ರರನ್ನಾಗಿ ಮಾಡುವನೆಂಬ ಭಾವ. ಚಾರ್ವಂಗ=ಮನೋಹರವಾದ ಅಂಗಗಳುಳ್ಳವನು, ಗೋಮತಿಪ್ರಿಯ=ಗೋಮತಿ ಎಂಬ ನದಿಯ ತೀರದಲ್ಲಿ ಶ್ರೀಕೃಷ್ಣನ ದೇವಾಲಯ ಉಂಟು. ಅಲ್ಲಿ ಶ್ರೀಕೃಷ್ಣನ ವಿಶೇಷ ಸನ್ನಿಧಾನವಿದ್ದು ಆ ನದಿಯಲ್ಲಿ ಸ್ನಾನ ಮಾಡುವವರಿಗೆ ಮುಕ್ತಿಯನ್ನು ಕೊಡುವನೆಂದು ಪುರಾಣ ಪ್ರಸಿದ್ಧಿಯಾಗಿರುವುದು. ಭಾಗವತ

ಪ್ರಥಮಸ್ಕಂಧದ ಮೊದಲನೆಯ ಅಧ್ಯಾಯ ೪ನೆಯ ಶ್ಲೋಕದ ವ್ಯಾಖ್ಯಾನಾರಂಭದಲ್ಲಿ ಆ ಶ್ಲೋಕದ ಅವತಾರಿಕೆಯಲ್ಲಿರುವ ಶ್ಲೋಕ.—" ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನವಾ || ಅಥವಾ ಸ್ನಾನ ಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ || ' ಮುಕ್ತಿಯಾಗಬೇಕಾದರೆ ಬ್ರಹ್ಮಜ್ಞಾನದಿಂದಲಾಗುವದು. ಅಥವಾ ಪ್ರಯಾಗದಲ್ಲಿ ಗಂಗಾ ಯಮುನೆಯ ಸಂಗಮದಲ್ಲಿ ದೇಹತ್ಯಾಗಮಾಡಿದರೂ ಮುಕ್ತಿಯಾಗುವದು. ಅಥವಾ ಕೃಷ್ಣನ ಸನ್ನಿಧಾನದಲ್ಲಿ ಗೋಮತೀ ನದಿಯಲ್ಲಿ ಸ್ನಾನ ಮಾತ್ರ ಮಾಡಿದರೆ ಸಾಕು, ಮುಕ್ತಿಯಾಗುವದೆಂದು ಪ್ರಯಾಗ ಮರಣಕ್ಕೆ ಸಮವನ್ನಾಗಿ ಗೋಮತೀ ಸ್ನಾನದ ಫಲವನ್ನು ಹೇಳಿರುವರು. ಅದಕ್ಕೆ ಕಾರಣ " ಗೋಮತ್ಯಾಂ ಕೃಷ್ಣಸನ್ನಿದೌ ' ಎಂದು ಕೃಷ್ಣ ಸನ್ನಿಧಾನದ ಮಹಿಮೆಯನ್ನು ಹೇಳಿರುವರು. ಇದರಿಂದ ಶ್ರೀಕೃಷ್ಣನಿಗೆ ಗೋಮತೀ ನದಿಯಲ್ಲಿ ಹೆಚ್ಚು ಪ್ರೀತಿ ಇದ್ದಂತೆ ಸ್ಪಷ್ಟವಾಗುವದು. ಆದುದರಿಂದ ದಾಸಾರ್ಯರು ಗೋಮತಿ ಪ್ರಿಯನೆಂದು ಹೇಳಿದರು. ಅಗೌಣ=ತ್ರಿಗುಣ ಬದ್ಧನಲ್ಲವೆಂದು ತಾತ್ಪರ್ಯ. ಸತ್ವ ಮೊದಲಾದ ಪ್ರಾಕೃತ ಗುಣರಹಿತನೆಂದರ್ಥ. ಲೋಕ ಗುರು ಬ್ರಹ್ಮದೇವರು, ಗುರುತಮ-ಬ್ರಹ್ಮಾದಿಗಳಿಗೂ ಗುರುವೆಂದರ್ಥ. ಅಥವಾ ತ್ರಿಗುಣಾತೀತರು ಮುಕ್ತರು ಅವರಿಗೆ ಅಗೌಣರೆಂದು ಹೆಸರು. ಮುಕ್ತರೆಲ್ಲರಗಿಂತಲೂ ಗುರುತಮನೆಂದರೆ ಉತ್ತಮನೆಂದರ್ಥ. ಸಾಮಗಾಯನಲೋಲ= ಮುಕ್ತರಾದವರು " ಏತತ್ಸಾಮಗಾಯನ್ನಾಸ್ತೆ | ಹಾ ಉಹಾ ಉಹಾ " ಇತ್ಯಾದಿ ಸಾಮವನ್ನು ಗಾನಮಾಡುತ್ತಾ ಮುಕ್ತಿಯಲ್ಲಿ ಸ್ವರೂಪ ಸುಖವನ್ನು ಅನುಭವಿಸುತ್ತಿರುವರೆಂದು ತೈತ್ತರೀಯ ಉಪನಿಷದ್ಭಾಷ್ಯದ ವಾಕ್ಯದಂತೆ ಸಾಮಗಾಯನರು ಮುಕ್ತರೆಂದು ಏರ್ಪಡುತ್ತದೆ. ಅವರು ಮಾಡುವ ಗಾನದಲ್ಲಿ ಪ್ರೀತಿಯುಳ್ಳವನೆಂದರ್ಥ. ಅಥವಾ ಸಾಮಗಾಯನರು ಮುಕ್ತರು. ಅವರಲ್ಲಿ ಲೀಲಾಜಾಲನಾಗಿರುವನು. ಅಥವಾ " ವೇದಾನಾಂ ಸಾಮವೇದೋಸ್ಮಿ " ಎಂಬ ಗೀತಾ ವಾಕ್ಯದಿಂದ ವೇದಗಳಲ್ಲಿ ಸಾಮವೇದವನ್ನೂ ಭಗವದ್ವಿಭೂತಿಯನ್ನಾಗಿ ತಿಳಿಯಬೇಕೆಂದು ಹೇಳಿರುವುದರಿಂದ ಸಾಮಗಾನ ಪ್ರಿಯನೆಂದು ಹೇಳಬಹುದು. ಸರ್ವಸ್ವಾಮಿ=ರಮಾ ಬ್ರಹ್ಮಾದಿ ಸರ್ವಜನರಿಗೂ ಪ್ರಭುವಾದವನು. ಮಮಕುಲದೈವ-ನಮ್ಮ ಕುಲದೇವನಾದ, ಶ್ರೀಪತೇ-ಲಕ್ಷ್ಮೀಪತಿಯಾದ ಶ್ರೀನರಸಿಂಹನೇ ! ಸಜ್ಜನರ ಸಂತೈಸಬೇಕೆಂದು ಪ್ರಾರ್ಥಿಸುತ್ತೇನೆ.

ರಾಮರಾಕ್ಷಸ ಕುಲಭಯಂಕರ
ಸಾಮಜೇಂದ್ರ ಪ್ರಿಯಮನೋ ವಾ
ಚಾಮಗೋಚರ ಚಿತ್ಸುಖಪ್ರದ ಚಾರುತರ ಚರಿತ ||
ಭೂಮ ಭೂಸ್ವರ್ಗಾಪವರ್ಗದ
ಕಾಮಧೇನು ಸುಕಲ್ಪತರು ಚಿಂ
ತಾಮಣೀ ಎಂದೆನಿಪ ನಿಜಭಕ್ತರಿಗೆ ಸರ್ವತ್ರ ||೩||

ಪದ್ಯಾರ್ಥ.—ರಾಮ=ಲೋಕರಮಣನಾದ ಪ್ರಯುಕ್ತ ರಾಮನೆಂದು ಹೆಸರು. ರಾಕ್ಷಸಕುಲಭಯಂಕರ=ರಾಕ್ಷಸರು, ಉಪಲಕ್ಷಣಯಾ, ದೈತ್ಯರು ಮೊದಲಾದವರ ಕುಲಕ್ಕೆ ಭಯಂಕರನಾಗಿರುವನು. ಸಾಮಜೇಂದ್ರಪ್ರಿಯ=ಸಾಮಜ=ಗಜಗಳು, ಅವುಗಳಿಗೆ ಇಂದ್ರನು ಅಂದರೆ, ಗಜೇಂದ್ರನೆಂದರ್ಥ. ಅವನು ಮಾಡಿದ ಸ್ತೋತ್ರಕ್ಕೆ ಮೆಚ್ಚಿ ಅವನನ್ನು ಮೊಸಳೆಯಿಂದ ಬಿಡಿಸಿ ದಿವ್ಯಗತಿಯನ್ನಿತ್ತು ಉದ್ಧರಿಸುವನೆಂದರ್ಥ. ಮನೋವಾಚಾಮಗೋಚರ=ಮನಸ್ಸಿನಿಂದಲೂ, ವಾಕ್ಯದಿಂದಲೂ ಗುಣಾತಿಶಯಗಳನ್ನು ಸ್ತೋತ್ರಾದಿಗಳನ್ನು ಮಾಡಲು ಸಾಧ್ಯವಲ್ಲದವನು. ಅಥವಾ ಮನೋಭಿಮಾನಿಯು ಖುದ್ರದೇವರು ಮತ್ತು ಚಂದ್ರವಾಗಭಿಮಾನಿ ಸಗಸ್ವತೀ ಭಾರತಿಯರು. ಮನಸ್ಸಿನ ಪ್ರಭೇದವಾದ ಚಿತ್ತಾಭಿಮಾನಿಗಳು ಬ್ರಹ್ಮವಾಯುಗಳು. ಮತ್ತು ವಾಕ್ ಎಂದರೆ ವೇದವೆಂದರ್ಥ. ವೇದಾಭಿಮಾನಿಯೂ, ವೇದಸ್ವರೂಪರೂ ರಮಾದೇವಿಯರು ದುರ್ಗಾರೂಪಿಯಾಗಿರುವರು. ಮನೋವಾಚಾಮಗೋಚರನೆಂದರೆ ಖುದ್ರಾದಿಗಳು, ಬ್ರಹ್ಮ ವಾಯು ಸರಸ್ವತೀ ಭಾರತೀ ಲಕ್ಷ್ಮೀದೇವಿಯರಿಂದಲೂ, ಕೂಡ ತಿಳಿಯಲು ಸಾಧ್ಯವಲ್ಲದವನೆಂದರ್ಥವು. ಚಿತ್ಸುಖಪ್ರದ=ಮುಕ್ತಜನರಿಗೆ ಸ್ವರೂಪಾನಂದವನ್ನು ಕೊಡುವವನು. ಚಾರುತರಚರಿತ-ಎಷ್ಟು ಶ್ರವಣ ಮಾಡಿದರೂ ತೃಪ್ತಿಯಾಗದೆ ಇನ್ನೂ ಕೇಳುತ್ತಿರಬೇಕೆಂದು ತೋರುವ ಮನೋಹರವಾದ ಚರಿತ್ರೆಯುಳ್ಳವನು. ಭಾಗವತ ಪ್ರಥಮಸ್ಕಂಧ ೧೮ನೇ ಅಧ್ಯಾಯ ಶೌನಕಾದಿಗಳ ವಾಕ್ಯ "ಕೋನಾಮ ತೃಪ್ಯೇಂದ್ರ ಸವಿತ್ಕಥಾಯಾಂಮಹತ್ತಮೈಕಾಂತಪರಾಯಣಸ್ಯ' ಮಹತ್ತಮರಾದ ರಮಾಬ್ರಹ್ಮಾದಿಗಳಿಗೆ ಉತ್ತಮಾಶ್ರಯನಾದ ಅದ್ಭುತವಾದ ಮಹಿಮೆಯುಳ್ಳ ಪರಮಾತ್ಮನ ಚರಿತ್ರೆಯನ್ನು ಕೇಳಿ ಅದರ ಸಾರವನ್ನು ತಿಳಿದ ಯಾವನು ತೃಪ್ತನಾಗುವನು ? ನಮಗಂತೂ ಇದು ಕೇಳಿದುದು ಸಾಕೆಂದು

ಆಲಂಬುದ್ಧಿಯು ಹುಟ್ಟುವುದಿಲ್ಲವೆಂದು ಹೇಳಿರುವರು. ಆದುದರಿಂದ ಚಾರುತರ ಚರಿತನೆಂದರು. ಭಮ=ಶಾಶ್ವತವಾದ ಮಹದೈಶ್ವರ್ಯ ಉಳ್ಳವನೆಂದರ್ಥ. ಭೂಸ್ವರ್ಗಾಪವರ್ಗದ=ಅವರವರ ಯೋಗ್ಯತಾನುಸಾರವಾಗಿ ಭೂಮಿಯಲ್ಲಿ ಹುಟ್ಟಿಸುವದು, ಸಾಧನಾನಂತರ ಕಾಮ್ಯ ಕರ್ಮಾದಿಗಳ ಫಲರೂಪವಾಗಿ ಸ್ವರ್ಗವನ್ನೂ, ಕಲ್ಪಾಂತದಲ್ಲಿ ಮುಕ್ತಿಯೋಗ್ಯರಿಗೆ ಮುಕ್ತಿಯನ್ನೂ ರಾಜಸರಿಗೆ ಸಂಸಾರವನ್ನೂ, ತಾಮಸರಿಗೆ ತಮಸ್ಸನ್ನೂ ಕೊಡುವನೆಂಬ ತಾತ್ಪರ್ಯ. ಸರ್ವತ್ರ=ಭಕ್ತರು, ಯಾವ ಲೋಕದಲ್ಲಿದ್ದರೂ ನಿಜ ಭಕ್ತರಿಗೆ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಯೆಂದೆನಿಪ=ಇವುಗಳು ಹೇಗೆ ಮನೋಭೀಷ್ಟವನ್ನು ಪೂರೈಸುವವೋ ಹಾಗೆಯೇ ಅವರ ಮನೋಭೀಷ್ಟಗಳನ್ನು ಪೂರೈಸುವವನೆಂದರ್ಥ.

ಸ್ವರ್ಣವರ್ಣ ಸ್ವತಂತ್ರ ಸರ್ವಗ
ಕರ್ಣಹೀನ ಸುಶಯ್ಯ ಶಾಶ್ವತ
ವರ್ಣಚತುರಾಶ್ರಮ ವರ್ಜಿತಚಾರುತರಸ್ವರತ ।
ಅರ್ಣಸಂಪ್ರತಿಪಾದ್ಯ ವಾಯು ಸು
ಪರ್ಣವರವಾಹನ ಪ್ರತಿಮ ವಟ
ಪರ್ಣಶಯನಾಶ್ಚರ್ಯ ತಮಸಚ್ಛಂತ ಗುಣಭರಿತ ॥೪॥

ಪದ್ಯಾರ್ಥ.—ಸ್ವರ್ಣವರ್ಣ= "ಸುವರ್ಣವರ್ಣೋಹೇಮಾಂಗಃ" ಎಂದು ವಿಷ್ಣುಸಹಸ್ರನಾಮದಲ್ಲಿ ಇರುವುದು. "ಯದಾಪಶ್ಯಃ ಪಶ್ಯತೇರುಗ್ಮವರ್ಣಂ' ಎಂಬ ಶೃತಿಯು ಇದಕ್ಕೆ ಆಧಾರವು- "ಸುವರ್ಣಮಿವವರ್ಣೋಯಸ್ಯಸಃ ಸುವರ್ಣವರ್ಣಃ" ಎಂದು ಸಹಸ್ರನಾಮ ವ್ಯಾಖ್ಯಾನ ವಾಕ್ಯಾಧಾರಗಳಿಂದ ಅಪರೋಕ್ಷದಲ್ಲಿ ಜನರು ನೋಡುವ ಕಾಲದಲ್ಲಿ ಭಂಗಾರದಂತೆ ಬಣ್ಣವುಳ್ಳ ಶರೀರವನ್ನು ಕಾಣುವದರಿಂದ ಸುವರ್ಣವರ್ಣನೆಂದು ಹೆಸರು. ಸ್ವತಂತ್ರನು. ಸರ್ವಗ=ಸರ್ವತ್ರ ವ್ಯಾಪ್ತನು. ಕರ್ಣಹೀನಸುಶಯ್ಯ=ಕಿವಿ ಇಲ್ಲದವನೇ ಹಾಸಿಗೆಯಾಗಿ ಉಳ್ಳವನು. ಅಂದರೆ ಸರ್ಪಗಳಿಗೆ ಚಕ್ಷುಶ್ರವವೆಂದು ಹೆಸರು. ಕಿವಿಗಳು ಇಲ್ಲದೇ ಕಣ್ಣುಗಳೇ ಕಿವಿಗಳಾಗಿದ್ದು ಕಣ್ಣುಗಳೇ ಕೇಳುವುದರಿಂದ ಚಕ್ಷುಶ್ರವವೆಂದು ಹೆಸರು. ಆದುದರಿಂದ ಕರ್ಣಹೀನರೆಂದರೆ ಶೇಷದೇವರೆಂದರ್ಥ. ಅವರೇ ಹಾಸಿಗೆಯಾಗುಳ್ಳವನೆಂಬ ತಾ

ತ್ಪರ್ಯ. ಶಾಶ್ವತನಾಗಿರುವವನು. ವರ್ಣಚತುರಾಶ್ರಮವಿವರ್ಜಿತ=ಇಲ್ಲಿರುವ ವಿವರ್ಜಿತ ಶಬ್ಧವನ್ನು ಎರಡು ಸಲ ಉಚ್ಚರಿಸಬೇಕು. ಹೇಗೆಂದರೆ ವರ್ಣವಿವರ್ಜಿತ=ಬ್ರಾಹ್ಮಣಾದಿ ಯಾವ ವರ್ಣದವನೂ ಅಲ್ಲದವನು. ಚತುರಾಶ್ರಮವಿವರ್ಜಿತ=ಬ್ರಹ್ಮಚಾರಿ ಗೃಹಸ್ಥ ಮೊದಲಾದ ನಾಲ್ಕು ಆಶ್ರಮವೂ ಅಲ್ಲದವನು. ಚಾರುತರ=ಲಕ್ಷ್ಮೀದೇವಿಯರ ಮನಸ್ಸನ್ನು ಆಕರ್ಷಿಸುವ ಮನೋಹರ ರೂಪವುಳ್ಳವನು. ಸ್ವರತ-ಸ್ವರಮಣನು, ಅರ್ಣಸಂಪ್ರತಿಪಾದ್ಯ-ಅರ್ಣವೆಂದರೆ-ಮಂತ್ರಾಕ್ಷರಗಳು ಅಕ್ಷರ ಪ್ರತಿಪಾದ್ಯನು, ವಾಯುಸುಪರ್ಣವರವಾಹನ-ವಾಯುವಾಹನ, ಸುಪರ್ಣವಾಹನನೆಂದು ವಾಹನ ಶಬ್ಧವನ್ನು ಎರಡು ಸಲ ಉಚ್ಚರಿಸಬೇಕು. ವಾಯುವಾಹನ=" ವರದೋ ವಾಯುವಾಹನಃ " ಎಂದು ಸಹಸ್ರನಾಮದಲ್ಲಿರುವ ವಾಯುವಾಹನ ಶಬ್ಧಕ್ಕೆ ವ್ಯಾಖ್ಯಾನದಲ್ಲಿ " ವಾಯುಂ ಮುಖ್ಯಪ್ರಾಣಂವಹತಿ-ಪ್ರೇರಯತೀತಿ ವಾಯುವಾಹನಃ " ವಾಯುವೆಂದರೆ ಮುಖ್ಯಪ್ರಾಣದೇವರು, ಅವರನ್ನು ಪ್ರೇರಿಸುವವನಾದುದರಿಂದ ವಾಯುವಾಹನನೆಂದರ್ಥ ಮಾಡಿರುವರು. ಸುವರ್ಣವರವಾಹನ=ಗರುಡನೆಂಬ ಉತ್ತಮವಾದ ವಾಹನವುಳ್ಳವನು. ಅಪ್ರತಿಮವಟಪರ್ಣಶಯನ-ಸಮರಹಿತವಾದ ವಟಪತ್ರದಲ್ಲಿ ಪ್ರಳಯೋದಕದಲ್ಲಿ ಶಯನಮಾಡಿದವನು. ಅಥವಾ ಅಪ್ರತಿಮ, ವಟಪತ್ರಶಯನನೆಂದು ಬೇರೆಬೇರೆಯಾಗಿ ಪದ ಮಾಡಬಹುದು; ಅಪ್ರತಿಮ-ಸಮರಹಿತನು, ವಟಪತ್ರಶಯನ=ಪ್ರಳಯಕಾಲದಲ್ಲಿ ಮಾರ್ಕಂಡೇಯರಿಗೆ ಆಲದೆಲೆಯ ಮೇಲೆ ಮಲಗಿರುವ ರೂಪವನ್ನು ತೋರಿಸಿದವನು. ಅದನ್ನೇ ಇಲ್ಲಿ ಸೂಚಿಸಿರುವರು. ಆಶ್ಚರ್ಯತಮನು, ಲೋಕದಲ್ಲಿ ಇವನಿಗಿಂತಲೂ ದೊಡ್ಡವಸ್ತು ಕಾಣದೆ ನೀನೇ ಆಶ್ಚರ್ಯಪುರುಷನು, ನೀನೇ ಧನ್ಯನೆಂದು ರಾಜಸಭೆಯಲ್ಲಿ ನಾರದರು ಬಂದು ಶ್ರೀಕೃಷ್ಣನನ್ನು ನೋಡಿ ಹೇಳಲು ಶ್ರೀಕೃಷ್ಣನು " ದಕ್ಷಿಣಾಭಿಃ ಸಾಕಂ ' ಎಂದು ಉತ್ತರವನ್ನಿತ್ತರು ದಕ್ಷಿಣೆ ಎಂದು ಲಕ್ಷ್ಮೀದೇವಿಯರಿಗೆ ಹೆಸರು. ಆಕೆಯಿಂದಲೂ ಕೂಡಿ ನಾನು ಆಶ್ಚರ್ಯನೆಂದು ಹೇಳಿದರೆಂದು ಹರಿವಂಶದ ಕಥೆಯನ್ನು ನಿರ್ಣಯದಲ್ಲಿ ಹೇಳಿರುವರು. ಆ ಕಥೆಯು ಶ್ಲೋಕ ಸಹಿತವಾಗಿ ಹಿಂದೆ ಹೇಳಲ್ಪಟ್ಟಿದೆ. ಮತ್ತೂ ವಿಸ್ತಾರ ಮಾಡಬೇಕಾಗಿಲ್ಲ. ಆದುದರಿಂದ ಆಶ್ಚರ್ಯತಮನೆಂದರು, ಗುಣಭರಿತ=ಆನಂದಾದಿ ಗುಣಗಳಿಂದ ಪೂರ್ಣವಾದ ಸಚ್ಚರಿತ=ಉತ್ತಮವಾದ ಚರಿತ್ರೆಯುಳ್ಳವನು. ಅಥವಾ ಆಶ್ಚರ್ಯತಮಸಚ್ಚ

ರಿತ ಎಂದು ಒಂದೇ ಪದವಾಡಬಹುದು- ಅತ್ಯಾಶ್ಚರ್ಯಕರವಾದ ಸಚ್ಚರಿ ತ್ರೆಯುಳ್ಳವನೆಂದರ್ಥ.

ಅಗಣಿತಸುಗುಣಧಾಮ ನಿಶ್ಚಲ
ಸ್ವಗತ ಭೇದವಿಶೂನ್ಯ ಶಾಶ್ವತ
ಜಗದ ಜೀವಾತ್ಯಂತ ಭಿನ್ನಾಪನ್ನ ಪರಿಪಾಲ ।
ತ್ರಿಗುಣವರ್ಜಿತ ತ್ರಿಭುವನೇಶ್ವರ
ಹಗಲಿರಳು ಸ್ಮರಿಸುತಲಿ ಹರಬಿ
ಟ್ಟಗಲ ಶ್ರೀಜಗನ್ನಾಥವಿಠಲ ವಿಶ್ವವ್ಯಾಪಕನು ॥೫॥

ಪದ್ಯಾರ್ಥ.— ಅಗಣಿತಸುಗುಣಧಾಮ=ಗಣನಮಾಡಲು ಸಾಧ್ಯವಿಲ್ಲ ದುತ್ತಮವಾದ ಗುಣಗಳಿಗೆ ಮನೆಯಂತಿರುವವನು, ನಿಶ್ಚಲ = ಇಂತಹಾ ಸುಗುಣಗಳು ನಿಶ್ಚಲವಾಗಿರುವವು ಅಂದರೆ, ಅಗಣಿತವಾದ ಸುಗುಣಗಳಿಗೆ ಸರ್ವ ಕಾಲಗಳಲ್ಲೂ ಆಶ್ರಯನಾಗಿಯೇ ಇರುವನೆಂದು ತಾತ್ಪರ್ಯ. ಸ್ವಗ ತಭೇದವಿಶೂನ್ಯ=ತನ್ನ ಸಂಬಂಧವಾದ ಭೇದಗಳು ಅಂದರೆ ಮೂಲರೂಪ, ಅವತಾರರೂಪಗಳು, ಅಂತರ್ಯಾಮಿ ರೂಪಗಳು, ಇವೇ ಮೊದಲಾದ ಭಗವ ದ್ರೂಪಗಳಿಗೆ ಪರಸ್ಪರ ಭೇದವಿಲ್ಲವೆಂದರ್ಥ. ಶಾಶ್ವತ=ಅನಾದ್ಯನಂತಕಾಲ ಕ್ಕೂ, ಜಗದ=ಜಡವಾದ ಜಗತ್ತಿನ ದೆಶೆಯಿಂದಲೂ, ಜೀವ=ಜೀವರ ದೆಶೆ ಯಿಂದಲೂ, ಅತ್ಯಂತಭಿನ್ನ=ಬಹಳ ಭೇದ ಉಳ್ಳವನು. ಅಪನ್ನಪರಿಪಾಲ= ಶರಣಾಗತರನ್ನು ಪಾಲಿಸುವವನು, ತ್ರಿಗುಣವರ್ಜಿತ = ಸತ್ವ ರಜ ಸ್ತಮೋ ಗುಣಶೂನ್ಯನು, ತ್ರಿಭುವನೇಶ್ವರ=ಮೂರು ಲೋಕಕ್ಕೂ ಸ್ವಾಮಿಯಾದವನು ಮೂರು ಲೋಕವೆಂದರೆ ಭೂಲೋಕ, ಭುವರ್ಲೋಕ, ಸ್ವರ್ಗಲೋಕವೆಂಬ ಮೂರು ಲೋಕವೆಂದರ್ಥವಲ್ಲ. ಈ ಆಧಿಪತ್ಯ ಇಂದ್ರನಿಗೂ ಇರುವದು. ಮ ತ್ತೇನೆಂದರೆ; ಭಾಗವತ ದ್ವಿತೀಯಸ್ಕಂಧ ೫ನೇ ಅಧ್ಯಾಯದಲ್ಲಿ ೩೯ನೆಯ ಶ್ಲೋಕ ಮೊದಲು ೪೨ನೆಯ ಶ್ಲೋಕದವರೆಗೂ ಬ್ರಹ್ಮಾಂಡದಲ್ಲಿ ೧೪ಲೋ ಕಗಳನ್ನು ಹೇಳಿ “ ಇತಿಲೋಕಮಯಃ ಪುಮಾನ್ ” ಹೀಗೆ ಪರಮಾತ್ಮನು ಲೋಕಮಯನಾಗಿರುವನು ಎಂದು ಅದನ್ನು ಉಪರಿಮಿಸಿ ಮತ್ತು “ ಭೂ ರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕಸ್ತು ನಾಭಿತಃ ॥ ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಿ ಇತಿ ವಾ ಲೋಕಕಲ್ಪನಾ ” ಪಾದ ಮೊದಲು

ಭೂಲೋಕವೆಂತಲೂ, ನಾಭಿಯಲ್ಲಿ ಭುವರ್ಲೋಕವೆಂತಲೂ, ಶಿರಸ್ಸಿನವರೆಗೂ ಸ್ವರ್ಗಲೋಕವೆಂತಲೂ ಹೀಗಾದರೂ ಲೋಕಗಳನ್ನು ಕಲ್ಪಿಸಬಹುದೆಂದರು. ಇತರ ವ್ಯಾಖ್ಯಾನದಲ್ಲಿ ಭೂಲೋಕವೆಂದರೆ ಅತಲ ಮೊದಲು ಪಾತಾಲದವರೆಗೂ ಇರುವ ೭ ಲೋಕಗಳೂ ಭೂಮಿಯಲ್ಲಿ ಅಂತರ್ಭಾವವೆಂತಲೂ, ಜನೋಲೋಕ ಮೊದಲು ಸತ್ಯಲೋಕದವರೆಗೂ ಸ್ವರ್ಗದಲ್ಲಿ ಅಂತರ್ಭಾವವೆಂತಲೂ ಅಂತು ೧೪ ಲೋಕಗಳೂ ಇದರಲ್ಲಿ ಶೇರಿದವೆಂದು ಹೇಳಿರುವರು. ಹಾಗೆ ಮಾಡಿದ್ದರೆ " ಪಾತಾಳಮೇತಸ್ಯಹಿ ಪಾದಮೂಲಂ ' ಎಂಬ ವಿರಾಡ್ರೂಪ ಚಿಂತನೆಯ ಪ್ರಕಾರವನ್ನು ಹೇಳುವಾಗ ಪಾದತಲವಾರಂಭ ಮಾಡಿ ಕಟಿ ಪ್ರದೇಶದವರೆಗೂ ಅತಲಾದಿ ೭ ಲೋಕವನ್ನು ಹೇಳಿ "ಮಹೀತಲಂತಜ್ಜಘನಂ ಮಹೀಪತೆ ' ಎಂದು ಭೂಲೋಕವು ನಾಭಿಗೆಕೆಳಗಿರುವ ಕೆಳ ಹೊಟ್ಟೆಯಲ್ಲಿದೆ ಎಂದು ಹೇಳಿರುವರು. ಇಲ್ಲಿ ಪಾದ ಮೊದಲು ಎಂದು ಹೇಳಿದುದರಿಂದ ಪಾತಾಳಾದಿಗಳು ಅದರಲ್ಲಿ ಅಂತರ್ಭಾವವೆಂದು ಸ್ಪಷ್ಟವಾಗಿದಂತಾಯಿತು. " ಸತ್ಯಂತು ಶೀರ್ಷಾಣಿಸಹಸ್ರ ಶೀರ್ಷ್ಣಃ ' ಸತ್ಯಲೋಕವು ಪರಮಾತ್ಮನ ಶಿರಸ್ಸಿನಲ್ಲಿದೆ ಎಂದು ಅಲ್ಲಿ ಹೇಳಿರುವರು. ಇಲ್ಲಿ ಶಿರಸ್ಸಿನವರೆಗೂ ಸ್ವರ್ಗಲೋಕವೆಂದರು. ಆದುದರಿಂದ ಸ್ವರ್ಗದಲ್ಲಿ ಸತ್ಯಲೋಕದವರೆಗೂ ಎಲ್ಲಾ ಲೋಕಗಳು ಅಂತಃ ಪ್ರವಿಷ್ಟವೆಂದರ್ಥ. ಮುಖ್ಯ ಇಲ್ಲಿ ಹೇಳಿದ ತ್ರಿಭುವನೇಶ್ವರನೆಂಬುವುದಕ್ಕೆ ೧೪ ಲೋಕಗಳಿಗೂ ಈಶ್ವರನೆಂದರ್ಥ. ಅಥವಾ ಶ್ವೇತದ್ವೀಪ, ಅನಂತಾಸನ, ವೈಕುಂಠವೆಂಬ ಮೂರು ಲೋಕಗಳ ಈಶ್ವರನೆಂದರ್ಥ. ವಿಶ್ವವ್ಯಾಪಕನಾದ ಇಂತಹಾ ಜಗನ್ನಾಥ ವಿಠಲನನ್ನು ಹೆಗಲಿರುಳು=ಹಗಲು ರಾತ್ರಿಯಲ್ಲಿ, ಸ್ಮರಿಸುತಲಿಹರ-ಸ್ಮರಿಸುತ್ತಿರುವವರನ್ನು ಬಿಟ್ಟಗಲ-ಒಂದು ಕ್ಷಣ ಬಿಡದೇ ಸರ್ವದಾ ಸಮೀಪದಲ್ಲಿದ್ದು ರಕ್ಷಿಸುವನೆಂದು ತಾತ್ಪರ್ಯ.

ಇಂತೀ ಭಾವಪ್ರಕಾಶಿಕೆಯಲ್ಲಿ ೨೭ನೆಯ ಅನುಕ್ರಮಣಿಕಾ ಸಂಧಿಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||



## ಗ ಣ ಪ ತಿ ಸ್ತೋ ತ್ರ ಸಂ ಧಿ.



### ಸಂಧಿ ೨೮.

**ಸೂಚನೆ ॥ ಹರಿಕಥಾಮೃತಸಾರ ಗುರುಗಳ ॥ಪ॥**

ಶ್ರೀಶನಂಘ್ರಿ ಸರೋಜಭೃಂಗ ಮ
ಹೇಶ ಸಂಭವ ಮನ್ಮನದೊಳು ಪ್ರ
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ ।
ನೀ ಸಲಹೋ ಸಜ್ಜನರ ವೇದ
ವ್ಯಾಸ ಕರುಣಾಪಾತ್ರ ಮಹದಾ
ಕಾಶಪತಿ ಕರುಣಾಳು ಕೈಪಿಡಿದೆನ್ನನುದ್ಧರಿಸೋ ॥೧॥

ಈಗ, ಮುಕ್ತಿಸಾಧನೆಗಾಗಿ ಮಾಡಬೇಕಾದ ಸತ್ಕಾರ್ಯಗಳಿಗೆ ಬರುವ ವಿಘ್ನಗಳು ಬಹಳವಾದ್ದರಿಂದ ನಿರ್ವಿಘ್ನವಾಗಿ ಸತ್ಸಾಧನೆ ನಡೆಯುವುದಕ್ಕೆ ವಿಘ್ನೇಶ್ವರನ ಪ್ರಾರ್ಥನೆಯು ಅವಶ್ಯಕವೆಂದು ಗಣಪತಿ ಸ್ತೋತ್ರ ಸಂಧಿಯನ್ನು ಉಪಕ್ರಮಿಸುತ್ತಾರೆ.

ಪದ್ಯಾರ್ಥ.—ಶ್ರೀಶನಂಘ್ರಿಸರೋಜಭೃಂಗ = ಶ್ರೀಶನ=ಲಕ್ಷ್ಮೀಪತಿಯಾದ ಶ್ರೀಪರಮಾತ್ಮನ, ಅಂಘ್ರಿ=ಪಾದಗಳೆಂಬ, ಸರೋಜ-ಕಮಲಗಳಲ್ಲಿ, ಭೃಂಗ=ಭ್ರಮರದಂತಿರುವ, ಮಹೇಶಸಂಭವ-ರುದ್ರದೇವರ ಮಗನಾದ ಎಲೈ ಮಹಾ ಗಣಪತಿಯೇ ! ಅನುದಿನ=ಪ್ರತಿ ದಿವಸದಲ್ಲೂ, ಪ್ರೇಮಾತಿಶಯದಿಂದ, ಪ್ರಾರ್ಥಿಸುವೆ=ಬೇಡುವೆನು. (ಅನುದಿನದಿ ಎಂಬ ಪದವನ್ನು ಎರಡು ಸಲ ಅವೃತ್ತಿಕೊಳ್ಳಬೇಕು) ಮನ್ಮನದೊಳು – ನನ್ನ ಮನಸ್ಸಿನಲ್ಲಿ ಪ್ರಕಾಶಿಸು ! ಎಲೈ ವೇದವ್ಯಾಸ ಕರುಣಾಪಾತ್ರ – ವೇದವ್ಯಾಸದೇವರ ಅನುಗ್ರಹಕ್ಕೆ ಪಾತ್ರನಾದ, ಮಹದಾಕಾಶಪತಿ – ಪಂಚಭೂತದಲ್ಲಿ

ಒಂದಾದ ಆಕಾಶಕ್ಕೆ ಅಭಿಮಾನಿಯಾದ, ಕರುಣಾಳು=ಕರುಣಾಳುವಾದ ಎಲೈ ಗಣಪತಿಯೇ, ನೀ=ನೀನು ಸಜ್ಜನರ ಸಲಹೋ ; ಎನ್ನ=ನನ್ನನ್ನು ಕೈಪಿಡಿದು ಉದ್ಧರಿಸೊ !

ತಾತ್ಪರ್ಯ.—ಶ್ರೀ ಗಣಪತಿಯನ್ನು ಪ್ರಾರ್ಥಿಸುತ್ತಾರೆ :—ಎಲೈ ಗಣಪತಿಯೇ! ನೀನು ಸಾಕ್ಷಾಲ್ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನ ಪಾದವೆಂಬ ಕಮಲದಲ್ಲಿ ಭ್ರಮರದಂತಿರುವೆ ! ಅಂದರೆ ಭ್ರಮರವು ಹೇಗೆ ಜೇನಿಗೋಸ್ಕರ ಕಮಲದಲ್ಲಿ ಸೇರಿಕೊಳ್ಳುವದೋ ಹಾಗೆ ನಿನ್ನಮನಸ್ಸು ಅವಿಚ್ಛಿನ್ನವಾಗಿ ಪರಮಾತ್ಮನ ಪಾದದಲ್ಲಿ ನೆಲಸಿರುವದೆಂಬ ತಾತ್ಪರ್ಯ. ಎಲೈ ರುದ್ರದೇವರಿಂದ ಜನಿಸಿದವನೆ ! ಯದ್ಯಪಿ ಪಾರ್ವತೀದೇವಿಯರು ತಮ್ಮ ದೇಹದ ಕೊಳೆಯಿಂದ ಗಣಪತಿಯನ್ನು ಸೃಷ್ಟಿಮಾಡಿದುದಾಗಿ ಗಣೇಶನ ಕಥೆಯೊಳಗೆ ಬರುವುದು. ಪಾರ್ವತೀದೇವಿಯರ ಮಗನಾದುದರಿಂದ ರುದ್ರದೇವರ ಮಗನೆಂದು ಹೇಳಬಹುದು ; ಆದರೆ, " ಮಹೇಶಸಂಭವ" ಎಂದು ದಾಸಾರ್ಯರು ಹೇಳಿರುವರು. ಸಂಭವನೆಂದರೆ ಜನಿಸಿದವನೆಂದರ್ಥ ; ರುದ್ರದೇವರ ದೇಹದಿಂದ ಗಣಪತಿಯು ಜನಿಸಲಿಲ್ಲ ; ಹೀಗಿರಲು ರುದ್ರಸಂಭವನೆಂದೇಕೆ ಹೇಳಿದರೆಂದರೆ :—ಅದೇ ಗಣೇಶನ ಕಥೆಯಲ್ಲಿ ಹೇಳುವದೇನೆಂದರೆ—ಪಾರ್ವತೀದೇವಿಯರು ಗಣಪತಿಯನ್ನು ಸೃಷ್ಟಿಸಿ, ತಮ್ಮ ಮನೆಯ ಬಾಗಿಲಲ್ಲಿ ದ್ವಾರಪಾಲಕನನ್ನಾಗಿ ಇಟ್ಟು ತಾವು ಸ್ನಾನಮಾಡಲು ಹೋಗುವದಾಗಿಯೂ, ಅವರೆಗೂ ಯಾರನ್ನೂ ಒಳಗ ಬಿಡಬೇಡವೆಂದು ಅಪ್ಪಣೆಯನ್ನಿತ್ತು ಒಳಭಾಗದಲ್ಲಿ ಸ್ನಾನಕ್ಕೆ ಹೊರಟುಹೋದರು. ಆಸಮಯದಲ್ಲಿ ಹೊರಗೆಹೋಗಿದ್ದ ರುದ್ರದೇವರು ಒಳಗೆ ಪ್ರವೇಶಿಸಲುದ್ಯುಕ್ತರಾಗಲು ಅವರನ್ನು ತಂದೆಯೆಂದರಿಯದೆ ಒಳಗೆಪ್ರವೇಶ ಮಾಡಕೂಡದೆಂದು ತಡೆದನು. ರುದ್ರದೇವರು ಕೋಪದಿಂದ ಅವನ ತಲೆಯನ್ನುಛೇಧಿಸಿ ಸಂಹರಿಸಿದರು. ತದನಂತರ ಪಾರ್ವತೀದೇವಿಯರು ಇದನ್ನುತಿಳಿದು ತಮ್ಮ ಪುತ್ರನು ಹೋದನೆಂದು ಪ್ರಲಾಪಮಾಡಲು, ರುದ್ರದೇವರು ಸಮಾಧಾನಗೊಳಿಸಿ ತಮ್ಮ ಭೃತ್ಯರನ್ನು ಕರೆದು, ಉತ್ತರಾಭಿಮುಖವಾಗಿ ತಲೆಯನ್ನಿಟ್ಟು ಯಾವನು ಮಲಗಿದ್ದರೂ ಅವನ ತಲೆಯನ್ನು ಕತ್ತರಿಸಿ ತೆಗೆದುಕೊಂಡು ಬನ್ನಿರಿ ಎಂದು ಅಪ್ಪಣೆ ಇತ್ತರು. ಆದರಂತೆ ರುದ್ರಭಟರು ಹುಡುಕುವಾಗ ಒಂದು ಆನೆಯುಹೊರತು ಬೇರೆ ಯಾವ ಮನುಷ್ಯನೂ ಉತ್ತರಶಿರಸ್ಸಾಗಿ ಮಲಗಿರಲಿಲ್ಲ. ಆಗ

ಅದೇ ಆನೆಯತಲೆಯನ್ನು ಕಡೆದುತಂದರು. ರುದ್ರದೇವರು ಆ ತಲೆಯನ್ನು ಮೃತನಾದ ಪುತ್ರನಮುಂಡಕ್ಕೆ ಜೋಡಿಸಿ ಅವನನ್ನು ಬದುಕಿಸಿ ಅವನನ್ನು ತಮ್ಮ ಭೂತಗಣಗಳಿಗೆ ಪತಿಯನ್ನಾಗಿಮಾಡಿ, ವರವನ್ನಿತ್ತರು ಆದ್ದರಿಂದ ಗಣಪತಿಪೂಜೆಯನ್ನು ಮಾಡಬೇಕೆಂದು ಹೇಳಿರುವರು. ಇದರಿಂದ ಮೊದಲು ಸೃಷ್ಟಿ ಪಾರ್ವತೀದೇವಿಯಿಂದಲೂ, ಅವನು ಮೃತನಾದಮೇಲೆ ಪುನಃ ರುದ್ರದೇವರೇ ಸೃಷ್ಟಿಸಿದುದರಿಂದ ಮಹೇಶಸಂಭವನೆಂದು ಹೇಳಲು ಕಾರಣವಾಯಿತು. ನಿನ್ನನ್ನು ಪ್ರತಿದಿವಸದಲ್ಲೂ ಪ್ರಾರ್ಥಿಸುವೆನು ; ನನ್ನ ಮನಸ್ಸಿನಲ್ಲಿ ನೀನು ಪ್ರಕಾಶಿಸುತ್ತಾ ನಾನು ಮಾಡುವ ಕಾರ್ಯಗಳು ನಿರ್ವಿಘ್ನವಾಗಿ ನಡೆಯುವಂತೆ ಮಾಡು. ಸಜ್ಜನರನ್ನೂ ಇದರಂತೆಯೇ ಉದ್ಧರಿಸು ! ಎಲೈ ವೇದವ್ಯಾಸ ಕರುಣಾಪಾತ್ರ ! ಇದೇನು ! ಭಗವದವತಾರಗಳು ಅನೇಕವಿರಲು, ಮೂಲರೂಪವಿರಲು. ವೇದವ್ಯಾಸ ಕೃಪಾಪಾತ್ರನೆಂದೇಕೆ ಹೇಳಬೇಕೆಂದರೆ ; ವೇದವ್ಯಾಸದೇವರು ಮಹಾಭಾರತವನ್ನು ಮಾಡಿದಾಗ ಈ ದೊಡ್ಡ ಗ್ರಂಥವನ್ನು ಬರೆದು ಮುಗಿಸುವರು ಯಾರೆಂದು ಯೋಚಿಸಿ, ಗಣಪತಿಯನ್ನು ಸ್ಮರಣೆಮಾಡಲು ಗಣಪತಿಯು ಅಲ್ಲಿಗೆಬಂದು ವೇದವ್ಯಾಸರ ಅಪ್ಪಣೆಯಂತೆ ಭಾರತವನ್ನು ಬರೆದು ಮುಗಿಸಿದನು. ಆದುದರಿಂದ ಇವನಲ್ಲಿ ಪರಮಾನುಗ್ರಹಮಾಡಲು ಕಾರಣವಾಯಿತು. ಅವನ್ನು ಮನಸ್ಸಿನಲ್ಲಿಟ್ಟು ದಾಸಾರ್ಯರು ವೇದವ್ಯಾಸ ಕೃಪಾಪಾತ್ರನೆಂದರು ಮಹದಾಕಾಶಪತಿ ಎಂದರು. ೨೪ ತತ್ವಗಳ ಪೈಕಿ, ಪಂಚಮಹಾಭೂತಗಳು ಈ ಅವುಗಳಲ್ಲಿ ಒಂದಾದ ಆಕಾಶತತ್ವಕ್ಕೆ ಅಧಿಪತಿಯು ಗಣಪತಿಯೆಂದು ತತ್ವನ್ಯಾಸ ಮಂತ್ರದಲ್ಲಿ “ ಓಂಪರಾಯ ಆಕಾಶಾತ್ಮನೇ ಮಹಾಗಣಪತಯೇನಮಃ ” ಎಂದು ಹೇಳಿರುವರು. ಇದಕ್ಕೆ ಆಧಾರವು ಶ್ರೀಮನ್ಮಧ್ವಾಚಾರ್ಯರು ಮಾಡಿದ ತಂತ್ರಸಾರವೆಂಬ ಗ್ರಂಥವು. ಎಲೈ ಕರುಣಾಳೂ ! ನನ್ನನ್ನು ಕೃಪೆಮಾಡಿ ಉದ್ಧರಿಸೋ ಎಂದು ಪ್ರಾರ್ಥನೆ ಮಾಡಿದರೆಂಬ ತಾತ್ಪರ್ಯ.

ಏಕದಂತ ಇಭೇಂದ್ರಮುಖ ಚಾ
ಮೀಕರಕೃತ ವಿಭೂಷಣಾಂಗ ಕೃ
ಪಾಕಟಾಕ್ಷದಿನೋಡು ವಿಜ್ಞಾಪಿಸುವೆ ನಿನಗೆ ತೆಂದು ||
ನೋಕನೀಯನ ಸ್ತುತಿಸುತಿಪ್ಪನಿ
ವೇಕಿಗಳ ಸಹವಾಸ ಸುಖಗಳ
ನೀಕರುಣಿಸುವದೆನಗೆ ಸಂತತ ಪರಮಕರುಣದಲಿ ||೨||

ಪದ್ಯಾರ್ಥ.—ಏಕದಂತ=ಒಂದು ದಂತಉಳ್ಳವನು, ಇಭೇಂದ್ರಮುಖ=ಗಜಶ್ರೇಷ್ಠದ ಮುಖವುಳ್ಳವನು, ಚಾಮೀಕರಕೃತ = ಭಂಗಾರದಿಂದ ಕೃತವಾದ, ಭೂಷಣಾಂಗ=ಆಭರಣಗಳಿಂದ ಅಲಂಕೃತವಾದ ಶರೀರ ಉಳ್ಳವನು ; ಇಂತಹಾ ವಿಘ್ನರಾಜನೆ ! ಕೃಪಾಕಟಾಕ್ಷದಿ=ನಿನ್ನ ಕರುಣಾದೃಷ್ಟಿಯಿಂದ ನೋಡು ! ಇನಿತೆಂದು ವಿಜ್ಞಾಪಿಸುವೆನು, ನೋಕನೀಯನ=ಯಾವಕಾಲದಲ್ಲೂ ಚಿಕ್ಕವನಾಗದ ಬ್ರಹ್ಮಾದಿಗಳಿಗಿಂತಲೂ ಉತ್ತಮನಾದುದರಿಂದ ಇವನಿಗಿಂತಲೂ ದೊಡ್ಡವರು ಯಾರೂ ಇಲ್ಲವೆಂಬ ತಾತ್ಪರ್ಯ, ಇಂತಹಾ ಪರಮಾತ್ಮನನ್ನು ಸ್ತುತಿಸುತಿಪ್ಪ, ವಿವೇಕಿಗಳ ಸಹವಾಸಸುಖಗಳನ್ನು ನೀ=ನೀನು, ಸಂತತ = ಸರ್ವಕಾಲದಲ್ಲೂ, ಪರಮಕರುಣದಲ್ಲಿ ಎನಗೆ=ನನಗೆ, ಕರುಣಿಸುವುದು = ದಯಪಾಲಿಸಬೇಕು, ಕೊಡಬೇಕೆಂದು ತಾತ್ಪರ್ಯ,

ತಾತ್ಪರ್ಯ. –ಎಲೈ ಏಕದಂತ ! ಇಭೇಂದ್ರಮುಖನೆಂದರೆ ಆನೆ ಶ್ರೇಷ್ಠದ ಮುಖವೆಂದರ್ಥ, ವಿಘ್ನರಾಜನಿಗೆ ಆನೆಯಮುಖಬರಲು ಕಾರಣವನ್ನು ಮೊದಲನೆಯ ಪದ್ಯದ ತಾತ್ಪರ್ಯದಲ್ಲಿ ಬರೆದಿದೆ, ಎಲೈ ಗಜಮುಖನೆ ಭಂಗಾರದ ಆಭರಣಗಳಿಂದ ಅಲಂಕರಿಸಲ್ಪಟ್ಟ ಅಂಗವುಳ್ಳವನೆ ! ನನ್ನನ್ನು ಕರುಣಾಕಟಾಕ್ಷದಿಂದ ನೋಡು ! ನೋಕನೀಯನೆಂದರೆ, ಕನೀಯನೆಂದರೆ ಚಿಕ್ಕವನೆಂದರ್ಥ. ನೋಕನೀಯನೆಂದರೆ ಅದಲ್ಲದವನು ದೊಡ್ಡವನೆಂದರ್ಥ. ಬ್ರಹ್ಮದೇವರಿಗೂ ತಂದೆಯಾದುದರಿಂದ ತಾರತಮ್ಯದಲ್ಲಾಗಲಿ ಮಿಕ್ಕ ಯಾವ ವಿಷಯಗಳಲ್ಲಾದರೂ ಪರಮಾತ್ಮನನ್ನು ಮೀರಿದವರಾರು ? ಆದುದರಿಂದ " ನಕರ್ಮಣಾ ವರ್ಧತೇ ನೋಕನೀಯಾನ್ " ಎಂಬ ಶ್ರುತಿಯು ಕರ್ಮಾದಿಗಳಿಂದ ವೃದ್ಧಿಯನ್ನು ಹೊಂದುವವನಲ್ಲ, ಯಾವಾಗಲೂ ದೊಡ್ಡವನಾಗಿಯೇ ಇರುವನೆಂದು ಹೇಳುವರು. ಆ ಅಭಿಪ್ರಾಯವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಇಂತಹಾ ಪರಮಾತ್ಮನನ್ನು ಸದಾ ಸ್ತುತಿಸುತ್ತಿರುವ ಮಹಾತ್ಮರ ಸಹವಾಸವೇ ಒಂದು ಮಹಾನಂದವು ; ಅಂತಹಾ ಆನಂದವು ಸರ್ವದಾ ನನಗೆ ದೊರಕುವಂತೆ ನೀನು ಕರುಣದಿಂದ ದಯಪಾಲಿಸಬೇಕೆಂದು ನಿನ್ನಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆಂದು ದಾಸಾರ್ಯರು ಪ್ರಾರ್ಥಿಸಿರುತ್ತಾರೆ.

ವಿಘ್ನರಾಜನೆ ದುರ್ವಿಷಯದೊಳು
ಮಗ್ನವಾಗಿಹ ಮನವು ಮಹದೋ
ಷಘ್ನನಂಘ್ರಿ ಸರೋಜಯುಗಳದಿ ಭಕ್ತಿಪೂರ್ವಕದಿ ||
ಲಗ್ನವಾಗಲಿ ನಿತ್ಯನರಕ ಭ
ಯಾಗ್ನಿಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಳನು ಪ್ರತಿದಿವಸದಲ್ಲಿ ೩||

ಪದ್ಯಾರ್ಥ.—ವಿಘ್ನರಾಜನೆ! ದುರ್ವಿಷಯದೊಳು=ಸದ್ಯಕ್ಕೆ ವಿಷಯ ಭೋಗವು ಅಲ್ಪಮಾತ್ರ ಸುಖವಾಗಿ ತೋರಿದರೂ ಅನಂತರದಲ್ಲಿ ಬಹಳ ದುಃಖಕರವಾಗಿರುವದು. ಆದುದರಿಂದ ಅವು ದುರ್ವಿಷಯಗಳೆನಿಸುವವು. ಇಂತಹಾ ದುರ್ವಿಷಯಗಳಲ್ಲಿ, ಮಗ್ನವಾಗಿಹ=ಮುಣಿಗಿಹೋಗಿರುವ, ಮನವು=ನನ್ನ ಮನಸ್ಸು, ಮಹದೋಷಘ್ನನ=ಸ್ಮರಣೆ ಮಾತ್ರದಿಂದ ಮಹಾ ದೋಷಗಳನ್ನು ಪರಿಹರಿಸುವ ಶ್ರೀ ಪರಮಾತ್ಮನ, ಅಂಘ್ರಿ ಸರೋಜಯುಗಳದಿ=ಪಾದಕಮಲ ದ್ವಂದ್ವಗಳಲ್ಲಿ (ಎರಡು ಪಾದಗಳೆಂಬ ಕಮಲಗಳಲ್ಲಿ) ಭಕ್ತಿಪೂರ್ವಕದಿ, ಲಗ್ನವಾಗಲಿ=ಶೇರಿಕೊಳ್ಳಲಿ, ಆನು—ನಾನು, ನಿತ್ಯ=ನಿತ್ಯದಲ್ಲೂ, ನರಕಭಯ=ನರಕ ಬರುವದೆಂಬ ಭಯಕ್ಕಾಗಲಿ, ಅಗ್ನಿಗಳಿಗೆ=ಅಗ್ನಿ ನನ್ನನ್ನು ಸುಡುವದೆಂದಾಗಲಿ ಇಂತಹಾ ನರಕ, ಅಗ್ನಿ ಮೊದಲಾದ ಭಯಗಳಿಗೆ, ಅಂಜೆ=ಭಯಪಡಲಾರೆನು ; ಎಲೈ ಗುರುವರ! ಪ್ರತಿದಿವಸದಲ್ಲಿ, ಎನ್ನವಗುಣಗಳನ್ನು, ಭಗ್ನಗೈಸು=ಪರಿಹರಿಸು (ನಾಶಗೊಳಿಸು).

ತಾತ್ಪರ್ಯ.—ವಿಷಯಸುಖಗಳೆಂದರೆ ವಶೇಂದ್ರಿಯಗಳಿಗೆ ಮನಸ್ಸಂಬಂಧದಿಂದ ಅನುಭವಿಸುವ ಸುಖದುಃಖಗಳು ಅಂದರೆ, ಕಣ್ಣಿನಿಂದನೋಡುವದು, ಕಿವಿಯಿಂದ ಕೇಳುವುದು ಮೊದಲಾದವು ಜ್ಞಾನೇಂದ್ರಿಯ ವ್ಯಾಪಾರಗಳು ; ಕೈಯಿಂದ ಕೆಲಸಗಳನ್ನು ಮಾಡುವದು ; ಕಾಲಿನಿಂದ ನಡೆಯುವದು, ಗುಹ್ಯೇಂದ್ರಿಯಾದಿಗಳಿಂದ ಸ್ತ್ರೀಯಾದಿ ಭೋಗವನ್ನನುಭವಿಸುವದು ಮೊದಲಾದುವು ಕರ್ಮೇಂದ್ರಿಯ ವ್ಯಾಪಾರವು. ಈ ಇಂದ್ರಿಯಗಳನ್ನು, ಭಗವತ್ಪ್ರೀತಿಗೋಸ್ಕರವಾಗಿ ಉಪಯೋಗಿಸಿದರೆ ಸದ್ವಿಷಯವೆಂತಲೂ, ತನ್ನ ದೇಹಸೌಖ್ಯಕ್ಕಾಗಿ ಉಪಯೋಗಪಡಿಸಿದರೆ ದುರ್ವಿಷಯವೆಂತಲೂ, ಹೆಸರಾಗುವವು ; ನಾವು ಸ್ತ್ರೀಯಾದಿಭೋಗದಿಂದ ಅನುಭವಿಸುವ ಸುಖವು ಎಷ್ಟು

ಮಾತ್ರವೆಂದರೆ—ಸಪ್ತಮಸ್ಕಂಧ ಭಾಗವತದಲ್ಲಿ ಪ್ರಹ್ಲಾದನ ಸ್ತುತಿಯಲ್ಲಿ " ಯನ್ಮೈಥುನಾದಿ ಗೃಹಮೇಧಿಸುಖಂಹಿ ತುಚ್ಛಂ ಕಂಡೂಯನೇನಕರಯೋರಿವ ದುಃಖದುಃಖಂ || ತೃಪ್ಯಂತಿ ದೇಹಕೃಪಣಾ ಬಹುದುಃಖ ಭಾಜಃ ಕಂಡೂತಿವನ್ಮನಸಿಜಂ ವಿಷಹೇತಧೀರಃ || " ಗೃಹಸ್ಥಾಶ್ರಮದಲ್ಲಿದ್ದು ಸ್ತ್ರೀಯಾದಿ ಭೋಗದಿಂದ ಆಗುವ ಸುಖವನ್ನು ಗೃಹಸ್ಥರು ಸುಖವೆಂದು ಭಾವಿಸುವರು ಆದರೆ ಅದು ನಿಜವಾದ ಸುಖವಲ್ಲ, ದುಃಖದೊಳಗೂ ಪರಮ ದುಃಖಕರವೆಂದು ಹೇಳಬೇಕಾಗುವುದು, ಏನೆಂದರೆ.—ಕೈಗಳಿಗೆ ತುರಿಹತ್ತಿ ತಿಂಡಿಗೆ ಆರಂಭವಾದಾಗ ಕೈಗೆ ಏನು ಶಿಕ್ಕಿದರೂ ಅದರಿಂದ ತಿಕ್ಕಲುಪಕ್ರಮಿಸಿ, ಆ ತಿಂಡಿಯನ್ನು ( ನವೆಯನ್ನು ) ಪರಿಹರಿಸಿಕೊಳ್ವರು. ಅದರಿಂದ ಸ್ವಲ್ಪಹೊತ್ತು ನವೆತೀರುವವರೆಗೂ ಸ್ವಲ್ಪ ಸುಖಕಾಣುವದು. ಅದರಮೇಲೆ ಅದರಿಂದ ದುರ್ನೀರು ಅಥವಾ ರಕ್ತವುಬಂದು ಪರಮ ದುಃಖವನ್ನನುಭವಿಸುವರು. ಇದರಂತೆ ತಿಂಡಿ ಹತ್ತಿದಾಗ ತುರಿಸಿಕೊಳ್ಳುವವನಿಗೆ ಎಷ್ಟು ಆನಂದವೋ ಅಷ್ಟು ಆನಂದವು ವಿಷಯಭೋಗದಿಂದಾಗುವದು. ತದನಂತರ ದುಃಖಪ್ರಾಪ್ತಿ ಹೇಗೋ ಹಾಗೆಯೇ ಉತ್ತರೋತ್ತರ ನರಕಾದಿಗಳಲ್ಲಿ ನಾನಾ ಯಾತನೆಯನ್ನನುಭವಿಸಬೇಕಾಗುವದು. ಈ ಅಲ್ಪವಾದ ವಿಷಯಸುಖದಿಂದ ತೃಪ್ತಿಪಡುವವರು ಕೇವಲ ತಮ್ಮ ಉದರಪೋಷಣ ನಿರತರಾರೋ ಅವರೇ ಇದರಿಂದ ತೃಪ್ತರಾಗುವರೇ ಹೊರತು ಜ್ಞಾನಿಗಳು ವಿಷಯವನ್ನಪೇಕ್ಷಿಸರು. ಧೀರನಾದವನು ತಿಂಡಿಹತ್ತಿದ ಕಾಲದಲ್ಲಿ ಸ್ವಲ್ಪ ನವೆಯನ್ನು ತಡೆದುಕೊಂಡು ಕೈಯ್ಯಿಂದ ಮುಟ್ಟದೆ ಇದ್ದುಬಿಟ್ಟರೆ ತುರಿಸುವಕಾಲದಲ್ಲಿ ಆಗುವ ಅಲ್ಪ ಸುಖವೂ ಇಲ್ಲ. ತದನಂತರವಾಗುವ ಅಪಾರವಾದ ದುಃಖವೂ ಇಲ್ಲ. ಇದರಂತೆ ಕಾಮುಕ್ಕೊಳಗಾಗಿ ಸ್ತ್ರೀಯಾದಿ ಭೋಗಗಳ ಅಲ್ಪ ಸುಖಕ್ಕಾಗಿ ಆಶೆಪಟ್ಟು ಅನಂತರ ಅಪಾರ ದುಃಖವನ್ನನುಭವಿಸುವುದಕ್ಕಿಂತಲೂ ತಿಂಡಿಯನ್ನು ತಡೆಯುವಂತೆ ಕಾಮವನ್ನು ತಡೆದು ಅದರಲ್ಲಿ ಪ್ರವರ್ತಿಸದಿದ್ದರೆ, ಅದರಿಂದಾಗುವ ಅಲ್ಪಸುಖವೂ ಅನಂತರದಲ್ಲಾಗುವ ಅಪಾರವಾದ ದುಃಖವೂ ಆಗುವ ಸಂಭವವೇ ಇಲ್ಲ. ಧೀರನಾದವನು ಇಂದ್ರಿಯನಿಗ್ರಹ ಮಾಡಬೇಕೆಂದು ಪ್ರಹ್ಲಾದನ ವಾಕ್ಯವಿರುವದು. ಆದುದರಿಂದ ದಾಸಾರ್ಯರು ದುರ್ವಿಷಯಗಳಲ್ಲಿ ನನ್ನ ಮನಸ್ಸು ಮಗ್ನವಾಗದೆ ಪರಮಾತ್ಮನ ಪಾದಾರವಿಂದಂಗಳಲ್ಲಿ ಮನಸ್ಸು ನೆಲಸಿರುವಂತೆ ಮಾಡೆಂದು ಪ್ರಾರ್ಥಿಸುವರು. ಇಂದ್ರಿಯ

ನಿಗ್ರಹವು ಸಾಮಾನ್ಯವಲ್ಲ. ಬಹಳ ಕಷ್ಟಸಾಧ್ಯವು. ಆದುದರಿಂದ ಅದು ದೇವತಾಪ್ರಸಾದದಿಂದ ಆಗಬೇಕೆಂದು ವಿಘ್ನೇಶ್ವರನನ್ನು ಬೇಡಿಕೊಂಡರೆಂಬ ತಾತ್ಪರ್ಯ. ಇದಲ್ಲದೆ ಜ್ಞಾನಿಗಳು ಸಂಸಾರವನ್ನು ಕಂಡು ಹೆದರುವಂತೆ ನರಕಕ್ಕಾಗಲೀ, ಅಗ್ನಿ ಮೊದಲಾದ ಯಾವ ವಿಧವಾದ ಬಾಧೆಯು ಬಂದರೂ ಅವುಗಳಿಗೆ ಹೆದರುವುದಿಲ್ಲ. ಪ್ರತ್ಯುತ ಕಷ್ಟಬರಲೆಂದು ಬೇಡುವರು. ಸುಖ ಬಂದಾಗ ಪರಮಾತ್ಮನನ್ನು ಮರತುಬಿಡುವರು. ಕಷ್ಟಬಂದಾಗ ಯೋಗ್ಯರು ಭಗವಂತನನ್ನು ಬಿಡದೆ ಸ್ಮರಿಸುವರು. ಭಾಗವತ ಪ್ರಥಮ ಸ್ಕಂಧದಲ್ಲಿ ಕುಂತೀದೇವಿಯು ಶ್ರೀಕೃಷ್ಣನನ್ನು ಸ್ತೋತ್ರಮಾಡುವ ಸಂದರ್ಭದಲ್ಲಿ "ವಿಪದಸ್ಸಂತುನಃ ಶಶ್ವತ್ತತ್ರ ತತ್ರಜಗತ್ಪತೇ ॥ ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಂ ॥" ಎಲೈ ಜಗತ್ಪತಿಯೇ ! ನಮಗೆ ಆಗಿಂದಾಗ್ಗೆ ಈಗಿನಂತೆಯೇ ಮೇಲ್ಮೇಲೆ ವಿಪತ್ತುಗಳು ಬರುತ್ತಿರಲಿ ! ಇದೇ ನನ್ನ ಕೋರಿಕೆಯು, ಏಕೆಂದರೆ ವಿಪತ್ತು ಬಂದರೆ ನಿನ್ನ ಸ್ಮರಣೆಯು ಬರುವುದು. ನಿನ್ನ ಸ್ಮರಣೆಯಿಂದ ನಿನ್ನ ದರ್ಶನವಾಗುವುದು. ನಿನ್ನ ದರ್ಶನದಿಂದ, ಯಾವ ಲೋಕಕ್ಕೆ ಹೋದರೆ ಪುನರ್ಜನ್ಮವಿಲ್ಲವೋ ಅಂತಹಾ ಮುಕ್ತಿಯು ಲಭಿಸುವದು. ಎಂದು ಕಷ್ಟವನ್ನೇ ಬೇಡಿರುವಳು. ಸಂಸಾರದಲ್ಲಿ ಬಿದ್ದು ಕಷ್ಟಪಡುವ ವಿಷಯದಲ್ಲಿ ಭಗವದ್ಭಕ್ತರು ಎಷ್ಟು ಭಯಪಡುವರೋ ಅಷ್ಟು ಭಯವು ಮತ್ತಾವುದರಿಂದಲೂ ಅವರಿಗಿಲ್ಲ. ಪ್ರಹ್ಲಾದನ ಸ್ತೋತ್ರದಲ್ಲಿ, ಭಯಂಕರವಾದ ಉಗ್ರನರಸಿಂಹರೂಪವು ಇಂದ್ರಾದಿ ದೇವತೆಗಳೆಲ್ಲರೂ ಭಯಪಡುವಂತೆ ಭಯಂಕರವಾಗಿದ್ದಾಗ ಪ್ರಹ್ಲಾದನು ಹೇಳಿದ ಮಾತೆಂತೆನೆ.—"ನಾಹಂ ಬಿಭೇಮ್ಯಜಿತತೇತಿ ಭಯಾನಕಸ್ಯ ಜಿಹ್ವಾಗ್ನಿ ನೇತ್ರಭ್ರುಕುಟೀರಭಸೋಗ್ರದಂಷ್ಟ್ರಾತ್ ॥ ಆಂತ್ರಸ್ರಜಃ ಕ್ಷತಜಕೇಸರ ಶಂಕುಕರ್ಣಾನ್ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥ ತ್ರಸ್ತೋಸ್ಮ್ಯಹಂ ಕೃಪಣವತ್ಸಲ ದುಸ್ಸಹೋಗ್ರೇ ಸಂಸಾರ ಚಕ್ರಕದನಾತ್ಕೃಶತಾಂ ಪ್ರಣೀತಃ ॥" ಎಲೈ ಅಜಿತ ! ನಿನ್ನ ಭಯಂಕರವಾದ ಈ ರೂಪದ, ನಾಲಿಗೆ, ಅಗ್ನಿಯಂತೆ ಪ್ರಜ್ವಲಿಸುವ ಕಂಗಳು; ಹುಬ್ಬುಗಳು, ಉಗ್ರವಾದ ಕೋರೆಹಲ್ಲುಗಳು, ಈ ಕರಳುಮಾಲೆ, ದೇಹದಲ್ಲಲ್ಲಿ ನಮ್ಮ ತಂದೆಯನ್ನು ಸೀಳಿ ಅದರಿಂದ ಹೊರಟ ರಕ್ತದಿಂದ ತೋಯಲ್ಪಟ್ಟ ದಾಡಿ, ತಲೆಯಮೇಲೆ ಗೂಟದಂತೆ ಕಾಣುವ ಕಿವಿಗಳು ದಿಗ್ಗಜಗಳನ್ನು ಹೆದರಿಸಿದ ನಿನ್ನ ಸಿಂಹ ಧ್ವನಿ, ಶತೃವನ್ನು ಸೀಳಿದ

ಉಗರುಗಳು ಇವುಗಳಿಗೆಲ್ಲಾ ನಾನು ಹೆದರುವವನಲ್ಲ. ಮತ್ತಾವುದಕ್ಕೆ ಹೆದರುವೆ ? ಅಂದರೆ.—ದುಃಸಹವಾದ, ರುದ್ರದೇವರನ್ನು ಸಹ ನುಂಗಿಬಿಡುವಷ್ಟು ಉಗ್ರವಾದ ಸಂಸಾರ ಚಕ್ರದಲ್ಲಿ ಎಲ್ಲಿ ತಗಲಬೇಕಾಗುವದೋ ಎಂಬ ಹೆದರಿಕೆಯು ನನ್ನನ್ನು ಕೃಶಾಂಗನನ್ನಾಗಿ ಮಾಡುವದು. ಇದರಿಂದ ಕೃಶನೇಕಾಗುವೆ ? ಎಂದರೆ " ಚಿಂತಾಸಮೋನಾಸ್ತಿ ಶರೀರಶೋಷಣೇ " ಎಂಬ ವಾಕ್ಯದಂತೆ ಚಿತೆಗೆ ಸಮವಾಗಿ ದೇಹವನ್ನು ಶುಷ್ಕಮಾಡುವದು ಮತ್ತಾವುದೂ ಅಲ್ಲ. ಆದ್ದರಿಂದ ನನ್ನನ್ನೆಲ್ಲಿ ಸಂಸಾರದಲ್ಲಿ ಹಾಕಿಬಿಡುವೆಯೋ ಎಂಬ ಚಿಂತೆಯೇ ನನ್ನನ್ನು ಕೃಶನನ್ನಾಗಿ ಮಾಡುವದು. ಎಂದು ಪ್ರಹ್ಲಾದನು ನರಸಿಂಹದೇವರನ್ನು ಸ್ತುತಿಸಿರುವನು. ಅದರಂತೆ ದಾಸಾರ್ಯರು, ನರಕ, ಅಗ್ನಿ ಮೊದಲಾದವುಗಳಿಗೆ ಹೆದರುವದಿಲ್ಲ. ದುರ್ವಿಷಯದಲ್ಲಿ ಮನಸ್ಸು ಎಲ್ಲಿ ಬೀಳುವದೋ ಎಂಬ ಹೆದರಿಕೆಯುಂಟೆಂದು ಅದರ ಪರಿಹಾರವನ್ನು ಬೇಡಿದರೆಂಬ ಭಾವ. ದುರ್ವಿಷಯರೂಪವೇ ಸಂಸಾರವೆಂದು ತಾತ್ಪರ್ಯ. ಎಲೈ ವಿಷ್ನೇಶ್ವರನೇ ! ನನ್ನಲ್ಲಿ ಏನು ಅವಗುಣಗಳು ಇದ್ದರೂ ಅವುಗಳನ್ನು ಪರಿಹರಿಸಿ ನನ್ನನ್ನುದ್ಧರಿಸು. ಗುರುವರ " ಎಂದು ಗಣಪತಿಯನ್ನು ಸಂಬೋಧಿಸಿರುವರು. ಬ್ರಹ್ಮದೇವರು ಮೊದಲು ಮನುಷ್ಯೋತ್ತಮರ ಪರ್ಯಂತರ ತಾರತಮ್ಯ ಪ್ರಕಾರ ಎಲ್ಲರೂ ಗುರುಗಳಾದುದರಿಂದ ಗಣಪತಿಯು ಅವನವತಾರ ಪ್ರಕಾರ ಗುರುಶ್ರೇಷ್ಠನೆಂಬ ತಾತ್ಪರ್ಯ.

ಧನಪ ವಿಷ್ವಕ್ಸೇನ ವೈದ್ಯಾ
ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ
ನನುಜಶೇಷ ಶತಸ್ಥದೇವೋತ್ತಮವಿಯದ್ಗಂಗಾ ||
ವಿನುತವಿಶ್ವೋಪಾಸಕನೆ ಸ
ನ್ಮನದಿ ವಿಜ್ಞಾಪಿಸುವೆ ಲಕುಮಿ
ವನಿತೆಯರಸನ ಭಕ್ತಿಜ್ಞಾನವಕೊಟ್ಟು ಸಲಹುವದು ||೪||

ಪದ್ಯಾರ್ಥ.—ಧನಪ-ಕುಬೇರನು, ವಿಷ್ವಕ್ಸೇನ=ಪ್ರಧಾನವಾಯುಪುತ್ರನು, ವೈದ್ಯ=ದೇವತಾ ವೈದ್ಯರಾದ, ಅಶ್ವಿನಿಗಳಿಗೆ = ಅಶ್ವಿನೀದೇವತೆಗಳು ಇವರುಗಳಿಗೆ, ಸರಿಯೆನಿಪ= ತಾರತಮ್ಯದಲ್ಲಿ ಸಮಾನನೆನಿಸುವನು, ಮತ್ತು ಷಣ್ಮುಖನನುಜ = ಷಣ್ಮುಖನಿಗೆ ತಮ್ಮನಾದವನು, ಶೇಷಶತಸ್ಥ ದೇ

ವ್ರೋತ್ತಮ–ಉಕ್ತಶೇಷಶತರೆಂಬ ೮೫ ಜನರಿಗೆ ಉತ್ತಮನು, ವಿಯದ್ಗಂಗಾ ವಿನುತ=ಆಕಾಶಗಂಗೆಯಿಂದ ನಮಸ್ಕಾರಮಾಡಿಸಿಕೊಳ್ಳಲ್ಪಟ್ಟವನು, ವಿಶ್ವೋಪಾಸಕನೆ–ಬಿಂಬಮೂರುತಿಯಾದ ವಿಶ್ವಂಭರನನ್ನು ಉಪಾಸನೆಮಾಡುತ್ತಿರುವ ಎಲೈ ವಿಘ್ನರಾಜನೆ! ಲಕುಮಿಾವನಿತೆಯರಸನ=ಲಕ್ಷ್ಮೀದೇವಿಯರೆಂಬ ವನಿತೆಯರಿಗೆ ಪತಿಯಾದ ಶ್ರೀಪರಮಾತ್ಮನಲ್ಲಿ, ಭಕ್ತಿಜ್ಞಾನಕೊಟ್ಟು ಸಲಹುವದು. ಎಂದು, ಸನ್ಮನದಿ=ಉತ್ತಮವಾದ ಮನಸ್ಸಿನಿಂದ, ವಿಜ್ಞಾಪಿಸುವೆ – ವಿಜ್ಞಾಪನೆಮಾಡಿಕೊಳ್ಳುವೆನು.

ತಾತ್ಪರ್ಯ.—ಶ್ರೀವಿಘ್ನೇಶ್ವರನು, ಕುಬೇರ, ವಿಷ್ವಕ್ಸೇನ, ವೈದ್ಯರಾದ ಅಶ್ವಿನೀದೇವತೆಗಳು ಇವರಿಗೆ ತಾರತಮ್ಯದಲ್ಲಿ ಸಮನೆನಿಸುವನು. ಉಕ್ತಶೇಷಶತರೆಂಬ ೮೫ ದೇವತೆಗಳಿಗಿಂತಲೂ ಉತ್ತಮನು. ಗಂಗಾದೇವಿಯರಿಂದ ನಮಸ್ಕೃತನೆಂದಮೇಲೆ ಆಕೆಯಗಿಂತಲೂ ಪರಮೋತ್ತಮನೆಂದು ಹೇಳಿದಂತಾಯಿತು. ವಿಘ್ನೇಶ್ವರನು ತನ್ನಂತರ್ಯಾಮಿಯಾದ ವಿಶ್ವಂಭರಮೂರ್ತಿಯನ್ನು ಉಪಾಸನೆಮಾಡುತ್ತಿರುವನು ಇಂತಹಾ ಗುಣಗಳುಳ್ಳ ಎಲೈ ಗಣಪತೆ! ಲಕ್ಷ್ಮೀಪತಿಯಾದ ಪರಮಾತ್ಮನಲ್ಲಿ ದೃಢವಾದ ಭಕ್ತಿ, ಜ್ಞಾನವನ್ನು ಕೊಟ್ಟು ಸಲಹೆಂದು, ಏಕಾಗ್ರಚಿತ್ತನಾಗಿ ವಿಜ್ಞಾಪನೆ ಮಾಡಿಕೊಳ್ಳುವೆನು.

**ಚಾರುದೇಷ್ಣಾಹ್ವಯನೆನಿಸಿ ಅವ**
**ತಾರಮಾಡಿದೆ ರುಗ್ಮಿಣೀಯಲಿ**
**ಗೌರಿಯರಸನ ವರದಿ ವುದ್ಧಟರಾದ ರಾಕ್ಷಸರ ||**
**ಶೌರಿಯಾಜ್ಞದಿ ಸಂಹರಿಸಿ ಭೂ**
**ಭಾರ ಇಳುಹಿದ ಕರುಣಿ ತತ್ಪಾ**
**ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯಾ ||೫||**

ಪದ್ಯಾರ್ಥ.—ರುಗ್ಮಿಣೀಯಲಿ–ಶ್ರೀಕೃಷ್ಣನ ದೆಸೆಯಿಂದ ರುಗ್ಮಿಣೀದೇವಿಯಲ್ಲಿ, ಚಾರುದೇಷ್ಣಾಹ್ವಯನೆನಿಸಿ=ಚಾರುದೇಷ್ಣನೆಂಬ ಹೆಸರಿನಿಂದ ಪ್ರಸಿದ್ಧನಾಗಿ, ಅವತಾರಮಾಡಿದ, ಆ ಅವತಾರದಿಂದ, ಗೌರಿಯರಸನ=ರುದ್ರದೇವರ, ವರದಿ–ವರದಿಂದ, ಉದ್ಧಟರಾದ=ಅಹಂಕಾರದಿಂದ ಮಧಾಂಧರಾದ, ರಾಕ್ಷಸರ–ರಾಕ್ಷಸರನ್ನು, ಶೌರಿಯಾಜ್ಞದಿ = ಶ್ರೀಕೃಷ್ಣನ ಆಜ್ಞಾಪ್ರಕಾರ, ಸಂಹರಿಸಿ, ಭೂಭಾರ ಇಳುಹಿದ=ಭೂಮಿಯ ಭಾರವನ್ನು ಪರಿಹರಿ

ಸಿದ, ಕರುಣಿ–ಕರುಣಾಳುವಾದ ಎಲೈ ವಿಘ್ನರಾಜನೆ ! ತತ್ಪಾದಾರವಿಂದಕೆ= ನಿನ್ನ ಪಾದಕಮಲಗಳಿಗೆ, ನಮಿಪೆ=ನಮಸ್ಕರಿಸುವೆನು, ಎಮಗೆ – ನಮಗೆ, ಸನ್ಮತಿಯ=ಉತ್ತಮವಾದ ಭಗವತ್ಸಂಬಂಧವಾದ ಬುದ್ಧಿಯನ್ನು, ಕರುಣಿಪುದು–ದಯಪಾಲಿಸಬೇಕು.

ತಾತ್ಪರ್ಯ.—ರುಗ್ಮಿಣಿಯಲ್ಲಿ ಚಾರುದ್ವೇಷಣನೆಂದು ಗಣಪತಿಯು ಅವತರಿಸಿದ ವಿಷಯವು ೨೧ನೆಯ ಬೃಹತ್ತಾರತಮ್ಯ ಅಥವಾ ಅಂಶಾವತರಣ ಸಂಧಿಯ ೨೪ನೆಯ ಪದ್ಯದ ತಾತ್ಪರ್ಯದಲ್ಲಿ ನಿರ್ಣಯಾದಿಗಳ ಆಧಾರ ಪ್ರಮಾಣಗಳ ಸಹಿತ ಬರೆಯಲ್ಪಟ್ಟಿದೆ. "ಚಾರುದ್ವೇಷ್ಣಃ ಕೃಷ್ಣಸುತೋ ಸ ತುಪೂರ್ವಂ ವಿನಾಯಕಃ" ಎಂಬ ಅಂಶಾವತರಣದ ವಾಕ್ಯವೂ ಇದಕ್ಕೆ ಆಧಾರವಾಗಿರುವುದು. ಚಾರುದ್ವೇಷಣನಾಗಿರುವ ಕಾಲದಲ್ಲಿ ರುದ್ರದೇವರ ವರದಿಂದ ಮರಣವಿಲ್ಲದೆ ದರ್ಪಪೂರ್ಣರಾಗಿದ್ದ ರಾಕ್ಷಸ ಸ್ವಭಾವರಾದ ರಾಜರುಗಳನ್ನು ಕೃಷ್ಣನ ಅಪ್ಪಣೆಯಮೇರೆಗೆ ಸಂಹರಿಸಿ ಭೂಭಾರವನ್ನು ಪರಿಹರಿಸುವೆ ! ಎಲೈ ಕರುಣಾಸಮುದ್ರನೆ! ನಿನ್ನ ಪಾದಾರವಿಂದಗಳಿಗೆ ನಮಸ್ಕಾರಮಾಡುವೆನು. ನಮಗೆ ಭಗವದ್ವಿಷಯವಾಗಿ ಮನಸ್ಸು ಸ್ಥಿರವಾಗಲಿ ಎಂದು ಬೇಡಿಕೊಳ್ಳುವೆನು.

ಶೂರ್ಪಕರ್ಣವಿರಾಜಿತೇಂದುವ
ದರ್ಪದರ ಉದಿತಾರ್ಕಸನ್ನಿಭ
ಸರ್ಪವರ ಕಟಿಸೂತ್ರ ವೈಕೃತಗಾತ್ರ ಸುಚರಿತ್ರ ।
ಸ್ವರ್ಪಿತಾಂಕುಶಪಾಶಕರಖಿಲ
ದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿತೃಪ್ತಿಯಬಡಿಸು ಸಜ್ಜನರ ||೬||

ಪದ್ಯಾರ್ಥ — ಶೂರ್ಪಕರ್ಣ–ಮೊರದಂತೆ ಕಾಣುತ್ತಿರುವ ಕಿವಿಗಳಿಂದ, ವಿರಾಜಿತ=ಶೋಭಿಸುತ್ತಿರುವ, ಇಂದುವದರ್ಪಹರ=ಚಂದ್ರನ ದರ್ಪವನ್ನು ಪರಿಹರಿಸಿದ, ಉದಿತಾರ್ಕಸನ್ನಿಭ–ಆಗಲೇ ಉದಯವಾದ ಬಾಲಸೂರ್ಯನಂತೆ ಕಾಂತಿಸಂಪನ್ನನಾದ, ಸರ್ಪವರಕಟಿಸೂತ್ರ = ಸರ್ಪಶ್ರೇಷ್ಠನನ್ನೇ ಕಟಿಸೂತ್ರದಂತೆ ಧರಿಸಿರುವ, ವೈಕೃತಗಾತ್ರ–ವಿಕೃತಿ ಸಂಬಂಧವಾದ ಶರೀರವುಳ್ಳವ ಅಂದರೆ ದೇಹವೆಲ್ಲವೂ ಮನುಷ್ಯಾಕಾರವಾಗಿ ಮುಖಮಾತ್ರ

ಆನೆಯಾಗಿರುವುದರಿಂದ ವೈಕೃತಶರೀರನೆಂದರು. ವೈಕೃತಶರೀರವೆಂಬಮಾತ್ರದಿಂದ ನೋಡುವವರಿಗೆ ವಿಕಾರವಾಗಿ ಕಾಣುವನೋ ಹೇಗೋ ಎಂಬ ಸಂಶಯವನ್ನು ಪರಿಹರಿಸುವದಕ್ಕಾಗಿ ಸುಚರಿತ್ರ ಎಂದು ಹೇಳಿದರು. ಸರ್ವರಿಂದಲೂ ಸ್ತುತ್ಯವಾದ ಚರಿತ್ರೆ ಉಳ್ಳವನೆಂಬ ತಾತ್ಪರ್ಯ. ಸ್ವರ್ಪಿತ-ಚೆನ್ನಾಗಿ ಹಿಡಿದುಕೊಳ್ಳಲ್ಪಟ್ಟ, ಅಂಕುಶಪಾಶಕರ=ಅಂಕುಶ, ಪಾಶ, ಇವೆರಡಾಯುಧಗಳಿಂದ ಕೂಡಿದ ಕೈಗಳುಳ್ಳ ಖಳದರ್ಪಭಂಜನ=ಪಾಂಡವರ ದ್ವೇಷ, ಯಾದವ ದ್ವೇಷ; ಭಗವದ್ವೇಷ ಇವುಗಳನ್ನು ಮಾಡುತ್ತಿರುವ ಅಯೋಗ್ಯರಾದ ರಾಜರ ಅಹಂಕಾರವನ್ನು ಮುರಿದು ಮಹಾ ಶೂರನೆನಿಸಿದ, ಕರ್ಮಸಾಕ್ಷಿಗ=ಸಕಲ ಕರ್ಮಗಳನ್ನೂ ಸಾಕ್ಷಿಯಾಗಿ ನೋಡುತ್ತಿರುವ, ಎಲೈ ಮಹಾ ಗಣಪತಿಯೇ ! ತರ್ಪಕನು ನೀನಾಗಿ=ಸಾಧುಗಳ ಮನೋಭೀಷ್ಟ ಪೂರಕನು ನೀನಾಗಿ, ಸಜ್ಜನರ ತೃಪ್ತಿಪಡಿಸು.

ತಾತ್ಪರ್ಯ.—ಮೊರದಂತೆ ಕಿವಿಯುಳ್ಳವನೆಂದರು. ಹಾಗಾದರೆ ನೋಡುವವರಿಗೆ ಬಲು ವಿಕಾರವಾಗಿ ಕಾಣುವವಲ್ಲವೆ ಅಂದರೆ " ವಿರಾಜಿತ " ಎಂಬ ಪದದಿಂದ ಆನೆಯ ಮುಖವಾದುದರಿಂದ ಕಿವಿಗಳೂ ಅದರಂತೆ ಇಲ್ಲದಿದ್ದರೆ ಶೋಭಿಸಲಾರವು. ಆದುದರಿಂದ ಆ ಮುಖಕ್ಕೆ ತಕ್ಕಂತೆ ಮೊರಗಳಂತೇ ಎರಡು ಕಿವಿಗಳಿಂದ ಶೋಭಾಯಮಾನವಾಗಿರುವನೆಂಬ ಭಾವ. ಭಾದ್ರಪದ ಶುದ್ಧ ಚತುರ್ಥೀ ದಿವಸದಲ್ಲಿ ರುದ್ರದೇವರ ವರದಿಂದ ಪ್ರತಿ ಮನೆಯಲ್ಲೂ ಪೂಜೆಯನ್ನು ಸ್ವೀಕರಿಸಿ ಮೋದಕಗಳನ್ನು ಭಕ್ಷಿಸಿ ಕೈಯ್ಯಲ್ಲೂ ಧರಿಸಿಕೊಂಡು ಸಾಯಂಕಾಲ ಬರುವಾಗ ಗಣಪತಿಯು ಕೂತಿರುವ ಮೂಷಿಕವು ಸರ್ಪವನ್ನು ಕಂಡು ಹೆದರಿ ಎಡವಿ ಮುಗ್ಗರಿಸಲು ಮೇಲೆ ಕೂತಿದ್ದ ಗಣಪತಿಯು ಕೆಳಕ್ಕೆ ಬಿದ್ದ ಕಾಲದಲ್ಲಿ ಚಂದ್ರನು ಹಾಸ್ಯಮಾಡಿದನು. ಆ ಸಮಯದಲ್ಲಿ ಚಂದ್ರನ ಮೇಲೆ ಕೋಪದಿಂದ ಒಂದು ದಂತವನ್ನು ಕಿತ್ತು ಅವನನ್ನು ಹೊಡದು ಅಲ್ಲದೆ ಈ ದಿವಸದಲ್ಲಿ ಇನ್ನು ಮೇಲೆ ಯಾರೂ ಚಂದ್ರ ದರ್ಶನವನ್ನು ಮಾಡಬಾರದು. ಹಾಗೆ ಮಾಡಿದರೆ ಅವರಮೇಲೆ ಜಾರತ್ವವಾಗಲೀ ಚೋರತ್ವವಾಗಲೀ ಆರೋಪಿತವಾಗಲೆಂದು ಶಾಪವನ್ನು ಕೊಟ್ಟನು. ಈ ಕಥೆಯನ್ನು ಗಣೇಶನ ಕಥೆಯಲ್ಲಿ ಹೇಳಿರುವರು. ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಚಂದ್ರನ ದರ್ಪಹರನೆಂದು ಹೇಳಿದರು. ಗಣೇಶನು ಕೆಳಗೆ ಬಿದ್ದು ಹೊಟ್ಟೆಯೊಡೆದು

ಹೋಗಲು ಬಲವಾದ ಕಾರಣವಿಲ್ಲದೆ ಇರಲಿಕ್ಕಿಲ್ಲ. ಅದರ ಕಾರಣವನ್ನು ಅಗಸ್ತ್ಯೋಪಾಖ್ಯಾನವೆಂಬ ಮತ್ತೊಂದು ಗಣೇಶನ ಕಥೆಯಲ್ಲಿ ಹೇಳಿರುವರು. ಆದರೆ ಈ ಕಥೆಯನ್ನು ಗಣೇಶನ ಪೂಜೆಯ ದಿವಸ ಕಥಾ ಕೇಳುವಾಗ ಇದನ್ನಾ ಜನರು ಕೇಳಿರಬಹುದು. ಆದರೆ ಈ ಕಥೆಯು ಈಗಿನ ಭಾಷಾ ಪುಸ್ತಕವಲ್ಲಿಲ್ಲದುದರಿಂದ ಎಲ್ಲರಿಗೂ ತಿಳಿದಿರಬಾರದೆಂಬ ಉದ್ದೇಶದಿಂದಲೂ ಪ್ರಸಂಗಸಂಗತ್ಯಾ ಅದನ್ನು ಇಲ್ಲಿ ಸ್ವಲ್ಪ ಬರೆಯುತ್ತೇವೆ:— ಒಂದಾನೊಂದುಕಾಲವಲ್ಲಿ ಅಗಸ್ತ್ಯರು ಪರಮಾತ್ಮನನ್ನು ಕುರಿತು ತಪಸ್ಸುಮಾಡಿ ಪ್ರತಿದಿವಸವಲ್ಲಿಯೂ, ತಾವು ವಾಸಮಾಡುತ್ತಿದ್ದ ವಿಂಧ್ಯಪರ್ವತದ ದಕ್ಷಿಣ ಭಾಗದಿಂದ ಕಾಶೀಗೆ ಹೋಗಿ ಗಂಗೆಯಲ್ಲಿ ಸ್ನಾನಮಾಡಿ, ಗಂಗೋದಕವನ್ನು ತೆಗೆದುಕೊಂಡು ರಾಮೇಶ್ವರಕ್ಕೆ ಹೋಗಿ ರಾಮಲಿಂಗಕ್ಕೆ ಅಭಿಷೇಕಮಾಡಿ ಮತ್ತಾ ಸಾಯಂಕಾಲಕ್ಕೆ ತಮ್ಮ ಸ್ಥಾನವನ್ನು ಸೇರಬೇಕು. ಹೀಗೆ ಪ್ರತಿದಿವಸದಲ್ಲಿಯು ಮಾಡಬೇಕೆಂಬಾಶೆಯು ನನಗಿರುವದು. ಇದು ಪೂರ್ಣವಾಗುವಂತೆ ವರಕೊಡಬೇಕೆಂದು ಕೇಳಿಕೊಂಡರು. ಪರಮಾತ್ಮನು ಅವರ ತಪಸ್ಸಿಗೆ ಪ್ರೀತನಾಗಿ ಒಂದು ಕೌಪೀನವನ್ನು ಕೊಟ್ಟು ನಿನ್ನ ಉದ್ದೇಶದಂತೆ ನಿತ್ಯದಲ್ಲೂ ಕಾಶಿಯಿಂದ ಗಂಗೋದಕವನ್ನು ತೆಗೆದುಕೊಂಡು ಬಂದು ರಾಮೇಶ್ವರದ ರಾಮಲಿಂಗಕ್ಕೆ ಅಭಿಷೇಕ ಮಾಡುವ ಶಕ್ತಿಯು ನಿನಗೆ ಕೊಟ್ಟಿರುತ್ತೇನೆ. ಆದರೆ ಈ ಕೌಪೀನವನ್ನುಮಾತ್ರ ಎಂದಿಗೂ ಮಧ್ಯದಲ್ಲಿ ಕೆಳಗಿಡಬಾರದು. ಹಾಗೆ ಭೂಮಿಯಲ್ಲಿಟ್ಟರೆ ಕೌಪೀನವು ಒಡೆದುಹೋಗುವದು. ಅಂದಿನ ಮೊದಲು ಈ ಶಕ್ತಿಯು ನಿಂತು ಹೋಗುವದು ಎಂದು ವರವನ್ನಿತ್ತು ಮಾಯವಾದನು. ಅಗಸ್ತ್ಯರು ಭಗವದನುಗ್ರಹದಿಂದ ಪ್ರತಿದಿನದಲ್ಲೂ ಇದೇ ರೀತಿಯಾಗಿ ಗಂಗೋದಕದಿಂದ ರಾಮಲಿಂಗಕ್ಕೆ ಅಭಿಷೇಕವನ್ನು ಬಹುಕಾಲ ಮಾಡಿದರು; ದೈವಸಂಕಲ್ಪದಿಂದ ಒಂದಾನೊಂದು ದಿವಸ ಕಾಶಿಯಿಂದ ರಾಮೇಶ್ವರಕ್ಕೆ ಹೋಗುತ್ತಿರುವಾಗ ಮಾರ್ಗವಲ್ಲಿ ದೇಹಬಾಧೆಯುಂಟಾಗಿ (ಮಲಮೂತ್ರವಿಸರ್ಜನೆಯನ್ನು) ಮಾಡಿ ಶಂಕೆಯನ್ನು ಪರಿಹರಿಸಿಕೊಳ್ಳಬೇಕಾಗಿ ಬಂದಿತು. ಎಂದೂ ಇಲ್ಲದ ಆ ದಿವಸ ತಮಗೆ ಸಂಭವಿಸಿದಸಂಕಟವನ್ನು ಯೋಚಿಸಿ, ಮಲಬದ್ಧಿಸಿ ತೆಗೆದುಕೊಂಡು

ಹೋದರೆ ಆ ಗಂಗೋದಕವು ಅಭಿಷೇಕಕ್ಕೆ ಯೋಗ್ಯವಲ್ಲ. ಕೊಡವನ್ನು ಕೆಳಗಿಟ್ಟರೆ ಕೊಡವಡದು ಹೋಗುವುದು; ಇನ್ನು ಮಾಡುವುದೇನೆಂದು ಯೋಚಿಸುತ್ತಿದ್ದರು. ಅವತ್ತು ಭಾದ್ರಪದ ಶುದ್ಧ ಚತುರ್ಥಿ, ಗಣಪತಿಯು ಮನೆಮನೆಯಲ್ಲಿ ಪೂಜೆಯನ್ನು ಸ್ವೀಕರಿಸುವದರ ದೆಶೆಯಿಂದ ಮೂಷಿಕ ವಾಹನಾರೂಢನಾಗಿ ಬರುವುದನ್ನು ಕಂಡು, ಅವನನ್ನು ಕುರಿತು, ಎಲೈ ವಿಘ್ನೇಶ್ವರನೇ ! ಈ ಘಟವನ್ನು ಸ್ವಲ್ಪ ಹೊತ್ತು ಕೈಯ್ಯಲ್ಲಿ ಇಟ್ಟುಕೊಂಡಿರು ! ಇದು ಕೆಳಗಿಟ್ಟರೆ ಕೊಡವು ಪಡಮುಹೋಗುವದು. ಮುಂದೆ ನಾನು ಮಾಡುತ್ತಿರುವ ಮಹಾಕಾರ್ಯವು ನಿಂತುಹೋಗುವುದು. ನಾನು ಮಲಭಾಧೆಯನ್ನು ನಿವೃತ್ತಿಮಾಡಿಕೊಂಡು ಬರುವೆನು; ಅವರೆಗೂ ಇದನ್ನು ಇಟ್ಟುಕೊಂಡಿರು , ಎಂದು ಹೇಳಿದರು. ಅದಕ್ಕೆ ಗಣಪತಿಯು, ಅಗಸ್ತ್ಯರೇ ! ನನಗೆ ಬಹಳ ಅವಸರ ಕಾರ್ಯವಿದೆ, ಆದರೂ ನಿಮಗೋಸ್ಕರ ಈ ಘಟವನ್ನು ಸ್ವಲ್ಪ ಹೊತ್ತು ಹಿಡಿದುಕೊಳ್ಳುವೆನು. ಅಂದರೆ ನಿಮ್ಮನ್ನು ಮೂರು ಸಲ ಕೂಗುವೆನು. ಅಷ್ಟರಲ್ಲಿ ನೀವು ಬಾರದಿದ್ದರೆ ಕೊಡವನ್ನುಕೆಳಗಿಟ್ಟು ಹೊರಟುಹೋಗುವೆನೆಂದನು ಅಗಸ್ತ್ಯರು ಇವನು ಹಾಸ್ಯಮಾಡುವನು, ಕೊಡವನ್ನು ಕೆಳಗಿಡಲಾರನೆಂದು ನಂಬಿ ಹಾಗೆಯೇ ಆಗಲೆಂದು ಹೇಳಿ ಕೊಡವನ್ನು ಅವನ ಕೈಯ್ಯಲ್ಲಿ ಕೊಟ್ಟು ಹೊರಟು ಹೋದರು. ಗಣಪತಿಯು, ಅಗಸ್ತ್ಯರು ೪ಹೆಜ್ಜೆಗಳು ಇಟ್ಟಮಾತ್ರದಿಂದಲೇ ಅಗಸ್ತ್ಯರೇ ! ಬನ್ನೀ ಅಂದನು ಮತ್ತೊಂದು 4ಹೆಜ್ಜೆ ಇಡುವಷ್ಟರಲ್ಲಿಯೇ ಅಗಸ್ತ್ಯರೇ !! ಎಂದು ಕೂಗಿದನು. ಆಗಸ್ತ್ಯರು ಶೌಚಸ್ಥಾನವನ್ನು ಶೇರುವಷ್ಟರಲ್ಲಿಯೇ ಮತ್ತೊಂದು ಸಲ ಆಗಸ್ತ್ಯರೇ !!! ಎಂದು ದೀರ್ಘಧ್ವನಿಯಿಂದ ಕೂಗಿ ಕೊಡವನ್ನು ಕೆಳಗೆ ಇಟ್ಟುಬಿಟ್ಟನು. ಕೊಡವು ಪಡದುಹೋಯಿತು. ಗಣಪತಿಯು ಭೀತನಾಗಿ ಹೊರಟು ಹೋಗುತ್ತಿದ್ದನು. ಅಷ್ಟರಲ್ಲಿ ಅಗಸ್ತ್ಯರು ಶೌಚವನ್ನು ತೀರಿಸಿಕೊಂಡು ಆಚಮನಮಾಡಿ ಬಂದು ನೋಡಲು ಕೊಡವು ಪಡದುಹೋಗಿದ್ದಿತು. ಅವರಿಗೆ ಕಾರ್ಯ ವಿಘ್ನದಿಂದ ಆದ ಶೋಕವು ಅಪಾರವಾಗಿ, ಮಿತಿಮೀರಿದ ಕೋಪವೂ ಬಂದಿತು. ಈ ಕೊಡವು ಹೇಗೆ ಒಡೆಯಿತೋ ಹಾಗೆಯೇ ಈ ದಿವಸ ನಿನ್ನ ಹೊಟ್ಟೆಯೂ ಒಡೆದು ಹೋಗಲಿ ಎಂದು ಗಣಪತಿಗೆ ಶಾಪವನ್ನಿತ್ತು ಹೊರಟು ಹೋದರು.

ಆ ಕಾರಣದಿಂದ ಆ ದಿವಸ ಗಣಪತಿಯು ಮೂಷಿಕದಿಂದ ಬಿದ್ದು ಹೊಟ್ಟೆಯು ಒಡೆಯಿತು. ಚಂದ್ರನು ನಕ್ಕದ್ದಕ್ಕಾಗಿ ಚಂದ್ರನಿಗೆ ಗಣಪತಿಯು ಶಾಪವನ್ನು ಕೊಟ್ಟು ಅವನ ದರ್ಪವನ್ನು ಪರಿಹರಿಸಿದನೆಂಬ ಕಥೆಯಲ್ಲಿ ಹೇಳಿರುವರು. (ಪ್ರಸಂಗದಿಂದ ಈ ಕಥೆಯನ್ನು ಬರಿಯಬೇಕಾಯಿತು) ಬಾಲಸೂರ್ಯನಂತೆ ಕೆಂಪಗೆ ಶೋಭಿಸುತ್ತಿರುವ ಶರೀರವುಳ್ಳವನು, ಸರ್ಪವನ್ನೇ ಕಟಿಸೂತ್ರಕ್ಕೆ ಪ್ರತಿಯಾಗಿ ಕಟ್ಟಿರುವವನು. ಗಣಪತಿಯ ಹೊಟ್ಟೆಯು ಒಡೆದಾಗ ಸರ್ಪದಿಂದ ಹೊಟ್ಟೆಯನ್ನು ಕಟ್ಟಿದುದೇ ಇದರ ಕಾರಣವು. ಆನೆಯತಲೆಯೂ, ಮನುಷ್ಯಾಕಾರ ಶರೀರವೂ, ಹೊಟ್ಟೆಯಮೇಲೆ ಕಟ್ಟಲ್ಪಟ್ಟ ಸರ್ಪವೂ, ಜೋಲುವ ಹೊಟ್ಟೆಯೂ, ಕೇಳುವವರಿಗೆ ವಿಕಾರವೆಂದು ತಿಳಿದುಬರುವುದು. ಆದುದರಿಂದ ವೈಕೃತಗಾತ್ರನೆಂದರು. ಆದರೆ ವಸ್ತುತಃ ವಿಕಾರವಾಗಿಲ್ಲ. ನೋಡುವವರು ಶ್ಲಾಘನೆಮಾಡುವ ರೂಪವಾಗಿಯೇ ಕಾಣುವುದಲ್ಲದೆ ಇವನ ಚರಿತ್ರೆಯನ್ನು ಸಕಲರೂ ಕೊಂಡಾಡುವಂತೆ ಲೋಕಪ್ರಖ್ಯಾತಿಯಾಗಿರುವದು. ಪಾಶ, ಅಂಕುಶಗಳನ್ನು ಎರಡು ಕೈಗಳಲ್ಲಿ ಧರಿಸಿರುವನು. ಅಯೋಗ್ಯರಾದ ಭಗವದ್ವೇಷಿಗಳ ಗರ್ವವನ್ನು ಮುರಿದವನು. ಸಕಲ ಜೀವರೂ ಮಾಡುವ ಕರ್ಮಗಳಿಗೆ, ಆಕಾಶಾಭಿಮಾನಿಯಾಗಿದ್ದು ಸಾಕ್ಷಿಭೂತನಾಗಿರುವನು. ಜನರಿಂದ ಪೂಜಿತನಾಗಿ ಅವರವರ ಮನೋಭೀಷ್ಟವನ್ನು ಶೀಘ್ರದಲ್ಲಿ ಪೂರೈಸುವ ಸ್ವಭಾವ ಇರುವನು. ಆದುದರಿಂದ ಸಜ್ಜನರ ಇಷ್ಟಾರ್ಥವನ್ನು ಪೂರೈಸಿ ತೃಪ್ತಿಬಡಿಸುವನು.

**ಖೇಶಪರಮಸುಭಕ್ತಿಪೂರ್ವಕ**
**ವ್ಯಾಸಕೃತಗ್ರಂಥಗಳನರಿತು ಪ್ರ**
**ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೋ ಲೋಕದೊಳು ।**
**ಪಾಶಪಾಣಿಯೆ ಪ್ರಾರ್ಥಿಸುವೆನು ಪ**
**ದೇಶಿಸೆನಗದರರ್ಥಗಳ ಕರು**
**ಣಾಸಮುದ್ರಕೃಪಾಕಟಾಕ್ಷದಿ ನೋಡೋ ಪ್ರತಿದಿನದಿ ॥೭॥**

ಪದ್ಯಾರ್ಥ.—ಖೇಶ=ಆಕಾಶಾಧಿಪತಿಯಾದ ವಿಘ್ನೇಶ್ವರನೇ! ಪರಮಸುಭಕ್ತಿಪೂರ್ವಕ-ಅತ್ಯಂತ ಭಕ್ತಿಪೂರ್ವಕವಾಗಿ, ವ್ಯಾಸಕೃತ ಗ್ರಂಥಗಳ

ಳನು=ವೇದವ್ಯಾಸದೇವರು ಮಾಡಿದ ಭಾರತದ (೧|) ಸಪಾದ ಲಕ್ಷ ಶ್ಲೋಕ ಗಳ-ಒಂದೂಕಾಲುಲಕ್ಷಶ್ಲೋಕಗಳ ಅರ್ಥಗಳನ್ನು, ಅರಿತು=ತಿಳಿದು, ಪ್ರ ಯಾಸವಿಲ್ಲದೆ ಬರೆದದ್ದು, ಲೋಕದೊಳು ವಿಸ್ತರಿಸಿದೆಯೊ = ಪ್ರಚುರವಾಗು ವಂತೆ ಮಾಡಿದಿ. ಪಾಶಪಾಣಿಯೆ-ಪಾಶವನ್ನು ಕೈಯ್ಯಲ್ಲಿ ಧರಿಸಿದ ಗಣಾಧ್ಯ ಕ್ಷನೇ ! ನಿನ್ನನ್ನು ಪ್ರಾರ್ಥಿಸುವೆನು; ಆದರರ್ಥಗಳ-ಭಾರತದ ಅಮೂಲಾ ಗ್ರವಾದ ಅರ್ಥಗಳನ್ನು ಎನಗೆ ಉಪದೇಶಿಸು. ಕರುಣಾಸಮುದ್ರನೇ! ಪ್ರತಿದಿನವಿ, ಕೃಪಾಕಟಾಕ್ಷದಿಂದ ನೋಡು.

ತಾತ್ಪರ್ಯ:— ಖಂ ಅಂದರೆ ಆಕಾಶವು. ಅದಕ್ಕೆ ಈಶನೆಂದರೆ ಆಕಾ ಶಾತ್ಮನೆಂದರ್ಥ. ವೇದವ್ಯಾಸರು ಭಾರತವನ್ನು ರಚಿಸಿ, ಈ ಗ್ರಂಥವನ್ನು ಬರೆಯಬೇಕೆಂದು ಗಣಪತಿಗೆ ಹೇಳಲು ಗಣಪತಿಯು, ಬರೆಯುವಾಗ ನನ್ನ ಲೇಖಣಿಯು ನಿಲ್ಲದಂತೆ, ಒಂದು ಪದವನ್ನು ಬರೆದು ಮುಗಿಸಿದಕೂಡಲೇ ಮತ್ತೊಂದು ಪದವನ್ನು ಹೇಳುತ್ತ ಬರಬೇಕು. ಮುಂದೆ ಹೇಳಲು ಸಾವಕಾ ಶವಾಗಿ ಲೇಖನವು ನಿಂತರೆ ನಾನು ಮುಂದೆ ಬರೆಯಲಾರೆನೆಂದನು. ಆಗ ವೇದವ್ಯಾಸದೇವರು ಹಾಗೆಯೇ ಆಗಬಹುದು, ಆದರೆ ನಾನು ಹೇಳುವ ಶ್ಲೋಕಗಳಿಗೆ ಅರ್ಥವನ್ನು ಮಾಡಿಕೊಳ್ಳದೆ ನೀನು ಬರೆಯಬಾರದು. ಅದ ರರ್ಥ ಸಂಪೂರ್ಣವಾಗಿ ಮನಸ್ಸಿಗೆ ಬಂದನಂತರ ಬರೆಯಬೇಕೆಂದರು. ಅವ ರಂತೆ ಒಪ್ಪಿಕೊಂಡು ಗ್ರಂಥವನ್ನು ಬರೆಯುತ್ತಿರಲು, ವೇದವ್ಯಾಸದೇವರು ರಚಿಸಿದಷ್ಟುಮಾತ್ರ ಹೇಳಿಬಿಟ್ಟರು. ಮುಂದೆ ಗ್ರಂಥ ರಚಿಸಬೇಕು. ಲೇಖ ನವು ನಿಂತರೆ ಗಣಪತಿಯು ಮುಂದೆ ಬರೆಯುವದಿಲ್ಲ. ಇದಕ್ಕೇನುಪಾಯ ವೆಂದು ಯೋಚಿಸಿ ಮಧ್ಯದಲ್ಲಿ ಕೆಲವು ಶ್ಲೋಕಗಳನ್ನು ಬಹುಕಠಿಣವಾಗಿ ರ ಚಿಸಿ ಹೇಳಿದರು. ಅದರರ್ಥವನ್ನು ಯೋಚಿಸುತ್ತಾ ಗಣಪತಿಯು ಕೂಡಲು ಅಷ್ಟರಲ್ಲಿ ಬಹುಗ್ರಂಥಗಳನ್ನು ರಚಿಸಿದರು. ಅದು ಮುಗಿದಕೂಡಲೆ ಮತ್ತೆ ರಡು ಕಠಿಣವಾದ ಶ್ಲೋಕಗಳನ್ನು ಹಾಕಿದರು. ಗಣಪತಿಯು ಸರ್ವಜ್ಞ ನಾದರೂ, ಅದರರ್ಥವನ್ನು ಮಾಡುವಾಗ ಯೋಚನೆ ಮಾಡಿ ಅರ್ಥಮಾಡ ಬೇಕಾಯಿತು. ಹೀಗೆ ಸಂಪೂರ್ಣ ಗ್ರಂಥವನ್ನು ಬರೆಸಿದರು ಸಂಪೂರ್ಣ ವಾದ ಭಾರತದ ೬೦ ಲಕ್ಷ ಗ್ರಂಥಗಳು ವೇದವ್ಯಾಸದೇವರು ಮಾಡಿದುದು. ಅವುಗಳಲ್ಲಿ ೩೦ಲಕ್ಷ ಶ್ಲೋಕಗಳು ದೇವಲೋಕದಲ್ಲೂ, ಋಷಿ ಲೋಕದಲ್ಲಿ ೧೫ ಲಕ್ಷ ಶ್ಲೋಕಗಳೂ, ಪಿತೃಲೋಕದಲ್ಲಿ ೧೪ಲಕ್ಷ ಶ್ಲೋಕಗಳು ನಿಂತವು-

ಉಳಿದವು ೧ ಲಕ್ಷಗ್ರಂಥ ಮಾತ್ರ ಭೂಮಿಯಲ್ಲಿ ನಿಂತವು. ಇವಲ್ಲದೆ ರಾಮೋಪಾಖ್ಯಾನ ಮೊದಲಾದ ಉಪಾಖ್ಯಾನಗಳು ೨೫ ಸಹಸ್ರ ಗ್ರಂಥಗಳು ಅಂತು ಹರಿವಂಶವೂ ಭಾರತವೂ ಸೇರಿ ೧ ಲಕ್ಷದ ೨೫ ಸಾವಿರ ಗ್ರಂಥಗಳು ಈಗ ಭೂಮಿಯಲ್ಲಿರುವವು. ಇವುಗಳಲ್ಲಿ ಗ್ರಂಥರಚನೆ ಮಾಡಲು ಅವಕಾಶ ತೆಗೆದುಕೊಳ್ಳಲು ಮಧ್ಯೇ ಮಧ್ಯೆ ಹಾಕಿದ ಕಠಿಣ ಶ್ಲೋಕಗಳು; " ಅಷ್ಟೌಶ್ಲೋಕ ಸಹಸ್ರಾಣಿ ಅಷ್ಟೌಶ್ಲೋಕ ಶತಾನಿಚ ॥ ಅಹಂವೇದ್ಮಿ ಶುಕೋವೇತ್ತಿ ಸಂಜಯೋ ವೇತ್ತಿವಾಸವಾ ॥ " ೮ ಸಾವಿರದ ೮೦೦ ಶ್ಲೋಕಗಳನ್ನು ಕಠಿಣವಾಗಿ ರಚಿಸಿ ವೇದವ್ಯಾಸದೇವರು ಹೇಳಿದ ವಾಕ್ಯವೇನೆಂದರೆ; ಈ ೮,೮೦೦ ಶ್ಲೋಕಗಳ ಅರ್ಥಗಳನ್ನು ನಾನು ಬಲ್ಲೆನು. ನನ್ನ ಮಗನಾದ ಶುಕಾಚಾರ್ಯನೂ ಬಲ್ಲನು. ಸಂಜಯನು ನನ್ನ ಅನುಗ್ರಹದಿಂದ ಬಲ್ಲನು. ಜ್ಞಾನಿಯಾದ ವಿದುರನೂ ಬಲ್ಲನೆಂದು ಹೇಳಿರುವರು. ಗಣಪತಿಗೆ ಇದರರ್ಥವು ಮನಸ್ಸಿಗೆ ಬಂದಿತೋ ಇಲ್ಲವೋ ಸಂಶಯಕ್ಕೆ ಆಸ್ಪದವೇ ಇಲ್ಲ. ಏಕೆಂದರೆ ವೇದವ್ಯಾಸದೇವರಿಗೂ ಗಣಪತಿಗೂ ಮೊದಲು ನಡೆದ ಸಂಭಾಷಣೆಯಲ್ಲಿಯೇ ಅರ್ಥ ಮಾಡಿಕೊಳ್ಳದೆ ಬರೆಯಬಾರದೆಂದು ನಿಶ್ಚಯವಾಗಿದ್ದುದರಿಂದ ಆ ಗ್ರಂಥವನ್ನು ಗಣಪತಿಯು ಬರೆದು ಇರುವುದರಿಂದಲೇ ಗಣಪತಿಯು ಬಲ್ಲನೆಂದು ಸಿದ್ಧವಾಗುವುದು. ಈ ಅರ್ಥವನ್ನೇ ದಾಸಾರ್ಯರು ಇಲ್ಲಿ ಹೇಳಿರುವರು. ವೇದವ್ಯಾಸದೇವರು ಮಾಡಿದ ಗ್ರಂಥಗಳರ್ಥವನ್ನರಿತು ಪ್ರಯಾಸವಿಲ್ಲದೇ ಬರೆದು ವಿಸ್ತಾರಪಡಿಸಿರುವೆ. ಭಾರತ ಆದಿಪರ್ವದ ಆರಂಭದಲ್ಲಿ ಈ ಕಥೆಯನ್ನು ವಿಸ್ತಾರವಾಗಿ ಹೇಳಿರುವರು. ದಾಸಾರ್ಯರು ಪ್ರಾರ್ಥಿಸುತ್ತಾರೆ.—ಎಲೈಪಾಶಪಾಣಿಯೇ ! ಭಾರತಾರ್ಥಗಳನ್ನು ಚೆನ್ನಾಗಿ ನೀನು ಬಲ್ಲೆಯಾದುದರಿಂದ ಅದರರ್ಥವನ್ನು ನನಗೆ ತಿಳಿವಳಿಕೆಯಾಗುವಂತೆ ಮಾಡು. ನೀನು ಕೃಪಾಕಟಾಕ್ಷದಿಂದ ನೋಡು. ಗಣಪತಿಯು ಕೃಪಾಕಟಾಕ್ಷದಿಂದ ನೋಡಿದರೆ ಭಾರತಾದಿ ಗ್ರಂಥಗಳಿಗೆ ಸುಲಭವಾಗಿ ಅರ್ಥವಾಗುವದೆಂಬ ತಾತ್ಪರ್ಯ.

**ಶ್ರೀಶನತಿ ನಿರ್ಮಲ ಸುನಾಭೀ**
**ದೇಶವಸ್ಥಿತ ರಕ್ತಗಂಧಾ**
**ತಿಸುಶೋಭಿತಗಾತ್ರ ಲೋಕಪವಿತ್ರ ಸುರಮಿತ್ರ ॥**
**ಮೂಷಿಕಾವರವಹನ ಪ್ರಾಣಾ**
**ವೇಶಯುತ ಪ್ರಖ್ಯಾತ ಪ್ರಭು ಪೂ**
**ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ॥೫॥**

ಪದ್ಯಾರ್ಥ.— ಶ್ರೀಶನ=ಶ್ರೀಲಕ್ಷ್ಮೀಪತಿಯಾದ ಪರಮಾತ್ಮನ, ಅತಿ ನಿರ್ಮಲ=ಅತ್ಯಂತ ನಿರ್ದುಷ್ಟವಾದ, ನಾಭಿದೇಶವಸ್ಥಿತ-ನಾಭಿಪ್ರದೇಶದಾಕಾಶದಲ್ಲಿ ವಾಸಮಾಡುತ್ತಿರುವೆ. ರಕ್ತಗಂಧಾತಿಸುಶೋಭಿತಗಾತ್ರ-ಕೆಂಪು ಗಂಧವನ್ನು ಲೇಪಿಸಿಕೊಂಡು ಅದರಿಂದ ಅತ್ಯಂತ ಶೋಭಿಸುತ್ತಿರುವ ದೇಹ ಉಳ್ಳವನಾಗಿರುವೆ ! ಲೋಕಪವಿತ್ರನು, ಸುರಮಿತ್ರ=ದೇವತೆಗಳ ಮಿತ್ರನು ಮೂಷಿಕವರವಾಹನ=ಉತ್ತಮವಾದ ಮೂಷಿಕವನ್ನೇ ವಾಹನವನ್ನಾಗಿ ಮಾಡಿಕೊಂಡಿರುವೆ ! ಪ್ರಾಣಾವೇಶಯುತ ಪ್ರಖ್ಯಾತಪ್ರಭು=ಪ್ರಾಣದೇವರ ಆವೇಶದಿಂದ ಕೂಡಿದ, ಲೋಕಪ್ರಖ್ಯಾತನಾಗಿ ಪ್ರಭುವೆಂದೆನಿಸುವೆ ! ಇಂತಹಾ ಗುಣವಿಶಿಷ್ಟನಾದ ಎಲೈ ವಿಘ್ನರಾಜನೆ, ಪ್ರತಿದಿಸದಿ, ಭಕ್ತರು ಬೇಡಿದ ಇಷ್ಟಾರ್ಥಗಳ ಪೂರೈಸು.

ತಾತ್ಪರ್ಯ.— ಶ್ರೀಪರಮಾತ್ಮನ ನಾಭಿಪ್ರದೇಶದಲ್ಲಿರುವ ಆಕಾಶದಲ್ಲಿ ವಾಸಮಾಡುತ್ತಿರುವೆ ! ಎಲೈ ಗಣಪತಿಯೇ ! “ರಕ್ತಾಂಬರೋರಕ್ತತನುಃ ರಕ್ತಮಾಲ್ಯಾನುಲೇಪನಃ ॥’ ಎಂದು ತಂತ್ರಸಾರಸಂಗ್ರಹದಲ್ಲಿ ಗಣಪತಿ ಮಂತ್ರದ ಧ್ಯಾನ ಶ್ಲೋಕದಲ್ಲಿ ಶ್ರೀಮನ್ಮಧ್ವಾಚಾರ್ಯರು ಹೇಳಿರುವ ವಾಕ್ಯವಿದು. ಹಾಗೆ ಕೆಂಪುಗಂಧದಿಂದ ಅತ್ಯಂತ ಶೋಭಿತವಾದ ಶರೀರ ಉಳ್ಳವನಾಗಿರುವೆ ! ಲೋಕವನ್ನೇ ಪವಿತ್ರವನ್ನಾಗಿ ಮಾಡುತ್ತಿರುವೆ ! ನೀನು ದೇವತೆಗಳಿಗೆ ಅತ್ಯಂತ ಮಿತ್ರನು. ಮೂಷಿಕಶ್ರೇಷ್ಟವನ್ನು ವಾಹನವನ್ನಾಗಿ ಮಾಡಿಕೊಂಡಿರುವೆ ! ಪ್ರಾಣದೇವರ ಆವೇಶದಿಂದ ಲೋಕಪ್ರಖ್ಯಾತನಾಗಿರುವೆ ! ಎಲೈ ಪ್ರಭೋ ! ಪ್ರತಿದಿವಸದಲ್ಲೂ ಭಕ್ತರು ಬೇಡುತ್ತಿರುವ ಇಷ್ಟಾರ್ಥಗಳನ್ನು ಪೂರೈಸು.

**ಶಂಕರಾತ್ಮಜ ದೈತ್ಯರಿಗತಿ ಭ**
**ಯಂಕರಗತಿಗಳೀಯಲೋಸುಗ**
**ಸಂಕಟಚತುರ್ಥಿಗನೆನಿಸಿಯಹಿತಾರ್ಥಗಳಕೊಟ್ಟು ।**
**ಮಂಕುಗಳ ಮೋಹಿಸುವೆ ಚಕ್ರದ**
**ರಾಂಕಿತನತೋರನುದಿನದಿ ತತ್ಪದ**
**ಪಂಕಜಗಳಿಗೆರಗಿ ಬಿನ್ನೈಸುವೆನು ಪಾಲಿಪುದು ॥೯॥**

ಪದ್ಯಾರ್ಥ.— ಶಂಕರಾತ್ಮಜ=ಎಲೈ ರುದ್ರಕುಮಾರನೇ ! ದೈತ್ಯರಿಗೆ ಅತಿ ಭಯಂಕರಗತಿಗಳ, ಈಯಲು= ಕೊಡುವುದಕ್ಕಾಗಿ, ಸಂಕಟ

ಚತುರ್ಥಿಗನೆನಿಸಿ=ಪ್ರತಿ ತಿಂಗಳಲ್ಲೂ ಕೃಷ್ಣಪಕ್ಷ ಚತುರ್ಥೀ ದಿವಸದಲ್ಲಿ ಸಂಕಷ್ಟಚತುರ್ಥಿ ಗಣಪತಿ ವ್ರತವೆಂದು ಪಂಚಾಂಗದಲ್ಲಿ ಹಾಕಿರುವರು. ಆ ದಿವಸದಲ್ಲಿ ಆ ವ್ರತದ ಸ್ಥಾಪದಲ್ಲಿ ಸನ್ನಿಹಿತನಾಗಿದ್ದು ಅಹಿತಾರ್ಥಗಳಕೊಟ್ಟು=ಅವರಿಗೆ ಹಿತವಾಗದ ಅಂದರೆ ಮುಂದೆ ನರಕಾದಿಗಳಿಗೆ ಸಾಧನವಾಗುವ ವಿಷಯಸುಖವನ್ನು ಕೊಟ್ಟು, ಮಂಕುಗಳ=ಮೂರ್ಖಜನರನ್ನು ಮೋಹಿಸುವೆ ! ಚಕ್ರದರಾಂಕಿತನ=ಚಕ್ರ, ದರ=ಶಂಖ, ಇವುಗಳ ಚಿನ್ಹೆಗಳುಳ್ಳ ಪರಮಾತ್ಮನ, ತೋರು=ತೋರಿಸು, ತತ್ಪದಪಂಕಜಗಳಿಗೆ=ನಿನ್ನ ಪಾದ ಕಮಲಗಳಿಗೆ, ಅನುದಿನದಿ = ಪ್ರತಿ ದಿವಸದಲ್ಲೂ, ಎರಗಿ = ನಮಸ್ಕರಿಸಿ, ಬಿನ್ನೈಸುವೆನು, ಪಾಲಿಪುದು=ನೀನು ನಮ್ಮನ್ನು ರಕ್ಷಿಸಬೇಕು.

ತಾತ್ಪರ್ಯ —ಎಲೈ ರುದ್ರದೇವರ ಕುವರನೆ ! ನಿನ್ನ ಉದ್ದೇಶವಾಗಿ ಅನೇಕರು ಸಂಕಟ ಚತುರ್ಥೀ ವ್ರತವೆಂದು ಪ್ರತಿ ತಿಂಗಳ ಕೃಷ್ಣಪಕ್ಷ ಚತುರ್ಥೀ ದಿವಸದಲ್ಲಿ ಮಾಡುವರು. ಅಲ್ಲಿ ಆ ದಿವಸದಲ್ಲಿ ಸನ್ನಿಹಿತನಾಗಿದ್ದು ಅವರಿಗೆ ಕಿಂಚಿದಿಷ್ಟಾರ್ಥವನ್ನು ಪೂರೈಸಿದಂತೆ ತೋರಿಸಿ ಆ ಮೂರ್ಖಜನರನ್ನು ಮೋಹಿಸಿ ಕಡೆಗೆ ಅವರಿಗ ಅನರ್ಥವಾದ ಗತಿಯನ್ನೇ ಕೊಡಿಸುವೆ. ದೈತ್ಯರ ಅವರ ಆವೇಶ ಉಳ್ಳವರು ಇವರೇ ಆ ವ್ರತವನ್ನು ಮಾಡುವರು. ಅವರಿಗೆ ಅಧೋಗತಿಯನ್ನು ಕೊಡುವ ಉದ್ದೇಶವಾಗಿಯೇ ಆ ದಿವಸ ಅವರು ಮಾಡುವ ಪೂಜೆಯನ್ನು ಸ್ವೀಕರಿಸುವೆ ! ಹೀಗೆ ದಾಸಾರ್ಯರು ಸಂಕಟ ಚತುರ್ಥೀ ವ್ರತವನ್ನು ದೂಷಿಸಿರುವರು. ಇದರ ಕಾರಣವೇನೆಂದರೆ, ಸಂಕಟಚತುರ್ಥೀ ವ್ರತವನ್ನು ಮಾಡುವವರು ಸಾಯಂಕಾಲದವರೆಗೂ ಉಪವಾಸವಿದ್ದು ಆ ವ್ರತವನ್ನು ಮಾಡುವರು. ಆ ವ್ರತದಲ್ಲಿ ಗಣಪತಿಯೇ ಸರ್ವೋತ್ತಮನೆಂತಲೂ, ಸೃಷ್ಟ್ಯಾದಿ ಕರ್ತನೆಂತಲೂ ಭಾವಿಸಿ ಗಣಪತಿಯುಪನಿಷತ್ತು ಮತ್ತು "ನಿಷುಸೀದ ಗಣಪತೆ" ಮೊದಲಾದ ಋಕ್ಕುಗಳು ಇವುಗಳಿಗಿರುವ ಭಗವತ್ಪರವಾದ ಅರ್ಥವನ್ನರಿಯದೆ ಹರಿಹರಾದಿಗಳಕಿಂತಲೂ ಗಣಪತಿಯನ್ನು ಉತ್ತಮನೆಂದು ತಿಳಿದು ಪೂಜಿಸುವರು. ಗಣಪತಿ ಉಪನಿಷತ್ತಿನ ವಾಕ್ಯಗಳು ತತ್ವಾಭಿಮಾನಿ ದೇವತೆಗಳ ಗಣಕ್ಕೆ ಪತಿಯಾದುದರಿಂದ ಗಣಪತಿ ಎಂದು ಪರಮಾತ್ಮನ ಹೆಸರು. ಅದರಲ್ಲಿ ಪರಮಾತ್ಮನ ಮಹಿಮೆಯನ್ನೇಹೇಳುವುದು; ಅದನ್ನು ವಿಘ್ನೇಶ್ವರನ ಪರವಾಗಿ ಅರ್ಥ ಮಾಡಿಕೊಂಡು ಸರ್ವೋತ್ತಮತ್ವೇನ

ಗಣಪತಿಯನ್ನು ಪೂಜಿಸುವರು. ಆದುದರಿಂದಲೇ ಅದರ ಫಲವು ನರಕವನ್ನು ಅನುಭವಿಸುವದು. ಅವರಿಗೆ ಅನರ್ಥವನ್ನು ಕೊಡುವ ಉದ್ದೇಶದಿಂದಲೇ ಗಣಪತಿಯು, ಪೂಜೆಯನ್ನು ಆ ದಿವಸ ಸ್ವೀಕರಿಸುವನೆಂಬ ತಾತ್ಪರ್ಯ. ಪ್ರತಿದಿವಸದಲ್ಲೂ ನಿನ್ನ ಪಾದಾರವಿಂದಗಳಿಗೆ ನಮಸ್ಕಾರ ಮಾಡುವೆನು. ನೀನು, ಚಕ್ರ ಮತ್ತು ಶಂಖಪಾಣಿಯಾದ ಪರಮಾತ್ಮನನ್ನು ತೋರಿಸಿ ನಮ್ಮನ್ನುದ್ಧರಿಸು !

ಸಿದ್ಧ ವಿದ್ಯಾಧರಗಣಸಮಾ
ರಾಧ್ಯಚರಣಸರೋಜಸರ್ವಸು
ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನಪವ ॥
ಬುದ್ಧಿವಿದ್ಯಾ ಜ್ಞಾನಬಲ ಪರಿ
ಶುದ್ಧ ಭಕ್ತಿ ವಿರಕ್ತಿ ನಿರತನ
ವದ್ಯನಸ್ಮೃತಿ ಲೀಲೆಗಳ ಸುಸ್ತವನವದನದಲಿ ॥೧೦॥

ಪದ್ಯಾರ್ಥ :—ಸಿದ್ಧ=ಸಿದ್ಧರು, ವಿದ್ಯಾಧರಗಣ = ಇವರುಗಳಿಂದ, ಸಮಾರಾಧ್ಯಚರಣ ಸರೋಜ=ಚೆನ್ನಾಗಿ ಆರಾಧಿಸಿಕೊಳ್ಳಲ್ಪಟ್ಟ ಪಾದಕಮಲ ಗಳುಳ್ಳವನೆ ! ಸರ್ವಸುಸಿದ್ಧಿದಾಯಕ=ಸಕಲ ಸಿದ್ಧಿಯನ್ನೂ ಭಕ್ತರಿಗೆ ಪೂರೈ ಸುವವನೇ ! ಬುದ್ಧಿ, ವಿದ್ಯಾ, ಜ್ಞಾನ, ಬಲ, ಪರಿಶುದ್ಧವಾದ ಭಕ್ತಿ, ವಿರಕ್ತಿ, ಇವುಗಳಲ್ಲಿ, ನಿರತ=ಅತ್ಯಂತಾಸಕ್ತನಾಗಿರುವಂತೆಯೂ, ಅಥವಾ ನಿರುತ= ನಿತ್ಯದಲ್ಲೂ, ಪರಿಶುದ್ಧವಾದ ಭಕ್ತಿ ವಿರಕ್ತಿಗಳನ್ನೂ, ಅನವದ್ಯನ=ನಿರ್ದು ಷ್ಟನಾದ ಶ್ರೀ ಪರಮಾತ್ಮನ, ಸ್ಮೃತಿ=ಮನಸ್ಸಿನಲ್ಲಿ ಸರ್ವದಾ ಸ್ಮರಣೆ ಇರು ವಂತೆಯೂ, ವದನದಲಿ=ಬಾಯೊಳಗೆ, ಲೀಲೆಗಳ=ಪರಮಾತ್ಮನ ಅವತಾರಾ ದಿ ಚರಿತ್ರೆಗಳ, ಸುಸ್ತವನ=ಚೆನ್ನಾಗಿ ಸ್ತೋತ್ರ ಮಾಡುತ್ತಿರುವಂತೆಯೂ, (ಇಂತಹಾ) ಬಿನ್ನಪವ=ವಿಜ್ಞಾಪನೆಯನ್ನು, ಶೀಘ್ರದಿಂ ಪಾಲಿಪುದು.

ತಾತ್ಪರ್ಯ :—ಸಿದ್ಧರು, ವಿದ್ಯಾಧರರು ಇವರಿಂದ ಚೆನ್ನಾಗಿ ಆರಾಧಿತ ವಾದ ಪಾದಕಮಲಗಳುಳ್ಳವನು ; ಭಕ್ತರ ಸರ್ವಾಭೀಷ್ಟವು ಸಿದ್ಧಿಸುವಂತೆ ಮಾಡುವವನು. ಎಲೈ ವಿಘ್ನರಾಜನೆ ! ನಾನು ನಿನ್ನಲ್ಲಿ ಮಾಡಿಕೊಳ್ಳುವ ವಿಜ್ಞಾಪನೆ ಏನೆಂದರೆ, ನನಗೆ ಯಾವಾಗಲೂ ಬುದ್ಧಿ, ವಿದ್ಯಾ, ಜ್ಞಾನ ಬಲ ಬುದ್ಧಿ=ನಿಶ್ಚಯಜ್ಞಾನ, ವಿದ್ಯಾ=ಭಗವದ್ವಿಷಯಕವಾದ ಮೀಮಾಂಸ ಮೊ ದಲಾದ ಶಾಸ್ತ್ರದಲ್ಲಿ ನಿರತನಾಗಿರುವಿಕೆ ; ಜ್ಞಾನ=ಹರಿ ಸರ್ವೋತ್ತಮತ್ವಾದಿ

ತಾರತಮ್ಯ ಜ್ಞಾನ, ಇಂತಹಾ ಜ್ಞಾನವೇ ಬಲ, ಪರಿಶುದ್ಧವಾದ ಭಕ್ತಿ-ದ್ವೇಷ ಮೊದಲಾದವುಗಳ ಸಂಬಂಧವಿಲ್ಲದ ಶುದ್ಧ ಭಕ್ತಿ, ವಿರಕ್ತಿ=ಸಂಸಾರದಲ್ಲಿ ವಿರಕ್ತಿ, ಮೇಲೆ ಹೇಳಿದವುಗಳಲ್ಲಿ ಸರ್ವದಾ ಆಸಕ್ತಿ ಇರುವಂತೆಯೂ, ಮತ್ತು ನಿರ್ದೋಷನಾದ ಶ್ರೀ ಪರಮಾತ್ಮನ ಸ್ಮರಣೆ ಮಾಡುವಂತೆಯೂ, ಅವನ ಲೀಲೆಗಳನ್ನು ನನ್ನ ಬಾಯಿಂದ ಯಾವಾಗಲೂ ಹೊಗಳುತ್ತಿರುವಂತೆಯೂ ಮಾಡಬೇಕೆಂಬುವುದೇ ನನ್ನ ಬಿನ್ನಪವು.

ರಕ್ತವಾಸದ್ವಯ ವಿಭೂಷಣ
ಉಕ್ತಿ ಲಾಲಿಸು ಪರಮ ಭಗವ
ದ್ಭಕ್ತವರ ಭವ್ಯಾತ್ಮ ಭಾಗವತಾದಿ ಶಾಸ್ತ್ರದಲಿ ।
ಸಕ್ತವಾಗಲಿ ಮನವು ವಿಷಯ ವಿ
ರಕ್ತಿ ಪಾಲಿಸು ವಿದ್ವದಾರ್ಯ ವಿ
ಮುಕ್ತನೆಂದೆನಿಸೆನ್ನ ಭವಭಯದಿಂದ ಕರುಣದಲಿ ॥೧೧॥

ಪದ್ಯಾರ್ಥ :—ರಕ್ತವಾಸದ್ವಯವಿಭೂಷಣ=ಕೆಂಪು ಬಣ್ಣದ ಎರಡು ವಸ್ತ್ರಗಳನ್ನು ಒಂದು ಉಟ್ಟು ಒಂದು ಉತ್ತರೀಯವನ್ನಾಗಿ ಧರಿಸಿ, ಅವುಗಳಿಂದ ಅಲಂಕೃತನಾದವನೇ! ಪರಮ ಭಗವದ್ಭಕ್ತವರ=ಪರಮ ಭಾಗವತೋತ್ತಮನೇ! ಭವ್ಯಾತ್ಮ=ಪರಮ ಮಂಗಳಕರವಾದ ಶರೀರ ಉಳ್ಳವನೇ! ಉಕ್ತಿ ಲಾಲಿಸು=ನನ್ನ ಮಾತನ್ನು ದಯವಿಟ್ಟು ಕೇಳು. ಅಥವಾ ಆದರಿಸು ಮಕ್ಕಳ ನುಡಿಗಳನ್ನು ತಂದೆ ತಾಯಿಗಳು ಆದರಿಸಿ ಕೇಳುವಂತೆ ಕೇಳು. ಭಾಗವತಾದಿ ಶಾಸ್ತ್ರದಲಿ, ಮನವು=ನನ್ನ ಮನಸ್ಸಾದದು ಸಕ್ತವಾಗಲಿ! ವಿಷಯವಿರಕ್ತಿಪಾಲಿಸು=ವಿಷಯ ಭೋಗಾದಿಗಳಲ್ಲಿ ವಿರಕ್ತಿ ಹುಟ್ಟುವಂತೆ ಅನುಗ್ರಹ ಮಾಡು. ವಿದ್ವದಾರ್ಯ=ವಿದ್ಯಾವಂತರಲ್ಲಿ ಉತ್ತಮನಾದವನೇ! ಕರುಣದಲಿ=ದಯವಿಟ್ಟು, ಭವಭಯದಿಂದ=ಸಂಸಾರಭಯದಿಂದ, ಎನ್ನ=ನನ್ನನ್ನು, ವಿಮುಕ್ತನೆಂದೆನಿಸು=ವಿಶೇಷನಾಗಿ ಮುಕ್ತನಾದವನೆಂದು ಮುಕ್ತರ ಮಧ್ಯದಲ್ಲಿ ಗಣನೆಗೆ ಬರುವಂತೆ ಮಾಡು.

ತಾತ್ಪರ್ಯ :—ಗಣಪತಿಯು ಧರಿಸಿರುವ ವಸ್ತ್ರಗಳು ಕೆಂಪು ಬಣ್ಣದವೆಂದು ತಂತ್ರಸಾರದಲ್ಲಿ ಗಣಪತಿ ಮಂತ್ರದ ಧ್ಯಾನಶ್ಲೋಕದಲ್ಲಿ "ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ" ಎಂದು ಹೇಳಿರುವದು. ಇದೇ

ಅರ್ಥವನ್ನೇ ಇಲ್ಲಿ ಹೇಳಿದರು. ಪರಮ ಭಗವದ್ಭಕ್ತರ ಪೈಕಿ ಉತ್ತಮನು; ಅಂದರೆ ಪರಮ ಭಾಗವತರು ಬ್ರಹ್ಮಾದಿಗಳು : ಅವರಕಿಂತಲೂ ಉತ್ತಮನು ಎಂದರ್ಥವಲ್ಲ. ತಾರತಮ್ಯ ಪ್ರಕಾರ ಇವನಕಿಂತಲೂ ಉತ್ತಮರಾದ ಬ್ರಹ್ಮ ದೇವರು ಮೊದಲು ನಿಋುಋುತಿ, ಪ್ರಾವಹಿವರೆಗೂ ಹೇಳಿರುವ ಉತ್ತಮ ಭಗವದ್ಭಕ್ತರನ್ನು ಬಿಟ್ಟು ಉಳಿದ ಉಕ್ತಾಶೇಷ ಶತಸ್ಥರಾದ ಅಜಾದೇವತೆಗಳು. ಗಂಗೆ, ಪರ್ಜನ್ಯ ಮೊದಲಾದವರಕಿಂತಲೂ ಭಕ್ತಿಯಲ್ಲಿ ಶ್ರೇಷ್ಟನೆಂದರ್ಥ. ಅಶ್ವಿನೀ ದೇವತೆಗಳು ವಿಷ್ವಕ್ಸೇನರಿಗೆ ಸಮವಾದ ಭಗವದ್ಭಕ್ತಿಯುಳ್ಳವನು. ಭಕ್ತರ ಪೈಕಿ ಉತ್ತಮನೆಂದರೆ ೧೦೦ ದೇವತೆಗಳ ಪೈಕಿ ಉಳಿದ ಅಜಾದೇವತೆಗಳು ಗಂಗೆ ಮೊದಲಾದ ಭಗವದ್ಭಕ್ತರಕಿಂತಲೂ, ಉತ್ತಮನೆಂದರ್ಥವೇ ಆಗಲಿ ಎಲ್ಲಾ ಭಕ್ತರೆಂದು ಬ್ರಹ್ಮಾದಿಗಳನ್ನೂ ಸಹ ಇವನ ಜೊತೆಯಲ್ಲಿ ಸೇರಿಸಬೇಕೆಂದರ್ಥವಲ್ಲ. ನನ್ನ ಮನಸ್ಸಾದುದು ಯಾವಾಗಲೂ ಭಾಗವತಾದಿ ಸಚ್ಛಾಸ್ತ್ರದಲ್ಲಿ ನೆಲಸಿರುವಂತೆ ಮಾಡೆಂದು ಬೇಡುವೆನು. ಈ ನನ್ನ ಮಾತನ್ನು ಮಗುವಿನ ಮಾತನ್ನು ತಾಯಿಯು ಲಾಲಿಸುವಂತೆ ನೀನು ಆಲಿಸಬೇಕು. ವಿಷಯಭೋಗದಲ್ಲಿ ನನಗಾವಾಗಲೂ ವಿರಕ್ತಿ ಇರಲಿ! ಎಲೈ ಸಿದ್ಧದಾರ್ಯ! ನನ್ನನ್ನು ಸಂಸಾರಮುಕ್ತನೆಂದು ಹೆಸರು ಬರುವಂತೆ ಮಾಡು.

ಶುಕ್ರಶಿಷ್ಯರ ಸಂಹರಿಪುದಕೆ
ಶಕ್ರನಿನ್ನನು ಪೂಜಿಸಿದನು ಉ
ರುಕ್ರಮ ಶ್ರೀ ರಾಮಚಂದ್ರನು ಸೇತು ಮುಖದಲ್ಲಿ ||
ಚಕ್ರವರ್ತಿ ಧರ್ಮರಾಜನು
ಚಕ್ರಪಾಣಿಯನುಡಿಗೆ ಭಜಿಸಿದ
ವಕ್ರ ತುಂಡನೆ ನಿನ್ನೊಳೆಂತಟೋ ಈಶನುಗ್ರಹವು ||೧೨||

ಪದ್ಯಾರ್ಥ :—ಶುಕ್ರಶಿಷ್ಯರ=ಶುಕ್ರಾಚಾರ್ಯರಿಗೆ ಶಿಷ್ಯರಾದ ದೈತ್ಯರನ್ನು, ಸಂಹರಿಪುದಕೆ=ಸಂಹಾರ ಮಾಡಿ ತಾನು ಜಯ ಪಡೆಯುವ ಉದ್ದೇಶದಿಂದ, ಶಕ್ರ–ದೇವೇಂದ್ರನು, ನಿನ್ನನ್ನು ಪೂಜಿಸಿದ ; ಉರುಕ್ರಮ=ಬಹು ಪರಾಕ್ರಮಶಾಲಿಯಾದ ರಾಮಚಂದ್ರನು, ಸೇತುಮುಖದಲ್ಲಿ=ಸೇತು ಬಂಧನಕ್ಕೆ ಆರಂಭ ಮಾಡುವಾಗ ನಿನ್ನನ್ನು ಪೂಜಿಸಿದನು. ಚಕ್ರವರ್ತಿ ಧರ್ಮರಾಜನು, ಚಕ್ರಪಾಣಿಯನುಡಿಗೆ– ಚಕ್ರಪಾಣಿಯಾದ ಶ್ರೀಕೃಷ್ಣನ ಆಜ್ಞ

ದೇಶವನ್ನ ಕೇಳಿ, ನಿನ್ನನ್ನು ಭಜಿಸಿದನು; ವಕ್ರತುಂಡವೆ-ಸೊಂಡಿಲು ಉಳ್ಳ ಮುಖದಿಂದ ಕೂಡಿದವನು, ಗಜಮುಖನೆಂಬ ಭಾವ; ಎಲೈ ಗಜವದನ! ಈಶನುಗ್ರಹವು=ಭಗವದನುಗ್ರಹವು, ನಿನ್ನಲ್ಲಿ, ಎಂತುಂಟೊ=ಎಷ್ಟಿರುವದೋ ಭಗವದನುಗ್ರಹವು ಬಹಳವಿದೆ ಎಂಬಭಿಪ್ರಾಯ.

ತಾತ್ಪರ್ಯ.—ದೇವೇಂದ್ರನು ವೃತ್ರಾಸುರನ ಸಂಹಾರಕ್ಕೆ ಹೋಗುವಾಗ ಗಣಪತಿಯ ಪೂಜೆಯನ್ನು ಮಾಡಿಹೋಗಿ, ವೃತ್ರಾಸುರನ ಸಹಾಯಕ್ಕಾಗಿ ಬಂದಿದ್ದ ದೈತ್ಯರನ್ನೂ ವೃತ್ರಾಸುರನನ್ನೂ ಸಹ ಸಂಹಾರಮಾಡಿ ಜಯವನ್ನು ಪಡೆದನು. ಶ್ರೀರಾಮದೇವರು ಸೀತೆಯನ್ನು ಹೊಂದುವ ಉದ್ದೇಶನಾಗಿ ಸಮುದ್ರದಲ್ಲಿ ಸೇತುವೆಯನ್ನು ಕಟ್ಟುವಾಗ ವಿಘ್ನರಾಜನ ಪೂಜೆಯನ್ನು ಮಾಡಿ ನಿರ್ವಿಘ್ನವಾಗಿ ಸೇತುಬಂಧನವನ್ನು ಪೂರೈಸಿದರು- ಎಂಬೀ ಕಥೆಗಳನ್ನು ಧರ್ಮರಾಜನಿಗೆ ಶ್ರೀಕೃಷ್ಣನು ಹೇಳಿ ಧರ್ಮರಾಜನಿಂದ ಗಣಪತಿ ಪೂಜೆಯನ್ನು ಮಾಡಿಸಿರುವರು. ಸ್ಕಂದಪುರಾಣಾಂತರ್ಗತವಾದ ಗಣೇಶನ ಕಥೆಯಲ್ಲಿ "ಸನ್ನದ್ಧಯೋಃ ಪುರಾ ವಿಪ್ರಾಃ ಕುರುಪಾಂಡವಸೇನಯೋಃ॥ ಪೃಷ್ಟವಾನ್ ದೇವಕೀಪುತ್ರಂ ಧರ್ಮಪುತ್ರೋ ಯುಧಿಷ್ಠಿರಃ॥ ನಿರ್ವಿಘ್ನೇನ ಜಯೋ ಮಹ್ಯಂ ವದ ದೇವಕಿನಂದನ॥ ಕಾಂ ದೇವತಾಂ ನಮಸ್ಕೃತ್ಯ ಸಮ್ಯಗ್ರಾಜ್ಯಂ ಲಭೇಮಹಿ॥ ಶ್ರೀಕೃಷ್ಣ ಉವಾಚ॥ ಪೂಜಯಸ್ವ ಗಣಾಧ್ಯಕ್ಷಂ ಉಮಾಮಲ ಸಮುದ್ಭವಂ॥ ತಸ್ಮಿನ್ ಸಂಪೂಜಿತೇವೀರ ಸಮ್ಯಗ್ರಾಜ್ಯಮವಾಪ್ಸ್ಯಸಿ॥ * * ಶಕ್ರೇಣಪೂಜಿತಃ ಪೂರ್ವಂ ತಥಾವೃತ್ರವಧೇನೃಪ॥ ರಾಮಚಂದ್ರೇಣ ಮಹತಾ ಜಾನಕ್ಯಾನ್ವೇಷಣೇ ತಥಾ॥ * ತಸ್ಮಾತ್ಸರ್ವಪ್ರಯತ್ನೇನ ಪೂಜನೀಯೋ ಗಣಾಧಿಪಃ॥ * * ಏವಮುಕ್ತಸ್ತು ಕೃಷ್ಣೇನ ಸಾನುಜಃ ಪಾಂಡುನಂದನಃ॥ ಪೂಜಯಾಮಾಸ ದೇವೇಶಂ ಪುತ್ರಂ ತ್ರಿಪುರಘಾತಿನಃ॥ ತಸ್ಯಪ್ರಸಾದಾನ್ನಿಹತ್ಯಾರಿಂ ಶತ್ರು ಸಂಘಾನಶೇಷತಃ॥ ಸೈನ್ಯನಿರ್ಜಿತವಾನ್ ಭೂಭಾಗಃ ಸ್ವರಾಜ್ಯಮೋಜಸಾ॥" ಕುರುಪಾಂಡವರು ಕುರುಕ್ಷೇತ್ರದಲ್ಲಿ ರಾಜ್ಯಾರ್ಥಿಗಳಾಗಿ ಪರಸ್ಪರ ದ್ವೇಷದಿಂದ ಯುದ್ಧಸನ್ನದ್ಧರಾಗಿರುವ ಧರ್ಮರಾಜನು ದೇವಕೀ ಪುತ್ರನಾದ ಶ್ರೀಕೃಷ್ಣನನ್ನು ಕುರಿತು, ಎಲೈ ಕೃಷ್ಣ! ನಿರ್ವಿಘ್ನದಿಂದ ನಮಗೆ ಯುದ್ಧದಲ್ಲಿ ಜಯವು ಹೇಗೆ ದೊರಕುವುದು? ಯಾವ ದೇವತೆಯನ್ನು ಪೂಜಿಸುದರೆ ನಿಸ್ಸಂ

ಶಯವಾಗಿ ನಮಗೆ ರಾಜ್ಯಪ್ರಾಪ್ತಿಯಾಗುವುದು. ಅದನ್ನು ನನಗೆ ಹೇಳೆಂದು ಕೇಳಲು; ಶ್ರೀಕೃಷ್ಣನು, ಪಾರ್ವತೀದೇವಿಯ ಶರೀರ ಸಂಬಂಧವಾದ ಕೊಳೆಯಿಂದ ಉತ್ಪನ್ನನಾದ ಗಣಾಧ್ಯಕ್ಷನನ್ನು ಪೂಜಿಸು, ಅದರಿಂದ ನಿನಗೆ ಯುದ್ಧದಲ್ಲಿ ಜಯ ಉಂಟಾಗಿ ರಾಜ್ಯಲಾಭವಾಗುವದು. ಹಿಂದಕ್ಕೆ ದೇವೇಂದ್ರನು ವೃತ್ರಾಸುರನನ್ನು ಸಂಹಾರಮಾಡಿ ಜಯ ಪಡೆಯುವ ಉದ್ದೇಶವಾಗಿ ಗಣಪತಿಯನ್ನು ಪೂಜಿಸಿ, ಶತ್ರುವನ್ನು ಸಂಹಾರಮಾಡಿ ಇಂದ್ರಾಧಿಪತ್ಯವನ್ನು ಹೊಂದಿದನು. ಶ್ರೀರಾಮದೇವರು ತನ್ನ ಭಾರ್ಯಳಾದ ಸೀತಾದೇವಿಯು ಲಂಕೆಯಲ್ಲಿದ್ದುದಾಗಿ ತಿಳಿದಮೇಲೆ, ಸಮುದ್ರದಲ್ಲಿ ಸೇತುಬಂಧನೆ ಮಾಡಿ ಲಂಕೆಗೆ ಹೋಗುವ ಉದ್ದೇಶವಾಗಿ ಗಣಪತಿಯನ್ನು ಪೂಜಿಸಿ ಸೇತುಬಂಧನವನ್ನು ಮಾಡಿ ಲಂಕೆಯಲ್ಲಿ ರಾವಣಾದಿ ರಾಕ್ಷಸರನ್ನು ಸಂಹರಿಸಿ ಸೀತೆಯಿಂದೊಡಗೂಡಿ ಮತ್ತೂ ರಾಜ್ಯವನ್ನು ಹೊಂದಿರುವರು. ಆದುವರಿಂದ ನೀನೂ ಗಣಪತಿಯನ್ನು ಪೂಜಿಸಿ ರಾಜ್ಯವನ್ನು ಹೊಂದೆಂದು ಹೇಳಲು ಶ್ರೀಕೃಷ್ಣನ ವಾಕ್ಯದಂತೆ ಗಣಪತಿಯ ಪೂಜೆಯನ್ನು ಮಾಡಿ ಕೌರವರನ್ನು ಕೊಂದು ರಾಜ್ಯವನ್ನು ಹೊಂದಿದನು. ಎಂದು ಗಣೇಶ ಕಲ್ಪಕಥೆಯಲ್ಲಿ ಹೇಳಿರುವರು. ಇಲ್ಲಿ "ಉಮಾ ಮಲ ಸಮುದ್ಭವಂ" ಎಂದು ಪಾರ್ವತೀದೇವಿಯ ಮೈಕೊಳೆಯಿಂದ ಗಣಪತಿಯನ್ನು ಸೃಷ್ಟಿಸಿದಳೆಂದರೆ, ದೇವೋತ್ತಮಳಾದ ಪಾರ್ವತೀದೇವಿಯ ದೇಹದಲ್ಲಿ ಅಷ್ಟು ಕೊಳೆಯುಂಟೆ ? ಸಾಮಾನ್ಯ ದೇವತೆಗಳಿಗೇನೇ, ಮೈ ಬೆವರಿಲ್ಲ; ವಸ್ತ್ರ ಕೊಳೆಯಿಲ್ಲ. ಪುಷ್ಪವು ಬಾಡುವದಿಲ್ಲವೆಂದು ಹೇಳಿರುವರು. ಹೀಗಿರಲು ಪಾರ್ವತೀದೇವಿಯರಿಗೆ ಕೊಳೆಯುಂಟೆ ಎಂದು ಆಕ್ಷೇಪಿಸಬಹುದು. ಪಾರ್ವತೀದೇವಿಯರು ಗಣಪತಿಯ ಸೃಷ್ಟಿಗೋಸ್ಕರವಾಗಿ ತಮ್ಮ ಇಚ್ಛೆಯಿಂದ ದೇಹದಲ್ಲಿ ಕೊಳೆಯನ್ನು ಸೃಷ್ಟಿಸಿ, ಅದರಿಂದ ಗಣಪತಿಯನ್ನು ಸೃಷ್ಟಿಸಿದಳೆಂದು ಭಾವಿಸಬೇಕು. ಶ್ರೀರಾಮದೇವರು ಇಂದ್ರಾದಿ ದೇವತೆಗಳೂ ಸಹ ಗಣಪತಿಯನ್ನು ಪೂಜಿಸಿದರೆಂದರೆ, ಇಂದ್ರಾದಿದೇವತೆಗಳಕಿಂತಲೂ ತಾರತಮ್ಯದಲ್ಲಿ ಕೇವಲ ಕನಿಷ್ಠ ಅಂದರೆ ೧೦ ಮೆಟ್ಟಲುಗಳಿಗೆ ಕೆಳಗಿರುವ ಗಣಪತಿಯನ್ನು ಉತ್ತಮ ಕಕ್ಷ್ಯದವರು ಪೂಜಿಸುವದುಂಟೆ ? ಶ್ರೀಪರಮಾತ್ಮನೂ ಸಹ ರಾಮರೂಪದಿಂದ ಪೂಜಿಸಿರುವದಾಗಿ ಕಥೆಯಲ್ಲಿ ಹೇಳಿರುವರು. ಇದರ ಸಮಾಧಾನವೇನೆಂದರೆ, ಪಾರ್ವತೀದೇವಿಯರು ಸ್ನಾನದ ನಿಮಿತ್ತ ಮಾಡಿ ಗಣೇಶನನ್ನು ದ್ವಾರಪಾಲಕನನ್ನಾಗಿ ಮಾಡಿರುವಾಗ

ಬಂದ ಋದ್ರದೇವರನ್ನು ಒಳಗೆ ಹೋಗಬಾರದೆಂದು ತಡೆದುದಕ್ಕಾಗಿ ಋದ್ರದೇವರು ಗಣಪತಿಯನ್ನು ಸಂಹರಿಸಿ ಪಾರ್ವತಿಯು ಕೋರಿಕೆಯಂತೆ ಅವನನ್ನು ಗಜಮುಖದಿಂದ ಬದುಕಿಸಿದರೆಂಬ ಕಥೆಯನ್ನು ಹಿಂದೆ ಬರೆದಿದೆ. ಋದ್ರದೇವರು ಗಣಪತಿಯನ್ನು ಬದುಕಿಸಿದಮೇಲೆ ಪಾರ್ವತೀದೇವಿಯು ಪ್ರೀತ್ಯರ್ಥವಾಗಿ, ಈ ದಿವಸ ಮೊದಲು ಯಾರೇ ಆಗಲಿ ಯಾವಕೆಲಸವನ್ನು ಮಾಡಬೇಕಾದರೂ ಮೊದಲು ಗಣಪತಿಯ ಪೂಜೆಯನ್ನು ಮಾಡಿ ಆಮೇಲೆ ತಮ್ಮ ಇಷ್ಟವಾದ ಕಾರ್ಯವನ್ನು ಮಾಡಬೇಕು; ಹಾಗೆ ಮಾಡುವುದರಿಂದ ಆ ಕಾರ್ಯವು ನಿರ್ವಿಘ್ನವಾಗಿ ಪೂರ್ಣವಾಗುವದು. ಹಾಗೆ ಮಾಡದೆ ತಮ್ಮ ಇಷ್ಟ ಕಾರ್ಯವನ್ನು ಮಾಡಲುಪಕ್ರಮಿಸಿದರ ಆ ಕಾರ್ಯವು ವಿಘ್ನಬಾಹುಳ್ಯದಿಂದ ಕೆಟ್ಟುಹೋಗುವದೆಂದು ಗಣಪತಿಗೆ ವರವನ್ನು ಕೊಟ್ಟಿದ್ದರು. ಆ ವರವನ್ನು ಸತ್ಯ ಮಾಡುವುದಕ್ಕಾಗಿ "ತ್ರಿಪುರಂ ಹಂತುಕಾಮೇನ ಶಿವೇನಾರಾಧಿತಃ ಪುರಾ" ತ್ರಿಪುರಾಸುರರ ಸಂಹಾರ ಕಾಲದಲ್ಲಿ ಋದ್ರದೇವರು ತಾವೇ ಗಣಪತಿಪೂಜೆಯನ್ನು ಮಾಡಿದರು. ಇಂದ್ರಾದಿಗಳು ಋದ್ರದೇವರ ವರ ಗೌರವದಿಂದಲೆ ಪೂಜಿಸಿದರು. ಶ್ರೀರಾಮದೇವರು ಅಸುರ ಜನರನ್ನು ಮೋಹಿಸುವ ಉದ್ದೇಶವಾಗಿ ಋದ್ರದೇವರ ವರಕ್ಕೆ ಗೌರವವನ್ನು ಕೊಡುವುದಕ್ಕಾಗಿ ತಾವೂ ಪೂಜಿಸಿದರೆಂದು ತಾತ್ಪರ್ಯ.

ಆದರೂ ಇವರೆಲ್ಲರೂ ಅಂತರ್ಯಾಮಿಯಾದ ಪರಮಾತ್ಮನ ಪೂಜೆಯೆಂದೆ ಭಾವಿಸಿ ಪೂಜಿಸಿರುವರು. ವಿಶ್ವಂಭರನಾಮಕ ಪರಮಾತ್ಮನೇ ಗಣಪತಿಯೊಳಗಿದ್ದು ಪೂಜೆಯನ್ನು ಸ್ವೀಕರಿಸುವವನು. ಆದುದರಿಂದಲೇ ದಾಸಾರ್ಯರು ಈಶನುಗ್ರಹವು ನಿನ್ನಲ್ಲಿ ಎಷ್ಟುಂಟೋ ಎಂದು ಸ್ತುತಿಸುತ್ತಿರುವರು.

ಕೌರವೇಂದ್ರನು ನಿನ್ನ ಭಜಿಸದ
ಕಾರಣದಿ ನಿಜಕುಲ ಸಹಿತ ಸಂ
ಹಾರವೈದಿದ ಗುರುವರ ವೃಕೋದರನ ಗದೆಯಿಂದ ।
ತಾರಕಾಂತಕನನುಜಯೆನ್ನ ಶ
ರೀರದೊಳು ನೀನಿಂತು ಧರ್ಮ
ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ ॥೧೩॥

ಪದಾರ್ಥ.—ಕೌರವೇಂದ್ರನ=ದುರ್ಯೋಧನನು, ನಿನ್ನನ್ನು ಭಜಿಸದ ಕಾರಣದಿ, ನಿಜಕುಲಸಹಿತ=ತನ್ನ ತಮ್ಮಂದಿರು ೯೯ ಜನರು, ತಮ್ಮ ಸ್ವಕೀ

ಯ ಜನರೆಲ್ಲರೂ ಮೃತರಾದುದಲ್ಲದೆ ತಾನೂ ಸಹ, ಗುರುವರ=ಜಗದ್ಗುರುಗಳಾದ ವಾಯುದೇವರ ಅವತಾರ ಭೂತರಾದ, ವೃಕೋದರನ-ಭೀಮಸೇನದೇವರ ಗದೆಯಿಂದ, ಸಂಹಾರವೈದಿದನು. ತಾರಕಾಂತಕನನುಜ=ತಾರಕನೆಂಬ ದೈತ್ಯನನ್ನು ಸಂಹರಿಸಿದವನು ಷಣ್ಮುಗನು; ಅವನ ತಮ್ಮನೆಂದರ್ಥ ಎಲೈ ಷಣ್ಮುಖಾನುಜನೇ ! ಎನ್ನ ಶರೀರದೊಳು ನೀನಿಂತು, ಕರುಣದಲಿ, ಧರ್ಮ ಪ್ರೇರಕನು ನೀನಾಗಿ, ಎನ್ನ=ನನ್ನನ್ನು ಸಂತೈಸು.

ತಾತ್ಪರ್ಯ.—ಮೇಲೆ ಹೇಳಿದಂತೆ ಅನೇಕರು ಕಾರ್ಯಾರಂಭದಲ್ಲಿ ಗಣಪತಿ ಪೂಜೆಯನ್ನು ಮಾಡಿ ಕಾರ್ಯವನ್ನು ನಿರ್ವಿಘ್ನವಾಗಿ ಪೂರೈಸಿಕೊಂಡಿರುವರು. ಪಾಪಿಯಾದ ದುರ್ಯೋಧನನು ಯುದ್ಧಾರಂಭದಲ್ಲಿ ಗಣಪತಿ ಪೂಜೆಯನ್ನು ಮಾಡದೇ ಇದ್ದುದರಿಂದ ಇದ್ದ ಬಂಧುಗಳ ಸಹಿತನಾಗಿ, ತಾನೂ ಭೀಮಸೇನದೇವರ ಗದಾಪ್ರಹಾರದಿಂದ ಕೊಲ್ಲಲ್ಪಟ್ಟನು. ಇದೇ ವಿಷಯವನ್ನೇ ಭಾಗವತ ಅಷ್ಟಮಸ್ಕಂಧದಲ್ಲಿ, ದೇವತೆಗಳು ಅಮೃತ ಮಥನಾರಂಭದಲ್ಲಿ ವಿನಾಯಕನ ಪೂಜೆಯನ್ನು ಮಾಡದೆ ಉಪಕ್ರಮಿಸಿದುದರಿಂದ, ಬೆಟ್ಟವು ನೀರಿನಲ್ಲಿ ಮುಳುಗಿ ಹೋಯಿತೆಂತಲೂ ಪರಮಾತ್ಮನು ಕೂರ್ಮಾವತಾರವನ್ನು ಮಾಡಿ ಮೇಲೆ ಅದನ್ನು ತಂದನೆಂದು “ವಿಲೋಕ್ಯವಿಘ್ನೇಶಗತಿಂತದೀಶ್ವರೋ ದುರಂತವೀರ್ಯೋ ವಿತಥಾಭಿಸಂಧಿಃ” ಎಂಬ ಶ್ಲೋಕದಿಂದ ಹೇಳಿರುವರು. ಆಮೇಲೆ ದೇವದೈತ್ಯರೆಲ್ಲರೂ ಕೂಡಿ “ಅಮೃತೋತ್ಪಾದನಾರ್ಥಾಯ ತಥಾ ದೇವಾಸುರೈರಪಿ” ಎಂಬ ಗಣೇಶನ ಕಥೆಯ ವಾಕ್ಯದಂತೆ ಗಣಪತಿ ಪೂಜೆಯನ್ನುಮಾಡಿ ಅಮೃತವನ್ನು ಪಡೆದರೆಂಬ ಅರ್ಥವು ಸಿದ್ಧವಾಗುವುದು. ಆದುದರಿಂದ ಕಾರ್ಯಾರಂಭದಲ್ಲಿ ಗಣಪತಿಯನ್ನು ಪೂಜಿಸಲೇಬೇಕೆಂದು ತಾತ್ಪರ್ಯ. ಎಲೈ ಷಣ್ಮುಖಾನುಜನೆ ! ನೀನು ಎನ್ನೊಳಗೆ ನಿಂತು ಕರುಣದಿಂದ ನನ್ನ ಮನಸ್ಸನು ಧರ್ಮವಿಷಯದಲ್ಲಿ ಪ್ರೇರಿಸಿ ನನ್ನನ್ನುದ್ಧರಿಸು.

ಏಕವಿಂಶತಿ ಮೋದಕಪ್ರಿಯ
ಮೂಕರನ ವಾಗ್ಮಿಗಳ ಮಾಳ್ಪ ಕೃ
ಪಾಕರೇಶ ಕೃತಜ್ಞಕಾಮದ ಕಾಯೋ ಕೈಪಿಡಿದು ॥
ಲೇಖಕಾಗ್ರಣಿಮನ್ಮನದ ದು
ರ್ವ್ಯಾಕುಲವ ಪರಿಹರಿಸು ದಯದಿ ಪಿ
ನಾಕಿ ಭಾರ್ಯಾತನುಜ ಮೃದ್ಭವ ಪ್ರಾರ್ಥಿಸುವೆ ನಿನಗೆ ॥೧೮॥

ಪದ್ಯಾರ್ಥ.—ಎಲೈ ಏಕವಿಂಶತಿಮೋದಕಪ್ರಿಯ! ೨೧ ಮೋದಕಗಳನ್ನು ಮಾಡಬೇಕೆಂದು ಕಲ್ಪದಲ್ಲಿ ಹೇಳಿರುವುದರಿಂದ ೨೧ ಮೋದಕ (ಕಡುಬು) ಪ್ರಿಯನೆಂದು ದಾಸಾರ್ಯರು ಹೇಳಿದರು. ಮೂಕರನು ವಾಗ್ಮಿಗಳಮಾಳ್ಪ=ಮೂಕರನ್ನು ವಾಚಾಳಕರನ್ನಾಗಿ ಮಾಡುವ ಕೃಪಾಕರನೇ! ಎಲೈ ಈಶ-ಪ್ರಭೋ! ಕೃತಜ್ಞನೆ! ಮಾಡಿದ ಸೇವಾದಿಗಳನ್ನು ಮರೆಯದೇ ಪ್ರತಿಫಲವನ್ನು ಕೊಡುವವರು ಕೃತಜ್ಞರೆನಿಸುವರು, ಕಾಮದ=ಇಷ್ಟಾರ್ಥವನ್ನು ಪೂರೈಸುವವನೆ! ಕೈಪಿಡಿದು-ನನ್ನ ಕೈ ಪಿಡಿದು ಕಾಯೋ, ಲೇಖಕಾಗ್ರಣಿ=ಬರೆಯುವವರಲ್ಲಿ ಅಗ್ರೇಸರನೆ! ದಯದಿ, ಮನ್ಮನದ - ನನ್ನ ಮನಸ್ಸಿನಲ್ಲಿರುವ, ದುರ್ವ್ಯಾಕುಲವ=ದುಃಖಕರವಾದ ವಿಷಯ ಸಂಬಂಧ ವ್ಯಾಕುಲವನ್ನು ಪರಿಹರಿಸು! ಪಿನಾಕಿ=ಪಿನಾಕ ಎಂಬ ಧನುಸ್ಸನ್ನು ಧರಿಸಿರುವುದರಿಂದ ಪಿನಾಕೀ ಎಂದು ರುದ್ರದೇವರಿಗೆ ಹೆಸರು. ಖುದ್ರದೇವರ, ಭಾರ್ಯಾ = ಹೆಂಡತಿಯಾದ ಪಾರ್ವತೀದೇವಿಯರ, ಮೃದ್ಭವತನುಜ=ಮೈ ಕೊಳೆ ಮಣ್ಣಿನಿಂದ ಜನಿಸಿದ ಪುತ್ರನೆ! ನಿನಗೆ=ನಿನ್ನನ್ನು, ಪ್ರಾರ್ಥಿಸುವೆನು.

ತಾತ್ಪರ್ಯ.—ಗಣೇಶನ ಕಥೆಯಲ್ಲಿ " ಅಥೈಕವಿಂಶತಿಂಗೃಹ್ಯ ಮೋದಕಾನ್ ಘೃತಪಾಚಿತಾನ್ ॥ ಸ್ಥಾಪಯಿತ್ವಾ ಗಣಾಧ್ಯಕ್ಷಸಮೀಪೇ ಕುರುನಂದನ ॥" ಎಂದು ಹೇಳಿರುವರು. ಅದೇ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಏಕವಿಂಶತಿಮೋದಕಪ್ರಿಯನೆಂದರು. ಗಣೇಶನ ಪ್ರೀತಿಗೋಸ್ಕರ ೨೧ ಮೋದಕಗಳನ್ನು ಮಾಡಬೇಕೆಂದು ವಿಧಿ ಇರುವುದೇ ಇದರ ಕಾರಣವು. ಮೂಕರನ್ನು ವಾಚಾಳಕರನ್ನಾಗಿ ಮಾಡುವ ಕರುಣಾಸಮುದ್ರನೇ! ಎಲೈ ಪ್ರಭೋ! ಎಲೈ ಕೃತಜ್ಞ, ಒಂದುಸಲ ಪೂಜಿಸಲು ಅದನ್ನು ಎಂದಿಗೂ ಮರೆಯದಿರುವವನು. ಆದುದರಿಂದ ಕೃತಜ್ಞನೆಂದು ಗಣಪತಿಯನ್ನು ಕೊಂಡಾಡಿದರು. ಭಕ್ತರಮನೋಭೀಷ್ಟವನ್ನು ಪೂರೈಸುವವನೇ! ನನ್ನ ಕೈ ಪಿಡಿದು ಉದ್ಧರಿಸು. ಲೇಖನ ಮಾಡುವವರಲ್ಲಿ ಅಗ್ರೇಸರನಾದವನೆ! ನನ್ನ ಮನಸ್ಸಿನಲ್ಲಿರುವ ವಿಷಯ ಸಂಬಂಧವಾದ ವ್ಯಾಕುಲವನ್ನು ಪರಿಹರಿಸು. ಪಾರ್ವತೀದೇವಿಯರ ಮೈ ಕೊಳೆ ಮಣ್ಣಿನಿಂದ ಉದ್ಭವಿಸಿ, ಪಾರ್ವತೀ ಮಗನೆಂದು ಹೆಸರು ಪಡೆದವನೆ! ನಿನ್ನನ್ನು ಪ್ರಾರ್ಥಿಸುವೆನು.

ನಿತ್ಯಮಂಗಳಚರಿತ ಜಗದು
ತ್ಪತ್ತಿ ಸ್ಥಿತಿ ಲಯ ನಿಯಮನಜ್ಞಾ
ನತ್ರಯಪ್ರದ ಬಂಧಮೋಚಕ ಸುಮನಸಾಸುರರ ||
ಚಿತ್ತವೃತ್ತಿಗಳಂತೆ ನಡೆವ ಪ್ರ
ಮತ್ತನಲ್ಲ ಸುಹೃಜ್ಜನಾಪ್ತನ
ನಿತ್ಯದಲಿ ನೆನೆನೆನದು ಸುಖಿಸುವ ಭಾಗ್ಯ ಕರುಣಿಪುದು ||೧೫||

ಪದ್ಯಾರ್ಥ.—ನಿತ್ಯಮಂಗಳಚರಿತ=ನಿತ್ಯವಾದ ವೇದಗಳಿಂದ ಹೊಗಳಿಸಿಕೊಳ್ಳಲ್ಪಡುವ ಮಂಗಳಕರವಾದ ಚರಿತ್ರೆಯುಳ್ಳ, ಜಗತ್=ಪ್ರಪಂಚಕ್ಕೆ, ಉತ್ಪತ್ತಿ=ಸೃಷ್ಟಿ, ಸ್ಥಿತಿ=ಸಂರಕ್ಷಣ, ಲಯ=ಸಂಹಾರ, ನಿಯಮನ=ಪ್ರೇರಣೆ, ಜ್ಞಾನತ್ರಯ=ಜ್ಞಾನ, ಅಜ್ಞಾನವೆಂಬ ಇವು ಮೂರನ್ನು, ಪ್ರದ-ಕೊಡುವವನಾದ, ಬಂಧ=ಸಂಸಾರದಲ್ಲಿ ತಗಲಿಸುವವನೂ, ಮೋಚಕ=ಬಿಡುಗಡೆ ಮಾಡಿಸುವವನೂ ( ಮುಕ್ತಿಯನ್ನು ಕೊಡುವವನೂ ) ಅದ, ಸುಮನಸಾಸುರರ=ಸುಮನಸ=ದೇವತೆಗಳು, ಅಸುರರ=ದೈತ್ಯರು ಇವರುಗಳ, ಚಿತ್ತವೃತ್ತಿಗಳಂತೆ=ಅವರವರ ಯೋಗ್ಯತಾನುಸಾರವಾಗಿ ಅವರವರ ಚಿತ್ತವೃತ್ತಿ ಇರುವುದು. ಅದರಂತೆ ನಡೆಯುವವನಾದ, ಪ್ರಮತ್ತನಲ್ಲ=ಎಂದೆಂದಿಗೂ ವಿವೇಕವಿಲ್ಲದ ಕಾರ್ಯವನ್ನು ಮಾಡಿದವನಾದ, ಸುಹೃಜ್ಜನ-ಅವನ ಭಕ್ತರೇ ಅವನಿಗೆ ಸುಹೃತ್ತು ಜನರು; ಅಂತಹಾ ಭಕ್ತಜನರಿಗೆ, ಆಪ್ತನ=ಆಪ್ತನಾದ ಶ್ರೀಪರಮಾತ್ಮನ, ನಿತ್ಯದಲ್ಲಿ, ನೆನೆನೆನದು ಸುಖಿಸುವ, ಭಾಗ್ಯ –ಭಾಗ್ಯವನ್ನು ಕರುಣಿಪುದು.

ತಾತ್ಪರ್ಯ.—ಶ್ರೀಪರಮಾತ್ಮನನ್ನು ಸರ್ವದಾ ಸ್ಮರಿಸಿ ಸ್ಮರಿಸಿ ಆನಂದಪಡುವುದೇ ಮಹಾ ಭಾಗ್ಯವು. ಅಂತಹಾ ಭಾಗ್ಯವು ನನಗೆ ಯಾವಾಗಲೂ ಇರುವಂತೆ ಅನುಗ್ರಹ ಮಾಡೆಂದು ಈ ಪದ್ಯದಿಂದ ಬೇಡುತ್ತಾರೆ. ಆ ಪರಮಾತ್ಮನು ಎಂತಹವನೆಂದರೆ, ಶಶ್ವದೇಕ ಪ್ರಕಾರವಾದ ವೇದಗಳಿಂದ ಹೊಗಳಿಸಿಕೊಳ್ಳಲ್ಪಡುವ ಮಂಗಳಕರವಾದ ಚರಿತ್ರೆಗಳುಳ್ಳವನು ಮತ್ತು ಪ್ರಪಂಚಕ್ಕೆ "ಉತ್ಪತ್ತಿ ಸ್ಥಿತಿ ಸಂಹಾರಾನಿಯತಿಜ್ಞಾನಮಾವೃತಿಃ || ಬಂಧಮೋಕ್ಷೌಚ ಪುರುಷಾದ್ಯಸ್ಮಾತ್ಸಹರಿರೇಕರಾಟ್ || " ಎಂಬ ಬ್ರಹ್ಮಸೂತ್ರಭಾಷ್ಯದ ವಾಕ್ಯದಂತೆ ಸೃಷ್ಟ್ಯಾದಿ ಅಷ್ಟಕರ್ತೃತ್ವ ಉಳ್ಳವನು. ದೇವದೈತ್ಯರ ಯೋ

ಗ್ಯತೆಗಳನ್ನರಿತು, "ಬುದ್ಧಿಃಕರ್ಮಾಣಿ ಸಾರಿಣೀ" ಎಂಬ ರೀತಿಯಾಗಿ, ಅವರ ವರ ಕರ್ಮಾನುಸಾರವಾಗಿ ಭಗವಂತನಿಂದ ದತ್ತವಾದ ಕಿಂಚಿತ್ಸ್ವಾತಂತ್ರ್ಯ ದಿಂದಲೂ, ಆಯಾ ಕಾಲದಲ್ಲಿ ಉಂಟಾಗುವ ಭಗವತ್ಪ್ರೇರಣೆಯಿಂದಲೂ, ಅವರವರ ಚಿತ್ತವೃತ್ತಿಗಳು ಬದಲಾಯಿಸಿರುವಂತೆ ಪರಮಾತ್ಮನೂ ಅವ ರವರೊಳಗಿದ್ದು ಆ ಚಿತ್ತವೃತ್ತಿಗಳನ್ನು ಅನುಸರಿಸಿಯೇ ಕರ್ಮಗಳನ್ನು ಮಾ ಡಿಸಿ ದೇವತೆಗಳಿಗೆ ಮುಕ್ತಿ, ದೈತ್ಯರಿಗೆ ತಮಸ್ಸನ್ನು ಕೊಡುವನೆಂಬ ಭಾವ. ಕರ್ಮಾನುಸಾರ ಬುದ್ಧಿಯನ್ನು ಪ್ರೇರಿಸುವ ವಿಷಯದಲ್ಲಾಗಲಿ, ಅವರವರ ಯೋಗ್ಯತಾನುಸಾರ ಕರ್ಮಗಳನ್ನು ಮಾಡಿಸುವ ವಿಷಯದಲ್ಲಾಗಲಿ, ಫಲ ಗಳನ್ನು ಕೊಡುವ ವಿಷಯದಲ್ಲಾಗಲಿ ಪ್ರಮತ್ತನಲ್ಲ. ಅಂದರೆ, ಬಹುಜಾಗ ರೂಕನಾಗಿರುವನೆಂಬ ಭಾವ, ಭಕ್ತ ಜನರಿಗೆ ಪರಮಾಪ್ತನೆಂದೆನಿಸುವನು. ಇಂತಹಾ ಪರಮಾತ್ಮನ ಸ್ಮರಣೆಯಿಂದ ಆನಂದಪಡುವಂತೆ ಮಾಡೆಂದರ್ಥ.

**ಪಂಚಭೇದಜ್ಞಾನವರುಪು ವಿ**
**ರಿಂಚಿ ಜನಕನತೋರು ಮನದಲಿ**
**ವಾಂಛಿತಪ್ರದ ವಲಿಮೆಯಿಂದಲಿ ದಾಸನೆಂದರಿದು ||**
**ಪಂಚವಕ್ತ್ರನ ತನಯ ಭವದೊಳು**
**ವಂಚಿಸದೆ ಸಂತೈಸು ವಿಷಯದಿ**
**ಸಂಚರಿಸದಂದದಲಿಮಾಡು ಮನಾದಿಕರಣಗಳ ||೧೬||**

ಪದ್ಯಾರ್ಥ.—ಪಂಚಭೇದಜ್ಞಾನವರುಪು – ಜೀವರಿಗೂ ಜೀವರಿಗೂ ಪರಸ್ಪರ ಭೇದ, ಜೀವರಿಗೂ ಜಡರಿಗೂ ಭೇದ, ಜೀವರಿಗೂ ಪರಮಾತ್ಮ ನಿಗೂ ಭೇದ, ಜಡಜಡಗಳಿಗೆ ಪರಸ್ಪರ ಭೇದ; ಜಡಗಳಿಗೂ ಪರಮಾತ್ಮನಿ ಗೂ ಭೇದವೆಂದು ತಿಳಿಯುವುದೇ ಪಂಚಭೇದ ಜ್ಞಾನವೆಂದರ್ಥ. ಈ ಜ್ಞಾ ನವನ್ನು ಸರ್ವದಾ ನಮಗೆ ಕೊಡು. ವಿರಿಂಚಿಜನಕನ=ಬ್ರಹ್ಮದೇವರ ತಂದೆ ಯಾದ ಶ್ರೀಹರಿಯನ್ನು, ಮನದಲಿ=ನಮ್ಮ ಮನಸ್ಸಿನಲ್ಲಿ, ತೋರು=ಕಾಣು ವಂತೆಮಾಡು. ಎಲೈ ವಾಂಛಿತಪ್ರದನೇ=ಇಷ್ಟಾರ್ಥವನ್ನು ಪೂರೈಸುವವ ನೇ! ವಲಿಮೆಯಿಂದಲಿ=ಅಭಿಮಾನಪೂರ್ವಕವಾಗಿ, ದಾಸನೆಂದರಿದು=ಇವನು ಹರಿದಾಸನೆಂದು ತಿಳಿದು, ನಿನಗೂ ದಾಸನನ್ನಾಗಿ ಭಾವಿಸಿ, ಭವದೊಳು= ಸಂಸಾರದಲ್ಲಿ, ವಂಚಿಸದೇ ಸಂತೈಸು. ಪಂಚವಕ್ತ್ರನತನಯ = ೫ ತಲೆಗ

ಳುಳ್ಳ ರುದ್ರದೇವರ ಮಗನೇ! ಮನ ಆದಿಕರಣಗಳ=ಮನಸ್ಸು ಮೊದಲಾದ ಇಂದ್ರಿಯಗಳನ್ನು, ವಿಷಯದಿ=ವಿಷಯ ಭೋಗಾದಿಗಳಲ್ಲಿ ಸಂಚರಿಸದಂದ ದಲಿ ಮಾಡು.

ತಾತ್ಪರ್ಯ.—ಪದ್ಯಾರ್ಥದಲ್ಲಿ ಹೇಳಿದಂತೆ ಪಂಚಭೇದ ಜ್ಞಾನವು ನಮಗೆ ಜ್ಞಾಪಕದಲ್ಲಿರುವಂತೇ ಮಾಡು. ಶ್ರೀಪರಮಾತ್ಮನನ್ನು ಅಪರೋಕ್ಷದಲ್ಲಿ ಕಾಣುವಂತೆ ಮಾಡು. ಎಲೈ ವಾಂಛಿತಪ್ರದನೇ! ಇವನು ಹರಿದಾಸನೆಂತಲೂ ನಿನಗೂ ದಾಸನೆಂದು ತಿಳಿದು ಅಭಿಮಾನಪೂರ್ವಕವಾಗಿ ಸಂಸಾರದಲ್ಲಿ ತಗುಲಿಸಿ ನಮ್ಮನ್ನು ವಂಚಿಸದೆ ಉದ್ಧರಿಸು. ಎಲೈ ರುದ್ರಕುಮಾರ! ಮನಸ್ಸು ಮೊದಲಾದ ಇಂದ್ರಿಯಗಳು ವಿಷಯಭೋಗದಲ್ಲಿ ಪ್ರವೇಶಿಸದೇ ಇರುವಂತೆಮಾಡು.

**ಏನು ಬೇಡುವದಿಲ್ಲ ನಿನ್ನ ಕು**
**ಯೋನಿಗಳು ಬರಲಂಜೆ ಲಕುಮಿಾ**
**ಪ್ರಾಣಪತಿ ತತ್ವೇಶರಿಂದೊಡಗೂಡಿ ಗುಣಕಾರ್ಯ।**
**ತಾನೆ ಮಾಡುವನೆಂಬ ಈ ಸು**
**ಜ್ಞಾನವೇ ಕರುಣಿಸುವದೆಮಗೆ ಮ**
**ಹಾನುಭಾವ ಮುಹುರ್ಮುಹುಃ ಪ್ರಾರ್ಥಿಸುವೆ ಇನಿತೆಂದು ॥೧೭॥**

ಪದ್ಯಾರ್ಥ.—ನಿನ್ನ=ನಿನ್ನನ್ನು, ಏನು ಬೇಡುವದಿಲ್ಲ = ಐಹಿಕವಾದ ವಿಷಯ ಸಂಬಂಧವಾದ ಸುಖವನ್ನಾಗಲಿ, ಸ್ವರ್ಗಾದಿ ಭೋಗವನ್ನಾಗಲೀ ಕೊಡೆಂದು ನಾನು ಬೇಡುವದಿಲ್ಲ. ಕುಯೋನಿಗಳು=ನಾಯಿ ನರಿ ಮೊಲಾದ ಜನ್ಮಗಳು, ಬರಲು ಅಂಜೆ-ಪ್ರಾಪ್ತವಾದರೂ, ನಾನು ಅದಕ್ಕೆ ಅಂಜುವವನಲ್ಲ. ಎಲೈ ಮಹಾನುಭಾವನೇ! ಲಕುಮಿಾಪ್ರಾಣಪತಿ-ಲಕ್ಷ್ಮೀದೇವಿಯರಿಗೂ, ಶ್ರೀಮುಖ್ಯಪ್ರಾಣದೇವರಿಗೂ ನಾಥನೆಂದೆನಿಸುವ ಶ್ರೀಪರಮಾತ್ಮನು ತತ್ವೇಶರಿಂದೊಡಗೂಡಿ=೨೪ ತತ್ವಾಭಿಮಾನಿಗಳಿಂದೊಡಗೂಡಿ, ಗುಣಕಾರ್ಯ =ಸತ್ವರಜಸ್ತಮೋ ಗುಣ ಸಂಬಂಧವಾದ ಸಮಸ್ತ ಕಾರ್ಯಗಳನ್ನು, ತಾನೇ ಮಾಡುವನು=ನಮ್ಮೆಲ್ಲರಲ್ಲಿದ್ದು ತಾನೇ ಮಾಡುವನೆಂಬ, ಈ ಸುಜ್ಞಾನವ-ಈ ಉತ್ತಮವಾದ ಜ್ಞಾನವನ್ನೇ, ಎಮಗೆ=ನಮಗೆ, ಕರುಣಿಸುವದು = ದಯವಿಟ್ಟು ಕೊಡಬೇಕು. ಇನಿತೆಂದು= ಹೀಗೆಂದು, ಮುಹುರ್ಮುಹು=ಪುನಃ ಪುನಃ ಪ್ರಾರ್ಥಿಸುವೆನು.

ತಾತ್ಪರ್ಯ.—ನಾನು ನಿಸ್ನನ್ನು ಕುರಿತು ಸಂಸಾರದಲ್ಲಿ ವಿಷಯಾದಿ ಭೋಗಗಳ ಸುಖವನ್ನು ಕೊಡೆಂದಾಗಲಿ, ಸ್ವರ್ಗಭೋಗವನ್ನಾಗಲೀ ಬೇಡು ವದಿಲ್ಲ. "ದಶಾವರಾಣಾಂ ದೇಹಾನಾಂ ಕಾರಣಾನಿಕರ್ರೋತ್ಯಸೌ' ಇತ್ಯಾದಿ ಪ್ರಮಾಣಗಳಂತೆ, ಪ್ರತಿ ಒಂದು ದಿನಸದಲ್ಲೂ ೧೦ ನೀಚ ಜನ್ಮಗಳನ್ನು ಹೊಂದುವದಕ್ಕೆ ಬೇಕಾದಷ್ಟು ಕರ್ಮಗಳನ್ನು ಒಬ್ಬೊಬ್ಬ ಜೀವನೂ ಮಾಡು ವನೆಂಬ ವಿಧಿಯಿಂದ ನನಗೆ ಬೇಕಾದಷ್ಟು ನೀಚ ಜನ್ಮಗಳು ಬಂದರೂ ನಾನು ಹೆದರುವವನಲ್ಲ. ಆದರೆ ಯಾವಾಗಲೂ ನಾವು ಮಾಡುವ ಪುಣ್ಯ ಪಾಪಾದಿ ಎಲ್ಲಾ ಕಾರ್ಯಗಳನ್ನೂ ಪರಮಾತ್ಮನೇ ತತ್ವಾಭಿಮಾನಿ ದೇವತೆಗಳಿಂದೊಡ ಗೂಡಿ ನಮ್ಮೊಳಗಿದ್ದು ಮಾಡುವನು. ಎಂಬ ಈ ಉತ್ತಮ ಜ್ಞಾನವನ್ನು ಮಾತ್ರ ನಮಗೆ ದಯಪಾಲಿಸಬೇಕೆಂದು ಪುನಃಪುನಃ ಪ್ರಾರ್ಥಿಸುವೆನು. ಇದ ರಿಂದ ಕಾಮ್ಯವನ್ನು ಎಂದಿಗೂ ಅಪೇಕ್ಷಿಸಬಾರದೆಂದು ವಿಧಿ ಇದ್ದರೂ, "ಕಾ ಮಂತುದಾಸ್ಯೇನತು ಕಾಮುಕಾಮ್ಯಯಾ" ಎಂಬ ಭಾಗವತ ವಾಕ್ಯಾನು ಸಾರವಾಗಿ ಭಗವಂತನ ದಾಸನಾಗಬೇಕೆಂದು ಬೇಡುವದು ತಪ್ಪಲ್ಲ, ಕಾ ಮ್ಯವಾದ ವಿಷಯಭೋಗಾದಿಗಳನ್ನು ಮಾತ್ರ ಬೇಡಬಾರದೆಂದು ಸೂಚಿ ಸಿದಂತಾಯಿತು.

ನಮೋನಮೋ ಗುರುವರ್ಯ ವಿಬುಧೋ
ತ್ತಮ ವಿವರ್ಜಿತ ನಿದ್ರ ಕಲ್ಪ
ದ್ರುಮನೆನಿಪ ಭಜಕರಿಗೆ ಬಹುಗುಣಭರಿತ ಶುಭಚರಿತ ||
ಉಮಯನಂದನ ಪರಿಹರಿಸು ಹಂ
ಮಮತೆ ಬುಧ್ಯಾದಿಂದ್ರಿಯಂಗಳಾ
ಕ್ರಮಿಸಿ ದಣಿಸುತಲಿಹವು ಭವದೊಳಗಾವಕಾಲದಲಿ ||೧೮||

ಪದ್ಯಾರ್ಥ.—ಗುರುವರ್ಯ-ಗುರುಗಳಲ್ಲಿ ಉತ್ತಮನೇ ! ವಿವರ್ಜಿತನಿ ದ್ರ=ನಿದ್ರೆ ಇಲ್ಲದವನೇ ! ಭಜಕರಿಗೆ, ಕಲ್ಪದ್ರುಮನೆನಿಪೆ=ಕಲ್ಪವೃಕ್ಷದಂತಿರು ವವನೆಂದು ಪ್ರಸಿದ್ಧನಾಗಿರುವೆ, ವಿಬುಧೋತ್ತಮ=ದೇವಶ್ರೇಷ್ಠನೇ! ಬಹು ಗುಣಭರಿತ=ಬಹು ಗುಣಗಳಿಂದ ಪೂರ್ಣನಾದವನೇ ! ಶುಭಚರಿತ=ಮಂಗಳ ಕರವಾದ ಚರಿತ್ರೆಯುಳ್ಳವನೇ ! ನಮೋ ನಮೋ=ನಿನಗೆ ನಮಸ್ಕಾರ ನಮ ಸ್ಕಾರ, ಉಮೆಯನಂದನ=ಎಲೈ ಪಾರ್ವತೀ ಪುತ್ರನೇ ! ಭವದೊಳಗೆ=ಸಂ

ಸಾರದಲ್ಲಿ, ಅನಕಾಲದಲಿ=ಸರ್ವಕಾಲದಲ್ಲೂ, ಅಹಂಮಮತೆ=ನಾನು ನನ್ನ ದೆಂಬ ಅಭಿಮಾನವು, ಬುಧ್ಯಾದಿ ಇಂದ್ರಿಯಗಳ=ಬುದ್ದಿ ಮೊದಲಾದ ಇಂ ದ್ರಿಯಗಳನ್ನು, ಆಕ್ರಮಿಸಿ, ದಣಿಸುತಲಿಹವು=ಸಾಕುಮಾಡುತ್ತಲಿರುವವು. ಅಂತಹಾ ನಾನು ನನ್ನದು ಎಂಬ ಅಭಿಮಾನವನ್ನು ಪರಿಹರಿಸು.

ತಾತ್ಪರ್ಯ.—ಭಕ್ತ ಜನರಿಗೆ ಕಲ್ಪವೃಕ್ಷದಂತೆ ಅವರ ಮನೋಭೀಷ್ಟ ವನ್ನು ಪೂರೈಸುವ, ಎಲೈ ದೇವೋತ್ತಮನೇ ! ನಿನಗೆ ನಮಸ್ಕಾರ ನಮಃಸ್ಕಾರ ನೀನು ಯಾವಾಗಲೂ ನಿದ್ರೆಯನ್ನು ಮಾಡದೆ ಭಕ್ತರನ್ನು ಪಾಲಿಸುವೆ ! ಗಂಗಾ ಪರ್ಜನ್ಯರು, ಉಕ್ತಶೇಷಶತಸ್ಥರಗಿಂತಲೂ ಉತ್ತಮನಾದ ಗುರುವೆನಿಸುವೆ ಬಹು ಗುಣಪೂರ್ಣನು; ಮಂಗಳಕರವಾದ ಚರಿತ್ರೆಯುಳ್ಳವನು ಎಲೈ ಪಾರ್ವತೀಪುತ್ರನೇ ! ಈ ಸಂಸಾರದಲ್ಲಿ ನಾನು ನನ್ನದು ಎಂಬ ಅಭಿಮಾನವು, ಮನಸ್ಸು, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳನ್ನು ಆಕ್ರಮಿಸಿಕೊಂಡು, ಬಹಳ ದಣುವಿಕೆಯನ್ನುಂಟುಮಾಡುತ್ತಿರುವದು. ಆದುದರಿಂದ, ಅಹಂ ಮಮತೆಯನ್ನು ಪರಿಹರಿಸು.

**ಜಯ ಜಯತು ವಿಘ್ನೇಶ ತಾಪ**
**ತ್ರಯ ವಿನಾಶನ ವಿಶ್ವಮಂಗಳ**
**ಜಯ ಜಯತು ವಿದ್ಯಪ್ರದಾಯಕ ವೀತಭಯಶೋಕ ||**
**ಜಯ ಜಯತು ಚಾರ್ವಾಂಗ ಕರುಣಾ**
**ನಯನದಿಂದಲಿ ನೋಡಿ ಜನುಮಾ**
**ಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ||೧೯||**

ಪದ್ಯಾರ್ಥ.—ಎಲೈ ವಿಘ್ನೇಶ ! ತಾಪತ್ರಯವಿನಾಶನ=ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕವೆಂಬ ಮೂರು ವಿಧವಾದ ತಾಪಗಳನ್ನು ಪರಿಹರಿ ಸುವವನೇ ! ಜಯ-ನಿನ್ನ ಜಯವು, ಜಯತು=ಲೋಕಪ್ರಖ್ಯಾತವಾಗಲಿ, ವಿಶ್ವಮಂಗಳ = ಪ್ರಪಂಚಕ್ಕೇ ಮಂಗಳವನ್ನುಂಟು ಮಾಡುವವನೇ ! ಜಯ ಜಯತು=ನಿನ್ನ ಜಯವು ಲೋಕದಲ್ಲಿ ಪ್ರಸಿದ್ಧಿಯಾಗಿರಲಿ, ವಿದ್ಯಪ್ರದಾಯಕ =ಭಜಕರಿಗೆ ವಿದ್ಯೆಯನ್ನು ಕೊಡುವವನೇ | ವೀತಭಯಶೋಕ=ಹೊಗಳಲ್ಪ ಟ್ಟ ಭಯಶೋಕವುಳ್ಳವನು ಅಂದರೆ, ಎಂದೆಂದಿಗೂ ಭಯವಾಗಲೀ ಶೋಕ ವಾಗಲಿ ಇಲ್ಲದವನೆಂದರ್ಥ. ಜಯಜಯತು. ಚಾರ್ವಾಂಗ=ಎಲೈ ಮನೋಹರ

ವಾದ ಅಂಗಗಳುಳ್ಳವನೇ ! ಕರುಣಾನಯನದೀದಲಿ=ಕರುಣಾದೃಷ್ಟಿಯಿಂದ ನೋಡಿ, ಭವದೊಳಗೆ=ಸಂಸಾರದಲ್ಲಿ, ಭಕ್ತರಿಗೆ, ಜನುಮ=ಉತ್ಪತ್ತಿ, ಆಮಯ=ರೋಗಗಳು, ಮೃತಿಗಳನು=ಮರಣ ಇವುಗಳನ್ನು, ಪರಿಹರಿಸು.

ತಾತ್ಪರ್ಯ.—ಎಲೈ ವಿಘ್ನೇಶ್ವರನೇ ನಿನ್ನ ಜಯವನ್ನು ಲೋಕದಲ್ಲಿ ಪ್ರಸಿದ್ಧಿಪಡಿಸು. ಸ್ವತಂ ಜಯಶೀಲನಾದ ವಿಘ್ನೇಶ್ವರನೇ ನಿನಗೆ ಜಯವಾಗಲಿಜಯವಾಗಲಿ ಎಂದು ನಾವು ಹರಿಸುವದರಿಂದೇನು ? ಭಾಗವತ ಶೃತಿಗೀತೆಯ ಮೊದಲನೆಯ ಶ್ಲೋಕದಲ್ಲಿ " ಜಯಜಯ ಜಹ್ಯಜಾಂ ' ಎಂಬಲ್ಲಿ ನಿತ್ಯ ಜಯಶೀಲನಾದ ಪರಮಾತ್ಮನನ್ನು ನಿನಗೆ ಜಯವಾಗಲಿ ಎಂದು ವೇದಗಳು ಆಶೀರ್ವಾದ ಮಾಡಲಿಲ್ಲ. ನಿನ್ನ ಜಯವನ್ನು ಲೋಕದಲ್ಲಿ ಪ್ರಸಿದ್ಧಿಪಡಿಸೆಂದು ಪ್ರಾರ್ಥಿಸಿದವೆಂದು ವ್ಯಾಖ್ಯಾನ ಮಾಡಿರುವರು. ಅದೇ ಅರ್ಥವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಆದುದರಿಂದ ಜಯ=ನಿನ್ನ ಜಯವು, ಜಯತು=ಜಯಶೀಲವಾಗಲಿ ಅಂದರೆ ಲೋಕದಲ್ಲಿ ಪ್ರಸಿದ್ಧಿಯಾಗಲಿ ಎಂದು ಅರ್ಥವು ಬರೆಯಲ್ಪಟ್ಟಿತು. ತಾಪತ್ರಯವೆಂದರೆ.—೧. ಮನೋವ್ಯಾಧಿ. ೨. ದೈವ ಸಂಬಂಧವಾದ ತಾಪಗಳು ಕಾಲಾಕಾಲಗಳಲ್ಲಿ ಮಳೆ ಬೆಳೆ ಇಲ್ಲದೆ ಹೋಗುವಿಕೆ ಮೊದಲಾದ ದೈವಸಂಕಲ್ಪದಿಂದ ಪ್ರಾಪ್ತವಾಗುವ ದುಃಖಗಳು, ಪಾಂಚಭೌತಿಕವಾದ ಈ ದೇಹದಲ್ಲಿ ಕಣ್ಣು ಕಾಣದೇ ಹೋಗುವದು, ಕಿವಿ ಕೇಳದೇ ಹೋಗುವದು ಮೊದಲಾದ ಪಂಚಭೂತ ಸಂಬಂಧವಾದ ದುಃಖಗಳು; ಈ ಮೂರು ವಿಧವಾದ ದುಃಖಗಳಿಗೆ ತಾಪತ್ರಯವೆನ್ನುವರು; ಇವುಗಳನ್ನು ಪರಿಹಾರಮಾಡುವವನು, ಪ್ರಪಂಚಕ್ಕೆ ಮಂಗಳವನ್ನುಂಟುಮಾಡುವವನು. ಸಕಲರಿಗೂ ವಿದ್ಯೆಯನ್ನು ಕೊಡುವವನು. ಅಂದರೆ ವಿದ್ಯಾರಂಭದಲಿ ಗಣಪತಿಪೂಜೆಯನ್ನು ಮಾಡಿ ವಿದ್ಯಾ ಪ್ರಾರಂಭ ಮಾಡಿದರೆ ವಿದ್ಯೆಗೆ ಮಧ್ಯೇ ವಿಚ್ಛೇದ ಬರದೇ ಸಂಪೂರ್ಣ ವಿದ್ಯೆಯು ಬರುವದೆಂಬ ತಾತ್ಪರ್ಯ. ವೀತಭಯನೆಂದರೆ ಯಾವ ಕಾಲದಲ್ಲೂ ತನಗಿಂತಲೂ ಉತ್ತಮರಾದವರನ್ನುಳಿದು ಮಿಕ್ಕ ಜನರಿಂದ ಗಣಪತಿಗೆ ಯಾವಭಯವೂ ಇಲ್ಲವೆಂದರ್ಥ. ಪರಮಾತ್ಮನ ಭಯವು ಬ್ರಹ್ಮಾದಿಗಳಿಗೂ ಇರುವಾಗ ಗಣಪತಿಗೆ ಇಲ್ಲದೆ ಹೋಗುವದಿಲ್ಲ. ಭಯವಿಲ್ಲದವನೆಂದರೆ ನಾವು ಹೇಗೆ ನಮಗಿಂತಲೂ ಕಮ್ಮಿಯಾದ ಹುಲಿ, ಹಾವು ಮೊದಲಾದವುಗಳಿಂದ ಭಯಪಡುವೆವೋ ಹಾಗೆ ತಾರತಮ್ಯದಲ್ಲಿ ಗಣ

ಪತಿಗಿಂತಲೂ ಕಮ್ಮಿಯಾದ ಯಾವ ಜನರಿಂದಲೂ ಭಯವಿಲ್ಲದವನೆಂದರ್ಥ. ವಿಷಯ ಸಂಬಂಧವಾದ ಯಾವ ಬಗೆಯಾದ ಶೋಕವು ಇಲ್ಲದವನು, ಲಂಬೋದರನಾಗಿಯೂ, ಗಜಮುಖನಾಗಿದ್ದರೂ, ಅವನ ಅಂಗಗಳು ನೋಡುವವರಿಗೆ ಮನೋಹರವಾಗಿಯೇ ಕಾಣುವವು; ಆದುದರಿಂದ ಚಾರ್ವಾಂಗನೆಂದರು. ಇಂತಹಾ ನಿನ್ನ ಜಯವು ಲೋಕಪ್ರಖ್ಯಾತವಾಗಿ ಯಾವಾಗಲೂ ಇರಲಿ! ಅಂದರೆ ಜಯವನ್ನು ಲೋಕದಲ್ಲಿ ಪ್ರಖ್ಯಾತಿಪಡಿಸೆಂದು ಪ್ರಾರ್ಥನೆ ಎಂದರ್ಥ. ನೀನು ಕರುಣಾದೃಷ್ಟಿಯಿಂದ ನೋಡಿ, ನಿನ್ನ ಭಕ್ತರಿಗೆ ಸಂಸಾರದಲ್ಲಿ ಉಂಟಾಗುವ, ಹುಟ್ಟುವಿಕೆ, ಸಾಯುವಿಕೆ, ರೋಗಗಳನ್ನನುಭವಿಸುವಿಕೆ ಮೊದಲಾದವುಗಳನ್ನು ಪರಿಹರಿಸು ಅಂದರೆ ಮುಕ್ತಿಯನ್ನು ಕೊಡುವ ಯೋಗ್ಯತೆಯು ಗಣಪತಿಗಿಲ್ಲವಾದರೂ, ಪರಮಾತ್ಮನಲ್ಲಿ ಭಕ್ತಿಯನ್ನು ಕೊಟ್ಟು ಮುಕ್ತಿ ಸಾಧನವನ್ನು ಮಾಡಿಸಿ ಉದ್ಧರಿಸಲೆಂದು ತಾತ್ಪರ್ಯ.

ಕಡುಕರುಣಿ ನೀನೆಂದರಿದು ಹೇ
ರೊಡಲ ನಮಿಸುವೆ ನಿನ್ನಡಿಗೆ ಬೆಂ
ಬಿಡದೆ ಪಾಲಿಸು ಪರಮಕರುಣಾಸಿಂಧು ಎಂದೆಂದು ||
ನಡುನಡುವೆ ಬರುತಿಪ್ಪ ವಿಘ್ನವ
ತಡೆದು ಭಗವನ್ನಾಮಕೀರ್ತನೆ
ನುಡಿದು ನುಡಿಸೆನ್ನಿಂದ ಪ್ರತಿದಿವಸ ಮರೆಯದಲೆ ||೨೦||

ಪದ್ಯಾರ್ಥ.—ಹೇರೊಡಲ=ಎಲೈ ಲಂಬೋದರನೇ ! ಕಡುಕರುಣಿ=ಅತ್ಯಂತ ದಯಾಳು, ನೀನೆಂದರಿತು, ನಿನ್ನಡಿಗೆ=ನಿನ್ನ ಪಾದಗಳಿಗೆ, ನಮಿಸುವೆ=ನಮಸ್ಕಾರಮಾಡುವೆನು. ಪರಮಕರುಣಾಸಿಂಧು=ಎಲೈ ಪರಮ ಕರುಣಾಸಮುದ್ರನೇ! ಎಂದೆಂದಿಗೂ, ಎಲ್ಲಾ ಕಾಲದಲ್ಲೂ, ಬೆಂಬಿಡದೆ= ನನ್ನ ಬೆನ್ನು ಬಿಡದೆ ಅಂದರೆ ನನ್ನ ಹಿಂದುಗಡೆಯಲ್ಲಿದ್ದು ಪಾಲಿಸು, ನಡುನಡುವೆ=ಸತ್ಕಾರ್ಯಗಳನ್ನು ಮಾಡುವಾಗ ಮಧ್ಯೇ ಮಧ್ಯೇ ಬರುತ್ತಿರುವ, ವಿಘ್ನವ, ತಡೆದು, ಮರೆಯದಲೆ, ಪ್ರತಿದಿವಸದಲ್ಲೂ ಭಗವನ್ನಾಮ ಸಂಕೀರ್ತನೆಯನ್ನು ನುಡಿದು=ನನ್ನೊಳಗಿದ್ದು ನೀನು ನುಡಿದು, ಎನ್ನಿಂದ ನುಡಿಸು.

ತಾತ್ಪರ್ಯ.—ಎಲೈ ಲಂಭೋದರನೇ ! ನೀನು ಪರಮದಯಾಳುವೆಂದರಿತು ನಿನ್ನ ಪಾದ ಕಮಲಗಳಿಗೆ ನಮಸ್ಕರಿಸುವೆನು. ಪರಮ ಕರುಣಾ

ಸಹಾಯಪ್ರನಾದ ನೀನು ನನ್ನನ್ನು ಕ್ಷಣಬಿಡದೆ ಹಿಂಬಾಲಿಸು. ನಾನು ಮಾಡುವ ಸತ್ಕರ್ಮಗಳಿಗೆ ಆಗಿಂದಾಗ್ಗೆ ಬರುತ್ತಿರುವ ವಿಘ್ನಗಳನ್ನು ಪರಿಹರಿಸಿ, ಪ್ರತಿದಿವಸದಲ್ಲೂ ಮರಿಯದೆ ನನ್ನೊಳಗಿದ್ದು ಭಗವನ್ನಾಮ ಸಂಕೀರ್ತನೆಯನ್ನು ಮಾಡಿ ನನ್ನಿಂದಲೂ ಮಾಡಿಸು.

ಅವತಾರಿಕೆ.—ಈ ಸಂಧಿಯನ್ನು ಮುಗಿಸುತ್ತಾ ಗಣಪತ್ಯಂತರ್ಗತ ಶ್ರೀಪರಮಾತ್ಮನಿಗೆ ಇದರ ಫಲವನ್ನು ಅರ್ಪಿಸುತ್ತಾರೆ.—

**ಏಕವಿಂಶತಿಪದಗಳೆನಿಸುವ**
**ಕೋಕನದ ನವಮಾಲಿಕೆಯ ಮೈ**
**ನಾಕಿ ತನಯಾಂತರ್ಗತಶ್ರೀಪ್ರಾಣಪತಿ ಎನಿಪ ||**
**ಶ್ರೀಕರ ಜಗನ್ನಾಥವಿಠಲ**
**ಸ್ವೀಕರಿಸಿ ಸ್ವರ್ಗಾಪವರ್ಗದಿ**
**ತಾ ಕೊಡುವ ಸೌಖ್ಯಗಳ ಭಕ್ತರಿಗಾವಕಾಲದಲಿ ||೨೧||**

ಪದ್ಯಾರ್ಥ.—ಏಕವಿಂಶತಿಪದಗಳೆನಿಸುವ=೨೧ ಪದ್ಯಗಳೆಂಬ, ಕೋಕನದನವಮಾಲಿಕೆಯ=ಕೆಂಪು ಕಮಲದ ಹೊಸಮಾಲಿಕೆಯನ್ನು, ಮೈನಾಕಿತನಯಾಂತರ್ಗತ=ಮೇನಕಿಯ ಮಗಳಾದ ಪಾರ್ವತೀಗೆ ಮೈನಾಕಿ ಎಂದು ಹೆಸರು. ಆಕೆಯ ಮಗನಾದ ಗಣಪತಿಯ ಅಂತರ್ಯಾಮಿಯಾದ, ಶ್ರೀಪ್ರಾಣಪತಿಯೆನಿಪ=ಶ್ರೀಲಕ್ಷ್ಮೀದೇವಿಯರು, ಪ್ರಾಣ=ಮುಖ್ಯಪ್ರಾಣದೇವರು, ಇವರುಗಳಿಗೆ ಸ್ವಾಮಿಯೆನಿಸುವ, ಶ್ರೀಜಗನ್ನಾಥವಿಠಲನು, ಸ್ವೀಕರಿಸಿ, ಭಕ್ತರಿಗೆ, ಆವಕಾಲದಲಿ=ಸರ್ವಕಾಲದಲ್ಲೂ, ಸ್ವರ್ಗಾಪವರ್ಗದಿ=ಸ್ವರ್ಗದಲ್ಲೂ, ಮುಕ್ತಿಯಲ್ಲೂ, ತಾ=ತಾನು, ಸೌಖ್ಯಗಳ ಕೊಡುವನು.

ತಾತ್ಪರ್ಯ.—ಗಣಪತಿಯು ಯಾವಾಗಲೂ ೨೧ ಸಂಖ್ಯೆಯಲ್ಲಿ ಪ್ರೀತಿಯುಳ್ಳವನೆಂದು ಅವನ ಪೂಜಾ ಕಲ್ಪದಿಂದ ಗೊತ್ತಾಗುವುದು. ಹೇಗೆಂದರೆ ೨೧ ನಾಮಗಳಿಂದ ದೂರ್ವಾಯುಗ್ಮವನ್ನು ( ಗರಿಕೆ ಹುಲ್ಲುಗಳನ್ನು ) ಸಮರ್ಪಿಸಬೇಕೆಂತಲೂ, ೨೧ ಮೋದಕಗಳನ್ನು ನೈವೇದ್ಯಕ್ಕೋಸ್ಕರ ಮಾಡಬೇಕೆಂತಲೂ ಹೇಳಿರುವರು. ಅದರಂತೆ ದಾಸಾರ್ಯರು ಗಣಪತಿ ಸ್ತೋತ್ರರೂಪವಾದ ೨೧ ಪದ್ಯಗಳನ್ನು ರಚಿಸಿ, ಈ ಪದ್ಯಗಳೇ ಕೆಂಪು ಕಮಲಗಳು

ಇವುಗಳಿಂದ ರಚಿತವಾದ ಈ ಹೊಸನಾಲಿಕೆಯನ್ನು ಶ್ರೀಗಣಪತ್ಯಂತರ್ಗತ, ಶ್ರೀಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಜಗನ್ನಾಥವಿಠಲನು ಸ್ವೀಕರಿಸಿ ತನ್ನ ಭಕ್ತರಿಗೆ ಸರ್ವಕಾಲದಲ್ಲೂ, ಮುಕ್ತಿಯಲ್ಲೂ ಸಹ ದೇವತಾ ಯೋಗ್ಯವಾದ ಸೌಖ್ಯವನ್ನು ಕೊಡುವನು.

ಎಂಬಲ್ಲಿಗೆ ಭಾವಪ್ರಕಾಶಿಕೆಯಲ್ಲಿ ೨೮ನೆಯ ಗಣಪತಿ ಸ್ತೋತ್ರಸಂಧಿಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||



## ಅಣುತಾರತಮ್ಯ ಸಂಧಿ.

### ಸಂಧಿ ೨೯.

ಹಿಂದೆ ೩—೪ ಸಂಧಿಗಳಲ್ಲಿ ತಾರತಮ್ಯಗಳನ್ನು ವಿಸ್ತಾರಪಡಿಸಿದ್ದರೂ ತಾರತಮ್ಯ ಜ್ಞಾನವು ಮುಕ್ತಿಗೆ ಬಹಳ ಮುಖ್ಯ ಸಾಧನವಾದುದರಿಂದ ನಿತ್ಯದಲ್ಲೂ ಸುಲಭವಾಗಿ ತಾರತಮ್ಯವನ್ನು ಬಾಯಿಂದ ಹೇಳಿ ತಾರತಮ್ಯ ಪ್ರಕಾರ ಎಲ್ಲರಿಗೂ ನಮಸ್ಕಾರಗಳನ್ನು ಮಾಡಲೆಂಬ ಉದ್ದೇಶವಾಗಿ ಸಂಕೋಚದಿಂದ ಪರಮಾತ್ಮನನ್ನು ಮೊದಲು ಮಾಡಿ ಪರಮ ನೀಚನಾದ ಕಲಿಯವರೆಗೂ ಇರುವ ತಾರತಮ್ಯವನ್ನು ಹೇಳುವುದಕ್ಕಾಗಿ ಅಣುತಾರತಮ್ಯವೆಂಬ ಈ ಸಂಧಿಯನ್ನು ಉಪಕ್ರಮಿಸುತ್ತಾರೆ.—

**ಸೂಚನೆ ॥ ಹರಿಕಥಾಮೃತಸಾರ ಗುರುಗಳ ॥ಪ॥**

**ವಿಷ್ಣು ಸರ್ವೋತ್ತಮನು ಪ್ರಕೃತಿ ಕ**
**ನಿಷ್ಟಳೆನಿಪಳನಂತಗುಣಪರ**
**ಮೇಷ್ಟಿಪವನರು ಕಡಿಮೆ ವಾಣಿಭಾರತಿಗಳಧಮ ॥**
**ವಿಷ್ಣುವಾಹಫಣೀಂದ್ರ ಮೃಡರಿಗೆ**
**ಕೃಷ್ಣಮಹಿಷಿಯರಧಮರಿವರೊಳು**
**ಶ್ರೇಷ್ಟಳೆನಿಪಳು ಜಾಂಬವತಿಯಾವೇಶ ಬಲದಿಂದ ॥೧॥**

ಪದ್ಯಾರ್ಥ.—ವಿಷ್ಣು ಸರ್ವೋತ್ತಮನು, ಪ್ರಕೃತಿ=ಲಕ್ಷ್ಮೀದೇವಿಯು ಪರಮಾತ್ಮನಿಗಿಂತಲೂ ಅನಂತಗುಣ, ಕನಿಷ್ಟಳೆನಿಪಳು= ಕಮ್ಮಿ ಎನಿಸುವಳು ಪರಮೇಷ್ಟಿ ಪವನರು=ಬ್ರಹ್ಮವಾಯುಗಳು, ಕಡಿಮೆ=ಲಕ್ಷ್ಮೀದೇವಿಯರಿಗಿಂತಲೂ ಅಧಮರೆನಿಸುವರು, ಅವರುಗಳಿಗಿಂತಲೂ, ವಾಣಿ = ಸರಸ್ವತೀ, ಭಾರತಿಯರಧಮರು. ಅವರಿಗಿಂತಲೂ, ವಿಷ್ಣುವಾಹ = ಗರುಡ,

ಫಣೀಂದ್ರ=ಶೇಷದೇವರು, ಮೃಡರು-ರುದ್ರದೇವರು ಅಧಮರು. ಇವರಿಗೆ –ಇವರಿಗಿಂತಲೂ, ಕೃಷ್ಣಮಹಿಷಿಯರು-ಜಾಂಬವತೀ ಮೊದಲಾದ ಆರು ಮಂದಿ ಕೃಷ್ಣನ ಹೆಂಡತಿಯರು ಅಧಮರು. ಇವರೊಳು=ಈ ಆರು ಮಂದಿಯರ ಪೈಕಿ, ಜಾಂಬವತಿಯು, ಆವೇಶಬಲದಿಂದ – ರಮಾದೇವಿಯರ ಅವೇಶ ಬಲದಿಂದ, ಶ್ರೇಷ್ಠಳೆನಿಸಳು.

ತಾತ್ಪರ್ಯ.—ಅಣುತಾರತಮ್ಯ ಸ್ತೋತ್ರವೆಂಬ ಗ್ರಂಥದಲ್ಲಿ ಹೇಳಿದಭಿಪ್ರಾಯವನ್ನೇ ಇಲ್ಲಿ ಉದಾಹರಿಸಿರುತ್ತಾರೆ. ಅದೆಂತೆನೆ.—"ವಿಷ್ಣುಸರ್ವೋತ್ತಮೋಥ ಪ್ರಕೃತಿರಥವಿಧಿಪ್ರಾಣನಾಥಾವಥೋಕ್ತೇ ಬ್ರಹ್ಮಾಣೀ ಭಾರತೀಶದ್ವಿಜ ಫಣಿಪ ಮೃಡಾಶ್ಚಸ್ತ್ರಿಯಃ ಷಟ್ಚವಿಷ್ಣೋಃ" ಎಂದು ಹೇಳಿದರ್ಥವನ್ನೇ ಈ ಪದ್ಯದಲ್ಲಿ ಹೇಳಿರುವರು. ಈ ವಿಷಯಗಳ ಪ್ರಮಾಣಾದಿಗಳನ್ನು ಬೃಹತ್ತಾರತಮ್ಯ ಸಂಧಿಯ ವ್ಯಾಖ್ಯಾನದಲ್ಲಿ ವಿಸ್ತಾರಮಾಡಿರುವುದರಿಂದ ಇಲ್ಲಿ ಮತ್ತೂ ವಿಸ್ತಾರಮಾಡುವ ಆವಶ್ಯಕವಿಲ್ಲ.

**ಪ್ಲವಗ ಪನ್ನಗಪಾಹಿ ಭೂಷಣ**
**ಯುವತಿಯರು ಸಮ ತಮ್ಮೊಳಗೆ ಜಾಂ**
**ಬವತಿಗಿಂದಲಿ ಕಡಿಮೆ ಇವರಿಂದಿಂದ್ರಕಾಮರಿಗೆ ||**
**ಅವರಪ್ರಾಣನು ಕಡಿಮೆ ಕಾಮನ**
**ಕುವರ ಶಚಿರತಿ ದಕ್ಷಗುರು ಮನು**
**ಪ್ರವಹಮಾರುತ ಕೊರತೆ ಎನಿಸುವನಾರು ಜನರಿಂದ ||೨||**

ಪದ್ಯಾರ್ಥ-—ಪ್ಲವಗ=ಹಾರುತ್ತ ಹೋಗುವುದರಿಂದ ಪ್ಲವಗನೆಂದು ಗರುಡನ ಹೆಸರು, ಪನ್ನಗಪ=ಸರ್ಪ ಶ್ರೇಷ್ಠರಾದ ಶೇಷದೇವರು, ಅಹಿಭೂಷಣ=ಸರ್ಪಭೂಷಣರಾದ ರುದ್ರದೇವರು, ಈ ಮೂವರಯುವತಿಯರು–ಹೆಂಡತಿಯರಾದ ಸೌಪರ್ಣೀ, ವಾರುಣೀ, ಪಾರ್ವತೀ ಎಂಬ ಮೂವರು, ತಮ್ಮೊಳಗೆ ಸಮರು. ಜಾಂಬವತಿ ಮೊದಲಾದ ಷಣ್ಮಹಿಷಿಯರಿಗಿಂತಲೂ ಕಡಿಮೆ=ಅಧಮರು, ಇವರಿಂದ-ಇವರಿಗಿಂತಲೂ, ಇಂದ್ರಕಾಮರು=ಇಂದ್ರಮನ್ಮಥ ಇವರಿಬ್ಬರೂ ಅಧಮರು, ಇವರಿಗೆ, ಪ್ರಾಣ=ಅಹಂಕಾರಿಕಪ್ರಾಣನು, ಅವರ=ಕಮ್ಮಿ ಎನಿಸುವನು. ಇವನಿಗಿಂತಲೂ, ಕಾಮನಕುವರ=–ಪ್ರದ್ಯುಮ್ನನ ಮಗನಾದ ಅನಿರುದ್ಧನು, ಶಚಿ=ಇಂದ್ರನ ಹೆಂಡತಿ, ರತಿ=

ಮನ್ಮಥನ ಹೆಂಡತಿ, ದಕ್ಷ=ದಕ್ಷಪ್ರಜೇಶ್ವರನು, ಗುರು=ಬೃಹಸ್ಪತ್ಯಾಚಾರ್ಯರು, ಮನು=ಸ್ವಾಯಂಭುವಮನು, ಇವರಾರು ಮಂದಿಯೂ ಅಧಮರು, ಆರು ಜನರಿಂದ-ಅನಿರುದ್ಧ ಮೊದಲಾದ ಆರು ಮಂದಿಗಿಂತಲೂ, ಪ್ರವಹ ಮಾರುತ-ಪ್ರವಹವಾಯುವು, ಕೊರತೆ ಎನಿಸುವನು=ಅಧಮನೆನಿಸುವನು.

ತಾತ್ಪರ್ಯ.—ಜಾಂಬವತ್ಯಾಧಿ ಆರುಮಂದಿ ಕೃಷ್ಣಪತ್ನಿಯರಗಿಂತಲೂ ಗರುಡ, ಶೇಷ, ರುದ್ರರ ಪತ್ನಿಯರಾದ ಸೌಪರ್ಣೀ, ವಾರುಣೀ, ಪಾರ್ವತೀ ಇವರು ಮೂವರು ಅಧಮರು. ಇವರಿಗಿಂತಲೂ ಇಂದ್ರ ಮನ್ಮಥರು ಕಮ್ಮಿ ಎನಿಸುವರು. ಇವರೀರ್ವರಗಿಂತಲೂ ಅಹಂಕಾರಿಕಪ್ರಾಣನು ಅಧಮನು. ಇವನಿಗಿಂತಲೂ, ಪ್ರದ್ಯುಮ್ನನ ಮಗನಾದ ಅನಿರುದ್ಧ, ರತಿ, ಶಚಿ, ಸ್ವಾಯಂಭುವಮನು, ಬೃಹಸ್ಪತ್ಯಾಚಾರ್ಯರು, ದಕ್ಷಪ್ರಜೇಶ್ವರ ಇವರಾರು ಮಂದಿ ಕಮ್ಮಿಯೆನಿಸುವರು, ಇವರಾರು ಮಂದಿಗಿಂತಲೂ ಪ್ರವಹವಾಯುವು ಕಮ್ಮಿ ಎನಿಸುವನು.

ಯಮದಿವಾಕರ ಚಂದ್ರಮಾನವಿ
ಸಮರು ಕೋಣಪ್ರವಹಗಧಮರು
ದ್ಯುಮಣಿಗಿಂದಲಿ ವರುಣನೀಚನು ನಾರದಾಧಮನು ||
ಸುಮನಸಾಸ್ಯಪ್ರಸೂತಿ ಭೃಗುಮುನಿ
ಸಮರು ನಾರದಗಧಮ ನತ್ರಿ
ಪ್ರಮುಖ ವಿಶ್ವಾಮಿತ್ರ ವೈವಸ್ವತರನಲಗಧಮ || ೩ ||

ಪದ್ಯಾರ್ಥ.—ಯಮ=ಯಮದೇವರು, ದಿವಾಕರ=ಸೂರ್ಯನು, ಚಂದ್ರನು, ಮಾನವೀ=ಸ್ವಾಯಂಭುವಮನುವಿನ ಹೆಂಡತಿಯಾದ ಶತರೂಪಾದೇವಿ ಇವರು ನಾಲ್ವರೂ ಸಮರು, ಕೋಣಪ್ರವಹಗೆ=ವಾಯುವ್ಯ ದಿಕ್ಕಿಗೆ ಅಭಿಮಾನಿಯಾದ ಪ್ರವಹವಾಯುವಿಗಿಂತಲೂ, ಅಧಮರು=ಕಮ್ಮಿ ಎನಿಸುವರು. ದ್ಯುಮಣಿಗಿಂದಲಿ=ಸೂರ್ಯಾದಿಗಳಿಗಿಂತಲೂ, ವರುಣನು ನೀಚನು. ಅವನಿಗಿಂತಲೂ, ನಾರದರು ಅಧಮರು. ಸುಮನಸಾಸ್ಯ=ದೇವತೆಗಳಿಗೆ ಮುಖವಂತಿದ್ದು ಆಹುತಿಯನ್ನು ಸ್ವೀಕರಿಸುವ ಅಗ್ನಿಯು, ಪ್ರಸೂತಿ=ದಕ್ಷಪ್ರಜೇಶ್ವರನ ಹೆಂಡತಿಯು, ಭೃಗುಮುನಿ=ಭೃಗುಋಷಿಗಳು, ಇವರು ಮೂವರೂ ಸಮರು. ನಾರದಗೆ ಅಧಮ = ನಾರದರಿಗಿಂತಲೂ ಅಧಮರೆನಿಸುವರು. ಅತ್ರಿಪ್ರ

ಮುಖ=ಅತ್ರಿ, ಅಂಗಿರ, ಪುಲಸ್ತ್ಯ ಪುಲಹ, ಮರೀಚಿ, ಕ್ರತು ವಶಿಷ್ಠ, ಇವರೇಳು ಜನರು ಬ್ರಹ್ಮದೇವರ ಮಕ್ಕಳು, ವಿಶ್ವಾಮಿತ್ರರು, ವೈವಸ್ವತರು= ವೈವಸ್ವತಮನುವು, ಇವರು ಅನಲಗೆ=ಅಗ್ನಿ ಮೊದಲಾದವರಿಗೆ, ಅಧಮ= ಅಧಮರು,

ತಾತ್ಪರ್ಯ.—ಪ್ರವಹ ವಾಯುವಿನಕಿಂತಲೂ ಯಮ, ಸೂರ್ಯ, ಚಂದ್ರ, ಶತರೂಪೆ ಎಂಬ ಸ್ವಾಯಂಭುವ ಮನುವಿನ ಹೆಂಡತಿ, ಇವರು ನಾಲ್ವರೂ ಅಧಮರು. ತಮ್ಮೊಳಗೆ ಸಮರು. ಇವರಕಿಂತಲೂ ವರುಣನು ಅಧಮನು. ವರುಣನಿಕಿಂತಲೂ ನಾರದರು ಕಮ್ಮಿ ಎನಿಸುವರು; ಅಗ್ನಿ, ಪ್ರಸೂತಿ ಎಂಬ ದಕ್ಷಪ್ರಜೇಶ್ವರನ ಹೆಂಡತಿ, ಭೃಗು ಋಷಿಗಳು, ಇವರು ಮೂವರೂ ಸಮರು; ಮತ್ತೂ ನಾರದರಕಿಂತಲೂ ಅಧಮರು. ಬ್ರಹ್ಮದೇವರ ಮಕ್ಕಳಾದ ಮರೀಚಿ, ಅತ್ರಿ, ಅಂಗಿರ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠ ಇವರೇಳು ಋಷಿಗಳು; ವಿಶ್ವಾಮಿತ್ರರು, ವೈವಸ್ವತಮನು ಇವರೆಲ್ಲರೂ ಸಮರು. ಅಗ್ನಿ ಮೊದಲಾದವರಕಿಂತಲೂ ಅಧಮರು, ಅಣುತಾರತಮ್ಯ ವಾಕ್ಯ :—ಸೌಪರ್ಣೀ ವಾರುಣೀಚ ಪರ್ವತಪತಿತನಯಾ ಚೇಂದ್ರ ಕಾಮಾ ವಥಾಸ್ಮಾತ್ ಪ್ರಾಣೋಥೋ ಯೋನಿರುದ್ಧೋ ರತಿ ಮನುಗುರವೋ ದಕ್ಷಶಚ್ಯೌಚ ಪಾಂತು || ತ್ರಾಯಂತಾಂನಃ ಸದೈತೆ ಪ್ರವಹ ಉತಯಮೌ ಮಾನವೀ ಚಂದ್ರ ಸೂರ್ಯೌ ಚಾಪ್ಯೋತೋ ನಾರದೋಥೋ ಭೃಗುರನಿಲ ಕುಲೇಂದ್ರ ಪ್ರಸೂತಿಶ್ಚ ನಿತ್ಯಂ || ವಿಶ್ವಾಮಿತ್ರೋ ಮರೀಚಿ ಪ್ರಮುಖ ವಿಧಿ ಸುತಾಃ ಸಪ್ತ ವೈವಸ್ವತಾಖ್ಯಃ" ಎಂಬ ಶ್ಲೋಕದವರೆಗೂ ಹೇಳಿದ ಅರ್ಥವನ್ನೇ ದಾಸಾರ್ಯರು ಮೂರು ಪದ್ಯಗಳಿಂದ ಹೇಳಿರುತ್ತಾರೆ.

ಮಿತ್ರ ತಾರಾ ನಿಋಋತಿ ಪ್ರವಹ
ಪತಿ ಪ್ರಾವಹಿ ಸಮರು ವಿಶ್ವಾ
ಮಿತ್ರಗಿಂದಲಿ| ಕೊರತೆ ವಿಷ್ವಕ್ಸೇನ ಗಣನಾಥ ||
ವಿತ್ತಪತಿ ಅಶ್ವಿನಿಗಳಧಮರು
ಮಿತ್ರ ಮೊದಲಾದವರಗಿಂದಲಿ
ಬಿತ್ತರಿಪೆನುಶತಸ್ಥದಿವಿಜರ ವ್ಯೂಹನಾಮಗಳ || ೪ ||

ಪದ್ಯಾರ್ಥ.—ಮಿತ್ರ = ಮಿತ್ರನೆಂಬ ಸೂರ್ಯನು, ತಾರಾ=ಬೃಹಸ್ಪ

ಶ್ಯಾಚಾರ್ಯರ ಹೆಂಡತಿ, ನಿಋುಋುತಿ, ಪ್ರವಹ ಪತ್ನಿ ಪ್ರಾವಹಿ, ಇವರು ನಾಲ್ವರೂ ಸಮರು. ವಿಶ್ವಾಮಿತ್ರಗಿಂದಲಿ=ವಿಶ್ವಾಮಿತ್ರ ಮೊದಲಾದವರಗಿಂತಲೂ ಕೊರತೆ-ಅಧಮರು, ವಿಷ್ವಕ್ಸೇನ=ಪ್ರಧಾನವಾಯು ಕುಮಾರನು.' ಗಣನಾಥ, ವಿತ್ತಪತಿ=ಕುಬೇರನು, ಅಶ್ವಿನಿಗಳು ಇವರು ಸಮರು. ಮಿತ್ರ ಮೊದಲಾದವರಿಗಿಂದಲಿ ಅಧಮರು. ಶತಸ್ಥಡಿವಿಜರ=ಒಂಭತ್ತು ಕೋಟಿ ದೇವತೆಗಳ ಪೈಕಿ ನೂರು ದೇವತೆಗಳು ಸೋಮಪಾನಾರ್ಹರು. ಅವರಲ್ಲಿ ಮೇಲೆ ಹೇಳಿದ ದೇವತೆಗಳನ್ನು ಬಿಟ್ಟು ಉಳಿದ ಶೇಷ ಶತಸ್ಥರನ್ನು ಹೇಳುವುದಕ್ಕಾಗಿ ಆ ನೂರು ದೇವತೆಗಳ ವ್ಯೂಹ ನಾಮಗಳನ್ನೂ, ಬಿತ್ತರಿಪೆನು – ಮುಂದಿನ ಪದ್ಯದಲ್ಲಿ ವಿಸ್ತಾರ ಮಾಡುವೆನು.

ತಾತ್ಪರ್ಯ.—ಅಣುತಾರತಮ್ಯ ಸ್ತೋತ್ರದಲ್ಲಿ "ಚೈವಂ ವೈಮಿತ್ರತಾರೇವರ ನಿಋುಋುತಿ ನಾಮಪ್ರಾವಹೀಚ ಪ್ರಸನ್ನಾಃ ॥ ವಿಷ್ವಕ್ಸೇನೋಽಶ್ವಿನೌತಾೌ ಗಣಪತಿಧನಪಾ ಉಕ್ತಶೇಷಾಃ ಶತಸ್ಥಾಃ" ಇಲ್ಲಿಯವರೆಗೂ ಹೇಳಿರುವ ತಾರತಮ್ಯವನ್ನು ಈ ಪದ್ಯದಿಂದ ಹೇಳಿರುತ್ತಾರೆ:—ಮಿತ್ರನೆಂಬ ಸೂರ್ಯ, ಬೃಹಸ್ಪತಿಯ ಹೆಂಡತಿ ತಾರೆ, ದಿಕ್ಪಾಲಕನಾದ ನಿಋುಋುತಿ, ಪ್ರವಹವಾಯುವಿನ ಹೆಂಡತಿ ಪ್ರಾವಹೀ ಈ ನಾಲ್ವರೂ ಸಮರು. ವಿಶ್ವಾಮಿತ್ರಾದಿಗಳಿಗಿಂತಲೂ ಅಧಮರು. ವಿಷ್ವಕ್ಸೇನ, ವಿಘ್ನೇಶ, ಕುಬೇರ, ಅಶ್ವಿನೀ ದೇವತೆಗಳು ಇವರು ಸಮರು; ಮಿತ್ರ ಮೊದಲಾದವರಿಗಿಂತಲೂ ಅಧಮರು, ಇನ್ನು ಮುಂದಿನ ಪದ್ಯದಲ್ಲಿ ಉಕ್ತಶೇಷಶತಸ್ಥರನ್ನು ಹೇಳುವುದಕ್ಕಾಗಿ ನೂರು ದೇವತೆಗಳ ಗುಂಪುಗಳ ಹೆಸರುಗಳನ್ನು ಹೇಳುವೆನು.

•

**ಮರುತ ರೊಂಬತ್ತಧಿಕ ನಾಲ್ವ**
**ತ್ತೆರಡು ಅಶ್ವಿನಿ ವಿಶ್ವದೇವರು**
**ಎರಡಯಿದು ಹನ್ನೊಂದು ರುದ್ರರು ದ್ವಾದಶಾದಿತ್ಯ ॥**
**ಗುರು ಪಿತ್ರತ್ರಯವಷ್ಟವಸುಗಳು**
**ಭರತ ಭಾರತಿ ಪೃಥ್ವಿ ಋಭವೆಂ**
**ದರಿವದಿವರನು ಸೋಮರಸಪಾನಾರ್ಹರಹುದೆಂದು ॥ ೫ ॥**

ಪದ್ಯಾರ್ಥ.—ಮರುತರು=ಮರುದ್ಗಣಕ್ಕೆ ಸೇರಿದವರು, ಒಂಭತ್ತಧಿಕ ನಾಲ್ವತ್ತು=೪೯ ಮಂದಿಗಳು, ಅಶ್ವಿನಿ ಎರಡು-ಅಶ್ವಿನೀ ದೇವತೆಗಳಿಬ್ಬರು,

ಪದ್ಯಾರ್ಥ.—ಈ ದಿವೌಕಸರೊಳಗೆ=ಮೇಲೆ ಹೇಳಿದ ೧೦೦ ದೇವತೆಗಳೊಳಗೆ, ಐದಧಿಕದಶ=೧೫ ದೇವತೆಗಳು, ಉಕ್ತರು - ಹಿಂದಿನ ಕಕ್ಷ್ಯೆಗಳಲ್ಲಿ ಉತ್ತಮರನ್ನಾಗಿ ಗಣನೆಮಾಡಲ್ಪಟ್ಟಿರುವರು. ಉಳಿದ ಎಂಭತ್ತೈದು=ನೂರರಲ್ಲಿ ೧೫ ಹೋಗುತ್ತಾ ಉಳಿದ ೮೫ ದೇವತೆಗಳು ಉಕ್ತಶೇಷಶತರೆನಿಸುವರು. ಶೇಷರಿಗೆ - ಈ ೮೫ ದೇವತೆಗಳಿಗೆ, ಧನಪ - ಕುಬೇರ, ವಿನಾಯಕ, ಎಣೆಯೆನಿಸುವರು=ಸಮರೆನಿಸುವರು. ಸಾಧು=ಶ್ಲಾಘ್ಯವಾದ ಗುಣಗಳುಳ್ಳ, ವೈವಸ್ವತ=ವೈವಸ್ವತಮನುವು ೧, ಸ್ವಾಯಂಭುವ-ಬ್ರಹ್ಮದೇವರ ಮಗನಾದ ಸ್ವಾಯಂಭುವಮನುವು ೧, ಶ್ರೀದ - ಐಶ್ವರ್ಯಪ್ರದನಾದ, ತಾಪಸ ಪರಮಾತ್ಮನ ಅವತಾರನಾದ ತಾಪಸಮನುವು ಒಂದು, ಉಳಿದು=ಈ ಮೂವರನ್ನುಳಿದು, ಮನುವೇಕಾದಶರು=ಉಳಿದ ೧೧ ಮನುಗಳು, ವಿಘ್ನೇಶಗಿಂದಲಿ=ವಿಘ್ನೇಶ್ವರನಗಿಂತಲೂ ನೀಚರೆನಿಸುವರು.

ತಾತ್ಪರ್ಯ.—"ದೇವ್ಯೋಶ್ಚೋಕ್ತೇತರಾಯೇ ತದವರಮನವಃ ' ಎಂಬ ಅಣುತಾರತಮ್ಯ ವಾಕ್ಯದರ್ಥವನ್ನು ಈ ಪದ್ಯದಲ್ಲಿ ಸೂಚಿಸಿರುತ್ತಾರೆ. ಮೇಲಿನ ಪದ್ಯದಲ್ಲಿ ಹೇಳಿದ ನೂರು ದೇವತೆಗಳ ಪೈಕಿ ೧೫ ದೇವತೆಗಳನ್ನು ಮೇಲಿನ ಕಕ್ಷ್ಯೆದಲ್ಲಿ ಶೇರಿಸಿರುವರು, ಅವರು ಯಾರೆಂದರೆ.—ಪ್ರದಾನ ವಾಯುದೇವರು, ಅಷ್ಟವಸುಗಳಲ್ಲಿ ಪ್ರಧಾನಾಗ್ನಿ, ಹನ್ನೊಂದು ರುದ್ರರ ಪೈಕಿ ಭವನಾಮಕರಾದ ಪಾರ್ವತೀಪತಿ ರುದ್ರದೇವರು, ಹನ್ನೆರಡು ಸೂರ್ಯರಲ್ಲಿ ಉರುಕ್ರಮನಾಮಕನಾದ ಭಗವದವತಾರ ಸೂರ್ಯ, ವಿವಸ್ವಾನ್ ಎಂಬ ಸೂರ್ಯನೊಬ್ಬನು, ಮಿತ್ರನೆಂಬ ಸೂರ್ಯನೊಬ್ಬನು, ವರುಣ, ಇಂದ್ರ, ಗಂಗೆಗೆ ಸಮನಾದ ಪರ್ಜನ್ಯನೊಬ್ಬನು, ಹೀಗೆ ಆದಿತ್ಯರಲ್ಲಿ ಆರು ಮಂದಿ, ೪೯ ಮರುತ್ತುಗಳಲ್ಲಿ ಅಹಂಕಾರಿಕಪ್ರಾಣ, ಪ್ರವಹವಾಯು, ಅಂತು ೨, ಬೃಹಸ್ಪತಿ, ದ್ಯುಲೋಕಾಭಿಮಾನಿಯರಾದ ಭಾರತೀದೇವಿಯರು, ಪಿತೃಗಳಲ್ಲಿ ಯಮ, ಚಂದ್ರ, ಇವರಿಬ್ಬರು. ಹೀಗೆ ಹದಿನೈದು ಜನರನ್ನು ಮೇಲಿನ ತಾರತಮ್ಯದಲ್ಲಿ ಶೇರಿಸಿರುವರು. ಉಳಿದವರು ೮೫ ಜನರು ಉಕ್ತಶೇಷಶತಸ್ಥರೆನಿಸುವರು. ಇವರು ಕುಬೇರ, ಗಣಪತಿ ಮೊದಲಾದವರಿಗೆ ಸಮರೆನಿಸುವರು. ೧೪ ಮನುಗಳ ಪೈಕಿ ಮೇಲೆ ಹೇಳಿದ ಸ್ವಾಯಂಭುವಮನು, ವೈವಸ್ವತಮನು, ಭಗವದವತಾರನಾದ ತಾಪಸಮನು, ಈ ಮೂವರು ಹೋಗುತ್ತಾ ಉಳಿದ ಹನ್ನೊಂದು ಮನುಗಳು ಸಮರು ಮತ್ತೂ ವಿಘ್ನೇ

ಶ್ವರ ಮೊದಲಾದವರಗಿಂತಲೂ ನೀಚರೆನಿಸುವರು.

ಅವತಾರಿಕೆ.— ಅಣುತಾರತಮ್ಯದಲ್ಲಿ "ಚ್ಯಾವನೋಚಿಥ್ಯ ಸಂಜ್ಞೌ|| ವೈನ್ಯೋಯಃ ಕಾರ್ತವೀರ್ಯಃ ಕ್ಷಿತಿಪತಿ ಶಶಿಬಿಂದುಃ ಪ್ರಿಯಾದಿವ್ರತೋಘೋ ಗಂಗಾಪರ್ಜನ್ಯಸಂಜ್ಞೀ ಶಶಿಯುವದಯಿತೆನಾಪಿರಾಟ್ ಚಾಶಸಾಂತು" ಎಂದು ಹೇಳಿರುವ ತಾರತಮ್ಯವನ್ನು ಈ ಪದ್ಯದಿಂದ ಹೇಳುತ್ತಾರೆ.

ಚವನನಂದನಕವಿ ಬೃಹಸ್ಪತಿ
ಯುವರಜನುಚಥ್ಯ ಮುನಿಪಾವಕ
ಧೃವನಹುಷ ಶಶಿಬಿಂದು ಪ್ರಿಯಪ್ರತನು ಪ್ರಹ್ಲಾದ ।
ಕುವಲಯುಷರುಕ್ತೇಶರಿಂದಲಿ
ಅವರರೋಹಿಣಿ ಶಾಮಲಾ ಜಾ
ಹ್ನವಿ ವಿರಾಟ್ ಪರ್ಜನ್ಯ ಸಂಜ್ಞಾದೇವಿಯರು ಅಧಮ ||೭||

ಪದ್ಯಾರ್ಥ.— ಚವನನಂದನ=ಚವನರ ಮಕ್ಕಳಾದ, ಕವಿ=ಶುಕ್ರಾಚಾರ್ಯರು, ಬೃಹಸ್ಪತಿ=ಬೃಹಸ್ಪತ್ಯಾಚಾರ್ಯರ, ಅವರಜನು=ತಮ್ಮನಾದ, ಉಚಿಥ್ಯಮುನಿ, ಪಾವಕ–ಪ್ರಧಾನಾಗ್ನಿಯ ಮಗನಾದ ಪಾವಕನು, ಧೃವ, ನಹುಷ, ಶಶಿಬಿಂದು, ಪ್ರಿಯವ್ರತನು, ಪ್ರಹ್ಲಾದ, ಕುವಲಯುಷರು–ಈ ಭೂಪಾಲರೆಲ್ಲರೂ, ಉಕ್ತೇಶರಿಂದಲಿ=ಉಕ್ತೇಷಶತರಿಂದ, ಅವರರು=ಕಮ್ಮಿಯಾದವರು, ರೋಹಿಣೀ=ಚಂದ್ರನ ಹೆಂಡತಿ, ಶಾಮಲಾ=ಯಮದೇವರ ಹೆಂಡತಿ, ಜಾಹ್ನವಿ–ಗಂಗೆ, ವಿರಾಟ್=ಅನಿರುದ್ಧನ ಹೆಂಡತಿ ಉಷಾದೇವಿ, ಪರ್ಜನ್ಯ=ಈ ಹೆಸರುಳ್ಳ ಸೂರ್ಯ, ಸಂಜ್ಞಾದೇವಿಯರು=ವಿವಸ್ವಾನ್ ಎಂಬ ಸೂರ್ಯನ ಹೆಂಡತಿ ಇವರೆಲ್ಲರೂ ತಮ್ಮೊಳಗೆ ಸಮರು, ಕ್ಷಿತಿಪಾಲಕರಗಿಂತಲೂ ಅಧಮರು.

ತಾತ್ಪರ್ಯ.— ಭಾರ್ಗವರಾದ ಶುಕ್ರಾಚಾರ್ಯರು, ಉಚಿಥ್ಯರು, ಪ್ರಧಾನಾಗ್ನಿ ಕುಮಾರನಾದ ಪಾವಕನು, ಧ್ರುವ, ನಹುಷ ಮೊದಲಾದ ಭೂಪತಿಗಳು ಇವರೆಲ್ಲರೂ ಸಮರು. ಮೇಲಿನ ಪದ್ಯದಲ್ಲಿ ಹೇಳಿದ ಉಕ್ತೇಶರೆಂಬ ಲಜ ದೇವತೆಗಳಿಗಿಂತಲೂ ಕಮ್ಮಿಯಾದವರು. ರೋಹಿಣಿ, ಶಾಮಲಾ, ಗಂಗೆ, ಉಷೆ, ಪರ್ಜನ್ಯನೆಂಬ ಸೂರ್ಯ, ಸಂಜ್ಞಾದೇವಿ ಇವರೆಲ್ಲರೂ ಸಮರು; ಮೇಲೆ ಹೇಳಿದ ಭೂಪಾಲಕರಗಿಂತಲೂ ಅಧಮರೆನಿಸುವರು.

ದ್ಯುನದಿಗಿಂದಲಿ ನೀಚರೆನಿಪರು
ಅನಭಿಮಾನಿ ದಿವೌಕಸರು ಕೇ
ಚನಮುನಿಗಳಿಗೆ ಕಡಿಮೆ ಸ್ವಾಹಾದೇವಿಗಧಮ ಬುಧ ।
ಎನಿಸುವಳುಷಾದೇವಿ ನೀಚಳು
ಶನಿಕಡಿಮೆ ಕರ್ಮಾಧಿಪತಿ ಸ
ದ್ವಿನುತ ಪುಷ್ಕರ ನೀಚನೆನಿಸುವ ಸೂರ್ಯನಂದನಗೆ ॥೮॥

ಪದ್ಯಾರ್ಥ.— ಅನಭಿಮಾನಿದಿವೌಕಸರು = ತತ್ವಾಭಿಮಾನಿಗಳಲ್ಲದೆ ಮೇಲೆ ಹೇಳಿದ ೧೦೦ ದೇವತೆಗಳನ್ನು ಬಿಟ್ಟು ಅಪ್ರಸಿದ್ಧರಾದ ದೇವತೆಗಳು ಕೆಲವರು; ಇವರು ದ್ಯುನದಿಗಿಂದಲಿ-ಗಂಗೆ ಮೊದಲಾದವರಿಗಿಂತಲೂ, ನೀಚರೆನಿಪರು, ಅವರಿಗಿಂತಲೂ ನಾರದರು ಮೊದಲು ಉಚಥ್ಯನವರೆಗೂ ಮೇಲೆಹೇಳಿದ ಋಷಿಗಳನ್ನು ಬಿಟ್ಟು ಉಳಿದ ಋಷಿಗಳ ಪೈಕಿ ಕೆಲವು ಋಷಿಗಳು ಕಮ್ಮಿ ಎನಿಸುವರು. ಕೇಚ ಮುನಿಗಳಿಗೆ=ಆ ಕೆಲವು ಋಷಿಗಳಿಗೆ, ಸ್ವಾಹಾದೇವಿ-ಅಗ್ನಿದೇವರ ಹೆಂಡತಿಯಾದ ಸ್ವಾಹಾದೇವಿಯು, ಕಡಿಮೆಯೆನಿಸುವಳು, ಸ್ವಾಹಾದೇವಿಗೆ, ಬುಧ=ಬುಧನು, ಅಧಮನು. ಅವನಿಗಿಂತಲೂ ಉಷಾದೇವಿ-ಅಶ್ವಿನೀ ಭಾರ್ಯಳಾದ ಉಷಾದೇವಿಯು, ನೀಚಳೆನಿಸುವಳು. ಆಕೆಯುಗಿಂತಲೂ, ಶನೈಶ್ಚರನು ಕಡಿಮೆಯೆನಿಸುವನು. ಸೂರ್ಯನಂದನಗೆ-ವಿವಸ್ವಾನೆಂಬ ಸೂರ್ಯನ ಮಗನಾದ ಶನೈಶ್ಚರನಿಗೆ, ಸದ್ವಿನುತ=ಸಜ್ಜನರಿಂದ ಸ್ತುತ್ಯನಾದ, ಕರ್ಮಾಧಿಪತಿಯಾದ, ಪುಷ್ಕರ-ಪುಷ್ಕರನು, ನೀಚನೆನಿಸುವನು.

ತಾತ್ಪರ್ಯ.—ಗಂಗೆ ಮೊದಲಾದವರಿಗಿಂತಲೂ, ಯಾವ ವಿಧವಾದ ಅಧಿಕಾರವೂ ಇಲ್ಲದ ಅಪ್ರಸಿದ್ಧರಾದ ದೇವತೆಗಳ ಪೈಕಿ ಕೆಲವರು ನೀಚರೆನಿಸುವರು. ಅವರಿಗಿಂತಲೂ ವಿಶ್ವಾಮಿತ್ರರು, ಬ್ರಹ್ಮದೇವರ ಮಕ್ಕಳಾದ ಮರೀಚಿ ಮೊದಲಾದವರು ಉಚಥ್ಯರವರೆಗೂ ಹೇಳಿರುವ ಋಷಿಗಳನ್ನು ಬಿಟ್ಟು ಉಳಿದ ಋಷಿಗಳಪೈಕಿ ಕೆಲವರುಮಾತ್ರ ಈ ಕಕ್ಷ್ಯಕ್ಕೆ ಸೇರುವರು ಉಳಿದವರನ್ನು ಇನ್ನೂ ಕಡಿಮೆ ಕಕ್ಷ್ಯದಲ್ಲಿ ಸೇರಿಸಿ ಮುಂದಿನ ಪದ್ಯದಲ್ಲಿ ಹೇಳಿರುವರು. ಆದ್ದರಿಂದ ಈ ಪದ್ಯದಲ್ಲಿ ಕೇಚನಋಷಿಗಳು ಎಂದು ಹೇಳಿರುವರು. ಅವರಿಗಿಂತಲೂ ಅಗ್ನಿಭಾರ್ಯಳಾದ ಸ್ವಾಹಾದೇವಿಯು ನೀಚಳು ಆಕೆಯುಗಿಂತಲೂ ಜಲಾಭಿಮಾನಿಯಾದಬುಧನು ನೀಚನು, ಬುಧನಿಗಿಂತ ನಾ

ಮಾತ್ರಿಕಳಾದ, ಅಶ್ವಿನೀದೇವತೆಗಳ ಹೆಂಡತಿಯಾದ 'ಉಷಾದೇವಿಯು ನೀಚಳು, ಆಕೆಯುಗಿಂತಲೂ ಶನೈಶ್ಚರನು ನೀಚನು. ಶನಿಗಿಂತಲೂ ಕರ್ಮಾಭಿಮಾನಿಯಾದ ಪುಷ್ಕರನು ನೀಚನು. ದಾಸಾರ್ಯರು ಈ ಪುಷ್ಕರನಿಗೆ ಸದ್ವಿನುತ ಅಂದರೆ ಸಜ್ಜನರಿಂದ ಸ್ತುತ್ಯನೆಂದು ವಿಶೇಷಣ ಕೊಟ್ಟಿರುವರು. ಅದರ ಕಾರಣವೇನೆಂದರೆ, ಗುರು ಸಿಂಹದಲ್ಲಿದ್ದಾಗ ಇವನು ಗೋದಾವರಿ ಪ್ರವೇಶಮಾಡುವನು. ಅಂದರೆ ಇವನ ಸನ್ನಿಧಾನವು ಗೋದಾವರಿಯಲ್ಲಿರುವುದು. ಆಗ ಅಲ್ಲಿ ಸ್ನಾನಾದಿಗಳಿಂದ ಮಹಾಫಲಪ್ರಾಪ್ತಿಯಾಗುವುದು. ಇದರಂತೆ ಇನ್ನು ಕೆಲವು ಕಾಲಗಳಲ್ಲಿ ಮತ್ತೆ ಕೆಲವು ನದಿಗಳಲ್ಲಿ ಪುಷ್ಕರ ಪ್ರವೇಶವೆಂದು ಧರ್ಮಶಾಸ್ತ್ರದಲ್ಲಿ ಪ್ರಸಿದ್ಧಿಯಾಗಿ, ಪಂಚಾಂಗಗಳಲ್ಲೂ ಬರೆದಿರುತ್ತಾರೆ. ಹೀಗೆ ನದಿಗಳಲ್ಲಿದ್ದು ಮಹಾಫಲಗಳನ್ನು ಕೊಡುವುದರಿಂದ ಸದ್ವಿನುತನೆಂದು ಹೇಳಿರುವರು. ತಾರತಮ್ಯಸ್ತೋತ್ರ ವಾಕ್ಯ, "ಏಭ್ಯೋನ್ಯೇ ಚಾಗ್ನಿಜಾಯಾಚ ಜಲಮಯಬುಧಶ್ಚಾಪಿ ನಾಮಾತ್ರಿಕೋಽಸಾ ಚೈಷಂ ಭೂಮೋತದಾತ್ಮಾ ಶನಿಃಪಿಕಥಿತಃ ಪುಷ್ಕರಃ ಕರ್ಮಪೋಽಪಿ" ಇದೇ ಅರ್ಥವನ್ನೇ ಈ ಪದ್ಯದಲ್ಲಿ ಹೇಳಿರುವರು.

**ಕೊರತೆ ಎನಿಪರಶೀತಿಋಷಿಪು**
**ಷ್ಕರಗೆ ಊರ್ವಶಿಮುಖ್ಯ ಶತಮ**
**ಪ್ಸರರು ತುಂಬರಮುಖರು ಆಜಾಗಜರೆನಿಸುತಿಹರು ।**
**ಕರೆಸುವದು ಅನಲಗಣ ನಾಲ್ವ**
**ತ್ತರೆ ಚತುರ್ದಶದ್ವ್ಯಷ್ಟಸಾವಿರ**
**ಹರಿಮಡದಿಯರು ಸಮರೆನಿಸುವರು ಪಿಂತೆಪೇಳ್ವರಿಗೆ ॥೯॥**

ಪದ್ಯಾರ್ಥ.—ಪುಷ್ಕರಗೆ-ಪುಷ್ಕರನಿಗಿಂತಲೂ, ಅಶೀತಿಋಷಿ=೮೦ ಋಷಿಗಳು, ಪುಷ್ಕರಗೆ, ಕೊರತೆ ಎನಿಪರು. ಊರ್ವಶಿಮುಖ್ಯ=ಊರ್ವಶಿಯೇ ಮೊದಲಾದ, ಶತಮಪ್ಸರರು=ನೂರು ಅಪ್ಸರ ಸ್ತ್ರೀಯರು, ತುಂಬರುಮುಖರು=ತುಂಬರು ಮೊದಲಾದ ನೂರು ಗಂಧರ್ವರು, ಆಜಾನಜರೆನಿಸುತಿಹರು=ಇವರೆಲ್ಲರೂ ಆಜಾನಜದೇವತೆಗಳೆನಿಸುವರು. ಅನಲಗಣ-ಅಗ್ನಿಗಣಕ್ಕೆ ಸೇರಿದ, ಅಗ್ನಿದೇವರ ಮಕ್ಕಳಾದ, ನಾಲ್ವತ್ತರ ಚತುರ್ದಶ=ನಾಲ್ವತ್ತು, ಅರೆ=ಅದರಲ್ಲರ್ಧ ೨೦, ಚತುರ್ದಶ=ನಾಲ್ಕು ಹತ್ತು, ಒಟ್ಟುಗೂಡಿ

(೪೦+೨೦+೪೦=೧೦೦) ನೂರು, ದ್ವ್ಯಷ್ಟಸಾವಿರ=೨×೮=೧೬ ಸಾವಿರ ಅಂದರೆ (೧೬೧೦೦) ಹದಿನಾರುಸಾವಿರದ ನೂರು ಸಂಖ್ಯಾ ಉಳ್ಳ, ಹರಿಮಡದಿಯರು=ಶ್ರೀಕೃಷ್ಣನ ಹೆಂಡತಿಯರು, ಪಿಂತೆಪೇಳ್ವರಿಗೆ – ಹಿಂದೆ ಹೇಳಿದ ಆಜಾನಜರಿಗೆ ಸಮರೆನಿಸುವರು. ಕರೆಸುವರು ಈ ಅಗ್ನಿಗಣಕ್ಕೆ ಸೇರಿದ ೧೬೧೦೦ ಮಂದಿ; ಮೊದಲು ಪುರುಷರಾಗಿದ್ದು ತಪಸ್ಸುಮಾಡಿ ಕೃಷ್ಣಪತ್ನಿಯರಾಗುವ ಉದ್ದೇಶದಿಂದ ಸ್ತ್ರೀತ್ವವನ್ನು ಹೊಂದಿದವರು ಇವರೆಲ್ಲರೂ ಆಜಾನಜದೇವತೆಗಳೆಂದು ಕರೆಸುವರೆಂಬ ತಾತ್ಪರ್ಯ.

ತಾತ್ಪರ್ಯ.—ನಾರದರನ್ನು ಮೊದಲುಮಾಡಿ ಉಚಥ್ಯರವರೆಗೂ ಹೇಳಿರುವ ಋಷಿಗಳನ್ನೂ, ಬನೆಯ ಪದ್ಯದಲ್ಲಿ ಹೇಳಿದ ಕೆಲವು ಋಷಿಗಳನ್ನು ಬಿಟ್ಟು ಉಳಿದ ೮೦ ಋಷಿಗಳು, ಊರ್ವಶಿ ಮೊದಲಾದ ನೂರು ಅಪ್ಸರರು, ತುಂಬರು ಮೊದಲಾದ ನೂರು ಗಂಧರ್ವರು ಇವರೆಲ್ಲರು ಆಜಾನಜದೇವತೆಗಳೆನಿಸುವರು. ಆಜಾನಜರೆಂದರೆ "ಜನಾಖ್ಯಾತಾ ದೇವತಾಸ್ತು, ಜಾತಾ ದೇವಕುಲೇಚ ಯಾಃ ॥ ಗಂಧರ್ವಾಸ್ತುಂಬರಮುಖಾಃ ಶತಮಪ್ಸರಸಾಂಶತಂ॥ ನಾರದಾದೀನ್ ಉಚಥ್ಯಾಂತಾನ್ ವಿನರ್ಷೀಕ್ತಾ ಋಷಯೋಽಖಿಲಾಃ ॥ ಆಜಾನಜಾ ದೇವತಾಸ್ತೇ, ಅಗ್ನಿಜಾಃ ಪಾವಕಂವಿನಾ ॥ ಶತೋತ್ತರಾಃ ಕೃಷ್ಣಭಾರ್ಯಾ ದ್ವ್ಯಷ್ಟಸಾಹಸ್ರ ಸಂಖ್ಯಕಾಃ ॥" ಎಂದು ತಾರತಮ್ಯ ಸಂಗ್ರಹವೆಂಬ ಗ್ರಂಥದ ವಾಕ್ಯದಿಂದಲೂ, ತೈತ್ತರೀಯ ಭಾಷ್ಯದ ವಾಕ್ಯದಿಂದಲೂ ಸಿದ್ಧವಾಗುವ ಅರ್ಥವೇನೆಂದರೆ, ದೇವತೆಗಳ ಕುಲದಲ್ಲಿ ಹುಟ್ಟಿ, ಇಂದ್ರಾದಿಗಳಂತೆ ಪ್ರಸಿದ್ಧರಾಗದ ಅಪ್ರಸಿದ್ಧರಾದ ದೇವತೆಗಳು ಕೆಲವರು, ತುಂಬರ ಮೊದಲಾದ ಗಂಧರ್ವರು ನೂರು ಮಂದಿಗಳು, ಊರ್ವಶೀ ಮೊದಲಾದ ಅಪ್ಸರಸ್ತ್ರೀಯರು ನೂರು ಮಂದಿ, ನಾರದ ಮೊದಲು ಉಚಥ್ಯರವರಗೂ ಹೇಳಿದ ಋಷಿಗಳನ್ನು ಬಿಟ್ಟು ಉಳಿದ ಋಷಿಗಳು ಇವರೆಲ್ಲರೂ ಆಜಾನಜರೆಂದು ಕರೆಸುವರು, ಎಂಬ ಈ ಅರ್ಥವು ಸಿದ್ಧವಾಗುವುದು. ಅಗ್ನಿಯ ಮಕ್ಕಳಪೈಕಿ ಪಾವಕನೆಂಬ ಒಬ್ಬನನ್ನು ಬಟ್ಟು ಉಳಿದ ೧೬೧೦೦ ಮಂದಿಗಳು ತಪಸ್ಸು ಮಾಡಿ ಸ್ತ್ರೀತ್ವ ಹೊಂದಿ ಶ್ರೀಕೃಷ್ಣನ ಪತ್ನಿಯರಾದರು. ಅವರೂ ಸಹ ಆಜಾನಜರೆಂದೇ ಕರೆಸುವರೆಂಬ ತಾತ್ಪರ್ಯ.

ತದವರರನಾಖ್ಯಾತ ಮಪ್ಸರ
ಸುದತಿಯರು ಕೃಷ್ಣಾಂಗ ಸಂಗಿಗ
ಳದರತರುವಾಯದಲಿ ಚಿರಪಿತರುಗಳು ಇವರಿಂದ ||
ತ್ರಿದಶ ಗಂಧರ್ವಗಣ ಇವರಿಂ
ದಧಮ ನರಗಂಧರ್ವರಿವರಿಂ
ದುದಧಿಮೇಖಳ ಪತಿಗಳಧಮರು ನೂರುಗುಣದಿಂದ ||೧೦||

ಪದ್ಯಾರ್ಥ.---ಕೃಷ್ಣಾಂಗಸಂಗಿಗಳು=ಗೋಪಿಯರಾಗಿ ಹುಟ್ಟಿ ಶ್ರೀ ಕೃಷ್ಣನ ಅಂಗಸಂಗವನ್ನು ಹೊಂದಿದ, ಅನಾಖ್ಯಾತಮಪ್ಸರ ಸುದತಿಯರು= ಊರ್ವಶೀ ಮೊದಲಾದವರಂತೆ ಪ್ರಸಿದ್ಧರಾಗದ ಅಪ್ಸರ ಸ್ತ್ರೀಯರು, ತದವ ರರು=ಮೇಲೆ ಹೇಳಿದ, ಕೃಷ್ಣನ ಹೆಂಡತಿಯರಾದ ೧೬೧೦೦ ಮಂದಿ ಅಗ್ನಿ ಪುತ್ರರಕಿಂತಲೂ ನೀಚರೆನಿಸುವರು. ಅದರ ತರುವಾಯದಲ್ಲಿ, ಚಿರಪಿತೃ ಗಳು-ಕೃಷ್ಣಾಂಗಸಂಗಿಗಳಾದ ಗೋಪಿಯರಗಿಂತಲೂ ಅಧಮರೆನಿಸುವರು. ಇವರಿಂದ=ಇವರಿಗಿಂತಲೂ, ತ್ರಿದಶಗಂಧರ್ವಗಣ-ದೇವ ಗಂಧರ್ವ ಗಣವು ಅಧಮ. ಇವರಿಂದ=ಇವರಿಕಿಂತಲೂ, ನರಗಂಧರ್ವರು=ಮನುಷ್ಯ ಗಂಧ ರ್ವರು ಅಧಮರು. ಇವರಿಂದ=ಇವರಿಗಿಂತಲೂ ಉದಧಿ ಮೇಖಳಪತಿಗಳು ಸಮುದ್ರವೇ ಮೇಖಳ (ಉಡಿಧಾರ) ವಾಗುಳ್ಳ ಭೂಮಿಗೆ ಪತಿಗಳು ಅಂದರೆ ರಾಜರುಗಳು, ನೂರು ಗುಣದಿಂದ=೧೦೦ ಗುಣಗಳಿಂದ ಅಧಮರು.

ತಾತ್ಪರ್ಯ.---೧೬೧೦೦ ಮಂದಿ ಕೃಷ್ಣನ ಹೆಂಡತಿಯರಿಗಿಂತಲೂ, ಗೋ ಪಿಯರಾಗಿ ಹುಟ್ಟಿ ಕೃಷ್ಣನ ಅಂಗಸಂಗವನ್ನು ಹೊಂದಿದ ಅಪ್ಸರರು ಅಧ ಮರು. ಅವರಿಗಿಂತಲೂ ಚಿರಪಿತೃಗಳು ಅಧಮರು. ಅವರಗಿಂತಲೂ ದೇವಗಂಧರ್ವರು ನೀಚರು. ಅವರಿಗಿಂತಲೂ, ಮನುಷ್ಯಗಂಧರ್ವರು ಅಧ ಮರು. ಅವರಿಗಿಂತಲೂ, ಮೇಲೆ ಹೇಳಿದ ಧ್ರುವ, ನಹುಷ ಮೊದಲಾದ ಚಕ್ರವರ್ತಿಗಳನ್ನು ಬಿಟ್ಟು ಉಳಿದ ಪುರಾಣ ಪ್ರಸಿದ್ಧರಾದ ರಾಜರು ೧೦೦ ಗುಣಗಳಿಂದ ಅಧಮರೆಂದು ತಿಳಿಯಬೇಕು.

ಪೃಥ್ವಿಪತಿಗಳಿಗಿಂದ ಶತಮನು
ಜೋತ್ತಮರು ಕಡಿಮೆನಿಪರಿವರಿಂ
ದುತ್ತರೋತ್ತರ ನೂರು ಗುಣದಿಂದಧಿಕರಾದವರ ||
ನಿತ್ಯದಲಿ ಚಿಂತಿಸುತ ನಮ್ಮಿಸುತ
ಭೃತ್ಯ ನಾನಹುದೆಂಬ ಭಕತರ
ಚಿತ್ತದಲಿ ನೆಲೆಗೊಂಡು ಕರುಣಿಪರಖಿಳ ಸೌಖ್ಯಗಳ ||೧೧||

ಪದ್ಯಾರ್ಥ.—ಪೃಥ್ವಿಪತಿಗಳಿಗಿಂದ-ಮೇಲೆ ಹೇಳಿದ ರಾಜರುಗಳಿಗಿಂತಲೂ, ಮನುಜೋತ್ತಮರು=ಮನುಷ್ಯೋತ್ತಮರು, ಶತ=೧೦೦ ಗುಣಗಳಿಂದ, ಕಡಿಮೆ ಎನಿಪರು=ಅಧಮರೆನಿಸುವರು. ಇವರಿಂದ-ಈ ಮನುಷ್ಯೋತ್ತಮರನ್ನು ಮೊದಲುಮಾಡಿಕೊಂಡು, ಉತ್ತರೋತ್ತರ-ಮೇಲಕ್ಕೆ ಮೇಲಕ್ಕೆ ಆರೋಹಣ ಕ್ರಮದಿಂದ, ನೂರುಗುಣದಿಂದಧಿಕರಾದವರ-ನೂರು ಗುಣಗಳಿಂದ ಉತ್ತಮರಾದವರನ್ನು, ನಿತ್ಯದಲಿ, ಚಿಂತಿಸುತ, ನಮಿಸುತ=ನಮಸ್ಕಾರಮಾಡುತ್ತಾ, ಭೃತ್ಯನು ನಾನು, ಎಂಬ ಭಕ್ತರ, ಚಿತ್ತದಲ್ಲಿ, ನೆಲೆಗೊಂಡು=ವಾಸವಾಗಿದ್ದು, ಅಖಿಳ ಸೌಖ್ಯಗಳ, ಕರುಣಿಪರು=ದಯಪಾಲಿಸುವರು.

ತಾತ್ಪರ್ಯ.— ರಾಜರಿಗಿಂತಲೂ ಮನುಷ್ಯೋತ್ತಮರು ನೂರು ಗುಣಗಳಿಂದ ಅಧಮರು. ಹೀಗೆ ಮನುಷ್ಯೋತ್ತಮರು ಮೊದಲು, ಶ್ರೀಪರಮಾತ್ಮನವರೆಗೂ ಇರುವ ಭಗವದ್ಭಕ್ತರು ಒಬ್ಬರಿಗಿಂತಲೂ ಮತ್ತೊಬ್ಬರು ನೂರು ಗುಣಗಳಿಂದ ಉತ್ತಮರೆಂದು ತಿಳಿದು ಚಿಂತನೆ ಮಾಡಬೇಕು. ೧೦೦ ಗುಣಗಳಿಂದ ಉತ್ತಮರೆಂದು ಹೇಳಿದ ಗುಣ ಸಂಖ್ಯೆಯು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. ಕೆಲವರು ೨ ಗುಣಗಳಿಂದ ಉತ್ತಮತ್ವವನ್ನು ಹೇಳಿರುವರು. ಆದುದರಿಂದ ಸಾಮಾನ್ಯವಾಗಿ ೧೦೦ ಗುಣಗಳೆಂದು ಹೇಳಲ್ಪಟ್ಟಿದೆ. ಗುಣತಾರತಮ್ಯ ಸಂಧಿಯಲ್ಲಿ ಹೇಳಿದಂತೆ ಗುಣಗಳ ತಾರತಮ್ಯವನ್ನು ತಿಳಿಯಬೇಕು. ಹೀಗೆ ಆರೋಹಣ ಕ್ರಮದಿಂದ ಭಕ್ತರನ್ನು ಉಪಾಸನಮಾಡಿ ನಮಸ್ಕಾರ ಮಾಡುತ್ತಾ ನಾನು ಅವರಿಗೆ ದಾಸನೆಂದು ತಿಳಿದು ಉಪಾಸನೆ ಮಾಡಿದರೆ ಅವರು ಕರುಣದಿಂದ ಈ ಭಕ್ತರ ಮನಸ್ಸಿನಲ್ಲಿ ವಾಸವಾಗಿದ್ದು ಇವರಿಗೆ ಬೇಕಾದ ಸೌಖ್ಯಗಳನ್ನು ಕೊಡಿಸುವರು.

ದ್ರುವ ಲತಾತೃಣಗುಲ್ಮ ಜೀವರು
ಕ್ರಮದಿ ನೀಚರು ಇವರಿಗಿಂದಾ
ಧಮರೆನಿಸುವರು ನಿತ್ಯಬದ್ಧರಿಗಿಂದಲಜ್ಞಾನೀ ||
ತಮೋ ಯೋಗ್ಯರ ಭೃತ್ಯರಧಮರು
ಅಮರುಷಾದ್ಯಭಿಮಾನಿ ದೈತ್ಯರು
ನಮುಚಿ ಮೊದಲಾದವರಿಗಿಂದಲಿ ವಿಪ್ರಚಿತಿ ನೀಚ ||೧೨||

ಪದ್ಯಾರ್ಥ.— ದ್ರುಮ=ವೃಕ್ಷಜೀವರು, ಮನುಷ್ಯೋತ್ತಮರಗಿಂತಲೂ ನೀಚರು. ಇವರಗಿಂತಲೂ, ಲತಾ=ಬಳ್ಳಿಜೀವರು ಅಧಮರು. ಅವರಗಿಂತಲೂ ತೃಣಜೀವರು, ಅವರಗಿಂತಲೂ ಗುಲ್ಮಜೀವರು, ಹೀಗೆ ಕ್ರಮದಿ=ಕ್ರಮದಿಂದ ನೀಚರು; ಇವರಿಗಿಂತ. ನಿತ್ಯಬದ್ಧರಾದ ಮನುಷ್ಯ ಜೀವರು ಅಧಮರು. ಇವರಗಿಂತ ಅಜ್ಞಾನಿ ಜೀವರು ಅಧಮರು. ಇವರಗಿಂತಲೂ ತಮೋಯೋಗ್ಯರ ಭೃತ್ಯರಧಮರು. ಇವರಗಿಂತಲೂ ಅಮರುಷಾದ್ಯಭಿಮಾನಿ-ಕ್ರೋಧಾದಿಗಳಿಗೆ ಅಭಿಮಾನಿಯಾದ, ದೈತ್ಯರು = ನಮುಚಿ ಮೊದಲಾದ ದೈತ್ಯರು ಅಧಮರು. ನಮುಚಿ ಮೊದಲಾದವರಗಿಂದಲಿ ವಿಪ್ರಚಿತಿ= ವಿಪ್ರಚಿತ್ತಿ ಎಂಬ ದೈತ್ಯನು, ನೀಚ=ನೀಚನು.

ತಾತ್ಪರ್ಯ.—ಮನುಷ್ಯೋತ್ತಮರಗಿಂತಲೂ ದ್ರುಮಜೀವರು ನೀಚರು ಅವರಗಿಂತಲೂ, ಬಳ್ಳಿಜೀವರು, ತೃಣಜೀವರು, ಅವರಿಗಿಂತಲೂ, ಗುಲ್ಮಜೀವರು ಅಧಮರು. ಅವರಿಗಿಂತಲೂ ನಿತ್ಯಬದ್ಧರಾದ ಮನುಷ್ಯರು ನೀಚರು; ಅವರಗಿಂತಲೂ ಅಜ್ಞಾನಿ ಜೀವರು ನೀಚರು. ಅವರಕಿಂತಲೂ ತಮೋಯೋಗ್ಯರಭೃತ್ಯರು ನೀಚರು. ಇವರಕಿಂತಲೂ ಕ್ರೋಧಾದ್ಯಭಿಮಾನಿಗಳಾದ ನಮುಚಿ ಮೊದಲಾದವರು ನೀಚರು. ಇವರಗಿಂತಲೂ ವಿಪ್ರಚಿತ್ತಯು ನೀಚನು.

ಅಲಕುಮಿಯು ತಾ ನೀಚಳೆನಿಪಳು
ಕಲಿ ಪರಮನೀಚತಮನವನಿಂ
ದುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ರಯದಿ ||
ಮಲವಿಸರ್ಜನ ಕಾಲದಲಿ ಕ
ತ್ತಲೆಯೊಳಗೆ ಕಶ್ಮಲಕುಮಾರ್ಗ
ಸ್ಥಳಗಳಲಿ ಚಿಂತನೆಯ ಮಾಳ್ಪದು ಬಲ್ಲವರು ನಿತ್ಯ ||೧೩||

ಪದ್ಯಾರ್ಥ.— ಅಲಕುಮಿ=ಕ್ಷೀರಸಮುದ್ರದಲ್ಲಿ ಲಕ್ಷ್ಮೀದೇವಿಯರಗಿಂತಲೂ ಮುಂಚಿತವಾಗಿ ಜನಿಸಿ ಅಲಕ್ಷ್ಮೀ ಎನಿಸಿಕೊಂಡು ಕಲಿಗೆ ಹೆಂಡತಿಯಾಗಿರುವ ಜ್ಯೇಷ್ಠಾದೇವಿಯು ತಾ ನೀಚಳೆನಿಪಳು=ವಿಪ್ರಚಿತ್ತಿಗಿಂತಲೂ ನೀಚಳೆನಿಪಳು, ಅವಳಿಗಿಂತಲೂ ಕಲಿಯು, ಪರಮ ನೀಚತಮನು. ಅವನಿಗಿಂದುಳಿದ=ಅವನನ್ನು ಬಿಟ್ಟರೆ, ಈ ಜಗತ್ರಯದಿ=ಈ ಮೂರು ಲೋಕದಲ್ಲೂ,

ನೋಡಲು, ಪಾಪಿಗಳಿಲ್ಲ-ಇವನಂತಹಾ ಪಾಪಿಗಳಿಲ್ಲ. ಮಲವಿಸರ್ಜನೆ ಕಾಲದಲಿ, ಕತ್ತಲೆಯೊಳಗೆ, ಕಶ್ಮಲಯುಮಾರ್ಗಸ್ಥಳಗಳಲಿ=ಸರಿಯಾದ ಮಾ ರ್ಗವಲ್ಲದ, ಮಲಮೂತ್ರ ಸೋಲಾದವುಗಳಿಂದ, ನಡೆಯಲು ಅಸಹ್ಯವಾದ ಮಾರ್ಗದಲ್ಲಿ ನಡೆಯುವಾಗ ಇಂತಹಾ ಕಾಲಗಳಲ್ಲಿ, ಬಲ್ಲವರು-ಜ್ಞಾನಿಗ ಳಾದವರು, ನಿತ್ಯದಲ್ಲೂ ಚಿಂತನೆಯ ಮಾಳ್ಪದು=ಈ ಪಾಪಿಯಾದ ಕಲಿಯ ನ್ನು ಸ್ಮರಿಸಬೇಕು.

ತಾತ್ಪರ್ಯ.—ವಿಪ್ರಚಿತ್ತಿಯಕಿಂತಲೂ ಅಲಕ್ಷ್ಮಿ ಎಂಬ ಕಲಿಪತ್ನಿ ಯು ನೀಚಳು; ಅವಳಕಿಂತಲೂ ಪರಮನೀಚತಮನು ಕಲಿಯು. ಇವನಂ ತಹಾ ಪಾಪಿಯು ಮೂರು ಲೋಕಗಳಲ್ಲೂ ಅಂದರೆ ಪಾತಾಳಾದಿ ಸತ್ಯಲೋ ಕದವರೆಗೂ ಇರುವ ೧೪ ಲೋಕಗಳೆಂದರ್ಥ. ಮುಖ್ಯವಾಗಿ ಪ್ರಪಂಚ ದಲ್ಲೇ ಇಲ್ಲ. ಇವನನ್ನು ಸ್ಮರಿಸಬೇಕಾದರೆ ಮಲವಿಸರ್ಜನಕಾಲ, ಕತ್ತಲೆ ಯಲ್ಲಿ ನಡೆಯುವಾಗ, ಮಲಗಳಿಂದ ದೂಷಿತವಾದ ಅಸಹ್ಯವಾದ ಮಾರ್ಗ ದಲ್ಲಿ ನಡೆಯುವಾಗ ಈ ಪಾಪಿಯನ್ನು ಚಿಂತಿಸಬೇಕೇ ಹೊರತು ಸುಖವಾಗಿ ರುವಾಗ ಸ್ಮರಿಸಬಾರದು.

**ಸತ್ವಜೀವರಭಿಮಾನಿ ಬ್ರಹ್ಮನು**
**ನಿತ್ಯಬದ್ಧರೊಳಗೆ ಪುರಂಜನ**
**ದೈತ್ಯ ಸಮುದಾಯಾಧಿಪತಿ ಕಲಿ ಎನಿಪ ಪವಮಾನ ||**
**ನಿತ್ಯದಲಿಯವರೊಳಗೆ ಕರ್ಮ ಪ್ರ**
**ವರ್ತಕನು ತಾನಾಗಿ ಶ್ರೀಪುರು**
**ಷೋತ್ತಮನ ಸಂಪ್ರಿತಿಗೋಸುಗ ಮಾಡಿಮಾಡಿಸುವ ||೧೪||**

ಪದ್ಯಾರ್ಥ.—ಸತ್ವಜೀವರಮಾನಿ=ಸಾತ್ವಿಕರಾದ ದೇವತೆಗಳ ಜೀವ ರುಗಳಿಗೆ ಅಭಿಮಾನಿಯು, ಬ್ರಹ್ಮನು=ಬ್ರಹ್ಮದೇವರು, ನಿತ್ಯಬದ್ಧರೊಳಗೆ= ನಿತ್ಯ ಸಂಸಾರಿಗಳಾದ ಮನುಷ್ಯ ಜೀವರಿಗಭಿಮಾನಿಯು, ಪುರಂಜನ=ಪುರಂ ಜನನೆಂಬ ಧೊರೆಯು, ದೈತ್ಯಸಮುದಾಯಾಧಿಪತಿ=ದೈತ್ಯರ ಜೀವಸಂಘಕ್ಕೆ ಅಧಿಪತಿಯು, ಪುರುಷೋತ್ತಮನ ಸಂಪ್ರೀತಿಗೋಸುಗ=ಪರಮಾತ್ಮನ ಪ್ರೀ ತಿಗೋಸ್ಕರವಾಗಿ, ನಿತ್ಯದಲಿ, ಅವರೊಳಗೆ=ಪುರಂಜನ, ಕಲಿ ಮೊದ

ಲ ದ ದೈತ್ಯರೊಳಗೂ ಇದ್ದು, ಕರ್ಮಪ್ರವರ್ತಕನು ತಾನಾಗಿ=ಅವರು ಮಾಡಬೇಕಾದ ಕರ್ಮಗಳಿಗೆ ಪ್ರೇರಕನು ತಾವಾಗಿದ್ದು, ಮಾಡಿಮಾಡಿಸುವ=ಅವರವರು ಮಾಡಬೇಕಾದ ಕರ್ಮಗಳನ್ನೂ ತಾವೂ ಮಾಡಿ ಅವರಿಂದ ಮಾಡಿಸುವನು.

ತಾತ್ಪರ್ಯ.--" ದೇವ ಜೀವಾಭಿಮಾನೀತು ಬ್ರಹ್ಮೈವತು ಚತುರ್ಮುಖಃ || ಮಾನುಷಾಣಾಂತು ಜೀವಾನಾಂ ಅಭಿಮಾನೀ ಪುರಂಜನಃ || ಸತುರಾಜಾಹತಿಃ ಪುತ್ರಸ್ತ್ವಸುರಾಣಾಂ ಕಲಿಃ ಸ್ವಯಂ || " ದೇವತಾ ಜೀವಗಳಿಗೆ ಅಭಿಮಾನಿಯು ಚತುರ್ಮುಖರಾದ ಬ್ರಹ್ಮದೇವರು; ಮಧ್ಯಮರಾದ ಮಾನುಷ್ಯ ಜೀವರುಗಳಿಗೆ ಅಭಿಮಾನಿಯು ಪುರಂಜನನು, ಇವನು ಪರಮಾತ್ಮನ ಪುತ್ರನು ಮತ್ತೂ ರಾಜನು; ದೈತ್ಯಜೀವರುಗಳಿಗೆ ಅಭಿಮಾನಿಯು ಕಲಿಯೇ ಆಗಿರುವನು ಎಂದು ಭಾಗವತ ಚತುರ್ಥ ಸ್ಕಂಧದಲ್ಲಿ ಪುರಂಜನೋಪಾಖ್ಯಾನದ ಸಂದರ್ಭದ ತಾತ್ಪರ್ಯದಲ್ಲಿ ಹೇಳಿರುವನು. ಅದೇ ಅಭಿಪ್ರಾಯವನ್ನೇ ದಾಸಾರ್ಯರು ಇಲ್ಲಿ ಹೇಳಿರುತ್ತಾರೆ.--ಸತ್ವಜೀವರೆಂದರೆ ದೇವತೆಗಳೆಂದರ್ಥ- ಅವರಿಗೆ ಅಭಿಮಾನಿಯು ಬ್ರಹ್ಮದೇವರು. ನಿತ್ಯಬದ್ಧರೆಂದರೆ ನಿತ್ಯಸಂಸಾರಿ ಜೀವರು ಮನುಷ್ಯರೆಂದರ್ಥ. ಇವರಿಗಭಿಮಾನಿಯು ಪುರಂಜನನೆಂಬ ರಾಜನು. ದೈತ್ಯ ಜೀವಸಮುದಾಯಾಧಿಪತಿಯು ಕಲಿ ಎನಿಸುವನು- ಭಗವದಾಜ್ಞಾ ಪ್ರಕಾರ, ಭಗವತ್ಪ್ರೀತಿಗೋಸ್ಕರವಾಗಿಯೇ ವಾಯುದೇವರು ಪುರಂಜನ, ಕಲಿ ಮೊದಲಾದವರಲ್ಲಿ ಇದ್ದು ಅವರು, ಜೀವರಿಂದ ಮಾಡಿಸಬೇಕಾದ ಕಾರ್ಯಗಳನ್ನು ತಾವು ಮಾಡಿ ಅವರಿಂದಲೂ ಮಾಡಿಸುವನು.

ಅವತಾರಿಕೆ.--ಪ್ರಾಣದೇವರು ಜೀವಾಭಿಮಾನಿಗಳಾದ ಪುರಂಜನ ಮೊದಲಾದವರಲ್ಲಿ ಮಾತ್ರ ಇರುತ್ತಾರೆಂತಲ್ಲ. ಜೀವರಲ್ಲೂ ಸಹ ಇದ್ದು ಕರ್ಮಗಳನ್ನು ಮಾಡಿಸುತ್ತಾರೆಂದು ಹೇಳುತ್ತಾರೆ. —

ಪ್ರಾಣದೇವನು ತ್ರಿವಿಧರೊಳಗೆ ಪ್ರ
ವೀಣ ತಾನೆಂದೆನಿಸುತಧಿಕಾ
ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುತ ||
ಜ್ಞಾನಭಕ್ತಿ ಸುರರ್ಗೆ ಮಿಶ್ರ
ಜ್ಞಾನ ಮಧ್ಯಮಜೀವರಿಗ್ಗೆ ಅ
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತಿಪ್ಪ ||೧೫||

ಪದ್ಯಾರ್ಥ.—ಪ್ರಾಣದೇವನು=ಮುಖ್ಯಪ್ರಾಣದೇವರು, ತ್ರಿಜಗದೊಳಗೆ=ದೇವಮಾನವ ದಾನವ ಜೀವರೊಳಗೆ, ಪ್ರವೀಣನೆಂದೆನಿಸುತ=ಮಹಾ ಸಮರ್ಥರೆಂದೆನಿಸುತ, ಅಧಿಕಾರಾನುಸಾರದಿ-ಅವರವರ ಯೋಗ್ಯತೆಗಳಿಗನುಸಾರವಾಗಿ, ಕರ್ಮಗಳ ತಾಮಾಡಿ=ಅವರವರೊಳಗಿದ್ದು ತಾವು ಮಾಡಿ, ಮಾಡಿಸುತ=ಜೀವರಿಂದಲೂ ಮಾಡಿಸುತ, ಸುರರ್ಗೆ-ದೇವತಾ ಜೀವರಿಗೆ, ಜ್ಞಾನಭಕ್ತಿ=ಜ್ಞಾನ ಭಕ್ತಿಗಳನ್ನು, ಮಧ್ಯಮಜೀವರಿಗೆ-ಮನುಷ್ಯ ಜೀವರಿಗೆ ಮಿಶ್ರಜ್ಞಾನ=ಪುಣ್ಯಪಾಪ ಮಿಶ್ರವಾದ ಕರ್ಮಗಳನ್ನು ಮಾಡಿ; ಸುಖದುಃಖ ಮಿಶ್ರವಾದ ನಿತ್ಯ ಸಂಸಾರಕ್ಕೆ ಸಾಧನಮಾಡಿಕೊಳ್ಳುವ ಮಿಶ್ರ ಜ್ಞಾನವನ್ನೂ, ದೈತ್ಯರಿಗೆ, ಅಜ್ಞಾನ, ಮೋಹ, ದ್ವೇಷಗಳನ್ನು, ಕೊಡುತಿಪ್ಪ=ಕೊಡುತ್ತಿರುವರು.

ತಾತ್ಪರ್ಯ.—ಮುಖ್ಯಪ್ರಾಣದೇವರು ತ್ರಿವಿಧರಾದ ದೇವಮಾನವ ದಾನವ ಜೀವರಲ್ಲಿದ್ದು ಮಹಾಸಾಮರ್ಥ್ಯವುಳ್ಳವರಾಗಿ ಅವರ ಯೋಗ್ಯತಾನುಸಾರವಾಗಿ ಕರ್ಮಗಳನ್ನು ತಾವು ಮಾಡಿ ಮಾಡಿಸುತ್ತಾ ದೇವತೆಗಳಿಗೆ ಜ್ಞಾನಭಕ್ತಿಗಳನ್ನೂ, ಮನುಷ್ಯರಿಗೆ ಮಿಶ್ರಜ್ಞಾನವನ್ನೂ, (ಇದರರ್ಥವನ್ನು ಪದ್ಯಾರ್ಥದಲ್ಲಿ ನೋಡಿ) ದೈತ್ಯರಿಗೆ ಅಜ್ಞಾನ, ಮೋಹ, ದ್ವೇಷಗಳನ್ನು ಕೊಡಿಸುವರು.

ಅವತಾರಿಕೆ.—ಈ ಪ್ರಕರಣವನ್ನೂ, ಮತ್ತು ಸಂಧಿಯನ್ನೂ ಮುಗಿಸುತ್ತಾ ತಾರತಮ್ಯ ಜ್ಞಾನದ ಫಲವನ್ನು ಹೇಳುತ್ತಾರೆ.—

ದೇವದೈತ್ಯರ ತಾರತಮ್ಯವ
ನೀ ವಿಧದಿ ತಿಳಿದೆಲ್ಲರೊಳು ಲ
ಕ್ಷ್ಮೀವರನೆ ಸರ್ವೋತ್ತಮನು ಎಂದರಿತು ನಿತ್ಯದಲಿ ।
ಸೇವಿಸುವ ಭಕ್ತರಿಗೊಲಿದು ಸುಖ
ವೀವ ಸರ್ವತ್ರದಲಿ ಸುಖಮಯ
ಶ್ರೀವಿರಿಂಚಾದ್ಯಮರನುತ ಜಗನ್ನಾಥವಿಠಲನು ॥೧೬॥

ಪದ್ಯಾರ್ಥ.—ದೇವದೈತ್ಯರ ತಾರತಮ್ಯವನ್ನು, ಈ ವಿಧದಿ, ತಿಳಿದು=ಮೇಲೆ ಹೇಳಿದ ಪ್ರಕಾರವಾಗಿ ತಿಳಿದು, ಲಕ್ಷ್ಮೀವರನೆ-ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ, ಸರ್ವೋತ್ತಮನು, ಎಲ್ಲರೊಳು = ಸಕಲ ಪ್ರಾಣಿಗಳಲ್ಲೂ, ವ್ಯಾಪ್ತನಾಗಿರುವನು, ಎಂದರಿತು, ಸೇವಿಸುವ ಭಕ್ತರಿಗೆ,

ಒಲಿದು=ಸುಪ್ರೀತನಾಗಿ, ಸುಖಮಯ=ಆನಂದ ಸ್ವರೂಪನಾದ, ಶ್ರೀವಿರಿಂಚಾದ್ಯಮರನುತ=ಶ್ರೀ=ರಮಾದೇವಿಯರು, ವಿರಿಂಚಾದಿ = ಬ್ರಹ್ಮದೇವರು ಮೊದಲಾದ, ಅಮರನುತ=ದೇವತೆಗಳಿಂದ ವಂದ್ಯನಾದ, ಜಗನ್ನಾಥವಿಠ್ಠಲನು, ಸರ್ವತ್ರದಲಿ=ಇಹಪರಂಗಳಲ್ಲಿ, ಸುಖವೀವ=ಸುಖವನ್ನು ಕೊಡುವನು

ತಾತ್ಪರ್ಯ.—ಈ ಸಂಧಿಯಲ್ಲಿ ಹೇಳಿದ ಪ್ರಕಾರವಾಗಿ ದೇವದೈತ್ಯರ ತಾರತಮ್ಯವನ್ನು ತಿಳಿದು ಶ್ರೀಪರಮಾತ್ಮನೇ ಸರ್ವೋತ್ತಮನು ಎಂದು ತಿಳಿದು, ನಿತ್ಯದಲ್ಲೂ ಭಕ್ತಿಯಿಂದ ಉಪಾಸನೆ ಮಾಡುವವರ ಭಕ್ತರಿಗೆ ಆನಂದ ಸ್ವರೂಪನಾದ, ರಮಾ ಬ್ರಹ್ಮಾದಿ ವಂದ್ಯನಾದ ಲಕ್ಷ್ಮೀಪತಿಯಾದ ಶ್ರೀಮಜ್ಜಗನ್ನಾಥವಿಠಲನು ಇಹಪರಂಗಳಲ್ಲಿ ಆನಂದವನ್ನು ಕೊಡುವನು.

ಎಂಬಲ್ಲಿಗೆ ಭಾವಪ್ರಕಾಶಿಕೆಯಲ್ಲಿ ೨೯ನೆಯ ಅಣುತಾರತಮ್ಯ ಸಂಧಿಯು ಸಮಾಪ್ತವಾದುದು.

॥ ಶ್ರೀಕೃಷ್ಣಾರ್ಪಣಮಸ್ತು ॥



## ದೈತ್ಯ ತಾರತಮ್ಯ ಸಂಧಿ.

—೦—

### ಸಂಧಿ ೩೦.

ಅವತಾರಿಕೆ.—ದೇವತೆಗಳ ತಾರತಮ್ಯವನ್ನು ನಾವು ತಿಳಿಯ ಬೇಕಾದುದು ಹೇಗೆ ಆವಶ್ಯಕವೋ ದೈತ್ಯರಲ್ಲಿ ದ್ವೇಷಿಸುವುದಕ್ಕಾಗಿ ಅವರ ತಾರತಮ್ಯವನ್ನೂ ಸಹ ತಿಳಿಯಬೇಕಾದುದು ಅತ್ಯಾವಶ್ಯಕವೆಂದು ಈಗ ದೈತ್ಯ ತಾರತಮ್ಯ ಸಂಧಿಯನ್ನು ಉಪಕ್ರಮಿಸುತ್ತಾರೆ.

**ಹರಿಕಥಾಮೃತಸಾರ ಗುರುಗಳ ||ಪ||**

**ಸಂಧಿ ಸೂಚನೆ || ಶ್ರೀಶಮುಕ್ತಾ ಮುಕ್ತ ಸುರವರ**
**ವಾಸುದೇವಗೆ ಭಕ್ತಿಯಲಿ ಕಮ**
**ಲಾಸನನು ಪೇಳಿದನು ದೈತ್ಯ ಸ್ವಭಾವ ಗುಣಗಳನು ||**

ಪದ್ಯಾರ್ಥ.—ಶ್ರೀಶ=ಲಕ್ಷ್ಮೀಪತಿಯಾದ, ಮುಕ್ತಾಮುಕ್ತಸುರವರ=ಮುಕ್ತರು, ಅಮುಕ್ತರು ಈ ಎರಡು ವಿಧ, ಸುರ = ದೇವತೆಗಳಿಗಿಂತಲೂ, ವರ=ಉತ್ತಮನಾದ, ಶ್ರೀವಾಸುದೇವಗೆ=ವಾಸುದೇವ ಪುತ್ರನಾದ ಶ್ರೀಕೃಷ್ಣಾವತಾರ ಮಾಡಿದ ಪರಮಾತ್ಮನಿಗೆ, ಭಕ್ತಿಯಲಿ = ಪರಮ ಭಕ್ತಿಯಿಂದ ಸ್ತೋತ್ರಮಾಡುವ ಸಂಧರ್ಭದಲ್ಲ, ಕಮಲಾಸನನ=ಬ್ರಹ್ಮದೇವರು, ದೈತ್ಯ ಸ್ವಭಾವಗುಣಗಳನು=ದೈತ್ಯರ ಸ್ವಭಾವಗಳನ್ನು ಅವರ ಯೋಗ್ಯತೆಯಗುಣಗಳನ್ನೂ, ಪೇಳಿದನು=ವಿಜ್ಞಾಪಿಸಿಕೊಂಡರು.

ತಾತ್ಪರ್ಯ.—ದೈತ್ಯರ ತಾರತಮ್ಯವನ್ನು, ಗರುಡ ಪುರಾಣ ಬ್ರಹ್ಮಕಾಂಡದಲ್ಲಿ ಬ್ರಹ್ಮದೇವರು ಪರಮಾತ್ಮನನ್ನು ಸ್ತೋತ್ರಮಾಡುವ ಪ್ರಕರಣ

ದಲ್ಲಿ ಪ್ರಸಂಗ ಸಂಗತಿಯಿಂದ ಹೇಳಿರುವರು. ಅದೇ ಅರ್ಥವನ್ನೇ ಈ ಸಂಧಿ ಯಲ್ಲಿ ಹೇಳುತ್ತೇವೆ.

**ಎನಗೆ ನಿನ್ನಲಿ ಭಕ್ತಿ ಜ್ಞಾನಗ**
**ಳೆನಿತಿಹವೋ ಪ್ರಾಣನಲಿ ತಿಳಿಯದೆ**
**ಹನುಮದಾದ್ಯವತಾರಗಳ ಬೇಧಗಳ ಪೇಳುವವ।**
**ದನುಜಘೋರಾಂಧಂ ತಮುಸಿಗ್ಯೋ**
**ಗ್ಯನು ನಸಂಶಯ ನಿನ್ನ ಬೈವರ**
**ಕೊನೆಯ ನಾಲಿಗೆ ಪಿಡಿದು ಭೇದಿಪೆನೆಂದನಬ್ಜಭವ ॥೧॥**

ಪದ್ಯಾರ್ಥ.—ಎನಗೆ=ನನಗೆ, ನಿನ್ನಲಿ-ನಿನ್ನಲ್ಲಿ, ಭಕ್ತಿಜ್ಞಾನಗಳು, ಎನಿತಿಹವೊ=ಎಷ್ಟು ಇರುವವೋ ಅಷ್ಟು ಭಕ್ತಿ ಜ್ಞಾನಗಳನ್ನು, ಪ್ರಾಣನಲಿ-ಮುಖ್ಯಪ್ರಾಣದೇವರಲ್ಲಿ ತಿಳಿಯದೆ, ಹನುಮದಾದ್ಯವತಾರಗಳ=ಹನುಮ ಭೀಮ ಮಧ್ವಾವತಾರಗಳಿಗೆ, ಭೇದಗಳ ಪೇಳುವವ=ಒಂದಕ್ಕೊಂದು ಭೇದ ವೆಂದು ಹೇಳುವವನು, ಘೋರಾಂಧಂತಮುಸ್ಸಿಗೆ=ಘೋರವಾದ ಅಂಧಂತ ಮಸ್ಸಿಗೆ, ಯೋಗ್ಯನು=ಯೋಗ್ಯನಾದ. ದನುಜನು=ದೈತ್ಯನು ನಸಂಶಯ =ಈ ವಿಷಯದಲ್ಲಿ ಸಂಶಯವೇ ಇಲ್ಲವು. (ನಾನು) ನಿನ್ನ=ನಿನ್ನನ್ನು, ಬೈವ ರ=ದ್ವೇಷದಿಂದ ದೂಷಿಸುವವರ, ಕೊನೆಯ ನಾಲಿಗೆ ಪಿಡಿದು, ಭೇದಿಪೆ ನು-ಕತ್ತರಿಸುವೆನು ಎಂದನಬ್ಜಭವ=ಎಂದು ಬ್ರಹ್ಮದೇವರು ಹೇಳಿರುವರು

ತಾತ್ಪರ್ಯ.—ಪರಮಾತ್ಮನಲ್ಲಿ ಬ್ರಹ್ಮದೇವರ ವಿಜ್ಞಾಪನೆ.—ಎಲೈ ಈಶ! ನನಗೆ ನಿನ್ನಲ್ಲಿ ಎಷ್ಟು ಭಕ್ತಿ ಜ್ಞಾನಗಳಿರುವವೋ ಅಷ್ಟು ವಾಯು ದೇವರಲ್ಲಿ ಇದ್ದೇ ಇರುವವು. ಅದನ್ನು ತಿಳಿಯದೆ ನನಗೂ ವಾಯುದೇವ ರಿಗೂ ಭಕ್ತಿ ಜ್ಞಾನಗಳಲ್ಲಿ ತಾರತಮ್ಯವನ್ನು ಹೇಳುವವನು ಮಹಾ ದೈತ್ಯನು ಮತ್ತೂ ಬಳಿತ್ಥಾದಿ ಸೂಕ್ತಪ್ರತಿಪಾದ್ಯರಾದ ವಾಯುದೇವರ ಮೂಲರೂಪ ಕ್ಕೂ ಅವತಾರ ರೂಪಗಳಿಗೂ ಪರಸ್ಪರ ಭೇದಗಳುಂಟೆಂದು ಹೇಳುವವನೂ ದೈತ್ಯನೇ! ಯದ್ಯಪಿ ಯುಗಭೇದದಿಂದ ಶಕ್ತಿ ಬೇಧವನ್ನು ತೋರಿಸುವುದ ಕ್ಕಾಗಿ ಸೌಗಂಧಿಕಾಹರಣ ಕಾಲದಲ್ಲಿ ಹನುಮಂತದೇವರ ಬಾಲವನ್ನು ಎತ್ತ ಲು ಭೀಮಸೇನದೇವರಿಂದ ಸಾಧ್ಯವಾಗಲಿಲ್ಲವೆಂದು ಭಾರತದಲ್ಲಿ ಹೇಳಿರುವ ರು. ಇದು ಅಸುರಜನ ಮೋಹಕ್ಕಾಗಿಯೂ, ಯುಗಾನುಸಾರವಾಗಿ ಶಕ್ತಿ

ಬೇಧವಾಗುವುದೆಂದು ತೋರ್ಪಡಿಸುವುದಕ್ಕಾಗಿ ವಿಡಂಬನ ಮಾತ್ರವೇ ಹೊರತು ನಿಜವಾದುದಲ್ಲವೆಂಬ ಭಾವ. ಹೀಗೆ ತಿಳಿಯದೆ ನಿಜವಾಗಿಯೂ ಭೀಮಸೇನದೇವರಿಗೂ ಹನುಮಂತದೇವರಿಗೂ ಬೇಧವನ್ನು ತಿಳಿಯುವವನು ಮಹಾದೇತ್ಯನು. ಇಂತಹವರಿಗೆ ಘೋರವಾದ ಅಂಧಂತಮಸ್ಸೇ ಪ್ರಾಪ್ತಿ ಯಾಗುವುದು. ಈ ವಿಷಯದಲ್ಲಿ ಸಂಶಯವೇ ಇಲ್ಲ. ಇದಕ್ಕೆ ಆಧಾರ ಗರುಡಪುರಾಣದ ಪ್ರಮಾಣ:—" ವಾಯೋರ್ಮಾಂತರಂನಾಸ್ತಿ ಹರಿತತ್ವಸ್ಯ ನಿರ್ಣಯ || ಅವತಾರೇಷು ವಾಯೋಸ್ತ್ವಂತರಂಯೇವಿದುಃ ಪ್ರಭೋ || ತೇಂಧಂತಮಃಪ್ರವಿಶ್ಯಂತಿ ದೈತ್ಯಾಸ್ತು ನಚತೇಸುರಾಃ || " ಎಂದಿರುವುದು. ಶ್ಲೋಕಾರ್ಥವೇ ಪದ್ಯಾರ್ಥವು. ಮತ್ತು ಬ್ರಹ್ಮದೇವರು ಹೇಳಿದುದೇನೆಂದರೆ —ಯಾರು ನಿನ್ನನ್ನು ದೂಷಿಸುವನೋ ಅವನ ಕೊನೆ ನಾಲಿಗೆಯನ್ನು ನಾನು ಕತ್ತರಿಸುವೆನೆಂದು. ಈ ವಿಷಯದಲ್ಲಿ ಗರುಡಪುರಾಣವಾಕ್ಯ:—" ನಿಂದಾಂಕುರ್ವಂತಿ ಯೇ ವಿಷ್ಣೋರ್ಜಿಹ್ವಾ ಛೇದಂ ಕರೋಮ್ಯಹಂ " ಎಂಬ ಶ್ಲೋಕಾರ್ಥವನ್ನೇ ದಾಸಾರ್ಯರು ಈ ಪದ್ಯದಲ್ಲಿ ಹೇಳಿರುವರು.

ಅವತಾರಿಕೆ.—ಮತ್ತೂ ದೈತ್ಯರ ಸ್ವಭಾವವನ್ನು ಗರುಡ ಪುರಾಣದ " ಗುಣಪೂರ್ಣಸ್ಯ ವಿಷ್ಣೋಸ್ತು ನಿರ್ಗುಣತ್ವ ವಿಚಿಂತನಂ|| ಜ್ಞಾನಾನಂದಾದಿಪೂರ್ಣಸ್ಯ ಸೋಹಮಿತ್ಯಾದಿ ಚಿಂತನಂ || ಚಿದಾನಂದಾತ್ಮಕೇ ದೇಹೇ ಉತ್ಪತ್ತ್ಯಾದಿ ವಿಚಿಂತನಂ || ನಿತ್ಯಾವಿಯೋಗಿನೀ ದೇವ್ಯಾಃ ವಿಯೋಗಾದಿವಿ ಚಿಂತನಂ || ಅಭೇದ್ಯಾಭೇದ್ಯ ಗಾತ್ರೇಷು ಛೇದಭೇದಾದಿ ಚಿಂತನಂ || " ಎಂಬೀ ಶ್ಲೋಕಗಳ ಅಭಿಪ್ರಾಯವನ್ನು ಈ ಪದ್ಯದಲ್ಲಿ ಹೇಳುತ್ತಾರೆ.

ಜ್ಞಾನ ಬಲ ಸುಖ ಪೂರ್ಣವ್ಯಾಪ್ತಗೆ
ಹೀನಗುಣನೆಂಬುವನು ಈಶ್ವರ
ನಾನೆ ಎಂಬುವ ಸಚ್ಚಿದಾನಂದಾತ್ಮಗುತ್ಪತ್ತಿ ||
ಶ್ರೀನಿತಂಬಿನಿಗೀಶಗೆ ವಿಯೋ
ಗಾನುಚಿಂತನೆ ಛೇದಭೇದ ವಿ
ಹೀನದೇಹಗೆ ಶಸ್ತ್ರಗಳ ಭಯ ಪೇಳುವವ ||೨||

ಪದ್ಯಾರ್ಥ.—ಜ್ಞಾನಬಲಸುಖಪೂರ್ಣವ್ಯಾಪ್ತಗೆ = ಜ್ಞಾನ, ಬಲ, ಸುಖ ಇವುಗಳಿಂದ ಪೂರ್ಣನಾದ, ಸರ್ವತ್ರ ವ್ಯಾಪ್ತನಾದ ಪರಮಾತ್ಮನಿಗೆ

ಹೀನಗುಣನೆಂಬುವನ=ಗುಣಹೀನನೆಂಬುವನು, ( ನಿರ್ಗುಣನೆಂದು ಹೇಳುವವನು ) ನಾನೇ ಈಶ್ವರನೆಂಬುವನೂ, ಸಚ್ಚಿದಾನಂದಾತ್ಮಗೆ, ಉತ್ಪತ್ತಿ=ಸಚ್ಚಿದಾನಂದ ಸ್ವರೂಪನಾದ ಶ್ರೀಪರಮಾತ್ಮನಿಗೆ ಹುಟ್ಟುವಿಕೆ ಉಂಟೆಂದು ಹೇಳುವವನೂ, ಶ್ರೀನಿತಂಬಿನಿಗೆ=ಲಕ್ಷ್ಮೀದೇವಿಯರಿಗೂ, ಈಶಗೆ=ಪರಮಾತ್ಮನಿಗೂ, ವಿಯೋಗಾನುಚಿಂತನೆ=( ವಿಯೋಗವನ್ನು ಚಿಂತಿಸುವುದು) ಒಬ್ಬರನ್ನೊಬ್ಬರು ಅಗಲಿರುವರೆಂದು ಚಿಂತಿಸುವವನೂ, ಛೇದಭೇದವಿಹೀನ ದೇಹಗೆ=ಅಛೇದ್ಯವಾದ ದೇಹವುಳ್ಳ ಪರಮಾತ್ಮನಿಗೆ, ಶಸ್ತ್ರಗಳ ಭಯಪೇಳುವ=ಆಯುಧಗಳಿಂದ ಛೇದಭೇದಗಳ ಸಂಬಂಧವಾದ ಭಯ ಉಂಟೆಂದು ಹೇಳುವವನೂ, ಇವರೆಲ್ಲರೂ, ದೈತ್ಯ=ದೈತ್ಯರು.

ತಾತ್ಪರ್ಯ.—ಪೂರ್ಣಜ್ಞಾನ, ಪೂರ್ಣಬಲ, ಪೂರ್ಣಾನಂದ ಸ್ವರೂಪನಾದ ಶ್ರೀಪರಮಾತ್ಮನನ್ನು ನಿರ್ಗುಣನೆಂದು ಉಪಾಸನೆ ಮಾಡುವವನು ದೈತ್ಯನು. ನಾನೇ ಈಶ್ವರನೆಂಬುವನೂ ದೈತ್ಯನು. ಶಬ್ದದೇಕಪ್ರಕಾರವಾಗಿ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನಿಗೆ ಜನನಾದಿಗಳುಂಟೆಂದು ಚಿಂತನೆಮಾಡುವವನೂ ದೈತ್ಯನು. ರಮಾದೇವಿಯರಿಗೂ ಪರಮಾತ್ಮನಿಗೂ ರಾಮಾವತಾರ ಮೊದಲಾದ ಅವತಾರದಲ್ಲೀ ಆಗಲಿ ಮೂಲರೂಪದಲ್ಲಾಗಲೀ ಒಬ್ಬರಿಗೊಬ್ಬರ ವಿಯೋಗವನ್ನು ತಿಳಿಯುವುದು ಅಂದರೆ ರಾಮಾವತಾರದಲ್ಲಿ ರಾಮನನ್ನು ಅಗಲಿ ಸೀತಾದೇವಿಯು ರಾವಣನ ಮನೆಯಲ್ಲಿದ್ದಾಗಲೂ, ರಾವಣನ ಸಂಹಾರವಾದ ಮೇಲೆ ಪಟ್ಟಾಭಿಷೇಕವು ಶ್ರೀರಾಮನಿಗಾದಮೇಲೆ ಲೋಕನಿಂದ್ಯಕ್ಕೆ ಹೆದರಿ ಗರ್ಭಿಣಿಯಾದ ಸೀತೆಯನ್ನು ವಾಲ್ಮೀಕಾಶ್ರಮದಲ್ಲಿ ಬಿಟ್ಟುಬಂದಾಗಲೂ, ರಾಮನಿಗೂ ಸೀತೆಗೂ ಅಗಲುವಿಕೆಯಾಗಿತ್ತೆಂದು ರಾಮಾಯಣದಲ್ಲಿ ಸ್ಪಷ್ಟವಾಗಿ ಹೇಳಿದೆ. ಆದರೆ ಅದು ನಿಜವಲ್ಲ. ಅಸುರಜನ ಮೋಹಕ್ಕಾಗಿ ಹಾಗೆ ತೋರಿದುದೇ ಹೊರ್ತು ನಿತ್ಯಾವಿಯೋಗಿನಿಯಾದ ಸೀತಾರಾಮರ ವಿಯೋಗವೆಂದಿಗೂ ಇಲ್ಲ. ಎಲ್ಲಿ ರಾಮನೋ ಅಲ್ಲಿ ಸೀತೆಯೂ, ಎಲ್ಲಿ ಸೀತೆಯೋ ಅಲ್ಲಿ ರಾಮನೂ ಇದ್ದೇ ಇರುವರು. ಇವರಿಬ್ಬರಿಗೂ ಪರಸ್ಪರ ವಿಯೋಗವನ್ನು ಚಿಂತಿಸುವವನು ದೈತ್ಯನು. ಮಣಿಮಂಜರಿಯಲ್ಲಿ, " ಸುರಾಣಕಾಂಸ್ತಮೋನೇತುಂ ತತ್ಯಾಜೇವ ಸಜಾನಕೀಂ ॥ ವ್ಯಾಪ್ತತ್ವಾನ್ನಿರವದ್ಯತ್ವಾತ್ತಸ್ಯಾಸ್ತ್ಯಾಗಃ ಕಥಂಭವೇತ್ ॥" ಪರಮಾತ್ಮನಿಗೂ

ಲಕ್ಷ್ಮೀದೇವಿಯರಿಗೂ ಎಂದಿಗೂ ವಿಯೋಗವಿಲ್ಲ. ಆದರೂ ಸುರಾಣಕರೆಂಬ ದೈತ್ಯರು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ನಾವು ಏನು ಪಾಪವನ್ನು ಮಾಡಿದರೂ ನಮಗೆ ಪ್ರತಿಬಂಧಕವಾಗಬಾರದೆಂದು ಬೇಡಿಕೊಂಡರು. ಆಗ ಬ್ರಹ್ಮದೇವರು ನೀವು ಲಕ್ಷ್ಮೀನಾರಾಯಣರಿಗೆ ಪರಸ್ಪರ ಅಗಲುವಿಕೆಯನ್ನು ಮಾತ್ರ ಮಾಡಿಸದೆ ಮತ್ತೇನು ಪಾಪ ಮಾಡಿದರೂ ಮುಕ್ತಿಗೆ ಪ್ರತಿಬಂಧಕವಾಗುವುದಿಲ್ಲ. ಆ ಒಂದು ಪಾಪವೇ ನಿಮ್ಮ ಮುಕ್ತಿಗೆ ಪ್ರತಿಬಂಧಕವೆಂದು ವರವನ್ನಿತ್ತರು. ಅವರು ಬ್ರಹ್ಮದೇವರ ವರಬಲದಿಂದ ಅನೇಕ ಪಾಪಗಳನ್ನು ಮಾಡುತ್ತಾ ಭೂಮಿಯಲ್ಲಿ ಹುಟ್ಟಿ ಸೀತಾರಾಮರು ಲಕ್ಷ್ಮೀನಾರಾಯಣರೆಂದರಿಯದೆ ರಾಮಸೀತೆಯರನ್ನು ದೂಷಿಸುತ್ತಿದ್ದರು. ಅಂದರೆ ರಾಮನು ಒಂದು ವರ್ಷದ ದಿವಸ ರಾವಣನ ಮನೆಯಲ್ಲಿದ್ದ ಸೀತೆಯನ್ನು ತಾನು ಸ್ವೀಕಾರ ಮಾಡಿದನೆಂದು ದೂಷಿಸಿದರು. ಇವರಿಗೆ ತಮಸ್ಸಾಗಬೇಕಾದರೆ ಸೀತೆಯನ್ನು ತ್ಯಾಗಮಾಡಿದ ಹೊರತು ಆಗುವಂತಿಲ್ಲ. ಬ್ರಹ್ಮದೇವರ ವರವು ಹಾಗಿರುವುದು. ಬ್ರಹ್ಮದೇವರ ವರವನ್ನು ಸತ್ಯಮಾಡುವುದಕ್ಕಾಗಿ ಶ್ರೀರಾಮರು ಸೀತೆಯನ್ನು ತ್ಯಾಗ ಮಾಡಿದಂತೆ ತೋರಿದರೆ ಹೊರತು ನಿಜವಾಗಿ ರಾಮನೂ ಸೀತೆಯು ಆಗಿರಲಿಲ್ಲ. ಹೇಗೆಂದರೆ ರಮಾ ದೇವಿಯರೂ ಸರ್ವತ್ರ ವ್ಯಾಪ್ತರು; ನಿರ್ದುಷ್ಟರು; ಪರಮಾತ್ಮನೂ ಸರ್ವತ್ರವ್ಯಾಪ್ತನೂ ನಿರ್ದುಷ್ಟನು; ಹೀಗಿರಲು ಇವರಿಗೆ ವಿಯೋಗವು ಆಗುವದೆಂತು? ಎಲ್ಲರೂ ನೋಡುತ್ತಿದ್ದ ರೂಪವು ಅದೃಶ್ಯವಾಗಿ ವಾಲ್ಮೀಕಾಶ್ರಮದಲ್ಲಿ ರೂಪಾಂತರದಿಂದ ವಾಸ ಮಾಡುತ್ತಿದ್ದಳು. ರಾಮನು ಅಶ್ವಮೇಧ ಮಾಡುವ ಕಾಲದಲ್ಲಿ ಎಲ್ಲರ ಎದಿರಿನಲ್ಲಿ ಭೂಪ್ರವೇಶ ಮಾಡಿದುದೂ ರೂಪಾಂತರದಿಂದಲೇ. ಮತ್ತೊಂದು ರೂಪದಿಂದ ಶ್ರೀರಾಮನಿಗೆ ಮಾತ್ರ ಗೋಚರಿಸುತ್ತಾ ಮತ್ತೊಬ್ಬರ ಕಣ್ಣಿಗೆ ಗೋಚರವಾಗದೆ ಇದ್ದಳು. ಮಹಾಭಾರತ ತಾತ್ಪರ್ಯ ನಿರ್ಣಯ ೯ ನೆಯ ಅಧ್ಯಾಯದಲ್ಲಿ "ರಾಮಸ್ಯ ದೃಶ್ಯಾತ್ವನ್ಯೇಷಾಮದೃಶ್ಯಾ ಜನಕಾತ್ಮಜಾ ॥ ಭೂಮಿಪ್ರವೇಶಾದೂರ್ಧ್ವಂ ಸಾರೇಮೇಸಪ್ತರತಂಸಮಾಃ ॥ ೪೨ ॥" ಸೀತಾದೇವಿಯು ಭೂಮಿಪ್ರವೇಶ ಮಾಡಿದಮೇಲೆ ಮತ್ತೊಬ್ಬರ ಕಣ್ಣಿಗೆ ಬೀಳದೆ ಶ್ರೀರಾಮರ ಕಣ್ಣಿಗೆ ಮಾತ್ರ ಗೋಚರಳಾಗುತ್ತಾ (೭೦೦) ಏಳುನೂರು ವರ್ಷಗಳವರೆಗೂ ಶ್ರೀರಾಮನಿಂದ ಸುಖವನ್ನನುಭವಿಸುತ್ತಿದ್ದಳು ಎಂದು

ಹೇಳಿರುವರು. ಇದರಂತೆಯೇ ೩೩ ನೆಯ ಶ್ಲೋಕದಲ್ಲಿ "ನಿತ್ಯಮೇವ ಸಹಿತೋಪಿ ಸೀತಾಯಾ ಸೋಗ್ನಿಸಾಕ್ಷಿಕಮುಭೂದ್ವಿಯುಕ್ತವತ್" ಶ್ರೀರಾಮನು ನಿತ್ಯವಲ್ಲೂ ಸೀತೆಯನ್ನು ನೋಡುತ್ತಾ ತನ್ನ ಸಮೀಪದಲ್ಲೇ ಇಟ್ಟುಕೊಂಡಿದ್ದರೂ ಅಗ್ನಿ ಸಾಕ್ಷಿಯಾಗಿ ಸೀತೆಯನ್ನು ಕಳೆಕೊಂಡಂತೇ ತೋರಿದನೆಂದು ಹೇಳಿರುವರು. ಮತ್ತೂ ೫ ನೆಯ ಅಧ್ಯಾಯ ೪೦ ನೆಯ ಶ್ಲೋಕದಲ್ಲೂ "ರಾಮೋಪಿತತ್ರ ವಿನಿಹತ್ಯ ಸುದುಷ್ಟರಕ್ಷಃ ಪ್ರಾಪ್ಯಾಶ್ರಮಂ ಸ್ವದಯಿತಾಂ ನಹಿ ಪಶ್ಯತೀವ ॥೪೦॥" ರಾಮನು ದುಷ್ಟನಾದ ಮಾಯಾ ಮೃಗ ರೂಪಿಯಾದ ಮಾರೀಚನೆಂಬ ರಾಕ್ಷಸನನ್ನು ಸಂಹರಿಸಿ ತನ್ನ ಆಶ್ರಮಕ್ಕೆ ಬಂದು ತನ್ನ ಪ್ರಿಯಳನ್ನು ಕಾಣದವನಂತೆ ನಟನೆ ಮಾಡಿದನು. ಮತ್ತು "ಅನ್ವೇಷಮಾಣಇವ" ಸೀತೆಯನ್ನು ಹುಡುಕುವವನಂತೇ ತೋರಿದನೆಂದು ಹೇಳಿರುವರು. ಈ ವಾಕ್ಯದಿಂದಾಗಲೂ ನಿಜವಾಗಿಯೂ ಸೀತೆಯನ್ನು ಕಳೆದುಕೊಂಡಿರಲಿಲ್ಲವೆಂದು ಸಿದ್ಧವಾಗುವುದು. ಮತ್ತೂ ಮಣಿಮಂಜರಿಯಲ್ಲಿ "ನಿತ್ಯಂ ಪಶ್ಯನ್ನಿಜಾಂದೇವೀಂ ಪೂರ್ಣ ಸಂತೋಷ ಸಂಭೃತಃ ॥ ರಾಮೋನ ದೃಶ್ಯತೇ ಸೀತೇತ್ಯೈ ಭೂತ್ಸಂಕಟವಾನಿವ ॥" ಶ್ರೀರಾಮನು ನಿತ್ಯದಲ್ಲೂ ತನ್ನ ಸಮೀಪದಲ್ಲೇ ವಾಸಮಾಡುತ್ತಿದ್ದ ಸೀತೆಯನ್ನು ನೋಡುತ್ತಾ ಪೂರ್ಣವಾದ ಸಂತೋಷದಿಂದ ಕೂಡಿದ್ದರೂ ಹೆಂಡತಿಯನ್ನು ಕಳೆದುಕೊಂಡು ದುಃಖಪಡುವನಂತೆ ತಾನೂ ಸಹ ಸೀತೆಯನ್ನು ಕಾಣನೆಂದು ವ್ಯಸನ ಪಡುವವನಂತೇ ತೋರಿದನು. ಇದರ ಕಾರಣವೇನೆಂದರೆ:—ರಾವಣನ ಸಂಹಾರವು ಸೀತಾ ನಿಮಿತ್ತದಿಂದಲೇ ಆಗಬೇಕಾದುದರಿಂದ ನೋಡಿದವರಿಗೆ ಹಾಗೆ ತೋರಿದನೆಂಬ ಭಾವ. ರಾವಣನು ಅಪಹಾರ ಮಾಡಿದುದು ಮಾಯಾ ಸೀತೆಯನ್ನು ಅಂದರೆ ಸೀತೆಯಂತೆ ಆಕೃತಿಯುಳ್ಳ, ಅಗ್ನಿಯಿಂದ ನಿರ್ಮಿತವಾದ ಪ್ರತಿಮೆ ಇಂದ್ರನಿಂದ ಪ್ರವಿಷ್ಟವಾದುದು; ಸೀತೆಯ ಆವೇಶ ಮಾತ್ರ ಉಳ್ಳುದುದೆಂದು ರಾಮಾಯಣ ವಾಕ್ಯದಿಂದಲೂ, ನಿರ್ಣಯವಾಕ್ಯದಿಂದಲೂ ಸಿದ್ಧವಾಗುವುದು. ಅಛೇದ್ಯವಾಗಿಯೂ, ಅಭೇದ್ಯವಾಗಿಯೂ ಇರುವ ಪರಮಾತ್ಮನ ದೇಹಕ್ಕೆ ಆಯುಧಗಳಿಂದ ಛೇದ ಭೇದಗಳನ್ನು ಹೇಳುವವನು ದೈತ್ಯನು. ಒಟ್ಟು ಈ ಪದ್ಯದಲ್ಲಿ ಹೇಳಿರುವಂತೇ ಚಿಂತಿಸುವನು ದೈತ್ಯನೆಂಬ ವಿಷಯದಲ್ಲಿ ನಿರ್ಣಯ ಮೊದಲನೆಯ ಅಧ್ಯಾಯದಲ್ಲಿ "ಅವತಾರೇಷು ಯತ್ಕಿಂಚಿದ್ದರ್ಶಯೇನ್ನರವದ್ಧರಿಃ ॥ ತಚ್ಚಾಸುರಾ

ಣಾಂ ಮೋಹಾಯ ದೋಷಾ ವಿಷ್ಣೋರ್ನಹಿಕ್ವಚಿತ್ ॥ ೩೭ ॥ ಅಜ್ಞಾತ್ವಂ ಪಾರವಶ್ಯಂವಾ ವೇಧ ಭೇದಾದಿಕಂ ತಥಾ ॥ ಪ್ರಾಕೃತ ದೇಹತ್ವಂ ದೇಹ ತ್ಯಾಗಾದಿಕಂ ತಥಾ ॥ ೩೮ ॥ ಅನೀಶತ್ವಂ ಚ ದುಃಖಿತ್ವಂ ಸಾಮ್ಯಮನ್ಯೈಶ್ಚ ಹೀನತಾಂ ॥ ಪ್ರದರ್ಶಯತಿ ಮೋಹಾಯ ದೈತ್ಯಾದೀನಾಂ ಹರಿಃ ಸ್ವಯಂ ॥ ೩೯ ॥ ” ಶ್ರೀ ಪರಮಾತ್ಮನು ಅವತಾರ ರೂಪಗಳಲ್ಲಿ ಸಾಮಾನ್ಯ ಮನುಷ್ಯನಂತೆ ಕೆಲವುಕಡೆ ತೋರಿಸಿರುವನು. ಅದು ಅಸುರ ಜನ ಮೋಹಕ್ಕಾಗಿ ತೋರ್ಪಡಿಸಿರುವನೇ ಹೊರತು ನಿಜವಾದ ಪರಮಾತ್ಮನಲ್ಲಿ ಅಂತಹಾ ದೋಷಗಳು ಯಾವುದೂ ಇಲ್ಲ. ರಾಮಕೃಷ್ಣಾದಿ ರೂಪಗಳಲ್ಲಿ ಕೆಲವುಕಡೆ ತನಗೆ ಗೊತ್ತಿಲ್ಲದೆ ಮತ್ತೊಬ್ಬರನ್ನು ಕೇಳಿ ತಿಳಿದುಕೊಂಡಿರುವ ನೆಂದು ಭಾಗವತಾದಿಗಳಲ್ಲಿ ಹೇಳಿರುವರು. ತಾನು ಅಸ್ವತಂತ್ರನಾಗಿ ಪರ ಕೀಯರ ವಶವಲ್ಲಿದ್ದಂತೆ ತೋರುವದು; ಆಯುಧಗಳಿಂದ ದೇಹವು ಘಾಯ ವಾದಂತೆ ತೋರಿಸುವದು. ಪ್ರಾಕೃತ ದೇಹದಂತೆ ತೋರಿಸುವದು ; ದೇಹ ತ್ಯಾಗ ಮಾಡಿದಂತೆ ತೋರಿಸುವದು ; ತಾನು ಅನೀಶ್ವರನು ; ತನಗೆ ಮೇಲೆ ಒಬ್ಬನೀಶ್ವರನಿರುವನೆಂದು ತೋರಿಸುವುದು. ತಾನು ದುಃಖಪಟ್ಟಂತೆ ಕಾಣಿಸಿ ಕೊಳ್ವದು ; ಇತರ ಜನರ ಸಮನಂತೆ ತನ್ನನ್ನು ತೋರಿಸಿಕೊಳ್ಳುವದು. ಮತ್ತೊಬ್ಬರಿಂದ ತಾನು ಅಧಮನಂತೆ ತೋರಿಸಿಕೊಳ್ಳುವದು. ಇಂತಹ ವೆಲ್ಲವನ್ನೂ ದೈತ್ಯರನ್ನು ಮೋಹಿಸುವದಕ್ಕಾಗಿ ಶ್ರೀಹರಿಯು ತಾನಾಗಿಯೇ ತೋರಿಸುವನು. ಪೂರ್ಣ ಗುಣನಾದ ಸ್ವಾಮಿಗೆ ಇಂತಹಾ ದೋಷವು ಯಾವುದೂ ಇಲ್ಲ ಎಂದು ಹೇಳಿರುವರು. ಈ ಅಭಿಪ್ರಾಯುವನ್ನೇ ಈ ಪದ್ಯ ದಲ್ಲಿ ಹೇಳಿರುವರು. ಹೀಗೆ ತಿಳಿಯದೆ ನಿಜವಾಗಿ ಈ ಪದ್ಯದಲ್ಲಿ ಹೇಳಿದ ದೋಷಗಳನ್ನು ಪರಮಾತ್ಮನಲ್ಲಿ ಕಲ್ಪಿಸುವವನು ತಮೋಯೋಗ್ಯನೆಂದು ಭಾವ.

ಅವತಾರಿಕೆ :—“ಕ್ಲೇಶಶೋಕಾದಿ ಶೂನ್ಯಸ್ಯ ಹರೇಃ ಕ್ಲೇಶಾದಿಚಿಂತನಂ ॥ ವ್ಯಾಸರಾಮಾದಿರೂಪೇಷು ಋಷಿ ವಿಪ್ರತ್ವ ಚಿಂತನಂ ॥ ರಾಮಕೃಷ್ಣಾದಿ ರೂಪೇಷು ಪಾರಾವರ್ಯ ವಿಚಿಂತನಂ ॥ ಸಂತಾನಾರ್ಥಂತು ಕೃಷ್ಣೇನ ಶಿವಪೂಜಾದಿ ಚಿಂತನಂ ॥ ತೇಸರ್ವೇ ಅಸುರಾಜ್ಞೇಯಾನಾತ್ರ ಕಾರ್ಯ ವಿಚಾರಣಾ ” ಎಂಬ ಗರುಡಪುರಾಣ ವಾಕ್ಯದಭಿಪ್ರಾಯುವನ್ನು ಈ ಪದ್ಯದಲ್ಲಿ ಹೇಳುತ್ತಾರೆ.

ಲೇಶಭಯಶೋಕಾದಿ ಶೂನ್ಯಗೆ
ಕ್ಲೇಶಗಳ ಪೇಳುವವ ರಾಮ
ವ್ಯಾಸರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ ||
ದಾಶರಥಿ ಕೃಷ್ಣಾದಿ ರೂಪಕೆ
ಕೇಶಖಂಡನ ಪೇಳ್ವ ಮಕ್ಕಳಿ
ಗೋಸುಗ ಶಿವಾರ್ಚನೆಯ ಮಾಡಿದನೆಂಬುವನೆದೈತ್ಯ ||೩||

ಪದ್ಯಾರ್ಥ :—ಲೇಶಭಯ–ಸ್ವಲ್ಪ ಭಯವಾಗಲಿ, ಶೋಕಾದಿ–ಶೋಕ ಮೊದಲಾದವುಗಳಾಗಲಿ, ಶೂನ್ಯಗೆ–ಇಲ್ಲದಿರುವ ಪರಮಾತ್ಮನಿಗೆ, ಕ್ಲೇಶಗಳ ಪೇಳುವವ–ಭಯದುಃಖಾದಿಗಳು ಉಂಟೆಂದು ಪೇಳುವವನೂ, ರಾಮವ್ಯಾಸರೂಪಂಗಳಿಗೆ ಋಷಿವಿಪ್ರತ್ವ ಪೇಳುವವ– ಪರಶುರಾಮದೇವರನ್ನು ಸಾಮಾನ್ಯ ಬ್ರಾಹ್ಮಣರೆಂತಲೂ, ವೇದವ್ಯಾಸದೇವರನ್ನು ಸಾಮಾನ್ಯನಾದ ಒಬ್ಬ ಋಷಿ ಎಂತಲೂ ಹೇಳುವವನೂ, ದಾಶರಥಿಕೃಷ್ಣಾದಿರೂಪಕೆ–ದಶರಥ ರಾಮಕೃಷ್ಣಾದಿ ರೂಪಗಳಿಗೆ, ಕೇಶಖಂಡನ ಪೇಳುವವ–ವಪನ ಕಾರ್ಯ ಉಂಟೆಂದು ಪೇಳುವವನೂ, ಮಕ್ಕಳಿಗೋಸುಗ–ಕೃಷ್ಣಾವತಾರದಲ್ಲಿ ಸಂತಾನಾಪೇಕ್ಷೆಯಿಂದ ಶಿವಾರ್ಚನೆಯ ಮಾಡಿದನೆಂಬುವನು–ರುದ್ರದೇವರನ್ನು ಕುರಿತು ತಪಸ್ಸು ಮಾಡಿದನೆಂಬುವನೂ, ದೈತ್ಯ–ಹೀಗೆ ತಿಳಿದುಕೊಂಡಿರುವವರೆಲ್ಲರೂ ದೈತ್ಯರು.

ತಾತ್ಪರ್ಯ :— ರಾಮಾವತಾರದಲ್ಲಿ ವಾಲಿಯ ಇದಿರಿನಲ್ಲಿ ನಿಂತು ಬಾಣ ಹಾಕಲು ಭಯದಿಂದ ಮರೆಯಾಗಿ ನಿಂತು ಬಾಣಪ್ರಯೋಗ ಮಾಡಿದನೆಂದು ಹೇಳುವರು ದೈತ್ಯರೆಂದು ತಿಳಿಯಬೇಕು. ಅದೇಕೆಂದರೆ ನಿಜವಾಗಿ ಭಯದಿಂದ ವಾಲಿಯ ಇದಿರಿಗೆ ಬರದೆ ಇರಲಿಲ್ಲ. ಮರೆಯಾಗಿ ನಿಂತು ಬಾಣ ಹಾಕಲು ಕಾರಣವನ್ನು ನಿರ್ಣಯದಲ್ಲಿ ಹೇಳಿರುವರು. ಶ್ರೀಪರಮಾತ್ಮನಿಗೆ ಸುಗ್ರೀವ ಬೇಕಾದವನೆಂತಲೂ,ವಾಲಿಯು ದ್ವೇಷಿಎಂಬುವದೇನೂ ಇರಲಿಲ್ಲ. ಎಲ್ಲಾ ದೇವತೆಗಳಿಂದಲೂ, ಎಲ್ಲಾ ಅವತಾರಗಳಲ್ಲೂ ಸಮವಾಗಿ ಸೇವೆಯನ್ನು ಪರಮಾತ್ಮನು ಸ್ವೀಕರಿಸುವುದಿಲ್ಲ. ಕೆಲವು ದೇವತೆಗಳಿಂದ ರಾಮಾವತಾರದಲ್ಲೂ ಕೆಲವರಿಂದ ಕೃಷ್ಣಾವತಾರದಲ್ಲೂ ಸೇವೆಯನ್ನು ತೆಗೆದುಕೊಳ್ಳಬೇಕಾಗಿದ್ದಿತು.ಅದರಲ್ಲಿ ವಾಯುದೇವರ ಆಶ್ರಯವು ಯಾರಿಗೆಇರುತ್ತದೆಯೋ ಅವರಿಗೆ ತಾನು ಆಶ್ರಯವನ್ನು ಕೊಡುವ ಸಂಕಲ್ಪವು ಪರಮಾತ್ಮನದು.

ವಾಯು ಅವತಾರರಾದ ಹನುಮಂತದೇವರನ್ನು ಸುಗ್ರೀವನು ಆಶ್ರಯಿಸಿದ್ದುದರಿಂದ ಸುಗ್ರೀವನಿಗೆ ಅಭಯವನ್ನಿತ್ತು ವಾಲಿಯನ್ನು ಕೊಲ್ಲಬೇಕಾಗಿತ್ತು. ಅವನನ್ನು ಮರೆಯಾಗಿ ನಿಂತು ಕೊಲ್ಲಬೇಕಾದ ಕಾರಣವೇನೆಂದರೆ.—ನಿರ್ಣಯ ೬ನೆಯ ಅಧ್ಯಾಯ, "ಭಕ್ತೋ ಮಮೈಷಯದಿ ಮಾಮಭಿಪಶ್ಯತೀಹ ಪಾದೌ ಧೃವಂ ಮಮ ಸಮೇಷ್ಯತಿ ನಿರ್ವಿಚಾರಃ ॥ ಯೋಗ್ಯೋವಧೋನಹಿ ಜನಸ್ಯ ಪದಾನತಸ್ಯ ರಾಜ್ಯಾರ್ಥಿನಾ ರವಿಸುತೇನ ವಧೋರ್ಥಿತಶ್ಚ ॥೧೯॥ ಕಾರ್ಯಂಹ್ಯಭೀಷ್ಟಮಪಿ ತತ್ಪ್ರಣತಸ್ಯ ಪೂರ್ವಂ ಶಸ್ತ್ರೋವದೋನ ಪದಯೋಃ ಪ್ರಣತಸ್ಯ ಚೈವ ॥ ತಸ್ಮಾದದೃಶ್ಯ ತನುರೇವ ನಿಹನ್ಮಿ ಶಕ್ರಪುತ್ರಂ ತ್ವಿತಿಸ್ಮ ತಮದೃಶ್ಯತಯಾ ಜಘಾನ ॥೨೦॥" ರಾಮನು ವಾಲಿಯ ಸಂಹಾರ ಕಾಲದಲ್ಲಿ ಯೋಚಿಸಿದುದು ಏನೆಂದರೆ, ಈ ಇಂದ್ರನ (ಕುಮಾರನಾದ) ಅವತಾರನಾದ ವಾಲಿಯು ನನಗೆ ಅತ್ಯಂತ ಭಕ್ತನು. ಇವನು ನನ್ನನ್ನು ನೋಡಿದೊಡನೆ ನಿರ್ವಿಚಾರವಾಗಿ ನನ್ನ ಕಾಲುಗಳನ್ನು ಹಿಡಿದುಕೊಳ್ಳುವನು. ಪಾದಗಳಮೇಲೆ ಬಿದ್ದವನನ್ನು (ನಮಸ್ಕಾರ ಮಾಡಿದವನನ್ನು) ಸಂಹಾರ ಮಾಡುವದುಚಿತವಲ್ಲ. ಸೂರ್ಯನ ಅವತಾರನಾದ ಸುಗ್ರೀವನಿಗೆ ಇವನನ್ನು ಕೊಂದು ರಾಜ್ಯವನ್ನು ಕೊಡುವೆನೆಂದು ಪ್ರತಿಜ್ಞೆಯನ್ನು ಮಾಡಿರುವೆನು, ಅವನೂ ಪಾದಾಕ್ರಾಂತನಾಗಿ ಕೇಳಿಕೊಂಡಿರುವುದರಿಂದ ಅವನ ಮನೋಭಿಪ್ರಾಯವನ್ನು ಪೂರ್ಣಮಾಡಬೇಕು. ವಾಲಿಯು ಇದಿರಿನಲ್ಲಿ ನಿಂತು ಅವನಿಂದ ನಮಸ್ಕಾರ ಮಾಡಿಸಿಕೊಂಡಮೇಲೆ ಅವನನ್ನು ಕೊಲ್ಲಲು ಆಗುವುದಿಲ್ಲ. ಆದುದರಿಂದ ವಾಲಿಯ ಕಣ್ಣಿಗೆ ಗೋಚರನಾಗದೆ ಮರೆಯಲ್ಲಿದ್ದೇ ಬಾಣವನ್ನು ಹಾಕುವೆನೆಂದು ನಿಶ್ಚಯಿಸಿ ಕಣ್ಮರೆಯಾಗಿದ್ದು ವಾಲಿಯನ್ನು ಕೊಂದನು ಎಂದು ಹೇಳಿರುವರು. ಆದುದರಿಂದ ವಾಲಿಯ ಭಯದಿಂದ ಇದಿರಿನಲ್ಲಿ ನಿಲ್ಲಲಿಲ್ಲವೆಂಬುವನು ದೈತ್ಯನೆಂಬ ತಾತ್ಪರ್ಯ. ಇದರಂತೆ ಕೃಷ್ಣಾದ್ಯವತಾರಗಳಲ್ಲಿ ಜರಾಸಂಧಾದಿ ರಾಜರುಗಳಿಗೆ ಭಯಪಟ್ಟಂತೆ ತೋರಿಸಿರುವದೆಲ್ಲವೂ ಅಸುರಜನ ಮೋಹಕ್ಕಾಗಿಯೂ, ಕೆಲವು ದೇವತಾ ಕಾರ್ಯಸಾಧನಕ್ಕಾಗಿಯೂ, ಹೇಳಿರುವರೇ ಹೊರತು ನಿಜವಾಗಿ ಪರಮಾತ್ಮನಿಗೆ ಭಯ ಉಂಟೆಂದು ತಿಳಿಯಬಾರದು. ಇದರಂತೆ ಸೀತೆಯನ್ನು ಕಳೆದುಕೊಂಡು ಶೋಕಪಟ್ಟಂತೆ ತೋರಿದುದರ ಕಾರಣವನ್ನು ಪೂರ್ವಪದ್ಯಾರ್ಥದಲ್ಲೇ ಬರೆದಿರುತ್ತದೆ. ಆದುದರಿಂದ ಪರಮಾತ್ಮನಿಗೆ ಶೋಕ ಮೊದಲಾದವುಗಳುಂಟೆಂದು ತಿಳಿಯಬಾರದು. ಹಾಗೆ

ತಿಳಿಯುವವನು ದೈತ್ಯನೇ ಸರಿ. ಪರಶುರಾಮದೇವರನ್ನು ಸಾಕ್ಷಾತ್ಪರ ಮಾತ್ಮನೆಂದರಿಯದೆ ಕೇವಲ ಬ್ರಾಹ್ಮಣನು, ಜಮದಗ್ನಿಕುಮಾರನೆಂದು ಮಾತ್ರ ತಿಳಿಯುವದು, " ವ್ಯಾಸೋಽಕಶ್ಚನ ಋಷಿಃ " ವೇದವ್ಯಾಸದೇವರು ವಶಿಷ್ಠಾದಿಗಳಂತೆ ಒಬ್ಬ ಋಷಿಯೆಂದು ತಿಳಿದುಕೊಳ್ಳುವವನೂ ದೈತ್ಯನು. ರಾಮಕೃಷ್ಣಾದಿಗಳಲ್ಲಿ ಸಚ್ಚಿದಾನಂದ ಸ್ವರೂಪವನ್ನು ತಿಳಿಯದೆ ಪ್ರಾಕೃತ ಪುರುಷನಂತೆ ಆಗಿಂದಾಗ್ಯೆ ವಪನವನ್ನು (ಕೂದಲು ತೆಗಿಯುವಿಕೆ) ಮಾಡಿಸಿಕೊಂಡನೆಂದು ತಿಳಿಯುವವನೂ ದೈತ್ಯನು. ಯದ್ಯಪಿ ಭಾಗವತದ ದಶಮ ಸ್ಕಂಧದಲ್ಲಿ, ಮಧುರಾಪುರಿಯಲ್ಲಿ ಕ್ಷೌರ ಕರ್ಮವನ್ನು ಶ್ರೀಕೃಷ್ಣನು ಮಾಡಿಸಿಕೊಂಡನೆಂದು ಕಥೆ ಬರುವುದು. ಆದರೂ ಅದರ ಕಾರಣವನ್ನು ಅಲ್ಲೇ ಹೇಳಿರುವರು. ನಿರ್ಣಯ ೧೩ನೆಯ ಅಧ್ಯಾಯ, " ಗ್ರಾಹ್ಯಾಪಹೇಯರಹಿತೈಕಚಿದಾತ್ಮಸಾಂದ್ರ ಸ್ವಾನಂದಪೂರ್ಣವಪುರಪ್ಯಯಶೋಽಪಹೀನಃ ॥ ಲೋಕೇ ವಿಡಂಬ್ಯ ನರವತ್ಸಮಲಕ್ತಕಾದ್ಯೈರ್ವಪ್ತಾ ವಿಭೂಷಿತ ಇವಾ ಭವದಪ್ರಮೇಯಃ ॥೯॥ " ಯಾವುದಾದರೂ ಭೂಷಣಾದಿಗಳನ್ನು ಧರಿಸಿ ಅದರಿಂದ ಶೋಭಿಸುತ್ತಿದ್ದನೆಂದಾಗಲಿ ತನ್ನಲ್ಲಿ ಸ್ವಭಾವದಿಂದಾಗುವ ಕೆಲವನ್ನು ವಿಸರ್ಜನ ಮಾಡಿದ್ದರಿಂದ ಅಂದರೆ ನಖ, ರೋಮ ಮೊದಲಾದವುಗಳನ್ನು ಆಗಿಂದಾಗ್ಯೆ ತೆಗೆಯುವುದರಿಂದ ಅಲಂಕಾರವೆಂದಾಗಲಿ ಪರಮಾತ್ಮನಿಗಿಲ್ಲ. ಕೂದಲು ಹೊಸದಾಗಿ ಬೆಳೆಯುವದೂ ಇಲ್ಲ, ಹೋಗುವದೂ ಇಲ್ಲ. ಅಂತಹ ಅಪ್ರಾಕೃತವಾದ ಚಿದಾನಂದ ಸ್ವರೂಪವಾದ ಶರೀರ ಉಳ್ಳವನು. ಪರಮಾತ್ಮನ ಅವಯವಗಳಿಗೂ, ನಖ ರೋಮಾದಿಗಳಿಗೂ ಪರಸ್ಪರ ಭೇಧವಿಲ್ಲ. ನಾವು ಸಂಪೂರ್ಣವಾದ ಅವಯವಗಳಿಂದ ಏನೇನು ಕೆಲಸಗಳನ್ನು ಮಾಡಬಲ್ಲೆವೋ ಅಷ್ಟು ಕೆಲಸಗಳನ್ನು ಒಂದು ನಖದಿಂದಾಗಲಿ ರೋಮದಿಂದಾಗಲೀ ಪರಮಾತ್ಮನು ಮಾಡಬಲ್ಲನು. ರೋಮವೂ ಪರಮಾತ್ಮನ ಸ್ವರೂಪವೇ ಆದ ಮೇಲೆ ವಪನವೆಲ್ಲಿಯದು. ಮನುಷ್ಯಾವತಾರ ಮಾಡಿದ್ದರಿಂದ ಮನುಷ್ಯನೆಂದು ಜನರಿಗೆ ತೋರಿಸಿಕೊಳ್ಳುವುದಕ್ಕಾಗಿ ಕೇಶಗಳು ಬೆಳದಂತೆಯೂ, ಕ್ಷೌರ ಮಾಡಿಸಿಕೊಂಡಂತೆಯೂ, ವಿಡಂಬನಮಾತ್ರ ಮಾಡಿದನೆಂದು ಹೇಳಿರುವರು. ಆದುದರಿಂದ ನಮ್ಮಂತೆ ಕೇಶಖಂಡನಾದಿಗಳು ಪರಮಾತ್ಮನಿಗೂ ಉಂಟೆಂದು ತಿಳಿಯುವನು ದೈತ್ಯನೆಂದು ಹೇಳಿದರು. ಶ್ರೀಕೃಷ್ಣನು ಸಂತಾನಾಪೇಕ್ಷೆಯಿಂದ ರುಗ್ಮಿಣಿಯಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟು ರುದ್ರದೇವರನ್ನು ಕುರಿತು

ತಪಸ್ಸು ಮಾಡಿ ವರ ಪಡೆದನೆಂದು ಭಾಗವತ ದಶಮಸ್ಕಂಧದಲ್ಲಿ " ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಂ || ತಪಸಾ ತೋಷಯಿತ್ವಾತಂಕೈಲಾಸಗಿರಿವಾಸಿನಂ || ರಗ್ಮಿಣ್ಯಾಂ ತನಯಂಲೇಭೇ ದಗ್ಧಕಾಮಂ ಪುನರ್ಹರಿಃ ವೀರಂ ಪ್ರದ್ಯುಮ್ನ ನಾಮಾನಂ ರೂಪೌದಾರ್ಯ ಗುಣಾನ್ವಿತಂ " ದೇವದೇವೇಶನಾದ ಋದ್ರದೇವರನ್ನು ಕುರಿತು ಶ್ರೀಕೃಷ್ಣನು ತಪಸ್ಸಿನಿಂದ ಆರಾಧನೆ ಮಾಡಿ ಪೂರ್ವದಲ್ಲಿ ಋದ್ರದೇವರ ನೇತ್ರಾಗ್ನಿಯಿಂದ ದಗ್ಧನಾಗಿದ್ದ ಮನ್ಮಥನನ್ನು ಮತ್ತೂ ಶ್ರೀಕೃಷ್ಣನು, ರುಗ್ಮಿಣಿಯಲ್ಲಿ ಮಹಾ ವೀರನಾದ ಪ್ರದ್ಯುಮ್ನನೆಂಬ ಕುಮಾರನನ್ನಾಗಿ ಪಡೆದನು ಎಂದು ಹೇಳಿರುವರು. ಇಲ್ಲಿ ಮಕ್ಕಳಿಗೋಸ್ಕರ ಶಿವಾರ್ಚನ ಮಾಡಿದನೆಂಬುವನು ದೈತ್ಯನೆಂದರೆ ಭಾಗವತ ವಾಕ್ಯದ ಗತಿ ಏನು ? ಅಂದರೆ ಇದಕ್ಕೆ ಸಮಾಧಾನ ನಿರ್ಣಯದಲ್ಲಿ ಹೇಳಿರುವರು, ಅದೆಂತೆನೆ; ನಿರ್ಣಯ ೨೨ನೆಯ ಅಧ್ಯಾಯ, " ತ್ವಾಮಾರಾಧ್ಯತಥಾ ಶಂಭೋ ಗೃಹಿಷ್ಯಾಮಿ ವರಂ ||ಸದಾ|| ದ್ವಾಪರಾದೌಯುಗೇ ಭೂತ್ವಾ ಕಲಯಾ ಮಾನುಷಾದಿಷು ||೧೫೫|| ಸ್ವಾಗಮೈಃ ಕಲ್ಪಿತೈಸ್ತ್ವಂಚ ಜನಾನ್ಮದ್ವಿ ಮುಖಾಕುರು || " ನಾನು ದ್ವಾಪರಾದಿ ಯುಗಗಳಲ್ಲಿ ಭೂಮಿಯಲ್ಲಿ ಒಂದಂಶದಿಂದ ಮನುಷ್ಯಾದಿ ರೂಪಗಳಿಂದ ಅವತರಿಸಿ ನಿನ್ನನ್ನು ಆರಾಧನೆ ಮಾಡಿ ವರವನ್ನು ಬೇಡುವೆನು; ನೀನು ಕೊಟ್ಟ ವರವನ್ನು ತೆಗೆದುಕೊಳ್ಳುವೆನು. ನೀನು ನಿನ್ನಿಂದ ಕಲ್ಪಿತವಾದ ಪಾಶುಪತ ಮೊದಲಾದ ಶೈವಾಗಮನಗಳಿಂದ ಜನರನ್ನು ನನ್ನಲ್ಲಿ ವಿಮುಖರಾಗುವಂತೇ ಮಾಡು. " ಅಹಂರಿತ್ವಾಂ ಪೂಜಯಿಷ್ಯಾಮಿ ಲೋಕ ಸಂಮೋಹನೋತ್ಸುಕಃ || ತಮೋಸುರಾನ್ಯಾಥಾಹಿ ಯಾಂತೀತ್ಯೇತನ್ಮತಂಮಮ ||೧೬೭|| ಇತ್ಯುಕ್ತ್ತಂ ವಚನಂ ಪೂರ್ವಂ ಕೇಶವೇನ ಶಿವಾಯ ಯತ್ || ತತ್ಸತ್ಯಂ ಕರ್ತುಮಾಯಾಂತಂ ಕೃಷ್ಣಂಬದರಿಕಾಶ್ರಮಂ || ಸರ್ವಜ್ಞಾ ಮುನಯಃ ಸರ್ವೇ ಪೂಜಯಾಂ ಚಕ್ರಿರೇಪ್ರಭುಂ ||೧೬೭|| " ಲೋಕವನ್ನು ಮೋಹಿಸಬೇಕೆಂಬ ಉದ್ದೇಶದಿಂದ ನಾನು ನಿನ್ನನ್ನು ಪೂಜಿಸುವೆನು. ಹಾಗಿಲ್ಲದಿದ್ದರೆ ದೈತ್ಯರು ಅಂಧಂತಮಸ್ಸನ್ನು ಹೊಂದಲು ಅವಕಾಶವಿಲ್ಲ. ಇದು ನನ್ನ ಅಭಿಪ್ರಾಯವು. ಎಂದು ಪೂರ್ವದಲ್ಲಿ ಶ್ರೀಪರಮಾತ್ಮನು ಋದ್ರದೇವರಿಗೆ ಹೇಳಿದ್ದನು. ಆ ವಾಕ್ಯವನ್ನು ಸತ್ಯ ಮಾಡುವುದಕ್ಕಾಗಿ ಶ್ರೀಕೃಷ್ಣನು ಸಂತಾನಕ್ಕಾಗಿ ಋದ್ರದೇವರನ್ನು ಕುರಿತು ತಪಸ್ಸು ಮಾಡುವುದಕ್ಕಾಗಿ ಬದರಿಕಾಶ್ರಮಕ್ಕೆ ಹೋಗುವೆನೆಂದು

ಹೇಳಿ ಹೊರಟು ಬರುವುದನ್ನು ಬದರಿಕಾಶ್ರಮವಾಸಿಗಳಾದ ಸರ್ವಜ್ಞರಾದ ಋಷಿಗಳೆಲ್ಲರೂ ತಿಳಿದು ಶ್ರೀಕೃಷ್ಣನನ್ನು ಪೂಜಿಸಿದರು. ಯಯೌ ಕೈಲಾಸ ಮದ್ರೀಶಂ ಚಕಾರೇವ ತಪೋತ್ರಚ ॥೧೭॥ " ಸ್ವೀಯಾನೇವಗುಣಾ ವಿಷ್ಣುರ್ಭುಜನ್ನಿತ್ಯೇನ ಶೋಚಿಷಾ ॥ ಶಾರ್ವಂ ತಪಃ ಕರೋತೀವ ಮೋಹ ಯಾವಾಸದುರ್ಜನಾ ॥೧೭೩॥ " ಅಲ್ಲಿ ಋಷಿಗಳಿಂದ ಪೂಜಿತರಾಗಿ ರುದ್ರ ದೇವರನ್ನು ಕುರಿತು ತಪಸ್ಸು ಮಾಡುವ ವ್ಯಾಜದಿಂದ ಪರ್ವತ ಶ್ರೇಷ್ಟವಾದ ಕೈಲಾಸಕ್ಕೆ ಹೋದನು. ಅಲ್ಲಿ ನಿತ್ಯವಾದ ಜ್ಞಾನದಿಂದ ಸ್ವಸ್ವರೂಪವನ್ನೇ ಧ್ಯಾನಿಸುತ್ತಾ ಸ್ವರೂಪಾನಂದವನ್ನನುಭವಿಸುತ್ತಿದ್ದರೂ ಋುದ್ರ ಸಂಬಂಧಿ ಯಾದ ತಪಸ್ಸುಮಾಡುವಂತೆ ತೋರ್ಪಡಿಸಿ ದುರ್ಜನರನ್ನು ಮೋಹಿಸಿದನು. ಎಂಬಿವೇ ಮೊದಲಾದ ವಾಕ್ಯಗಳಿಂದ ಇದಕ್ಕೆ ಸಮಾಧಾನ ಹೇಳಿರುವರು. ಆದುದರಿಂದ ಇದನ್ನರಿಯದೇ ಶ್ರೀಕೃಷ್ಣನು ಶಿವನನ್ನು ಕುರಿತು ತಪಸ್ಸುಮಾಡಿ ಸಂತಾನಪಡೆದನೆಂದು ತಿಳಿದವನು ದೈತ್ಯನೆಂದು ಹೇಳಿದರು.

**ಪಾಪ ಪರಿಹಾರಾರ್ಥ ರಾಮನು**<br>
**ಮಾಪತಿಯ ನಿರ್ಮಿಸಿದ ಭಗವ**<br>
**ದ್ರೂಪರೂಪಕೆ ಭೇದಚಿಂತನೆ ಮಾಳ್ಪ ಮಾನವನು ॥**<br>
**ಆಪಗಳು ಸತ್ತೀರ್ಥ ಗುರು ಮಾ**<br>
**ತಾಪಿತೃ ಪ್ರಭುಪ್ರತಿಮೆ ಭೂತದ**<br>
**ಯಾಪರರು ಕಂಡವರಿ ದೇವರು ಎಂಬುವನೆ ದೈತ್ಯ ॥೪॥**

ಪದ್ಯಾರ್ಥ——ಪಾಪಪರಿಹಾರಾರ್ಥ–ರಾವಣನನ್ನು ಸಂಹಾರ ಮಾಡಿ ದ ಪಾಪ ಪರಿಹಾರಕ್ಕೋಸ್ಕರವಾಗಿ, ರಾಮ=ಶ್ರೀರಾಮನು, ಉಮಾಪತಿ ಯ=ಈಶ್ವರನನ್ನು, ನಿರ್ಮಿಸಿದ=ರಾಮೇಶ್ವರದಲ್ಲಿ ಶಿವಲಿಂಗವನ್ನು ಪ್ರತಿಷ್ಟೆ ಯನ್ನು ಮಾಡಿ ಪೂಜಿಸಿದನು ಎಂದು ಹೇಳುವವನು ದೈತ್ಯನು. ಭಗವದ್ರೂಪ ಕೆ–ಪರಮಾತ್ಮನ ರಾಮ ಕೃಷ್ಣಾದಿ ರೂಪಗಳಿಗೆ, ಭೇದ ಚಿಂತನೆಮಾಳ್ಪ ಮಾನವನು=ಪರಸ್ಪರ ಭೇದಗಳುಂಟೆಂದು ಉಪಾಸನೆ ಮಾಡುವ ಮನುಷ್ಯ ನೂ ದೈತ್ಯನು. ಆಪಗಳು–ಪುಣ್ಯತೀರ್ಥಗಳೆಂದು ಪುರಾಣ ಪ್ರಸಿದ್ಧಿಯಾಗಿ ರುವ ಗಂಗಾ, ಗೋದಾವರೀ ಮೊದಲಾದವುಗಳಲ್ಲಿ ಕಾಣುವ ಜಡವಾದ ಉ ದಕವೇ, ಸತ್ತೀರ್ಥ, ನಮ್ಮನ್ನು ಪವಿತ್ರರನ್ನಾಗಿ ಮಾಡುವ ತೀರ್ಥಗಳೆಂದು

ಪೇಳುವವನು, ಗುರು, ಮಾತಾ-ತಾಯಿ, ಪಿತೃ, ತಂದೆ, ಪ್ರಭು-ರಾಜನು ಅಥವಾ ಯಜಮಾನನು, ಪ್ರತಿಮೆ=ಪಂಚಲೋಹದ, ಅಥವಾ ಶಿಲಾಪ್ರತಿಮೆಗಳು, ಭೂತದಯಾಪರರು=ಪ್ರಾಣಿಗಳಲ್ಲಿ ದಯೆಯುಳ್ಳವರು, ಕಂಡವರಿ=ಮೇಲೆ ಹೇಳಿದವರಲ್ಲಿ ನಮ್ಮ ಕಣ್ಣಿಗೆ ಗೋಚರಿಸುವವರೇ ದೇವರು ಎಂಬುವನೇ ದೈತ್ಯ.

ತಾತ್ಪರ್ಯ.—ಶ್ರೀರಾಮದೇವರು ರಾವಣನ ವಧೆಯಾದಮೇಲೆ ಆ ಪಾಪಪರಿಹಾರಕ್ಕೋಸ್ಕರ ರಾಮೇಶ್ವರದಲ್ಲಿ ರಾಮಲಿಂಗವನ್ನು ಪ್ರತಿಷ್ಠೆಮಾಡಿದನೆಂದು ಹೇಳುವವನು ದೈತ್ಯನು. ಶ್ರೀರಾಮದೇವರು ಲಿಂಗವನ್ನು ಪ್ರತಿಷ್ಠೆಮಾಡಿದ್ದು ನಿಜವಾದರೂ ತಮ್ಮ ಪಾಪಪರಿಹಾರಕ್ಕೋಸ್ಕ ಮಾಡಲಿಲ್ಲ. ಮೇಲಿನ ಪದ್ಯದ ವ್ಯಾಖ್ಯಾನದಲ್ಲಿ ಉದಾಹರಿಸಿದ ನಿರ್ಣಯ ೨೨ನೆಯ ಅಧ್ಯಾಯ ೧೬೬ನೆಯ ಶ್ಲೋಕದಲ್ಲಿ ಹೇಳಿರುವ, "ಅಹಂತ್ವಾಂ ಪೂಜಯಿಷ್ಯಾಮಿ" ಲೋಕಮೋಹಕ್ಕಾಗಿ ನಾನು ನಿನ್ನನ್ನು ಪೂಜಿಸುವೆನು, ಎಂದು ರುದ್ರದೇವರಿಗೆ ಪರಮಾತ್ಮನು ಹೇಳಿದುದನ್ನು ಸತ್ಯಮಾಡಿದನೆಂಬುವುದೇ ಈ ಪದ್ಯಕ್ಕೂ ಸಮಾಧಾನ. ಲೋಕಮೋಹಕ್ಕಾಗಿ ಮಾಡಿದುದೇ ಹೊರತು ಪಾಪ ಪರಿಹಾರಕ್ಕಲ್ಲ. ರಾಮಕೃಷ್ಣಾದಿ ರೂಪಗಳಿಗೆ ಪರಸ್ಪರ ಭೇದವನ್ನು ತಿಳಿಯುವವನು ದೈತ್ಯನು. ರಾಮಕೃಷ್ಣಾದಿ ರೂಪೇಷು ತಥಾಭೇದ ವಿಚಿಂತನಂ" ಎಂಬ ಗರುಡಪುರಾಣ ವಾಕ್ಯದಿಂದ ಮೇಲಿನ ಅರ್ಥವು ಸಿದ್ಧವಾಗುವುದು. ಗಂಗಾ ಮೊದಲಾದ ಉದಕವನ್ನು ನೋಡಿ ಕಣ್ಣಿಗೆ ಗೋಚರಿಸುವ ಉದಕವೇ ತೀರ್ಥವೆಂದು ತಿಳಿಯಬಾರದು. "ಸಏವ ದ್ರವರೂಪೇಣ ಗಂಗಂಭೋನಾತ್ರ ಸಂಶಯಃ" ಶ್ರೀಪರಮಾತ್ಮನೇ ಗಂಗೋದಕದಲ್ಲಿ ಉದಕರೂಪದಿಂದಿದ್ದು ನಮ್ಮನ್ನು ಪವಿತ್ರರನ್ನಾಗಿ ಮಾಡುವನೆಂದು ತಿಳಿಯಬೇಕು. ಹಾಗಿಲ್ಲದೆ ಉದಕವೇ ನಮ್ಮನ್ನು ಪವಿತ್ರವನ್ನಾಗಿ ಮಾಡುವದೆಂದು ತಿಳಿದವನು ದೈತ್ಯನು. ಗುರುಗಳು; ತಾಯಿ, ತಂದೆ, ಕಣ್ಣಿಗೆ ಗೋಚರಿಸುವ ತಾಮ್ರಾದಿ ಪ್ರತಿಮೆಗಳು ದೇವಾಲಯ ಮೊದಲಾದವುಗಳಲ್ಲಿ ಕಾಣುವ ಶಿಲಾಪ್ರತಿಮೆಗಳು ಅರಸು, ಪ್ರಾಣಿಗಳಲ್ಲಿ ದಯೆಯುಳ್ಳವರು ಇಂತಹವರಲ್ಲಿ ಪರಮಾತ್ಮನು ತದ್ರೂಪಿಯಾಗಿ ಆಯಾ ಹೆಸರುಗಳಿಂದ ಅಲ್ಲಲ್ಲಿರುವನೆಂದು ತಿಳಿಯದೆ ನಮ್ಮ ಕಣ್ಣಿಗೆ ಗೋಚರಿಸುವ ಚರಾಚರ ಪ್ರಾಣಿಗಳೇ ದೇವರುಗಳೆಂದು ಹೇಳುವವನು ದೈತ್ಯನು. ಮಾತಾಪಿತೃ ದ್ವಿಜಾತೀನಾಂ ಹರಿ

ಶೂಪಸ್ಯ ಚಿಂತನಂ || ಪಂಚಧಾತುಮಯೀ ಮೂರ್ತೌ ಹರಿರೂಪಸ್ಯ ಚಿತಂ ನಂ " ಇತ್ಯಾದಿ ಗರುಡಪುರಾಣವಾಕ್ಯವು ಮೇಲಿನ ವಾಕ್ಯಕ್ಕೆ ಆಧಾರವು.

ಸುಂದರ ಸ್ವಯಂವ್ಯಕ್ತವು ಚಿದಾ
ನಂದರೂಪಗಳೆಂಬುವನು ನರ
ನಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಹ ನರನು ||
ಕಂದುಗೊರಳ ದಿವಾಕರನು ಹರಿ
ಯೊಂದೆ ಸೂರ್ಯಸುರೋತ್ತಮ ಜಗ
ದ್ವಂದ್ಯನೆಂಬುವ ವಿಷ್ಣುದೂಷಣವೆ ಮಾಡುವನೆ ದೈತ್ಯ ||೫||

ಪದ್ಯಾರ್ಥ.—ಸುಂದರಸ್ವಯಂವ್ಯಕ್ತ=ಸುಂದರವಾದ ಸ್ವಯಂವ್ಯಕ್ತವೆಂದು ಪ್ರಸಿದ್ಧಿಯಾದ ಪ್ರತಿಮೆಗಳನ್ನಾದರೂ, ಚಿದಾನಂದರೂಪಗಳೆಂಬುವ=ಪರಮಾತ್ಮನಿಂದ ಅಭಿನ್ನವಾದ, ಚಿದಾನಂದರೂಪವಾದ ಭಗವದ್ರೂಪವೇ ಇದೆಂದು ಹೇಳುವವನು, ನರನಿಂದನಿರ್ಮಿತ=ಮನುಷ್ಯರು ಪ್ರತಿಷ್ಠೆಮಾಡಿದ ಈಶ್ವರಗೆ=ಶಿವಲಿಂಗಗಳಿಗೆ, ಅಭಿನಮಿಸುತಿಹ ನರನು-ನಮಸ್ಕಾರಮಾಡುತ್ತಿರುವ ಮನುಷ್ಯನು, ಕಂದುಗೊರಳ=ನೀಲಕಂಠರಾದ ರುದ್ರದೇವರು, ದಿವಾಕರನು-ಸೂರ್ಯನು, ಹರಿಯು, ಒಂದೇ ಇವರು ಬೇರೆ ಅಲ್ಲ. ಮೂವರು ಒಂದೇ ಎಂದು ಹೇಳುವವನು, ಸೂರ್ಯನುಸುರೋತ್ತಮ-ದೇವೋತ್ತಮನು, ಜಗದ್ವಂದ್ಯನು=ಸರ್ವ ಜಗತ್ತಿನಲ್ಲಿಯೂ ಬ್ರಹ್ಮಾದಿ ಸರ್ವ ಜನರಿಂದಲೂ ನಮಸ್ಕಾರ ಮಾಡಿಸಿಕೊಳ್ಳಲ್ಪಡುವವನು, ಎಂಬವ=ಎಂದು ಹೇಳುವವನು, ವಿಷ್ಣುದೂಷಣೆ ಮಾಡುವವನು, ದೈತ್ಯ-ಇವರೆಲ್ಲರೂ ದೈತ್ಯರು.

ತಾತ್ಪರ್ಯ.—ತಿರುಪತಿ ಮೊದಲಾದ ಪುಣ್ಯ ಕ್ಷೇತ್ರಗಳಲ್ಲಿ ತೋರುವ ಶ್ರೀನಿವಾಸಾದಿ ಸ್ವಯಂ ವ್ಯಕ್ತ ಪ್ರತಿಮೆಗಳಲ್ಲೂ ಸಹ, ಪ್ರತಿಮೆ ಏನೋ ತಾನಾಗಿ ಉದ್ಭವಿಸಿದೆಯಾದರೂ ಪರಮಾತ್ಮನೇ ಪ್ರತಿಮೆಯಲ್ಲ. ಪ್ರತಿಮೆಯಲ್ಲಿ ಪರಮಾತ್ಮನ ಅಧಿಷ್ಠಾನವನ್ನು ತಿಳಿಯಬೇಕಲ್ಲದೆ ಪ್ರತಿಮೆಗಳಿಗೂ ಪರಮಾತ್ಮನಿಗೂ ಅಭೇದವನ್ನು ತಿಳಿಯಬಾರದು. ಹಾಗೆ ತಿಳಿದವನು ದೈತ್ಯನು. ಶಿವಲಿಂಗಗಳಲ್ಲಿ ಸ್ವಯಂವ್ಯಕ್ತ ಸ್ಥಳಗಳಲ್ಲಿರುವ ಈಶ್ವರನಿಗೆ ಮಾತ್ರ ನಮಸ್ಕಾರಮಾಡಬಹುದೇ ಆಗಲೀ ಮನುಷ್ಯರಿಂದ ಪ್ರತಿಷ್ಠಿತವಾಧ ಲಿಂಗಗಳಿಗೆ ನಮಸ್ಕಾರಮಾಡಬಾರದು. ಗರುಡಪುರಾಣ " ಅಸ್ವಯಂವ್ಯ

ಕ್ತ ಲಿಂಗೇಷು ನಮನಂ ಏಪ್ರಕುರ್ವತೆ ॥ ತೇ ಸರ್ವೇ ಅಸುರಾಜ್ಞೆಯಾನಾತ್ರ ಕಾರ್ಯಾ ವಿಚಾರಣಾ " ಸ್ವಯಂವ್ಯಕ್ತವಲ್ಲದ ಲಿಂಗಗಳಿಗೆ ನಮಸ್ಕಾರಮಾಡುವವರೆಲ್ಲರೂ ದೈತ್ಯರೆಂದು ತಿಳಿಯಬೇಕು. ಆ ವಿಷಯದಲ್ಲಿ ವಿಚಾರವೇ ಬೇಕಾಗಿಲ್ಲವೆಂದು ಹೇಳಿರುವರು. ಅದೇ ಅರ್ಥವನ್ನೇ ಇಲ್ಲಿ ಹೇಳಿರುವರು ಈಶ್ವರನೂ, ಸೂರ್ಯನೂ, ಪರಮಾತ್ಮನೂ ಒಂದೇ; ಇವರಲ್ಲಿ ಪರಸ್ಪರ ಭೇದವಿಲ್ಲವೆಂದು ಹೇಳುವವನೂ ದೈತ್ಯನು. ಈ ವಿಷಯದಲ್ಲಿ ಗರುಡಪುರಾಣವಾಕ್ಯವು. " ಅಸ್ವತಂತ್ರೇಣ ಹರೇರೈಕ್ಯ ವಿಚಿಂತನಂ ॥ ವಿಷ್ಣೋಸ್ಸೂರ್ಯೇಣ ಸಾಕಂಚ ಅಭೇದಾದಿವಿಚಿಂತನಂ" ಅಸ್ವತಂತ್ರರಾದ ರುದ್ರದೇವರಿಗೂ ಪರಮಾತ್ಮನಿಗೂ ಐಕ್ಯಚಿಂತನೆಮಾಡುವವರು, ವಿಷ್ಣುವಿಗೂ, ಸೂರ್ಯನಿಗೂ ಅಭೇದವನ್ನು ಚಿಂತಿಸುವವರು ದೈತ್ಯರೆಂದು ಹೇಳಿರುವರು. ಸೂರ್ಯನು ಸರ್ವೋತ್ತಮನು, ಬ್ರಹ್ಮಾದಿವಂದ್ಯನು ಎಂದು ಹೇಳುವವನೂ, ವಿಷ್ಣುದೂಷಣೆ ಮಾಡುವವನೂ ದೈತ್ಯನು. ಗರುಡಪುರಾಣದಲ್ಲಿ " ಸರ್ವೋತ್ತಮಃ ಸೂರ್ಯ ಏವವಿಷ್ಣ್ವಾದ್ಯಾಸ್ತಸ್ಯಕಿಂಕರಾಃ ॥ ಇತ್ಯಾದಿ ಚಿಂತನಂ ಪಾಪಂ ಹರಿನಿಂದೇತಿಚೋಚ್ಯತೆ " ಸೂರ್ಯನೇ ಸರ್ವೋತ್ತಮನು, ವಿಷ್ಣುಮೊದಲಾದವರು ಅವನ ಕಿಂಕರರೆಂದು ಉಪಾಸನೆ ಮಾಡುವದು ವಿಷ್ಣುನಿಂದೆನಿಸುವದು. ಆದುದರಿಂದ ಹೀಗೆ ಉಪಾಸನೆ ಮಾಡುವವನು ದೈತ್ಯನೆಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ ಇಲ್ಲಿಯೂ ತಿಳಿಯಬೇಕು.

ನೇಮದಿಂದಶ್ವತ್ಥ ತುಲಸೀ
ಸೋಮಧರನಲಿ ವಿಮಲ ಸಾಲಿ
ಗ್ರಾಮಗಳನಿಟ್ಟಭಿನಮಿಪರ ಮುಕ್ತಿಯೋಗ್ಯ ಸದಾ ।
ಭೂಮಿಯೊಳು ಧರ್ಮಾರ್ಥ ಮುಕ್ತಿ ಸು
ಕಾಮಪೇಕ್ಷೆಗಳಿಂದ ಸಾಲಿ
ಗ್ರಾಮಗಳ ವ್ಯತಿರಿಕ್ತ ವಂದಿಸೆ ದುಃಖವೈದುವನು ॥೬॥

ಪದ್ಯಾರ್ಥ.—ನೇಮದಿಂದ=ನಿಯಮಪೂರ್ವಕವಾಗಿ, ಅಶ್ವತ್ಥ, ತುಲಸೀ, ಸೋಮಧರ=ಶಿವಲಿಂಗ, ಇವುಗಳಲ್ಲಿ, ವಿಮಲಸಾಲಿಗ್ರಾಮಗಳನಿಟ್ಟು=ಉತ್ತಮವಾದ ಸಾಲಿಗ್ರಾಮಗಳನ್ನಿಟ್ಟು, ಅಭಿನಮಿಪ=ನಮಸ್ಕಾರಮಾಡುವ ಮನುಷ್ಯನು, ಸದಾ-ಸರ್ವಕಾಲದಲ್ಲೂ, ಮುಕ್ತಿಯೋಗ್ಯನು, ಭೂ

ಬಿಹೊಳು, ಧರ್ಮ, ಅರ್ಥ, ಮುಕ್ತಿ-ಮೋಕ್ಷ, ಸುಕಾಮ-ಉತ್ತಮ ಫಲವನ್ನು ಕೊಡುವ ಕಾಮ ಇವುಗಳ, ಅಪೇಕ್ಷೆಗಳಿಂದ, ಸಾಲಿಗ್ರಾಮಗಳವ್ಯತಿರಿಕ್ತ=ಮೇಲೆ ಹೇಳಿದ ಸ್ಥಳಗಳಲ್ಲಿ ಸಾಲಿಗ್ರಾಮವಿಲ್ಲದೆ, ವಂದಿಸೆ=ನಮಸ್ಕಾರಮಾಡಲು, ದುಃಖವೈದುವನು=ದುಃಖವನ್ನನುಭವಿಸುವನು.

ತಾತ್ಪರ್ಯ.—ಅಶ್ವತ್ಥಕ್ಕೂ, ತುಲಸೀಗೂ, ಸ್ವಯಂವ್ಯಕ್ತವಾದ ಶಿವಲಿಂಗಾದಿಗಳಿಗೂ ನಮಸ್ಕಾರಮಾಡುವಾಗ ಅಲ್ಲಲ್ಲಿ ಸಾಲಿಗ್ರಾಮಗಳನ್ನಿಟ್ಟು ನಮಸ್ಕಾರವನ್ನು ಮಾಡುವವನು ಮುಕ್ತಿಯೋಗ್ಯನು. ಕೇವಲ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳ ಅಪೇಕ್ಷೆಯಿಂದ ಅಶ್ವತ್ಥಕ್ಕಾಗಲಿ, ತುಲಸೀಗಾಗಲೀ, ಲಿಂಗಗಳಿಗಾಗಲಿ ಸಮೀಪದಲ್ಲಿ ಸಾಲಿಗ್ರಾಮಗಳನ್ನು ಇಟ್ಟಿರದೇ ನಮಸ್ಕಾರ ಮಾಡುವವನಿಗೆ ದುಃಖವೇ ಪ್ರಾಪ್ತಿಯಾಗುವದು. ಈ ವಿಷಯದಲ್ಲಿ ಗರುಡಪುರಾಣದಲ್ಲಿ, "ಸ್ವಯಂ ವ್ಯಕ್ತೇಷು ಲಿಂಗೇಷು ಅಶ್ವತ್ಥ ತುಲಸೀಸುಚ ॥ ಸಾಲಿಗ್ರಾಮಂ ವಿಹಾಯ್ಯೈವ ನಮನಂಯೇ ಪ್ರಕುರ್ವತೆ ॥ ತೇ ಸರ್ವೇ ಹರಿನಿಂದಾಯಾಮಧಿಕಾರಿಣ ಏವಹಿ" ಸ್ವಯಂ ವ್ಯಕ್ತ ಲಿಂಗಗಳಿಗೂ ಅಶ್ವತ್ಥ, ತುಲಸಿಗಳಿಗೂ ನಮಸ್ಕಾರಮಾಡುವಾಗ ಸಾಲಿಗ್ರಾಮವಿಟ್ಟಿರದೆ ಯಾರು ನಮಸ್ಕಾರ ಮಾಡುವರೋ ಅವರೆಲ್ಲರೂ ಪರಮಾತ್ಮನ ನಿಂದಾಮಾಡಲರ್ಹರೆಂದು ಅಂದರೆ ದೈತ್ಯರೆಂದೇ ತಿಳಿಯಬೇಕೆಂದು ಹೇಳಿರುವರು. ಅದೇ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು.

ವಿತತಮಹಿಮನ ಬಿಟ್ಟು ಸುರರಿಗೆ
ಪೃಥಕು ವಂದನೆಮಾಳ್ಪ ಮಾನವ
ದಿತಿಜನೇಸರಿ ಹರಿಯು ತಾ ಸಂಸ್ಥಿತನೆನಿಸನಲ್ಲ ॥
ಚತುರಮುಖ ಮೊದಲಾದಖಿಳ ದೇ
ವತೆಗಳೊಳಗಿಹನೆಂದು ಲಕ್ಷ್ಮೀ
ಪತಿಗೆ ವಂದಿಸೆ ಒಂದರಕ್ಷಣ ಬಿಟ್ಟಗಲನವರ ॥೬॥

ಪದ್ಯಾರ್ಥ.—ವಿತತ-ಸರ್ವತ್ರ ವ್ಯಾಪಿಸಿಕೊಂಡಿರುವ ಮಹಿಮೆಯುಳ್ಳ ಪರಮಾತ್ಮನನ್ನು ಬಿಟ್ಟು, ಸುರರಿಗೆ=ಬ್ರಹ್ಮಾದಿದೇವತೆಗಳಿಗೆ, ಪೃಥಕು ವಂದನೆ-ಪ್ರತ್ಯೇಕ ನಮಸ್ಕಾರವನ್ನು, ಮಾಳ್ಪ-ಮಾಡುವ, ಮಾನವ=ಮನುಷ್ಯನು, ದಿತಿಜನೇಸರಿ=ದೈತ್ಯನೇ ಸರಿ, ಅಲ್ಲಿ-ಬ್ರಹ್ಮಾದಿಗಳಿಗೆ ಪರಮಾತ್ಮ

ನನ್ನು ಬಿಟ್ಟು ಪ್ರತ್ಯೇಕ ನಮಸ್ಕಾರ ಮಾಡುವ ಸ್ಥಳಗಳಲ್ಲಿ, ಹರಿಯು ತಾನು, ಸಂಸ್ಥಿತನೆನಿಸುವನು-ವಾಸವಾಗಿದ್ದಾನೆಂದು ಎನಿಸಲಾರನು. (ಇದ್ದು ಪೂಜೆಯನ್ನು ಸ್ವೀಕರಿಸನು) ಚತುರ್ಮುಖಮೊದಲಾದ=ಬ್ರಹ್ಮದೇವರು ಮೊದಲಾದ, ಅಖಿಳದೇವತೆಗಳೊಳು=ಸಕಲ ದೇವತೆಗಳೊಳಗೂ, ಇಹನೆಂದು= ಶ್ರೀಹರಿಯು ಇರುವನೆಂದು ತಿಳಿದು, ಲಕ್ಷ್ಮೀಪತಿಗೆ ವಂದಿಸೆ=ಶ್ರೀಮನ್ನಾರಾಯಣದೇವರಿಗೆ ನಮಸ್ಕಾರಮಾಡಲು, ಅವರ=ಅಂತಹವರನ್ನು, ಒಂದ ರಕ್ಷಣ ಬಿಟ್ಟಗಲನು.

ತಾತ್ಪರ್ಯ.—ಬ್ರಹ್ಮಾದಿ ಯಾವ ದೇವತೆಗಳಿಗೆ ನಮಸ್ಕಾರಮಾಡಬೇಕಾದರೂ. ಬ್ರಹ್ಮಾಂತರ್ಯಾಮಿ ಮುಖ್ಯಾಂತರ್ಗತ ಎಂದು ಅಂತರ್ಗತನಾದ ಪರಮಾತ್ಮನಿಗೆ ನಮಸ್ಕಾರಮಾಡಿದರೆ ಮಾತ್ರ ಪರಮಾತ್ಮನು ಆ ದೇವತೆಗಳೊಳಗಿದ್ದು ಆ ಪೂಜಾದಿಗಳನ್ನು ಸ್ವೀಕರಿಸಿ ಉತ್ತಮ ಫಲವನ್ನು ಕೊಡುವನು. ಅಲ್ಲದೆ ಅಂತಹಾ ಜನರನ್ನು ಒಂದರಕ್ಷಣವಾದರೂ ಬಿಟ್ಟಗಲನು. ಹಾಗಿಲ್ಲದೆ ಕೇವಲ ಬ್ರಹ್ಮಾದಿದೇವತೆಗಳಿಗೆ ಮಾತ್ರ ಪ್ರತ್ಯೇಕವಾಗಿ ನಮಸ್ಕಾರ ಮೊದಲಾದವುಗಳನ್ನು ಮಾಡಿದರೆ ಅದನ್ನು ಶ್ರೀಹರಿಯು ಸ್ವೀಕರಿಸುವದಿಲ್ಲ. ಹಾಗೆ ಪೂಜಿಸುವವನು ದೈತ್ಯನೆಂದು ತಿಳಿಯಬೇಕು. "ಅತಃ ಪಾರ್ಥಕ್ಯ ನಮನಂ ಯೇ ಕುರ್ವಂತಿಚ ಸರ್ವದಾ। ತೇ ಸರ್ವೇ ಅಸುರಾಜ್ಞೇಯಾಃನತತ್ರಹರಿಸಂಸ್ಥಿತಿಃ" ಎಂಬ ಗರುಡಪುರಾಣ ಬ್ರಹ್ಮಕಾಂಡದ ವಚನವು ಇದಕ್ಕಾಧಾರವಾಗಿರುವುದು.

ಶೈವಶೂದ್ರ ಕರಾರ್ಜಿತ ಮಹಾ
ದೇವವಾಯು ಹರಿಪ್ರತಿಮ ವೃಂ
ದಾವನದಿ ಮಾಸದ್ವಯದೊಳಿಹ ತುಲಸಿಯ ಪ್ರಸವ ॥
ಗೋಪಿನಾಮ ವಿಸರ್ಜಿತಾತ್ಮ
ಕ್ಷಾಲಿತಿಪಿಗಳ ಭಕ್ತಿಪೂರ್ವಕ
ಸೇವಿಸುವನರದೈತ್ಯಶಾಶ್ವತ ದುಃಖವೈದುವನು ॥೮॥

ಪದ್ಯಾರ್ಥ:—ಶೈವ=ಶಿವನೇ ಸರ್ವೋತ್ತಮನೆಂದು ವಾದಿಸುವ ಶಿವಪಾಷಾಂಡಿಗಳು, ಶೂದ್ರ, ಕರಾರ್ಜಿತ=ಇವರುಗಳ ಕೈಯಿಂದ ಪೂಜಿಸಲ್ಪಟ್ಟ, ಮಹಾದೇವ=ಶಿವಲಿಂಗಗಳು, ವಾಯು, ಹರಿಪ್ರತಿಮ-ವಾಯುಪ್ರತಿಮೆ (ಹನುಮಂತದೇವರು) ರಾಮಕೃಷ್ಣಾದಿ ಪ್ರತಿಮೆಗಳು ಇವುಗಳನ್ನೂ, ವೃಂದಾವನದಿ-ತುಲಸೀ ವೃಂದಾವನದಲ್ಲಿರುವ, ಮಾಸದ್ವಯದೊಳಗಿಹಕುಲ

ಸೀ=ತುಲಸಿಯುಗಿಡವನ್ನು ನೆಟ್ಟು ಎರಡು ತಿಂಗಳು ಪೂರ್ಣವಾಗದಿರುವ ತುಲಸಿಯನ್ನು, ಅಪ್ರಸವಗೋ-ಕರವು ಹಾಕದ ಹಸುವನ್ನು, ವಿವಾಹವರ್ಜಿತ=ಮದುವೆ ಮಾಡದ, ಅಶ್ವತ್ಥವಿಟಪಿಗಳ=ಅಶ್ವತ್ಥರೆಂಬೆಗಳನ್ನು, ಭಕ್ತಿಪೂರ್ವಕವಾಗಿ, ಸೇವಿಸುವ, ನರ=ಮನುಷ್ಯನು, ದೈತ್ಯ-ದೈತ್ಯನು, ಶಾಶ್ವತದುಃಖವೈದುವನು=ಶಾಶ್ವತವಾದ ದುಃಖವನ್ನು ಅನುಭವಿಸುವನು.

ತಾತ್ಪರ್ಯ:—ಶಿವಪಾಷಂಡಿಗಳು ಮತ್ತು ಶೂದ್ರರು ಇವರ ಕೈಯಿಂದ ಪೂಜಿತವಾದ ಲಿಂಗಗಳನ್ನಾಗಲಿ, ಹನುಮಂತ ಮೊದಲಾದ ವಾಯುಪ್ರತಿಮೆಗಳನ್ನಾಗಲಿ, ರಾಮಕೃಷ್ಣಾದಿ ಹರಿಪ್ರತಿಮೆಗಳನ್ನಾಗಲಿ ಪೂಜಿಸಬಾರದು ತುಲಸೀ ವೃಂದಾವನದಲ್ಲಿ ತುಲಸೀಗಿಡವನ್ನು ನೆಟ್ಟಮೇಲೆ ಎರಡುತಿಂಗಳು ಸಂಪೂರ್ಣವಾಗುವವರೆಗೂ ಆ ತುಲಸಿಯನ್ನು ಪೂಜಿಸಬಾರದು. ಕರವು ಹಾಕದ ಹಸುವಿನ ಪಡ್ಡೆಯನ್ನು ಪೂಜಿಸಬಾರದು, ಮದುವೆ ಮಾಡದ ಅಶ್ವತ್ಥಕ್ಕೆ ಪೂಜೆಮಾಡಬಾರದು, ಈ ವಿದಿಗಳನ್ನರಿಯದೆ ಇದಕ್ಕೆ ವಿರುದ್ಧವಾಗಿ ಪೂಜೆಯನ್ನು ಮಾಡುವವನು ದೈತ್ಯನು, ಅವನು ಶಾಶ್ವತವಾದ ದುಃಖವನ್ನನುಭವಿಸುವನು, ಬ್ರಹ್ಮಕಾಂಡದಲ್ಲಿ "ಶೈವ ಶೂದ್ರಾರ್ಚಿತಂ ಚೇಶಂ ವಾಯುಂತು ಹರಿಮೇವಚ ॥ ದ್ವಿಮಾಸ ಹೀನಾಂ ತುಲಸೀಂ ಅಪ್ರಸೂತಾಂಚ ಗಾಂಪತೀಂ ॥ ವಿವಾಹ ಶೂನ್ಯಮಶ್ವತ್ಥಂ ನಮನಂ ಯೇ ಪ್ರಕುರ್ವತೆ ॥ ತೇ ಸರ್ವೇ ಅಸುರಾಜ್ಞೇಯಂ ನಾತ್ರಕಾರ್ಯಾ ವಿಚಾರಣಾ ॥" ಎಂದು ಹೇಳಿರುವ ವಾಕ್ಯಗಳು ಈ ಪದ್ಯಕ್ಕೆ ಆಧಾರವು, ಪದ್ಯಾರ್ಥವೂ, ಶ್ಲೋಕಾರ್ಥವೂ ಒಂದೇ ಆಗಿರುವುದರಿಂದ ಶ್ಲೋಕಾರ್ಥವನ್ನು ಬೇರೆ ಬರಿಯಲಿಲ್ಲ.

ಅವತಾರಿಕೆ:—ಇಲ್ಲಿಯವರೆವಿಗೂ ದೈತ್ಯರ ಸ್ವಭಾವವನ್ನು ಹೇಳಿ ಮುಂದಿನ ಪದ್ಯಗಳಿಂದ ದೈತ್ಯರ ತಾರತಮ್ಯವನ್ನು ಹೇಳುತ್ತಾರೆ:—

ಕಮಲಸಂಭವ ಮುಖ್ಯಮನುಜೋ
ತ್ತಮರ ಪರ್ಯಂತರದಿ ಮುಕ್ತರು
ಸಮ ಶತಾಯುಸ್ಸುಳ್ಳವನು ಕಲಿಬ್ರಹ್ಮನೋಪಾದೀ ॥
ಕ್ರಮದಿ ನೀಚರು ದೈತ್ಯರು ನರಾ
ಧಮರವಿಡಿದು ಕುಲಕ್ಷ್ಮಿ ಕಲಿಯನು
ಸಮರೆನಿಸುವವರ ಸುರರೊಳು ದ್ವೇಷಾದಿ ಗುಣದಿಂದ ॥೯॥

ಪದ್ಯಾರ್ಥ.—ಕಮಲಸಂಭವಮುಖ್ಯ = ಬ್ರಹ್ಮದೇವರು ಮೊದಲು, ಮನುಜೋತ್ತಮರ ಪರ್ಯಂತರದಿ=ಮನುಷ್ಯೋತ್ತಮರವರೆಗೂ, ಮುಕ್ತರು ಮುಕ್ತಿಯೋಗ್ಯರೆನಿಸುವರು, ಕಲಿ=ಕಲಿಯು, ಬ್ರಹ್ಮನೋಪಾದಿ=ಬ್ರಹ್ಮದೇವರಂತೆ, ಸಮಶತಾಯುಸ್ಸುಳ್ಳವನು=ಅವರಿಗೆ ಸಮವಾದ ಅಂದರೆ ಬ್ರಹ್ಮಮಾನವರ್ಷಗಳಿಂದ ನೂರು ವರ್ಷ ಆಯುಸ್ಸುಳ್ಳವನು. ನರಾಧಮರಪಿಡಿದು -ಮನುಷ್ಯಾಧಮರ ಮೊದಲು, ಕುಲಕ್ಷ್ಮಿ=ಕಲಿಯ ಹೆಂಡತಿಯಾದ ಅಲಕ್ಷ್ಮಿಯವರೆಗೂ, ದೈತ್ಯರು, ಕ್ರಮದಿ=ಕ್ರಮವಾಗಿ ನೀಚರು. ಅಸುರರೊಳು-ದೈತ್ಯರೊಳಗೆ, ದ್ವೇಷಾದಿಗುಣದಿಂದ, ಮೇಲೆ ಹೇಳಿದ ದೈತ್ಯರು, ಕಲಿಯಸುಪಮರೆನಿಸುವರು=ಕಲಿಗೆ ಸಮರೆಂದು ಉಪಮಾನಕೊಡಲು ಯೋಗ್ಯರೆನಿಸುವುದಿಲ್ಲ. ಕಲಿಗೆ ಸಮಾನರು ಯಾವ ದೈತ್ಯರೂ ಅಲ್ಲವೆಂದರ್ಥ.

ತಾತ್ಪರ್ಯ.—ಬ್ರಹ್ಮದೇವರ ಮೊದಲು ಮನುಷ್ಯೋತ್ತಮರವರೆಗೂ ಮುಕ್ತಿಯೋಗ್ಯರೆಂತಲೂ ಮನುಷ್ಯಾಧಮರ ಮೊದಲು ಕಲಿಯವರೆಗೂ ತಮೋಯೋಗ್ಯರೆಂತಲೂ ತಿಳಿಯಬೇಕು. ದೈತ್ಯರಲ್ಲಿ ಕಲಿ ಒಬ್ಬನು ಮಾತ್ರ ಬ್ರಹ್ಮದೇವರಿಗೆ ಸಮವಾದ ನೂರುವರ್ಷ ಆಯುಸ್ಸುಳ್ಳವನು. ದೈತ್ಯರಲ್ಲಿ ಅಲಕ್ಷ್ಮಿಯವರೆಗೂ ತಾರತಮ್ಯ ಪ್ರಕಾರ ಕ್ರಮವಾಗಿ ನೀಚರು. ದ್ವೇಷಾದಿಗಳಲ್ಲಿ ಕಲಿಗೆ ಸಮನಾದ ಪಾಪಿಯು ಮತ್ತಾವನೂ ಇಲ್ಲ. ಗರುಡಪುರಾಣದಲ್ಲಿ " ಕಲ್ಯಾದ್ಯಾಮಾನುಷಾಂ ತಾಸ್ತತೇಪ್ಯೇವಂ ಬ್ರಹ್ಮವದ್ಗಣಾಃ || ಸಮಃ ಶತಾಯುಃ ಪರ್ಯಂತಮೇಕ ಏವಕಲಿಃ ಸ್ಮೃತಃ || ಕಲಿಃ ಸಮಾನನಾಮಾನಃ ಕಲೇರನ್ಯೇಚ ಸಂತಿಹಿ || ಸರ್ವೇಷಾಮುಕ್ತಮೋಜ್ಞೇಯಃ ಕಲಿದೇವನಸಂಶಯಃ ದೂಷಣೇ ವಿಷ್ಣು ಭಕ್ತಾನಾಂ ತತ್ಸಮೋನಾಸ್ತಿ ಸರ್ವದಾ ||" ಇದರರ್ಥ ಕಲಿ ಮೊದಲು ಮನುಷ್ಯಾಧಮರವರೆಗೂ ಬ್ರಹ್ಮಾದಿ ದೇವಗಣದಂತೆ ಈ ದೈತ್ಯಗಣವೂ ಇರುವುದು. ಅದರಲ್ಲಿ ಕಲಿ ಒಬ್ಬನೇ ಬ್ರಹ್ಮದೇವರಿಗೆ ಸಮವಾದ ನೂರು ವರ್ಷ ಆಯುಸ್ಸುಳ್ಳವನು. ಮಿಕ್ಕವರೆಲ್ಲರೂ ಬ್ರಹ್ಮದೇವರ ದಿನ ಕಲ್ಪದವರೆಗೂ ಆಯುಸ್ಸುಳ್ಳವರು. ಕಲಿ ಎಂಬ ಹೆಸರುಳ್ಳ ದೈತ್ಯರು ಮತ್ತೆ ಕೆಲವರುಂಟು, ಅವರು ಮಹಾಕಲಿಗೆ ಸಮರಲ್ಲ. ಕಲಿಯೊಬ್ಬನೇ ವಿಷ್ಣು ದ್ವೇಷದಲ್ಲೂ ಅವನ ಭಕ್ತರ ದ್ವೇಷಮಾಡುವುದರಲ್ಲೂ ಉತ್ತಮೋತ್ತಮನು, ಹರಿದ್ವೇಷದಲ್ಲಿ ಅವನಿಗೆ ಸಮರು ಮತ್ತಾರೂ ಇಲ್ಲವೆಂಬರ್ಥವನ್ನೇ ಹೇಳಿರುವರು

ವನಜಸಂಭವನಬ್ದ ಶತ ಒ
ಬ್ಬನೆ ಮಹಾಕಲಿ ಶಬ್ದವಾಚ್ಯನು
ದಿನದಿನಗಳಲಿ ಬೀಳದಂಥಂತಮದಿ ಕಲಿಮಾರ್ಗ ||
ದನುಜರಿಲ್ಲ ಪ್ರತೀಕ್ಷಿಸುತ ಬ್ರ
ಹ್ಮನ ಶತಾಬ್ದಾಂತದಲಿ ಲಿಂಗವ
ಅನಿಲನ ಗದಾಪ್ರಹಾರದಿಂದಲಿ ಭಂಗವೈದುವರು ||೧೦||

ಪದ್ಯಾರ್ಥ.—ವನಜಸಂಭವನ=ಬ್ರಹ್ಮದೇವರ ಮಾನದಿಂದ, ಅಬ್ದ ಶತ=ನೂರು ವರ್ಷಗಳು, ಒಬ್ಬನೇ ಕಲಿಶಬ್ದವಾಚ್ಯನು=ಕಲಿ ಎಂಬ ಹೆಸರುಳ್ಳ ದೈತ್ಯರು ಮತ್ತೆ ಕೆಲವರಿದ್ದರೂ ಮಹಾ ಕಲಿ ಎಂಬ ಹೆಸರುಳ್ಳ ದೈತ್ಯನೊಬ್ಬನೇ ಇರುವವನು. ಮಿಕ್ಕ ದೈತ್ಯರೆಲ್ಲರೂ. ದಿನದಿನಗಳಲಿ=ಬ್ರಹ್ಮದೇವರ ಪ್ರತಿದಿವಸಗಳಲ್ಲೂ, ಅಂಧಂತಮದಿ-ಅಂಧಂತಮಸ್ಸಿನಲ್ಲಿ ಬೀಳ್ವರು. ದನುಜರೆಲ್ಲ=ಆ ಅಂಧಂತಮಸ್ಸಿನಲ್ಲಿ ಬಿದ್ದಿರುವ ದೈತ್ಯರೆಲ್ಲರೂ, ಕಲಿಮಾರ್ಗ=ಕಲಿಯ ಬರುವಿಕೆಯನ್ನು, ಪ್ರತೀಕ್ಷಿಸುತ=ನಿರೀಕ್ಷಿಸುತ್ತ (ಕಲಿಯ ದಾರಿಯನ್ನು ನೋಡುತ್ತ) ಇದ್ದು, ಬ್ರಹ್ಮನ ಶತಾಬ್ದಾಂತದಲಿ=ಬ್ರಹ್ಮದೇವರ ನೂರು ವರ್ಷಗಳಾದ ಮೇಲೆ, (ಕಲಿಯು ಬಂದನಂತರ ಅವನಿಂದ ಕೂಡಿ) ಅನಿಲನ=ವಾಯುದೇವರ, ಗದಾಪ್ರಹಾರದಿಂದಲಿ, ಲಿಂಗವ=ಲಿಂಗಶರೀರದ, ಭಂಗವೈದುವರು-ಭಂಗವನ್ನು ಹೊಂದುವರು.

ತಾತ್ಪರ್ಯ.—ಕಲಿ ಎಂಬ ಹೆಸರುಳ್ಳವನು ಮತ್ತೆ ಕೆಲವರಿದ್ದರೂ ಬ್ರಹ್ಮಕಲ್ಪ ಸಂಪೂರ್ಣ ಬದುಕಿರುವವನು ಮಹಾಕಲಿಯೊಬ್ಬನೇ. ಮಿಕ್ಕ ದೈತ್ಯರು ಬ್ರಹ್ಮದೇವರ ಪ್ರತಿದಿವಸದಲ್ಲೂ ಸಾಧನೆಮುಗಿಸಿಕೊಂಡು ಅವತ್ತವತ್ತು ಅಂಧಂತಮಸ್ಸಿನಲ್ಲಿ ಬಿದ್ದು ಕಲಿಯು ಬರುವಿಕೆಯನ್ನು ನಿರೀಕ್ಷಿಸುತ್ತಿದ್ದು ಅವನು ಬಂದಮೇಲೆ ಅವನೊಂದಿಗೆ ವಾಯುದೇವರ ಗದಾಪ್ರಹಾರದಿಂದ ಲಿಂಗಭಂಗವನ್ನು ಹೊಂದಿ ಶಾಶ್ವತ ತಮಸ್ಸನ್ನೈದುವರು. ಬ್ರಹ್ಮಾಂಡದಲ್ಲಿ, " ಏಕಸ್ಮಿನ್ ಬ್ರಹ್ಮದಿವಸೇ ತೇ ಗಚ್ಛಂತಿ ತಮೋಂಧಕಂ || ತತ್ರಸ್ಥಿತ್ವಾಕಲೇರ್ಮಾರ್ಗಂ ಪ್ರತೀಕ್ಷಂತೇನ ಸಂಶಯಃ || ಸಾಧನ್ಯೈಃಪರಿಪೂರ್ಣಾಸ್ತೇವಾಯುಶಸ್ತ್ರೈಪ್ರಪೀಡಿತಾಃ || ಶತವರ್ಷಾನಂತರಂತುಸರ್ವೇಷಾಂ ಕಲಿನಾಸಹ || ವಾಯೋರ್ಗದಾಪ್ರಹಾರೇಣ ಲಿಂಗಭಂಗೋಭವಿಷ್ಯತಿ " ಎಂಬೀ ಶ್ಲೋಕಗಳ ಅಭಿಪ್ರಾಯವನ್ನೇ ಇಲ್ಲಿ ಹೇಳಿರುವರು.

**ಮಾರುತನ ಗದೆಯಿಂದ ಲಿಂಗಶ**
**ರೀರ ಪೋದಾನಂತರ ತಮೋ**
**ದ್ವಾರವೈದಿ ಸ್ವರೂಪ ದುಃಖಗಳನುಭವಿಸುತಿಹರು ||**
**ವೈರ ಹರಿಭಕ್ತರಲಿ ಹರಿಯಲಿ**
**ತಾರತಮ್ಯದಲಿರುತಿಹದು ಸಂ**
**ಸಾರದಲಿ ತಮಸಿನಲಿಯತ್ಯಧಿಕ ಕಲಿಯಲ್ಲಿ ||೧೧||**

ಪದ್ಯಾರ್ಥ.—ಮಾರುತನ=ವಾಯುದೇವರ, ಗದೆಯಿಂದ, ಲಿಂಗ ಶರೀರ ಪೋದಾನಂತರ, ತಮೋದ್ವಾರವೈದಿ=ಶಾಶ್ವತವಾದ ಅಂಧಂತಮಸ್ಸನ್ನು ಹೊಂದಿ, ಸ್ವರೂಪ ದುಃಖಗಳನ್ನನುಭವಿಸುತಿಹರು. ಹರಿಭಕ್ತರಲಿ, ಹರಿಯಲ್ಲಿ, ವೈರ=ದ್ವೇಷದ, ತಾರತಮ್ಯದಲಿ – ತಾರತಮ್ಯವನ್ನನುಸರಿಸಿ ಸಂಸಾರದಲ್ಲಿ=ನಿತ್ಯ ಸಂಸಾರದಲ್ಲೂ, ತಮಸ್ಸಿನಲ್ಲಿ=ಅಂಧಂತಮಸ್ಸಿನಲ್ಲೂ ಕಲಿಯಲ್ಲಿ. ಅತ್ಯಧಿಕ=ಬಹಳ ಹೆಚ್ಚಾಗಿಯೂ, ಇರುತಿಹದು=ಸ್ವರೂಪ ದುಃಖಾನುಭವವು ಇರುವದು.

ತಾತ್ಪರ್ಯ.—ವಾಯುದೇವರ ಗದಾ ಪ್ರಹಾರದಿಂದ ಲಿಂಗ ಭಂಗವನ್ನು ಹೊಂದಿದ ದೈತ್ಯರು ಹರಿಯಲ್ಲೂ ಹರಿಭಕ್ತರಲ್ಲೂ ಮಾಡುವ ದ್ವೇಷವನ್ನನುಸರಿಸಿ ತಾರತಮ್ಯ ಪ್ರಕಾರ ಅಂದರೆ ದ್ವೇಷವು ಹೆಚ್ಚು ಮಾಡುವವರಿಗೆ ಸ್ವರೂಪ ದುಃಖಗಳು ಹೆಚ್ಚಾಗಿಯೂ, ದ್ವೇಷ ಕಮ್ಮಿ ಮಾಡುವವರಿಗೆ ಕಮ್ಮಿಯಾಗಿಯೂ; ಹೀಗೆ ತಾರತಮ್ಯವನ್ನನುಸರಿಸಿ, ಮನುಷ್ಯಾಧಮರಿಗೆ ತಮಸ್ಸಿನಲ್ಲಿ ನಿತ್ಯ ಸಂಸಾರದಲ್ಲೇ ದುಃಖವು, ಮುಕ್ಕ ರಾಜರಿಗೆ ಸ್ವರೂಪ ದುಃಖದಲ್ಲೇ ತಾರತಮ್ಯಾನುಸಾರ ದುಃಖಾನುಭವವೂ ಆಗುವದು. ಕಲಿಗೆ ಮಾತ್ರ ಎಲ್ಲರಿಗಿಂತಲೂ ಅತ್ಯಧಿಕವಾದ ದುಃಖಾನುಭವವಾಗುವದು. " ತತೋಂಧಂಪ್ರವಿಶಂತ್ಯೇತೇ ತಾರತಮ್ಯೇನ ಸರ್ವಶಃ || ತಮಸ್ಯಂಧೇಪಿ ಸಂಸಾರೇ ನಾತ್ರಕಾರ್ಯಾ ವಿಚಾರಣಾ || "ಎಂಬ ಗರುಡಪುರಾಣವಾಕ್ಯವು ಇದಕ್ಕಾಧಾರ.

ಅವತಾರಿಕೆ—ಕಲಿಯು ಜ್ಞಾನ ಸ್ವರೂಪವನ್ನೂ, ಕಾಲನೇಮಿಯರಿಗೂ ತಾರತಮ್ಯವನ್ನೂ ಹೇಳುತ್ತಾರೆ.

**ಜ್ಞಾನವೆಂಬುದು ಮಿಥ್ಯ ಅಸಮಿಾ**
**ಚೀನ ದುಃಖತರಂಗವೆ ಸಮಿಾ**
**ಚೀನಬುದ್ಧಿ ನಿರಂತರದಿ ಕಲಿಗಿಹದು ದೈತ್ಯರೊಳು |**
**ಹೀನಳೆನಿಪಳು ಶತಗುಣದಿ ಕಲಿ**
**ಮಾನಿನಿಗೆ ಶತವಿಪ್ರಚಿತ್ತಿಗೆ**
**ಊನಶತಗುಣ ಕಾಲನೇಮಿಯೆ ಕಂಸನೆನಿಸಿದನೂ ||೧೨||**

ಪದ್ಯಾರ್ಥ.—ಜ್ಞಾನವೆಂಬುದು ಮಿಥ್ಯ-ಕಣ್ಣಿಗೆ ಗೋಚರಿಸುವ ಪದಾರ್ಥಗಳೆಲ್ಲವೂ ಮಿಥ್ಯ ಎಂಬುವುದೇ ಕಲಿಯ ಜ್ಞಾನವು. ಅಸಮೀಚೀನ-ಒಳ್ಳೆಯದಲ್ಲದ, ದುಃಖತರಂಗವೇ, ಸಮೀಚೀನ ಬುದ್ಧಿಯು. ದೈತ್ಯರೊಳು ಇಂತಹ ಬುದ್ಧಿ=ಈ ಜ್ಞಾನವೇ, ಕಲಿಗಿಹದು=ಕಲಿಗಿರುವದು. ಇವನ ಹೆಂಡತಿಯಾದ ಅಲಕ್ಷ್ಮಿಯು ಕಲಿಯುಗಿಂತಲೂ, ಶತಗುಣದಿ=ಕಲಿಯು ಮಾಡುವ ದ್ವೇಷಾದಿಗಳಿಗಿಂತಲೂ ನೂರು ಗುಣಗಳಿಂದ, ಹೀನಳೆನಿಪಳು=ಕಮ್ಮಿ ಎನಿಸುವಳು. (ದೇವತಾ ತಾರತಮ್ಯದಲ್ಲಿ ಹೇಗೆ ಬ್ರಹ್ಮದೇವರಿಗಿಂತಲೂ ನೂರು ಗುಣಗಳಿಂದ ಭಕ್ತಿ ಜ್ಞಾನಾದಿಗಳಲ್ಲಿ ರುದ್ರದೇವರು ಕಮ್ಮಿ, ಅವರಿಗಿಂತಲೂ ಇಂದ್ರಾದಿಗಳೆಂದು ಹೇಳಿರುವರೋ, ಹಾಗೆ ಹರಿ ದ್ವೇಷದಲ್ಲಿ ಕಲಿಯೇ ಉತ್ತಮೋತ್ತಮನಾದುದರಿಂದ ಮುಂದೆ ಹೇಳುವ ತಾರತಮ್ಯವೆಲ್ಲವನ್ನು ಪರಮಾತ್ಮನ ದ್ವೇಷಾದಿಗಳನ್ನು ಮಾಡುವದರಲ್ಲಿ ಒಬ್ಬರಿಗೊಬ್ಬರು ಅಧಮರೆಂದರೆ ಅವರಿಗಿಂತಲೂ ಕಮ್ಮಿ ದ್ವೇಷವನ್ನು ಮಾಡುವರೆಂದರ್ಥ. ಹೀಗೆ ಮುಂದೂ ದ್ವೇಷಾದಿಗಳಲ್ಲಿ ಕಲಿಯುಗಿಂತಲೂ ಅವನ ಹೆಂಡತಿ, ಅವಳಗಿಂತಲೂ ಮತ್ತೊಬ್ಬನೂ ಕಮ್ಮಿ ಎಂಬರ್ಥವನ್ನು ತೆಗೆದುಕೊಳ್ಳಬೇಕು.) ಕಲಿಮಾನಿನಿಗೆ ಕಲಯ ಹೆಂಡತಿಯುಗಿಂತಲೂ, ವಿಪ್ರಚಿತ್ತಿಯು ಶತ=ನೂರು ಗುಣಗಳಿಂದ ದ್ವೇಷಾದಿಗಳನ್ನು ಕಮ್ಮಿ ಮಾಡುವವನು. ವಿಪ್ರಚಿತ್ತಿಗೆ ಕಾಲನೇಮಿಯು ಶತಗುಣ ಊನ-ನೂರು ಗುಣಗಳಿಂದ ಕಮ್ಮಿಯು. ಈ ಕಾಲನೇಮಿಯೇ ಕಂಸನೆನಿಸಿದನು=ಕಂಸನಾಗಿ ಹುಟ್ಟಿದವನು.

ತಾತ್ಪರ್ಯ.—"ಮಿಥ್ಯಾ ಜ್ಞಾನೇ ಜ್ಞಾನಬುದ್ಧಿರ್ದುಃಖೇಚ ಸುಖಬುದ್ಧಿಮಾನ್ ||" ಎಂಬ ಗರುಡಪುರಾಣ ವಾಕ್ಯದಂತೆ ಮಿಥ್ಯಾ ಜ್ಞಾನವನ್ನೇ ಜ್ಞಾನವನ್ನಾಗಿಯೂ, ದುಃಖವನ್ನೇ ಸುಖವನ್ನಾಗಿಯೂ ತಿಳಿದಿರುವ ಸ್ವಭಾವವುಳ್ಳವನು ಕಲಿಯು. ಇವನ ಹೆಂಡತಿಯಾದ ಅಲಕ್ಷ್ಮಿಯು ಇವನ ಸಮಳಾದ ಪಾಪಿಯಲ್ಲ. ಹರಿ ದ್ವೇಷಾದಿಗಳನ್ನು ಮಾಡುವ ವಿಷಯದಲ್ಲಿ ಇವನಿಗಿಂತಲೂ ನೂರು ಅಂಶಗಳು ಕಮ್ಮಿಯಾಗಿ ಮಾಡುವಳು. ಸ್ವರೂಪ ದುಃಖದಲ್ಲೂ ಕೂಡ ಕಲಿಗೆ ಎಷ್ಟು ದುಃಖವೋ ಅಷ್ಟು ದುಃಖವು ಇವಳಿಗಿಲ್ಲ. ಅವನಿಗಿಂತಲೂ ನೂರು ಅಂಶವು ಕಮ್ಮಿಯಾದ ದುಃಖವನ್ನನುಭವಿಸುವನು. ಇವಳಿಗಿಂತಲೂ ದ್ವೇಷಾದಿಗಳಲ್ಲಿ ನೂರಂಶಗಳು ಕಮ್ಮಿ ವಿಪ್ರಚಿತ್ತಿಯು. ಅವನ

ಗಿಂತಲೂ ನೂರು ಗುಣಗಳಿಂದ ಕಮ್ಮಿಯು ಕಾಲನೇಮಿಯು. ಇವನೇ ಕಂಸನೆಂದು ತಿಳಿಯಬೇಕು.

ಕಾಲನೇಮಿಗೆ ಪಂಚಗುಣದಿಂ
ಕೀಳುಮಧುಕೈಟಭರು ಜನ್ಮವ
ತಾಳಿ ನಿಳೆಯೊಳು ಹಂಸಡಿಭಿಕಾಹ್ವಯದಿ ಕರೆಸಿದರೂ ||
ಐಳನಾಮಕ ವಿಪ್ರಚಿತ್ತಿಸ
ಮಾಳುವೆನಿಪ ಹಿರಣ್ಯಕಶ್ಯಪು
ಶೂಲಪಾಣಿಯ ಭಕ್ತನರಕಗೆ ಶತಗುಣಾಧಮನು ||೧೩||

ಪದ್ಯಾರ್ಥ.—ಕಾಲನೇಮಿಗೆ=ಕಾಲನೇಮಿಯಗಿಂತಲೂ, ಮಧುಕೈಟಭರು, ಪಂಚಗುಣದಿಂ=ಐದು ಗುಣಗಳಿಂದ, ಕೀಳು=ಅಧಮರೆನಿಸುವರು. ಈ ಮಧುಕೈಟಭರೀರ್ವರೂ, ಇಳೆಯೊಳು=ಭೂಮಿಯಲ್ಲಿ, ಜನ್ಮವತಾಳಿ=ಜನ್ಮವನ್ನು ಹೊಂದಿ, ಹಂಸಡಿಭಿಕಾಹ್ವಯದಿ=ಹಂಸ ಡಿಭಿಕರೆಂಬ ಹೆಸರಿನಿಂದ ಕರೆಸಿದರೂ, ಐಳನಾಮಕ=ಇಳೆಯ (ಭೂಮಿಯ) ಮಗನಾದ ನರಕಾಸುರನು, ವಿಪ್ರಚಿತ್ತಿಸಮಾನಳು ಎನಿಪ–ವಿಪ್ರಚಿತ್ತಿಗೆ ಸಮದೈತ್ಯನೆಂದು ಕರೆಸುವನು. ಶೂಲಪಾಣಿಯ–ಋದ್ರದೇವರ, ಭಕ್ತನರಕಗೆ = ನರಕಾಸುರನಿಗೆ, ಹಿರಣ್ಯಕಶಿವು=ಹಿರಣ್ಯಕಶ್ಯಪನಲ್ಲಿ ಪ್ರವಿಷ್ಟನಾದ ಹಿರಣ್ಯನೆಂಬ ದೈತ್ಯನು, ಶತಗುಣಾಧಮನು–ನೂರು ಗುಣಗಳಿಂದಧಮನು.

ತಾತ್ಪರ್ಯ—ಕಾಲನೇಮಿಯಕಿಂತಲೂ ಮಧುಕೈಟಭರು ಐದು ಗುಣಗಳಿಂದ ಅಧಮರು. ಅವರೇ ಹಂಸ ಡಿಭಿಕರೆಂದು ಸಾಲ್ವ ದೇಶಾಧಿಪತಿಗಳಾಗಿ ಹುಟ್ಟಿದವರು. ಭೂಮಿಯ ಮಗನಾದ ನರಕಾಸುರನು ವಿಪ್ರಚಿತ್ತಿಗೆ ಸಮನು. ವಿಪ್ರಚಿತ್ತಿಯೇ ಜರಾಸಂಧನು. ನರಕಾಸುರನಗಿಂತಲೂ ಹಿರಣ್ಯಕಶಿಪುವಿನೊಳಗೆ ಪ್ರವಿಷ್ಟನಾದ ಆದಿ ಹಿರಣ್ಯನು ನೂರು ಗುಣಗಳಿಂದ ಅಧಮನು. " ತಸ್ಮಾತ್ಪಂಚಗುಣೈರ್ಹೀನೌ ಮಧುಕೈಟಭ ಸಂಜ್ಞಕೌ || ತಾವೇವ ಹಂಸಡಿಭಿಕೌ ವಿಪ್ರಚಿತ್ತಿ ಸಮೋಽಜ್ಞೇಯೋ ಭೌಮೋ ವೈ ಭೂತಲೇ ಸ್ಮೃತಃ || ತಸ್ಮಾಚ್ಛತಗುಣೈರ್ಹೀನೋ ಹಿರಣ್ಯಕಶಿಪುಃ ಸ್ಮೃತಃ " ಎಂಬ ಗರುಡ ಪುರಾಣ ವಚನವೇ ಇದಕ್ಕಾಧಾರವು.

ಗುಣಗಳತ್ರಯ ನೀಚನೆನಿಸುವ
ಕನಕಕಶಿಪುಗೆ ಹಾಟಕಾಂಬಕ
ಗೆಣೆ ಎನಿಪ ಮಣಿಮಂತಗಿಂದಲಿ ಕಿಂಚಿದೂನ ಬಕ ||
ದನುಜವರ ತಾರಕನು ವಿಂಶತಿ
ಗುಣದಿ ನೀಚನು ಲೋಕಕಂಟಕ
ನೆನಿಪಶಂಬರ ತಾರಕಾಸುರಗಧಮ ಷಡ್ಗುಣದಿ ||೧೪||

ಪದ್ಯಾರ್ಥ.—ಕನಕಕಶಿಪುಗೆ=ಹಿರಣ್ಯಕಶಿಪುವಿಗೆ, ಗುಣಗಳತ್ರಯ=ಮೂರು ಗುಣಗಳಿಂದ, ಹಾಟಕಾಂಬಕ-ಹಿರಣ್ಯಾಕ್ಷನು, ನೀಚನೆನಿಸುವ=ಅಧಮನೆನಿಸುವನು. ಹಾಟಕಾಂಬಕಗೆ-ಹಿರಣ್ಯಾಕ್ಷನಿಗೆ, ಮಣಿಮಂತನ, ಎಣೆಯೆನಿಪ-ಸಮನೆನಿಸುವನು. ಮಣಿಮಂತಗಿಂದಲಿ, ಬಕ-ಬಕಾಸುರನು ಕಿಂಚಿದೂನ=ಸ್ವಲ್ಪ ಅಧಮನು. ಬಕನಕಿಂತಲೂ, ದನುಜವರ=ದೈತ್ಯ ಶ್ರೇಷ್ಠನಾದ, ತಾರಕನು-ತಾರಕಾಸುರನು, ವಿಂಶತಿಗುಣದಿ-೨೦ ಗುಣಗಳಿಂದ ನೀಚನು, ತಾರಕಾಸುರಗೆ, ಲೋಕಕಂಟಕನೆನಿಪ, ಶಂಬರ-ಶಂಬರಾಸುರನು, ಷಡ್ಗುಣದಿ=೬ ಗುಣಗಳಿಂದ ಅಧಮನು.

ತಾತ್ಪರ್ಯ.—ಹಿರಣ್ಯಕಶಿಪುವಿನಗಿಂತಲೂ ಹಿರಣ್ಯಾಕ್ಷನು ಮೂರು ಗುಣಗಳಿಂದ ನೀಚನು. ಅವನ ಸಮನು ಮಣಿಮಂತನು. ಇವನೇ ಸಂಕರನು, ಅವನಿಗಿಂತಲೂ ಸ್ವಲ್ಪ ಕಮ್ಮಿ ಬಕಾಸುರನು. ಅವನಕಿಂತಲೂ ೨೦ ಗುಣಗಳಿಂದ ತಾರಕಾಸುರನು ನೀಚನು: ಅವನಕಿಂತಲೂ ಲೋಕಕಂಟಕನಾದ ಶಂಬರಾಸುರನು ೬ ಗುಣಗಳಿಂದ ಅಧಮನು. ಇದೇ ಅಭಿಪ್ರಾಯವೇ ಗರುಡಪುರಾಣದಲ್ಲಿ "ತಸ್ಮಾತ್ತು ತ್ರಿಗುಣೈರ್ಹೀನೋ ಹಿರಣ್ಯಾಕ್ಷೋ ಮಹಾಸುರಃ ಮಣಿಮಾನ್ ತತ್ಸಮೋ ಜ್ಞೇಯೋ ಕಿಂಚಿದೂನೋಬಕಃ ಸ್ಮೃತಃ || ತಸ್ಮಾದ್ವಿಂಶದ್ಗುಣೈರ್ಹೀನೋ ತಾರಕಾಖ್ಯೋ ಮಹಾಸುರಃ || ತಸ್ಮಾತ್ ಷಡ್ಗುಣತೋ ಹೀನೋ ಶಂಬರೋ ಲೋಕಕಂಟಕಃ" ಎಂಬ ಶ್ಲೋಕಗಳಿಂದ ಹೇಳಲ್ಪಟ್ಟಿರುವದು.

ಸರಿಯೆನಿಸುವನು ಸಾಲ್ವನಿಗೆ ಸಂ
ಕರನಿಗಧಮನು ದಶಗುಣದಿ ಶಂ
ಬರಗೆ ಷಡ್ಗುಣನೀಚನೆನಿಪ ಹಿಡಿಂಬಕಾ ಬಾಣಾ |
ಸುರನು ದ್ವಾಪರ ಕೀಚಕನು ನಾ
ಲ್ವರು ಸಮರು ದ್ವಾಪರನೆ ಶಕುನಿ
ಕರೆಸಿದನು ಕೌರವಗೆ ಸೋದರಮಾವನಹುದೆಂದು ||೧೫||

ಪದ್ಯಾರ್ಥ.—ಸಾಲ್ವನಿಗೆ ಮೇಲೆ ಹೇಳಿದ ಶಂಭರನಲ್ಲದೆ, ದ್ವಾಪರ ಯುಗದ ಮತ್ತೊಬ್ಬ ಶಂಭರಾಸುರನು, ಸರಿಯೆನಿಸುವನು=ಸಮನೆನಿಸುವನು ಈ ಶಂಭರನು, ಸಂಕರಗೆ=ಸಂಕರನೆಂದು ಭೂಮಿಯಲ್ಲಿ ಅವತರಿಸಿದ ಮಣಿಮಂತನಿಗೆ, ದಶಗುಣದಿ=10 ಗುಣದಿಂದ ಅಧಮನು; ಶಂಭರಗೆ=ಈ ಶಂಭರಾಸುರನಿಗೆ, ಹಿಡಿಂಭಿಕಾ=ಹಿಡಿಂಭಾಸುರನು, ಷಡ್ಗುಣದಿ = 6 ಗುಣಗಳಿಂದ ನೀಚನೆನಿಪ, ಹಿಡಿಂಭಾಸುರನು, ಬಾಣಾಸುರನು, ದ್ವಾಪರ, ಕೀಚಕನು, ಈ ನಾಲ್ವರೂ ಸಮರು. ದ್ವಾಪರನೇ ಶಕುನಿ, ಕೌರವಗೆ-ದುರ್ಯೋಧನನಿಗೆ, ಸೋದರಮಾವನಹುದೆಂದು, ಕರೆಸಿದನು.

ತಾತ್ಪರ್ಯ.—ಶಂಭರಾಸುರನು ಸಾಲ್ವನಿಗೆ ಸಮನೆನಿಸುವನು. ಈ ಶಂಭರನು, ಸಂಕರನೆಂದು ಭೂಮಿಯಲ್ಲಿ ಜನಿಸಿದ್ದ ಮಣಿಮಂತನಿಗೆ ೧೦ ಗುಣಗಳಿಂದಧಮನು. ಈ ಶಂಭರನಿಗೆ ಹಿಡಿಂಭಾಸುರ, ಭಾಣಾಸುರ, ದ್ವಾಪರ, ಕೀಚಕ ಈ ನಾಲ್ವರೂ 6 ಗುಣಗಳಿಂದ ನೀಚರು. ತಮ್ಮೊಳಗೆ ಈ ನಾಲ್ವರೂ ಸಮರು. ದ್ವಾಪರನೇ ಶಕುನೀ ಎಂದು ದುರ್ಯೋಧನನ ಸೋದರಮಾವನಾಗಿ ಹುಟ್ಟಿದವನು. ಭಾಣಾಸುರನೇ ಕೀಚಕನು.

ವಿಶೇಷಾರ್ಥ.—ಪೂರ್ವಪದ್ಯದಲ್ಲಿ, ಮಣಿಮಂತನಗಿಂತಲೂ ಬಕಾಸುರನು ಕಿಂಚಿದೂನನೆಂತಲೂ, ಅವನಿಗಿಂತಲೂ ತಾರಕಾಸುರನು 20 ಗುಣ ನೀಚನೆಂತಲೂ, ಅವನಗಿಂತಲೂ ಶಂಭರಾಸುರನು 6 ಗುಣ ನೀಚನೆಂದು ಹೇಳಿರುವರು. ಆ ಪದ್ಯದಿಂದ ಮಣಿಮಂತನಗಿಂತಲೂ 26 ಗುಣಗಳಿಂದ ಶಂಭರಾಸುರನು ಅಧಮನೆಂದು ಸಿದ್ಧವಾಗುವುದು. ಈ ಪದ್ಯದಲ್ಲಿ ಸಂಕರನಿಗೆ 10 ಗುಣಗಳಿಂದ ಶಂಭರನು ಅಧಮನೆಂದು ಹೇಳಿರುವರು. ಗರುಡಪುರಾಣದಲ್ಲೂ, “ ಶಂಭರಸ್ಯ ಸಮೋಜ್ಞೇಯೋ ಸಾಲ್ವೋ ದೈತ್ಯೇಷುಚಾಧಮಃ || ಸಂಕರಾಚ್ಚ ದಶಗುಣ್ಯೈಃ ಶಂಭರೋನ್ಯೂನ ಉಚ್ಯತೇ || ಶಂಭರಾಚ್ಚ ಗುಣ್ಯೈಃ ಷಡ್ಭಿರ್ಹಿಡಿಂಭೋನ್ಯೂನ ಉಚ್ಯತೇ || ಬಾಣಸ್ತು ತತ್ಸಮೋಜ್ಞೇಯೋ ಸಕೀಚಕ ಇತಿಸ್ಮೃತಃ || ಇತ್ಯಾದಿ ವಾಕ್ಯಗಳಿಂದ ಮೇಲಿನ ಅರ್ಥವೇ ಸಿದ್ಧವಾಗುವುದು. ಈ ಎರಡು ವಾಕ್ಯಗಳಿಂದಲೂ ಒಂದುಕಡೆ 26 ಗುಣಗಳಿಂದ ಕಡಿಮೆಯೆಂತಲೂ, ಮತ್ತೊಂದು ಕಡೆ ೧೦ ಗುಣ ಕಡಿಮೆಯೆಂತಲೂ ಶಂಭರನವಿಷಯದಲ್ಲಿ ಹೇಳಿರುವುದರಿಂದ ಪೂರ್ವೋತ್ತರವಿರೋಧಬರುವುದು

ಮಣಿಮಂತನೇ ಸಂಕರನೆಂದು ಅನೇಕ ಗ್ರಂಥಗಳಿಂದ ಸಿದ್ಧವಾಗಿರುವುದು. ಹೀಗಿರಲು ಈ ವಿರೋಧ ಪರಿಹಾರವು ಹೇಗೆಂದರೆ, ಶಂಭರಾಸುರರು ಇಬ್ಬರೆಂದು ಕಾಣುವುದು. ಇದಕ್ಕೆ ಆಧಾರವು ತ್ರೇತಾಯುಗದಲ್ಲಿ ದಶರಥರಾಜನಿಗೂ ಶಂಭರನಿಗೂ ಯುದ್ಧವಾದಕಾಲದಲ್ಲಿ ಶಂಭರನ ಮಾಯದಿಂದ ದಶರಥನು ಮೂರ್ಛಿತನಾದಾಗ ಕೈಕೇಯಿಯು ದಶರಥನನ್ನು ರಕ್ಷಿಸಿದುದಕ್ಕಾಗಿ ಎರಡು ವರಗಳನ್ನು ಕೈಕೇಯಿಗೆ ಕೊಟ್ಟುದುದಾಗಿಯೂ, ಆಗ ಕೈಕೆಯಿಯು ಆ ವರವನ್ನು ಬೇಡದೆ ಮಂಥರೆಯ ವಾಕ್ಯದಿಂದ ರಾಮನ ಪಟ್ಟಾಭಿಷೇಕ ಕಾಲದಲ್ಲಿ ರಾಮನಿಗೆ ವನವಾಸವನ್ನೂ, ಭರತನಿಗೆ ಪಟ್ಟಾಭಿಷೇಕವನ್ನೂ ಬೇಡಿಕೊಂಡಳೆಂದು ಹೇಳಿರುವರು. ಆ ವಾಕ್ಯದಿಂದ ದಶರಥರಾಜನಿಂದ ಮೃತಿಹೊಂದಿದ ಶಂಬರಾಸುರನೊಬ್ಬನು ಏರ್ಪಡುವನು. ಮತ್ತೂ ತಾರಕಾಮಯ ಯುದ್ಧದಲ್ಲಿ ದೇವೇಂದ್ರನಿಂದ ಮೃತನಾದ ಶಂಬರನೊಬ್ಬನು ಏರ್ಪಡುವನು. ಈ ಅರ್ಥವು ನಿರ್ಣಯ ೧೧ನೆಯ ಅಧ್ಯಾಯ "ಅಥಾತ್ಮನೇನಾ ಮವಮೃದ್ಯಮಾನಾಂ ಪಿಕ್ಷ್ಯಸುರಃ ಶಂಭರನಾಮಧೇಯಃ ‖ ಎಂಬ ೧೮೫ನೇ ಶ್ಲೋಕ ಮೊದಲು "ವಜ್ರೇಣ ವಜ್ರೀ ನಿಜಘಾನ ಶಂಭರಂ" ಎಂಬ ೧೮೮ನೆಯ ಶ್ಲೋಕದವರೆವಿಗೂ ಹೇಳಲ್ಪಟ್ಟಿರುವುದು. ಇವಲ್ಲದೆ ರತೀದೇವಿಯನ್ನು ಅಪಹರಿಸಿ ಪ್ರದ್ಯುಮ್ನನಿಂದ ಮೃತನಾದ ಶಂಬರನು ದ್ವಾಪರಾಂತ್ಯದಲ್ಲಿ ಒಬ್ಬನೇರ್ಪಡುವನು. ಈ ಅರ್ಥವನ್ನು ನಿರ್ಣಯ ೧೮ನೆಯ ಅಧ್ಯಾಯ "ಪ್ರದ್ಯುಮ್ನ ಮೃತ್ಯುರ್ವೇದಪತ್ಯ ಮೇವ ಶಂಬರಸ್ಯಾಹ" ಎಂಬ ೧೮೩ನೆಯ ಶ್ಲೋಕ ಮೊದಲು "ನಿಪಾತಿತಂ ಹರೇಃಸುತಃ" ಎಂಬ ೧೯೯ನೇ ಶ್ಲೋಕದವರೆಗೂ ಈ ಕಥೆಯನ್ನು ಹೇಳಿರುವರು. ಇವರಲ್ಲಿ ದಶರಥರಾಜನಿಂದ ತ್ರೇತಾಯುಗದಲ್ಲಿ ಮೃತನಾದ ಶಂಭರನೇ ಮತ್ತೂ ಹುಟ್ಟಿ ದೇವೇಂದ್ರನಿಂದ ಮೃತನಾಗಿರಬಹುದು. ಅಂತು ಇಂದ್ರನಿಂದ ಮೃತನಾದ ಶಂಭರಾಸುರನು ಬೇರೆ; ಪ್ರದ್ಯುಮ್ನನಿಂದ ಮೃತನಾದ ಶಂಭರಾಸುರನು ಬೇರೆಯಾಗಿರುವುದರಿಂದ ಮಣಿಮಂತನಿಂದ ೨೩ ಗುಣಗಳಿಂದ ನೀಚನಾದ ಶಂಭರನು ಇಂದ್ರನಿಂದ ಮೃತನಾದ ಶಂಭರನೆಂತಲೂ, ಪ್ರದ್ಯುಮ್ನನಿಂದ ಮೃತನಾದ ಶಂಭರನು ಸಂಕರಾವತಾರನಾದ ಮಣಿಮಂತನಿಂದ ೧೦ಗುಣ ನೀಚನೆಂತಲೂ ಹೇಳಬಹುದಾಗಿದೆ. ಮಣಿಮಂತನೇ ಸಂಕರನೆಂದು ಸಿದ್ಧವಾಗಿರುವುದ ಮಣಿಮಂತನಿಗೂ ಸಂಕರನಿಗೂ ಭೇದವನ್ನು ತಾರತಮ್ಯದಲ್ಲಿ ಕಲ್ಪಿಸುವದಕ್ಕೆ

ಆಧಾರವಿಲ್ಲ. ಒಬ್ಬ ವ್ಯಾಖ್ಯಾನ ಕರ್ತರು ಮಣಿಮಂತನಕಿಂತಲೂ ಶಂಭರನು 26 ಗುಣ ಕಮ್ಮಿಯೆಂತಲೂ ಸಂಕರನಿಂದ ಶಂಭರನು 10 ಗುಣದಿಂದ ನೀಚನೆಂತಲೂ ಬರೆದಿರುತ್ತಾರೆ. ಇದು ಯೋಚಿಸತಕ್ಕ ವಿಷಯವಾಗಿದೆ. ಕಾಲನೇಮಿಯೇ ಕಂಸನೆಂಬ ವಿಷಯದಲ್ಲಿ ಪ್ರಮಾಣ ನಿರ್ಣಯ 11ನೆಯ ಅಧ್ಯಾಯ " ಯವುಗ್ರಸೇನಃ ಸುರಗಾಯಕಸ್ಯ ಜಾತೋಯದುಷ್ವೇವ ತಥಾಭಿಧೇಯಃ | ತಸ್ಯೈವ ಸೇವಾರ್ಥಮಮುಷ್ಯ ಪುತ್ರೋ ಜಾತೋ ಸುರಃಕಾಲನೇಮಿಃ ಸಈಶ ||199|| ಗಂಧರ್ವಜೇನದ್ರುಮಿಳೇನ ನಾಮ್ನಾ ಕಂಸೋಜಿತೋ ಏನವರಾಚ್ಛುಚೀಪತಿಃ ||201|| " ಪೂರ್ವದಲ್ಲಿ ಉಗ್ರಸೇನನೆಂಬ ದೇವಗಂಧರ್ವನಾಗಿದ್ದವನೇ ಉಗ್ರಸೇನನೆಂಬ ಹೆಸರಿನಿಂದ ಯದುಕುಲದಲ್ಲಿ ನಿನ್ನ ಸೇವಾರ್ಥವಾಗಿ ಹುಟ್ಟಿರುವನೋ ಅವನಿಗೆ ಮಗನಾಗಿ ಕಾಲನೇಮಿ ಎಂಬ ದೈತ್ಯನು ಕಂಸನೆಂಬ ಹೆಸರಿನಿಂದ ಹುಟ್ಟಿರುವನು. ರುದ್ರದೇವರ ವರಬಲದಿಂದ ಇಂದ್ರನನ್ನು ಕಂಸನು ಜಯಿಸಿರುವನು. ವಿಪ್ರಚಿತ್ತಿಯು ಜರಾಸಂಧನೆಂಬ ವಿಷಯದಲ್ಲಿ ಪ್ರಮಾಣ—" ಸವಿಪ್ರಚಿತ್ತಿಸ್ತ್ವ ಜರಾಸುತೋಽಭೂತ್ " ಎಂದು ನಿರ್ಣಯ 11ನೆಯ ಅಧ್ಯಾಯ ಮಧುಕೈಟಭರು ಹಂಸಡಿಭಕರು ಎಂಬ ವಿಷಯದಲ್ಲಿ " ಹತೌಪುರಾಯೌ ಮಧುಕೈಟಭಾಖ್ಯೌತ್ವಯೈವ ಹಂಸೋಡಿಭಿಕಶ್ಚ ಜಾತೌ || ನೀನು ಪೂರ್ವದಲ್ಲಿ ಯಾವ ಮಧುಕೈಟಭರನ್ನು ಸಂಹಾರಮಾಡಿದ್ದೆಯೋ ಅವರೇ ಈಗ ಹಂಸಡಿಭಿಕರೆಂದು ಭೂಮಿಯಲ್ಲಿ ಹುಟ್ಟಿರುವರು. ಬಾಣಾಸುರನೇ ಕೀಚಕನೆಂಬ ವಿಷಯದಲ್ಲಿ ಪ್ರಮಾಣ ನಿರ್ಣಯ 11ನೆಯ ಅಧ್ಯಾಯ " ಯೋ ಬಾಣನಾಮಾ ಮಹಾಸುರೋ ಭೂತ್ ಸ್ಥಿತಃ ಸನಾಮ್ನಾ ಪ್ರಥಿತೋಪಿಬಾಣಃ | ಸಕೀಚಕೋ ನಾಮ ಭಭೂವರುದ್ರವರಾದ್ಯಃ ಸತಮಃ ಪ್ರವೇಕ್ಷ್ಯಃ ||21|| ಬಲಿಚಕ್ರವರ್ತಿಯ ಮಗನಾದ ಬಾಣಾಸುರನಲ್ಲಿ ಯಾವ ಬಾಣನೆಂಬ ಮಹಾ ದೈತ್ಯನಿದ್ದನೋ ಅವನೇ ಈಗ ಕೀಚಕನೆಂದು ಹುಟ್ಟಿ ರುದ್ರದೇವರ ವರದಿಂದ ಅವಧ್ಯನಾಗಿರುವನು. ಅವನನ್ನು ತಮಸ್ಸಿಗೆ ಕಳುಹಿಸಬೇಕಾಗಿದೆ. ಪೂರ್ವದಲ್ಲಿ ಪ್ರಹ್ಲಾದನ ಮೊಮ್ಮಗನಾದ ಬಲಿಚಕ್ರವರ್ತಿಯಲ್ಲಿ ಪ್ರವಿಷ್ಟನಾಗಿದ್ದು ನಮಗೂ ನಿನಗೂ ಸಹ ವಿರೋಧವನ್ನಾಚರಿಸುತ್ತಿದ್ದನೋ ಆ ಬಲಿ ಮಹಾ ದೈತ್ಯನು ಸಾಲ್ವನೆಂಬ ಹೆಸರಿನಿಂದ ಸಾಲ್ವಪತಿಯ ಮಗನಾಗಿ ಹುಟ್ಟಿರುವನು. ಅವಶ್ಯಯೋಬಲಿಮಂಜ

ಶ್ಚಕಾರ ಪ್ರತೀಪಮಸ್ಮಾಸು ತಥಾತ್ಮಯಿಸಾಶ || ಸಚಾಸುರೋ ಬಲಿನಾಮ್ನೈವ ಭೂಮೌಸಾಲ್ವೋ ನಾಮ್ನಾ ಬ್ರಹ್ಮದತ್ತಸ್ಯಜಾತಃ ||213|| ಎಂಬ ವಾಕ್ಯ ದಿಂದ ಮೇಲಿನ ಅರ್ಥವು ಸಿದ್ಧವಾಗುವುದು. ಶಕುನಿಯು ದ್ವಾಪರನೆಂಬ ವಿಷಯದಲ್ಲಿ " ಶಕುನಿರ್ನಾಮಯಸ್ತ್ವಾಸೀದ್ರಾಜಲೋಕೇ ಮಹಾರಥಃ || ದ್ವಾಪರಂ ವಿದ್ಧಿತಂರಾಜನ್ ಎಂಬ ಭಾರತ ಆದಿಪರ್ವ ವಾಕ್ಯವು ಆಧಾರವು.

ನಮುಚಿ ಇಲ್ವಲ ಪಾಕನಾಮಕ
ಸಮರು ಭಾಣಾದ್ಯರಿಗೆ ದಶಗುಣ
ನಮುಚಿ ನೀಚನು ಮೂರುಗುಣದಿಂದಧಮನಾಪಾಪಿ |
ಕುಮತಿಧೇನುಕನೂರು ಗುಣದಿಂ
ದಧಮರಿಪು ವಾತಾಪಿಗಧಮನು
ವಮನಧೇನುಕನಿಂದಲರ್ಧಗುಣಾಧಮನುಕೇಶೀ ||೧೬||

ಪದ್ಯಾರ್ಥ.——ನಮುಚಿ, ಇಲ್ವಲ, ಪಾಕನಾಮಕ=ಪಾಕನೆಂಬ ಹೆಸರುಳ್ಳವನು ಇವರು ಮೂವರೂ ಸಮರು. ಬಾಣಾದ್ಯರಿಗೆ=ಬಾಣಾಸುರ ಮೊದಲಾದವರಿಗೆ, ನಮುಚಿ=ನಮುಚಿ ಮೊದಲಾದವರು, ದಶಗುಣ=10ಗುಣಗಳಿಂದ, ನೀಚನು-ನೀಚರು, ನಮುಚಿಕಿಂತಲೂ, ವಾತಾಪೀ = ವಾತಾಪಿ ಎಂಬ ದೈತ್ಯನು, ಮೂರು ಗುಣದಿಂದಧಮನು, ಅಮರರಿಪು-ದೇವ ಶತ್ರುವಾದ ವಾತಾಪಿಗೆ, ಕುಮತಿ=ಕುತ್ಸಿತವಾದ ಬುದ್ಧಿಯುಳ್ಳ, ಧೇನುಕ=ಧೇನುಕಾಸುರನು, ನೂರು ಗುಣದಿಂದ ಅಧಮನು. ವಮನ=ಪರಮ ನೀಚನಾದ ಧೇನುಕನಿಂದಲಿ, ಕೇಶೀ=ಕೇಶೀ ಎಂಬ ದೈತ್ಯನು ಅರ್ಧ ಗುಣಾಧಮನು.

ತಾತ್ಪರ್ಯ.——ನಮುಚಿ, ಇಲ್ವಲಿ, ಪಾಕ ಎಂಬ ಇವರು ಮೂವರು ಸಮರು. ಮೇಲೆ ಹೇಳಿದ ಭಾಣಾಸುರ ಮೊದಲಾದವರಿಗೆ 10ಗುಣಗಳಿಂದ ನಮುಚಿ ಮೊದಲಾದವರು ನೀಚರೆನಿಸುವರು. ಅವರಗಿಂತಲೂ ವಾತಾಪಿಯು ೩ ಗುಣಾಧಮನು. ಅವನಗಿಂತಲೂ ಧೇನುಕಾಸುರನು 100 ಗುಣಗಳಿಂದ ಅಧಮನು. ವಮನನೆಂದರೆ ಪರಮ ನೀಚನೆಂದರ್ಥ ಮಾಡಬೇಕು. ವಮನ ಮಾಡಿದ (ವಾಂತಿ ಮಾಡಿದ) ಪದಾರ್ಥವು ಹೇಗೆ ನೀಚವೋ ಹಾಗೆ ಧೇನುಕನೂ ಪರಮನೀಚನೆನ್ನುವದಕ್ಕಾಗಿ ವಮನಧೇನುಕನೆಂದು ಹೇಳಿರುವರು.

ಇಲ್ಲಿ ವಮುನನೆಂದರೆ ಒಬ್ಬ ದೈತ್ಯನೆಂದು ಒಬ್ಬ ವ್ಯಾಖ್ಯಾನಕರ್ತರು ಅರ್ಥ ಮಾಡಿ ತಾರತಮ್ಯವನ್ನು ಬರೆದಿರುವರು. ಅದಕ್ಕೆ ತಾರತಮ್ಯದಲ್ಲಾಗಲೀ, ಗರುಡಪುರಾಣದಲ್ಲಾಗಲೀ ಎಲ್ಲೂ ಆಧಾರವಿಲ್ಲ. ಗರುಡಪುರಾಣ " ವಾಕ್ಯ ತಸ್ಮಾದ್ದಶಗುಣೈರ್ಹೀನೋ ನಮುಚಿರ್ದೈತ್ಯ ಸತ್ತಮಃ ॥ ನಮುಚೇಸ್ತು ಸಮೌಜ್ಞೇಯೌ ಪಾಕ ಇಲ್ವಲ ಇತ್ಯುಭೌ ॥ ತಸ್ಮಾಚ್ಚತ್ರಿ ಗುಣೈರ್ಹೀನೋ ವಾತಾಪೀ ದಾನವಾಧಮಃ ॥ ಧೇನುಕೋನಾಮ ದೈತ್ಯಶ್ಚ ತಸ್ಮಾಚ್ಚತಗುಣಾಧಮಃ ॥ ತಸ್ಮಾದರ್ಧ ಗುಣೈರ್ಹೀನೋ ಕೇಶೀ ದೈತ್ಯಸ್ತು ವಿಶ್ರುತಃ ॥ " ಈ ಪ್ರಮಾಣದಿಂದ ವಾತಾಪಿಗಿಂತಲೂ ೧೦೦ ಗುಣಾಧಮ ಧೇನುಕನೆಂತಲೂ, ಅವನಿಗಿಂತಲೂ ಅರ್ಧಗುಣಾಧಮ ಕೇಶೀ ಎಂತಲೂ ಸ್ಪಷ್ಟವಾಗುವುದು. ಬ್ರಹ್ಮದೇವರು ಪರಮಾತ್ಮನನ್ನು ಕುರಿತು ಹೇಳಿದ ದೈತ್ಯತಾರತಮ್ಯವನ್ನು ಹೇಳುತ್ತೇವೆಂದು ದಾಸಾರ್ಯರು ಸಂಧಿಸೂಚನೆಯಲ್ಲಿ ಹೇಳಿರುವುದರಿಂದಲೂ ಬ್ರಹ್ಮದೇವರು ಪರಮಾತ್ಮನನ್ನು ಕುರಿತು ಹೇಳಿದುದು ಗರುಡಪುರಾಣ ಬ್ರಹ್ಮಕಾಂಡದಲ್ಲೇ ಹೇಳಿರುವದರಿಂದಲೂ, ಈವರೆಗೆಗೂ ಹೇಳಿದ ವಾಕ್ಯಗಳೆಲ್ಲವೂ ಗರುಡಪುರಾಣ ವಾಕ್ಯಕ್ಕೆ ಸರಿಹೋಗುವುದರಿಂದಲೂ, ಈ ಒಂದು ವಾಕ್ಯಮಾತ್ರ ಗರುಡ ಪುರಾಣ ವಾಕ್ಯಕ್ಕೆ ವಿರುದ್ಧಾರ್ಥಮಾಡುವದು ದಾಸಾರ್ಯರ ಅಭಿಪ್ರಾಯವಲ್ಲವೆಂದು ತಿಳಿದು ವಮುನಶಬ್ಧಕ್ಕೆ ಪರಮನೀಚನೆಂದು ಅರ್ಥವು ಬರೆಯಲ್ಪಟ್ಟಿದೆ.

ಮತ್ತೆ ಕೇಶೀನಾಮಕ ತೃಣಾ
ವರ್ತಸಮ ಲವಣಾಸುರನು ಒಂ
ಭತ್ತು ನೀಚಾರಿಷ್ಟನಾಮಕ ಪಂಚಗುಣದಿಂದ ॥
ದೈತ್ಯನುತ್ತಮ ಹಂಸಡಿಭಿಕ ಪ್ರ
ಮತ್ತವೇನನು ಪೌಂಡ್ರಕನು ಒಂ
ಭತ್ತು ಗುಣದಿಂದಧಮ ಮೂವರು ಲವಣನಾಮಕಗೆ ॥೧೭॥

ಪದ್ಯಾರ್ಥ.— ಮತ್ತೆ, ಕೇಶೀನಾಮಕ = ಕೇಶೀ ಎಂಬ ದೈತ್ಯನೂ, ತೃಣಾವರ್ತ=ತೃಣಾವರ್ತನೆಂಬ ದೈತ್ಯನೂ ಸಮರು, ಇವರಿಗಿಂತಲೂ ಲವಣಾಸುರನು, ಒಂಭತ್ತುನೀಚ-೧೦ ಗುಣ ನೀಚನು, ಅವನಗಿಂತಲೂ ಪಂಚಗುಣದಿಂದ=೫ ಗುಣಗಳಿಂದ, ಅರಿಷ್ಟನಾಮಕ=ಅರಿಷ್ಟನೆಂಬ ದೈತ್ಯನು

ನೀಚನು, ದೈತ್ಯಸತ್ತಮ=ದೈತ್ಯಶ್ರೇಷ್ಠನಾದ ಹಂಸ, ಡಿಭಿಕ, ಪ್ರಮತ್ತ=ಮದೋನ್ಮತ್ತನಾದ, ವೇನನು-ವೇನಾತ್ಮಕನಾದ, ಪೌಂಡ್ರಕನು=ಪೌಂಡ್ರಕ ವಾಸುದೇವನು, ಇವರು ಮೂವರು ಲವಣನಾಮಕಗೆ-ಲವಣಾಸುರನಿಗೆ, ಒಂಭತ್ತುಗುಣದಿಂದಧಮ=೯ ಗುಣಗಳಿಂದ ಅಧಮರೆನಿಸುವರು.

ತಾತ್ಪರ್ಯ.—ಕೇಶೀ, ತೃಣಾವರ್ತ ಇವರಿಬ್ಬರೂ ಸಮರು. ಇವರಿಗಿಂತಲೂ ಲವಣಾಸುರನು ೧೦ ಗುಣಗಳಿಂದ ನೀಚನು. ಅವನಿಗಿಂತಲೂ ೫ ಗುಣಗಳಿಂದ ಅರಿಷ್ಟಾಸುರನು ನೀಚನು. ಇವನಿಗಿಂತಲೂ ಹಂಸ, ಡಿಭಿಕ, ವೇನಾವತಾರನಾದ ಪೌಂಡ್ರಕ, ವಾಸುದೇವ ಇವರು ಮೂವರು ೯ ಗುಣಗಳಿಂದ ಅಧಮರು. ತಮ್ಮೊಳಗೆ ಸಮರು. "ಪಾಪೋವೇನಃ ಪೌಂಡ್ರಕೋ ವಾಸುದೇವಃ" ಎಂಬ ನಿರ್ಣಯ ವಾಕ್ಯವು ವೇನಾಸುರನೇ ಪೌಂಡ್ರಕನೆಂಬ ವಿಷಯದಲ್ಲಿ ಆಧಾರವಾಗಿರುವುದು. ಕಲಿ ಮೊದಲಾದ ಹೆಸರಿನಿಂದ ಮತ್ತು ಕೆಲವು ದೈತ್ಯರು ಇರುವರೆಂದು ೯ನೆಯ ಪದ್ಯದ ಅರ್ಥದಲ್ಲಿ ಬರೆದಿದೆ. ಅದರಂತೆ ಈ ಪದ್ಯದಲ್ಲಿ ಹೇಳಿದ ಹಂಸ, ಡಿಭಿಕರು ಮಧುಕೈಟಭಾತ್ಮಕರಾದ ಹಂಸಡಿಭಿಕರಲ್ಲದೇ ಬೇರೆಯಾಗಿ ಆ ಹೆಸರುಳ್ಳವರೆಂದು ತಿಳಿಯಬೇಕು. ಮಧುಕೈಟಭರನ್ನು ಮೇಲಿನ ೧೩ ನೆಯ ಪದ್ಯದಲ್ಲಿ ಕಾಲನೇಮಿಗೆ ೫ ಗುಣದಿಂದಧಮರೆಂದು ಹೇಳಿರುವರು. ಅವರೇ ಹಂಸಡಿಭಿಕರೆಂದು ಅದೇ ಪದ್ಯದಲ್ಲಿ ಹೇಳಿದುದರಿಂದ ತಾರತಮ್ಯದಲ್ಲಿ ಮಧುಕೈಟಭರಿಗೂ, ಹಂಸಡಿಭಿಕರಿಗೂ ಭೇದ ಹೇಳಲು ಸಾಧ್ಯವಿಲ್ಲ. ಈ ಪದ್ಯದಲ್ಲಿ ಅರಿಷ್ಟಾಸುರನಿಗಿಂತಲೂ ಹಂಸ ಡಿಭಿಕರು ನೀಚರೆಂದು ತಾರತಮ್ಯವನ್ನು ಹೇಳಿರುವುದರಿಂದ ಇವರು ಬೇರೆ ಅವರು ಬೇರೆ ಎಂದೇ ನಿಶ್ಚಯಿಸಬೇಕಾಯಿತು. "ಕೇಶೀ ದೈತ್ಯ ಸಮೋಜ್ಞೇಯೋ ತೃಣಾವರ್ತೋ ಮಹಾಸುರಃ ॥ ತಸ್ಮಾದ್ದಶಗುಣೈರ್ಹೀನೋ ಲವಣೋ ದೈತ್ಯ ಸತ್ತಮಃ ॥ ತಸ್ಮಾತ್ಪಂಚ ಗುಣೈರ್ಹೀನೋ ಅರಿಷ್ಟೋನಾಮ ಮಹಾಸುರಃ ॥ ತಸ್ಮಾನ್ನವಗುಣೈರ್ಹೀನೋ ಹಂಸೋನಾಮ ಮಹಾಸುರಃ ॥ ಡಿಭಿಕಸ್ತು ಸಮೋಜ್ಞೇಯೋ ತತ್ಸಮಃ ಪೌಂಡ್ರಕ ಸ್ಮೃತಃ ॥" ಎಂಬ ಗರುಡಪುರಾಣದ ಶ್ಲೋಕಾರ್ಥವೇ ಈ ಪದ್ಯದಲ್ಲಿರುವದು.

ಸೂಚನೆ.—ಈ ಪದ್ಯದಲ್ಲಿ ಕೆಲವು ಪುಸ್ತಕದಲ್ಲಿ ಪಾಠವ್ಯತ್ಯಾಸವು ಕಂಡುಬರುವುದು. "ಲವಣಾಸುರನ ಒಂಭತ್ತು" ಎಂತಲೂ, "ಪೌಂಡ್ರ

ಕನು ಒಂಭತ್ತು ” ಎಂತಲೂ ಇರುವದು. ಒಂಧತ್ತು ಎಂತಲೂ, ಒಂಭತ್ತು ಎಂತಲೂ ಕಮಲಾಪತಿದಾಸರ ವ್ಯಾಖ್ಯಾನ ಪುಸ್ತಕ ಪಾಠವಿರುವದು. ಈ ಪಾಠವು ಗರುಡಪುರಾಣ ವಾಕ್ಯಗಳಿಗೆ ಸರಿಹೋಗುವುದರಿಂದ ಈ ಪಾಠವೇ ಸಾಧುವೆಂದು ಕಾಣುತ್ತದೆ. ಆ ಗರುಡಪುರಾಣ ಶ್ಲೋಕವನ್ನು ಮೇಲೆ ಬರೆದಿದೆ. ಆ ಆಧಾರದಿಂದ ನಿಶ್ಚಯಿಸಬಹುದು.

ಈಶನೇ ನಾನೆಂಬ ಖಳ ದು
ಶ್ಶಾಸನಾ ವೃಷಸೇನ ದೈತ್ಯಾ
ಗ್ರೇಸರ ಜರಾಸಂಧ ಸಮಪಾಪಿಗಳೊಳತ್ಯಧಿಕ ||
ಕಂಸರೂಪ ವಿಕರ್ಣಸರಿ ರು
ಗ್ಮೀಶತಾಧಮ ರುಗ್ಮಿಗಿಂದ ಮ
ಹಾಸುರನು ಶತಧನ್ವಿ ಕಿರ್ಮೀರನು ಶತಾಧಮರು ||೧೫||

ಪದ್ಯಾರ್ಥ.—ಈಶನೇನಾನೆಂಬ=ಪರಮಾತ್ಮನೇ ನಾನೆಂದು ಹೇಳುವ, ಖಳ=ಪಾಪಿಯಾದ, ದುಶ್ಶಾಸನ, ವೃಷಸೇನ, ದೈತ್ಯಾಗ್ರೇಸರ=ದೈತ್ಯರಲ್ಲಿ ಅಗ್ರೇಸರನಾದ ಜರಾಸಂಧ ಇವರು ಮೂವರೂ ಸಮರು. ಪಾಪಿಗಳೊಳು ಅತ್ಯಧಿಕ=ಪಾಪಿಗಳಲ್ಲಿ ಮಹಾ ಪಾಪಿಗಳೆನಿಸುವರು, ಕಂಸ, ಕೂಪಕರ್ಣ ಕಂಸನೂ, ಕೂಪಕರ್ಣನೆಂಬ ದೈತ್ಯನೂ, ಸರಿ=ಸಮರು, ಇವರಿಗಿಂತ ರುಗ್ಮೀಶತಾಧಮನು=೧೦೦ಗುಣಾಧಮನು, ರುಗ್ಮಿಗಿಂದ, ಮಹಾಸುರನು=ಮಹಾದೈತ್ಯನಾದ ಶತಧನ್ವಿ, ಕಿರ್ಮೀರನು ಶತಾಧಮರು=೧೦೦ಗುಣಗಳಿಂದ ಅಧಮರು.

ತಾತ್ಪರ್ಯ.—ಪಾಪಿಯಾದ ದುಃಶಾಸನ, ವೃಷಸೇನ, ಜರಾಸಂಧ ಇವರು ಮೂವರೂ ಸಮರು. ಕಂಸನೂ, ಕೂಪಕರ್ಣನೂ ಸಮರು. ಇವರಿಗಿಂತಲೂ ರುಗ್ಮಿಯು ೧೦೦ ಗುಣಗಳಿಂದಧಮನು, ಅವನಿಗಿಂತಲೂ ಶತಧನ್ವೀ, ಕಿರ್ಮೀರರು ೧೦೦ ಗುಣಗಳಿಂದಧಮರು.

ಮದಿರಪಾನೀ ದೈತ್ಯಗಣ ದೊ
ಳಧಮರೆನಿಪರು ಕಾಲಿಕೇಯರು
ಅಧಿಕರಿಗೆ ಸಮರಹರು ದೇವಾವೇಶಬಲದಿಂದ ||
ವದನಪಾಣೀಪಾದ ಶ್ರೋತ್ರಿಯ
ಗುದ ಉಪಸ್ಥ ಘ್ರಾಣತ್ವಗ್ರಸನ
ಕಧಿಪ ದೈತ್ಯರು ನೀಚರೆನಿಪರು ಕಾಲಿಕೇಯರಿಗೆ ||೧೯||

ಪದ್ಯಾರ್ಥ.—ಮದಿರಪಾನೀದೈತ್ಯಗಣದೊಳು-ಮದ್ಯಪಾನಮಾಡುವ ದೈತ್ಯಗಣದೊಳಗೆ, ಕಾಲಿಕೇಯರು, ಅಧಮರೆನಿಸರು, ದೇವಾವೇಶಬಲ ದಿಂದ ಅಧಿಕರಿಗೆ ಸಮರಹರು-ಇವರಲ್ಲಿ ದೇವತಾವೇಶವು ಹೆಚ್ಚಾಗಿದ್ದಾಗ ತಮಗಿಂತಲೂ ಉತ್ತಮಕಕ್ಷ್ಯದವರಿಗೆ ಸಮರೆನಿಸುವರು. ವದನ=ವಾಕ್ಯ ಕ್ಕಭಿಮಾನೀ, ಪಾಣೀ=ಕೈಗಳು, ಪಾದ, ಶ್ರೋತ್ರಿಯ=ಕಿವಿಗಳು, ಗುದ, ಉಪಸ್ಥ=ಶಿಶ್ನ, ಘ್ರಾಣ=ಮೂಗು, ತ್ವಕ್=ಚರ್ಮ, ರಸನ-ನಾಲಿಗೆ ಇವು ಗಳಿಗೆ, ಅಧಿಪ-ಅಭಿಮಾನಿಗಳಾದ ದೈತ್ಯರು ಕಾಲಕೇಯರಿಗೆ ಒಬ್ಬೊಬ್ಬ ರೂ ೧೦೦—೧೦೦ ಗುಣಗಳಿಂದಧಮರೆನಿಸುವರು.

ತಾತ್ಪರ್ಯ.—ವದನಪಾಣಿ ಎಂಬೀ ಪದ್ಯದಿಂದ ದಾಸಾರ್ಯರು ಹೇಳಿ ರುವ ಇಂದ್ರಿಯಾಭಿಮಾನಿಗಳ ತಾರತಮ್ಯವನ್ನು ಈ ಪದ್ಯದಲ್ಲಿ ಹೇಳಿದ ಕ್ರಮದಿಂದ ಮುಖ, ಹಸ್ತ, ಪಾದ ಹೀಗೆ ತೆಗೆದುಕೊಂಡರೆ ಗರುಡಪುರಾಣ ವಾಕ್ಯಕ್ಕೂ ತಾರತಮ್ಯ ಚಿಂತಾಮಣಿ ಎಂಬ ಗ್ರಂಥಕ್ಕೂ ವಿರೋಧಬರುವುದು ದಾಸಾರ್ಯರ ಪದ್ಯದಲ್ಲಿ ಪ್ರಾಸಕೂಡುವುದಕ್ಕಾಗಿ ವದನಪಾಣೀ ಇತ್ಯಾದಿ ಪೆಸರನ್ನು ಹೇಳಿ ಮುಖ್ಯ ತಾತ್ಪರ್ಯ ಇಂದ್ರಿಯಾಭಿಮಾನಿ ದೈತ್ಯರು ಕಾಲ ಕೇಯರಿಗೆ ನೀಚರೆಂದು ಹೇಳುತ್ತಾರೆ. ಇದಕ್ಕೆ ಅರ್ಥವನ್ನು ಗರುಡಪುರಾಣ ವಾಕ್ಯದಂತೆ ಈ ಪದಗಳನ್ನು ಅನ್ವಯ ಮಾಡಿಕೊಳ್ಳಬೇಕು. ಅದೆಂತೆನೆ— ಗರುಡಪುರಾಣ ವಾಕ್ಯ "ತಸ್ಮಾಚ್ಛತ ಗುಣೈರ್ಹೀನೋ ಚಿತ್ತಮಾನ್ಯಸುರೋ ಮಹಾನ್ ॥ ಶರೀರಸ್ಯಾಭಿ ಮಾನೀತು ತಸ್ಮಾಚ್ಛತ ಗುಣಾಧಮಃ ॥ ತಸ್ಮಾಚ್ಛತ ಗುಣೈರ್ಹೀನೋ ಹಸ್ತಮಾನ್ಯ ಸುರೋ ಮಹಾನ್ ॥ ತಸ್ಮಾಚ್ಛತ ಗುಣೈರ್ಹೀ ನೋ ಪಾದಮನ್ಯ ಸುರೋಮಹಾನ್ ॥ ಶ್ರೋತ್ರೇಂದ್ರಿಯಾಭಿಮಾನೀತು ತ ಸ್ಮಾಚ್ಛತ ಗುಣಾಧಮಃ ॥ ಚಕ್ಷುರಿಂದ್ರಿಯ ಮಾನೀತು ತಸ್ಮಾಚ್ಛತ ಗುಣಾ ಧಮಃ ॥ ತಸ್ಮಾಚ್ಛತ ಗುಣೈರ್ನ್ಯೂನೋ ಸ್ಪರ್ಶಮಾನ್ಯ ಸುರೋಮಹಾನ್ ॥ ತಸ್ಮಾಚ್ಛತ ಗುಣೈರ್ನ್ಯೂನೋ ಘ್ರಾಣಮಾನ್ಯ ಸುರೋಮಹಾನ್ ॥ ತಸ್ಮಾಚ್ಛತ ಗುಣೈರ್ನ್ಯೂನೋ ಘ್ರಾಣಮಾನ್ಯ ಸುರೋಮಹಾನ್ ॥ ತಸ್ಮಾಚ್ಛತಗುಣೈರ್ನ್ಯೂ ನೋ ವಾಙ್ಮಾನೀಹ್ಯ ಸುರೋಮಹಾನ್ ॥ ತಸ್ಮಾಚ್ಛತ ಗುಣೈರ್ಹೀನೋ ಶಿಶ್ನ ಮಾನ್ಯ ಸುರೋ ಮಹಾನ್" ಕಾಲಕೇಯರಿಗಿಂತಲೂ ಚಿತ್ತಮಾನಿಯಾದ ದೈತ್ಯನು ೧೦೦ಗುಣಾಧಮನು. ಅವನಿಗಿಂತಲೂ ಹಸ್ತಮಾನಿಯು ಅಧಮನು

ಅವನಕಿಂತಲೂ ಪಾದಮಾನಿಯು ೧೦೦ ಗುಣಾಧಮನು. ಅವನಕಿಂತಲೂ ಶ್ರೋತ್ರೇಂದ್ರಿಯಾಭಿಮಾನಿಯು ೧೦೦ ಗುಣಾಧಮನು. ಅವನಕಿಂತಲೂ ಚಕ್ಷುರಭಿಮಾನಿಯು ೧೦೦ ಗುಣಾಧಮನು. ಅವನಕಿಂತಲೂ ಸ್ಪರ್ಶಮಾನಿಯೂ, ಅವನಕಿಂತಲೂ ಘ್ರಾಣಮಾನಿಯೂ ಅವನಕಿಂತಲೂ ವಾಕ್ಯಾಭಿಮಾನಿಯೂ, ಅವನಕಿಂತಲೂ ಶಿಶ್ನಾಭಿಮಾನಿಯೂ ೧೦೦-೧೦೦ ಗುಣಗಳಿಂದ ಅಧಮರೆಂದು ತಿಳಿಯಬೇಕು. ಪದ್ಯದಲ್ಲಿರುವ ಪದಗಳನ್ನು ಇದರಂತೆ ಅನ್ವಯಿಸಬೇಕೆಂಬ ತಾತ್ಪರ್ಯ. ಕೆಲವು ದೈತ್ಯರ ತಾರತಮ್ಯವನ್ನು ಕೆಲವು ಕಡೆ ಹೆಚ್ಚು ಕಡಿಮೆ ಹೇಳಿರುವದುಂಟು. ಅದರ ಕಾರಣವೇನೆಂದರೆ, "ಅಧಮಾನಾಂತುದೈತ್ಯಾನಾ ಮುತ್ತಮೆಸ್ವಾಮ್ಯಮುಚ್ಯತೆ || ತತ್ರಾವೇಶಾಚ್ಚವಿಜ್ಞೇಯಂ ದೇವಾನಾಂ ನಾತ್ರಸಂಶಯಃ ||" ಅಧಮರಾದ ದೈತ್ಯರನ್ನು ಕೆಲವು ಸ್ಥಳಗಳಲ್ಲಿ ಉತ್ತಮ ಗಣದಲ್ಲಿ ಶೇರಿಸುವುದುಂಟು. ಅಲ್ಲಿ ದೇವಾವೇಶಬಲದಿಂದ ಹಾಗೆ ಹೇಳಿರುವರೆಂದು ತಿಳಿಯಬೇಕು ಎಂಬ ಗರುಡಪುರಾಣವಾಕ್ಯದಿಂದ ಹೆಚ್ಚು ಕಮ್ಮಿಯಾದ ವಿರೋಧವನ್ನು ಪರಿಹಾರಮಾಡಿಕೊಳ್ಳಬೇಕು

**ಜ್ಞಾನಕರ್ಮೇಂದ್ರಿಯಗಳಿಗೆ ಅಭಿ**
**ಮಾನಿ ಕಲ್ಯಾದ್ಯಖಿಳ ದಿತಿಜರು**
**ಹೀನಕರ್ಮವ ಮಾಡಿಮಾಡಿಸುತಿಹರು ಸರ್ವರೊಳು ||**
**ವಾಣಿಭಾರತಿ ಕಮಲಭವ ಪವ**
**ಮಾನರಿವರಚ್ಛಿನ್ನ ಭಕ್ತರು**
**ಪ್ರಾಣ ಅಸುರಾವೇಶರಹಿತರು ಅಖಣಾತ್ಮಸಮ ||೨೦||**

ಪದ್ಯಾರ್ಥ.—ಜ್ಞಾನಕರ್ಮೇಂದ್ರಿಯಗಳಿಗೆ-ಕಣ್ಣು ಮೊದಲಾದ ಜ್ಞಾನೇಂದ್ರಿಯಗಳು, ವಾಕ್ ಮೊದಲಾದ ಕರ್ಮೇಂದ್ರಿಯಗಳಿಗೆ, ಅಭಿಮಾನಿ=ಅಭಿಮಾನಿಗಳಾದ, ಕಲ್ಯಾದಿ=ಕಲಿ ಮೊದಲಾದ, ಅಖಿಳದೈತ್ಯರು, ಹೀನಕರ್ಮವಮಾಡಿಮಾಡಿಸುತ=ಪಾಪ ಕರ್ಮಗಳನ್ನು ಮಾಡಿ, ಜೀವರಿಂದಲೂ ಮಾಡಿಸುತ್ತಾ ಸರ್ವರೊಳು ಇರುತಿಹರು. ವಾಣಿ=ಸರಸ್ವತೀದೇವಿಯರು, ಭಾರತಿ=ಭಾರತೀದೇವಿಯರು, ಕಮಲಭವ-ಬ್ರಹ್ಮದೇವರು, ಪವಮಾನರು-ವಾಯುದೇವರು ಇವರು ನಾಲ್ವರೂ, ಅಚ್ಛಿನ್ನಭಕ್ತರು=ಮಧ್ಯದಲ್ಲಿ ಬಿಟ್ಟು

ಹೋಗದ ಯಾವಾಗಲೂ ಒಂದೇ ರೀತಿಯಾದ ಭಕ್ತಿಯುಳ್ಳವರು. ಪ್ರಾಣ= ಪ್ರಾಣದೇವರು ಮೊದಲಾದ ನಾಲ್ವರೂ ಅಸುರಾವೇಶರಹಿತರು=ಅಸುರಾ ವೇಶವಿಲ್ಲದವರು. ಅಖಣಾಶ್ಮಸಮ=ಭಂಗಾರದ ಗುಣವನ್ನು ತೋರಿಸುವು ದಕ್ಕೆ ಒರೆಗಲ್ಲು ಇದ್ದಂತೆ ಭಗವಂತನ ಗುಣವನ್ನು ಪ್ರಕಟನೆ ಮಾಡುವ ವಿಷ ಯದಲ್ಲಿ ವಾಯುದೇವರು ಒರೆಗಲ್ಲಿನಂತಿರುವರು.

ತಾತ್ಪರ್ಯ.—ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಅಭಿಮಾನಿಗ ಳಾದ ದೈತ್ಯರು ಎಲ್ಲರಲ್ಲೂ ಇದ್ದು ಪಾಪ ಕರ್ಮಗಳನ್ನು ಮಾಡಿ ಮಾಡಿಸು ವರು. ತತ್ವಾಭಿಮಾನಿ ದೇವತೆಗಳು ದೇಹದೊಳಗಿರಲು ಇವರು ಪಾಪಗ ಳನ್ನು ಮಾಡಿ ಮಾಡಿಸುವದು ಹೇಗೆಂದರೆ, ಋದ್ರದೇವರು ಮೊದಲಾದ ತತ್ವೇಶರೆಲ್ಲರೂ ಕಲ್ಯಾದಿಗಳಿಂದ ಪ್ರೇರಿತರಾಗಿ ಅವರೂ ಪಾಪ ಕರ್ಮಗಳ ನ್ನನುಮೋದಿಸುವರು. ಗರುಡಪುರಾಣ ವಾಕ್ಯ, " ಕಲ್ಯಾದ್ಯೈಃ ಪ್ರೇರಿತಾಃ ಸರ್ವೇಽಋದ್ರಾದ್ಯಾಪ್ಯಧಿಕಾರಿಣಃ || ಕದಾಚಿತ್ಸ್ವವಿರುದ್ಧಂಚ ಕುರ್ವಂತಿತವ ಸತ್ತಮ || " ಕಲ್ಯಾದಿಗಳಿಂದ ಪ್ರೇರಿತರಾಗಿ ಋದ್ರಾದಿಗಳು ಕೆಲವು ಕಾಲ ದಲ್ಲಿ ನಿನಗೆ ವಿರುದ್ಧವಾದ ಕಾರ್ಯವನ್ನು ಮಾಡುವುದುಂಟು ಎಂದು ಹೇಳಿ ರುವರು. ಸರಸ್ವತೀ, ಭಾರತೀ, ಬ್ರಹ್ಮದೇವರು, ವಾಯುದೇವರು ಇವ ರಿಗೆ ಮಾತ್ರ ಅಸುರಾವೇಶವಿಲ್ಲ. " ಪ್ರಾಣಸ್ಯನಾಸುರಾವೇಶೋ ಅಖಣಾ ಶ್ಮಸಮೋಹಿಸಃ " ಪ್ರಾಣದೇವರಿಗೆ ಅಸುರಾವೇಶವಿಲ್ಲ. ಅವರು ಭಗವ ತ್ಸ್ವರೂಪವನ್ನು ತೋರಿಸುವುದರಲ್ಲಿ ಒರೆಗಲ್ಲಿನಂತೆ ಇರುವರು. ಎಂಬ ಭಾಗ ವತ ಏಕಾದಶಸ್ಕಂಧ ತಾತ್ಪರ್ಯ ವಾಕ್ಯದಿಂದ ಮೇಲಿನ ಅರ್ಥವು ಸಿದ್ಧ ವಾಗುವದು.

ಹುತವಹಾಕ್ಷಾದ್ಯಮರರೆಲ್ಲರು
ಯುತರು ಕಲ್ಯಾವೇಶ ವಿಧಿ ಮಾ
ರುತಿ ಸರಸ್ವತಿ ಭಾರತೀರವತಾರದೊಳಗಿಲ್ಲ ।
ಕೃತಪುಟಾಂಜಲಿಯಿಂದ ತನ್ನಯ
ಪಿತನ ಸನ್ಮುಖದಲ್ಲಿ ನಿಂದಾ
ನತಿಸಿ ಬಿನ್ನೈಸಿದನು ಎನ್ನೊಳು ಕೃಪೆಯಮಾಡೆಂದು ॥೨೧॥

ಪದ್ಯಾರ್ಥ.-ಹುತವಹಾಕ್ಷಾದಿ=ಅಗ್ನಿನೇತ್ರರಾದ ಋದ್ರದೇವರು ಮೊ ದಲಾದ, ಅಮರರೆಲ್ಲರು=ದೇವತೆಗಳೆಲ್ಲರು, ಕಲ್ಯಾವೇಶಯುತರು=ಕಲಿಯ

ಆವೇಶ ಉಳ್ಳವರು. ವಿಧಿ-ಬ್ರಹ್ಮದೇವರು, ಮಾರುತಿ - ವಾಯುದೇವರ ಅವತಾರರಾದ ಹನುಮದ್ಭೀಮ ಮಧ್ವಾದಿಗಳು, ಸರಸ್ವತಿ, ಭಾರತೀರವ ತಾರರೊಳಗೆ=ಭಾರತಿಯರ ಅವತಾರರಾದ ದ್ರೌಪದಿ ಮೊದಲಾದವರಲ್ಲೂ, ಇಲ್ಲ=ಕಲಿ ಪ್ರವೇಶವು ಇಲ್ಲ. ಕೃತಪುಟಾಂಜಲಿಯಿಂದ - ಬ್ರಹ್ಮದೇವರು ಬದ್ಧಾಂಜಲಿ ಪುಟರಾಗಿ ( ಕೈಮುಗಿದು ) ತನ್ನಯ, ಪಿತನ ಸಮ್ಮುಖದಲ್ಲಿ ನಿಂದು, ಅನತಿಸಿ ಚೆನ್ನಾಗಿ ನಮಸ್ಕಾರಮಾಡಿ, ಎನ್ನೊಳು ಕೃಪೆಯ ಮಾ ಡೆಂದು ಬಿನ್ನೈಸಿದನು.

ತಾತ್ಪರ್ಯ—ಖದ್ರಾದಿ ಸಕಲ ದೇವತೆಗಳಲ್ಲೂ ಕಲಿಯ ಆವೇಶ ವಿರುವದು. ಬ್ರಹ್ಮದೇವರು, ಸರಸ್ವತೀ, ಭಾರತಿ ಇವರಿಗೆ ಮೂಲರೂಪ ದಲ್ಲೂ ಅವತಾರಗಳಲ್ಲೂ ಸಹ ಕಲಿ ಪ್ರವೇಶವಿಲ್ಲ. ಈ ವಿಷಯವನ್ನೆಲ್ಲಾ ಬ್ರಹ್ಮದೇವರು ಪರಮಾತ್ಮನ ಸ್ತೋತ್ರ ಮಾಡುವ ಪ್ರಕರಣದಲ್ಲಿ ದೈತ್ಯರ ತಾರತಮ್ಯ ಮೊದಲಾದವುಗಳನ್ನು ಬಿನ್ನೈಸಿ ಕಡೆಗೆ ಕೈಮುಗಿದು ನಮಸ್ಕ ರಿಸಿ ಅಚ್ಛಿನ್ನಭಕ್ತನಾದ ನನ್ನಲ್ಲಿ ಕೃಪೆಯುಮಾಡೆಂದು ಬೇಡಿಕೊಂಡರು. ಇವೆ ಲ್ಲವೂ ಗರುಡಪುರಾಣದ " ತ್ವಯಿಹ್ಯಚ್ಛಿನ್ನ ಭಕ್ತಾಯ ದಯಾಂಕುರುಮಹಾ ಪ್ರಭೋ || ಇತಿ ಸ್ತುತ್ವಾಹರಿಂ ಬ್ರಹ್ಮಾಪ್ರಾಂಜಲಿಃ ಸ್ಥಿತ ಅಗ್ರತಃ " ಎಂಬ ವಾಕ್ಯದಿಂದ ಸಿದ್ಧವಾಗುವುದು.

ವಿಶೇಷಾರ್ಥ.—ಖದ್ರಾದಿಗಳಿಗೆ ಕಲ್ಯಾವೇಶ ಉಂಟೆಂತಲೂ ವಾಯು ಮೊದಲಾದ ನಾಲ್ವರಿಗೆ ಮಾತ್ರ ಇಲ್ಲವೆಂಬ ವಿಷಯದಲ್ಲಿ ಇರುವ ಆಧಾರವು ಸ್ವಲ್ಪ ಬರೆಯಲ್ಪಡುತ್ತೆ. ಅದೆಂತೆನೆ.—ನಿರ್ಣಯ ೧೮ನೆಯ ಅಧ್ಯಾಯದಲ್ಲಿ " ಶುದ್ಧೇ ಭಾಗವತೇ ಧರ್ಮೇ ನಿರತೋ ಯದ್ವೃಕೋದರಃ " ಎಂಬ ೫ನೆಯ ಶ್ಲೋಕ ಮೊದಲು, ತಸ್ಮಾದೇಕೋ ವಾಯುರೇವ ಧರ್ಮೇ ಭಾಗವತೇಸ್ಥಿತಃ ಲಕ್ಷ್ಮೀ ಸರಸ್ವತೀ ಚೇತಿ ಪರಶುಕ್ಲತ್ರಯಂಸ್ಮೃತಂ" ಎಂಬ ೨೮ನೆಯ ಶ್ಲೋಕದ ವರೆವಿಗೂ ಈ ವಿಷಯವನ್ನು ಹೇಳಿರುವರು. ಗ್ರಂಥ ವಿಸ್ತಾರಭಯದಿಂದ ಆ ಶ್ಲೋಕಗಳನ್ನು ಬರೆಯದೆ ಅದರ ತಾತ್ಪರ್ಯ ಮಾ ತ್ರ ಇಲ್ಲಿ ಸೂಚಿಸುತ್ತೇವೆ. " ಶುದ್ಧವಾದ ಭಾಗವತಧರ್ಮದಲ್ಲಿ ನಿರತರಾದ ವರು ಭೀಮಸೇನದೇವರೊಬ್ಬರೆ. ಆದುದರಿಂದ ಅವರು ಯಾವ ಕಾಲದಲ್ಲೂ ಕಾಮ್ಯಕರ್ಮವನ್ನು ಅನುಷ್ಠಾನ ಮಾಡಲಿಲ್ಲ. ಯಾವ ವಿಧದಿಂದಲಾದರೂ

ದೇವತೆಗಳನ್ನಾಗಲಿ, ಮನುಷ್ಯರನ್ನಾಗಲಿ ಯಾವುದನ್ನೂ ಯಾಚಿಸಲಿಲ್ಲ. ಫಲಾಪೇಕ್ಷೆಯಿಂದ ಶ್ರೀಹರಿಯನ್ನಾದರೂ ಒಂದು ಕಾಲದಲ್ಲೂ ಆರಾಧಿಸಲಿಲ್ಲ ಏಕಚಕ್ರಾನಗರದಲ್ಲಿದ್ದು ಬಿಕ್ಷೆಬೇಡಿದ ಕಾಲದಲ್ಲೂ ಹುಂಕಾರ ಮಾಡಿ ವೈಶ್ಯರಿಂದ ರಾಜರು ಕಪ್ಪವನ್ನು ಬಲಾತ್ಕಾರದಿಂದ ತೆಗೆದುಕೊಳ್ಳುವಂತೆ ಭಿಕ್ಷೆಯನ್ನು ತೆಗೆದುಕೊಳ್ಳುತ್ತಿದ್ದರು. ಅನ್ಯದೇವತೆಗಳನ್ನು ಎಂದಿಗೂ ನಮಸ್ಕಾರಮಾಡಲಿಲ್ಲ. ಕೃಷ್ಣನನ್ನು ಹೊರತು ಮತ್ತೊಬ್ಬರನ್ನು ಪೂಜಿಸಲಿಲ್ಲ. ಪರಮಾತ್ಮನಿಗೆ ವಿರುದ್ಧವಾದ ಕಾರ್ಯವನ್ನೂ, ಎಂದಿಗೂ ಮಾಡಲಿಲ್ಲ. ನಿರಾಯುಧರ ಮೇಲೆ ಆಯುಧಪಾಣಿಯಾಗಿ ಯುದ್ಧಕ್ಕೆ ಹೋಗಲಿಲ್ಲ. ಯುದ್ಧಮಾಡುವ ಕಾಲದಲ್ಲಿ ಹಿಂದಿರುಗಲಿಲ್ಲ. ಕಪಟಯುದ್ಧವನ್ನು ಮಾಡಲಿಲ್ಲ. ಅವೈಷ್ಣವನಾದ ದುರ್ಯೋಧನನಿಗೆ ಅವನು ಮೃತನಾದಮೇಲೆ ಅವನ ಸಂಸ್ಕಾರಕ್ಕಾಗಿ ಧೃತರಾಷ್ಟ್ರನು ದ್ರವ್ಯವನ್ನು ಬೇಡಲು ಒಂದು ಕಾಸೂ ಕೊಡಗೊಡಿಸಲಿಲ್ಲ. ಅಂತ್ಯ ಕರ್ಮವನ್ನು ಮಾಡುವ ಅನುಮತಿಯೂ ಕೊಟ್ಟಿಲ್ಲ. ತಾವೂ ಮಾಡಲಿಲ್ಲ. ದುರ್ಯೋಧನಾದಿಗಳಿಗೆ ಪ್ರಿಯವನ್ನೂ ಕೂಡ ಎಂದಿಗೂ ಮಾಡಲಿಲ್ಲ. ಅವೈಷ್ಣವರ ಕೂಡ ಸಖ್ಯವನ್ನು ಮಾಡಲಿಲ್ಲ. ಯಾವನಾದರೂ ಪರಮಾತ್ಮನು ಎದುರಿಗೆ ಇಲ್ಲದ ಕಾಲದಲ್ಲಾದರೂ ತನ್ನ ಎದುರಿಗೆ ಕೃಷ್ಣನನ್ನು ದೂಷಿಸಿದರೆ ಅವನ ನಾಲಿಗೆಯನ್ನು ಕತ್ತರಿಸುತ್ತಿದ್ದರು. ಧರ್ಮಜ್ಞಾನ ವಿಷಯದಲ್ಲಿ ಸಂಶಯವೆಂದಿಗೂ ಇರಲಿಲ್ಲ. ತನ್ನ ವಿದ್ಯೆಯಿಂದ ತಾನು ಬದುಕುವ ಪ್ರಯತ್ನವನ್ನು ಮಾಡಲಿಲ್ಲ. ಆದುದರಿಂದಲೆ ನಹುಷರಾಜನು ಸರ್ಪನಾಗಿದ್ದು ಭೀಮಸೇನದೇವರನ್ನು ನುಂಗುತ್ತಾ ಬಂದಾಗಲೂ, ಯಮಧರ್ಮನು ಯಕ್ಷರೂಪದಿಂದ ಬಂದಾಗಲೂ, ತಮ್ಮ ಪ್ರಾಣವನ್ನುಳಿಸಿಕೊಳ್ಳುವದಕ್ಕಾಗಿ ಅವರು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೊಡಲಿಲ್ಲ. ಅಸ್ತ್ರಾಭಿಮಾನಿ ದೇವತಾ ಪ್ರಾರ್ಥನರೂಪವಾದ ಅಸ್ತ್ರಯುದ್ಧವನ್ನು ಮಾಡಲಿಲ್ಲ. ಕೃಷ್ಣನ ಅಪ್ಪಣೆಯಮೇರಿಗೆ ಅಶ್ವತ್ಥಾಮಾಚಾರ್ಯರು ಹಾಕಿದ ಅಸ್ತ್ರಗಳಿಗೆ ಪ್ರತ್ಯಸ್ತ್ರವನ್ನು ಹಾಕಿ ಅವರಸ್ತ್ರವನ್ನು ಶಾಂತಿ ಮಾಡಿದರು. ಅಲಂಬಸನೆಂಬ ರಾಕ್ಷಸನು ಅದೃಶ್ಯನಾಗಿ ಯುದ್ಧ ಮಾಡಿದಾಗ ಕೃಷ್ಣನ ಅಪ್ಪಣೆಯಂತೆ ಅಸ್ತ್ರಯುದ್ಧದಲ್ಲಿ ಅವನನ್ನು ಪರಾಜಿತನನ್ನಾಗಿ ಮಾಡಿಸಿದರು ಕೃಷ್ಣನು ಇಷ್ಟವಿಲ್ಲದ ಭೀಮಸೇನದೇವರಿಂದ ಬಲಾತ್ಕಾರವಾಗಿ ಅಸ್ತ್ರಯುದ್ಧವನ್ನೇತಕ್ಕೆ ಮಾಡಿಸಿದನೆಂದರೆ, ಅಶ್ವತ್ಥಾಮಾಚಾರ್ಯರಿಗೆ ಸಮವಾಗಿ

ಅಸ್ತ್ರಯುದ್ಧವನ್ನು ಮಾಡಬೇಕಾದರೆ ಅರ್ಜುನನನ್ನು ಬಿಟ್ಟರೆ ಮತ್ತಾರೂ ಇಲ್ಲವೆಂದು ಪ್ರಖ್ಯಾತಿ ಇತ್ತು. ಭೀಮಸೇನದೇವರು ಅಸ್ತ್ರಯುದ್ಧದಲ್ಲಿ ಸಮರ್ಥರಲ್ಲವೆಂದು ಅಂದುಕೊಳ್ಳುತ್ತಿದ್ದರು. ಅವರು ಸರ್ವಜ್ಞರೆಂದು ಜನರಿಗೆ ತೋರ್ಪಡಿಸುವ ಉದ್ದೇಶವಾಗಿ ಅಶ್ವತ್ಥಾಮನು ಮತ್ತು ಅಲಂಬುಸ ಇವರ ಸಂಗಡ ಅಸ್ತ್ರಯುದ್ಧವನ್ನು ಮಾಡುವಂತೆ ಶ್ರೀಕೃಷ್ಣನು ಅಪ್ಪಣೆಯನ್ನಿತ್ತನು ಆಗಲೂ ಅಸ್ತ್ರಾಭಿಮಾನಿದೇವತೆಗಳಿಗೆ ಅಪ್ಪಣೆಯನ್ನು ಕೊಟ್ಟು ಯುದ್ಧ ಮಾಡಿದರೇ ಹೊರತು ಆಗಲೀ ಅಸ್ತ್ರಾಭಿಮಾನಗಳನ್ನು ಬೇಡಿಕೊಳ್ಳಲಿಲ್ಲ. ದೇವತೆಗಳು ಪ್ರತ್ಯಕ್ಷವಾಗಿ ಬಂದಾಗಲೂ, ಬಂಧು ಜ್ಯೇಷ್ಠರಲ್ಲೂ ಲೋಕದಲ್ಲಿ ಮರ್ಯಾದೆಯನ್ನು ಉಳಿಸುವುದಕ್ಕಾಗಿ ನಮಸ್ಕಾರಮಾಡಬೇಕೆಂದು ಶ್ರೀಕೃಷ್ಣನು ವಿಧಿಸಿದನು. ಆಗಲೂ ಅವರಂತರ್ಯಾಮಿಯಾದ ವಿಷ್ಣುವಿಗೇ ನಮಸ್ಕಾರವನ್ನು ಮಾಡಿರುವರು. ಈ ಭೀಮಸೇನದೇವರನ್ನನುಸರಿಸಿ ಭಾರತೀದೇವಿಯರ ಮಾತ್ರ ಇರುತ್ತಿದ್ದರು. ತನ್ನ ಕ್ಷೇಮಕ್ಕೋಸ್ಕರ ಧೃತರಾಷ್ಟ್ರನಿಂದಲೂ ಕೂಡ ವರವನ್ನು ಬೇಡಲಿಲ್ಲ. ಮಹಾ ಆಪತ್ಕಾಲದಲ್ಲಾದರೂ ದುರ್ಯೋಧನಾದಿಗಳನ್ನು ಶಪಿಸಲಿಲ್ಲ. ಯಾವ ಕಾಲದಲ್ಲೂ ಮನಸಾವಾಚಾ ಶ್ರೀಪರಮಾತ್ಮನಿಗೆ ವಿರೋಧವಾದ ಕಾರ್ಯವನ್ನು ಮಾಡಲಿಲ್ಲ. ಮಿಕ್ಕವರೆಲ್ಲರೂ ಭಿನ್ನಭಕ್ತರೆನಿಸುವರು. ಅಂದರೆ ಮಧ್ಯೇ ಭಕ್ತಿಗೆ ವಿಚ್ಛೇದಮಾಡಿಕೊಂಡಿರುವರು. ಅದು ಹೇಗೆಂದರೆ.—ಸ್ಯಮಂತಕ ಮಾಣಿಕ್ಯದ ವಿಷಯದಲ್ಲಿ ಕೃಷ್ಣನು ತನ್ನಲ್ಲಿಲ್ಲವೆಂದು ಸುಳ್ಳು ಹೇಳಿದುದಾಗಿ ಭಾವಿಸಿ ಬಲರಾಮನು ಕೃಷ್ಣನಲ್ಲಿ ವಿಮುಖನಾದನು. ಬ್ರಾಹ್ಮಣನ ಮಗುವನ್ನು ರಕ್ಷಣೆಮಾಡುವ ಕಾಲದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ತಿರಸ್ಕರಿಸಿದನು. ಪ್ರದ್ಯುಮ್ನ, ಸಾಂಬ ಉದ್ಧವ, ಅನಿರುದ್ಧ, ಮೊದಲಾದವರೆಲ್ಲರೂ ಸುಭದ್ರೆಯನ್ನು ಅರ್ಜುನನಿಗೆ ಕೊಡುವದು ಶ್ರೀಕೃಷ್ಣನಿಗೆ ಸಮ್ಮತವೆಂದು ತಿಳಿದಿದ್ದರೂ ಸುಭದ್ರಾಹರಣದಲ್ಲಿ ಅರ್ಜುನನೊಂದಿಗೆ ಯುದ್ಧವನ್ನು ಮಾಡಿ ಚೆನ್ನಾಗಿ ತಡೆದರು. ಒಂದು ಸಮಯದಲ್ಲಿ ಸಾತ್ಯಕಿಯು ಅರ್ಜುನನನ್ನು ಶ್ರೀಕೃಷ್ಣನಿಗೆ ಸಮನೆಂದು ತಿಳಿದನು. ಧರ್ಮರಾಜನು ಕೃಷ್ಣನನ್ನು ಸಾಧಾರಣ ಮನುಷ್ಯನೆಂದು ತಿಳಿದು ಜರಾಸಂಧನ ವಧವಿಷಯದಲ್ಲಿ ಭೀಮಸೇನಾದಿಗಳನ್ನು ಕಳುಹಿಸಲು ಭಯಪಟ್ಟನು. ಕೃಷ್ಣನು ಪಾಂಡವರಿಗೆ ದೂತನಾಗಿ ದುರ್ಯೋಧನನ ಸಭೆಗೆ ಹೋಗುವಾಗ ಕೃಷ್ಣನನ್ನು ಕಟ್ಟುವನೆಂಬಭಯದಿಂದ ವಿದುರನು,

ಕೃಷ್ಣನನ್ನು ಸಭೆಗೆ ಹೋಗಬೇಡವೆಂದನು. ನಕುಲನು ಕಪ್ಪವನ್ನು ಕೊಡೆಂದು ಕೃಷ್ಣನಿಗೆ ಹೇಳಿಕಳುಹಿಸಿದನು. ಸಹದೇವನು, ಕುರುಕುಲಕ್ಷಯಕ್ಕೆ ಕೃಷ್ಣನೇ ಕಾರಣನೆಂದು ಕೃಷ್ಣನ ಬುದ್ಧಿಯನ್ನು ಹೀನವೆಂದು ತಿಳಿದನು. ದೇವಕೀ ವಸುದೇವರು ಕೃಷ್ಣನನ್ನು ಮನುಷ್ಯನೆಂದು ತಿಳಿದರು. ಭೀಷ್ಮಾಚಾರ್ಯರು ಪರಶುರಾಮದೇವರನ್ನು ದೂಷಿಸಿದರು. ಅವರೊಂದಿಗೆ ಯುದ್ಧವನ್ನೂ ಮಾಡಿದರು. ದ್ರೋಣಾಚಾರ್ಯರು, ಕರ್ಣ, ಅಶ್ವತ್ಥಾಮಾಚಾರ್ಯರು, ಕೃಪಾಚಾರ್ಯರು ಇವರೆಲ್ಲರೂ ಕೃಷ್ಣನನ್ನು ಕೊಲ್ಲಬೇಕೆಂದು ಯೋಚಿಸಿದರು. ರುದ್ರ ಮೊದಲಾದ ದೇವತೆಗಳೂ ಸಹ ಕೆಲವು ಕಾಲದಲ್ಲಿ ಶ್ರೀಪರಮಾತ್ಮನಿಗೆ ವಿರೋಧವನ್ನು ಮಾಡಿರುವರು. ಹೀಗಿರಲು ಮತ್ತೆ ಋಷಿಗಳು ಮನುಷ್ಯರು ಗಂಧರ್ವರ ವಿಷಯದಲ್ಲಿ ಭಿನ್ನಭಕ್ತರೆಂದು ಹೇಳುವುದೇನು ? ಜನ್ಮಜನ್ಮಾಂತರದ ಅಜ್ಞಾನದಿಂದ ಪರಮಾತ್ಮನನ್ನು ಆಗಿಂದಾಗ್ಗೆ ತಿರಸ್ಕರಿಸುತ್ತಿರುವರು. ಆದುದರಿಂದ ವಾಯುದೇವರೊಬ್ಬನೇ ಶುದ್ಧ ಭಾಗವತ ಧರ್ಮನಿರತರೆಂದು ತಿಳಿಯಬೇಕು. ಮತ್ತು ಲಕ್ಷ್ಮೀದೇವಿಯರು ಸರಸ್ವತೀದೇವಿಯರು ಇವರು ಮೂವರೂ ಪರಶುಕ್ಲತ್ರಯರೆಂದು ಹೆಸರು ಪಡೆದವರು. ಅಂದರೆ ಅಸುರಾವೇಶವಿಲ್ಲದ ಶುದ್ಧ ಧರ್ಮ ಉಳ್ಳವರೂ, ಅವಿಚ್ಛಿನ್ನ ಭಕ್ತರೆಂದು ತಿಳಿಯಬೇಕು. ವಾಯುದೇವರನ್ನು ಹೇಳಿದಮೇಲೆ ಬ್ರಹ್ಮದೇವರನ್ನು ಹೇಳಿದಂತಾಯಿತು. ಸರಸ್ವತೀದೇವಿಯರನ್ನು ಹೇಳಿದುದರಿಂದ ಭಾರತೀದೇವಿಯರನ್ನು ಹೇಳಿದಂತಾಯಿತೆಂಬ ನಿಮಿತ್ತದಿಂದ ಪರಶುಕ್ಲತ್ರಯರೆಂದು ಹೇಳಿರುವರು. ಎಂಬೀ ನಿರ್ಣಯ ವಾಕ್ಯಗಳಿಂದ ಬ್ರಹ್ಮ, ವಾಯು, ಸರಸ್ವತಿ, ಭಾರತಿಯರು ಅವಿಚ್ಛಿನ್ನ ಭಕ್ತರೆಂತಲೂ, ಇವರುಗಳಿಗೆ ಕಲ್ಯಾವೇಶವಿಲ್ಲವೆಂತಲೂ, ರುದ್ರಾದಿ ಮಿಕ್ಕ ಎಲ್ಲರಲ್ಲೂ ಕಲಿಪ್ರವೇಶ ಉಂಟೆಂತಲೂ ಸ್ಪಷ್ಟಮಾಡಿದಂತಾಯಿತು.

ದ್ವೇಷಿ ದೈತ್ಯರ ತಾರತಮ್ಯದ
ದೂಷಣೆಯು ಭೂಷಣಗಳೆನ್ನದೆ
ದೋಷವೆಂಬುವ ದ್ವೇಷಿ ನಿಶ್ಚಯ ವಿವರ ನೋಡಲ್ಕೆ ।
ಕ್ಲೇಶಗಳನೈದುವಸು ಬಹುವಿಧ
ಸಂಶಯವು ಬಡಸಲ್ಲ ವೇದ
ವ್ಯಾಸ ಗರುಡಪುರಾಣದಲಿ ಪೇಳಿದನು ಋಷಿಗಳಿಗೆ ॥೨೨॥

ಪದ್ಯಾರ್ಥ.— ದ್ವೇಷಿ=ಭಗವದ್ವೇಷಿಯಾದ, ದೈತ್ಯರ ತಾರತಮ್ಯದ ದೂಷಣೆಯು, ಭೂಷಣಗಳೆನ್ನದೆ=ತಾರತಮ್ಯ ಪ್ರಕಾರ ದೈತ್ಯರನ್ನು ದೂಷಿಸುವುದೇ ಭೂಷಣವೆಂದರಿಯದೆ, ದೋಷವೆಂಬುವ-ದೈತ್ಯರನ್ನು ದೂಷಿಸುವದು ದೋಷವೆಂದು ಹೇಳುವವನು. ಇವರ ನೋಡಲ್ಕೆ = ಈ ದೈತ್ಯರನ್ನು ನೋಡಲಿಕ್ಕೆ ಅಂದರೆ ಅವರು ಹೇಗೆ ಭಗವದ್ವೇಷಿಗಳೋ ಹಾಗೆ ದೈತ್ಯರನ್ನು ದೂಷಿಸುವದು ಪಾಪವೆಂದು ಹೇಳುವವನೂ ಸಹ ಭಗವದ್ವೇಷಿ ಎಂದು ನಿಶ್ಚಯ. ಇವನೂ ಬಹು ವಿಧವಾದ ಕ್ಲೇಶಗಳನ್ನೈದುವನು. ಸಂಶಯವು ಬಡಸಲ್ಲ-ಸಂಶಯುಪಡಬೇಕಾದದು ಇಲ್ಲ. ಇವುಗಳನ್ನು ವೇದವ್ಯಾಸದೇವರು, ಗರುಡಪುರಾಣದಲ್ಲಿ ಋಷಿಗಳಿಗೆ ಪೇಳಿದನು.

ತಾತ್ಪರ್ಯ.— ದೇವತೆಗಳನ್ನು ಸ್ತೋತ್ರಮಾಡುವದು ಹೇಗೆ ಪುಣ್ಯಸಾಧನವೋ ಹಾಗೆ ಭಗವದ್ವೇಷಿಗಳಾದ ದೈತ್ಯರನ್ನು ದೂಷಿಸುವದೂ ಸಹ ಪುಣ್ಯ ಸಾಧನವು. ಹೀಗೆ ತಿಳಿಯದೆ ದೈತ್ಯರನ್ನು ದೂಷಿಸಿದರೆ ಪಾಪವೆಂದು ಯಾವನು ಹೇಳುವನೋ ಅವನೂ ಒಬ್ಬ ದೈತ್ಯನಂತೆ ಭಗವದ್ವೇಷಿ ಎಂದು ನಿಸ್ಸಂಶಯವಾಗಿ ತಿಳಿಯಬೇಕು. ಇವನಿಗೂ ದೈತ್ಯರಿಗೆ ಆಗುವ ಕಷ್ಟವೇ ಪ್ರಾಪ್ತವಾಗುವುದು. " ದೈತ್ಯನಿಂದಾಂನಕುರ್ವಂತಿ ತೇಪಿತತ್ಫಲಭಾಗಿನಃ " ಎಂಬ ಗರುಡಪುರಾಣ ವಾಕ್ಯವೇ ಇದಕ್ಕೆ ಆಧಾರವು. ಈ ವಿಷಯಗಳನ್ನು ಗರುಡಪುರಾಣದಲ್ಲಿ ವೇದವ್ಯಾಸದೇವರು ಹೇಳಿರುವರು-ಶೌನಕಾದಿಗಳಿಗೆ ವ್ಯಾಸ ಶಿಷ್ಯರಾದ ಸೂತರು ಇವುಗಳನ್ನು ಹೇಳಿರುವರು. ಅದನ್ನೇ ದಾಸಾರ್ಯರು ಇಲ್ಲಿ ಹೇಳಿರುತ್ತಾರೆಂಬ ತಾತ್ಪರ್ಯ.

ಜಾಲಿನೆಗ್ಗಲು ಕ್ಷುದ್ರಶಿಲೆ ಬರಿ
ಗಾಲಪುರುಷನ ಬಾಧಿಪವು ಚ
ರ್ಮ್ಮೊಳಗಯು ಮೆಟ್ಟಿದವಗುಂಟೆ, ಕಂಟಕಗಳ ಭಯವೂ ||
ಚೇಳುಸರ್ಪವ ಕೊಂದವಾರ್ತೆಯ
ಕೇಳಿ ಮೋದಿಪಗಿಲ್ಲವಭ ಯಮ
ನಾಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ ||೨೩||

ಪದ್ಯಾರ್ಥ.— ಜಾಲಿ = ಜಾಲಿಮುಳ್ಳು, ನೆಗ್ಗಿಲು - ನೆಗ್ಗಿಲುಮುಳ್ಳು, ಕ್ಷುದ್ರಶಿಲೆ=ಮುಳ್ಳಿನಂತಿರುವ ಸಣ್ಣ ಸಣ್ಣ ಕಲ್ಲುಗಳು ಇವುಗಳು, ಬರಿಗಾಲ

ಪುರುಷನ- ಕಾಲಿಗೆ ಒಂದು ಮೆಟ್ಟಿಕೊಳ್ಳದೆ ಬರೀ ಕಾಲಿನಿಂದ ನಡೆಯುವ ಮನುಷ್ಯನನ್ನು ಭಾದಿಸವು. ಚರ್ಮೋಳಗೆಯ=ಪಾದರಕ್ಷೆಯನ್ನು ಮೆಟ್ಟಿದ ವಗೆ, ಕಂಠಕಗಳಭಯವು- ಮುಳ್ಳುಗಳ ಭಯವು ಉಂಟೆ ? ಚೇಳು, ಸರ್ಪ ವ=ಹಾವನ್ನು ಕೊಂದ ವಾರ್ತೆಯನ್ನು ಕೇಳಿ, ಮೋದಿಪಗೆ=ಸಂತೋಷಪಡು ವವನಿಗೆ, ಅಘವಿಲ್ಲ=ಪಾಪವಿಲ್ಲ. ಅದರಂತೆ ದೈತ್ಯರನಿಂದಿಸುವ ನರಗೆ= ಮನುಷ್ಯನಿಗೆ, ಯಮನಾಳುಗಳ=ಯಮದೂತರು ಬಂದು ತನ್ನನ್ನು ಒಯ್ವಾ ರೆಂಬ ಬಯವು ಎಂದಿಗೂ ಇಲ್ಲ.

ತಾತ್ಪರ್ಯ — ಜಾಲಿಮುಳ್ಳು, ನೆಗ್ಗಿಲಮುಳ್ಳು, ಸಣ್ಣ ಕಲ್ಲುಗಳು ಮೊದಲಾದವುಗಳ ಬಾಧೆಯು ಬರೀ ಕಾಲಲ್ಲಿ ನಡೆಯುವವನಿಗೆ ಹೊರತು ಪಾದರಕ್ಷೆಯನ್ನು ಮೆಟ್ಟಿ ನಡಿಯುವವನಿಗೆ ಮುಳ್ಳುಗಳ ಭಯವು ಹೇಗಿಲ್ಲವೋ ಪರಮಾತ್ಮನ ಪ್ರೀತಿಗೋಸ್ಕರ ಅವನ ದ್ವೇಷಿಗಳನ್ನು ದೂಷಿಸುವದು ನಮ್ಮನ್ನು ಬಾದಿಸಲಾರದು. ಇಲ್ಲಿ ಒಬ್ಬರನ್ನು ದೂಷಣಾದಿಗಳನ್ನು ಮಾಡುವ ಪಾಪಗಳು ಮುಳ್ಳು ಕಲ್ಲಿನಂತೆ ಬಾಧಕವಾದವು. ಚರ್ಮಕೃತ ಚೆಪ್ಪಲಿಯಿಂದ ಮುಳ್ಳುಗಳನ್ನು ಮೆಟ್ಟುವಂತೆ ಭಗವದ್ವೇಷಿಗಳಾದ ದೈತ್ಯತಾರತಮ್ಯ ಜ್ಞಾನವೆಂಬ ಚೆಪ್ಪಲಿಯನ್ನು ಮೆಟ್ಟಿದರೆ ದೂಷಣೆ ಸಂಬಂಧವಾದ ಪಾಪದಂತಿರುವ ಮುಳ್ಳುಗಳು ಬಾಧಿಸುವುದಿಲ್ಲವೆಂಬ ತಾತ್ಪರ್ಯ. ದೈತ್ಯರ ತಾರತಮ್ಯ ಜ್ಞಾನವು ಚೆಪ್ಪಲಿಗೆ ಉಪಮಾನ. ಅವರ ದ್ವೇಷರೂಪವಾದ ಪಾಪವು ಕಂಟಕರೂಪವಾದದು. ತಾರತಮ್ಯವನ್ನು ತಿಳಿದು ಅವರನ್ನು ದೂಷಿಸುವದು ಪಾಪಕರವಲ್ಲವೆಂಬ ತಾತ್ಪರ್ಯ. ಹಾವು, ಚೇಳು, ಮೊದಲಾದವುಗಳನ್ನು ಕೊಂದ ಸಮಾಚಾರವನ್ನು ಕೇಳಿದರೆ ಎಂತಹಾ ಸಾಧುವಾದರೂ ಸಂತೋಷಪಡಬೇಕು- ಅದರಿಂದ ಪಾಪವಿಲ್ಲ. ಭಾಗವತ ಸಪ್ತಮಸ್ಕಂಧದಲ್ಲಿ ಪ್ರಹ್ಲಾದನ ಸ್ತೋತ್ರದಲ್ಲಿ " ಮೋದೇತ ಸಾಧುರಪಿ ವೃಶ್ಚಿಕ ಸರ್ಪಹತ್ಯಾ " ನಮ್ಮ ತಂದೆಯಾದ ಹಿರಣ್ಯಕಶಿಪನನ್ನು ಕೊಂದ ವಿಷಯದಲ್ಲಿ ಜನರೆಲ್ಲರೂ ಆನಂದಪಡುತ್ತಿರುವರು. ಆದ್ದರಿಂದ ನಾನೂ ಸಹ ಸಂತೋಷಪಡುವೆನು. ತಂದೆಯು ಮೃತನಾದುದಕ್ಕೆ ಸಂತೋಷಿಸುವವನು ಸಾಧುವಾಗುವವನೆ ಅಂದರೆ ಸಾಧಾರಣವಾದ ಹಾವು ಚೇಳನ್ನು ಕೊಂದ ವಾರ್ತೆಯನ್ನು ಕೇಳಿದರೆ ದುಷ್ಟಪ್ರಾಣಿಹೋಯಿತೆಂದು ಸಾಧುವಾದರೂ ಸಂತೋಷಪಡ

ಬೇಕು. ಹಾಗಿರಲು ನನ್ನ ತಂದೆಯು ಸಾಧಾರಣ ಹಾವು ಚೇಳಿನಂತಲ್ಲ. ಲೋಕಕ್ಕೆ ಕಂಟಕನಾಗಿದ್ದನು. ಅವನು ಮೃತನಾದುದರಿಂದ ಜನರು ಸುಖ ಪಡುವರು. ಆದುದರಿಂದ ನಾನೂ ಸಂತೋಷಪಡುವೆನೆಂದು ಹೇಳಿರುವನು. ಅದರಂತೆ ಪಾಪಿಗಳಾದ ದೈತ್ಯರ ದ್ವೇಷ ಮಾಡುವವನಿಗೆ ನರಕ ಭಯವಿಲ್ಲವೆಂಬ ತಾತ್ಪರ್ಯ.

**ಪುಣ್ಯಕರ್ಮವ ಪುಷ್ಕರಾದಿ ಹಿ**
**ರಣ್ಯ ಗರ್ಭಾಂತರ್ಗತ ಬ್ರ**
**ಹ್ಮಣ್ಯ ದೇವನಿಗರ್ಪಿಸುತಲಿರು ಪಾಪಕರ್ಮಗಳ ॥**
**ಜನ್ಯದುಃಖವ ಕಲಿಮುಖಾದ್ಯಗ**
**ಗುಣ್ಣಲೀವನು ಸಕಲಲೋಕ ಶ**
**ರಣ್ಯ ಶಾಶ್ವತ ಮಿಶ್ರಜನರಿಗೆ ಮಿಶ್ರಫಲವೀವ ॥೨೪॥**

ಪದ್ಯಾರ್ಥ.—ಪುಣ್ಯ-ಪುಣ್ಯಕರ್ಮವನ್ನೂ, ಕರ್ಮವ=ಪಾಪ ಕರ್ಮವನ್ನು, ಪುಷ್ಕರಾದಿ=ಪುಷ್ಕರ ಮೊದಲುಗೊಂಡು, ಹಿರಣ್ಯಗರ್ಭಾಂತರ್ಗತ= ಬ್ರಹ್ಮದೇವರವರೆಗೂ ತಾರತಮ್ಯ ಪ್ರಕಾರ ದೇವತೆಗಳನ್ನು ಸ್ಮರಣೆಮಾಡಿ ಇವರ ಅಂತರ್ಯಾಮಿಯಾದ, ಬ್ರಹ್ಮಣ್ಯದೇವನಿಗೆ=ಬ್ರಾಹ್ಮಣರಲ್ಲಿ ವಿಶ್ವಾಸ ಉಳ್ಳವರು ಬ್ರಹ್ಮಣ್ಯರು=ಅವರಿಗೆ ಪ್ರಭುವಾದ ಶ್ರೀಹರಿಗರ್ಪಿಸುತಲಿರು ಪುಣ್ಯ ಫಲವನ್ನು ಇಮ್ಮಡಿ ಮಾಡಿ ನಿನಗೆ ಸುಖವನ್ನೀವನು. ಪಾಪಕರ್ಮಗಳ=ಪಾಪಕರ್ಮಗಳ ದೆಶೆಯಿಂದ, ಜನ್ಯ=ಹುಟ್ಟುವ ದುಃಖವ, ಕಲಿಮುಖಾದ್ಯರಿಗೆ=ಕಲಿ ಮೊದಲಾದವರಿಗೆ, ಉಣ್ಣಲು-ಅನುಭವಿಸಲು, ಈವನು= ಕೊಡುವನು. ಸಕಲಲೋಕಶರಣ್ಯ=ಸಕಲ ಪ್ರಾಣಿಗಳಿಂದ ಮೊರೆ ಹೊಂದಲು ಯೋಗ್ಯನಾದ, ಶಾಶ್ವತ=ಶಶ್ವದೇಕ ಪ್ರಕಾರನಾದ ಶ್ರೀಹರಿಯು, ಮಿಶ್ರಜನರಿಗೆ=ಮಧ್ಯಮ ಮನುಷ್ಯ ಜೀವರಿಗೆ, ಮಿಶ್ರಫಲವೀವ = ಸುಖ ದುಃಖ ಮಿಶ್ರವಾದ ಫಲವನ್ನು ಕೊಡುವನು.

ತಾತ್ಪರ್ಯ.—ಜನರು ಮಾಡಿದ ಪುಣ್ಯಪಾಪಕರ್ಮಗಳನ್ನು ಪ್ರತಿ ದಿವಸದಲ್ಲೂ ಪುಷ್ಕರ ಮೊದಲು ಬ್ರಹ್ಮದೇವರವರೆಗೂ ತಾರತಮ್ಯ ಪ್ರಕಾರ ದೇ

ವತೆಗಳನ್ನು ಸ್ಮರಿಸಿ ಅವರ ಅಂತರ್ಯಾಮಿಯಾದ ಶ್ರೀಪರಮಾತ್ಮನನ್ನು ಐಕ್ಯ ಚಿಂತನೆ ಮಾಡಿ ಅವನಿಗೆ ಸಮರ್ಪಣೆ ಮಾಡಬೇಕು. ಪುಣ್ಯಗಳನ್ನು ಪರಮಾತ್ಮನು ಸ್ವೀಕರಿಸಿ ತತ್ವೇಶರಿಗೆ ಕೊಟ್ಟು ಜೀವರಿಗೂ ಇಮ್ಮಡಿಯಾದ ಫಲವನ್ನು ಕೊಡುವನು. ಪಾಪಗಳ ಫಲಗಳನ್ನು ಕಲಿ ಮೊದಲಾದವರಿಗೆ ಅನುಭವಿಸಲಿಕ್ಕಾಗಿ ಕೊಡುವನು. ಮಧ್ಯಮರಿಗೆ ಸುಖ ದುಃಖ ಮಿಶ್ರವಾದ ಫಲವನ್ನು ಕೊಡುವನು.

ಸಂಧಿಯನ್ನು ಮುಗಿಸುತ್ತಾ ಪರಮಾತ್ಮನ ಅನುಗ್ರಹವನ್ನು ಸೂಚಿಸುತ್ತಾರೆ.

ತ್ರಿವಿಧಗುಣಗಳಮಾನಿ ಶ್ರೀ ಭಾ
ರ್ಗವಿರಮಣಗುಣಿಗುಣಗಳೊಳವ
ರವರ ಯೋಗ್ಯತೆಕರ್ಮಗಳನನುಸರಿಸಿ ಕರ್ಮಫಲ।
ಸ್ವವಶರಾದಮರಾಸುರರ್ಗಣ
ಕವಧಿ ಇಲ್ಲದೆ ಕೊಡುವ ದೇವ
ಪ್ರವರವರ ಜಗನ್ನಾಥವಿಠಲ ಪರಮ ಕರುಣಾಳೊ ॥೨೫॥

ಪದ್ಯಾರ್ಥ.—ತ್ರಿವಿಧಗುಣಗಳಭಿಮಾನಿ-ಸತ್ವ ರಜಸ್ತಮೋ ಗುಣಗಳಿಗಭಿಮಾನಿಯಾದ ಶ್ರೀ ಭೂ ದುರ್ಗಾತ್ಮಕರಾದ, ಶ್ರೀಭಾರ್ಗವಿರಮಣ-ಭೃಗುಋುಷಿಗಳಲ್ಲಿ ಪುತ್ರಿಯಾಗಿ ಅವತರಿಸಿದುದರಿಂದ ಭಾರ್ಗವಿ ಎಂಬ ಹೆಸರುಳ್ಳ ಶ್ರೀಲಕ್ಷ್ಮೀದೇವಿಯರಿಗೆ ಪತಿಯಾದ ಶ್ರೀಪರಮಾತ್ಮನು, ಗುಣಿ-ಸತ್ವ ರಜಸ್ತಮೋ ಗುಣಾತ್ಮಕರಾದ ಅಂದರೆ ಸಾತ್ವಿಕರು, ರಾಜಸರು, ತಾಮಸರೆಂಬ ಮೂರು ವಿಧ ಪ್ರಾಣಿಗಳಲ್ಲೂ. ಗುಣಗಳೊಳು=ಮೂರು ಗುಣಗಳಲ್ಲೂ ಇದ್ದು ಅವರವರ ಯೋಗ್ಯತೆ ಕರ್ಮಗಳನುಸರಿಸಿ, ಸ್ವವಶರಾದ=ತನ್ನಧೀನದಲ್ಲಿರುವ, ಅಮರಾಸುರಗಣಕೆ = ದೇವಮನುಷ್ಯ ದೈತ್ಯಗಣಗಳಿಗೆ, ಅವಧಿಯಿಲ್ಲದೆ=ಸಾವಕಾಶಮಾಡದೆ, ಕರ್ಮಫಲ=ಕರ್ಮಫಲವನ್ನು, ವಿಶ್ವವ್ಯಾಪಕ=ಪ್ರಪಂಚದಲ್ಲಿ ಸರ್ವತ್ರ ವ್ಯಾಪ್ತನಾದ, ದೇವಪ್ರವರ=ದೇವಶ್ರೇಷ್ಠರಾದ ಬ್ರಹ್ಮಾದಿಗಳಿಗೆ, ವರ=ಶ್ರೇಷ್ಠನಾದ, ಜಗನ್ನಾಥವಿಠ್ಠಲನು ಕೊಡುವನು.

ತಾತ್ಪರ್ಯ:—ಸತ್ವರಜಸ್ತಮೋ ಗುಣಗಳಿಗೆ ಅಭಿಮಾನಿಯಾದ ಶ್ರೀ ಭೂ ದುರ್ಗಾತ್ಮಿಕರಾದ ಶ್ರೀಭಾರ್ಗವೀ ದೇವಿಯರು ಅಂದರೆ ಲಕ್ಷ್ಮೀದೇವಿ ಯರಿಗೆ ಹೆಸರು. ಈ ಹೆಸರು ರಮಾದೇವಿಯರಿಗೆ ಬರಲು ಕಾರಣವೇನೆಂ ದರೆ, ಭಾಗವತ ಚತುರ್ಥಸ್ಕಂಧ ಮೊದಲನೆಯ ಅಧ್ಯಾಯ ೪೩ನೆಯ ಶ್ಲೋ ಕ, "ಭೃಗುಃಖ್ಯಾತ್ಯಾಂಮಹಾಭಾಗಃ ಪತ್ನ್ಯಾಂ ಪುತ್ರಾನಜೀ ಜನತ್ || ಧಾತಾರಂಚವಿಧಾತಾರಂ ಶ್ರಿಯಂಚ ಭಗವತ್ಪ್ರಿಯಾಂ" ಭೃಗುಋಷಿಗಳು ಖ್ಯಾತಿ ಎಂಬ ಭಾರ್ಯೆಳಲ್ಲಿ ಧಾತ, ವಿಧಾತ ಎಂಬ ಇಬ್ಬರು ಗಂಡು ಮಕ್ಕಳ ನ್ನೂ ಪರಮಾತ್ಮನ ಪತ್ನಿಯಾದ ಸಾಕ್ಷಾಲಕ್ಷ್ಮೀದೇವಿಯೇ ಮೂರನೆಯ ಮಗ ಳಾಗಿಯೂ ಹೀಗೆ ಮೂರು ಮಕ್ಕಳನ್ನು ಪಡೆದರು ಎಂದು ಹೇಳಿರುವರು. ಭೃಗುಋಷಿಗಳ ಮಗಳಾದುದರಿಂದ ಭಾರ್ಗವೀ ಎಂದು ಹೆಸರು ಬಂದಿತೆಂ ದು ತಿಳಿಯಬೇಕು. ಇಂತಹಾ ಭಾರ್ಗವೀದೇವಿಯರಿಗೆ ಪತಿಯಾದ ಶ್ರೀ ಹರಿಯೇ ತ್ರಿವಿಧ ರಾಶಿಗಳಲ್ಲೂ ಮೂರು ಗುಣಗಳಲ್ಲೂ ಇದ್ದು ಅವರವರ ಯೋಗ್ಯತಾನುಸಾರವಾಗಿ ಕರ್ಮಗಳನ್ನು ಮಾಡಿಸಿ ಫಲವನ್ನು ಕೊಡುವನು.

ಎಂಬಲ್ಲಿಗೆ ಭಾವಪ್ರಕಾಶಿಕೆಯಲ್ಲಿ ೩೦ನೆಯ ದೈತ್ಯತಾರತಮ್ಯ ಸಂಧಿ ಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||



# ನೈವೇದ್ಯ ಪ್ರಕರಣ ಸಂಧಿ.

— • —

## ಸಂಧಿ ೩೧.

ಈ ಸಂಧಿಯಲ್ಲಿ ಪ್ರತಿಮಾ ಸಾಲಿಗ್ರಾಮ ಮೊದಲಾದವುಗಳಿಗೆ ನೈವೇದ್ಯಮಾಡುವ ಕ್ರಮವನ್ನೂ, ಯಾವ ಯಾವ ಪದಾರ್ಥಗಳಲ್ಲಿ ಯಾವ ಯಾವ ದೇವತೆಗಳನ್ನೂ ಭಗವದ್ರೂಪಗಳನ್ನೂ ಚಿಂತನೆ ಮಾಡಬೇಕೆಂಬುವುದನ್ನೂ ಹೇಳುತ್ತಾರೆ.

ಅದರಲ್ಲೂ ಮೊದಲನೆಯ ಪದ್ಯ ಮೊದಲು ೧೩ನೆಯ ಪದ್ಯದವರೆಗೂ ಪರಮಾತ್ಮನ ಮಹಿಮೆಯನ್ನು ಹೇಳುತ್ತಾರೆ.

**ಹರಿಕಥಾಮೃತಸಾರ ಗುರುಗಳ ॥ಪ॥**

**ಲೆಕ್ಕಿಸದೆ ಲಕುಮಿಯನು ಬೊಮ್ಮನ**
**ಪೊಕ್ಕಳಿಂದಲಿ ಪಡೆದ ಪೊಸಪೊಂ**
**ಬಕ್ಕಿದೇರನು ಪಡೆದವಯವಗಳಿಂದ ದಿವಿಜರನು ।**
**ಮಕ್ಕಳಂದದಿ ಪೊರೆವ ಸರ್ವದ**
**ರಕ್ಕಸಾಂತಕ ರಣದೊಳಗೆ ನಿ**
**ರ್ದುಃಖ ಸುಖಮಯ ಕಾಯ್ದ ಪಾರ್ಥನ ಸೂತನೆಂದೆನಿಸಿ ॥೧॥**

ಪದ್ಯಾರ್ಥ.—ಲಕುಮಿಯನು=ಲಕ್ಷ್ಮೀದೇವಿಯರನ್ನು, ಲೆಕ್ಕಿಸದೆ=ಲಕ್ಷೀಕರಿಸದೆ, ಪೊಕ್ಕಳಿಂದಲಿ=ತನ್ನ ಹೊಕ್ಕಳಿಂದಲೇ, ಬೊಮ್ಮನ-ಬ್ರಹ್ಮದೇವರನ್ನು, ಪಡೆದ=ಸೃಷ್ಟಿಸಿದ, ಪೊಂಬಕ್ಕಿದೇರನು-ಗರುಡ ವಾಹನನಾದ ಶ್ರೀಹರಿಯು, ದಿವಿಜರನು=ದೇವತೆಗಳನ್ನು, ಅವಯವಗಳಿಂದ, ಪಡೆದ=ಸೃಷ್ಟಿಸಿದನು. ಸರ್ವದಾ, ಮಕ್ಕಳಂದದಿ, ಪೊರೆವ=ಸಂರಕ್ಷಿಸುವನು, ನಿರ್ದುಃಖ=ದುಃಖರಹಿತನಾದ, ಸುಖಮಯ=ಆನಂದ ಸ್ವರೂಪನಾದ, ರಕ್ಕಸಾಂ

ತಕ=ರಾಕ್ಷಸ ಶತೃವಾದ ಶ್ರೀಹರಿಯು, ರಣದೊಳಗೆ=ಯುದ್ಧದಲ್ಲಿ, ಸೂತನೆಂದೆನಿಸಿ=ಸಾರಥಿ ಎಂದೆನಿಸಿ, ಪಾರ್ಥನ=ಅರ್ಜುನನನ್ನು, ಕಾಯ್ದ – ರಕ್ಷಿಸಿದನು.

ತಾತ್ಪರ್ಯ.—ಲಕ್ಷ್ಮೀದೇವಿಯರನ್ನು ಲಕ್ಷ್ಯಮಾಡದೆ ತನ್ನ ನಾಭಿಯಿಂದ ಬ್ರಹ್ಮದೇವರನ್ನು ಸೃಷ್ಟಿಸಿದನು. "ಚಕ್ಷೋಃ ಸೂರ್ಯೋ ಅಜಾಯತ ಮುಖಾದಿಂದ್ರಶ್ಚಾಗ್ನಿಶ್ಚ' ಎಂಬ ಪುರುಷಸೂಕ್ತ ವಾಕ್ಯದ ರೀತಿಯಾಗಿ, ಕಣ್ಣುಗಳಿಂದ ಸೂರ್ಯನನ್ನೂ, ಮುಖದಿಂದ ಇಂದ್ರಾಗ್ನಿಗಳನ್ನೂ, ಹೀಗೆ ತನ್ನ ಅವಯವಗಳಿಂದ ದೇವತೆಗಳನ್ನು ಸೃಷ್ಟಿಸಿದನು. ಅವರೆಲ್ಲರನ್ನೂ ಮಕ್ಕಳಂತೆ ರಕ್ಷಿಸುವನು. ದುಃಖ ಲೇಶವಿಲ್ಲದ ಆನಂದ ಸ್ವರೂಪನಾದ ರಾಕ್ಷಸಾಂತಕನಾದ ಶ್ರೀಹರಿಯು, ಕೃಷ್ಣಾವತಾರದಲ್ಲಿ ಪಾರ್ಥಸಾರಥಿಯಾಗಿ ರಣರಂಗದಲ್ಲಿ ಅರ್ಜುನನ್ನು ರಕ್ಷಿಸಿದನು.

**ದೋಷಗಂಧ ವಿದೂರ ನಾನಾ**
**ವೇಷಧಾರಿ ವಿಚಿತ್ರ ಕರ್ಮನ**
**ನೀಷಿಮಾಯಾರಮಣ ಮಧ್ವಾಂತಃಕರಣರೂಢಾ ||**
**ಶೇಷಶಾಯಿ ಶರಣ್ಯ ಕೌಸ್ತುಭ**
**ಭೂಷಣ ಸುಕಂಧರ ಸದಾ ಸಂ**
**ತೋಷ ಬಲಸೌಂದರ್ಯಸಾರನಮಹಿಮೆಗೇನೆಂಬೆ ||೨||**

ಪದ್ಯಾರ್ಥ.—ದೋಷಗಂಧವಿದೂರ=ದೋಷವೆಂಬ ವಾಸನೆಯೇ ಇಲ್ಲದವನು. ನಾನಾವೇಷಧಾರಿ=ಅನೇಕ ವಿಧವಾದ ವೇಷಧಾರಿಯೆಂದರೆ ಮತ್ಸ್ಯ ಕೂರ್ಮ ಮೊದಲಾದ ರೂಪಗಳನ್ನು ಧರಿಸಿದವನೆಂದರ್ಥ. ವಿಚಿತ್ರಕರ್ಮ ಆಶ್ಚರ್ಯಕರವಾದ ಕರ್ಮಗಳನ್ನು ಮಾಡುವವನು. ವಿಚಿತ್ರಮನೀಷಿ – ವಿಚಿತ್ರವಾದ ಬುದ್ಧಿಯುಳ್ಳವನು. ಮಾಯಾರಮಣ=ವಾಸುದೇವ ರೂಪದಿಂದ ಮಾಯಾನಾಮಕನಾದ ಲಕ್ಷ್ಮೀದೇವಿಯರನ್ನು ಮದುವೆಯಾದವನು. ಮಧ್ವಾಂತಃಕರಣರೂಢ–ಮಧ್ವಾಚಾರ್ಯರ ಅಂತರಿಂದ್ರಿಯ ಅಂದರೆ ಮನಸ್ಸಿನಲ್ಲಿ ದೃಢವಾಗಿ ನಿಂತವನು. ಶೇಷಶಾಯಿ, ಶರಣ್ಯ–ಮೊರೆಹೋಗಲು ಯೋಗ್ಯನು. ಕೌಸ್ತುಭ ಭೂಷಣ=ಕೌಸ್ತುಭ ಮಾಣಿಕ್ಯದಿಂದ ಅಲಂಕೃತವಾದ, ಸುಕಂಧರ–ಮನೋಹರವಾದ ಕತ್ತುಳ್ಳವನು, ಸದಾ, ಸಂತೋಷ, ಬಲ ಇವುಗಳಿಂದ

ಕೂಡಿದವನು. ಸೌಂದರ್ಯ್ಯಸಾರನ=ಇಂತಹ ಸೌಂದರ್ಯ್ಯಗಣಿಯಾದ ಶ್ರೀಹರಿಯು, ಮಹಿಮೆಗೇನೆಂಬೆ=ಮಹಿಮೆಯನ್ನು ಎಷ್ಟೆಂದು ಹೇಳುವೆನು, ಹೇಳಲು ಸಾಧ್ಯವಲ್ಲವೆಂಬ ಭಾವ.

ತಾತ್ಪರ್ಯ.—ಲೇಶಮಾತ್ರವಾದರೂ ದೋಷ ಸಂಬಂಧವಿಲ್ಲದವನು, ಅನೇಕ ಅವತಾರಗಳನ್ನು ಮಾಡಿದವನು ಆಶ್ಚರ್ಯಕರವಾದ ಕರ್ಮ, ವಿಚಿತ್ರ ಬುದ್ಧಿಯುಳ್ಳವನು. ಮಾಯಾನಾಮಕ ಲಕ್ಷ್ಮೀದೇವಿಯರಿಗೆ ಪತಿಯಾದವನು. ಮಧ್ವಾಚಾರ್ಯರ ಮನಸ್ಸಿನಲ್ಲಿ ಸರ್ವದಾ ನೆಲಸಿರುವನು. ಶೇಷಶಾಯಿ, ಮೊರೆಹೊಗಲು ಯೋಗ್ಯನು, ಕೌಸ್ತುಭ ಮಾಣಿಕ್ಯದಿಂದ ಭೂಷಿತವಾದ ಕತ್ತುಳ್ಳವನು, ಸರ್ವದಾ ಆನಂದ ಸ್ವರೂಪನು. ಬಲ ಪೂರ್ಣನು, ಸೌಂದರ್ಯದ ಗಣಿಯು. ಇಂತಹಾ ಭಗವಂತನ ಮಹಿಮೆಯನ್ನು ಏನೆಂದು ವರ್ಣಿಸುವೆ.

ಸಾಶನಾನಶನೇ ಅಭೀಯೆಂ
ಬೀಶೃತಿಪ್ರತಿಪಾದ್ಯನೆನಿಸುವ
ಕೇಶವನ ರೂಪದ್ವಯವ ಚಿದ್ದೇಹದೊಳಹೊರಗೆ ॥
ಬೇಸರದೆ ಸದ್ಭಕ್ತಿಯಿಂದ ಉ
ಪಾಸನೆಯ ಗೈಯುತ್ತ ಬುಧರು ಹು
ತಾಶನನವೋಲಿಪ್ಪರೆಂದನವರತ ತುತಿಸುತಿರು ॥೩॥

ಪದ್ಯಾರ್ಥ.—ಸಾಶನ=ಆಹಾರ ಮಾಡಲು ಯೋಗ್ಯವಾದ ರೂಪವು, ಅನಶನ=ಆಹಾರವನ್ನು ಸ್ವೀಕರಿಸದ ರೂಪವು, ಅಭೀಯೆಂಬ = ಇವೆರಡು ರೂಪಗಳು ಪರಮಾತ್ಮನಿಗೆಂದು ಹೇಳುವ, ಈ ಶೃತಿಪಾದ್ಯನೆನಿಸುವ, ಕೇಶವನ ರೂಪದ್ವಯವ=ಎರಡು ರೂಪಗಳೇ, ಚಿದ್ದೇಹದೊಳಗೆ=ಸ್ವರೂಪದೇಹದೊಳಗೆ, ಹೊರಗೆ-ಸ್ಥೂಲ ದೇಹದಲ್ಲಿರುವವೆಂದು ತಿಳಿದು, ಬೇಸರದೆ=ಸದ್ಭಕ್ತಿಯಿಂದ, ಉಪಾಸನೆಗೈಯುತ=ಉಪಾಸನೆಯನ್ನು ಮಾಡುತ್ತಾ, ಬುಧರು=ಜ್ಞಾನಿಗಳು, ಹುತಾಶನನವೋಲ್=ಅಗ್ನಿಯಂತೆ ತೇಜಸ್ವಿಗಳಾಗಿ ಪಾಪಲೇಶ ಸಂಬಂಧವಿಲ್ಲದೆ, ಇಪ್ಪರೆಂದು=ಇರುವರೆಂದು, ಅನವರತ=ಯಾವಾಗಲೂ, ತುತಿಸುತಿರು=ಜ್ಞಾನಿಗಳನ್ನು ಕೊಂಡಾಡುತ್ತಿರು, ಅಥವಾ ಇಂತಹ ಮಹಿಮೆಯುಳ್ಳವನು ಹರಿ ಎಂದು ಕೊಂಡಾಡುತ್ತಲಿರು.

ತಾತ್ಪರ್ಯ—ಭಗವಂತನಿಗೆ ಸಾಶನರೂಪವೆಂತಲೂ, ಅನಶನ ರೂಪವೆಂತಲೂ ಎರಡು ರೂಪಗಳು. ಸಾಶನರೆಂದರೆ ನಿತ್ಯದಲ್ಲೂ ಭೋಜನವನ್ನು ಮಾಡುತ್ತಿರುವ ಮನುಷ್ಯಾದಿಗಳೆಂತಲೂ, ಅನಶನರೆಂದರೆ ದೇವತೆಗಳೆಂತಲೂ, ಇವೆರಡರ ಅಂತರ್ಯಾಮಿ ರೂಪಗಳೆಂದೊಂದರ್ಥ; ಸ್ವರೂಪ ದೇಹದಲ್ಲಿದ್ದು ಅಲ್ಲಿ ಅಶನಾದಿಗಳು ಇಲ್ಲದಿರುವುದರಿಂದ"ಅನಶನನೆಂತಲೂ, ಸ್ಥೂಲ ದೇಹದೊಳಿದ್ದು ಭೋಜನಾದಿಗಳನ್ನು ಮಾಡುವುದರಿಂದ ಸಾಶನನೆಂತಲೂ, ಒಬ್ಬ ಪರಮಾತ್ಮನು ಎರಡು ರೂಪಗಳಿಂದ ಕೂಡಿ ಸ್ವರೂಪದೇಹದಲ್ಲೂ, ಸ್ಥೂಲದೇಹದಲ್ಲಿರುವನೆಂದು ಜ್ಞಾನಿಗಳು ಉಪಾಸನೆ ಮಾಡುತ್ತಾ ತಾವು ಮಾಡುವ ಭೋಜನ ಪಾನಾದಿಗಳೆಲ್ಲವೂ ಭಗವದ್ವ್ಯಾಪಾರವೆಂದರಿತು ಅಗ್ನಿಯಂತಿರುವರು ಅಂದರೆ, "ತೇಜಸ್ವೀತಪಸಾದೀಪ್ತೋ ದುರ್ಧರ್ಷೋದರ ಭಾಜನಃ ॥ ಸರ್ವಭಕ್ಷ್ಯೋಪಿ ಯುಕ್ತಾತ್ಮಾನಾದತ್ತೇ ಪಾಪಮಗ್ನಿವತ್" ಎಂಬ ಭಾಗವತ ಏಕಾದಶ ಸ್ಕಂಧದಲ್ಲಿ ಹೇಳಿದಂತೆ, ತಪಸ್ಸಿನಿಂದ ಪ್ರಜ್ವಲಿಸುತ್ತಾ ತೇಜಸ್ವಿಯಾಗಿ ಇಚ್ಛಾ ದ್ವೇಷಾದಿಗಳನ್ನು ಬಿಟ್ಟವನು ಅಗ್ನಿ ಹೇಗೆ ಸರ್ವ ಭಕ್ಷಕನಾದರೂ ಅವನಿಗೆ ಪಾಪವಿಲ್ಲವೋ ಹಾಗೆ ಈ ತೇಜಸ್ವಿಯು ಏನು ಭೋಜನಾದಿಗಳನ್ನು ಮಾಡಿದರೂ ಪಾಪಸಂಬಂಧವಿಲ್ಲವೆಂದು ತಾತ್ಪರ್ಯ. ಇಂತಹ ಮಹಿಮೆ ಭಗವದ್ಭಕ್ತರಲ್ಲಿರಲು ಭಗವಂತನ ಮಹಿಮೆಯನ್ನು ಹೇಳುವುದೇನು ಎಂದು ಕೊಂಡಾಡುತ್ತಿರು.

**ಸಕಲ ಸದ್ಗುಣ ಪೂರ್ಣ ಜನ್ಮಾ**
**ದ್ಯಖಿಳ ದೋಷವಿದೂರ ಪ್ರಕಟಾ**
**ಪ್ರಕಟಸದ್ವ್ಯಾಪಾರಿ ಗತಸಂಸಾರಿ ಕಂಸಾರಿ ॥**
**ನಕುಲ ನಾನಾರೂಪನೀಯಾ**
**ಮಕನಿಯಮ್ಯ ನಿರಾಮಯ ರವಿ**
**ಪ್ರಕರ ಸನ್ನಿಭಪ್ರಭುಸದಾಮಾಂಪಾಹಿ ಪರಮಾತ್ಮ ॥೪॥**

ಪದ್ಯಾರ್ಥ—ಸಕಲ ಸದ್ಗುಣಪೂರ್ಣನು; ಜನ್ಮಾದ್ಯಖಿಳದೋಷವಿದೂರ=ಹುಟ್ಟುವಿಕೆ ಮೊದಲಾದ ಸಕಲ ದೋಷಗಳ ಸಂಬಂಧವಿಲ್ಲದವನು. ಪ್ರಕಟ=ಬ್ರಹ್ಮಾದಿಗಳಿಗೆ ವ್ಯಕ್ತನಾಗಿ ಗೋಚರಿಸುವನು, ಅಪ್ರಕಟ = ಸಾಧಾರಣ ಮನುಷ್ಯಾದಿಗಳಿಗೆ, ಅವ್ಯಕ್ತನು = ಅಗೋಚರನು. ಇದರಿಂದ

ಕ್ತಾವ್ಯಕ್ತ ಸ್ವರೂಪವೆಂದು ಹೇಳಿದಂತಾಯಿತು. ಸದ್ವ್ಯಾಪಾರಿ= ಉತ್ಕೃಷ್ಟ ವಾದ ಕರ್ಮಗಳುಳ್ಳವನು, ಅಥವಾ ಕೆಲವರಿಗೆ ಪ್ರಕಟವಾಗಿಯೂ ಕೆಲವರಿಗೆ ಅಪ್ರಕಟವಾಗಿರುವ ಉತ್ತಮವಾದ ವ್ಯಾಪಾರಗಳುಳ್ಳವನು, ಅಂದರೆ ಅವನ ಮಹಿಮೆಯನ್ನು ಭಕ್ತಾಗ್ರೇಸರರು ಮಾತ್ರ ಅವನನುಗ್ರಹದಿಂದ ಬಲ್ಲರು; ಮಿಕ್ಕವರು ತಿಳಿಯಲಾರರೆಂಬ ಭಾವ. ಗತಸಂಸಾರಿ=ಹೋಗಲ್ಪಟ್ಟ ಸಂಸಾರ ಉಳ್ಳವನು. ಅಂದರೆ ಜಗತ್ಕುಟುಂಬಿಯಾದರೂ ಸಂಸಾರ ಸಂಬಂಧ ವಾದ ದುಃಖ ಲೇಶವಿಲ್ಲದವನೆಂದರ್ಥ. ಕಂಸಾರಿ=ಕಂಸನನ್ನು ಕೊಂದವನು. ನಕುಲ=ಕುಲರಹಿತನು, ನಾನಾ ರೂಪವನ್ನು ಧರಿಸಿದವನು. ಸಕಲ ಪ್ರಾಣಿ ಗಳಿಗೂ, ನಿಯಾಮಕನು=ಅಪ್ಪಣೆಯನ್ನು ಮಾಡುವವನು, ನಿಯಮ್ಯ-ಅಪ್ಪ ಣೆಯಂತೆ ನಡೆಯುವವನು, ಒಬ್ಬನಲ್ಲಿದ್ದು ನಿಯಾಮಕನಾಗಿ ಮತ್ತೊಬ್ಬನಲ್ಲಿ ದ್ದು ನಿಯಮ್ಯನಾಗುವನು, ಅಂದರೆ ರಾಜನಲ್ಲಿದ್ದು ಅಧಿಕಾರಮಾಡುವನು. ಭೃತ್ಯನಲ್ಲಿದ್ದು ಅವನಪ್ಪಣೆಯಂತೆ ನಡೆಯುವನು, ನಿರಾಮಯ=ಯಾವ ವಿಧ ವಾದ ವ್ಯಾಧಿಯು ಇಲ್ಲದವನು. ರವಿಪ್ರಕರಸನ್ನಿಭ= ಸೂರ್ಯ ಸಮೂಹಗಳ ಕಾಂತಿಯುಳ್ಳವನು. ಇಂತಹ ಎಲೈ ಪ್ರಭೋ! ಪರಮಾಪ್ತ=ಬಹು ಆಪ್ತ ನಾದವನೆ! ಮಾಂಪಾಹಿ! ನನ್ನನ್ನು ರಕ್ಷಿಸು.

**ಚೇತನಾಚೇತನ ಜಗತ್ತಿನೊ**
**ಳಾತತನು ತಾನಾಗಿ ಲಕ್ಷ್ಮೀ**
**ನಾಥ ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸಿ ||**
**ಜಾತಿಕಾರನತೆರದಿ ಎಲ್ಲರ**
**ಮಾತಿನೊಳಗಿದ್ದಖಿಳ ಕರ್ಮವ**
**ಕಾತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತಿಪ್ಪ ||೩||**

ಪದಾರ್ಥ.— ಚೇತನಾಚೇತನಜಗತ್ತಿನೊಳು- ಸ್ಥಾವರ ಜಂಗಮಾತ್ಮ ಕವಾದ ಈ ಪ್ರಪಂಚದಲ್ಲಿ, ಆತತನುತಾನಾಗಿ-ಸರ್ವತ್ರ ತಾನು ವ್ಯಾಪ್ತ ನಾಗಿ, ಲಕ್ಷ್ಮೀನಾಥ=ಲಕ್ಷ್ಮೀಪತಿಯು, ತತ್ತದ್ರೂಪಗಳ ಧರಿಸಿ = ಆಯಾ ಪ್ರಾಣಿಗಳಂತೆ ರೂಪಗಳನ್ನು ಸ್ವೀಕರಿಸಿ, ಸರ್ವರೊಳಿಪ್ಪ=ಎಲ್ಲಾ ಪ್ರಾಣಿಗಳ ಲ್ಲೂ ಇರುತ್ತಿರುವನು, ಜಾತಿಕಾರನತೆರದಿ = ನಾಟಕದಲ್ಲಿ ರಾಮ ಕೃಷ್ಣಾದಿ ವೇಷವನ್ನು ಹಾಕುವ ಮನುಷ್ಯನಂತೆ, ಎಲ್ಲರ ಮಾತಿನೊಳಗಿದ್ದು = ಎಲ್ಲರ

ಸಂಗಡ ತಾನೊಬ್ಬನಾಗಿದ್ದು (ಜನರ ಮಾತಿಗನುಸರಿಸಿ ಇದ್ದು) ಅಖಿಳಕ ರ್ಮವತಾತಿಳಿಸಿಕೊಳ್ಳದೆ-ತಾನು ಮಾಡಿಸಿದುದಾಗಿ ತಿಳಿಸಿಕೊಳ್ಳದೆ, ಮಾಡಿಸಿ -ಜನರಿಂದ ಮಾಡಿಸಿ, ನೋಡಿ ನಗುತಿಪ್ಪ.

ತಾತ್ಪರ್ಯ.—ಜಡಚೇತನಾತ್ಮಕವಾದ ಈ ಪ್ರಪಂಚದಲ್ಲಿ ಸರ್ವತ್ರ ವ್ಯಾಪ್ತನಾಗಿದ್ದು ಆಯಾ ಪ್ರಾಣಿಗಳ ರೂಪಗಳಿಂದ ಅವರವರಲ್ಲಿದ್ದು ನಾಟಕ ರಂಗವಲ್ಲಿ ರಾಮಾದಿಗಳಂತೆ ವೇಷವನ್ನು ಧರಿಸಿ ತನ್ನ ಸ್ವರೂಪಗಳನ್ನು ತೋರಿಸಿಕೊಳ್ಳದೆ ವೇಷಕ್ಕೆ ತಕ್ಕಂತೆ ಹೇಗೆ, ತಾನೇ ರಾಮಕೃಷ್ಣನೆಂದು ನಟಿಸುತ್ತಿರುವನೋ ಹಾಗೆ ಪರಮಾತ್ಮನು ಆಯಾ ಪ್ರಾಣಿಗಳಂತೇ ತಾನವರಲ್ಲಿದ್ದು ಕಾರ್‍ಯಗಳನ್ನು ಮಾಡಿಸಿ ತಾನು ಮಾಡಿಸಿದುದಾಗಿ ತಿಳಿಸಿಕೊಳ್ಳದೆ ಅವರವರ ಯೋಗ್ಯತಾನುಸಾರ ಕರ್ಮ ಮಾಡಿಸಿ ಅವರವರೇ ಕರ್ಮವನ್ನು ಮಾಡಿದಂತೆ ತೋರ್ಪಡಿಸಿ ತಾನು ನಿರ್ಲಿಪ್ತನಾಗಿ ನೋಡಿ ನಗುತ್ತಿರುವನು.

**ವೀತಭಯ ವಿಜ್ಞಾನದಾಯಕ**
**ಭೂತಭವ್ಯ ಭವತ್ಪ್ರಭು ಖಳಾ**
**ರಾತಿ ಖಗವರವಹನ ಕಮಲಾಕಾಂತ ನಿಶ್ಚಿಂತ ।**
**ಮಾತರಿಶ್ವಪ್ರಿಯ ಪುರಾತನ**
**ಪೂತನಾ ಪ್ರಾಣಾಪಹಾರಿ ವಿ**
**ಧಾತೃಜನಕವಿಪಶ್ಚಿತಪ್ರಿಯ ಸಲಹು ಸಲಹೆಮ್ಮ ॥೬॥**

ಪದ್ಯಾರ್ಥ.—ವೀತಭಯ=ಯಾವ ಕಾಲದಲ್ಲೂ ಯಾವ ವಿಧವಾದ ಭಯವೂ ಇಲ್ಲದವನು, ವಿಜ್ಞಾನದಾಯಕ=ವಿಶೇಷವಾದ ಜ್ಞಾನವನ್ನು ಕೊಡುವವನು, ಭೂತಭವ್ಯಭವತ್ಪ್ರಭು = ಹಿಂದಿನಕಾಲ, ವರ್ತಮಾನಕಾಲ, ಮುಂದಿನ ಕಾಲ ಇವುಗಳಿಗೆ ಪ್ರಭು= ಸ್ವಾಮಿ ಎನಿಸುವನು, ಖಳಾರಾತಿ=(ದುಷ್ಟರಿಗೆ) ಅಯೋಗ್ಯರಿಗೆ ಶತ್ರುವೆನಿಸುವನು, ಖಗವರವಹನ-ಪಕ್ಷಿ ಶ್ರೇಷ್ಠನಾದ ಗರುಡವಾಹನನು, ಕಮಲಾಕಾಂತ=ಲಕ್ಷ್ಮೀಪತಿಯು, ನಿಶ್ಚಿಂತ-ಚಿಂತೆಯಿಲ್ಲದವನು, ಮಾತರಿಶ್ವಪ್ರಿಯ=ಮುಖ್ಯಪ್ರಾಣದೇವರಿಗೆ ಪ್ರೀತಿಪಾತ್ರನು, ಪುರಾತನ-ಅನಾದಿಕಾಲೀನನು, ಪೂತನಾಪ್ರಾಣಾಪಹಾರಿ-ಪೂತನೆಯ ಪ್ರಾಣವನ್ನು ತೆಗೆದವನು, ವಿಧಾತೃಜನಕ-ಬ್ರಹ್ಮದೇವರ ತಂದೆಯು, ವಿಪಶ್ಚಿತಪ್ರಿಯ – ಜ್ಞಾನಿಗಳ ಪ್ರಿಯನು, ಇಂತಹಾ ನೀನು, ಎಮ್ಮ = ನಮ್ಮನ್ನು, ಸಲಹು ಸಲಹು.

ದುಷ್ಟಜನ ಸಂಹಾರಿ ಸರ್ವೋ
ತ್ಕೃಷ್ಟಮಹಿಮ ಸಮೀರನುತ ಸಕ
ಲೇಷ್ಟದಾಯಕ ಸ್ವರತ ಸುಖಮಯ ಮಮಕುಲಸ್ವಾಮಿ ।
ಹೃಷ್ಟಪುಷ್ಟ ಕನಿಷ್ಟ ಸೃಷ್ಟ್ಯಾ
ದ್ಯಷ್ಟ ಕರ್ತೃಕರೀಂದ್ರವರದ ಯ
ಥೇಷ್ಟದನು ಉನ್ನತ ಸುಕರ್ಮ್ಮ ನಮಿಪೆನನವರತ ||೭||

ಪದ್ಯಾರ್ಥ.—ದುಷ್ಟಜನಸಂಹಾರಿ, ಸರ್ವೋತ್ಕೃಷ್ಟಮಹಿಮ, ಸಮೀರನುತ= ವಾಯುದೇವರಿಂದ ಸ್ತುತ್ಯನು, ಸಕಲೇಷ್ಟದಾಯಕನು = ಭಕ್ತರ ಸರ್ವಾಭೀಷ್ಟವನ್ನು ಪೂರೈಸುವವನು, ಸ್ವರತ=ಸ್ವರಮಣನು, ಸುಖಮಯ =ಆನಂದ ಸ್ವರೂಪನು, ಮಮಕುಲಸ್ವಾಮೀ–ನನ್ನ ಕುಲ ದೈವನು, ಹೃಷ್ಟ= ಸಂತುಷ್ಟನು, ಪುಷ್ಟ–ಸ್ಥೂಲ ಶರೀರದಲ್ಲಿದ್ದು ಪುಷ್ಟನೆನಿಸುವನು, ಕನಿಷ್ಟ= ಕೃಶರಾದ ಪ್ರಾಣಿಗಳಲ್ಲಿದ್ದು ಕೃಶನೆನಿಸುವನು, “ ಅಣುರ್ಬೃಹತ್ ಕೃಶ ಸ್ಥೂಲಃ ” ಎಂದು ಸಹಸ್ರನಾಮದಲ್ಲಿ ಹೇಳಿದ ಅಭಿಪ್ರಾಯವನ್ನೇ ಇಲ್ಲೂ ತಿಳಿಯಬೇಕು. ಸೃಷ್ಟ್ಯಾದ್ಯಷ್ಟಕರ್ತೃ=ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷವೆಂಬ ೮ ಬಗೆ ಕರ್ತೃತ್ವ ಉಳ್ಳವನು, ಕರೀಂದ್ರವರದ=ಗಜೇಂದ್ರನಿಗೆ ವರವನ್ನಿತ್ತವನು, ಯಥೇಷ್ಟದನು =ಯಾರು ಯಾರಿಗೆ ಯಾವುದು ಇಷ್ಟವೊ ಅದನ್ನು ಕೊಡುವವನು, ಉನ್ನತ ಸುಕರ್ಮ್ಮ=ಮತ್ತೊಬ್ಬರಿಂದ ಮಾಡಲಶಕ್ಯವಾದ ಅತ್ಯುತ್ತಮ, ಮತ್ತು ಬಹಳ ಕಷ್ಟಸಾಧ್ಯವಾದ ಕಾರ್ಯವನ್ನು ಮಾಡುವವನು, ಇಂತಹಾ ನಿನಗೆ ಅನವರತ=ಸರ್ವ ಕಾಲದಲ್ಲೂ, ನಮಿಪೆ–ನಮಸ್ಕಾರ ಮಾಡುವೆನು.

ಪಾಕಶಾಸನ ಪೂಜ್ಯ ಚರಣ ಪಿ
ನಾಕಿ ಸನ್ನುತ ಮಹಿಮ ಸೀತಾ
ಶೋಕನಾಶನ ಸುಲಭ ಸುಮುಖ ಸುವರ್ಣವರ್ಣನಿಭ ।
ಮಾಕಳತ್ರಮುನೀಷ್ಟ ಮಧುರಿಪು
ಏಕಮೇವಾದ್ವಿತೀಯರೂಪ ಪ್ರ
ತೀಕದೇವಗಣಾಂತರಾತ್ಮಕ ಪಾಲಿಸುವದೆಮ್ಮ ||೮||

ಪದ್ಯಾರ್ಥ.—ಪಾಕಶಾಸನಪೂಜ್ಯ ಚರಣ = ದೇವೇಂದ್ರನಿಂದ ಪೂಜ್ಯವಾದ ಪಾದಕಮಲ ಉಳ್ಳವನು, ಪಿನಾಕಿಸನ್ನುತಮಹಿಮ=ರುದ್ರದೇವರಿಂದ ಸ್ತುತ್ಯವಾದ ಮಹಿಮೆಯುಳ್ಳವನು, ಸೀತಾಶೋಕನಾಶನ = ಸೀತಾದೇವಿಯ ಶೋಕವನ್ನು ರಾಮಾವತಾರದಲ್ಲಿ ನಾಶಗೊಳಿಸಿದವನು, ಸುಲಭ=ಭಕ್ತರಿಗೆ ಸುಲಭ ಸಾಧ್ಯನು, ಅವರಿಗೆ ಯಾವಾಗಲೂ ಸುಮುಖನಾಗಿರುವನು ಸುವರ್ಣವರ್ಣನಿಭ=ಭಂಗಾರಕ್ಕೆ ಸಮವಾದ ಕಾಂತಿಯಿಂದ ಶೋಭಿಸುವವನು, ಮಾಕಳತ್ರಮನೀಷಿ=ಮಾ=ಲಕ್ಷ್ಮೀದೇವಿಯರೆಂಬ, ಕಳತ್ರ=ಹೆಂಡತಿಗೆ, ಮನೀಷಿ=ಬುದ್ಧಿ ಸ್ಥಾನೀಯನು, ಆಕೆಯ ಚಿತ್ತವು ಯಾವಾಗಲೂ ಪರಮಾತ್ಮನಲ್ಲೇ ಇರುವುದೆಂಬ ತಾತ್ಪರ್ಯ. ಮಧುರಿಪು=ಮಧು ಎಂಬ ದೈತ್ಯನನ್ನು ಸಂಹರಿಸಿದವನು. ಏಕಮೇವಾದ್ವಿತೀಯ ರೂಪಪ್ರತೀಕ=ಅಸಪೃಶರೂಪವುಳ್ಳ ಪ್ರತಿಮೆ ಎನಿಸುವನು, ದೇವಗಣಾಂತರಾತ್ಮಕನು, ಇಂತಹಾ ನೀನು, ಎಮ್ಮ=ನಮ್ಮನ್ನು, ಪಾಲಿಸುವುದು.

**ಅಪ್ರಮೇಯಾನಂತರೂಪ ಸ**
**ದಾಪ್ರಸನ್ನ ಮುಖಾಬ್ಜ ಮುಕ್ತಿ ಸು**
**ಖಪ್ರದಾಯಕ ಸುಮನಸಾರಾಧಿತ ಪದಾಂಭೋಜ ।**
**ಸ್ವಪ್ರಕಾಶ ಸ್ವತಂತ್ರ ಸರ್ವಗ**
**ಕ್ಷಿಪ್ರ ಫಲದಾಯಕ ಕ್ಷಿತೀಶ ಯ**
**ದುಪ್ರವೀರ ವಿತರ್ಕವಿಶ್ವಸುಕ್ತೈಜಸಪ್ರಾಜ್ಞ ॥೯॥**

ಪದ್ಯಾರ್ಥ.—ಅಪ್ರಮೇಯ=ಗುಣ ಕರ್ಮ ಜನ್ಮಾದಿಗಳಿಂದ ಇವನಿಂತಹವನೆಂದು ಅನುಮೇಯಿಸಲು ಸಾಧ್ಯವಲ್ಲದವನು, ಅನಂತರೂಪ; ಸದಾಪ್ರಸನ್ನ ಮುಖಾಬ್ಜ=ಯಾವಾಗಲೂ ಪ್ರಸಾದ ಸುಮುಖನಾಗಿರುವವನು, (ಪ್ರಸನ್ನವಾದ ಮುಖ ಕಮಲ ಉಳ್ಳವನು) ಮುಕ್ತಿಸುಖಪ್ರದಾಯಕ= ಮುಕ್ತಿಯಲ್ಲಿ ಸ್ವರೂಪಾನಂದವನ್ನು ಕೊಡುವವನು, ಸುಮನಸಾರಾಧಿತ ಪದಾಂಭೋಜ = ದೇವತೆಗಳಿಂದ ಪೂಜಿತವಾದ ಪಾದಕಮಲಗಳುಳ್ಳವನು, ಸ್ವಪ್ರಕಾಶ=ಸ್ವಯಂಪ್ರಕಾಶನು; ಸ್ವತಂತ್ರನು; ಸರ್ವಗ=ಸರ್ವತ್ರ ಇರುವವನು, ಕ್ಷಿಪ್ರಫಲದಾಯಕ=ಅತಿ ಶೀಘ್ರದಲ್ಲಿ ಕರ್ಮ ಫಲವನ್ನು ಜೀವರಿಗೆ ಕೊಡುವವನು, ಕ್ಷಿತೀಶ-ಭೂಮಿದೇವಿಯ ಪತಿಯು, ಯದುಪ್ರವೀರ-ಯದು

ಕುಲಶ್ರೇಷ್ಟನೆಂದು ಕೃಷ್ಣಾವತಾರದಲ್ಲಿ ಪ್ರಸಿದ್ಧಿ ಹೊಂದಿದವನು, ವಿತರ್ಕ - ತರ್ಕಿಸಲು ಸಾಧ್ಯವಲ್ಲದವನು, ವಿಶ್ವತೈಜಸ ಪ್ರಾಜ್ಞ - ಈ ರೂಪಗಳುಳ್ಳವನು.

**ಗಾಳಿನಡೆವಂದದಲಿ ನೀಲಘ**
**ನಾಳಿ ವರ್ತಿಸುವಂತೆ ಬ್ರಹ್ಮ ತ್ರಿ**
**ಶೂಲಧರ ಶಕ್ರಾರ್ಕರೆ ಮೊದಲಾದಖಿಳ ದೇವಗಣ ||**
**ಕಾಲಕರ್ಮಗುಣಾಭಿಮಾನಿ ಮ**
**ಹಾಲಕುಮಿಯನುಸರಿಸಿ ನಡೆವಳು**
**ಮೂಲಕಾರಣ ಮುಕ್ತಿದಾಯಕ ಹರಿಯೆನಿಸಿಕೊಂಬ ||೧೦||**

ಪದ್ಯಾರ್ಥ.— ಗಾಳಿನಡೆವಂದದಲಿ= ಗಾಳಿಯು ಪೂರ್ವಾದಿ ದಿಕ್ಕುಗಳಿಂದ ಪಶ್ಚಿಮದಿಕ್ಕು ಮೊದಲಾದ ಸ್ಥಳಗಳಲ್ಲಿ ಸಂಚರಿಸುತ್ತಿರಲು ಆ ಮಾರ್ಗವನ್ನನುಸರಿಸಿ, ನೀಲಘನಾಳಿ- ನೀಲಮೇಘವು, ವರ್ತಿಸುವಂತೆ= ಚಲಿಸುವಂತೆ, ಬ್ರಹ್ಮತ್ರಿಶೂಲಧರ=ಬ್ರಹ್ಮದೇವರು, ರುದ್ರದೇವರು, ಶಕ್ರ- ಇಂದ್ರದೇವರು, ಅರ್ಕ- ಸೂರ್ಯ ಮೊದಲಾದ, ಅಖಿಳದೇವಗಣವೂ ಪರಮಾತ್ಮನನ್ನನುಸರಿಸಿ ನಡೆಯುವದು. ಕಾಲ, ಕರ್ಮ, ಗುಣ ಇವುಗಳಿಗಭಿಮಾನಿಯು, ಮಹಾಲಕುಮಿ= ರಮಾದೇವಿಯರು, ಅನುಸರಿಸಿ= ಪರಮಾತ್ಮನನ್ನನುಸರಿಸಿ, ನಡೆವಳು= ನಡೆವಳು, ಮೂಲಕಾರಣ= ಇವರೆಲ್ಲರಿಗೂ ಮೂಲಕಾರಣನೂ ಮತ್ತು ಮುಕ್ತಿದಾಯಕನೂ ಹರಿ ಎನಿಸಿಕೊಂಬನು.

ತಾತ್ಪರ್ಯ.— ಗಾಳಿಯನ್ನನುಸರಿಸಿ ಮೇಘಗಳೋಡಾಡುವಂತೆ ರಮಾಬ್ರಹ್ಮಾದಿ ಸಕಲ ದೇವತೆಗಳೂ ಪರಮಾತ್ಮನು ಮಾಡಿಸಿದಂತೇ ಮಾಡುವರೇ ಆಗಲಿ ಸ್ವತಂತ್ರಧಿಂದ ಮಾಡುವ ಶಕ್ತಿ ಯಾರಿಗೂ ಇಲ್ಲ. ಇಲ್ಲಿ ಮೇಘವು ಹೇಗೆ ಗಾಳಿಯಧೀನವೋ ಹಾಗೆ ಬ್ರಹ್ಮಾದಿ ಸಕಲರೂ ಭಗವಧೀನರು.

**ಮೋಡ ಕೈಬೀಸಣಿಕೆಯಂದಲಿ**
**ಬಡಿಸುವನೆಂಬುವನ ಯತ್ನವು**
**ಕೊಡುವದೆ ಕಲ್ಪಾಂತಕಾದಗು ಲಕ್ಷ್ಮೀವಲ್ಲಭನು |**
**ಜೋಡುಕರ್ಮವ ಜೀವರೊಳು ತಾ**
**ಮಾಡಿಮಾಡಿಸಿ ಫಲಗಳುಣಿಸುವ**
**ಪ್ರೌಢರಾಜಪರಿವನ ಭಜಿಸಿ ಭವಾಬ್ಧಿ ದಾಟುವರು ||೧೧||**

ಪದ್ಯಾರ್ಥ.— ಮೋಡ-ಅಂತರಿಕ್ಷವನ್ನೆಲ್ಲಾ ಆವರಿಸಿಕೊಂಡು ಸೂರ್ಯರಶ್ಮಿಯೇ ಕೆಳಗೆ ಬೀಳದಂತೆ ಮಾಡಿರುವ ಮೇಘಸಂಘವನ್ನು, ಕೈಬೀಸಣಿಕೆಯಿಂದಲಿ-ಕೈಯೊಳಗಿರುವ ಬೀಸಣಿಕೆಯಿಂದ, ಓಡಿಸುವೆನೆಂಬುವನ ಯತ್ನವು, ಕಲ್ಪಾಂತರದಲ್ಲಾದರೂ ಕೂಡುವದೇ? ಲಕ್ಷ್ಮೀವಲ್ಲಭನು=ಶ್ರೀಹರಿಯು, ಜೋಡುಕರ್ಮವ=ಪುಣ್ಯಪಾಪಗಳೆಂಬ ದ್ವಂದ್ವಕರ್ಮಗಳನ್ನು, ಜೀವರೊಳಿದ್ದು, ತಾ ಮಾಡಿ, ಅವರಿಂದಲೂ ಮಾಡಿಸಿ, ಫಲಗಳ ಉಣಿಸುವನು ಪ್ರೌಢರಾದವರು=ಜ್ಞಾನಿಗಳು, ಇವನ ಭಜಿಸಿ, ಭವಾಬ್ಧಿ-ಸಂಸಾರಸಮುದ್ರವನ್ನು ದಾಟುವರು.

ತಾತ್ಪರ್ಯ.— ಅಂತರಿಕ್ಷವನ್ನೆಲ್ಲಾ ಆವರಿಸಿಕೊಂಡಿರುವ ಮೋಡ (ಮೇಘಸಮೂಹ) ವನ್ನು ಕೈ ಬೀಸಣಿಕೆಯಿಂದ ಓಡಿಸುವೆನೆಂಬುವನ ಎತ್ನವು ಎಂದಿಗಾದರೂ ಸಾಗೀತೆ? ಎಂದಿಗೂ ಇಲ್ಲ. ಹಾಗೆ ಸರ್ವ ಪ್ರಪಂಚವನ್ನು ವ್ಯಾಪಿಸಿಕೊಂಡಿರುವ ಪರಮಾತ್ಮನಿಂದ ಆಗುವ ಕಾರ್ಯವನ್ನು ಇತರರು ಮಾಡಲಾರರು. ಇಲ್ಲಿ ಮೋಡದಂತೆ ಸರ್ವ ಜಗತ್ತನ್ನೂ ಆವರಿಸಿಕೊಂಡಿರುವದು. ತ್ರಿವಿಧ ಜೀವರ ಪ್ರಾರಬ್ಧ, ಆಗಾಮಿ, ಸಂಚಿತವೆಂಬ ಕರ್ಮಗಳು, ಇವುಗಳನ್ನು ಕಳೆದುಕೊಳ್ಳುವ ಶಕ್ತಿಯು ಅಸ್ವತಂತ್ರನಾದ ಜೀವನಿಗುಂಟೆ? ಮಹಾ ಸಮರ್ಥನಾದ ಪರಮಾತ್ಮನಿಂದಲೇ ಆಗಬೇಕೆಂದು ತಾತ್ಪರ್ಯ. ಮೇಘದಂತೆ ಜೀವರ ಪ್ರಾರಬ್ಧಾದಿ ಕರ್ಮಗಳು, ಗಾಳಿಯಂತೆ ಪರಮಾತ್ಮನು ಬೀಸಣಿಕೆಯಿಂದ ಮೋಡವನ್ನೋಡಿಸಬೇಕೆಂಬ ಪ್ರಯತ್ನದಂತೆ ಜೀವನ ಕರ್ತೃತ್ವವೆಂದು ತಿಳಿಯಬೇಕು. ಶ್ರೀಹರಿಯು ಜೀವರಲ್ಲಿದ್ದು ಪುಣ್ಯಪಾಪಾದಿ ಕರ್ಮಗಳನ್ನು ಮಾಡಿ ಮಾಡಿಸಿ ಅವರವರ ಯೋಗ್ಯತಾನುಸಾರವಾಗಿ ಫಲವನ್ನು ಅವರಿಗುಣಿಸುವನು. ಇಂತಹಾ ಮಹಾನುಭಾವನನ್ನು ಜ್ಞಾನಿಗಳು ಭಜಿಸಿ ಸಂಸಾರದಿಂದ ಮುಕ್ತರಾಗುವರೆಂಬ ತಾತ್ಪರ್ಯ.

**ಕ್ಲೇಶಮೋಹ ಜ್ಞಾನದೋಷ ವಿ**
**ನಾಶಕ ವಿರಿಂಚಾಂಡದೊಳಗಾ**
**ಕಾಶದೋಪಾದಿಯಲಿ ತುಂಬಿಹನೆಲ್ಲ ಕಾಲದಲಿ ।**
**ಘಾಸಿಗೊಳಿಸದೆ ತನ್ನವರ ನಾ**
**ಯಾಸವಿಲ್ಲದೆ ರಕ್ಷಿಸುವ ಮಹಾಕರು**
**ಣಾಸಮುದ್ರ ಪ್ರಸನ್ನವವನಾಂಭೋಜ ವೈರಾಜ ॥೧೩॥**

ಪದಾರ್ಥ.—ಕ್ಲೇಶ, ಮೋಹ, ಅಜ್ಞಾನ ಇವೇ ಮೊದಲಾದ, ದೋಷವಿನಾಶಕ-ದೋಷಗಳನ್ನು ನಾಶಮಾಡುವವನು, ವಿರಿಂಚಾಂಡದೊಳು=ಬ್ರಹ್ಮಾಂಡದಲ್ಲಿ, ಆಕಾಶದೇಶಾದಿಯಲ್ಲಿ, ಎಲ್ಲಕಾಲದಲ್ಲೂ, ತುಂಬಿಹನು=ವ್ಯಾಪಿಸಿಕೊಂಡಿರುವನು. ಮಹಾಕರುಣಾಸಮುದ್ರನು, ಪ್ರಸನ್ನವದನಾಂಭೋಜ=ಪ್ರಸನ್ನವಾದ ಮುಖ ಕಮಲವುಳ್ಳವನು, ವೈರಾಜ=ವಿರಾಟ್ ಎಂಬ ಬ್ರಹ್ಮಾಂಡವು ಪರಮಾತ್ಮನಿಗೆ ಪ್ರತಿಮಾ ಸ್ಥಾನೀಯವಾಗಿರುವುದರಿಂದ ವೈರಾಜನೆಂದು ಹೆಸರುಳ್ಳವನು. ಇಂತಹಾ ಶ್ರೀಹರಿಯು ತನ್ನವರ, ಘಾಸಿಗೊಳಿಸದೆ=ಕಷ್ಟಪಡಿಸದೆ, ಆಯಾಸವಿಲ್ಲದೆ, ಸಂರಕ್ಷಿಸುವ-ಚೆನ್ನಾಗಿ ಪಾಲಿಸುವನು.

ಕನ್ನಡಿಯ ಕೈಪಿಡಿದು ನೋಳ್ಪನ
ಕಣ್ಣುಗಳು ಕಂಡಲ್ಲಿ ಎರಗದೆ
ತನ್ನಪೋಲ್ ಪ್ರತಿಬಿಂಬ ಕಾಂಬುವದರ್ಪಣವ ಬಿಟ್ಟು ||
ಧನ್ಯರಿಳೆಯೊಳಗೆಲ್ಲ ಕಡೆಯಲಿ
ನಿನ್ನ ರೂಪವ ನೋಡಿ ಸುಖಿಸುತ
ಸನ್ನುತಿಸುತಾನಂದ ವಾರುದಿಯೊಳಗೆ ಮುಳುಗಿಹರು ||೧೩||

ಪದ್ಯಾರ್ಥ.—ಕನ್ನಡಿಯಕೈಪಿಡಿದು-ಕೈಯಲ್ಲಿ ಹಿಡಿದು, ನೋಳ್ಪನ=ನೋಡುವವನ, ಕಣ್ಣುಗಳು, ಕಂಡಲ್ಲಿ ಎರಗದೆ=ಕಂಡಲ್ಲಿ ಹೋಗದೇ, ತನ್ನಪೋಲ್=ತನ್ನಂತೆಯೇ, ಪ್ರತಿಬಿಂಬವನ್ನು, ಕಾಂಬುವ-ಕಾಣುವ, ನಿನ್ನ ಏಕಾಂತ ಭಕ್ತರೆನಿಸುವ, ಧನ್ಯರು=ಪುಣ್ಯಾತ್ಮರು, ಇಳೆಯೊಳಗೆ=ಭೂಮಿಯಲ್ಲಿ ದರ್ಪಣವಬಿಟ್ಟು-ಕನ್ನಡಿಯನ್ನು ಬಿಟ್ಟು, ಎಲ್ಲ ಕಡೆಯಲಿ, ನಿನ್ನ ರೂಪವ ನೋಡಿ, ಸುಖಿಸುತ, ಸನ್ನುತಿಸುವ=ಚೆನ್ನಾಗಿ ಸ್ತೋತ್ರಮಾಡುತ್ತಾ, ಆನಂದವಾರುಧಿಯೊಳಗೆ-ಆನಂದ ಸಮುದ್ರದಲ್ಲಿ ಮುಣುಗಿಹರು.

ತಾತ್ಪರ್ಯ.—ಕೈಯಲ್ಲಿ ಕನ್ನಡಿಯನ್ನು ಹಿಡಿದು ನೋಡಿಕೊಂಡರೆ ನಮ್ಮ ಕಣ್ಣುಗಳು ಕಂಡಲ್ಲಿ ಹೋಗದೆ ಅದರಲ್ಲಿ ಕಾಣುವ ನಮ್ಮ ಪ್ರತಿಬಿಂಬದ ಮೇಲೆಯೇ ಇರುವವು. ಹೀಗೆ ನಾವು ಸಾಧಾರಣ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬವನ್ನು ನೋಡಿ ಸುಖಿಸುವೆವು. ನಿನ್ನ ಏಕಾಂತ ಭಕ್ತರು ಕನ್ನಡಿ ಇಲ್ಲದೆ ಸರ್ವತ್ರ ವ್ಯಾಪ್ತವಾದ *ಬಿಂಬರೂಪಿಯಾದ ನಿನ್ನ ರೂಪ

ವನ್ನು ಬೀಕಾದಲ್ಲಿ ನೋಡಿ ಸಂತೋಷಪಡುತ್ತಾ, ಸ್ತೋತ್ರಮಾಡುತ್ತಾ ಆನಂದ ಸಮುದ್ರದಲ್ಲಿ ಮುಣಗಿರುವರು. ಆಹಾ! ಅವರು ಎಂತಹ ಧನ್ಯರು.

ಅವತಾರಿಕೆ:—ಮುಂದಿನ ಪದ್ಯಗಳಿಂದ ಭೋಜನ ಪದಾರ್ಥಗಳಿಗ ಭಿಮಾನಿ ದೇವತೆಗಳನ್ನು ಹೇಳುತ್ತಾರೆ.—

**ಅನ್ನಮಾನಿ ಶಶಾಂಕನೊಳು ಕಾ**
**ರುಣ್ಯಸಾಗರ ಕೇಶವನು ಪರ**
**ಮಾನ್ನದೊಳು ಭಾರತಿಯು ನಾರಾಯಣನು ಭಕ್ಷದೊಳು ।**
**ಸೊನ್ನಗದಿರನು ಮಾಧವನು ಶೃತಿ**
**ಸನ್ನುತ ಶ್ರೀಲಕ್ಷ್ಮಿ ಘೃತದೊಳು**
**ಮಾನ್ಯ ಗೋವಿಂದಾಭಿಧನು ಇರುತಿಪ್ಪನೆಂದೆಂದು ॥೧೪॥**

ಪದ್ಯಾರ್ಥ.—ಅನ್ನಮಾನಿ=ಅನ್ನಕ್ಕಭಿಮಾನಿಯು, ಶಶಾಂಕ=ಚಂದ್ರನು, ಶಶಾಂಕನೊಳು=ಚಂದ್ರನಲ್ಲಿ, ಕಾರುಣ್ಯಸಾಗರ=ಕರುಣಾಸಮುದ್ರನಾದ ಕೇಶವಮೂರ್ತಿಯನ್ನು ಚಿಂತಿಸಬೇಕು. ಪರಮಾನ್ನದೊಳು=ಪಾಯಸದಲ್ಲಿ, ಭಾರತಿಯು=ಭಾರತೀದೇವಿಯರನ್ನು ಅವರಲ್ಲಿ ನಾರಾಯಣಮೂರ್ತಿಯನ್ನೂ ಚಿಂತಿಸಬೇಕು. ಭಕ್ಷದೊಳು, ಸೊನ್ನಗದಿರ = ಹಿರಣ್ಯರಶ್ಮಿ ಎಂಬ ಸೂರ್ಯನನ್ನೂ, ಅವನಲ್ಲಿ ಮಾಧವಮೂರ್ತಿಯನ್ನೂ ಚಿಂತಿಸಬೇಕು ಶೃತಿಸನ್ನುತ=ಅಂಭ್ರಣೀ ಸೂಕ್ತ, ಶ್ರೀಸೂಕ್ತ, ಮೊದಲಾದ ಶೃತಿಪಾದ್ಯರಾದ ರಮಾದೇವಿಯರು, ಘೃತದೊಳು-ತುಪ್ಪದೊಳಗೂ, ಅವರಲ್ಲಿ ಲೋಕಮಾನ್ಯನಾದ, ಗೋವಿಂದಾಭಿಧನು=ಗೋವಿಂದನಾಮಕ ಶ್ರೀಪರಮಾತ್ಮನೂ ಇರು ವನೆಂದು ಚಿಂತಿಸಬೇಕು.

ತಾತ್ಪರ್ಯ.—ಅನ್ನಾಭಿಮಾನಿಯು ಚಂದ್ರನು. ಅವನಲ್ಲಿ ಕೇಶವಮೂರ್ತಿಯನ್ನು ಚಿಂತಿಸಬೇಕು. ಪರಮಾನ್ನಾಭಿಮಾನಿಯು ಭಾರತೀದೇವಿಯರು ಅವರಲ್ಲಿ ನಾರಾಯಣಮೂರ್ತಿಯನ್ನು ಚಿಂತಿಸಬೇಕು. ಭಕ್ಷ್ಯಾಭಿಮಾನಿಯು ಸೂರ್ಯನು. ಅವನಲ್ಲಿ ಮಾಧವಮೂರ್ತಿಯನ್ನೂ ಚಿಂತಿಸಬೇಕು. ತುಪ್ಪಕ್ಕೆ ಅಭಿಮಾನಿಯು—ಲಕ್ಷ್ಮೀದೇವಿಯರು. ಅವರಲ್ಲಿ ನಾರಾಯಣಮೂರ್ತಿಯನ್ನು ಚಿಂತಿಸಬೇಕು. "ಅನ್ನಾಭಿಮಾನೀ ಚಂದ್ರಸ್ತು ವಿಚಿಂತ್ಯಸ್ತತ್ರ ಕೇಶವಃ" ಇತ್ಯಾದಿ ಸತ್ತತ್ವ ರತ್ನಮಾಲೆ ಎಂಬ ಗ್ರಂಥದ ಆಧಾರವು ಇವುಗಳಿಗೆ ಮೂಲವೆಂದು ತಿಳಿಯಬೇಕು.

ಕ್ಷೀರವಮಾನಿ ಸರಸ್ವತೀ ಜಗ
ತ್ಸಾರವಿಷ್ಣುವ ಚಿಂತಿಸುವದು ಸ
ರೋರುಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರೀ ||
ಮಾರುತನು ನವನೀತದೊಳು ಸಂ
ಪ್ರೇರಕ ತ್ರಿವಿಕ್ರಮನು ದಧಿಯೊಳು
ವಾರಿನಿಧಿ ಚಂದ್ರಮರೊಳಗೆ ಇರುತಿಪ್ಪ ವಾಮನನು ||೧೫||

ಪದ್ಯಾರ್ಥ.—ಕ್ಷೀರವಮಾನಿ=ಕ್ಷೀರಾಭಿಮಾನಿಯು, ಸರಸ್ವತೀ=ಸರಸ್ವತೀದೇವಿಯರು, ಅವರಲ್ಲಿ ಜಗತ್ಸಾರ – ಜಗತ್ತಿನಲ್ಲಿ ಸಾರಭೂತವಾದ, ವಿಷ್ಣುವ=ವಿಷ್ಣುಮೂರ್ತಿಯನ್ನು ಚಿಂತಿಸಬೇಕು. ಮಂಡಿಗೆಯೊಳು, ಸರೋರುಹಾಸನ=ಬ್ರಹ್ಮದೇವರನ್ನೂ, ಅವರಲ್ಲಿ ಮಧುವೈರೀ=ಮಧುಸೂಧನಮೂರ್ತಿಯನ್ನೂ ಚಿಂತಿಸಬೇಕು. ಮಾರುತನು-ವಾಯುದೇವರು, ನವನೀತದೊಳು=ಬೆಣ್ಣೆಯಲ್ಲೂ ಅವರಲ್ಲಿ ಪ್ರೇರಕನಾಗಿ, ತ್ರಿವಿಕ್ರಮನಿರುವನೆಂದು ಚಿಂತಿಸಬೇಕು. ದಧಿಯೊಳಗೆ=ಮೊಸರಿನಲ್ಲಿ, ವಾರಿನಿಧಿ-ವರುಣನು, ಚಂದ್ರನು ಇರುವರು. ಅವರೊಳಗೆ ವಾಮನನು ಇರುತಿಪ್ಪ.

ತಾತ್ಪರ್ಯ.—ಕ್ಷೀರಕ್ಕೆ ಅಭಿಮಾನಿಯು ಸರಸ್ವತೀ ದೇವಿಯರು, ಅವರಲ್ಲಿ ವಿಷ್ಣುಮೂರ್ತಿಯನ್ನು ಚಿಂತಿಸಬೇಕು, ಮಂಡಿಗೆಗಳಿಗಭಿಮಾನಿ-ಬ್ರಹ್ಮದೇವರು, ಅವರಲ್ಲಿ ಮಧುಸೂಧನಮೂರ್ತಿಯನ್ನು ಚಿಂತಿಸಬೇಕು. ಬೆಣ್ಣೆಗೆ ಅಭಿಮಾನಿಯು ವಾಯುದೇವರು, ಅವರಲ್ಲಿ ತ್ರಿವಿಕ್ರಮನನ್ನು ಚಿಂತನೆಮಾಡಬೇಕು. ಮೊಸರಿಗೆ ಅಭಿಮಾನಿಯು ವರುಣ, ಚಂದ್ರ, ಅವರಲ್ಲಿ ವಾಮನಮೂರ್ತಿಯನ್ನು ಚಿಂತನೆಮಾಡಬೇಕು.

ಗರುಡ ಸೂಪಕೆಮಾನಿ ಶ್ರೀ ಶ್ರೀ
ಧರನು ದೇವನು ಪತ್ರಶಾಕಕೆ
ವರನೆನಿಪ ಮಿತ್ರಾಖ್ಯ ಸೂರ‍್ಯ ಹೃಷೀಕೆಪನಮೂರ್ತಿ ||
ಉರಗರಾಜನು ಫಲ ಸುಶಾಕಕೆ
ವರನೆನಿಸುವನು ಪದ್ಮನಾಭನ
ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲ ಕಾಲದಲಿ ||೧೬||

ಪದ್ಯಾರ್ಥ.—ಸೂಪಕೆ=ತೊವ್ವೆಗೆ ಮಾನಿ=ಅಭಿಮಾನಿಯು, ಗರುಡನು. ಅವನಲ್ಲಿ ಶ್ರೀ ಶ್ರೀಧರನು ದೇವನು = ಶ್ರೀಧರನೆಂಬ ದೇವನನ್ನು

ಚಿಂತಿಸಬೇಕು. ಪತ್ರಶಾಕಕೆ-ಸೊಪ್ಪು ಸಂಬಂಧವಾದ ಶಾಕಗಳಿಗೆ, ಮಿತ್ರಾಖ್ಯ ಸೂರ್ಯನು ವರನೆನಿಪ-ಅಭಿಮಾನಿ ಎನಿಸುವನು, ಅವನಲ್ಲಿ ಹೃಷೀಕಪನಮೂರ್ತಿ-ಹೃಷೀಕೇಶನಮೂರ್ತಿಯನ್ನು ಚಿಂತಿಸಬೇಕು. ಫಲಸುಶಾಕಕೆ=ಬಾಳೆ ಮೊದಲಾದ ಶಾಕಗಳಿಗೆ, ಉರಗರಾಜನು=ಶೇಷನು, ವರನೆನಿಸುವನು=ಅಭಿಮಾನಿ ಎನಿಸುವನು, ಅವನಲ್ಲಿ ಪದ್ಮನಾಭನ ಸ್ಮರಿಸಿ, ಎಲ್ಲ ಕಾಲದಲ್ಲೂ, ಬಲ್ಲವರು=ಜ್ಞಾನಿಗಳು ಭುಂಜಿಸುತಿಹರು.

ತಾತ್ಪರ್ಯ.— ತೊವ್ವೆಗಭಿಮಾನಿಯು ಗರುಡನು, ಅವನಲ್ಲಿ ಶ್ರೀಧರಮೂರ್ತಿಯನ್ನು ಚಿಂತಿಸಬೇಕು. ಸೊಪ್ಪಿನ ಶಾಕಗಳಿಗಭಿಮಾನಿಯು ಮಿತ್ರನೆಂಬ ಸೂರ್ಯ ಅವನಲ್ಲಿ ಹೃಷೀಕೇಶನನ್ನು ಚಿಂತಿಸಬೇಕು. ಬಾಳೇಕಾಯಿ ಮೊದಲಾದ ಕಾಯಿಪಲ್ಯಗಳಿಗೆ ಶೇಷನು ಅಭಿಮಾನಿಯು, ಅವನೊಳಗೆ ಪದ್ಮನಾಭಮೂರ್ತಿಯನ್ನು ಚಿಂತಿಸುತ್ತಾ ಭೋಜನಮಾಡಬೇಕು.

ಗೌರಿ ಸರ್ವಾಮ್ಲಸ್ಥಳೆನಿಪಳು
ಶೌರಿದಾಮೋದರನ ತಿಳಿವುದು
ಗೌರಿಪಾನಾಮ್ಲಸ್ಥ ಸಂಕರ್ಷಣನ ಚಿಂತಿಪುದು ||
ಸಾರಶರ್ಕರ ಗುಡದೊಳಗೆ ವೃ
ತ್ರಾರಿ ಇರುತಿಹ ವಾಸುದೇವನ
ಸೂರಿಗಳು ಧೇನಿಪರು ಪರಮಾದರದಿ ಸರ್ವತ್ರ ||೧೭||

ಪದ್ಯಾರ್ಥ.— ಗೌರಿ=ಪಾರ್ವತೀದೇವಿಯರು, ಸರ್ವಾಮ್ಲಸ್ಥಳೆನಿಪಳು=ಎಲ್ಲಾ ಹುಳಿ ಪದಾರ್ಥಗಳಿಗೂ ಅಭಿಮಾನಿ ಎನಿಸುವರು. ಅವರಲ್ಲಿ ಶೂರವಂಶದಲ್ಲವತರಿಸಿ, ಕೃಷ್ಣನೆಂಬ ಹೆಸರಿನಿಂದ ತಾಯಿಯಾದ ಯಶೋದೆಯಿಂದ ನೋಟದಲ್ಲಿ ಹಗ್ಗದಿಂದ ಕಟ್ಟಿಸಿಕೊಳ್ಳಲ್ಪಟ್ಟುದುದರಿಂದ ದಾಮೋದರನೆಂದು ಹೆಸರು ಪಡೆದ ಮೂರ್ತಿಯನ್ನು ಚಿಂತಿಸಬೇಕು. ಗೌರಿಪ=ಗೌರೀಪತಿಯಾದ ರುದ್ರದೇವರು, ಅನಾಮ್ಲಸ್ಥ=ಹುಳಿಯಿಲ್ಲದ ಪದಾರ್ಥಗಳಗಭಿಮಾನಿಯು. ಅವರೊಳಗೆ ಸಂಕರ್ಷಣನನ್ನು ಚಿಂತನೆಮಾಡಬೇಕು. ಸಾರಶರ್ಕರಗುಡದೊಳಗೆ=ಸಾರವಾದ ಸಕ್ಕರೆ, ಬೆಲ್ಲ ಇವುಗಳಲ್ಲಿ ವೃತ್ರಾರಿ ಇರುತಿಹ=ದೇವೇಂದ್ರನು ಇರುವನು. ಅವನಲ್ಲಿ ವಾಸುದೇವಮೂರ್ತಿಯನ್ನು ಸೂರಿಗಳು=ಜ್ಞಾನಿಗಳು, ಪರಮಾದರದಿ ಸರ್ವತ್ರ, ಧೇನಿಪರು=ಧ್ಯಾನಮಾಡುವರು

ತಾತ್ಪರ್ಯ.—ಪಾರ್ವತೀದೇವಿಯರು ಹುಳಿ ಪದಾರ್ಥಗಳೆಲ್ಲಕ್ಕೂ ಅಭಿಮಾನಿ ಎನಿಸುವರು, ಅವರಲ್ಲಿ ದಾಮೋದರಮೂರ್ತಿಯನ್ನು ಚಿಂತಿಸಬೇಕು. ಹುಳಿಯಿಲ್ಲದ ಪದಾರ್ಥಗಳಿಗೆ ರುದ್ರದೇವರು ಅಭಿಮಾನಿಗಳು, ಅವರಲ್ಲಿ ಸಂಕರ್ಷಣಮೂರ್ತಿಯನ್ನು ಚಿಂತಿಸಬೇಕು. ಸಕ್ಕರೆ, ಬೆಲ್ಲ ಇವುಗಳಿಗಭಿಮಾನಿಯು ದೇವೇಂದ್ರನು, ಅವನಲ್ಲಿ ವಾಸುದೇವನನ್ನು ಚಿಂತಿಸಬೇಕು.

ಸ್ಮರಿಸು ವಾಚಸ್ಪತಿಯ ಸೂಪ
ಸ್ಕರದೊಳಗೆ ಪ್ರದ್ಯುಮ್ನನಿಪ್ಪನು
ನಿರಯಪತಿ ಯಮಧರ್ಮ ಕಟುದ್ರವ್ಯದೊಳಗನಿರುದ್ಧ ।
ಸರಷಪ ಶ್ರೀರಾಮಠೇಳದಿ
ಸ್ಮರನು ಶ್ರೀಪುರುಷೋತ್ತಮನು ಕ
ರ್ಪೂರದಿ ಚಿಂತಿಸಿ ಪೂಜಿಸುತಲಿರು ಪರಮಭಕುತಿಯಲಿ ॥೧೮॥

ಪದ್ಯಾರ್ಥ.—ವಾಚಸ್ಪತಿಯ=ಬೃಹಸ್ಪತ್ಯಾಚಾರ್ಯರನ್ನು, ಸೂಪಸ್ಕರದೊಳಗೆ-ಅಡಿಗೆಗೆ ಬೇಕಾದ ಪದಾರ್ಥಗಳಲ್ಲಿ ಸ್ಮರಿಸು, ಅವರಲ್ಲಿ ಪ್ರದ್ಯುಮ್ನನಿಪ್ಪನು. ಕಟುದ್ರವ್ಯದೊಳಗೆ=ಕಹಿಪದಾರ್ಥಗಳೊಳಗೆ, ನಿರಯಪತಿ ಯಮಧರ್ಮ=ನರಕಕ್ಕೆ ಅಧಿಪತಿಯಾದ ಯಮಧರ್ಮನನ್ನೂ, ಅವನೊಳಗೆ ಅನಿರುದ್ಧನನ್ನೂ ಚಿಂತಿಸು. ಸರಷಪ-ಸಾಸಿವೆ, ಶ್ರೀರಾಮಠ=ಹಿಂಗು, ಏಳದಿ=ಏಲಕ್ಕಿ, ಕರ್ಪೂರದಿ=ಕರ್ಪೂರ ಈ ನಾಲ್ಕರಲ್ಲೂ, ಸ್ಮರನ=ಮನ್ಮಥನನ್ನೂ ಅವನೊಳಗೆ ಪುರುಷೋತ್ತಮನನ್ನೂ ಚಿಂತಿಸಿ, ಪರಮ ಭಕುತಿಯಲಿ ಪೂಜಿಸುತಲಿರು.

ತಾತ್ಪರ್ಯ.—ಅಡಿಗೆಯ ಸಾಮಗ್ರಿಯಲ್ಲಿ ಬೃಹಸ್ಪತಿಯನ್ನು ಅವರಲ್ಲಿ ಪ್ರದ್ಯುಮ್ನಮೂರ್ತಿಯನ್ನು ಚಿಂತಿಸು. ಕಹಿಪದಾರ್ಥಗಳಲ್ಲಿ ಯಮಧರ್ಮನನ್ನು ಅವನಲ್ಲಿ ಅನಿರುದ್ಧಮೂರ್ತಿಯನ್ನು ಚಿಂತಿಸು. ಸಾಸವೆ, ಹಿಂಗು, ಏಲಕ್ಕಿ, ಕರ್ಪೂರ ಈ ನಾಲ್ಕರಲ್ಲಿ ಮನ್ಮಥನನ್ನೂ, ಅವನಲ್ಲಿ ಪುರುಷೋತ್ತಮನನ್ನು ಪರಮ ಭಕ್ತಿಯಿಂದ ಪೂಜಿಸುತ್ತಲಿರು.

ನಾಲಿಗಿಂದಲಿ ಸ್ವೀಕರಿಪರಸ
ಪಾಲುಮೊದಲಾದದರೊಳಗೆ ಘೃತ
ತೈಲಪಕ್ವ ಪದಾರ್ಥದೊಳಗಿಹ ಚಂದ್ರನಂದನನ ||
ಪಾಲಿಸುವಧೋಕ್ಷಜನ ಚಿಂತಿಸು
ಸ್ಥೂಲ ಕೂಷ್ಮಾಂಡ ತಿಲಮಾಷಜ
ಲಲಿತಭಕ್ಷದೊಳುದಕ್ಷನು ಲಕ್ಷ್ಮೀನರಸಿಂಹ ||೧೯||

ಪದ್ಯಾರ್ಥ.—ನಾಲಿಗೆಯಿಂದಲಿ, ಸ್ವೀಕರಿಪ, ರಸ, ರಸವತ್ತಾದ ಪಾಲು ಮೊದಲಾದುದರೊಳಗೆ, ಘೃತ=ತುಪ್ಪ, ತೈಲ=ಎಣ್ಣೆ ಇವುಗಳಿಂದ, ಪಕ್ವಪದಾರ್ಥದೊಳಗೆ=ಪಕ್ವಮಾಡಿದ ಭಕ್ಷದೊಳಗೆ, ಇಹ=ಇರುವ, ಚಂದ್ರನಂದನನ=ಬುಧನನ್ನೂ, ಅವನನ್ನು ಪಾಲಿಸುವ=ಅವನಲ್ಲಿದ್ದು ಪಾಲಿಸುತ್ತಿರುವ, ಅಧೋಕ್ಷಜನ ಚಿಂತಿಸು, ಸ್ಥೂಲವಾದ ಕೂಷ್ಮಾಂಡ=ಬೂದುಕುಂಬಳಕಾಯಿ, ತಿಲ=ಎಳ್ಳು, ಮಾಷಜ=ಉದ್ದು ಇವುಗಳಿಂದ ಮಾಡಲ್ಪಟ್ಟ ಲಲಿತಭಕ್ಷದೊಳು, ದಕ್ಷನು=ದಕ್ಷಪ್ರಜೇಶ್ವರನನ್ನೂ, ಅವನಲ್ಲಿ ಲಕ್ಷ್ಮೀನರಸಿಂಹನನ್ನೂ ಚಿಂತಿಸು.

ತಾತ್ಪರ್ಯ.—ನಾಲಿಗೆಯಿಂದ ರುಚಿಯನ್ನು ತೆಗೆದುಕೊಳ್ಳುವ ಅಂದರೆ ಹಲ್ಲಿನಿಂದ ಅಗಿಯದೆ ಪಾನಮಾಡುವ ರಸ, ಹಾಲು ಮೊದಲಾದವುಗಳಿಗೂ ತುಪ್ಪ ಎಣ್ಣೆಯಿಂದ ಪಕ್ವಮಾಡಿದ ಪದಾರ್ಥಗಳಿಗೂ ಅಭಿಮಾನಿಯು ಬುಧನು. ಅವನಲ್ಲಿ ಅಧೋಕ್ಷಜ ಮೂರ್ತಿಯನ್ನು ಚಿಂತಿಸು. ಬೂದುಕುಂಬಳ, ಎಳ್ಳು, ಉದ್ದು ಇವುಗಳಿಂದ ಮಾಡಲ್ಪಟ್ಟ ಹಪ್ಪಳ ಸಂಡಿಗೆ ಮೊದಲಾದವುಗಳಿಗೆ ಅಭಿಮಾನಿಯು ದಕ್ಷಪ್ರಜೇಶ್ವರನು. ಅವನಲ್ಲಿ ಶ್ರೀಲಕ್ಷ್ಮೀನರಸಿಂಹಮೂರ್ತಿಯನ್ನು ಚಿಂತಿಸು.

ಮನುವು ಮಾಷ ಸುಭಕ್ಷದೊಳು ಚಿಂ
ತನೆಯಮಾಡಚ್ಯುತನ ನಿರುತಿ
ಮನೆ ಎನಿಪ ಲವಣದೊಳು ಮರೆಯದೆ ಶ್ರೀಜನಾರ್ದನನ ||
ನೆನೆವುತಿರು ಫಲರಸಗಳೊಳು ಪ್ರಾ
ಣನನುಪೇಂದ್ರನ ವಿಳ್ಯದೆಲೆಯೊಳು
ದ್ಯುನದಿ ಹರಿರೂಪವನೆ ಕೊಂಡಾಡುತಲಿ ಸುಖಿಸುತಿರು ||೨೦||

ಪದ್ಯಾರ್ಥ.— ಮಾಷಸುಭಕ್ಷದೊಳು=ವಡೆ ಮೊದಲಾದವುಗಳೊಳಗೆ ಮನುವು=ಸ್ವಾಯಂಭುವಮನುವನ್ನೂ, ಅವನೊಳಗೆ, ಅಚ್ಯುತನ, ಚಿಂತನೆಯ ಮಾಡು. ನಿರಋತಿ= ನಿರಋತಿಯು, ಮನೆಯೆನಿಪ-ವಾಸಸ್ಥಾನವಾಗಿರುವ, ಲವಣದೊಳು=ಉಪ್ಪಿನಲ್ಲಿ, ಶ್ರೀಜನಾರ್ಧನನ – ಜನಾರ್ದನ ಮೂರ್ತಿಯನ್ನು, ಮರೆಯದೆ ನೆನೆವುತಿರು. ಫಲರಸಗಳೊಳು=ಹಣ್ಣುಗಳ ರಸದಲ್ಲಿ; ಪ್ರಾಣನ-ಪ್ರಾಣನನ್ನೂ, ಅವನಲ್ಲಿ ಉಪೇಂದ್ರನನ್ನೂ ಚಿಂತಿಸು. ವೀಳ್ಯದೆಲೆಯೊಳು, ದ್ಯುನದಿ=ಗಂಗೆಯನ್ನೂ, ಆಕೆಯಲ್ಲಿ ಹರಿರೂಪವನೆ ಕೊಂಡಾಡುತಲೆ ಸುಖಿಸುತ್ತಿರು.

ತಾತ್ಪರ್ಯ.— ವಡೆ ಮೊದಲಾದ ಉದ್ದಿನ ಭಕ್ಷದಲ್ಲಿ ಸ್ವಾಯಂಭುವ ಮನುವನ್ನೂ ಅವನಲ್ಲಿ ಅಚ್ಯುತಮೂರ್ತಿಯನ್ನೂ ಚಿಂತಿಸು. ಲವಣದಲ್ಲಿ-ನಿರಋತಿಯನ್ನೂ ಅವನಲ್ಲಿ ಜನಾರ್ಧನನ್ನೂ ಚಿಂತಿಸು. ಫಲಗಳ ರಸಗಳಲ್ಲಿ ಪಂಚಪ್ರಾಣರ ಪೈಕಿ ಒಬ್ಬನಾದ ಪ್ರಾಣನನ್ನೂ ಅವನಲ್ಲಿ ಉಪೇಂದ್ರನನ್ನೂ ಚಿಂತಿಸು. ವೀಳ್ಯದೆಲೆಯೊಳು=ಗಂಗೆಯನ್ನೂ ಆಕೆಯಲ್ಲಿ ಹರಿಯನ್ನೂ ಕೊಂಡಾಡಿ ಸುಖದಿಂದಿರು.

**ವೇದವಿನುತಗೆ ಬುಧನು ಸುಸ್ವಾ**
**ದೋದಕಾಧಿಪನೆನಿಸಿಕೊಂಬನು**
**ಶ್ರೀದಕೃಷ್ಣನ ತಿಳಿದು ಪೂಜಿಸುತಿರು ನಿರಂತರದಿ ॥**
**ಸಾಧುಕರ್ಮಪ ಪುಷ್ಕರನು ಸುನಿ**
**ವೇದಿತ ಪದಾರ್ಥಗಳ ಶುದ್ಧಿಯ**
**ಗೈದು ಗೈಸುತ ಹಂಸನಾಮಕಗರ್ಪಿಸುತಲಿಪ್ಪ ॥೨೧॥**

ಪದ್ಯಾರ್ಥ.— ವೇದವಿನುತಗೆ=ವೇದದಿಂದ ಹೊಗಳಿಸಿಕೊಳ್ಳಲ್ಪಡುವ ಶ್ರೀಹರಿಗೆ, ಬುಧನು, ಸುಸ್ವಾದೋದಕಾಧಿಪನೆನಿಸಿಕೊಂಬನು-ಉತ್ತಮವಾದ ಸಿಹಿನೀರಿಗೆ ಅಭಿಮಾನಿ ಎಂದೆನಿಸಿಕೊಂಬನು. ಅವನಲ್ಲಿ ಶ್ರೀದ-ಐಶ್ವರ್ಯಪ್ರದನಾದ ಶ್ರೀಕೃಷ್ಣನ ತಿಳಿದು, ನಿರಂತರದಿ ಪೂಜಿಸುತಿರು. ಸಾಧುಕರ್ಮಪ-ಪುಣ್ಯ ಕರ್ಮಾಭಿಮಾನಿಯಾದ ಪುಷ್ಕರನು, ಸುನಿವೇದಿತಪದಾರ್ಥಗಳ = ನೈವೇದ್ಯಕ್ಕೆ ಇಟ್ಟಿರುವ ಪದಾರ್ಥಗಳನ್ನು, ಶುದ್ಧಿಯಗೈದು=

ಶುದ್ಧಿಯನ್ನು ಮಾಡಿ, ಗೈಸುತ-ಅಧಿಕ ಶುದ್ಧಿಗೋಸ್ಕರ, ಹಂಸನಾಮಕಗ ರ್ಪಿಸುತಲಿಪ್ಪ-ಹಂಸನಾಮಕ ಪರಮಾತ್ಮನಿಗೆ ಸಮರ್ಪಣೆ ಮಾಡುವನು.

ತಾತ್ಪರ್ಯ.—ಶುದ್ಧೋದಕಕ್ಕಭಿಮಾನಿಯು ಬುಧನು, ಅಲ್ಲಿ ಶ್ರೀ ಕೃಷ್ಣನನ್ನು ಚಿಂತಿಸಬೇಕು. ಕರ್ಮಾಭಿಮಾನಿಯಾದ ಪುಷ್ಕರನು ಪರಮಾ ತ್ಮನಿಗಾಗಿ ನೈವೇದ್ಯಕ್ಕೆ ಸಿದ್ಧಪಡಿಸಿರುವ ಪದಾರ್ಥಗಳನ್ನು ಶುದ್ಧಿಮಾಡಿ ಸಂ ಪೂರ್ಣ ಶುದ್ಧಿಗಾಗಿ ಹಂಸರೂಪಿಯಾದ ಪರಮಾತ್ಮನಿಗರ್ಪಿಸುವನು. ಅಂ ದರೆ ಇತರರು ಮಾಡಿದ ಪಾಕವನ್ನು ಶುದ್ಧಿಮಾಡುವ ಕರ್ಮವು ಪುಷ್ಕರನದು ಅಲ್ಲಿ ಹಂಸನಾಮಕ ಪರಮಾತ್ಮನು ಇರುವನೆಂಬ ತಾತ್ಪರ್ಯ.

**ರತಿ ಸಕಲ ಸುಸ್ವಾದು ರಸಗಳ**
**ಪತಿ ಎನಿಸುವಳಲ್ಲಿ ವಿಶ್ವನು**
**ಹುತವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು ||**
**ಕ್ಷಿತಿಜ ಗೋಮಯಜಾದಿಯೊಳು ಸಂ**
**ಸ್ಥಿತವಸಂತನ ಋಷಭದೇವನ**
**ತುತಿಸುತಿರು ಸಂತತ ಸದಾ ಸದ್ಭಕ್ತಿ ಪೂರ್ವಕದಿ ||೨೨||**

ಪದ್ಯಾರ್ಥ.—ರತಿ=ರತೀದೇವಿಯು, ಸಕಲ ಸುಸ್ವಾದುರಸಗಳ-ಸಕ ಲ ಸಿಹಿಯಾದ ರಸಗಳಿಗೆ, ಪತಿ ಎನಿಸುವಳು=ಅಭಿಮಾನಿ ಎನಿಸುವಳು, ಅಲ್ಲಿ ವಿಶ್ವನು, ವಿಶ್ವಮೂರ್ತಿಯನ್ನು ಚಿಂತಿಸಬೇಕು. ಹುತವಹನ=ಅಗ್ನಿಯ, ಚೂಲಿಗಳೊಳಗೆ-ಒಲೆಗಳೊಳಗೆ, ಅವನಲ್ಲಿ ಭಾರ್ಗವನ=ಪರಶುರಾಮದೇ ವರನ್ನೂ ಚಿಂತಿಪುದು. ಕ್ಷಿತಿಜ=ಭೂಮಿಯಲ್ಲಿ ಹುಟ್ಟುವ ಮರಗಳಿಂದಾಗುವ ಕಟ್ಟಿಗೆ (ಸೌದೆ) ಗಳು, ಮತ್ತು ಗೋಮಯಜಾದಿಯೊಳು=ಸಗಣಿಯಿಂದಾ ಗುವ ಬೆರಣಿ (ಕುರುಳುಗಳು) ಇವು ಮೊದಲಾದವುಗಳಲ್ಲಿ, ಸಂಸ್ಥಿತ-ಇರುವ ವಸಂತನ=ವಸಂತನನ್ನೂ, ಅವನಲ್ಲಿ ಋಷಭದೇವನ, ಸಂತತ-ಅವಿಚ್ಛಿನ್ನ ವಾಗಿ ಸದಾ=ಸರ್ವಕಾಲದಲ್ಲೂ, ಸದ್ಭಕ್ತಿಪೂರ್ವಕದಿ, ತುತಿಸುತಿರು-ಸ್ತೋ ತ್ರಮಾಡುತ್ತಿರು.

ತಾತ್ಪರ್ಯ.—ಸಕಲವಾದ ಸ್ವಾದುರಸಗಳಿಗಭಿಮಾನಿಯು, ರತೀದೇ ವಿಯು, ಅಲ್ಲಿ ವಿಶ್ವಮೂರ್ತಿಯನ್ನು ಚಿಂತಿಸಬೇಕು. ಅಡಿಗೆಯ ಒಲೆಗಳಿಗಭಿ

ಮಾನಿಯು=ಅಗ್ನಿಯು, ಅಲ್ಲಿ ಪರಶುರಾಮಮೂರ್ತಿಯನ್ನು ಚಿಂತಿಸಬೇಕು. ಸೌದೆ, ಬೆರಣಿ ( ಕಟ್ಟಿಗೆ, ಕುರುಳು ) ಮೊದಲಾದವುಗಳಿಗೆ ಅಭಿಮಾನಿಯು ವಸಂತನು. ಅಲ್ಲಿ ಋಷಭದೇವರನ್ನು ಚಿಂತಿಸಬೇಕು.

ಪಾಕ ಕರ್ತೃಗಳೊಳು ಚತುರ್ದಶ
ಲೋಕಮಾತೆ ಮಹಾಲಕುಮಿಗತ
ಶೋಕವಿಶ್ವಂಭರನ ತಿಳಿವುದು ಎಲ್ಲಕಾಲದಲಿ ||
ಚೌಕಶುದ್ಧಿ ಸುಮಂಡಲದಿ ಭೂ
ಸೂಕರಾಹ್ವಯ ಉಪರಿಚ್ಛೈಲಪ
ಏಕದಂತ ಸನತ್ಕುಮಾರನ ಧೇನಿಪುದು ಬುಧನು ||೨೩||

ಪದ್ಯಾರ್ಥ.—ಪಾಕಕರ್ತೃಗಳೊಳು=ಅಡಿಗೆ ಮಾಡುವವರೊಳಗೆ, ಚತುರ್ದಶಲೋಕಮಾತೆ=೧೪ ಲೋಕಗಳಿಗೆ ತಾಯಿಯಾದ, ಮಹಾಲಕುಮಿ=ಮಹಾಲಕ್ಷ್ಮೀದೇವಿಯರನ್ನೂ, ಅವರಲ್ಲಿ, ಗತಶೋಕ-ಶೋಕ ರಹಿತನಾದ ವಿಶ್ವಂಭರನ ಎಲ್ಲ ಕಾಲದಲಿ ತಿಳಿವದು. ಚೌಕಶುದಿಸುಮಂಡಲದಿ=ಚೌಕವಾದ ಶುದ್ಧಿ ಮಂಡಲದೊಳಗೆ, ಭೂ=ಭೂಮಿದೇವಿಯನ್ನೂ, ಅಲ್ಲಿ ಸೂಕರಾಹ್ವಯ=ವರಾಹದೇವರನ್ನು ಚಿಂತಿಸಬೇಕು. ಉಪರಿಚ್ಛೈಲಪ-ನೈವೇದ್ಯದ ಮೇಲೆ ಹೊದ್ದಿಸುವ ವಸ್ತ್ರಾಭಿಮಾನಿಯು, ಏಕದಂತ=ವಿನಾಯಕನು, ಅವನಲ್ಲಿ ಸನತ್ಕುಮಾರನ=ಬ್ರಹ್ಮದೇವರ ಮಕ್ಕಳಾದ ಸನಕಾದಿಗಳಲ್ಲದ ಪರಮಾತ್ಮನವತಾರವಾದ ಸನತ್ಕುಮಾರಮೂರ್ತಿಯನ್ನು, ಬುಧರು=ಜ್ಞಾನಿಗಳು, ಧೇನಿಪುದು=ಧ್ಯಾನಮಾಡಬೇಕು.

ತಾತ್ಪರ್ಯ.—ಅಡಿಗೆ ಮಾಡುವವರಲ್ಲಿ ರಮಾದೇವಿಯರನ್ನೂ; ಅವರಲ್ಲಿ ವಿಶ್ವಂಭರಮೂರ್ತಿಯನ್ನೂ ಚಿಂತಿಸಬೇಕು. ನೈವೇದ್ಯವನ್ನು ಇಡುವುದಕ್ಕಾಗಿ ಮಾಡಿರುವ ಮಂಡಲದಲ್ಲಿ ಭೂಮಿದೇವಿಯನ್ನೂ ಆಕೆಯಲ್ಲಿ ವರಾಹಮೂರ್ತಿಯನ್ನೂ ಚಿಂತಿಸಬೇಕು. ನೈವೇದ್ಯದ ಪದಾರ್ಥಗಳ ಮೇಲೆ ಮುಚ್ಚುವ ವಸ್ತ್ರದಲ್ಲಿ ಗಣಪತಿಯನ್ನೂ ಅವನಲ್ಲೇ ಸನತ್ಕುಮಾರಮೂರ್ತಿಯನ್ನೂ ತಿಳಿಯಬೇಕು. ಸನತ್ಕುಮಾರರು ಬ್ರಹ್ಮದೇವರ ಮಕ್ಕಳಾದ ನಾಲ್ವರ ಪೈಕಿ ಸನತ್ಕುಮಾರರು ಬೇರೆ. ಭಾಗವತ ಪ್ರಥಮ ಸ್ಕಂಧ ೩ನೆಯ

ಅಧ್ಯಾಯದಲ್ಲಿ " ಸಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ ॥ ಚಚಾರದುಶ್ಚರಂ ಬ್ರಹ್ಮಾ ಬ್ರಹ್ಮಚರ್ಯ ಮಖಂಡಿತಂ ॥೬॥ ' ಆದೇ ಪದ್ಮನಾಭ ರೂಪಿಯಾದ ಶ್ರೀನಾರಾಯಣನೇ ಮೊದಲನೆಯ ಅವತಾರ ಸನತ್ಕುಮಾರನೆಂದು ಬ್ರಾಹ್ಮಣನಾಗಿದ್ದು ಅಖಂಡವಾದ ಬ್ರಹ್ಮಚರ್ಯವನ್ನು ಧರಿಸಿದನು ಎಂದು ಹೇಳಿಗುವ ಭಗವದವತಾರವಾದ ಸನತ್ಕುಮಾರನನ್ನು ಚಿಂತಿಸಬೇಕೆಂಬ ತಾತ್ಪರ್ಯ.

ಶ್ರೀನಿವಾಸನ ಭೋಗ್ಯವಸ್ತುವ
ಕಾಣಗೊಡದಂದದಲಿ ವಿಷ್ವ
ಕ್ಸೇನ ಪರಿಖಾರೂಪನಾಗಿಹರಲ್ಲಿ ಪುರುಷಾಖ್ಯಾ ।
ತಾನೆ ಪೂಜಕ ಪೂಜ್ಯನೆನಿಸಿ ನಿ
ಜಾನುಗರ ಸಂತೈಪಗುರು ಪವ
ಮಾನ ವಂದಿತ ಸರ್ವಕಾಲಗಳಲ್ಲಿ ಸರ್ವೇಶ ॥೨೪॥

ಪದ್ಯಾರ್ಥ.—ಶ್ರೀನಿವಾಸನ, ಭೋಗ್ಯವಸ್ತುವ=ಭೋಜನ ಮಾಡಲು ಯೋಗ್ಯವಾದ ಪದಾರ್ಥಗಳನ್ನು, ಕಾಣಗೊಡದಂದಲಿ=ಮತ್ತೊಬ್ಬರಿಗೆ ಕಾಣಿಸದಂತೆ, ವಿಷ್ವಕ್ಸೇನ–ವಾಯು ಪುತ್ರನಾದ ವಿಷ್ವಕ್ಸೇನನು, ಪರಿಖಾರೂಪನಾಗಿಹನು=ಸುತ್ತಲೂ ಪ್ರಕಾರದಂತೆ ಇರುವನು, ಅಲ್ಲಿ=ಅವನಲ್ಲಿ, ಪುರುಷಾಖ್ಯ=ಪುರುಷನಾಮಕನನ್ನು ಚಿಂತಿಸಬೇಕು. ಗುರುಪವಮಾನವಂದಿತ=ನಮ್ಮ ಮುಖ್ಯ ಗುರುಗಳಾದ ವಾಯುದೇವರಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟ, ಸರ್ವೇಶ=ಸರ್ವರಿಗೂ ಈಶ್ವರನಾದ ಶ್ರೀಹರಿಯು, ಸರ್ವಕಾಲಗಳಲ್ಲಿ, ತಾನೇ ಪೂಜಕನಾಗಿ=ಪೂಜಿಸುವವನಾಗಿಯೂ, ಪೂಜ್ಯನೆನಿಸಿ=ಪೂಜ್ಯನಾಗಿಯೂ ಇರುವನೆಂದೆನಿಸಿ, ನಿಜಾನುಗರ = ನಿಜ ಭಕ್ತರನ್ನು ಸಂತೈಪ.

ತಾತ್ಪರ್ಯ.—ಪರಮಾತ್ಮನಿಗೆ ನೈವೇದ್ಯಕ್ಕೆ ಇಟ್ಟಿರುವ ವಸ್ತುಗಳನ್ನು ಮತ್ತೊಬ್ಬರು ನೋಡದಂತೆ ವಿಷ್ವಕ್ಸೇನನು ನೈವೇದ್ಯದ ಸುತ್ತಲೂ ಪ್ರಾಕಾರದಂತೆ ಇರುವನು. ಅವನಲ್ಲಿ ಪುರುಷ ರೂಪಿಯನ್ನೂ ಚಿಂತಿಸಬೇಕು ಹೀಗೆ ಒಬ್ಬ ಪರಮಾತ್ಮನು ಒಬ್ಬನಲ್ಲಿದ್ದು ಪೂಜಿಸುವವನಾಗಿಯೂ ಮತ್ತೊಬ್ಬನಲ್ಲಿ ಪೂಜ್ಯನಾಗಿಯೂ ಇದ್ದು ಸರ್ವಕಾಲದಲ್ಲೂ ತನ್ನ ಭಕ್ತ ಜನರನ್ನು ಸಂರಕ್ಷಿಸುವನು.

ನೂತನ ಸಮೀಚೀನ ಸುರಸೋ
ಪೇತಹೃದ್ಯ ಪದಾರ್ಥದೊಳು ವಿಧಿ
ಮಾತೆ ತತ್ತದ್ರಸಗಳೊಳು ರಸರೂಪತಾನಾಗಿ ||
ಪ್ರೀತಿಬಡಿಸುತ ನಿತ್ಯದಲಿ ಜಗ
ನ್ನಾಥವಿಠ್ಠಲನ ಕೂಡಿ ತಾ ನಿ
ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ||೨೫||

ಪದ್ಯಾರ್ಥ.—ನೂತನ=ಹೊಸದಾಗಿಯೂ, ಸಮೀಚೀನ=ಒಳ್ಳೆಯದಾಗಿಯೂ ಸುರಸೋಪೇತ=ಉತ್ತಮವಾದ ರಸದಿಂದ ಕೂಡಿದುದಾಗಿಯೂ, ಹೃದ್ಯ=ಮನೋಹರವಾಗಿಯೂ ಇರುವ, ಪದಾರ್ಥದೊಳು, ವಿಧಿಮಾತೆ=ಬ್ರಹ್ಮದೇವರ ತಾಯಿಯಾದ ರಮಾದೇವಿಯರು, ತತ್ತದ್ರಸಗಳೊಳು=ಆಯಾ ರಸಗಳಲ್ಲಿ, ನಿತ್ಯದಲ್ಲಿ, ಪ್ರೀತಿಬಡಿಸುತ, ಶ್ರೀಜಗನ್ನಾಥವಿಠ್ಠಲನನ್ನು ಕೂಡಿ, ತಾ-ತಾನು, ನಿರ್ಭೀತಳಾಗಿಹಳೆಂದು, ಅರಿದು = ತಿಳಿದು, ನೀ ಭಜಿಸಿ, ಸುಖಿಸುತಿರು.

ತಾತ್ಪರ್ಯ.—ಹೊಸದಾಗಿಯೂ, ಉತ್ತಮವಾಗಿಯೂ, ಉತ್ತಮ ರಸಗಳಿಂದ ಕೂಡಿದುದಾಗಿಯೂ; ಮನೋಜ್ಞವಾಗಿಯೂ ಇರುವ ಪದಾರ್ಥಗಳಲ್ಲಿ ರಮಾದೇವಿಯರು ಆಯಾ ರಸಗಳಲ್ಲಿ ತಾವೇ ರಸರೂಪರಾಗಿದ್ದು ಶ್ರೀಹರಿಯನ್ನು ಪ್ರೀತಿಪಡಿಸುತ್ತ ಪರಮಾತ್ಮನಿಂದ ಕೂಡಿ ನಿರ್ಭೀತಳಾಗಿರುವರೆಂದು ತಿಳಿದು ಶ್ರೀಜಗನ್ನಾಥವಿಠ್ಠಲನನ್ನು ಭಜಿಸುತ್ತಾ ಸುಖದಿಂದಿರು ಎಂದು ದಾಸಾರ್ಯರು ನಿಜ ಶಿಷ್ಯರಿಗೆ ಬೋಧಿಸಿದರೆಂಬಲ್ಲಿಗೆ ೩೧ನೆಯ ನೈವೇದ್ಯ ಪ್ರಕರಣ ಸಂಧಿಯು ಸಮಾಪ್ತವಾದುದು.

|| ಶ್ರೀಕೃಷ್ಣಾರ್ಪಣಮಸ್ತು ||

## ದೇವತಾ ತಾರತಮ್ಯ ಸ್ತೋತ್ರ ಸಂಧಿ.

### ಸಂಧಿ ೩೨.

ಶ್ರೀದಾಸಾರ್ಯರು ಹರಿಕಥಾಮೃತಸಾರ ಗ್ರಂಥವನ್ನು ಸಮಾಪನೆ ಮಾಡುತ್ತಾ ಮೊದಲನೆಯ ಮಂಗಳಾಚರಣೆ ಸಂಧಿಯಲ್ಲಿ ತಾರತಮ್ಯ ಪ್ರಕಾರ ದೇವತೆಗಳಿಗೆ ನಮಸ್ಕಾರಮಾಡಿದಂತೆ ಗ್ರಂಥಾವಸಾನದಲ್ಲೂ ಶ್ರೀಪರಮಾತ್ಮನನ್ನು ಮೊದಲು ಮಾಡಿ ಮನುಷ್ಯೋತ್ತಮರ ಪರ್ಯಂತ ಕ್ರಮವಾಗಿ ನಮಸ್ಕಾರ ಮಾಡಿ ಗ್ರಂಥ ಸಮಾಪ್ತಿ ಮಾಡುತ್ತಾರೆ.

**ಹರಿಕಥಾಮೃತಸಾರ ಗುರುಗಳ ||ಪ||**

**ಶ್ರೀರಮಣ ಸರ್ವೇಶ ಸರ್ವಗ**
**ಸಾರ ಭೋಕ್ತ ಸ್ವತಂತ್ರದೋಷ ವಿ**
**ದೂರ ಜ್ಞಾನಾನಂದಬಲ ಐಶ್ವರ್ಯಗುಣಪೂರ್ಣ।**
**ಮೂರುಗುಣ ವರ್ಜಿತ ಸಗುಣ ಸಾ**
**ಕಾರವಿಶ್ವಸ್ಥಿತಿ ಲಯೋದಯ**
**ಕಾರಣಕೃಪಾಸಾಂದ್ರ ನರಹರೇ ಸಲಹೋ ಸಜ್ಜನರ ||೧||**

ಪದ್ಯಾರ್ಥ.—ಶ್ರೀರಮಣ=ಲಕ್ಷ್ಮೀಪತಿಯು, ಸರ್ವೇಶ, ಸರ್ವಗ=ಸರ್ವತ್ರ ವಾಸವಾಗಿರುವನು, ಸಾರಭೋಕ್ತ=ಸರ್ವ ಸಾರವನ್ನು ಭುಂಜಿಸುವನು, ಸ್ವತಂತ್ರನು, ದೋಷವಿದೂರ=ದೋಷವಿಲ್ಲದವನು; ಜ್ಞಾನ, ಆನಂದ ಬಲ, ಐಶ್ವರ್ಯ, ಇವೇ ಮೊದಲಾದ ಗುಣಗಳಿಂದಪೂರ್ಣನಾದವನು ಮೂರುಗುಣವರ್ಜಿತನು=ಪ್ರಾಕೃತವಾದ ಸತ್ವ ರಜಸ್ತಮೋಗುಣಗಳಿಂದ ರಹಿತನಾದವನು, ಸಗುಣ-ಆನಂದಗುಣಪೂರ್ಣನು, ಸಾಕಾರ-ಅಪ್ರಾಕೃತವಾದ ಸ್ವರೂಪವುಳ್ಳವನು, ವಿಶ್ವ-ಪ್ರಪಂಚಕ್ಕೆ, ಸ್ಥಿತಿ=ರಕ್ಷಣೆ, ಲಯ-ನಾಶ,

ಉದಯ=ಸೃಷ್ಟಿ, ಇವುಗಳಿಗೆ ಕಾರಣನು. ಕೃಪಾಸಾಂದ್ರ=ಕರುಣಾಪೂರ್ಣನು, ಇಂತಹ ಗುಣಗಳುಳ್ಳ, ನರಹರೇ=ಎಲೈ ನರಸಿಂಹಾವತಾರ ಮಾಡಿದ ಪರಮಾತ್ಮ ! ಸಜ್ಜನರ ಸಲಹು.

ತಾತ್ಪರ್ಯ.—ಲಕ್ಷ್ಮೀಪತಿಯೂ, ಸರ್ವೋತ್ತಮನೂ, ಸರ್ವತ್ರ ವ್ಯಾಪ್ತನೂ, ಸರ್ವಸಾರ ಭೋಕ್ತನೂ, ಸ್ವತಂತ್ರನೂ, ದೋಷವಿದೂರನೂ ಜ್ಞಾನಾನಂದ ಬಲ ಐಶ್ವರ್ಯಾದಿ ಗುಣಗಳಿಂದ ಪೂರ್ಣನೂ, ಮೂರು ಗುಣಗಳ ಸಂಬಂಧವಿಲ್ಲದವನೂ, ಆನಂದಾದಿ ಗುಣಪೂರ್ಣನೂ, ಅಪ್ರಾಕೃತವಾದ ಶರೀರ ಉಳ್ಳವನೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನೂ, ಕರುಣಾಪೂರ್ಣನೂ ಆದ ಶ್ರೀನರಸಿಂಹ ! ಸಜ್ಜನರನ್ನು ಪಾಲಿಸು.

ಅವತಾರಿಕೆ.—ಲಕ್ಷ್ಮೀದೇವಿಯರನ್ನು ಮೂರು ಶ್ಲೋಕಗಳಿಂದ ಸ್ತುತಿಸುತ್ತಾರೆ.—

ನಿತ್ಯಮುಕ್ತಳೆ ನಿರ್ವಿಕಾರಳೆ
ನಿತ್ಯ ಸುಖಸಂಪೂರ್ಣೆ ನಿತ್ಯಾ
ನಿತ್ಯ ಜಗದಾಧಾರ ಮುಕ್ತಾಮುಕ್ತ ಗುಣವಿನುತ ||
ಚಿತ್ತ್ರೈಸು ಬಿನ್ನಪವ ಶ್ರೀಪುರು
ಷೋತ್ತಮನ ವಕ್ಷೋನಿವಾಸಿನಿ
ಭೃತ್ಯವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ||೨||

ಪದ್ಯಾರ್ಥ.—ನಿತ್ಯಮುಕ್ತಳೆ, ನಿರ್ವಿಕಾಗಳೆ=ವಿಕಾರ ಶೂನ್ಯರು, ನಿತ್ಯಸುಖಸಂಪೂರ್ಣೆ-ನಿತ್ಯಾನಂದ ಪೂರ್ಣರು, ನಿತ್ಯಾನಿತ್ಯ ಜಗದಾಧಾರೆ=ನಿತ್ಯರಾದ ಜೀವರು ಮೊದಲಾದವರು, ಅನಿತ್ಯವಾದ ಶರೀರ ಮೊದಲಾದವುಗಳಿಂದ ಕೂಡಿದ ಜಗತ್ತಿಗೆ ಆಧಾರರಾಗಿರುವರು. ಮುಕ್ತಾಮುಕ್ತಗಣ ವಿನುತೆ=ಮುಕ್ತ ಜೀವರಿಂದಲೂ ಅಮುಕ್ತರಿಂದಲೂ ಪೂಜಿತರು, ನಮಸ್ಕಾರಮಾಡಿಸಿಕೊಳ್ಳಲ್ಪಡುವವರು- ನನ್ನ ಬಿನ್ನಪವ ಚಿತ್ತ್ರೈಸು ! ಶ್ರೀಪುರುಷೋತ್ತಮ, ವಕ್ಷೋನಿವಾಸಿನಿ=ವಕ್ಷಸ್ಥಳದಲ್ಲಿ ವಾಸಮಾಡುವವರು. ಭೃತ್ಯವತ್ಸಲೆ, ತ್ರಿಜಗನ್ಮಾತೆ=ಮೂರು ಲೋಕದ ತಾಯಿ, ವಿಖ್ಯಾತೆ=ಲೋಕದಲ್ಲಿ ಪ್ರಖ್ಯಾತಿ ಪಡದವಳೆ, ಕಾಯೆ-ನಮ್ಮನ್ನು ರಕ್ಷಿಸು.

ರೋಮಕೂಪಗಳೊಳಗೆ ಪೃಥಕ್ಪೃಥ
ಗಾಮಹಾಪುರುಷನ ಸುಮೂರ್ತಿಯ
ತಾಮರಸಜಾಂಡಗಳ ತದ್ಗತ ವಿಶ್ವರೂಪಗಳ ||
ಶ್ರೀಮಹಿಳೆ ಸುರೂಪಗುಣಗಳ
ಸೀಮೆಗಾಣದೆ ಯೋಚಿಸುತ ಮಮ
ಸ್ವಾಮಿ ಮಹಿಮೆಯದೆಂತುಟೆಂದಡಿಗಡಿಗೆ ಬೆರಗಾದ ||೩||

ಪದ್ಯಾರ್ಥ.—ರೋಮಕೂಪಗಳೊಳಗೆ=ಪರಮಾತ್ಮನ ದೇಹದೊಳಗಿರುವ ರೋಮಕೂಪಗಳೊಳಗೆ, ಪೃಥಕ್ ಪೃಥಕ್=ಒಂದೊಂದು ರೋಮಕೂಪದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ, ಆ ಮಹಾಪುರುಷನ, ಸುಮೂರ್ತಿಯ-ದಿವ್ಯ ಮೂರ್ತಿಗಳನ್ನೂ, ತಾಮರಸಜಾಂಡಗಳ=ಬ್ರಹ್ಮಾಂಡಗಳನ್ನೂ, ತದ್ಗತ=ಅವುಗಳೊಳಗಿನ, ವಿಶ್ವರೂಪಗಳ, ಸುರೂಪಗುಣಗಳ=ಆ ಪರಮಾತ್ಮನಿಗಿರುವ ಅತ್ಯುತ್ತಮವಾದ ರೂಪಗುಣಗಳನ್ನೂ, ಯೋಚಿಸುತ=ನೋಡಿ ಯೋಚನೆ ಮಾಡುತ್ತಾ, ಶ್ರೀಮಹಿಳೆ=ಶ್ರೀರಮಾದೇವಿಯರು, ಸೀಮೆಗಾಣದೆ=ಪಾರಗಾಣದೆ (ಎಲ್ಲೆಯನ್ನು ಕಾಣದೆ) ಮಮ=ನನ್ನ ಸ್ವಾಮಿಯ ಮಹಿಮೆಯು, ಅದೆಂತುಟೆಂದು=ಅದು ಎಷ್ಟು ಇರುವದೋ ಎಂದು ಅಡಿಗಡಿಗೆ=ಕ್ಷಣಕ್ಷಣದಲ್ಲೂ, ಬೆರಗಾದ-ಯಾವ ಲಕ್ಷ್ಮಿಯರು ಬೆರಗಾದರೋ ಅಂತಹ ಜಗನ್ಮಾತೆಯಾದ ರಮಾದೇವಿಯರು ನಮ್ಮನ್ನು ರಕ್ಷಿಸಲಿ.

ತಾತ್ಪರ್ಯ.—ಶ್ರೀರಮಾದೇವಿಯರು ತಮ್ಮ ಪತಿಯಾದ ಶ್ರೀಪರಮಾತ್ಮನ ದೇಹದೊಳಗಿನ ರೋಮಕೂಪಗಳಲ್ಲಿ ಒಂದೊಂದು ರೋಮಕೂಪದೊಳಗೂ ಭಗವನ್ಮೂರ್ತಿಗಳನ್ನೂ ಅನೇಕಬ್ರಹ್ಮಾಂಡಗಳನ್ನೂ ಆ ಬ್ರಹ್ಮಾಂಡದೊಳಗಿನ ವಿಶ್ವರೂಪಗಳನ್ನೂ, ಅವನ ರೂಪಗಳನ್ನೂ ಗುಣಗಳನ್ನೂ, ನೋಡಿ ನೋಡಿ ಯೋಚಿಸುತ್ತಾ ಅವುಗಳ ಪಾರಗಾಣದೆ ಅಹ! ನನ್ನ ಸ್ವಾಮಿಯ ಮಹಿಮೆಯು ಇನ್ನೆಷ್ಟಿರುವದೋ! ಎಂದು ಕ್ಷಣ ಕ್ಷಣದಲ್ಲೂ ಬೆರಗಾಗುತ್ತಿರುವರು. ಅಂತಹಾ ರಮಾದೇವಿಯರು ನಮ್ಮನ್ನು ಪಾಲಿಸಲಿ.

ಅವತಾರಿಕೆ.—ಬ್ರಹ್ಮದೇವರನ್ನು ಸ್ತೋತ್ರ ಮಾಡುತ್ತಾರೆ.—

ಒಂದಜಾಂಡದೊಳೊಂದು ರೂಪದೊ
ಳೊಂದವಯುವದೊಳೊಂದು ನಖದೊಳ
ಗೊಂದು ಗುಣಗಳ ಪಾರಗಾಣದೆ ಕೃತಪುಟಾಂಜಲಿಯೂ ||
ಮಂದಜಾಸನ ಪುಳಕ ಪುಳಕಾ
ನಂದ ಬಾಷ್ಪತೊದಲ ನುಡಿಗಳಿಂ
ಇಂದಿರಾವಲ್ಲಭನ ಮಹಿಮೆಗಭೀರ ತರವೆಂದ ||೪||

ಪದ್ಯಾರ್ಥ.—ಅನೇಕ ಬ್ರಹ್ಮಾಂಡಗಳ ಪೈಕಿ, ಒಂದಜಾಂಡದೊಳು-ಒಂದು ಬ್ರಹ್ಮಾಂಡದೊಳಗಿರುವ, ಒಂದುರೂಪದೊಳು=ಅನೇಕ ರೂಪಗಳ ಪೈಕಿ ಒಂದು ರೂಪದೊಳಗಿನ, ಒಂದವಯುವದೊಳು-ಅನೇಕ ಅಂಗಗಳಪೈಕಿ ಒಂದು ಅವಯುವದೊಳಗಿನ, ಒಂದು ನಖದೊಳು=ಅನೇಕ ಉಗುರುಗಳ ಪೈಕಿ ಒಂದು ಉಗುರಿನ ಒಳಗಿನ, ಒಂದು ಗುಣಗಳ=ಒಂದು ಭಾಗದೊಳಗಿನ ಗುಣಗಳನ್ನು ನೋಡಿ ಯೋಚಿಸಿ ಪಾರ ಗಾಣದೆ, ಮಂದಜಾಸನ=ಕಮಲಾಸನರಾದ ಬ್ರಹ್ಮದೇವರು, ಕೃತಪುಟಾಂಜಲಿಯು, ಬದ್ಧಾಂಜಲಿಪುಟರಾಗಿ (ಕೈಕಟ್ಟಿಕೊಂಡು) ಪುಳಕಪುಳಕಾನಂದ ಬಾಷ್ಪತೊದಲನುಡಿಗಳಿಂದ-ಪುಳಕಾಂಕಿತರಾಗಿ ರೋಮಾಂಚರಾಗಿ ಆನಂದ ಬಾಷ್ಪವನ್ನು ಸುರಿಸುತ್ತಾ ಗಂಟಲು ಬಿಗಿದು ಬರುತ್ತಿರಲು ಅಸ್ಪಷ್ಟವಾದ ನುಡಿಗಳಿಂದ, ಇಂದಿರಾ ವಲ್ಲಭನ ಮಹಿಮೆಗಭೀರತರವೆಂದ=ಲಕ್ಷ್ಮೀಪತಿಯಾದ ಪರಮಾತ್ಮನ ಮಹಿಮೆಯ ಆಳವನ್ನು ಕಾಣಲು ಸಾಧ್ಯವಲ್ಲ=ಆಳವನ್ನು ಕಂಡು ಹಿಡಿಯುಲು ಸಾಧ್ಯವಲ್ಲದೆ ಇರುವುದು.

ತಾತ್ಪರ್ಯ.—ಅನೇಕ ಬ್ರಹ್ಮಾಂಡಗಳ ಪೈಕಿ ಒಂದು ಬ್ರಹ್ಮಾಂಡದೊಳಗಿರುವ, ಅನೇಕ ಭಗವದ್ರೂಪಗಳ ಪೈಕಿ ಒಂದು ರೂಪದೊಳಗಿನ ಅನೇಕಂಗಗಳ ಪೈಕಿ ಒಂದಂಗವಾದ ಪಾದದ ಅನೇಕ ನಖಗಳ ಪೈಕಿ ಒಂದು ನಖದೊಳಗಿರುವ ಅನೇಕ ಭಾಗಗಳ ಪೈಕಿ ಒಂದು ಭಾಗದಲ್ಲಿರುವ ಭಗವಂತನ ಗುಣಗಳನ್ನು ಚಿಂತಿಸಿ ಪಾರಗಾಣದೆ ಬ್ರಹ್ಮದೇವರು ಕೈಮುಗಿದುಕೊಂಡು ಪುಳಕಾಂಕಿತರಾಗಿ ಆನಂದಬಾಷ್ಪವನ್ನು ಸುರಿಸುತ್ತಾ ಆಹ! ಈ ಲಕ್ಷ್ಮೀವಲ್ಲಭನ ಗುಣಗಳ ಮೂಲವು ಎಲ್ಲಿರುವುದೆಂದು ಎಷ್ಟು ಹುಡುಕಿದರೂ ಅಧರ

ಆಳವು ಕಾಣುವಂತಿಲ್ಲ. ಅತಿ ಗಂಭೀರತವೆಂದರು. ಇಂತಹಾ ಮಹಾ ಮಹಿಮೆಯುಳ್ಳವನು ಪರಮಾತ್ಮನೆಂದು ಈ ನಾಲ್ಕು ಶ್ಲೋಕಗಳಿಂದಲೂ ಶ್ರೀಹರಿ, ಲಕ್ಷ್ಮೀ, ಬ್ರಹ್ಮ ಇವರ ತಾರತಮ್ಯವನ್ನು ತೋರಿಸಿದರೂ, ಭಗವನ್ಮಹಿಮೆಯನ್ನೇ ವಿಶದ ಮಾಡಿರುವರು.

ಏನು ಧನ್ಯರೊ ಬ್ರಹ್ಮಗುರು ಪವ
ಮಾನರೀರ್ವರು ಈ ಪರಿಯಲಿ ರ
ಮಾನಿವಾಸನ ವಿಮಲಲಾವಣ್ಯಾತಿಶಯಗಳನು ||
ಸಾನುರಾಗದಿ ನೋಡಿ ಸುಖಿಪ ಮ
ಹಾನುಭಾವರ ಭಾಗ್ಯವೆಂತೊ ಭ
ವಾನಿಧವನಿಗಸಾಧ್ಯವೆನಿಸಲು ನರರ ಪಾಡೇನು ||೫||

ಪದ್ಯಾರ್ಥ.— ಬ್ರಹ್ಮ=ಬ್ರಹ್ಮದೇವರು, ಗುರು=ಗುರುಗಳಾದ, ಪವಮಾನ=ವಾಯುದೇವರು, ಇವರೀರ್ವರೂ, ಏನು ಧನ್ಯರೋ! ಈ ಪರಿಯಲಿ=ಮೇಲೆ ಹೇಳಿದ ಪ್ರಕಾರವಾಗಿ, ರಮಾನಿವಾಸನ=ಶ್ರೀನಿವಾಸನ, ವಿಮಲ=ನಿರ್ಮಲವಾದ, ಲಾವಣ್ಯಾತಿಶಯಗಳನು=ಸೌಂದರ್ಯ ವಿಶೇಷಗಳನ್ನು ಸಾನುರಾಗದಿ=ಪರಮ ಪ್ರೀತಿಯಿಂದ ನೋಡಿ, ಸುಖಿಪ=ಸುಖವನ್ನನುಭವಿಸುವ, ಮಹಾನುಭಾವರ=ಮಹಾನುಭಾವರಾದ ಬ್ರಹ್ಮ ವಾಯುಗಳ, ಭಾಗ್ಯವೆಂತೋ–ಎಂತಹುದೋ! ಭವಾನಿಧವನಿಗೆ–ಪಾರ್ವತೀ ಪತಿಯಾದ ರುದ್ರದೇವರಿಗೆ ಅಸಾಧ್ಯವೆನಿಸಲು, ನರರ ಪಾಡೇನು?

ತಾತ್ಪರ್ಯ.— ಮೇಲಿನ ಪದ್ಯದಲ್ಲಿ ಬ್ರಹ್ಮದೇವರು ಭಗವಂತನನ್ನು ನೋಡಿ ಆನಂದಪಡುವರೆಂದು ಹೇಳಿ, ಈಗ ಬ್ರಹ್ಮದೇವರಿಗೆ ಸಮರು ವಾಯುದೇವರಾದುದರಿಂದ ಅವರೂ ಬ್ರಹ್ಮದೇವರಂತೆಯೇ ಭಗವದ್ರೂಪವನ್ನು ಕಂಡು ಸಂತೋಷಪಡುವರೆಂದು ಸೂಚಿಸುವುದಕ್ಕಾಗಿ ಒಂದೇ ಪದ್ಯದಿಂದ ಇಬ್ಬರನ್ನು ಸ್ತುತಿಸುತ್ತಾರೆ.— ಈ ಬ್ರಹ್ಮವಾಯುಗಳೇನು ಧನ್ಯರೋ! ಪರಮಾತ್ಮನ ರೂಪ ಸೌಂದರ್ಯ ವಿಶೇಷವನ್ನು ಮೇಲಿನ ಪದ್ಯದಲ್ಲಿ ಹೇಳಿದಂತೇ ನೋಡಿ ಸುಖಿಸುವರು. ಈ ಮಹಾನುಭಾವರ ಭಾಗ್ಯವನ್ನು ಎಷ್ಟೆಂದು ವರ್ಣಿಸುವೆ! ಇಂತಹಾ ಭಾಗ್ಯವೆಲ್ಲವೂ ರುದ್ರದೇವರಿಗಿಲ್ಲ, ಹಾಗಿರಲು ಮಿಕ್ಕ ಮನುಷ್ಯರಪಾಡೇನು?

ಆ ಪಿತಾಮಹ ನೂರುಕಲ್ಪ ರ
ಮಾಪತಿಯ ಗುಣಜಪಿಸಿ ಒಲಿಸಿ ಮ
ಹಾಪರಾಕ್ರಮ ಹನುಮಭೀಮಾನಂದ ಮುನಿಯೆನಿಸಿ ||
ಆ ಪರಬ್ರಹ್ಮನ ಸುನಾಭೀ
ಕೂಪಸಂಭವ ನಾಮದಲಿ ಮೆರೆ
ವಾ ಪಯೋಜಾಸನ ಸಮೀರರಿಗಭಿನಮಿಪೆ ಸತತ ||೬||

ಪದ್ಯಾರ್ಥ.— ಆ ಪಿತಾಮಹ-ಪೂರ್ವದಲ್ಲಿ ಹೇಳಿದ ಬ್ರಹ್ಮದೇವರು, ಬ್ರಹ್ಮಪದವಿಯನ್ನು ಹೊಂದುವುದಕ್ಕೆ ಮೊದಲು, ನೂರುಕಲ್ಪ=ಬ್ರಹ್ಮನ ನೂರು ಕಲ್ಪಗಳಲ್ಲಿ, ರಮಾಪತಿಯ, ಗುಣಜಪಿಸಿ=ಗುಣಗಳನ್ನು ಉಪಾಸನೆ ಮಾಡಿ, ಒಲಿಸಿ=ಪರಮಾತ್ಮನ ಪ್ರೀತಿಯನ್ನು ಪಡೆದು, ಮಹಾ ಪರಾಕ್ರಮ=ಮಹಾ ಪರಾಕ್ರಮಶಾಲಿಯಾದ, ಹನುಮ, ಭೀಮ, ಆನಂದಮುನಿಯೆನಿಸಿ, ೯೯ನೆಯ ಕಲ್ಪದಲ್ಲಿ ವಾಯುಪದವಿಯನ್ನು ಹೊಂದಿ ಹನುಮ, ಭೀಮ, ಮಧ್ವ ಎಂಬ ಮೂರು ಅವತಾರಗಳನ್ನು ಮಾಡಿ, ಆ ಮೂರು ಅವತಾರಗಳಿಂದಲೂ ಭಗವತ್ಸೇವೆಯನ್ನು ಮಾಡಿ, ನೂರನೆಯ ಕಲ್ಪದಲ್ಲಿ ಆ ಪರಬ್ರಹ್ಮನ, ಸುನಾಭೀಕೂಪ ಸಂಭವನಾಮದಲಿ ಮೆರೆವ-ನಾಭೀಕಮಲದಿಂದ ಜನಿಸಿ ಕಮಲ ಸಂಭವನೆಂಬ ಹೆಸರಿನಿಂದ ಮೆರೆಯುತ್ತಿರುವ, ಆ ಪಯೋಜಾಸನ ಸಮೀರರಿಗೆ=ಬ್ರಹ್ಮ ವಾಯುಗಳಿಗೆ, ಸತತ=ಸರ್ವ ಕಾಲದಲ್ಲೂ, ಅಭಿನಮಿಪೆ=ನಮಸ್ಕರಿಸುವೆನು.

ತಾತ್ಪರ್ಯ.— ಋಜುಗಣದಲ್ಲಿರುವಾಗ (ಬ್ರಹ್ಮಪದವಿಯನ್ನು ಹೊಂದುವುದಕ್ಕೆ ಪೂರ್ವದಲ್ಲಿ) ನೂರು ಬ್ರಹ್ಮ ಕಲ್ಪಗಳ ಸಾಧನೆ ಮಾಡಲು, ೯೯ನೆಯ ಕಲ್ಪದಲ್ಲಿ ವಾಯುಪದವಿಯನ್ನು ಹೊಂದಿ ಹನುಮ, ಭೀಮ, ಮಧ್ವ ಎಂಬ ಮೂರು ಅವತಾರಗಳಿಂದ ರಾಮ, ಕೃಷ್ಣ, ವೇದವ್ಯಾಸರ ಸೇವೆಯನ್ನು ಮಾಡಿ ನೂರನೆಯ ಕಲ್ಪದಲ್ಲಿ ಬ್ರಹ್ಮಪದವಿಯನ್ನು ಹೊಂದುವುದಕ್ಕಾಗಿ ಪರಮಾತ್ಮನ ನಾಭೀಕಮಲದಿಂದ ಜನಿಸಿ ಕಮಲಸಂಭವನೆಂಬ ಹೆಸರಿನಿಂದ ಮೆರೆವ ಬ್ರಹ್ಮ ವಾಯುಗಳಿಗೆ ಸರ್ವಕಾಲದಲ್ಲೂ ನಮಸ್ಕಾರ ಮಾಡುವೆನು.

ಅವತಾರಿಕೆ.—ಸರಸ್ವತೀ ಭಾರತೀಯರನ್ನು ಪ್ರಾರ್ಥಿಸುತ್ತಾರೆ.—

ವಾಸುದೇವನಮೂರ್ತಿ ಹೃದಯಾ
ಕಾಶಮಂಡಲ ಮಧ್ಯದಲಿ ತಾ
ರೇಶನಂದದಿ ಕಾಣುತತಿ ಸಂತೋಷದಲಿ ತುತಿಪ ।
ಆ ಸರಸ್ವತಿ ಭಾರತಿಯರಿಗೆ
ನಾ ಸತತ ವಂದಿಸುವೆ ಪರಮೋ
ಲ್ಲಾಸದಲಿ ಸುಜ್ಞಾನ ಭಕುತಿಯ ಸಲಿಸಲೆಮಗೆಂದು ॥೭॥

ಪದಾರ್ಥ.—ವಾಸುದೇವನಮೂರ್ತಿ = ಮೂರ್ತಿಯನ್ನು, ಹೃದಯಾಕಾಶಮಂಡಲ ಮಧ್ಯದಲ್ಲಿ, ತಾರೇಶನಂದದಿ=ಚಂದ್ರನಂತೆ ಕಾಣುತ, ಅತಿಸಂತೋಷದಲ್ಲಿ, ತುತಿಪ-ಸ್ತೋತ್ರಮಾಡುತ್ತಿರುವ, ಆ ಸರಸ್ವತಿ, ಭಾರತಿಯರಿಗೆ, ಎಮಗೆ-ನಮಗೆ, ಸುಜ್ಞಾನ-, ಭಕುತಿಯ ಸಲಿಸಲಿ=ಕೊಡಲೆಂದು, ನಾ=ನಾನು, ಪರಮೋಲ್ಲಾಸದಲಿ, ಸತತ=ಸರ್ವದಾ, ವಂದಿಸುವೆ-ನಮಸ್ಕರಿಸುವೆನು.

ತಾತ್ಪರ್ಯ.—ಯಾವ ಸರಸ್ವತೀ ಭಾರತೀಯರು ತಮ್ಮ ಹೃದಯಾಕಾಶಮಂಡಲ ಮಧ್ಯದಲ್ಲಿ ಚಂದ್ರನಂತೆ ಪ್ರಕಾಶಮಾನವಾಗಿ ಶೋಭಿಸುತ್ತಿರುವ ಶ್ರೀವಾಸುದೇವಮೂರ್ತಿಯನ್ನು ನೋಡಿ ಸಂತೋಷದಿಂದ ಸ್ತೋತ್ರ ಮಾಡುತ್ತಿರುವರೋ ಅಂತಹಾ ಸರಸ್ವತೀ ಭಾರತಿಯರಿಗೆ ನಮಗೆ ಜ್ಞಾನವನ್ನು ದೃಢವಾದ ಭಗವದ್ಭಕ್ತಿಯನ್ನು ದಯಪಾಲಿಸಲಿ ಎಂದು ಉಲ್ಲಾಸದಿಂದ ನಮಸ್ಕಾರಮಾಡುವೆನು.

ಅವತಾರಿಕೆ.— ಗರುಡದೇವರನ್ನು ಪ್ರಾರ್ಥಿಸುತ್ತಾರೆ.—

ಜಗದುದರನ ಸುರೋತ್ತಮನ ನಿಜ
ಪೆಗಲೊಳಾಂತು ಕರಾಬ್ಜದೋಳ್ಪದ
ಯುಗ ಧರಿಸಿ ನಖಪಂಕ್ತಿಯೊಳು ರಮಣೀಯಕರವಾದ ।
ನಗಧರನ ಪ್ರತಿಬಿಂಬ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ಖಗಕುಲಾಧಿಪ ಕೊಡಲಿ ಮಂಗಳ ಸಕಲ ಸುಜನರಿಗೆ ॥೮॥

ಪದಾರ್ಥ.—ಜಗದುದರನ=ಜಗತ್ತನ್ನು ತನ್ನ ಉದರದಲ್ಲಿ ಧರಿಸಿದ ಸುರೋತ್ತಮನ=ಸಕಲ ದೇವೋತ್ತಮನಾದ ಶ್ರೀಪರಮಾತ್ಮನನ್ನು, ನಿಜ-

ತನ್ನಯ, ಪೆಗಲೊಳು=ಹೆಗಲಮೇಲೆ, ಆಂತು=ಹೊತ್ತುಕೊಂಡು, ಕರಾಬ್ಜ ದೊಳು=ತನ್ನ ಕರ ಕಮಲಗಳಿಂದ, ಪದಯುಗಧರಿಸಿ=ಪರಮಾತ್ಮನ ಎರಡು ಪಾದಗಳನ್ನು ಧರಿಸಿ, ನಖಪಂಗ್ತಿಯೊಳು—ಪಾದಗಳ ಉಗುರುಗಳ ಪಂಗ್ತಿ ಯಲ್ಲಿ ರವಿಗಳಿಯುತರವಾದ, ನಗಧರನ – ಗೋವರ್ಧನೋದ್ಧಾರಿಯಾದ ಶ್ರೀಹರಿಯ ಪ್ರತಿಬಿಂಬವನ್ನು ಕಾಣುತ್ತ, ಮಿಗೆಹರುಷದಿಂ = ಬಹಳ ಸಂ ತೋಷದಿಂದ ಪೊಗಳಿ ಹಿಗ್ಗುವ, ಖಗಕುಲಾಧಿಪ—ಪಕ್ಷಿಕುಲಗಳಿಗೆ ಅಧಿಪತಿ ಯಾದ ಗರುಡನು, ಸಕಲಸುಜನರಿಗೆ ಮಂಗಳ ಕೊಡಲಿ.

ತಾತ್ಪರ್ಯ.—ಪ್ರಳಯಕಾಲದಲ್ಲಿ ಜಗತ್ತನ್ನು ತನ್ನ ಉದರದಲ್ಲಿ ಧ ರಿಸಿದ ಸರ್ವ ದೇವೋತ್ತಮನಾದ ಶ್ರೀಪರಮಾತ್ಮನನ್ನು ತನ್ನ ಹೆಗಲಿನಮೇಲೆ ಹೊತ್ತುಕೊಂಡು ಕೈಗಳಿಂದ ಶ್ರೀಹರಿಯ ಪಾದಗಳನ್ನು ಧರಿಸಿ ಆ ಪಾದ ನಖಗಳಲ್ಲಿ ಕಾಣುವ ಪರಮಾತ್ಮನ ಪ್ರತಿಬಿಂಬವನ್ನು ಕಾಣುತ ಅತಿ ಸಂತೋ ಷದಿಂದ ಶ್ರೀಹರಿಯನ್ನು ಹೊಗಳಿ ಹಿಗ್ಗುತ್ತಿರುವ ಪಕ್ಷಿ ಶ್ರೇಷ್ಟನಾದ ಗರುಡ ನು ಸಕಲ ಸುಜನರಿಗೆ ಮಂಗಳವನ್ನು ಕೊಡಲಿ.

ಅವತಾರಿಕೆ.—ಶೇಷದೇವರನ್ನು ನಮಸ್ಕರಿಸುತ್ತಾರೆ.—

ಯೋಗಿಗಳ ಹೃದಯಕ್ಕೆ ನಿಲಕ ನಿಗ
ಮಾಗಮೈಕ ವಿನುತನ ಪರಮನು
ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ।
ಭೋಗಗನ ಶಾತಾಳ ವ್ಯಾಪ್ತನ
ಯೋಗನಿಧಿಾಸ್ಪದನೆನಿಪ ಗುರು
ನಾಗರಾಜನಪದಕೆ ನಮಿಸುವೆ ಮನದೊಳನವರತ ॥೯॥

ಪದ್ಯಾರ್ಥ.—ಯೋಗಿಗಳ ಹೃದಯಕೆ=ಅಸಂಪ್ರಜ್ಞಾತ ಸಮಾಧಿ ಯಿಂದ ಹೃದಯಾಕಾಶದಲ್ಲಿ ಭಗವತ್ಸ್ವರೂಪವನ್ನು ಕಾಣುವ ಯೋಗಿಗಳ ಮನಸ್ಸಿಗೂ ಕೂಡ, ನಿಲಕ=ಸಾಕಲ್ಯೇನ ಕಾಣಗೊಡದ, ನಿಗಮಾಗಮೈಕ ವಿನುತ=ನಿಗಮ=ವೇದಗಳು, ಆಗಮ=ಪಾಂಚರಾತ್ರಾದಿಗಳು ಇವು ಮೊದ ಲಾದವುಗಳಿಂದ, ಏಕವಿನುತ—ಮುಖ್ಯವಾಗಿ ನಮಸ್ಕಾರ ಮಾಡಿಸಿಕೊಳ್ಳಲ್ಪ ಟ್ಟ ( ಹೊಗಳಿಸಿಕೊಳ್ಳಲ್ಪಟ್ಟ ) ಶ್ರೀಪರಮಾತ್ಮನನ್ನು ಪರಮಾನುರಾಗದಲ್ಲಿ, ದ್ವಿಸಹಸ್ರ ಜಿಹ್ವೆಗಳಿಂದ-೨೦೦೦ ನಾಲಿಗೆಗಳಿಂದ ವರ್ಣಿಸುತ್ತಿರುವ, ಭೋಗ

ಗನಪಾತಾಳವ್ಯಾಪ್ತನ=ಭೂಮಿ, ಅಂತರಿಕ್ಷ, ಪಾತಾಳ ಮೊದಲಾದ ಸರ್ವತ್ರ ವ್ಯಾಪ್ತನಾದ ಶ್ರೀಹರಿಗೆ, ಯೋಗನಿದ್ರಾಸ್ಪದನೆನಿಪ=ಯೋಗನಿದ್ರೆಗೆ ಆಸ್ಪದನೆನಿಸುವ, ಗುರು=ತಾರತಮ್ಯ ಪ್ರಕಾರ ಪ್ರಕಾರ ಗುರುಪರಂಪರೆಯಲ್ಲಿ ಶೇರಿದ, ನಾಗರಾಜನ-ಶೇಷದೇವರ, ಪದಕ್ಕೆ=ಪಾದಕಮಲಗಳಿಗೆ, ಅನವರತ=ಅವಿಚ್ಛಿನ್ನವಾಗಿ, ಮನದೊಳಗೆನಮಿಪೆ-ಮನಃಪೂರ್ವಕವಾಗಿ ನಮಸ್ಕಾರಮಾಡುವೆನು.

ತಾತ್ಪರ್ಯ.—ಯಾವ ಪರಮಾತ್ಮನು ಯೋಗಿಗಳ ಮನಸ್ಸಿಗಾದರೂ ಸಾಕಲ್ಯೇನ ಗೋಚರಿಸದೇನೆ ಅಂತಹಾ ವೇದ ಪ್ರತಿಪಾದ್ಯನಾದ ಪರಮಾತ್ಮನನ್ನು ಎರಡು ಸಹಸ್ರ ನಾಲಿಗೆಗಳಿಂದ ವರ್ಣಿಸುತ್ತಾ ಸರ್ವತ್ರ ವ್ಯಾಪ್ತನಾದ ಪರಮಾತ್ಮನಿಗೆ ಯೋಗನಿದ್ರೆಗೆ ಆಸ್ಪದನೆನಿಸುವ ಅಂದರೆ ಯೋಗನಿದ್ರೆಯನ್ನು ಹೊಂದುವ ಕಾಲದಲ್ಲಿ ಶೇಷಪರ್ಯಂತದಲ್ಲಿ ಮಲಗುವನೆಂದರ್ಥ ಪರಮಾತ್ಮನಿಗೆ ಪರ್ಯಂಕನಾಗಿ ಶೋಭಿಸುವ ಇಂತಹಾ ಸರ್ಪರಾಜನಾದ ಶೇಷನ ಪಾದಕಮಲಗಳಿಗೆ ಸರ್ವದಾ ಮನಃ ಪೂರ್ವಕವಾಗಿ ನಮಸ್ಕಾರ ಮಾಡುವೆನು.

ಅವತಾರಿಕೆ.—ಮುಂದಿನ ನಾಲ್ಕು ಪದ್ಯಗಳಿಂದ ಖುದ್ರದೇವರನ್ನು ವಂದಿಸುತ್ತಾರೆ.

ನಂದಿವಾಹನ ನಳಿನಿಧರ ಮೌ
ಳೀಂದುಶೇಖರ ಶಿವತ್ರಿಯಂಬಕ
ಅಂಧಕಾಸುರಮಥನ ಗಜಶಾರ್ದೂಲ ಚರ್ಮಧರ ||
ಮಂದಜಾಸನತನಯ ತ್ರಿಜಗ
ದ್ವಂದ್ಯಶುದ್ಧಸ್ಫಟಿಕ ಸನ್ನಿಭ
ವಂದಿಸುವೆನನವರತ ಪಾಲಿಸು ಪಾರ್ವತೀರಮಣ ||೧೦||

ಪದ್ಯಾರ್ಥ.—ನಂದಿವಾಹನ, ನಳಿನಿಧರಮೌಳಿ=ಗಂಗೆಯನ್ನು ಧರಿಸಿದ ಶಿರಸ್ಸುಳ್ಳವನು, ಇಂದುಶೇಖರ=ಚಂದ್ರಶೇಖರನು, ಶಿವ=ಮಂಗಳಕರನು, ತ್ರಿಯಂಬಕ-ಮುಕ್ಕಣ್ಣನು, ಅಂಧಕಾಸುರಮಥನ - ಅಂಧಕಾಸುರನನ್ನು ಕೊಂದವನು, ಗಜಶಾರ್ದೂಲಚರ್ಮಧರ=ಆನೆಯ ಮತ್ತು ಹುಲಿಯ ಚರ್ಮವನ್ನಧರಿಸಿದವನು, ಮಂದಜಾಸನತನಯ=ಬ್ರಹ್ಮದೇವರ ಪುತ್ರ, ತ್ರಿಜಗ

ದ್ವಂದ್ಯ-ವಾಯುದೇವರಿಗೆ ನಂತರ ಮೂರು ಲೋಕದಿಂದ ವಂದ್ಯನು, ಶು ದ್ಧಸ್ಫಟಿಕಸನ್ನಿಭ= ಶುಭ್ರವಾದ ಸ್ಫಟಿಕ ಶಿಲೆಯಂತೆ ಕಾಂತಿಯುಳ್ಳವನು, ಇಂ ತಹಾ ಗುಣವಿಶಿಷ್ಟನಾದ ಎಲೈ ಪಾರ್ವತೀರಮಣ ! ಅನವರತ-ಸರ್ವದಾ (ಅವಿಚ್ಛಿನ್ನ ಭಕ್ತಿಯಿಂದ) ವಂದಿಸುವೆನು, ಪಾಲಿಸು=ನಮ್ಮನ್ನು ರಕ್ಷಿಸು.

ತಾತ್ಪರ್ಯವು ವಿಶದವಾಗಿದೆ.

ಅವತಾರಿಕೆ.—ಪುನಃ ರುದ್ರದೇವರನ್ನೇ ಪ್ರಾರ್ಥಿಸುತ್ತಾರೆ.—

ಫಣಿಫಣಾಂಚಿತ ಮಕುಟ ರಂಜಿತ
ಕ್ವಣಿತ ಡಮರು ತ್ರಿಶೂಲ ಶಿಖಿ ದಿನ
ಮಣಿ ನಿಶಾಕರನೇತ್ರ ಪರಮಪವಿತ್ರ ಸುಚರಿತ್ರ !
ಪ್ರಣತಕಾಮದ ಪ್ರಮಥಸುರಮುನಿ
ಗಣಸುಪೂಜಿತ ಚರಣಯುಗ ರಾ
ವಣ ಮದವಿಭಂಜನ ಸತತ ಮಾಂಪಾಹಿ ಮಹದೇವ ||೧೧||

ಪದ್ಯಾರ್ಥ.—ಫಣಿ-ಸರ್ಪದ, ಫಣಾಂಚಿತ=ಹೆಡೆಯಿಂದ ಅಲಂಕೃ ತವಾದ, ಮುಕುಟ=ಶಿರದಿಂದ, (ಜಟೆಯಿಂದ) ರಂಜಿತ=ಶೋಭಿಸುವವನು, ಕ್ವಣಿತಡಮರು=ಶಬ್ದದಿಂದ ಕೂಡಿದ ಡಮರುಕವೆಂಬ ವಾದ್ಯವುಳ್ಳವನು, ತ್ರಿಶೂಲ=ತ್ರಿಶೂಲಧರನು, ಶಿಖಿ=ಅಗ್ನಿ, ದಿನಮಣಿ=ಸೂರ್ಯ, ನಿಶಾಕರ= ಚಂದ್ರ, ನೇತ್ರ=ಇವರು ಮೂವರಿಂದ ಕೂಡಿದ ಮೂರು ಕಣ್ಣುಗಳುಳ್ಳವನು, ಪರಮಪವಿತ್ರನು, ಸುಚರಿತ್ರ=ಉತ್ತಮವಾದ ಮಹಿಮೆಯುಳ್ಳವನು, ಪ್ರ ಣತಕಾಮದ=ನಮಸ್ಕರಿಸುವವರ ಮನೋಭೀಷ್ಟವನ್ನು ಪೂರೈಸುವವನು, ಪ್ರಮಥ=ಭೂತಗಣ, ಸುರ=ದೇವತೆಗಳು, ಮುನಿ-ಋಷಿಗಳು, ಗಣಸುಪೂ ಜಿತ=ಈ ಗಣಗಳಿಂದ ಚೆನ್ನಾಗಿ ಪೂಜಿಸಲ್ಪಡುವನು, ಚರಣಯುಗ=ಇಂತ ಹಾ ಗಣಗಳಿಂದ ಚೆನ್ನಾಗಿ ಪೂಜ್ಯವಾದ ಪಾದದ್ವಯ ಉಳ್ಳವನು, ರಾವಣ ಮದವಿಭಂಜನ=ರಾವಣನ ಮದವನ್ನು ಮುರಿದವನು, ಇಂತಹಾ ಗುಣವಿ ಶಿಷ್ಟ ಮಹಾದೇವಾ ! ಸತತ= ಸರ್ವದಾ, ಮಾಂಪಾಹಿ=ನನ್ನನ್ನು ಪಾಲಿಸು

ದಕ್ಷಯಜ್ಞ ವಿಭಂಜನನೆ ವಿರು
ಪಾಕ್ಷ ವೈರಾಗ್ಯಾಧಿಪತಿ ಸಂ
ರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು ।
ಯಕ್ಷಪತಿ ಸಖಯಜಪರಿಗೆ ಸುರ
ವೃಕ್ಷವೃಕದನುಜಾರಿ ಲೋಕಾ
ಧ್ಯಕ್ಷ ಶುಕದೂರ್ವಾಸ ಜೈಗೀಷವ್ಯ ಸಂತೈಸು ॥೧೨॥

ಪದ್ಯಾರ್ಥ.—ದಕ್ಷಯಜ್ಞವಿಭಂಜನನೆ=ದಕ್ಷಪ್ರಜೇಶ್ವರನ ಯಾಗವನ್ನು ಧ್ವಂಸಮಾಡಿದವನೆ, ವಿರೂಪಾಕ್ಷ=ವಿರೂಪವಾದ ಮೂರನೆಯ ಕಣ್ಣುಳ್ಳವನೇ, ವೈರಾಗ್ಯಾಧಿಪತಿ=ವೈರಾಗ್ಯಕ್ಕೆ ಅಭಿಮಾನಿಯೇ, ಸರ್ವಕಾಲದಿ, ಸನ್ಮುದವನಿತ್ತು=ಉತ್ತಮಾನಂದವನ್ನಿತ್ತು, ಎಮ್ಮನು-ನಮ್ಮನ್ನು, ಸಂರಕ್ಷಿಸು, ಯಕ್ಷಪತಿಸಖ=ಕುಬೇರನಿಗೆ ಸಖನು, ಯಜಪರಿಗೆ=ಭಜಿಸುವವರಿಗೆ, ಸುರವೃಕ್ಷ=ಕಲ್ಪವೃಕ್ಷದಂತೆ ಇರುವವನು, ವೃಕದನುಜಾರಿ=ವೃಕಾಸುರನು ಎಂಬ ದೈತ್ಯನಿಗೆ ಶತ್ರುವು, ಲೋಕಾಧ್ಯಕ್ಷ, ಶುಕ, ದೂರ್ವಾಸ, ಜೈಗೀಷವ್ಯ ಎಂಬ ಮೂರು ಅವತಾರವುಳ್ಳ ಇಂತಹಾ ಗುಣವಿಶಿಷ್ಟನಾದ ಎಲೈ ಮಹಾದೇವ! ಸಂತೈಸು.

ವಿಶೇಷಾರ್ಥ.—ರುದ್ರದೇವರ ಮಾವನಾದ ದಕ್ಷಪ್ರಜೇಶ್ವರನು, ಪ್ರಜೇಶ್ವರರು ಮಾಡುತ್ತಿದ್ದ ಯಾಗಕ್ಕೆ ತಾನು ಬರಲು, ತನಗೆ ಮುಂಚಿತವಾಗಿ ಅಲ್ಲಿಗೆ ಬಂದಿದ್ದ ತನ್ನ ಅಳಿಯನಾದ ರುದ್ರನು ತನಗೆ ಎದ್ದು ನಮಸ್ಕರಿಸಲಿಲ್ಲವೆಂದು ಕೋಪದಿಂದ ರುದ್ರದೇವರನ್ನು ಅನೇಕ ವಿಧವಾಗಿ ದೂಷಿಸಿದರು. ಅವರನ್ನು ಅವಮಾನಮಾಡುವುದಕ್ಕಾಗಿ ತಾನೂ ಬಂದು ಯಾಗಮಾಡಲು ಎತ್ನಮಾಡಿ ತನ್ನ ಅಳಿಯ ರುದ್ರದೇವರನ್ನೂ, ಅವರ ಭಾರ್ಯಳಾದ ತನ್ನ ಮಗಳನ್ನೂ ಆ ಯಾಗಕ್ಕೆ ಬರಬೇಕೆಂದು ಹೇಳಿಕಳುಹಿಸಲೇ ಇಲ್ಲ. ಆದರೂ ಇವನ ಮಗಳೂ, ರುದ್ರದೇವರ ಭಾರ್ಯಳೂ ಆದ ಸತಿದೇವಿಯರು ತಂದೆ ಎಂಬಭಿಮಾನದಿಂದ ಯಾಗಶಾಲೆಗೆ ಬರಲು ಆಕೆಯನ್ನು ಸತ್ಕರಿಸದೆ, ಆಹುತಿ ಕೊಡದೆ ಅವಮಾನ ಮಾಡಿದನು. ಸತಿದೇವಿಯು ಇದಕ್ಕಾಗಿ ತಂದೆಯನ್ನು ಬಹಳವಾಗಿ ದೂಷಿಸಿ, ನಿನ್ನಂತಹ ಪಾಪಿಯಿಂದ ಜನಿಸಿದ ಈ ದೇಹ

ವನ್ನು ಬಿಡುವೆನೆಂದು ದೇಶವನ್ನು ಬಿಟ್ಟುಬಿಟ್ಟರು. ಈ ವರ್ತಮಾನವನ್ನು ಕೇಳಿದ ರುದ್ರದೇವರು ಕೋಪದಿಂದ ಬಂದು ದಕ್ಷನ ಯಾಗವನ್ನು ಧ್ವಂಸ ಮಾಡಿ ಅವನನ್ನು ಸಂಹರಿಸಿ ಕಡೆಗೆ ಬ್ರಹ್ಮದೇವರ ಅಪ್ಪಣೆಯ ಮೇರೆ ಮೇಕೆಯ ತಲೆಯಿಂದ ಆತನನ್ನು ಬದುಕಿಸಿದರೆಂದು ಭಾಗವತ ಚತುರ್ಥ ಸ್ಕಂಧದ ಕಥೆ. ಆ ಅಭಿಪ್ರಾಯ ಸೂಚಕವಾದುದು ದಕ್ಷಯಜ್ಞ ವಿಭಂಜನನೆಂಬ ಪದವು. ವೃಕದನುಜಾರಿ, ವೃಕಾಸುರನೆಂಬುವನನ್ನೇ ಲೋಕದಲ್ಲಿ ಭಸ್ಮಾಸುರನೆನ್ನುವರು. ಅವನು, " ನಾನು ಯಾರ ತಲೆಯ ಮೇಲೆ ಕೈ ಇಡುವೆನೋ ಅವನು ಭಸ್ಮವಾಗಬೇಕು. " ಎಂದು ರುದ್ರದೇವರಿಂದ ವರವನ್ನು ಪಡೆದು ಪರೀಕ್ಷಾರ್ಥವಾಗಿ ರುದ್ರದೇವರ ತಲೆಯಮೇಲೆಯೇ ಕೈ ಇಡಲೆತ್ನಿಸಿದನು. ಆಗ ವೃಕಾಸುರನನ್ನು ಶ್ರೀಹರಿಯು ಉಪಾಯದಿಂದ ಅವನ ಕೈಯನ್ನು ಅವನ ತಲೆಯಮೇಲೆಯೇ ಇಟ್ಟುಕೊಳ್ಳುವಂತೆ ಮಾಡಿ ಅವನನ್ನು ಸಂಹರಿಸಿದನು ರುದ್ರದೇವರು ಕೊಟ್ಟ ವರವೇ ಅವನ ಸಂಹಾರಕ್ಕೆ ಕಾರಣವಾದುದರಿಂದ ವೃಕದನುಜಾರಿ ಎಂದರು. ರುದ್ರದೇವರ ಅವತಾರತ್ರಯದಲ್ಲಿ ಪ್ರಮಾಣಾದಿಗಳನ್ನು ೨೧ನೆಯ ಬೃಹತ್ತಾರತಮ್ಯ ಸಂಧಿಯ ವ್ಯಾಖ್ಯಾನದಲ್ಲಿ ಬರೆದಿದೆ.

ಹತ್ತು ಕಲ್ಪದಿ ಲವಣಜಲಧಿಯೊ  
ಳುತ್ತಮ ಶ್ಲೋಕನ ವಲಿಸಿ ಕೃತ  
ಕೃತ್ಯನಾಗಿ ಜಗತ್ಪತಿಯ ನೇಮದಿ ಕುಶಾಸ್ತ್ರಗಳ |  
ಬಿತ್ತರಿಸಿ ಮೋಹಿಸಿ ದುರಾತ್ಮರ  
ನಿತ್ಯನಿರಯನಿವಾಸರೆನಿಸಿದ  
ಕೃತ್ತಿವಾಸಗೆ ನಮಿಪೆ ಶೇಷಪದಾರ್ಥನಹುದೆಂದು ||೧೩||

ಪದ್ಯಾರ್ಥ.—ಹತ್ತುಕಲ್ಪದಿ=ಬ್ರಹ್ಮಕಲ್ಪದಿಂದ ಹತ್ತು ಕಲ್ಪಗಳಲ್ಲಿ, ಲವಣಜಲಧಿಯೊಳು=ಲವಣ ಸಮುದ್ರದಲ್ಲಿ ತಪಸ್ಸು ಮಾಡಿ, ಉತ್ತಮ ಶ್ಲೋಕನ=ಪುಣ್ಯಕೀರ್ತಿಯುಳ್ಳ ಶ್ರೀಪರಮಾತ್ಮನನ್ನು, ಒಲಿಸಿ= ಮೆಚ್ಚಿಸಿ, ಕೃತಕೃತ್ಯನಾಗಿ, ಜಗತ್ಪತಿಯ-ಶ್ರೀಪರಮಾತ್ಮನ, ನೇಮದಿ = ಅಪ್ಪಣೆಯ ಮೇರೆಗೆ, ಕುಶಾಸ್ತ್ರಗಳ-ಶೈವಪಾಶುಪತಾದಿ ಮೋಹ ಶಾಸ್ತ್ರಗಳನ್ನು, ಬಿತ್ತರಿಸಿ=ವಿಸ್ತಾರಮಾಡಿ, ದುರಾತ್ಮರ=ತಮೋಯೋಗ್ಯರಾದ ದೈತ್ಯರನ್ನು ಮೋಹಿಸಿ, ನಿತ್ಯನಿರಯನಿವಾಸರು=ನಿತ್ಯವಾದ ತಮಸ್ಸಿಗೆ ಯೋಗ್ಯರೆಂದು ಹೇಳು

ಪಂತೆ ಮಾಡಿದ, ಕೃತ್ತಿವಾಸಗೆ=ಚರ್ಮವಸ್ತ್ರವುಳ್ಳ ರುದ್ರದೇವರಿಗೆ, ಶೇಷ ಪದಾರ್ಹನಸುದೆಂದು=ಇವರೇ ಶೇಷಪದವಿಯನ್ನು ಹೊಂದುವುದಕ್ಕೆ ಅರ್ಹ ರೆಂದು, ನಮಿಪೆ=ನಮಸ್ಕರಿಸುವೆನು.

ತಾತ್ಪರ್ಯ.—ಬ್ರಹ್ಮಕಲ್ಪಗಳವರೆಗೂ ಲವಣಸಮುದ್ರದಲ್ಲಿ ಉಗ್ರ ವಾದ ತಪಸ್ಸನ್ನು ಮಾಡಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗಿ ಭಗವದಾ ಜ್ಞೆಯ ಮೇರೆಗೆ "ತ್ವಂಚರುದ್ರ ಮಹಾಬಾಹೋ ಮೋಹಶಾಸ್ತ್ರಾಣಿಕಾರಯ ನೀನು ನಿನ್ನ ಮಹಿಮೆಯನ್ನು ಪ್ರತಿಪಾದಿಸುವ ಮೋಹಶಾಸ್ತ್ರವನ್ನು ಮಾಡು ಎಂಬಿವೇ ಮೊದಲಾದ ಭಗವದಪ್ಪಣೆಯಂತೆ ಮೋಹಶಾಸ್ತ್ರಗಳನ್ನು ಮಾಡಿ ದೈತ್ಯರನ್ನು ಮೋಹಗೊಳಿಸಿ ಅವರ ಅಂಧಂತಮಸ್ಸಿಗೆ ಯೋಗ್ಯರೆಂದೆನಿಸಿ, ಮುಂದಿನ ಕಲ್ಪದಲ್ಲಿ ಶೇಷಪದವಿಯನ್ನು ಹೊಂದುವ ರುದ್ರದೇವರಿಗೆ ನಮ ಸ್ಕಾರಮಾಡುವೆನು.

ಅವತಾರಿಕೆ.—ಕೃಷ್ಣಪತ್ನಿಯರಾದ ಷಣ್ಮಹಿಷಿಯರನ್ನು ಪ್ರಾರ್ಥಿಸು ತ್ತಾರೆ.

ಕಂಬುಪಾಣಿಯ ಪರಮಪ್ರೇಮ ನಿ<br>
ತಂಬಿನಿಯರೆಂದೆನಿಪ ಲಕ್ಷಣ<br>
ಜಾಂಬವತಿ ಕಾಳಿಂದಿ ನೀಲಾ ಭದ್ರಸಖುವಿಂದಾ।<br>
ಎಂಬ ಷಣ್ಮಹಿಷಿಯರ ದಿವ್ಯ ಪ<br>
ದಾಂಬುಜಗಳಿಗೆ ನಮಿಪೆ ಮಮಹೃದ<br>
ಯಾಂಬರದಿ ನೆಲಸಲಿ ಬಿಡದೆ ತಮ್ಮರಸನೊಡಗೂಡಿ ॥೧೪॥

ಪದ್ಯಾರ್ಥ.—ಕಂಬುಪಾಣಿಯ=ಶಂಖಪಾಣಿಯಾದ ಶ್ರೀಕೃಷ್ಣನ, ಪ ರಮಪ್ರೇಮನಿತಂಬಿನಿಯರೆನಿಪ=ಪ್ರೇಮ ಪತ್ನಿಯರೆನಿಸುವ, ಲಕ್ಷಣಾ, ಜಾಂ ಬವತಿ, ಕಾಳಿಂದೀ, ನೀಲಾ, ಭದ್ರಾ, ಮಿತ್ರವಿಂದಾ ಎಂಬ ಷಣ್ಮಹಿಷಿ ಯರ-೬ ಮಹಿಳೆಯರನ್ನು, ದಿವ್ಯಪದಾಂಬುಜಗಳಿಗೆ, ನಮಿಪೆ, ಮಮ=ನ ನ್ನ, ಹೃದಯಾಂಬರದಿ=ಹೃದಯಾಕಾಶದಲ್ಲಿ, ತಮ್ಮರಸನೊಡಗೂಡಿ=ತಮ್ಮ ಪತಿಯಿಂದೊಡಗೂಡಿ, ಬಿಡದೆ, ನೆಲಸಲಿ.

ತಾತ್ಪರ್ಯ.—ಶ್ರೀಕೃಷ್ಣನ ಪತ್ನಿಯರಾದ ಲಕ್ಷಣಾ, ಜಾಂಬವಂತೀ, ಕಾಳಿಂದೀ, ನೀಲಾ, ಭದ್ರಾ, ಮಿತ್ರವಿಂದ ಎಂಬ ಷಣ್ಮಹಿಳೆಯರ ಪಾದ

ಕಮಲಗಳಿಗೆ ನಮಸ್ಕರಿಸುವೆನು. ತಮ್ಮ ಪತಿಯಿಂದೊಡಗೂಡಿ ನನ್ನ ಹೃದಯಾಕಾಶದಲ್ಲಿ ಬಿಡದೆ ವಾಸಮಾಡಲಿ.

ಅವತಾರಿಕೆ.—ಗರುಡ, ಶೇಷ, ರುದ್ರರ ಪತ್ನಿಯರನ್ನು ಬೇಡುತ್ತಾರೆ

**ಆ ಪರಂತಪನೊಲಿಮೆಯಿಂದ ಸ**
**ದಾಪರೋಕ್ಷಿಗಳೆನಿಸಿ ಭಗವ**
**ದ್ರೂಪಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ ||**
**ಸೌಪರ್ಣಿ ವಾರುಣಿ ನಗಾತ್ಮಜ**
**ರಾಪನಿತು ಬಣ್ಣಿಸುವೆ ಎನ್ನ ಮ**
**ಹಾಪರಾಧಗಳೆಣಿಸದೀಯಲಿ ಪರಮ ಮಂಗಳವ ||೧೫||**

ಪದ್ಯಾರ್ಥ.—ಆ ಪರಂತಪನ=ಮೇಲೆ ಹೇಳಿದ, ಪರಂಜ್ಯೋತಿ ಸ್ವರೂಪನಾದ ಪರಮಾತ್ಮನ, ಒಲಿಮೆಯಿಂದ=ಪ್ರಸಾದದಿಂದ, ಸದಾ ಅಪರೋಕ್ಷಿಗಳೆನಿಸಿ, ಭಗವದ್ರೂಪಗುಣಗಳ, ಮಹಿಮೆ=ಮಹಿಮೆಗಳನ್ನು, ಸ್ವಪತಿಗಳ=ತಮ್ಮ ತಮ್ಮ ಪತಿಗಳಾದ ಗರುಡ, ಶೇಷ, ರುದ್ರಾದಿಗಳ, ಆನನದಿ=ಮುಖದಿಂದ, ತಿಳಿವ=ತಿಳಿದುಕೊಳ್ಳುವ, ಸೌಪರ್ಣಿ=ಗರುಡನ ಹೆಂಡತಿ, ವಾರುಣಿ=ಶೇಷಪತ್ನಿ, ನಗಾತ್ಮಜರ=ಪಾರ್ವತೀದೇವಿಯರು ಇವರು ಮೂವರನ್ನೂ, ಆಪನಿತು=ಶಕ್ತ್ಯಾನುಸಾರವಾಗಿ, ಬಣ್ಣಿಸುವೆ=ಸ್ತೋತ್ರಮಾಡುವೆನು. ಎನ್ನ ಮಹಾಪರಾಧಗಳ ಎಣಿಸದೇ ಪರಮ ಮಂಗಳವ=ಮಂಗಳವನ್ನು, ಈಯಲಿ=ಕೊಡಲಿ.

ತಾತ್ಪರ್ಯ.—ಭಗವದನುಗ್ರಹದಿಂದ ಸದಾ ಅಪರೋಕ್ಷಿಗಳೆನಿಸಿ ಪರಮಾತ್ಮನ ರೂಪ, ಗುಣ ಇವುಗಳ ಮಹಿಮೆಯನ್ನು ತಮ್ಮ ತಮ್ಮ ಪತಿಗಳ ಮುಖದಿಂದ ಅವರವರು ಶ್ರವಣಮಾಡಿ, ಚೆನ್ನಾಗಿ ತಿಳಿದು ಮನನಮಾಡುತ್ತಿರುವ ಸೌಪರ್ಣೀ, ವಾರುಣೀ, ಪಾರ್ವತೀ ಎಂಬ ಈ ಮೂವರನ್ನು ನನ್ನ ಬುದ್ಧಿಗೆ ಗೋಚರವಾಗುವಷ್ಟು ಸ್ತೋತ್ರಮಾಡುವೆನು. ನನ್ನ ಅಪರಾಧಗಳನ್ನು ಗಣನೆಗೆ ತಾರದೆ ನನಗೆ ಮಂಗಳವನ್ನು ಕೊಡಲಿ.

ಅವತಾರಿಕೆ.—ದೇವೇಂದ್ರನನ್ನು ಪ್ರಾರ್ಥಿಸುತ್ತಾರೆ.—

ತ್ರಿದಿವತರುಮಣಿ ಧೇನುಗಳಿಗಾ
ಸ್ಪದವೆನಿಪ ತ್ರಿದಶಾಲಯಾಬ್ಧಿಗೆ
ಬದರನಂದದಲೊಪ್ಪುತಿಪ್ಪ ಉಪೇಂದ್ರ ಚಂದ್ರಮನ ||
ಮೃದುಮಧುರ ಸುಸ್ತವನದಿಂದಲಿ
ಮಧುಸಮಯ ಪಿಕನಂತೆ ಪಾಡುವ
ಮುದಿರವಾಹನನಂಘ್ರಿಯುಗ್ಮಂಗಳಿಗೆ ನಮಿಸುವೆನು ||೧೬||

ಪದ್ಯಾರ್ಥ.—ತ್ರಿದಿವತರು=ಕಲ್ಪವೃಕ್ಷ, ಮಣಿ-ಚಿಂತಾಮಣಿ, ಧೇನುಗಳಿಗೆ=ಕಾಮಧೇನು ಇವುಗಳಿಗೆ, ಆಸ್ಪದವೆನಿಸಿಪ=ಇರುವುದಕ್ಕೆ ವಾಸಸ್ಥಳವಾದ, ತ್ರಿದಶಾಲಯ=ದೇವತೆಗಳು ವಾಸವಾಡಲು ಯೋಗ್ಯವಾದ ಸ್ವರ್ಗವೆಂಬ, ಅಬ್ಧಿಗೆ=ಸಮುದ್ರಕ್ಕೆ, ಬದರನಂದದಲಿ=ಚಂದ್ರನಂತೆ, ಒಪ್ಪುತಿಪ್ಪ=ಇರುವ, ಉಪೇಂದ್ರಚಂದ್ರಮನ = ಉಪೇಂದ್ರನೆಂಬ ವಾಮನರೂಪಿಯಾದ ಶ್ರೀಪರಮಾತ್ಮನೆಂಬ ಚಂದ್ರನನ್ನು, ಮಧುಸಮಯಪಿಕನಂತೆ=ವಸಂತಕಾಲದ ಕೋಗಿಲದಂತೆ, ಮೃದು=ಮೃದುವಾಗಿಯೂ, ಮಧುರ=ಮಧುರವಾಗಿಯೂ, ಇರುವ ಸ್ವರದಿಂದ ಕೂಡಿದ, ಸುಸ್ತವನದಿಂದಲಿ=ದಿವ್ಯಸ್ತೋತ್ರದಿಂದ, ಪಾಡುವ=ಗಾನಮಾಡುತ್ತಿರುವ, ಮುದಿರವಾಹನನ-ಮೇಘವಾಹನನೆನಿಸುವ ದೇವೇಂದ್ರನ, ಅಂಘ್ರಿಯುಗ್ಮಂಗಳಿಗೆ=ಪಾದಕಮಲಂಗಳಿಗೆ, ನಮಿಸುವೆನು.

ತಾತ್ಪರ್ಯ.—ಕಲ್ಪವೃಕ್ಷ ಕಾಮಧೇನು, ಚಿಂತಾಮಣಿ ಎಂಬೀ ಮೂರು ಉತ್ತಮ ವಸ್ತುಗಳಿಗೆ ಆಶ್ರಯ ಭೂತವಾದ ಸ್ವರ್ಗವೆಂಬ ಸಮುದ್ರಕ್ಕೆ, ಚಂದ್ರನಂತೆ ಶೋಭಿಸುತಿಪ್ಪ ಉಪೇಂದ್ರನೆಂಬ ಚಂದ್ರಮನನ್ನು ವಸಂತಕಾಲದ ಕೋಗಿಲದಂತೆ ಮೃದು ಮಧುರ ಸುಸ್ವರದಿಂದ ಸ್ತೋತ್ರಮಾಡುತ್ತಿರುವ ದೇವೇಂದ್ರನ ಪಾದಪದ್ಮಂಗಳಿಗೆ ನಮಸ್ಕಾರ ಮಾಡುವೆನು. ಅಂದರೆ ದೇವೇಂದ್ರನ ಆಸ್ಥಾನದಲ್ಲಿ ಉಪಾಸ್ಯಮೂರ್ತಿಯು ಉಪೇಂದ್ರನೆಂಬ ವಾಮನರೂಪಿಯಾದ ಪರಮಾತ್ಮನೆಂಬ ಭಾವ.

ಕೃತಿರಮಣ ಪ್ರದ್ಯುಮ್ನದೇವನ
ಅತುಳಬಲ ಲಾವಣ್ಯ ಗುಣ ಸಂ
ತತ ಉಪಾಸನೆ ಕೇತುಮಾಲಾ ಖಂಡದೊಳು ರಚಿಪಾ ||
ರತಿಮನೋಹರನಂಘ್ರಿ ಕಮಲಕೆ
ನುತಿಸುವೆನು ಭಕುತಿಯಲಿ ಮನ ದು
ರ್ಮತಿಯ ಕಳೆದು ಸನ್ಮತಿಯನೀಯಲಜಸ್ರ ನಮಗೊಲಿದು ೧೭

ಪದ್ಯಾರ್ಥ.—ಕೃತಿರಮಣ-ಕೃತಿಸ್ವರೂಪರಾದ ರಮಾದೇವಿಯ ಪತಿಯಾದ ಪ್ರದ್ಯುಮ್ನಮೂರ್ತಿಯು, ಅತುಲ=ಸಮರಹಿತವಾದ, ಬಲ, ಲಾವಣ್ಯ-ಸೌಂದರ್ಯ, ಗುಣ=ಗುಣಗಳು, ಇವುಗಳನ್ನು, ಸಂತತ=ಸರ್ವದಾ, ಕೇತುಮಾಲಾಖಂಡದೊಳು=ಕೇತುಮಾಲಾ ಎಂದು ಹೆಸರುಳ್ಳ ಭೂಖಂಡದಲ್ಲಿ, ಉಪಾಸನೆ-ಉಪಾಸನೆಯನ್ನು, ರಚಿಪಾ=ಮಾಡುತ್ತಿರುವ, ರತಿಮನೋಹರನ=ರತಿಪತಿಯಾದ ಮನ್ಮಥನ, ಅಂಘ್ರಿಕಮಲಕೆ=ಪಾದಕಮಲಗಳಿಗೆ, ಭಕುತಿಯಲಿ ನುತಿಸುವೆನು=ನಮಸ್ಕರಿಸುವೆನು. ಅಜಸ್ರ=ಸರ್ವಕಾಲದಲ್ಲೂ, ಎಮಗೆ=ನಮಗೆ, ಒಲಿದು, ಮಮ=ನನ್ನ, ದುರ್ಮತಿಯಕಳೆದು ಸನ್ಮತಿಯ ನೀಯಲಿ.

ತಾತ್ಪರ್ಯ.—ಕೇತುಮಾಲಾ ಖಂಡದಲ್ಲಿ ವಾಸಮಾಡುತ್ತಾ ಕೃತಿಪತಿಯಾದ ಪ್ರದ್ಯುಮ್ನನಾಮಕ ಪರಮಾತ್ಮನ ಅಮಿತವಾದ ಬಲ ಲಾವಣ್ಯ ಗುಣಗಳನ್ನು ಸದಾ ಉಪಾಸನೆ ಮಾಡುತ್ತಿರುವ ರತಿಪತಿಯಾದ ಮನ್ಮಥನ ಪಾದಕಮಲಗಳಿಗೆ ಭಕ್ತಿಯಿಂದ ವಂದಿಸುವೆನು. ಸದಾ ನಮಗೊಲಿದು ನಮ್ಮ ದುರ್ಮತಿಯನ್ನಳಿದು ಸನ್ಮತಿಯ ಕೊಡಲಿ.

ಅವತಾರಿಕೆ.—ಅಹಂಕಾರಿಕಪ್ರಾಣದೇವರನ್ನು ವಂದಿಸುತ್ತಾರೆ. (ಪಂಚಪ್ರಾಣರ ಪೈಕಿ ಮೊದಲನೆಯವರೆಂದು ತಿಳಿಯಬೇಕು. )

ಚಾರುತರ ನವವಿಧ ಭಕುತಿ ಗಂ
ಭೀರವಾರಾಸಿಯೊಳು ಪರಮೋ
ದಾರಮಹಿಮನ ಹೃದಯ ಫಣಿಪತಿ ಪೀಠದಲಿ ಭಜಿಪ ||
ಭೂರಿಕರ್ಮಾಕರನೆನಿಸುವ ಶ
ರೀರಮಾನಿ ಪ್ರಾಣಪತಿ ಪದ
ವಾರಿರುಹಕಾನಮಿಪೆ ಮದ್ಗುರುರಾಯನಹುದೆಂದು ||೧೮||

ಪದ್ಯಾರ್ಥ.—ಚಾರುತರ=ಮನೋಹರವಾದ, ನವವಿಧಭಕ್ತಿ-೯ವಿಧವಾದ ಭಕ್ತಿ ಎಂಬ, ಗಂಭೀರ=ಬಹು ಆಳವಾದ, ವಾರಾಸಿಯೊಳು=ಸಮುದ್ರದಲ್ಲಿ, ಪರಮೋದಾರಮಹಿಮನ=ಭಜಕರಿಗೆ ಸರ್ವಾಭೀಷ್ಟವನ್ನು ಕೊಡುವವನಾದುದರಿಂದ ಪರಮೋದಾರನೆಂದರು. ಇಂತಹಾ ಮಹಿಮೆಯುಳ್ಳ ಶ್ರೀಹರಿಯನ್ನು, ಹೃದಯಫಣಿಪತಿಪೀಠದಲಿ=ಹೃದಯಾಕಾಶದಲ್ಲಿ, ಸರ್ಪಶ್ರೇ

ಷ್ಠನಾದ ಶೇಷದೇವನನ್ನೇ ಪೀಠವನ್ನಾಗಿ ಮಾಡಿಕೊಂಡು ಅದರಮೇಲೆ ಕೂತಿರುವ ಭಗವತ್ಸ್ವರೂಪವನ್ನು ಭಜಿಸುತ್ತಿರುವ, ಭೂರಿತಮ್ಮಾತರನೆನಿಸುವ =ದೇಹದೊಳಗಿದ್ದು, ಅನೇಕ ವಿಧಕರ್ಮಗಳನ್ನು ಮಾಡಿಸುವುದರಿಂದ ಭೂರಿತಮ್ಮಾತರನೆಂದು ಪ್ರಸಿದ್ಧಿಯನ್ನು ಪಡೆದ, ಶರೀರಮಾನಿ-ದೇಹಾಭಿಮಾನಿಯಾದ, ಪ್ರಾಣಪತಿ=೪೯ ಮರುದ್ಗಣದ ಪೈಕಿ ಶ್ರೇಷ್ಠನಾದ, ಪ್ರಾಣರ=ಅಹಂಕಾರಿಕಪ್ರಾಣನ, ಪದವಾರಿರುಹಕೆ=ಪಾದಕಮಲಗಳಿಗೆ, ಮದ್ಗುರುರಾಯನಹುದೆಂದು=ನಮ್ಮ ಗುರುಶ್ರೇಷ್ಠರಿವರೆಂದು, ಅನಮಿಪೆ=ನಮಸ್ಕರಿಸುವೆ

ತಾತ್ಪರ್ಯ.—೯ ವಿಧವಾದ ಭಕ್ತಿ ಎಂಬುವುದೇ ಸಮುದ್ರ, ಆ ಸಮುದ್ರದ ವಾಸಸ್ಥಾನವು ಹೃದಯ, ಆ ಹೃದಯ ಮಧ್ಯದಲ್ಲಿ ಶೇಷಪೀಠದ ಮೇಲಿರುವ ಪರಮಾತ್ಮನನ್ನು ಸರ್ವದಾ ಚಿಂತಿಸುತ್ತಾ ದೇಹಾಭಿಮಾನಿ ಎನಿಸಿ ಪ್ರಾಣಿಗಳ ದೇಹದೊಳಗಿದ್ದು ಸಕಲ ವಿಧ ಕರ್ಮಗಳನ್ನು ಮಾಡಿಸುತ್ತಿರುವ ಮರುಚ್ಛ್ರೇಷ್ಠರಾದ ಅಹಂಕಾರಿಕ ಪ್ರಾಣನಾಮಕನ ಪಾದಕಮಲಗಳಿಗೆ ನಮಸ್ಕರಿಸುವೆನು. ಇವನು ೯ ನೆಯ ಕಕ್ಷ್ಯಕ್ಕೆ ಸೇರಿದ ಗುರುವೆಂದು ತಿಳಿಯಬೇಕು.

ಅವತಾರಿಕೆ.—ರತಿ ಮೊದಲಾದ ೬ ಮಂದಿಯರನ್ನು ಸ್ತುತಿಸುತ್ತಾರೆ

**ವಿತತ ಮಹಿಮನ ವಿಶ್ವತೋಮುಖ**
**ನತುಳಭುಜ ಬಲ ಕಲ್ಪತರು ವಾ**
**ಶ್ರಿತರೆನಿಸಿ ಸಕಲೇಷ್ಟಪಡೆದನುದಿನದಿ ಮೋದಿಸುವ ||**
**ರತಿ ಸ್ವಯಂಭುವ ದಕ್ಷವಾಚ**
**ಸ್ಪತಿ ಬಿಡೌಜನಮಡದಿ ಶಚಿ ಮ**
**ನ್ಮಥ ಕುಮಾರನಿರುದ್ಧರಿಮಗೀಯಲಿ ಸುಮಂಗಳವ ||೧೯||**

ಪದ್ಯಾರ್ಥ.—ವಿತತ-ವಿಶೇಷವಾಗಿ ಸರ್ವತ್ರ ವ್ಯಾಪ್ತವಾಗಿರುವ, ಮಹಿಮನ=ಮಹಿಮೆಯುಳ್ಳ, ವಿಶ್ವತೋಮುಖನ-ಪ್ರಪಂಚವೇ ಮುಖವಾಗುಳ್ಳ, ಅಥವಾ ಪ್ರಪಂಚದ ಎಲ್ಲಾ ಕಡೆಯಲ್ಲೂ ಮುಖವುಳ್ಳ, ಅತುಳಭುಜ ಕಲ್ಪತರುವ=ಸಮರಹಿತವಾದ ಭುಜಬಲವುಳ್ಳ, ಕಲ್ಪವೃಕ್ಷಸ್ಥಾನೀಯನಾದ ಶ್ರೀಪರಮಾತ್ಮನ ಆಶ್ರಿತರೆನಿಸಿ ಸಕಲೇಷ್ಟ ಪಡೆದು, ಅನು

ದಿನದಿ-ಪ್ರತಿದಿವಸದಲ್ಲೂ, ಮೋದಿಸುವ=ಆನಂದಪಡುತ್ತಿರುವ, ರತಿ=ಮ ನ್ಮಥನ ಹೆಂಡತಿ, ಸ್ವಯಂಭುವ=ಸ್ವಾಯಂಭುವ ಮನುವು, ದಕ್ಷ=ದಕ್ಷಪ್ರ ಜೇಶ್ವರ, ವಾಚಸ್ಪತಿ-ಬೃಹಸ್ಪತ್ಯಾಚಾರ್‍ಯರು, ಬಿಡೌಜನಮಡದಿ - ದೇ ವೇಂದ್ರನ ಹೆಂಡತಿಯಾದ ಶಚಿ, ಮನ್ಮಥನ ಕುಮಾರ ಅನಿರುದ್ಧ, ಈ ಆರು ಮಂದಿಯರು, ಎಮಗೆ-ನಮಗೆ, ಸುಮಂಗಳನ, ಈಯಲಿ-ಕೊಡಲಿ.

ತಾತ್ಪರ್ಯ.— ಸರ್ವತ್ರ ವ್ಯಾಪ್ತವಾದ ಮಹಿಮೆಯುಳ್ಳ ವಿಶ್ವತೋಮು ಖನಾದ ಅಪರಿಮಿತ ಬಲಶಾಲಿಯಾದ ಭಕ್ತರಿಗೆ ಕಲ್ಪವೃಕ್ಷದಂತೆ ಇಷ್ಟಾ ರ್ಥವನ್ನು ಪೂರೈಸುವ ಶ್ರೀಹರಿಯ ಅತ್ರಯದಿಂದ ಸಕಲವಾದ ಇಷ್ಟಾರ್ಥ ವನ್ನು ಪಡೆದು ಸರ್ವದಾ ಆನಂದಪಡುತ್ತಿರುವ ರತಿ, ಮನು, ಗುರು, ದಕ್ಷ, ಶಚಿ, ಅನಿರುದ್ಧರೆಂಬ ಈ ಆರು ಜನರು ನಮಗೆ ಮಂಗಳವನ್ನು ಕೊಡಲಿ.

ಅವತಾರಿಕೆ.—೪೯ ಮರುದ್ಗಣದ ಪೈಕಿ ಒಬ್ಬನಾದ ಪ್ರವಹಮಾರು ತನನ್ನು ಸ್ತುತಿಸುತ್ತಾರೆ.—

ಭವವನಧಿ ನವಪ್ರೋತ ಪುಣ್ಯ  
ಶ್ರವಣಕೀರ್ತನ ಪಾದವನರುಹ  
ಭವನನಾವಿಕನಾಗಿ ಭಜಕರತಾರಿಸುವ ಬಿಡದೆ ।  
ಪ್ರವಹಮಾರುತದೇವ ಪರಮೋ  
ತ್ಸವ ವಿಶೇಷ ನಿರಂತರ ಮಹಾ  
ಪ್ರವಹದಂದದಿ ಕೊಡಲಿ ಭಗವದ್ಭಕ್ತ ಸಂತತಿಗೆ ॥೨೦॥

ಪದ್ಯಾರ್ಥ.— ಭವವನಧಿ=ಸಂಸಾರವೆಂಬ ಸಮುದ್ರಕ್ಕೆ, ನವ-ನೂ ತನವಾದ, (ಹೊಸದಾದ) ಪೋತ - ಹಡಗಿನಂತಿರುವ ಶ್ರೀಪರಮಾತ್ಮನ, ಪುಣ್ಯಶ್ರವಣಕೀರ್ತನ=ಶ್ರವಣಮಾಡುವದರಿಂದಲೂ, ಕೀರ್ತನೆ ಮಾಡುವದ ರಿಂದಲೂ, ಮಹಾಪುಣ್ಯ ಫಲವನ್ನು ಕೊಡುತ್ತಿರುವ, ಪಾದವನರುಹ=ಪಾ ದಕಮಲವನ್ನೇ, ಭವನ-ಮನೆಯನ್ನಾಗಿ ಮಾಡಿಕೊಂಡು, ನಾವಿಕನಾಗಿ ಶ್ರೀಹರಿಯ ಪಾದಕಮಲವೆಂಬ ಹಡಗಿಗೆ ನಾವಿಕನಾಗಿ, (ಹಡಗಿನಿಂದ ಜನ ರನ್ನು ಒಂದು ದಡದಿಂದ ಮತ್ತೊಂದು ದಡಕ್ಕೆ ದಾಟಿಸುವವನು) ಭಜಕರ =ಪರಮಾತ್ಮನನ್ನು ಭಜಿಸುವ ಭಕ್ತರನ್ನು ಬಿಡದೆ, ತಾರಿಸುವ = ಸಂಸಾರ ಸಮುದ್ರದಿಂದ ಪಾರಗಾಣಿಸುವ, ಪ್ರವಹಮಾರುತದೇವ=ಪ್ರವಹ ವಾಯು

ದೇವನು, ನಿರಂತರ=ನಿತ್ಯವಾದ, ಮಹಾಪ್ರವಹದಂದದಿ=ಮಹಾ ಪ್ರವಾಹ ದಂತೆ, ಭಗವದ್ಭಕ್ತಸಂತತಿಗೆ=ಭಗವದ್ಭಕ್ತರ ವಂಶದವರಿಗೆ, ಪರಮೋತ್ಸ ವವಿಶೇಷ=ಭಗವದ್ದರ್ಶನ ರೂಪವಾದ ವಿಶೇಷವನ್ನು ಕೊಡಲಿ.

ತಾತ್ಪರ್ಯ.—ಹಡಗನ್ನು ದಡದಿಂದ ದಡಕ್ಕೆ ಸಾಗಿಸಬೇಕಾದರೆ ಹ ಡಗನ್ನು ನಡಿಸುವವನೊಬ್ಬನಿದ್ದರೂ, ಗಾಳಿಯ ಸಹಾಯವು ಬೇಕಾಗುವು ದು. ಹಾಗೆಯೇ ಸಂಸಾರವೆಂಬ ಸಮುದ್ರದಿಂದ ಪಾರಗಾಣಲು ಪರಮಾ ತ್ಮನ ಪಾದಕಮಲವೆಂಬುದೇ ಹಡಗಾಗುವುದು. ಭಗವನ್ಮಹಿಮೋಪದೇ ಶಕನಾದ ಗುರುವೇ ತಾರಕನಾಗಬೇಕು. ಪ್ರವಹಮಾರುತನು ೧೧ನೆಯ ಕಕ್ಷಾಕ್ಕೆ ಸೇರಿದ ಗುರುವಾದುದರಿಂದಲೂ, ಸ್ವಯಂ ಗಾಳಿಯಾದುದರಿಂದ ಲೂ, ತಾನೇ ಗಾಳಿ, ತಾನೇ ನಾವಿಕನಾದ ಮೇಲೆ ಸಮುದ್ರವನ್ನು ದಾಟು ವುದು ಕಷ್ಟವೇನು ? ಆದ್ದರಿಂದ ಹರಿಯ ಪಾದಕಮಲವೆಂಬ ವಾಡೆಯನ್ನ ಮನೆಯನ್ನಾಗಿ ಮಾಡಿಕೊಂಡು ಅಲ್ಲೇ ಇದ್ದು ಬರುವ ಭಗವದ್ಭಕ್ತರನ್ನು ಸಂಸಾರ ಸಮುದ್ರಧಿಂದ ಪಾರಗಾಣಿಸುವ ಪ್ರವಹವಾಯುದೇವರು, ಮಹಾ ಪ್ರವಾಹದಂತೆ ನಿತ್ಯವಾದ, ಭಗವದ್ದರ್ಶನ ರೂಪವಾದ ಪರಮೋತ್ಸವ ವಿ ಶೇಷವನ್ನು ಅವರಿಗೆ ಕೊಡಲಿ.

ಅವತಾರಿಕೆ.—ಸ್ವಾಯಂಭುವಮನುವಿನ ಹೆಂಡತಿಯಾದ ಶತರೂಪೆ ಯನ್ನು ಪ್ರಾರ್ಥಿಸುತ್ತಾರೆ.

**ಜನರನುದ್ಧರಿಸುವೆನೆನುತ ನಿಜ**
**ಜನಕನನುಮತದಲ್ಲಿ ಸ್ವಯಂಭುವ**
**ಮನುವಿನಿಂದಲಿ ಪಡೆದ ಸುಕುಮಾರಕರ ನೊಲಿಮೆಯಲಿ।**
**ಜನನಿಶತರೂಪಾ ನಿತಂಬಿನಿ**
**ಮನವಚನ ಕಾಯದಲಿ ಬಿಡದನು**
**ದಿನ ನಮಿಸುವೆನು ಕೊಡೆಮಗೆ ಸನ್ಮಂಗಳವನೊಲಿದು ॥೨೧॥**

ಪದ್ಯಾರ್ಥ.—ನಿಜಜನಕನ=ತನ್ನ ತಂದೆಯಾದ ಬ್ರಹ್ಮದೇವರ, ಅ ನುಮತದಲ್ಲಿ=ಅನುಮತಿಯಿಂದ (ಅಪ್ಪಣೆಯಿಂದ) ಜನರನುದ್ಧರಿಸುವೆನೆನುತ =ಸಂತಾನವನ್ನು ವೃದ್ಧಿಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ, ಸ್ವಯಂ ಭುವಮನುವಿನಿಂದಲಿ – ಸ್ವಾಯಂಭುವ ಮನುವಿನ ದೆಶೆಯಿಂದ, ಒಲಿಮೆ

ಬಯಲಿ=ಆವನ ಪ್ರೀತಿಯಿಂದ, ಕುಮಾರಕರ-ಪ್ರಿಯವ್ರತ, ಉತ್ತಾನಪಾದ ರೆಂಬ ಮಕ್ಕಳನ್ನು ಪಡದೆ, ಶತರೂಪಾನಿತಂಬಿನಿ-ಮನುಪತ್ನಿಯಾದ, ಶತ ರೂಪೆಯೆಂಬ, ಜನನಿ=ಎಲೌ ತಾಯಿ ! ಮನವಚನಕಾಯದಲಿ-ಮನಸ್ಸಿ ನಿಂದಲೂ, ವಾಕ್ಯದಿಂದಲೂ, ಕಾಯದಿಂದಲೂ ಬಿಡದೆ, ಅನುದಿನ=ಪ್ರತಿ ದಿವಸದಲ್ಲೂ, ನಮಿಸುವೆನು=ನಮಸ್ಕಾರಮಾಡುವೆನು, ಎಮಗೆ = ನಮಗೆ, ಒಲಿದು=ಪ್ರಸನ್ನಳಾಗಿ, ಸನ್ಮಂಗಳವ ಕೊಡು.

ತಾತ್ಪರ್ಯ.—ಬ್ರಹ್ಮದೇವರು ಪ್ರಥಮದಲ್ಲಿ, ಸನಕಾದಿಗಳು, ಖುದ್ರ ದೇವರು, ವಶಿಷ್ಠಾದಿಋಷಿ ಮೊದಲಾದವರನ್ನು ಸೃಷ್ಟಿಮಾಡಿ ಅವರಿಂದ ಸಂತಾನ ವೃದ್ಧಿಯಾಗಲಿಲ್ಲವೆಂದು ಯೋಚಿಸಿ ತಮ್ಮ ಎಡದ ಅಂಗದಿಂದ ಒಬ್ಬ ಸ್ತ್ರೀಯನ್ನೂ, ಬಲದ ಅಂಗದಿಂದ ಒಬ್ಬ ಪುರುಷನನ್ನೂ ಸೃಷ್ಟಿಸಿದ ರು. ಪುರುಷನೇ ಸ್ವಾಯಂಭುವಮನು, ಸ್ತ್ರೀಯೇ ಶತರೂಪೆಯು. ಬ್ರಹ್ಮ ದೇವರು ಮಗನನ್ನು ಕುರಿತು ನೀನು ಈ ಶತರೂಪೆಯನ್ನು ವಿವಾಹ ಮಾಡಿ ಕೊಂಡು ಸಂತಾನವೃದ್ಧಿ ಮಾಡೆಂದು ಅಪ್ಪಣೆಯನ್ನಿತ್ತು ಅದನ್ನನುಮೋದಿ ಸುವಂತೆ ಶತರೂಪೆಗೂ ಹೇಳಿದರು. ಕಥೆಯು ಭಾಗವತ ತೃತೀಯ ಸ್ಕಂಧ ದಲ್ಲಿ ಹೇಳಿರುವರು. ಆ ಅಭಿಪ್ರಾಯದಿಂದಲೇ ದಾಸಾರ್ಯರು " ಜನನುದ್ಧ ರಿಸುವೆನೆನುತ ನಿಜ ಜನಕನನುಮತದಿ " ಎಂದು ಹೇಳಿದರು. ಹೀಗೆ ಶತ ರೂಪೆಯು ತಂದೆಯಾದ ಬ್ರಹ್ಮದೇವರ ಅಪ್ಪಣೆಯಂತೆ ಸಂತಾನ ವೃದ್ಧಿಗೋ ಸ್ಕರ ಸ್ವಾಯಂಭುವಮನುವಿಗೆ ಸತಿಯಾಗಿ ಪತಿಯನ್ನು ಮೆಚ್ಚಿಸಿ ಪ್ರಿಯವ್ರತ ಉತ್ತಾನಪಾದರೆಂಬ ಇಬ್ಬರು ಗಂಡು ಮಕ್ಕಳನ್ನೂ, ಆಕೂತೀ, ದೇವಹೂ ತಿ, ಪ್ರಸೂತಿ ಎಂಬ ಮೂವರು ಹೆಣ್ಣು ಮಕ್ಕಳನ್ನೂ ಪಡೆದಳು. ಇಂತಹ ಎಲೌ ತಾಯೀ ! ಮನೋವಾಕ್ಕಾಯಗಳಿಂದ ನಿನಗೆ ನಮಸ್ಕಾರ ಮಾಡು ವೆನು. ನಮಗೆ ಸನ್ಮಂಗಳವನ್ನು ಕೊಡು.

ಅವತಾರಿಕೆ.—ಯಮದೇವರನ್ನು ಪ್ರಾರ್ಥಿಸುತ್ತಾರೆ.—

ನರನಾರಾಯಣನ ಹರಿ ಕೃ
ಷ್ಣರ ಪಡದೆ ಪುರುಷಾರ್ಥ ತೆರದಲಿ
ತರಣಿ ಶಶಿ ಶತರೂಪರಿಗೆ ಸಮನೆನಿಸಿ ಪಾಪಿಗಳ ||
ನಿರಯದೊಳು ನೆಲೆಗೊಳಿಸಿ ಸಜ್ಜನ
ನೆರವಿಯನು ಪಾಲಿಸುವ ಔದುಂ
ಬರ ಸಲಹು ಸಲಹೆನ್ನ ಬಿಡದಲೆ ಪರಮ ಕರುಣದಲಿ ||೨೫||

ಪದ್ಯಾರ್ಥ.—ಎಲೈ ಔದುಂಬರ-ಯಮದೇವನೇ ! ಪುರುಷಾರ್ಥ ತೆರದಲಿ=ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥ ಗಳಂತೆ, ನರನ-ಪರಮಾತ್ಮನ ಅಂಶದಿಂದ ಕೂಡಿದ ಶೇಷದೇವರ ರೂಪವು, ಇಂತಹಾ ನರನಾಮಕನನ್ನೂ, ನಾರಾಯಣನ=ನಾರಾಯಣನೆಂಬ ಭಗವದ ವತಾರ ಭೂತರು, ಇವರಿಬ್ಬರೂ ನರನಾರಾಯಣ ಋಷಿಗಳೆಂದು ಪ್ರಸಿದ್ಧ ರಾದವರು. ಮತ್ತು ಹರಿ ಎಂಬ ರೂಪ ೧, ಕೃಷ್ಣ=ದೇವಕೀ ಮಗನಲ್ಲದ ಈ ಕೃಷ್ಣರೂಪವು ಬೇರೆ. ಇಂತಹಾ ೪ ಭಗವದವತಾರ ಭೂತರಾದ ಮ ಕ್ಕಳನ್ನು ಪಡೆದೆ, ನೀನು, ತರಣಿ=ಸೂರ್ಯ, ಶಶಿ=ಚಂದ್ರ, ಶತರೂಪೆ= ಇವರಿಗೆ ಸಮನೆನಿಸಿ, ಪಾಪಿಗಳ=ಪಾಪಿಗಳನ್ನು, ನಿರಯದೊಳು-ನರಕದಲ್ಲಿ, ನೆಲೆಗೊಳಿಸಿ=ವಾಸಮಾಡಿಸಿ, ಸಜ್ಜನರ ಸಹವಾಸವನ್ನು, ಪಾಲಿಸುವವನು. ಇಂತಹಾ ನೀನು, ಎಮ್ಮ=ನಮ್ಮನ್ನು ಬಿಡದೆ ಸಲಹು ಸಲಹು.

ತಾತ್ಪರ್ಯ.—ಎಲೈ ಯಮಧರ್ಮನೆ ! ನೀನು ಸಾಕ್ಷಾತ್ಪರಮಾತ್ಮ ನವತಾರರೂಪರಾದ, ನರ, ನಾರಾಯಣ, ಹರಿ, ಕೃಷ್ಣ, ಈ ನಾಲ್ಕು ಮ ಕ್ಕಳನ್ನು ಪಡದೆ, ಇವರಲ್ಲಿ ನರನ ಅವತಾರ ಮಾತ್ರ ಭಗವಂತನ ಭಿನ್ನಾಂಶ ದಿಂದ ಕೂಡಿದ ಶೇಷಾಂಶವು. ಮಿಕ್ಕ ಮೂರು ಪರಮಾತ್ಮನ ಸಾಕ್ಷಾದವ ತಾರಗಳೆಂದು ತಿಳಿಯಬೇಕು. ಭಾಗವತ ದ್ವಿತೀಯ ಸ್ಕಂಧ ೭ನೆಯ ಅಧ್ಯಾ ಯದಲ್ಲಿ " ಧರ್ಮಸ್ಯ ದಕ್ಷದುಹಿತುರ್ಯಜನಿ ಸ್ವಮೂರ್ತ್ಯಾಂ ನಾರಾಯಣೋ ನರ ಇತಿ ಸ್ವತಪಃ ಪ್ರಭಾವಃ ' ಧರ್ಮನ ದೆಶೆಯಿಂದ ದಕ್ಷಪ್ರಜೇಶ್ವರನ ಮ ಗಳಾದ ಮೂರ್ತಿಯಲ್ಲಿ ನರನಾರಾಯಣನೆಂದು ಅವತರಿಸಿದನೆಂಬ ವಾಕ್ಯ ದಿಂದ ಯಮಧರ್ಮನಿಗೆ ನರನಾರಾಯಣರು ಮಕ್ಕಳೆಂದು ಸಿದ್ಧವಾಗುವು ದು. " ಉದಪಾದಿ ಧರ್ಮತನಯೋ ಹ್ಯಯಂ ಹರಿಃ ಸ್ವಯಮೇವ ಯಸ್ಯ ಸಹಜೋ ವ್ಯಜಾಯತ " ಇದೇ ಪರಮಾತ್ಮನು ಯಮಧರ್ಮನಲ್ಲಿ ಹರಿಎಂಬ ಹೆಸರಿನಿಂದ ಅವತರಿಸಿದನು, ಮತ್ತೂ ತಾನೇ ತನ್ನ ಸಹೋದರನಾಗಿ ಅವತ ರಿಸಿದನು ಎಂಬ ಮಧ್ವವಿಜಯದ ೬ನೆಯ ಸರ್ಗದ ವಾಕ್ಯದಿಂದ ಹರಿ ಕೃಷ್ಣ ಎಂಬ ಎರಡು ಅವತಾರಗಳು ಯಮಧರ್ಮನಲ್ಲಿ ಮಾಡಿದುದಾಗಿ ಸಿದ್ಧವಾಗುವುದು. ಕೃಷ್ಣಾವತಾರವೆಂದರೆ ವಸುದೇವನ ದೆಶೆಯಿಂದ ದೇವಕಿ ಯಲ್ಲಿ ಅವತರಿಸಿದ ಕೃಷ್ಣನು ಬೇರೆ. ಧರ್ಮನ ಮಗ ಕೃಷ್ಣನು ಬೇರೆ

ಎಂದು ತಿಳಿಯಬೇಕು. ಕೃಷ್ಣನೆಂಬ ಹೆಸರುಳ್ಳ ಅವತಾರಗಳು ಎರಡೆಂಬು ವ ವಿಷಯದಲ್ಲಿ ನಿರ್ಣಯ ೨ನೆಯ ಅಧ್ಯಾಯದಲ್ಲಿ "ಮತ್ಸ್ಯ ಕೂರ್ಮವರಾ ಹಶ್ಚ ಸಿಂಹ ವಾಮನ ಭಾರ್ಗವಾಃ ॥ ರಾಘವಃ ಕೃಷ್ಣಬುದ್ಧೌಚ ಕೃಷ್ಣ ದ್ವೈಪಾಯನ ಸ್ತಥಾ ॥೨೬॥ ನಾರಾಯಣೋ ಹರಿಃ ಕೃಷ್ಣ ಸ್ತಾಪಸೋ ಮನುರೇವಚ" ಪರಮಾತ್ಮನಿಗೆ ಸಾಕ್ಷಾದವತಾರಗಳು, ಭಿನ್ನಾಂಶಗಳೆಂದು ಎರಡು ಪ್ರಕಾರ ಹೇಳಿ ಅವುಗಳಲ್ಲಿ ಸಾಕ್ಷಾದವತಾರಗಳು ಯಾವುವೆಂದರೆ.— ಅವುಗಳನ್ನು ಹೇಳುವ ಪ್ರಕರ್ಣ ಮತ್ಸ್ಯ, ಕೂರ್ಮ, ವರಾಹ, ನರಸಿಂಹ ವಾಮನ, ಪರಶುರಾಮ, ರಾಘವ, ಕೃಷ್ಣ, ಬುದ್ಧ, ವೇದವ್ಯಾಸ, ನಾ ರಾಯಣ, ಹರಿ, ಕೃಷ್ಣ, ತಾಪಸನೆಂಬುವ ಮನು, ಇತ್ಯಾದಿ ಅವತಾರ ಗಳು ಸಾಕ್ಷಾದವತಾರಗಳೆಂದು ಹೇಳಿರುವರು. ಇದರಲ್ಲಿ ರಾಮ ಕೃಷ್ಣ, ಬುದ್ಧ ಎಂದು ಮೊದಲಿನ ದಶಾವತಾರಗಳ ಪೈಕಿ ಒಂದು ಕೃಷ್ಣಾವತಾರ ವನ್ನು ಹೇಳಿ, ಮತ್ತು ನಾರಾಯಣ, ಹರಿ, ಕೃಷ್ಣ ಎಂದು ಎರಡನೆಯ ಸಲ ಮತ್ತೊಂದು ಕೃಷ್ಣರೂಪವನ್ನು ಹೇಳಿರುವರು. ಹೀಗೆ ಕೃಷ್ಣಾವತಾರ ವನ್ನು ಎರಡು ಸಲ ಹೇಳಿದುದರಿಂದ ಕೃಷ್ಣನ ಅವತಾರಗಳು ಎರಡೆಂದು ಏರ್ಪಡುವದು. ಹೀಗೆ ಎಲೈ ಯಮಧರ್ಮನೇ! ಧರ್ಮ, ಅರ್ಥ, ಕಾ ಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥವಿದ್ದಂತೆ ನಾಲ್ಕು ಮಕ್ಕಳನ್ನು ಪ ಡದಿರುವೆ. ಸೂರ್ಯ, ಚಂದ್ರ, ಶತರೂಪೆ ಈ ಮೂವರಿಗೆ ಸಮನನಿಸುವೆ ಪಾಪಿಗಳನ್ನು ನರಕದಲ್ಲಿ ಹಾಕಿ, ಸಜ್ಜನ ಸಹವಾಸಿಯರನ್ನು ರಕ್ಷಿಸುವೆ! ಎ ಲೈ ಔದುಂಬರ ನಾಮಕನೆ! ಕರುಣದಿಂದ ನಮ್ಮನ್ನು ಪಾಲಿಸು.

ಅವತಾರಿಕೆ.—ಚಂದ್ರನನ್ನು ಸ್ತುತಿಸುತ್ತಾರೆ.—

ಮಧುವಿರೋಧಿ ಮನೋಜ ಕ್ಷೀರೋ
ದಧಿಮಥನ ಸಮಯದಲುದಿಸಿ ನೆರೆ
ಕುಧರಜಾವಲ್ಲಭನ ಮಸ್ತಕದಿಂದಿರದಿ ಮೆರೆವ ॥
ವಿಧುತವಾಂಘ್ರಿಪಯೋಜಯುಗಳಕೆ
ಮಧುಪನಂದದಲಿರಗಲಿನ್ನನ
ದಧಿಪವಂದಿಪೆನನುದಿನಂತ್ರಸ್ತಾಪ ಪರಿಹರಿಸೋ ॥೨೩॥

ಪದ್ಯಾರ್ಥ.—ಮಧುವಿರೋಧಿ-ಮಧು ಎಂಬ ದೈತ್ಯನನ್ನು ಸಂಹರಿ ಸಿದ ಮಧುಸೂದನನ, ಮನೋಜ-ಮನಸ್ಸಿನಿಂದ ಜನಿಸಿದ, ವಿಧು-ಎಲೈ

ಚಂದ್ರನೇ! ಕ್ಷೀರೋದಧಿಮಥನ ಸಮಯದಲ್ಲಿ=ಅಮೃತಕ್ಕಾಗಿ ಕ್ಷೀರಸಮು ದ್ರದ ಮಥನಕಾಲದಲ್ಲಿ, ಉದಿಸಿ-ಜನಿಸಿ, ಕುವರಜಾವಲ್ಲಭನ-ಕು-ಭೂಮಿ ಯನ್ನು, ಧರ=ಧರಿಸಿರುವುದರಿಂದ ಭೂಧರವೆಂದು ಪರ್ವತಗಳಿಗೆ ಹೆಸರು. ಕುಧರಜಾ=ಹಿಮವತ್ಪರ್ವತನ ಮಗಳಾದ ಪಾರ್ವತಿಯ, ವಲ್ಲಭನ = ಪತಿ ಯಾದ ರುದ್ರದೇವರ, ಮಸ್ತಕಮಂದಿರದಿ=ಶಿರಸ್ಸೆಂಬ ಮನೆಯಲ್ಲಿ, ನೆರೆ= ನೆರವಾಗಿ (ಸಹವಾಸಿಯಾಗಿ) ವಾಸಮಾಡುತ್ತಾ, ಮೆರೆವ, ತವ - ನಿನ್ನ, ಅಂಘ್ರಿಪಯೋಜಯುಗಳಕೆ=ಪಾದಕಮಲ ದ್ವಂದ್ವಕ್ಕೆ, ಮಧುಪನಂದದಲಿ= ಭ್ರಮರದಂತೆ, ಎನ್ಮನ=ನನ್ನ ಮನಸ್ಸಾದರೂ, ಎರಗಲಿ = ಲೀನವಾಗಿರಲಿ, ಮನದಧಿಪ-ಎಲೈ ಮನೋಭಿಮಾನಿಯಾದ ಚಂದ್ರನೇ! ಅನುದಿನ = ಪ್ರತಿ ದಿವಸದಲ್ಲೂ, ವಂದಿಪೆ=ನಮಸ್ಕಾರಮಾಡುವೆನು, ಅಂತಸ್ತಾಪವ ಪರಿಹ ರಿಸೋ!

ತಾತ್ಪರ್ಯ.— ಪರಮಾತ್ಮನ ಮನಸ್ಸಿನಿಂದ ಸೂಕ್ಷ್ಮರೂಪಿಯಾಗಿ ಜನಿಸಿ ತದನಂತರ ಕ್ಷೀರಸಮುದ್ರದ ಮಥನಕಾಲದಲ್ಲಿ ಪುನಃ ಜನಿಸಿದ ಎಲೈ ಚಂದ್ರನೇ! "ಚಂದ್ರಮಾಮನಸೋ ಜಾತಃ" ಎಂದು ಪುರುಷಸೂಕ್ತದಲ್ಲಿ ರುವದು. ರುದ್ರದೇವರು ವಿಷಪ್ರಾಶನೆ ಮಾಡಿ ಅಂತಸ್ತಾಪದಿಂದ ತಪ್ತ ರಾಗಿ ನಿನ್ನನ್ನು ಶಿರಸ್ಸಿನಲ್ಲಿ ಧರಿಸಿ ಶೈತ್ಯವನ್ನು ಹೊಂದಿರುವರು. ಹೀಗೆ ರು ದ್ರದೇವರ ಮಸ್ತಕದಲ್ಲಿ ಮೆರೆಯುತ್ತಿರುವೆ- ನಿನ್ನ ಪಾದಪದ್ಮಂಗಳಿಗೆ ನಮ ಸ್ಕರಿಸುವೆನು. ಮನೋಭಿಮಾನಿಯಾದ ಚಂದ್ರನೇ! ಪರಮಕರುಣದಿಂದ ನಮ್ಮ ಅಂತಸ್ತಾಪವನ್ನು ಪರಿಹರಿಸು. ನಮ್ಮ ಮನಸ್ಸು ಸರ್ವದಾ ನಿನ್ನ ಪಾದಕಮಲಗಳಲ್ಲಿ ಭ್ರಮರದಂತೆ ವಾಸಮಾಡುವಂತೆ ಮಾಡು.

ಅವತಾರಿಕೆ.— ವಿವಸ್ವಾನೆಂಬ ಸೂರ್ಯನನ್ನು ನಮಸ್ಕರಿಸುತ್ತಾರೆ.

**ಶ್ರೀವನರುಹಾಂಬಕ ನೇತ್ರಗ**
**ಳೀವೆ ಮನೆನಿಸಿ ಸಜ್ಜನರಿಗೆ ಕ**
**ರಾವಲಂಬನವೀವ ತೆರದಿ ಮಯೂಖ ವಿಸ್ತರಿಪ।**
**ಆ ವಿವಸ್ವಾನೆಂದೆನಿಸುವ ವಿ**
**ಭಾವಸುವಹರ್ನಿಶಿಗಳಲಿ ಕೊಡ**
**ಲೀವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ ॥೨೪॥**

ಪದ್ಯಾರ್ಥ.— ಶ್ರೀವನರುಹಾಂಬಕನ=ಕಮಲನೇತ್ರನಾದ ಶ್ರೀಪರಮಾತ್ಮನ, ನೇತ್ರಗಳೇ, ಮನೆಯೆನಿಸಿ=ವಾಸಸ್ಥಾನವನ್ನಾಗಿ ಮಾಡಿಕೊಂಡು ಸಜ್ಜನರಿಗೆ, ಕರಾವಲಂಬನವೀವತೆರದಿ-ಕರಾವಲಂಬನ ಕೊಡುವಂತೆ, ಮಯೂಖ=ಕಿರಣಗಳನ್ನು, ವಿಸ್ತರಿಪ=ಜಗತ್ತಿನಲ್ಲಿ ಹರವುತ್ತಿರುವ, ಆ, ವಿವಸ್ವಾನೆಂದು, ಎನಿಸುವ=ಹೆಸರಿನಿಂದ ಕರೆಸುವ, ವಿಭಾವಸುವು-ಸೂರ್ಯನು ಅಹರ್ನಿಶಿಗಳಲಿ-ರಾತ್ರಿ ಹಗಲುಗಳಲ್ಲಿ, ಈವಸುಂಧರೆಯೊಳು=ಭೂಮಿಯಲ್ಲಿ ವಿಪಶ್ಚಿತರೊಡನೆ=ಜ್ಞಾನಿಗಳೊಂದಿಗೆ ನಮ್ಮನ್ನು ಸೇರಿಸಿ, ಸುಜ್ಞಾನ=ಉತ್ತಮ ಜ್ಞಾನವನ್ನು ಕೊಡಲಿ.

ತಾತ್ಪರ್ಯ.— ಕಮಲಾಕ್ಷನಾದ ಶ್ರೀಹರಿಯ ನೇತ್ರದಿಂದ ಜನಿಸಿ ನೇತ್ರವನ್ನೇ ವಾಸಸ್ಥಾನವನ್ನಾಗಿ ಮಾಡಿಕೊಂಡಿರುವ, ಸಜ್ಜನರನ್ನು ಅವರ ಕಷ್ಟಗಳಿಂದ ನಿವಾರಣೆಮಾಡಿ ಕೈಕೊಟ್ಟೆತ್ತುವವನಂತೆ, ತನ್ನ ಕಿರಣಗಳನ್ನು ಭೂಮಿಯಲ್ಲಿ ಸರ್ವತ್ರ ಹರವಿರುವ ವಿವಸ್ವಾನೆಂಬ ಸೂರ್ಯನು, ಈ ಭೂಮಿಯಲ್ಲಿ ನಮ್ಮನ್ನು ಜ್ಞಾನಿಗಳ ಸಹವಾಸದಲ್ಲಿರಿಸಿ ಹಗಲೂ ರಾತ್ರಿಗಳಲ್ಲೂ ದಿವ್ಯ ಜ್ಞಾನವನ್ನು ಕೊಡಲಿ.

ಅವತಾರಿಕೆ.— ೧೯ನೆಯ ಕಕ್ಷ್ಯಕ್ಕೆ ಸೇರಿದ ವರುಣನನ್ನು ಸ್ತುತಿಸುತ್ತಾರೆ.—

ಲೋಕಮಾತೆಯಪಡೆದು ನೀ ಜಗ
ದೇಕಪಾತ್ರನಿಗಿತ್ತ ಕಾರಣ
ಶ್ರೀಕುಮಾರಿಸಮೇತ ನೆಲಸಿದ್ದ ನಿನ್ನ ಮಂದಿರದಿ ।
ಆ ಕಮಲಭವಮುಖರು ಬಿಡದೆ ಪ
ರಾಕೆನುತ ನಿಂದಿಹರೊ ಗುಣ ರ
ತ್ನಾಕರನೆ ಬಣ್ಣಿಸಲಳವೆ ಕೊಡು ಎಮಗೆ ಸನ್ಮನವ ॥೨೫॥

ಪದ್ಯಾರ್ಥ.— ಗುಣರತ್ನಾಕರನೆ=ಗುಣಗಳೆಂಬ ರತ್ನಗಳಿಗೆ ಆಕರನಾದ ಎಲೈ ಸಮುದ್ರರಾಜನೇ ? (ವರುಣನೆ !) ನೀನು, ಲೋಕಮಾತೆಯಪಡೆದು=ಲೋಕಕ್ಕೆ ತಾಯಿಯಾದ ಶ್ರೀಲಕ್ಷ್ಮೀದೇವಿಯರನ್ನು ಪಡೆದು, ಜಗದೇಕಪಾತ್ರನಿಗೆ=ಜಗತ್ತಿನಲ್ಲೆಲ್ಲಾ ಮುಖ್ಯಪಾತ್ರನೆನಿಸುವ ಶ್ರೀಪರಮಾತ್ಮನಿಗೆ, ಇತ್ತ ಕಾರಣ=ಕೊಟ್ಟಕಾರಣ, ಶ್ರೀಕುಮಾರಿಸಮೇತ=ಲಕ್ಷ್ಮೀ ಸಮೇತ

ಾಗಿ, ನಿನ್ನ ಮಂದಿರದಿ=ನಿನ್ನ ಮನೆಯಲ್ಲಿ, ನೆಲಸಿದ=ವಾಸವಾಗಿರುವನು. ಅಕಮಲಭವಮುಖರು=ಬ್ರಹ್ಮದೇವರು ಮೊದಲಾದವರು, ಬಿಡದೆ, ಪರಾಕೆನುತ ನಿಂದಿಹರೋ, ಬಣ್ಣಿಸಲಳವೆ-ನಿನ್ನನ್ನು ಬಣ್ಣಿಸಲು ಸಾಧ್ಯವೆ? ಎಮಗೆ ಸನ್ಮನವ ಕೊಡು=ಒಳ್ಳೇ ಮನಸ್ಸನ್ನು ಕೊಡು.

ತಾತ್ಪರ್ಯ.—ಎಲೈ ಸಮುದ್ರರಾಜನೆ! ಶ್ರೀಲಕ್ಷ್ಮೀದೇವಿಯರನ್ನು ಮಗಳನ್ನಾಗಿ ಪಡೆದು ಶ್ರೀನಾರಾಯಣನಿಗಿತ್ತುದುದರಿಂದ ಲಕ್ಷ್ಮೀನಾರಾಯಣರು ನಿನ್ನ ಮನೆಯಲ್ಲೇ (ಕ್ಷೀರಸಮುದ್ರದಲ್ಲಿ) ವಾಸಮಾಡುತ್ತಿರುವರು. ಆ ಪರಮಾತ್ಮನನ್ನು ನಿತ್ಯದಲ್ಲೂ ಬ್ರಹ್ಮಾದಿಗಳು ಸ್ವಾಮಿ ಪರಾಕ್ ಎಂದು ಹೊಗಳುತ್ತಿರುವರು. ಎಲೈ ಗುಣಸಮುದ್ರನೆ! ನಿನ್ನ ಗುಣವನ್ನು ವರ್ಣಿಸಲು ನನ್ನಿಂದ ಸಾಧ್ಯವೆ? ನಮಗೆ ಸನ್ಮನವ ಕೊಡು.

ಅವತಾರಿಕೆ.—೧೪ನೆಯ ಕಕ್ಷಾಕ್ಕೆ ಸೇರಿದ ನಾರದರನ್ನು ಸ್ತುತಿಸುತ್ತಾರೆ.

ಫಣೆಯಲೊಪ್ಪುವ ತಿಲಕ ತುಲಸೀ
ಮಣಿಗಣಾಂಚಿತ ಕಂಠ ಕರದಲಿ
ಕ್ವಣಿತವೀಣಾ ಸುಸ್ವರದಿ ಬಹುತಾಳಗತಿಗಳಲಿ॥
ಪ್ರಣವಪ್ರತಿಪಾದ್ಯನ ಗುಣಂಗಳ
ಕುಣಿದು ಪಾಡುತ ಪರಮಸುಖ ಸಂ
ಘಣಿಯೊಳಾಡುವ ದೇವಋಷಿನಾರದರಿಗಭಿನಮಿಪೆ ॥೨೬॥

ಪದಾರ್ಥ.—ಫಣೆಯಲಿ=ಹಣೆಯೊಳಗೆ, ಒಪ್ಪುತಿಲಕ=ತಿಲಕದಿಂದ ಶೋಭಿಸುತ್ತಿರುವ, ತುಲಸೀಮಣಿಗಣಾಂಚಿತಕಂಠ=ತುಲಸೀಮಣಿಗಣದಿಂದ ಪೋಣಿಸಲ್ಪಟ್ಟ ಹಾರದಿಂದ ಶೋಭಿಸುವ ಕಂಠವುಳ್ಳ, ಕರದಲಿ=ಕೈಯ್ಯಲ್ಲಿ, ಕ್ವಣಿತ=ಸುಶಬ್ದದಿಂದ ಕೂಡಿದ, ವೀಣಾಸುಸ್ವರದಿ=ವೀಣೆಯ ಸ್ವರದಿಂದಲೂ ಬಹುತಾಳಗತಿಗಳಲಿ=ಲಯವನ್ನು ಅನುಸರಿಸಿದ ತಾಳಗಳ ಶಬ್ದಗಳಿಂದಲೂ, ಪ್ರಣವಪ್ರತಿಪಾದ್ಯನ=ಓಂಕಾರ ಪ್ರತಿಪಾದ್ಯನಾದ ಶ್ರೀಹರಿಯ, ಗುಣಂಗಳ=ಗುಣಗಳನ್ನು, ಪಾಡುತ=ಗಾನಮಾಡುತ್ತಾ, ಕುಣಿಸು=ನರ್ತನೆಯನ್ನು ಮಾಡುತ್ತಾ, ಪರಮಸುಖಸಂಗಣಿಯೊಳು=ಪರಮಾನಂದಭರಿತನಾಗಿ, ಆಡುವ=ಓಲಾಡುವ, ದೇವಋಷಿನಾರದರಿಗೆ ಅಭಿನಮಿಪೆ=ನಮಸ್ಕರಿಸುವೆನು.

ತಾತ್ಪರ್ಯ.— ಹಣೆಯಲ್ಲಿ ತಿಲಕ, ಕಂಠದಲ್ಲಿ ತುಳಸೀಮಣಿ ಸ್ರ... ಇವುಗಳಿಂದ ಅಲಂಕೃತರಾಗಿ ಕೈಯಲ್ಲಿ ವೀಣೆಯನ್ನು ಹಿಡಿದು ಪರಮಾತ್ಮನ ಗುಣಗಳನ್ನು ವೀಣೆಯಿಂದ ನುಡಿಸುತ್ತಾ ಸುಸ್ವರದಿಂದ ಗಾನಮಾಡುತ್ತಾ ನರ್ತನಮಾಡುತ್ತಾ ಆನಂದಸಮುದ್ರದಲ್ಲಿ ಮುಳಗಿ ಕ್ರೀಡಾಡುತ್ತಿರುವ ನಾರದರಿಗೆ ನಮಸ್ಕರಿಸುವೆನು.

ಅವತಾರಿಕೆ.— ಭೃಗುಋಷಿಗಳಿಗೆ ನಮಿಸುತ್ತಾರೆ.—

**ಆ ಸರಸ್ವತಿತೀರದಲಿ ಬಿ**
**ನ್ನೈಸಲಾ ಮುನಿಗಳನುಡಿಗೆ ಜಡ**
**ಜಾಸನ ಮಹೇಶಾಚ್ಯುತರ ಲೋಕಂಗಳಿಗೆ ಪೋಗಿ ||**
**ತಾ ಸಕಲಗುಣಗಳ ವಿಚಾರಿಸೆ**
**ಕೇಶವನೆ ಪರದೈವನೆಂದುಪ**
**ದೇಶಿಸಿದ ಭೃಗುಮುನಿಪಕೊಡಲೆಮಗಖಿಲ ಪುರುಷಾರ್ಥ ||೨೬||**

ಪದ್ಯಾರ್ಥ.— ಆ, ಸರಸ್ವತೀ ತೀರದಲ್ಲಿ, ಬಿನ್ನೈಸಲು=ಸತ್ರವನ್ನು ಮಾಡುತ್ತಿದ್ದ, ಋಷಿಗಳು=ಬ್ರಹ್ಮ, ವಿಷ್ಣು, ಮಹೇಶ್ವರರಪೈಕಿ ಉತ್ತಮರಾರೆಂದು ತಿಳಿದು ಬರಬೇಕೆಂದು ಬಿನ್ನೈಸಲು, ಮುನಿಗಳನುಡಿಗೆ=ಋಷಿಗಳ ವಾಕ್ಯದಂತೆ, ಜಡಜಾಸನ-ಬ್ರಹ್ಮದೇವರು, ಮಹೇಶ-ರುದ್ರದೇವರು, ಅಚ್ಯುತರ-ಪರಮಾತ್ಮ ಈ ಮೂವರ ಲೋಕಂಗಳಿಗೆ ಹೋಗಿ, ತಾ=ತಾನು ಸಕಲಗುಣವಿಚಾರಿಸೆ=ಈ ಮೂವರಲ್ಲಿರುವ ಗುಣಗಳನ್ನು ಪರೀಕ್ಷಿಸಿ ನೋಡಲು, ಕೇಶವನೇ ಪರದೈವನೆಂದು=ಶ್ರೀಹರಿಯೇ ಸರ್ವೋತ್ತಮನೆಂದು, ಉಪದೇಶಿಸಿದ=ಉಪದೇಶಮಾಡಿದ, ಭೃಗುಮುನಿಪ-ಭೃಗುಋಷಿಯು, ಎಮಗೆ=ನಮಗೆ, ಅಖಿಳಪುರುಷಾರ್ಥ=ಸಕಲ ಪುರುಷಾರ್ಥಗಳನ್ನು ಕೊಡಲಿ.

ತಾತ್ಪರ್ಯ.— ಋಷಿಗಳೆಲ್ಲರೂ ಕೂಡಿ ಸತ್ರವನ್ನು ಮಾಡುತ್ತಿರಲು, ಆ ಋಷಿಗಳಲ್ಲಿ ಪರಸ್ಪರ, ಬ್ರಹ್ಮಾ, ವಿಷ್ಣು, ಮಹೇಶ್ವರರ ಪೈಕಿ ಉತ್ತಮರಾರೆಂದು ಬಲವಾದ ವಿತರ್ಕವಾಗಿ, ಕಡೆಗೆ ಅವರೆಲ್ಲರೂ ಈ ವಿಷಯವನ್ನು ಪರೀಕ್ಷಿಸಿ ತಿಳಿದುಬರಬೇಕೆಂದು ಭೃಗುಮುನಿಯನ್ನು ಬೇಡಲು ಅವರು ಅದನ್ನು ಅಂಗೀಕರಿಸಿ, ಬ್ರಹ್ಮಲೋಕಕ್ಕೆ ಬಂದು ಪರೀಕ್ಷೆಮಾಡುವುದಕ್ಕಾಗಿ ಬ್ರಹ್ಮದೇವರಿಗೆ ನಮಸ್ಕಾರ ಮಾಡದಿರಲು ಬ್ರಹ್ಮದೇವರಿಗೆ ಬಲವತ್ತರವಾದ

ಕೋಪವು ಬಂದಿತು. ಆದರೂ ತಮ್ಮ ಜ್ಞಾನ ಬಲದಿಂದ ಅದನ್ನು ಶಮನ ಮಾಡಿಕೊಂಡರು. ಅಂತು ಇವರಲ್ಲಿ ಅಭಿಮಾನ ಸ್ವಲ್ಪವಿದೆ. ಇನ್ನು ಮಿಕ್ಕ ಇಬ್ಬರನ್ನು ನೋಡಿ ನಿರ್ಧರಿಸಬೇಕೆಂದು ಕೈಲಾಸಕ್ಕೆ ಬಂದರು. ಋದ್ರದೇವರು ಭೃಗುಋಷಿಯನ್ನು ತಮ್ಮನೆಂಬ ಅಭಿಮಾನದಿಂದ ಆಸನದಿಂದೆದ್ದು ಆಲಿಂಗನೆ ಮಾಡಿಕೊಳ್ಳಲು ಬರಲು, ನೀನು ಅಮಂಗಳ ಸ್ವರೂಪನು ನನ್ನನ್ನು ಮುಟ್ಟಬೇಡವೆಂದು ಋಷಿಯು ಹೇಳಲು ಋದ್ರದೇವರು ಕೋಪಗೊಂಡು ಶೂಲಪಾಣಿಯಾಗಿ ಭೃಗು ಋಷಿಯನ್ನು ಕೊಲ್ಲಲುದ್ಯುಕ್ತರಾದರು. ಆ ಸಮಯದಲ್ಲಿ ಪಾರ್ವತೀದೇವಿಯರು ಋದ್ರದೇವರಿಗೆ ನಮಸ್ಕರಿಸಿ ಬ್ರಾಹ್ಮಣನನ್ನು ಕೊಲ್ಲಬಾರದೆಂದು ಬೇಡಿಕೊಂಡದ್ದರಿಂದ ಭೃಗು ಋಷಿಗಳು ಉಳಿದರು. ಅಲ್ಲಿಂದ ವೈಕುಂಠಕ್ಕೆ ಬಂದು, ಲಕ್ಷ್ಮೀ ಸಮೇತನಾಗಿ ಮಲಗಿದ್ದ ಪರಮಾತ್ಮನನ್ನು ಕಾಲಿಂದೊದೆಯಲು, ಪರಮಾತ್ಮನೆದ್ದು ಋಷಿಗಳಿಗೆ ನಮಸ್ಕರಿಸಿ ಕ್ಷಮಾ ಬೇಡಿಕೊಂಡನು. ಆಗ ಭೃಗು ಋಷಿಗಳು, ನಿಶ್ಚಯಿಸಿದುವೇನೆಂದರೆ; ಬ್ರಹ್ಮದೇವರಿಗೆ ನಮಸ್ಕಾರ ಮಾಡಲಿಲ್ಲವೆಂಬ ಕೋಪವು ಬಂದರೂ ತಾವೇ ಶಮನ ಮಾಡಿಕೊಂಡರು. ಋದ್ರದೇವರ ಆಲಿಂಗನ ಬೇಡವೆಂದುದಕ್ಕೆ ಬಂದ ಕೋಪವು ಪಾರ್ವತೀದೇವಿಯರ ಕ್ಷಮಾಪಣೆಯಿಂದ ಶಾಂತವಾಯಿತು. ಪರಮಾತ್ಮನನ್ನು ಕಾಲಿಂದೊದ್ದರೂ ಕೋಪ ಮಾಡದೇ ನನ್ನನ್ನೇ ಕ್ಷಮೆ ಬೇಡಿಕೊಂಡನು. ಆದ್ದರಿಂದ ಪರಮಾತ್ಮನೇ ಸರ್ವೋತ್ತಮನು. ಬಹ್ಮದೇವರು ಮಧ್ಯಮರು. ಋದ್ರದೇವರು ಇವರಿಬ್ಬರಗಿಂತಲೂ ಕಡಿಮೆಯಾದವರೆಂದು ನಿರ್ಧರಿಸಿ ಆ ಋಷಿಗಳಲ್ಲಿ ಹೇಳಿ ಲೋಕದಲ್ಲಿ ಈ ವಿಷಯವನ್ನು ಪ್ರಖ್ಯಾತಿ ಪಡಿಸಿದರು. ಇದಕ್ಕೆ ಮೂಲವು ಭಾಗವತ ದಶಮಸ್ಕಂಧ ಉತ್ತರಾರ್ಧ ೮೯ನೆಯ ಅಧ್ಯಾಯದಲ್ಲಿ " ಸರಸ್ವತ್ಯಾಸ್ತಟೇರಾಜನ್ ಋಷಯಃ ಸತ್ರಮಾಸತ || ವಿತರ್ಕಸ್ಸಮಭೂತೇಷಾಂತ್ರಿಷ್ವಧಿಶೇಷು ಕೋ ಮಹಾನ್ ||೧|| " ಎಂಬ ಶ್ಲೋಕ ಮೊದಲು, " ಮುನಿರ್ಜಗಾಮ ವೈಕುಂಠಂ ಯತ್ರದೇವೋ ಜನಾರ್ದನಃ || ಶಯಾನಂ ಶ್ರಿಯ ಉತ್ಸಂಗೆ ಪದಾ ವಕ್ಷಸ್ಯತಾಡಯತ್ ||೮|| ತತ ಉತ್ಥಾಯ ಭಗವಾನ್ ಸಹ ಲಕ್ಷ್ಮ್ಯಾ ಸತಾಂಗತಿಃ || ಸ್ವತಲ್ಪಾದವರುಹ್ಯಾಳು ನನಾಮಶಿರಸಾ ಮುನಿಂ" ಎಂಬ ೯ನೆಯ ಶ್ಲೋಕದವರೆವಿಗೂ ಈ ಮೇಲೆ ಹೇಳಿದ ಅರ್ಥವನ್ನು ಹೇಳಿ

ದುದಲ್ಲದೆ ಈ ಅಧ್ಯಾಯ ಪೂರ್ತಿಯಾಗಿಯೂ ಇದೇ ಕಥೆಯನ್ನೇ ವಿಶದ ಮಾಡಿರುವರು- ಗ್ರಂಥ ವಿಸ್ತಾರ ಭಯದಿಂದ ಆ ಶ್ಲೋಕಗಳನ್ನು ಇಲ್ಲಿ ಉದಾಹರಿಸಲಿಲ್ಲ. ಇಂತಹಾ ಗುಣ ವಿಶಿಷ್ಟರಾದ ಭೃಗು ಋಷಿಯು ನಮಗೆ ಸಕಲ ಪುರುಷಾರ್ಥಗಳನ್ನು ಕೊಡಲಿ.

ಅವತಾರಿಕೆ.—ಅಗ್ನಿದೇವರನ್ನು ಪ್ರಾರ್ಥಿಸುತ್ತಾರೆ.—

ಬಿಸರುಹಾಂಬಕನಾಜ್ಞೆಯಲಿ ಸುಮ
ನಸ ಮುಖನು ತಾನೆನಿಸಿ ನಾನಾ
ರಸಗಳುಳ್ಳ ಹವಿಸ್ಸುಗಳನವರವರಿಗೊಯ್ಯುವ ||
ವಸುಕುಲಾಧಿಪ ಯಜ್ಞಪುರುಷನ
ಅಸಮಬಲ ರೂಪಂಗಳಿಗೆ ವಂ
ದಿಸುವೆ ಜ್ಞಾನ ಯಶಸ್ಸು ವಿದ್ಯಾ ಸುಬುದ್ಧಿ ಕೊಡಲೆಮಗೆ ||೨೮||

ಪದ್ಯಾರ್ಥ.—ಬಿಸರುಹಾಂಬಕನ= ಕಮಲಾಕ್ಷನಾದ ಶ್ರೀಹರಿಯ ಅಪ್ಪಣೆಯಂತೇ, ಸುಮನಸಮುಖನುತಾನೆನಿಸಿ-ದೇವತೆಗಳಿಗೆ ಮುಖನೆಂದೆನಿಸಿ, ನಾನಾ ರಸಗಳುಳ್ಳ, ಹವಿಸ್ಸುಗಳನ-ಅಗ್ನಿಯಲ್ಲಿ ಆಹುತಿ ಕೊಡಲು ಯೋಗ್ಯವಾದ ವಸ್ತುಗಳನ್ನು, ಅವರವರಿಗೊಯ್ಯುವ=ಇಂದ್ರಾಯಸ್ವಾಹಾ ಎಂಬಿವೇ ಮೊದಲಾದ ಮಂತ್ರಗಳಿಂದ ಯಾವ ಯಾವ ದೇವತೆಗಳ ಹೆಸರಿನಿಂದ ಅಗ್ನಿಯಲ್ಲಿ ಆಹುತಿ ಕೊಡುವರೋ ಅವರವರಿಗೆ ಆ ಹವಿಸ್ಸನ್ನು ಸಮರ್ಪಿಸುವ, ವಸುಕುಲಾಧಿಪ=೮ ವಸುಗಳ ಪೈಕಿ ಶ್ರೇಷ್ಠನಾದ, ಯಜ್ಞ ಪುರುಷನ=ಅಗ್ನಿದೇವನ, ಅಸಮಬಲರೂಪಂಗಳಿಗೆ=ಇವನಗಿಂತಲೂ ತಾರತಮ್ಯದಲ್ಲಿ ಉತ್ತಮರನ್ನು ಬಿಟ್ಟರೆ ಉಳಿದ ದೇವತೆಗಳಲ್ಲಿ ಇವನಿಗೆ ಸಮವಾದ ಬಲರೂಪಗಳುಳ್ಳವರಿಲ್ಲವೆಂದರ್ಥ. ಇಂತಹಾ ಅಗ್ನಿದೇವನಿಗೆ, ವಂದಿಸುವೆ-ನಮಸ್ಕಾರ ಮಾಡುವೆನು. ಎಮಗೆ=ನಮಗೆ, ಜ್ಞಾನ, ಯಶಸ್ಸು=ಕೀರ್ತಿ, ವಿದ್ಯಾಬುದ್ಧಿ ಇವುಗಳನ್ನು ಕೊಡಲಿ.

ತಾತ್ಪರ್ಯ.—ಶ್ರೀಭಗವದಾಜ್ಞಾಪ್ರಕಾರ ದೇವತೆಗಳ ಮುಖ್ಯ ಸ್ಥಾನೀಯನಾಗಿರುವನು ಅಂದರೆ ಯಾವ ದೇವತೆಗಳಿಗೆ ಆಹುತಿ ಕೊಡಬೇಕಾದರೂ ವಿಷ್ಣವೇ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಎಂದು ಅಗ್ನಿ ಮುಖದಿಂದಲೇ

ಆಹುತಿ ಕೊಡುವುದರಿಂದ ದೇವ ಮುಖನೆನಿಸುವನು. ಇವನ ದ್ವಾರಾ ಎಲ್ಲಾ ದೇವತೆಗಳಿಗೂ ಆಹುತಿ ಸೇರುವುದು. ಇಂತಹಾ ವಸು ಕುಲಕ್ಕೆ ಉತ್ತಮನಾದ ಅಗ್ನಿದೇವರನ್ನು ನಮಸ್ಕರಿಸುತ್ತೇನೆ, ನಮಗೆ ಯಶಸ್ಸು ವಿದ್ಯಾ, ಬುದ್ಧಿ ಜ್ಞಾನಗಳನ್ನು ಕೊಡಲಿ. " ಸ್ವಸ್ತಿಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ || ಆಯುಷ್ಯಂ ತೇಜ ಆರೋಗ್ಯಂ ದೇಹಿಮೇ ಹವ್ಯವಾಹನ " ಎಂಬ ಅಗ್ನಿದೇವರ ಪ್ರಾರ್ಥನೆಯ ಮಂತ್ರದಿಂದ ಮೇಲೆ ಹೇಳಿದ ವರವನ್ನು ಕೊಡುವ ಅಧಿಕಾರವು ಅಗ್ನಿದೇವರದೆಂದು ನಿಶ್ಚಯವಾಗುವುದು. ಆ ಮಂತ್ರಾರ್ಥವನ್ನೇ ದಾಸಾರ್ಯರು ಇಲ್ಲಿ ಸೂಚಿಸಿದ್ದಾರೆಂದು ತಿಳಿಯಬೇಕು.

ಅವತಾರಿಕೆ.—ದಕ್ಷ ಪ್ರಜೇಶ್ವರನ ಪತ್ನಿಯಾದ ಪ್ರಸೂತೀದೇವಿಯರನ್ನು ಪ್ರಾರ್ಥಿಸುತ್ತಾರೆ.

**ತಾತನಪ್ಪಣೆಯಿಂದ ನೀ ಪ್ರ**
**ಖ್ಯಾತಿಯುಳ್ಳರವತ್ತು ಮಕ್ಕಳ**
**ಪ್ರೀತಿಯಿಂದಲಿ ಪಡದವರವರಿಗಿತ್ತು ಮನ್ನಿಸಿದೆ ||**
**ವೀತಿಹೋತ್ರನ ಸಮಳೆನಿಸುವ ಪ್ರ**
**ಸೂತಿ ಜನನಿ ತ್ವದಂಘ್ರಿ ಕಮಲಕೆ**
**ನಾಡುತಿಸಿ ತಲೆಬಾಗುವೆ ಎಂಮ ಕುಟುಂಬ ಸಲಹುವದು ||೨೯||**

ಪದ್ಯಾರ್ಥ.—ತಾತನಪ್ಪಣೆಯಿಂದ=ತಾತನಾದ ಬ್ರಹ್ಮದೇವರ ಅಪ್ಪಣೆಯಿಂದ, ನೀ=ನೀನು, ಪ್ರಖ್ಯಾತಿಯುಳ್ಳ, ಅರವತ್ತು ಮಕ್ಕಳ=೬೦ಹೆಣ್ಣು ಮಕ್ಕಳನ್ನು ಪ್ರೀತಿಯಿಂದಲಿ ಪಡೆದು, ಅವರವರಿಗಿತ್ತು=ಧರ್ಮ, ಕಶ್ಯಪ ಮೊದಲಾದವರಿಗಿತ್ತು, ಮನ್ನಿಸಿದೆ=ಮರ್ಯಾದೆಯನ್ನು ಮಾಡಿದೆ, ವೀತಿಹೋತ್ರನ=ಅಗ್ನಿದೇವನಿಗೆ, ಸಮಳೆನಿಸುವ, ಪ್ರಸೂತಿಜನನಿ=ಪ್ರಸೂತಿ ಎಂಬ ತಾಯೇ ! ನಾ=ನಾನು, ತುತಿಸಿ=ನಿನ್ನನ್ನು ಸ್ತುತಿಸಿ, ನಿನ್ನಂಘ್ರಿಕಮಲಕೆ=ಪಾದಕಮಲಗಳಿಗೆ, ತಲೆಬಾಗುವೆ=ನಮಸ್ಕಾರ ಮಾಡುವೆನು, ಎಂಮ್ಮ=ನಮ್ಮ ಕುಟುಂಬ ಸಲಹುವದು.

ತಾತ್ಪರ್ಯ.—ಪ್ರಸೂತಿ ದೇವಿಯು ತಾತನ ಅಪ್ಪಣೆಯ ಮೇರೆಗೆ ೬೦ ಮಕ್ಕಳನ್ನು ಪಡೆದಳೆಂದು ದಾಸಾರ್ಯರ ವಾಕ್ಯವಿರುವುದು. "ಪ್ರಸೂತಿಂಮಾನವೀಂ ದಕ್ಷ ಉಪ ಯೇಮೇಹ್ಯಜಾತ್ಮಜಃ || ತಸ್ಯಾಂಸಸರ್ಜದುಹಿತ್ಯಃಷೋ

ಡ ಶ್ಯಾಮಲ ಲೋಚನಾಃ ||೪೭|| ತ್ರಯೋದಶಾದ್ಧಾದ್ಧರ್ಮಾಯ ತಥೈ ಕಾಮ
ಗ್ನ ಯೇ ವಿಭುಃ || ಪಿತೃಭ್ಯ ಏಕಾಂ ಯುಕ್ತೇಭ್ಯೋ ಭವಾಯೈಕಾಂ ಭವ
ಚ್ಛಿದೆ ||೪೮|| ಎಂಬ ಭಾಗವತ ಚತುರ್ಥ ಸ್ಕಂಧ ಮೊದಲನೆಯ ಅಧ್ಯಾಯ
ದಿಂದ, ದಕ್ಷನು ಸ್ವಾಯಂಭುವ ಮನುವಿನ ಮಗಳಾದ ಪ್ರಸೂತಿಯನ್ನು
ಮದುವೆಯಾಗಿ ೧೬ ಹೆಣ್ಣು ಮಕ್ಕಳನ್ನು ಪಡೆದು, ೧೩ ಹೆಣ್ಣು ಮಕ್ಕಳನ್ನು
ಯಮಧರ್ಮನಿಗೂ, ಒಬ್ಬಾಕೆಯನ್ನು ಪಿತೃಗಳಿಗೂ, ಮತ್ತೊಬ್ಬಳನ್ನು
ಅಗ್ನಿಗೂ ರುದ್ರದೇವರಿಗೆ ಒಬ್ಬಾಕೆಯನ್ನು ಕೊಟ್ಟನೆಂದು ನಿಶ್ಚಯವಾಗುವು
ದು. ಇದರಿಂದ ಪರಸ್ಪರ ವಿರೋಧ ಬಂದಿತ ; ಇದರ ಪರಿಹಾರವು ಹೇಗೆಂ
ದರೆ.-ಪ್ರಾಚೀನ ಬರ್ಹಿಸ್ಸೆಂಬ ರಾಜನ ಮಕ್ಕಳು ೧೦ ಜನ ಪ್ರಚೇಸರೆನ್ನು
ವರು ತಪಸ್ಸುಮಾಡಿ ಪರಮಾತ್ಮನಿಂದ ವರ ಪಡೆದು ವಾರ್ಕ್ಷಿ ಎಂಬ ಕನ್ನಿಕೆ
ಯನ್ನು ಮದುವೆಯಾದರೆಂತಲೂ, ಅವರ ದೆಶೆಯಿಂದ ವಾರ್ಕ್ಷಿಯಲ್ಲಿ ಬ್ರಹ್ಮ
ದೇವರ ಮಗನಾದ ದಕ್ಷನು, ಪೂರ್ವದಲ್ಲಿ ರುದ್ರದೇವರಿಗೆ ಅವಮಾನ ಮಾ
ಡಿದ ಪಾಪದಿಂದ ಈ ಪ್ರಚೇತರಿಗೆ ಮಗನಾಗಿ ಹುಟ್ಟಿ ಪರಮಾತ್ಮನನ್ನು ಕು
ರಿತು ತಪಸ್ಸು ಮಾಡಿ ವರಪಡೆದು ಭಗವದಾಜ್ಞಾ ಪ್ರಕಾರವೇ ಪಂಚಜನ
ನೆಂಬ ಪ್ರಜೇಶ್ವರನ ಮಗಳಾದ ಪಾಂಚಜನಿ ಅಥವಾ ಅಸಿಕ್ನೀ ಎಂಬಾಕೆಯ
ನ್ನು ಮದುವೆಯಾಗಿ, ಆಕೆಯಲ್ಲಿ ಮೊದಲಿಗೆ ಹರ್ಯಶ್ವರೆಂಬ ಹತ್ತುಸಾವಿರ
ಮಕ್ಕಳನ್ನು ಪಡೆದು ಸಂತಾನವೃದ್ಧಿ ಮಾಡುವುದಕ್ಕಾಗಿ ತಪಸ್ಸಿಗೆ ಕಳುಹಿಸ
ಲು ಅವರೆಲ್ಲರೂ ನಾರದೋಪದೇಶವನ್ನು ಹೊಂದಿ ಸನ್ಯಾಸಿಗಳಾದರು- ಈ
ವರ್ತಮಾನವನ್ನು ತಿಳಿದು ಬಹುದುಃಖದಿಂದ ದಕ್ಷನು ಬ್ರಹ್ಮದೇವರಲ್ಲಿ ಹೇಳಿ
ಅವರಿಂದ ಸಮಾಧಾನೋಕ್ತಿಗಳಿಂದ ಮನಸ್ಸಮಾಧಾನ ಹೊಂದಿ ಪುನಃ ಸಾ
ವಿರ ಮಕ್ಕಳನ್ನು ಪಡೆದನು. ಅವರೂ ನಾರದೋಪದೇಶದಿಂದ ಸನ್ಯಾಸಿಗಳಾ
ಗಲು ದಕ್ಷನು ನಾರದರ ಮೇಲೆ ಬಹು ಕೋಪಗೊಂಡು ನಿನಗೆ ಒಂದುವಾಸ
ಸ್ಥಾನವಿಲ್ಲದೆ ಸರ್ವದಾ ಅಲಿಯುತ್ತಿರೆಂದು ನಾರದರಿಗೆ ಶಾಪವನ್ನಿತ್ತು ಮ
ತ್ತು ಬ್ರಹ್ಮದೇವರಲ್ಲಿ ಬಂದು ನಡೆದ ವೃತ್ತಾಂತವನ್ನು ಹೇಳಿ ದುಃಖ
ಪಟ್ಟನು. ಬ್ರಹ್ಮದೇವರು ದಕ್ಷನನ್ನು ಸಮಾಧಾನಗೊಳಿಸಿ ಇನ್ನು ಮುಂದೆ
ಹೆಣ್ಣು ಮಕ್ಕಳನ್ನು ಪಡಿಯೆಂದು ಅಪ್ಪಣೆಯನ್ನಿತ್ತರು. ಅದರಂತೆ ದಕ್ಷನು
" ತತಃ ಪ್ರಾಚೇತಸೋಸಿಕ್ನ್ಯಾಮನುನೀತಃ ಸ್ವಯಂಭುವಾ || ಷಷ್ಟಿಂ ಸಂಜ

ನಯೂವಾಸ ದುಹಿತ್ರ್ಃ ಪಿತೃವತ್ಸಲಾಃ ||೧|| ದದೌಸಧರ್ಮಾಯ ಕಶ್ಯಪಾಯ ತ್ರಯೋದಶ || ಕಾಲಸ್ಯ ನಯನೇ ಯುಕ್ತಾಃ ಸಪ್ತೇವಿಂಶತಿಮಿಂದತೇ ||೨|| ಭೂತಾಂಗಿರಃ ಕೃಶಾಶ್ವೇಭ್ಯೋ ದದೌ ತಾರ್ಕ್ಷ್ಯಾಯ ಚಾಪರಾಃ ||' ಎಂಬ ಭಾಗವತ ಷಷ್ಠಸ್ಕಂಧ ೬ನೆಯ ಅಧ್ಯಾಯದ ವಾಕ್ಯದಿಂದ, ಆ ಪ್ರಚೇತಸರ ಮಗನಾದ ದಕ್ಷನು ಬ್ರಹ್ಮದೇವರಿಂದ ಅನುಮತಿಯನ್ನು ಪಡೆದು ತನ್ನ ಭಾರ್ಯಳಾದ ಅಸಿಕ್ನಿಯಲ್ಲಿ ೬೦ ಹೆಣ್ಣು ಮಕ್ಕಳನ್ನು ಪಡೆದು ೧೦ಮಂದಿಯನ್ನು ಯಮಧರ್ಮನಿಗೂ, ಕಶ್ಯಪರಿಗೆ ೧೩, ಚಂದ್ರನಿಗೆ ಕಾಲವನ್ನು ಸೂಚಿಸಲು ಕಾರಣರಾದ ಅಶ್ವಿನ್ಯಾದಿ ನಾಮಗಳುಳ್ಳ ೨೭ ಮಕ್ಕಳನ್ನೂ, ಭೂತ, ಅಂಗಿರ, ಕೃಶಾಶ್ವ ಎಂಬ ಮೂವರಿಗೆ ಇಬ್ಬಿಬ್ಬರನ್ನೂ, ಉಳಿದ ನಾಲ್ವರನ್ನು ಮತ್ತೂ ಕಶ್ಯಪರಿಗೆ ಕೊಟ್ಟನೆಂದು ನಿಶ್ಚಯವಾಗುವದು. ಪ್ರಾಚೇತಸನೇ ದಕ್ಷನೆಂಬ ವಿಷಯದಲ್ಲಿ ೫ನೆಯ ಅಧ್ಯಾಯ ೧೭ನೆಯ ಶ್ಲೋಕ "ತೇಭ್ಯಸ್ತಸ್ಯಾಮಭೂದ್ರಾಜನ್, ದಕ್ಷಃ ಪ್ರಾಚೇತಸಃಕಿಲ" ಎಂಬ ವಾಕ್ಯವು ಆಧಾರವು. ಆದರೆ ಇಲ್ಲಿ ಅಸಿಕ್ನೀ ಎಂಬಾಕೆಯು ಆ ಹೆಣ್ಣು ಮಕ್ಕಳನ್ನು ಪಡೆದುದಾಗಿ ಹೇಳಿರುವರು. ಪ್ರಸೂತಿ ಎಂಬುವದಕ್ಕೆ ಆಧಾರವೇನೆಂದರೆ.—ದೇವತೆಗಳೆಲ್ಲರೂ ಸಾಂಶರೂ, ಮತ್ತೂ ನಿಯತಪತ್ನಿಯರಾದುದರಿಂದ ಈ ತತ್ವೇಶರೆಲ್ಲರೂ ಮೂಲರೂಪದಿಂದ ತಮಗೆ ಯಾರು ಸತಿಯಾಗೋ, ಅವತಾರದಲ್ಲೂ ಅದೇ ಸತಿಯೇ ಹೆಂಡತಿಯಾಗಿ ಜನಿಸುವರೆಂದು ಮೊದಲಿನಿಂದಲೂ ಏರ್ಪಟ್ಟಿರುವುದರಿಂದ ದಕ್ಷನ ಹೆಂಡತಿಯಾದ ಪ್ರಸೂತಿಯೇ ಪಂಚಜನನ ಮಗಳಾಗಿ ಅಸಿಕ್ನಿ ಎಂಬ ಹೆಸರಿನಿಂದ ಹುಟ್ಟಿದಳೆಂದು ತಿಳಿಯಬೇಕು. ಇಂದ್ರನು ವಾಲಿಯಾಗಿದ್ದಾಗ ಶಚಿಯೇ ತಾರೆಯಾಗಿ ಹುಟ್ಟಿದಳೆಂಬ ಇವೇ ಮೊದಲಾದ ಆಧಾರವೇ ಇದಕ್ಕೂ ಆಧಾರವೆಂದು ತಿಳಿಯಬೇಕು. ಬ್ರಹ್ಮದೇವರ ಅಪ್ಪಣೆಯಿಂದಲೇ ೬೦ ಹೆಣ್ಣು ಮಕ್ಕಳನ್ನು ಪಡೆದುದರಿಂದ ತಾತನ ಅಪ್ಪಣೆಯಿಂದ ಎಂದು ದಾಸಾರ್ಯರು ಹೇಳಿರುತ್ತಾರೆ. ತಾರತಮ್ಯದಲ್ಲಿ ಪ್ರಸೂತಿಯು, ಭೃಗುಋಷಿ, ಅಗ್ನಿ, ಇವರಿಗೆ ಸಮಳು. ಇಂತಹಾ ಪ್ರಸೂತಿ ದೇವಿಗೆ ನಮಸ್ಕರಿಸುವೆನು- ನಮ್ಮ ಕುಟುಂಬವನ್ನು ರಕ್ಷಿಸಲಿ.

ಅವತಾರಿಕೆ.—ಮರೀಚಿ ಮೊದಲಾದ ಬ್ರಹ್ಮದೇವರ ಮಕ್ಕಳು ಏಳು ಜನರು ವಿಶ್ವಾಮಿತ್ರರು, ವೈವಸ್ವತಮನು ಇವರೆಲ್ಲರೂ ಸಮರೆಂದು ಇವರನ್ನು ವಂದಿಸುತ್ತಾರೆ.—

ಶತಧೃತಿಯಸುತರೀರ್ವರುಳಿದ
ಪ್ರತಿಮ ಸುತಪೋನಿಧಿಗಳ ಪರಾ
ಜಿತನ ಸುಸಮಾಧಿಯೊಳೊಲಿಸಿ ಮೂರ್ಲೋಕದೊಳು ಮೆರೆವ ॥
ವ್ರತಿವರ ಮರೀಚ್ಯತ್ರಿ ಪುಲಹ
ಕ್ರತು ವಶಿಷ್ಟ ಪುಲಸ್ತ್ಯ ವೈವ
ಸ್ವತನು ವಿಶ್ವಾಮಿತ್ರರಂಗಿರರಂಘ್ರಿಗೆರಗುವೆನು ॥೩೦॥

ಪದ್ಯಾರ್ಥ.—ಶತಧೃತಿಯ-ಬ್ರಹ್ಮದೇವರ ಮಕ್ಕಳಾದ ೯ ಮಂದಿಯರಲ್ಲಿ, ಈರ್ವರುಳಿದು=ನಾರದರು, ಭೃಗುಋಷಿಗಳು ಇವರಿಬ್ಬರನ್ನೂ ಮೇಲಿನ ಕಕ್ಷಾದಲ್ಲಿ ಶೇರಿಸಿರುವುದರಿಂದ ಅವರನ್ನು ಬಿಟ್ಟು, ಮಿಕ್ಕ, ಅಪ್ರತಿಮ=ಸಮರಹಿತವಾದ, ಸುತಪೋನಿಧಿಗಳ-ಉತ್ತಮವಾದ ತಪಸ್ಸೇ ನಿಧಿಯಾಗುಳ್ಳ, ಅಪರಾಜಿತನ-ಎಂದಿಗೂ ಯಾರಿಂದಲೂ ಪರಾಜಿತನಾಗದ ಶ್ರೀಪರಮಾತ್ಮನನ್ನು, ಸುಸಮಾಧಿಯೊಳು ಒಲಿಸಿ, ತಪಸ್ಸು ಮಾಡಿ ಪ್ರಸನ್ನೀಕರಿಸಿಕೊಂಡು, ಮೂರ್ಲೋಕದೊಳು ಮೆರೆವ=ಮೂರು ಲೋಕಗಳಲ್ಲೂ ಮೆರೆವ, ವ್ರತಿವರ=ವಿಷ್ಣುದೀಕ್ಷೆ ಎಂಬ ವ್ರತ ಉಳ್ಳವರಲ್ಲಿ ಶ್ರೇಷ್ಠರಾದ, ಮರೀಚಿ, ಅತ್ರಿ, ಪುಲಹ, ಕ್ರತು, ವಶಿಷ್ಠ, ಪುಲಸ್ತ್ಯ, ವೈವಸ್ವತಮನು, ವಿಶ್ವಾಮಿತ್ರರು, ಅಂಗೀರಸರು, ಇವರುಗಳ, ಅಂಘ್ರಿಗೆರಗುವೆನು=ಪಾದಗಳಿಗೆ ನಮಸ್ಕರಿಸುವೆನು.

ತಾತ್ಪರ್ಯ.—ಬ್ರಹ್ಮದೇವರ ಮಕ್ಕಳ ಪೈಕಿ ನಾರದರು, ೧೪ನೆಯ ಕಕ್ಷಾಕ್ಕೂ ೧೫ನೆಯ ಕಕ್ಷಾದಲ್ಲಿ ಭೃಗುಋಷಿಯೂ ಶೇರಿರುವರು. ಉಳಿದ ಮರೀಚಿ, ಅತ್ರಿ, ಅಂಗಿರ, ಪುಲಹ, ಕ್ರತು, ವಶಿಷ್ಠ ಇವರೇಳು ಜನರು ವಿಶ್ವಾಮಿತ್ರರು, ವೈವಸ್ವತಮನು ಅವರ ಪಾದಪದ್ಮಂಗಳಗೆ ನಮಸ್ಕಾರ ಮಾಡುವೆನು.

ಅವತಾರಿಕೆ.—೧೭ನೆಯ ಕಕ್ಷಾಕ್ಕೆ ಶೇರಿದ ಮಿತ್ರ, ತಾರೆ, ನಿಋಋತಿ, ಪ್ರಾವಹಿ ಇವರನ್ನು ಸ್ತುತಿಸುತ್ತಾರೆ—

ದ್ವಾದಶಾದಿತ್ಯರೊಳು ಮೊದಲಿಗ
ನಾದ ಮಿತ್ರ ಪ್ರವಹಮಾನಿನಿ
ಯಾದ ಪ್ರಾವಹಿ ನಿಋಋತಿ ನಿರ್ಜರಗುರುಮಹಿಳೆ ತಾರಾ ॥
ಈ ದಿವೌಕಸರನುದಿನಾಧಿ
ವ್ಯಾಧಿರುಪಟಳವಳಿದು ವಿಬುಧರಿ
ಗಾದಗದಿ ಕೊಡಲೆಮ್ಮ ಮಂಗಳವಾವ ಕಾಲದಲಿ ॥೩೧॥

ಪದ್ಯಾರ್ಥ.—ದ್ವಾದಶಾದಿತ್ಯರೊಳು, ಮೊದಲಿಗನಾದ=ಉರುಕ್ರಮನೆಂಬ ಸಾಕ್ಷಾತ್ಪರಮಾತ್ಮನವತಾರನಾದ ಸೂರ್ಯನೊಬ್ಬನೂ, ಆರನೆಯ ಕಕ್ಷ್ಯಕ್ಕೆ ಸೇರಿದ ವಿವಸ್ವಾನೆಂಬ ಸೂರ್ಯನೊಬ್ಬನು ಇವರಿಬ್ಬರನ್ನು ಬಿಟ್ಟು ಉಳಿದ ಸೂರ್ಯರಿಗಿಂತಲೂ ಶ್ರೇಷ್ಟನಾದ, ಮಿತ್ರ=ಮಿತ್ರನೆಂಬ ಸೂರ್ಯನೂ, ಪ್ರವಹಮಾನಿನಿಯಾದ-ಪ್ರವಹವಾಯುವಿನ ಹೆಂಡತಿಯಾದ ಪ್ರಾವಹಿ, ನಿಋಋತಿ, ನಿರ್ಜರಗುರುಮಹಿಳೆ=ದೇವ ಗುರುವಾದ ಬೃಹಸ್ಪತ್ಯಾಚಾರ್ಯರ ಹೆಂಡತಿಯಾದ ತಾರಾ, ಈ ದಿವೌಕಸರು-ಈ ದೇವತೆಗಳು, ಅನುದಿನ, ಆಧಿ-ಮನೋವ್ಯಾಧಿ, ವ್ಯಾಧಿ=ಶರೀರ ಸಂಬಂಧನಾದ ರೋಗಗಳು, ಉಪಟಳ=ವಿಪತ್ತುಗಳು, ಇವುಗಳನ್ನಳಿದು=ಪರಿಹರಿಸಿ, ವಿಬುಧರಿಗೆ-ಜ್ಞಾನಿಗಳಿಗೆ, ಅವಕಾಲದಲಿ=ಸರ್ವಕಾಲದಲ್ಲೂ, ಆದರದಿ ಅಖಿಳಮಂಗಳವ ಕೊಡಲಿ.

ತಾತ್ಪರ್ಯ.—ಮಿತ್ರನೆಂಬ ಸೂರ್ಯ, ಪ್ರವಹನ ಸತಿ ಪ್ರಾವಹಿ, ನಿಋಋತಿ, ಗುರುಪತ್ನಿ ತಾರೆ ಈ ದೇವತೆಗಳು ಜ್ಞಾನಿಗಳಿಗೆ ಆದಿಯನ್ನೂ ವ್ಯಾಧಿಯನ್ನೂ ಆಗಾಗ್ಗೆ ಒರುತ್ತಿರುವ ಆಪತ್ತುಗಳನ್ನು ಪರಿಹರಿಸಿ, ಸರ್ವದಾ ಮಂಗಳವನ್ನು ಕೊಡಲಿ.

ಅವತಾರಿಕೆ.—ವಿಷ್ವಕ್ಸೇನ, ಕುಬೇರ, ಅಶ್ವಿನೀ, ಗಣೇಶ ಉಕ್ತ ಶೇಷ ಶತಸ್ಥರು ಇವರನ್ನು ವಂದಿಸುತ್ತಾರೆ.

ಮಾನನಿಧಿಗಳೆನಿಸುವ ವಿಷ್ವ
ಕ್ಸೇನ ಧನಪಾದ್ಯನಿಮಿಷರಿಗೆ ಸ
ಮಾರರೆಂಭತ್ತೈದು ಶೇಷಶತಸ್ಥ ದೇವಗಣ ॥
ಆನಿಮಿಸುವೆನು ಬಿಡದೆ ಮಿಥ್ಯಾ
ಜ್ಞಾನ ಕಳೆದು ಸುಭೋಧವಿತ್ತು ಸ
ದಾನುರಾಗದಲೆಮ್ಮ ಪರಿಪಾಲಿಸಲಿ ಸಂಪದವ ॥೩೨॥

ಪದ್ಯಾರ್ಥ.—ಮಾನನಿಧಿಗಳೆನಿಸುವ = ಮಾನವೆಂದರೆ ಮಾನಿಸಲು ಯೋಗ್ಯವಾದ ಸಚ್ಛಾಸ್ತ್ರಗಳು, ಅಥವಾ ಭಗವದ್ವಿಷಯಕವಾದ ಜ್ಞಾನವೂ ಲೋಕಮಾನ್ಯವಾದುದು. ಇವುಗಳೇ ನಿಧಿಯಾಗುಳ್ಳವರು. ಇಂತಹಾ ವಿಷ್ವಕ್ಸೇನ, ಪ್ರಧಾನವಾಯು ಕುಮಾರನು, ಧನಪಾ=ಕುಬೇರನು, ಆದ್ಯರಿಗೆ-ಆದಿಶಬ್ದದಿಂದ ಅಶ್ವಿನೀದೇವತೆಗಳನ್ನೂ ಗಣಪತಿಯನ್ನೂ ತೆಗೆದುಕೊಳ್ಳ

ಟೀಕು- ಈ ಅನಿಮಿಷರಿಗೆ=ದೇವತೆಗಳಿಗೆ, ಸಮಾನರು ಶತಸ್ಥದೇವಗಣ= ಸೋಮಪಾನಾರ್ಹರಾದ ನೂರು ದೇವತೆಗಳ ಪೈಕಿ, ಮೇಲೆ ಹೇಳಿದ ೧೫ ಜನರನ್ನುಳಿದು, ಶೇಷ-ಉಳಿದ, ಎಂಭತ್ತೈದು-೮೫ ದೇವತೆಗಳು. ಇವರೆಲ್ಲರಿಗೂ ಬಿಡದೆ, ಅನವಿಸುವೆನು=ಚೆನ್ನಾಗಿ ನಮಸ್ಕಾರ ಮಾಡುವೆನು, ಮಿಥ್ಯಾಜ್ಞಾನವ ಕಳೆದ=ಆಕಸ್ಮಿಕವಾಗಿ ದೈವಸಂಕಲ್ಪದಿಂದ ಮಿಥ್ಯಾಜ್ಞಾನ ಸಂಭವಿಸದೆ ಇರುವಂತೆ ಮಾಡಬೇಕು. ಒಂದುವೇಳೆ ಬಂದರೂ ಅದನ್ನು ಪರಿಹರಿಸಿ, ಸುಬೋಧವಿತ್ತು=ಉತ್ತಮ ಜ್ಞಾನವನ್ನಿತ್ತು ಸದಾನುರಾಗದಲಿ, ಎಮ್ಮ-ನಮ್ಮನ್ನು, ಸಂಪದವ=ಭಗವದ್ಭಕ್ತಿ ರೂಪವಾದ ಸಂಪದವನ್ನಿತ್ತು ಪರಿಪಾಲಿಸಲಿ.

ತಾತ್ಪರ್ಯ.—ವಿಷ್ವಕ್ಸೇನ, ಕುಬೇರ, ಗಣಪತಿ, ಅಶ್ವಿನೀದೇವರು ಇವರಿಗೆ ಸಮಾನರಾದ ಸೋಮಪಾನಾರ್ಹರಾದ ನೂರು ದೇವತೆಗಳ ಪೈಕಿ ಮೇಲೆ ಹೇಳಿದ ಉತ್ತಮದೇವತೆಗಳನ್ನುಳಿದು ೮೫ ಜನರು ಉಳಿದವರು ಇವರೆಲ್ಲರೂ, ಪ್ರಾರಬ್ಧವಶಾತ್ತಾಗಿ ಮಿಥ್ಯಾಜ್ಞಾನ ಸಂಭವಿಸಿದರೂ ಅದನ್ನ ಪರಿಹರಿಸಿ, ಉತ್ತಮ ಜ್ಞಾನವನ್ನಿತ್ತು ನಮ್ಮನ್ನು ಉದ್ಧರಿಸಲಿ.

ಅವತಾರಿಕೆ.—ಭೂತವಾಯುವಿನ ಅಂತರಾಭಿಮಾನಿಯಾದ ಮರೀಚಿ ಋಷಿ, ಜಯಂತ ಇವರನ್ನ ಪ್ರಾರ್ಥಿಸುತ್ತಾರೆ.

ಭೂತಮಾರುತವಾಂತರಭಿಮಾ
ನೀ ತಪಸ್ವಿಮರೀಚಿಮುನಿ ಪುರು
ಹೂತನಂದನಪಾದ ಮಾನಿ ಜಯಂತರೆಮಗೊಲಿದು ||
ಕಾತರವ ಪುಟ್ಟಿಸದೆ ವಿಷಯದಿ
ವೀತಭಯನ ಪದಾಬ್ಜದಲಿ ವಿಪ
ರೀತ ಬುದ್ಧಿಯನೀಯದೆ ಸದಾಪಾಲಿಸಲಿ ನಮ್ಮ ||೩೩||

ಪದ್ಯಾರ್ಥ.—ಭೂತಮಾರುತವಾಂತರಭಿಮಾನಿ=ಭೂತ ವಾಯುವಿನ ಅಂತರಾಭಿಮಾನಿಯಾದ, ತಪಸ್ವಿಮರೀಚಿಮುನಿ-ಪ್ರಧಾನವಾಯುವಿನ ಪುತ್ರರಾದ ಮರೀಚಿ, ಪುರುಹೂತನಂದನ=ಇಂದ್ರಕುಮಾರನಾದ, ಪಾದಮಾನಿ ಪಾದಕ್ಕೆ ಅಭಿಮಾನಿಯಾದ, ಜಯಂತರು-ಜಯಂತ ಇವರೀರ್ವರೂ, ಎಮಗೊಲಿದು=ನಮಗೆ ಪ್ರಸನ್ನರಾಗಿ, ವಿಷಯದಿ=ಅಲ್ಪವಾದ ಪ್ರಾಪಂಚಿಕ

ವಿಷಯಸುಖದಲ್ಲಿ, ಕಾತರವಪುಟ್ಟಿಸದೆ=ಅಭಿಮಾನವನ್ನು ಹುಟ್ಟಿಸದೆ, ವೀತಭಯನ=ಎಂದೆಂದಿಗೂ ಭಯರಹಿತನಾದ, ಪರಮಾತ್ಮನ ಪದಾಬ್ಜದಲಿ=ಪಾದಕಮಲದಲ್ಲಿ, ವಿಪರೀತ ಬುದ್ಧಿಯನ್ನೀಯದೆ=ಅನ್ಯಥಾ ಜ್ಞಾನವನ್ನು ಕೊಡದೆ (ನಾನೇ ಅವನೆಂಬ ಜ್ಞಾನವನ್ನು ಕೊಡದೆ) ಎಮ್ಮ=ನಮ್ಮನ್ನು, ಸದಾ ಪಾಲಿಸಲಿ.

ತಾತ್ಪರ್ಯ.—ಭೂತವಾಯುವೆಂಬ ಪಾಂಚಭೌತಿಕಕ್ಕೆ ಸೇರಿದ ಜಡವಾದ ಗಾಳಿಗೆ ಅಭಿಮಾನಿಯು ಪ್ರವಹವಾಯು. ಅಂತರಾಭಿಮಾನಿಯು ಮರೀಚಿಯು. ಮರೀಚಿ ಅಂದರೆ ಬ್ರಹ್ಮದೇವರ ಮಕ್ಕಳಾದ ಮರೀಚಿ, ಅತ್ರಿ ಮೊದಲಾದ ೭ ಮಂದಿಗೆ ಸೇರಿದ ಮರೀಚಿಋಷಿಯಲ್ಲ. ಅವರು ೧೭ನೆಯ ಕಕ್ಷ್ಯದಲ್ಲಿ ಇರುವರು. ಇವರು ಯಾಗೆಂದರೆ.—"ಮರೀಚಿ ಶಬ್ದೇನ ಪ್ರಧಾನವಾಯು ಪುತ್ರೋ ವಿವಕ್ಷಿತಃ ॥ ಪ್ರಧಾನವಾಯು ಜೋಭೂತ ವಾಯುರ್ನಾಮ್ನಾ ಮರೀಚಕಃ ॥ ಇತಿ ಗೀತಾ ತಾತ್ಪರ್ಯೋಕ್ತೇಃ। ಮರೀಚಿರ್ಮರುತಾಮಸ್ಮೀತಿ ಗೀತಾಯಾಂಚ" ಎಂಬ ತಾರತಮ್ಯ ಸಂಗ್ರಹವಾಕ್ಯದಿಂದಲೂ ಗೀತಾ, ತಾತ್ಪರ್ಯ ವಾಕ್ಯಗಳಿಂದ ಮರೀಚಿ ಶಬ್ದದಿಂದ ಪ್ರಧಾನವಾಯುವಿನ ಮಗನನ್ನು ತೆಗೆದುಕೊಳ್ಳಬೇಕು. ಇದಕ್ಕೆ ಆಧಾರ ಗೀತಾ ತಾತ್ಪರ್ಯದಲ್ಲಿ ಪ್ರಧಾನವಾಯುವಿನ ಮಗನು ಮರೀಚಿ ಎಂಬ ಭೂತವಾಯ್ವಭಿಮಾನಿಯು ಎಂದು ಹೇಳಿದ ವಾಕ್ಯದಿಂದಲೂ, ಗೀತೆಯ ವಿಭೂತಿ ಅಧ್ಯಾಯದಲ್ಲಿ "ಮರೀಚಿರ್ಮರುತಾಮಸ್ಮಿ" ವಾಯುಗಳಲ್ಲಿ ನನ್ನನ್ನು ಮರೀಚಿಯನ್ನಾಗಿ ತಿಳಿಯೆಂದು ಹೇಳಿರುವ ವಾಕ್ಯದಿಂದಲೂ ಈ ಮರೀಚಿಯು ವಾಯುಕುಮಾರ ಮರೀಚಿ ಎಂದು ಹೇಳಿದಂತಾಯಿತು. ಈ ಮರೀಚಿ ಜಯಂತರು ನಮಗೊಲಿದು ವಿಷಯಸುಖದಲ್ಲಿ ಆಸೆಯನ್ನು ಹುಟ್ಟಿಸದೆ, ಪರಮಾತ್ಮನಲ್ಲಿ ಅನ್ಯಥಾ ಜ್ಞಾನವನ್ನು ಹುಟ್ಟಿಸದೆ ನಮ್ಮನ್ನು ಪಾಲಿಸಲಿ.

ಅವತಾರಿಕಾ.—ಪ್ರಹ್ಲಾದರಾಯನನ್ನು ಪ್ರಾರ್ಥಿಸುತ್ತಾರೆ.—

**ಓಡಿಸುವ ಗುರುಗಳನು ಜರಿದು ಸ**
**ಹೋದರರಿಗುಪದೇಶಿಸಿದ ಮಹ**
**ದಾದಿ ಕಾರಣ ಸರ್ವಗುಣ ಸಂಪೂರ್ಣ ಹರಿಯೆಂದು ॥**
**ವಾದಿಸುವತತ್ಪಿತಿಯ ತೋರಿಂ**
**ದಾದನುಜ ಬೆಸಗೊಳಲು ಸ್ತಂಭದಿ**
**ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ ॥೩೪॥**

ಪದ್ಯಾರ್ಥ.—ಓದಿಸುವ ಗುರುಗಳನು-ತನಗೆ ವಿದ್ಯಾಗುರುಗಳೆನಿಸಿದ ಶಂಡಾಮರ್ಕರನ್ನು, ಜರಿದು-ಧಿಕ್ಕರಿಸಿ, ಸಹೋದರರಿಗೆ=ತನ್ನ (ಸ್ನೇಹಿತರಿಗೆ) ಶಖರಿಗೆ, ಹರಿ=ಶ್ರೀಹರಿಯು, ಮಹದಾದಿಕಾರಣ=ಮಹತ್ತತ್ವಾಭಿಮಾನಿಯರಾದ ಬ್ರಹ್ಮಾದಿ ದೇವತೆಗಳಿಗೆ ಮೂಲಕಾರಣನು. ಸರ್ವಗುಣಸಂಪೂರ್ಣನು, ಎಂದು ಉಪದೇಶಿಸಿದ=ಉಪದೇಶಮಾಡಿದನು. ವಾದಿಸುವ=ಹರಿಯೇ ಬಲಾಢ್ಯನು, ಸರ್ವೋತ್ತಮನೆಂದು ವಾದಿಸುವ ಪ್ರಹ್ಲಾದನನ್ನು ಕುರಿತು, ತತ್ಪತಿಯ ತೋರೆಂದು=ಹರಿಯೇ ಸರ್ವೋತ್ತಮನೆಂದು ವಾದಿಸುತ್ತಿರುವೆ, ನೀನು ವಾದಿಸುತ್ತಿರುವ ನಿನ್ನ ಸ್ವಾಮಿಯು ಎಲ್ಲಿಹನು? ತೋರೆಂದು ಆ ದನುಜ-ಹಿರಣ್ಯಕಶಿಪನು, ಬೆಸಗೊಳಲು-ಆಗ್ರಹಮಾಡಿ ಕೇಳಲು, ಸ್ಥಂಭದಿ=ಸ್ತಂಭದಲ್ಲಿ, ಶ್ರೀದನ=ಮೋಕ್ಷವೆಂಬ ಐಶ್ವರ್ಯ ಪ್ರದನಾದ ಶ್ರೀನೃಸಿಂಹ ರೂಪಿಯಾದ ಶ್ರೀಹರಿಯನ್ನು ಆ ಕ್ಷಣ ತೋರಿಸಿದ, ಪ್ರಹ್ಲಾದನೇ! ಎಮ್ಮ-ನಮ್ಮನ್ನು ಸಲಹು.

ತಾತ್ಪರ್ಯ.—ದೈತ್ಯ ಗುರುಪುತ್ರರಾದ ಶಂಡಾಮರ್ಕರು ಜೀವಬ್ರಹ್ಮರಿಗೆ ಐಕ್ಯಲಕ್ಷಣವನ್ನು ಉಪದೇಶಮಾಡುತ್ತಿರಲು ಅದನ್ನು ತಿರಸ್ಕರಿಸಿ ಹರಿ ಸರ್ವೋತ್ತಮನು, ಬ್ರಹ್ಮಾದಿಗಳೆಲ್ಲರೂ ಅವನಧೀನದಲ್ಲಿರುವರು. ಅವನ ದಾಸರೆಂದು ನಾವೆಲ್ಲರೂ ಅವನನ್ನು ಭಜಿಸಿದರೆ ಮುಕ್ತಿಯಾಗುವುದೆಂ ತನ್ನ ಸ್ನೇಹಿತರಿಗೆ ಉಪದೇಶಮಾಡಲು, ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪನು ನನಗಿಂತಲೂ ದೈವವಿಲ್ಲ! ಹಾಗಿದ್ದರೆ ನಿನ್ನನ್ನು ಬಿಡಿಸಲಿ! ನಾನು ನಿನ್ನನ್ನು ಈಗ ಸಂಹರಿಸುವೆನೆಂದು ಆಯುಧಪಾಣಿಯಾಗಿ ಬರಲು, ಆ ಪ್ರಹ್ಲಾದನ ವಾಕ್ಯವನ್ನು ಸತ್ಯಗೊಳಿಸುವುದಕ್ಕಾಗಿ ಶ್ರೀಹರಿಯು ನರಸಿಂಹ ರೂಪದಿಂದ ಸ್ಥಂಭದಿಂದ ಬಂದು ಹಿರಣ್ಯನನ್ನು ವಧಿಸಿದನು. ಹೀಗೆ ತನ್ನ ತಂದೆಗೆ ಪರಮಾತ್ಮನನ್ನು ತೋರಿಸಿದ ಪ್ರಹ್ಲಾದನು ನಮ್ಮನ್ನು ಪಾಲಿಸಲಿ.

ಅವತಾರಿಕಾ.—೩ ಪದ್ಯಗಳಿಂದ ಕರ್ಮದೇವತೆಗಳನ್ನು ಪ್ರಾರ್ಥಿಸುತ್ತಾರೆ.—

ಬಲಿ ಮೊದಲು ಸಪ್ತೇಂದ್ರರಿವರಿಗೆ
ಕಲಿತ ಕರ್ಮಜ ದಿವಿಜರೆಂಬರು
ಉಳಿದ ಏಕಾದಶ ಮನುಗಳು ಉಚಥ್ಯಚ್ಯವನಮುಖ ||
ಕುಲಋಷಿಗಳೆಂಭತ್ತು ಹೈಹಯ
ನಿಳೆಯ ಕಂಪನಗೈದ ಪೃಥು ಮಂ
ಗಳೆ ಪರೀಕ್ಷಿತ ನಹುಷನಾಭಿ ಯಯಾತಿಶಶಿಬಿಂಧು ||೩೫||

ಪದ್ಯಾರ್ಥ.— ಬಲಿ ಮೊದಲು ಸಪ್ತೇಂದ್ರರವರಿಗೆ-೮ನೆಯ ಮನ್ವಂತರಕ್ಕೆ ಇಂದ್ರನಾದ ಬಲಿ ಮೊದಲು ಅದಕ್ಕೆ ಮುಂದೆ ಬರುವ ಒಟ್ಟು ಇಂದ್ರರು ೭ ಜನರು, ಇವರಿಗೆ-ಇವರೂ ಮತ್ತೆ ಮುಂದೆ ೩ ಪದ್ಯಗಳಿಂದ ಹೇಳುವ ಚಕ್ರವರ್ತಿ ಮೊದಲಾದವರೂ, ಕಲಿತಕರ್ಮಜದಿವಿಜರೆಂಬರು=ಜ್ಞಾನಪೂರ್ವಕ ಕರ್ಮಕಗಳನ್ನು ಮಾಡಿ ದೇವತ್ವ ಹೊಂದಿದುದರಿಂದ ಕರ್ಮದೇವತೆಗಳೆನಿಸುವರು. ಅವರಾರೆಂದರೆ.—ಉಳಿದ ಏಕಾದಶಮನುಗಳು=೧೪ ಮನುಗಳಲ್ಲಿ ಮೇಲೆ ಹೇಳಿದ ಪರಮಾತ್ಮನವತಾರ ಒಂದು ತಾಪಸಮನು, ೨ ಸ್ವಾಯಂಭುವ, ೩ ವೈವಸ್ವತರೆಂಬ ಈ ಮೂರು ಮನುಗಳನ್ನು ಬಿಟ್ಟು ಉಳಿದ ಹನ್ನೊಂದು ಮನುಗಳು, ಉಚಥ್ಯಚ್ಯಾವನಮುಖ=ಶುಕ್ರಾಚಾರ್ಯರು ಮೊದಲಾದ, ಕುಲಋಷಿಗಳೆಂಭತ್ತು=ಋಷಿಕುಲದವರು ೮೦ ಜನರು, ಇಲ್ಲಿ ಕುಲಋಷಿಗಳೆಂಭತ್ತೆಂದು ದಾಸಾರ್ಯರು ಹೇಳಿರುವರು. " ಋಷೀಣಾಂ ಶತಮೇವಚ ||" ನೂರು ಋಷಿಗಳೆಂದು ಪ್ರಮಾಣವಿರುವದು. ಮತ್ತು ಇದೇ ಸಂಧಿ ೪೯ನೆಯ ಪದ್ಯದಲ್ಲಿ ನೂರು ಉಳಿದು ನೂರುಕೋಟಿ ಎಂದು ದಾಸಾರ್ಯರೇ ಹೇಳಿರುವರು. ಈ ವಾಕ್ಯಗಳಿಗೆ ಪರಸ್ಪರ ವಿರೋಧ ಬರುವುದು. ಇದರ ಸಮಾಧಾನ, ಒಟ್ಟು ಋಷಿಗಳು ನೂರು ಕೋಟಿಗಳು; ಇವರ ಪೈಕಿ ನೂರು ಋಷಿಗಳು ಪ್ರಧಾನರು ಕರ್ಮದೇವತೆಗಳಲ್ಲಿ ಸೇರಿರುವರು. ನೂರು ಕಮ್ಮಿ ನೂರು ಕೋಟಿ ತಾರತಮ್ಯದಲ್ಲಿ ಕಮ್ಮಿ ಎಂದು ತಾತ್ಪರ್ಯ. ದಾಸಾರ್ಯರು ಕುಲಋಷಿಗಳೆಂಭತ್ತು ಎಂದು ಹೇಳಿದುದರಿಂದ, ಭೃಗುಕುಲ, ಕಾಶ್ಯಪರು, ಕೌಶಿಕರೆಂಬ ಪ್ರಸಿದ್ಧ ಕುಲದವರು ೮೦ ಋಷಿಗಳೆಂತಲೂ, ಕುಲಪ್ರಸಿದ್ಧಿಯಾಗದ ಗೋತ್ರಕರ್ತರಲ್ಲದ ಋಷಿಗಳು ೨೦ ಜನರು, ಅಂತು ನೂರು ಋಷಿಗಳು ಕರ್ಮದೇವತೆಗಳೆಂಬ ತಾತ್ಪರ್ಯ. ಕುಲಋಷಿಗಳನ್ನು ಮಾತ್ರ ಹೇಳಿ ಸಾಧಾರಣರಾದ ೨೦ ಋಷಿಗಳನ್ನು ಅಲ್ಲಿ ಹೇಳಲಿಲ್ಲವೆಂದು ತಿಳಿಯಬೇಕು. ೪೯ ನೆಯ ಪದ್ಯದಲ್ಲಿ ನೂರು ಸಂಖ್ಯಾ ಹೇಳಿದ್ದರಿಂದ ಅಲ್ಲಿ ೨೦ನ್ನು ಹೇಳಿರುತ್ತಾರೆಂಬ ತಾತ್ಪರ್ಯ. ಹೈಹಯ-ಹೈಹಯದೇಶದರಸನಾದ ಕಾರ್ತವೀರ್ಯಾರ್ಜುನ, ಇಳೆಯಕಂಪನಗೈದ=ಭೂಮಿಯನ್ನು ವದೆಮಾಡಲುದ್ಯುಕ್ತನಾಗಿ ಆಕೆಯನ್ನು ಭಯದಿಂದ ನಡಗುವಂತೆ ಮಾಡಿದ, ಪೃಥು=ಪೃಥುಚಕ್ರವರ್ತಿ, ಮಂಗಳ=ಭೂಪುತ್ರನಾದ ಅಂಗಾರಕನು ಪರೀಕ್ಷಿತ, ನಹುಷ, ನಾಭಿರಾಜನು, ಯಯಾತಿ, ಶಶಿಬಿಂದು.

ಶತಕೆ ಸಂಕೇತುಳ್ಳಪ್ರೀಯು
ವ್ರತಭರತ ಮಾಂಧಾತ ಪುಣ್ಯಾ
ಶ್ರಿತರು ಜಯವಿಜಯಾದಿಗಳು ಗಂಧರ್ವರೆಂಟುಜನ ॥
ಹುತವಹಜ ಪಾವಕ ಸನಾತನ
ಪಿತೃಗಳೇಳ್ವರು ಚಿತ್ರಗುಪ್ತರು
ಪ್ರತಿದಿವಸ ಪಾಲಿಸಲಿ ತಮ್ಮವನೆಂದು ಎಮಗೊಲಿದು ॥೩೬॥

ಪದ್ಯಾರ್ಥ.—ಶತಕೆಸಂಕೇತುಳ್ಳ–ನೂರು ಸಂಖ್ಯಾಕ್ಕೆ ಸೇರಿದ, ಪ್ರಿಯವ್ರತ, ಭರತ=ದುಷ್ಯಂತ ಭರತ, ಮಾಂಧಾತ, ಇವರು ಮೊದಲಾದ ಪುಣ್ಯಾಶ್ರಿತರು=ಪುಣ್ಯವನ್ನೇ ಆಶ್ರಯಿಸಿಕೊಂಡಿರುವ ಚಕ್ರವರ್ತಿಗಳು, ಜಯವಿಜಯಾದಿಗಳು, ಗಂಧರ್ವರೆಂಟು ಜನ, ಹುತವಹಜ–ಪ್ರಧಾನಾಗ್ನಿಯ ಮಗನಾದ ಪಾವಕ, ಸನಾತನ=ಸದಾ ಕುಮಾರರಾಗಿರುವ ಬ್ರಹ್ಮದೇವರ ಮಕ್ಕಳಾದ ಸನಕಾದಿ ನಾಲ್ವರಲ್ಲಿ ಕಾಮಾಂಶರಾದ ಸನತ್ಕುಮಾರರ ಹೊರ್ತು ಉಳಿದ ಸನಕ, ಸನಂದನ, ಸನತ್ಸುಜಾತರೆಂಬ ಮೂವರು, ಪಿತೃಗಳು ಏಳ್ವರು=೭ ಜನರು, ಚಿತ್ರಗುಪ್ತ, ಇವರೆಲ್ಲರೂ ದೇವಕುಲದಲ್ಲಿ ಹುಟ್ಟಿ ಯಾವವಿಧವಾದ ಆಧಿಪತ್ಯವಿಲ್ಲದೆ ಕರ್ಮವನ್ನೇ ಮುಖ್ಯವಾಗಿ ತಿಳಿದು ಮಾಡುತ್ತಿರುವ ಕರ್ಮದೇವತೆಗಳು, ಇವರೆಮಗೊಲಿದು–ನಮಗೊಲಿದು, ತಮ್ಮವನೆಂದು=ತಮಗೆ ಸೇರಿದವನೆಂದು ತಿಳಿದು, ಪ್ರತಿದಿವಸ ಪಾಲಿಸಲಿ.

ವಾಸವಾಲಯ ಶಿಲ್ಪಿವಿಮಲಜ
ಲಾಶಯುಗಳೊಳು ರಮಿಪ ಊರ್ವಶಿ
ಭೇಶರವಿಗಳ ರಿಪುಗಳೆನಿಸುವ ರಾಹುಕೇತುಗಳು ।
ಶ್ರೀಶಪದಪಂಥಾನಧೂಮಾ
ರ್ಚೀಶ ದಿವಿಜರು ಕರ್ಮಜರಿಗೆ ಸ
ದಾಸಮಾನ ದಿವೌಕಸರು ಕೊಡಲೆಮಗೆ ಮಂಗಳವ ॥೩೭॥

ಪದ್ಯಾರ್ಥ.— ವಾಸವಾಲಯ=ಇಂದ್ರಲೋಕದ, ಶಿಲ್ಪಿ–ಬಡಿಯನಾದ ವಿಶ್ವಕರ್ಮನು, ವಿಮಲಜಲಾಶಯುಗಳೊಳು–ಮಂದಾಕಿನೀ (ಆಕಾಶಗಂಗೆ ) ಮೊದಲಾದ ನಿರ್ಮಲೋದಕಗಳಲ್ಲಿ, ರಮಿಪ = ಜಲಕ್ರೀಡಾದಿಗಳಿಂದ ವಿಹರಿಸುತ್ತಿರುವ, ಊರ್ವಶೀ ಮೊದಲಾದ ಅಪ್ಸರ ಸ್ತ್ರೀಯರು, ಭೇಶರವಿಗಳ=ಚಂದ್ರ ಸೂರ್ಯರ, ರಿಪುಗಳೆನಿಸುವ=ಶತೃಗಳೆನಿಸುವ, ರಾಹುಕೇತುಗಳು, ಶ್ರೀಶ–ಲಕ್ಷ್ಮೀಪತಿಯ, ಪದ=ವೈಕುಂಠಲೋಕಕ್ಕೆ, ಪಂಥಾನ=

ಮಾರ್ಗಭೂತವಾದ, ಧೂಮಾರ್ಚೀಶ=ಧೂಮ=ಹೊಗೆ ಮಾರ್ಗ, ಅರ್ಚಿರಾದಿಮಾರ್ಗವೆಂಬ ಎರಡು ಮಾರ್ಗಗಳಿಗೆ ಅಭಿಮಾನಿಗಳಾದ, ದಿವಿಜರ-ದೇವತೆಗಳು, ಕರ್ಮಜರಿಗೆ=ಕರ್ಮದೇವತೆಗಳಿಗೆ, ಸದಾ = ಸಮಾನರು, ದಿವೌಕಸರು-ಇಂತಹಾ ದೇವತೆಗಳು, ಎಮಗೆ ಮಂಗಳವನ್ನು ಕೊಡಲಿ.

ಅವತಾರಿಕೆ.—ಗಂಗಾ ಮೊದಲಾದ ೬ ಮಂದಿಗಳನ್ನು ಪ್ರಾರ್ಥಿಸುತ್ತಾರೆ.—

ದ್ಯುದಿನ ಶಾಮಲ ಸಂಜ್ಞಾರೋಹಿಣಿ
ಘನಪ ಪರ್ಜನ್ಯಾನಿರುದ್ಧನ
ವನಿತೆ ಬ್ರಹ್ಮಾಂಡಾಭಿಮಾನಿ ವಿರಾಟದೇವಿಯರ ||
ನೆನೆವೆ ನಾನಲವಿಂದ ದೇವಾ
ನನಮುಹಿಳೆ ಸ್ವಾಹಾಖ್ಯರಾಲೋ
ಚನೆಗೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ ||೩೮||

ಪದ್ಯಾರ್ಥ.—ದ್ಯುನದಿ=ಗಂಗೆ, ಶಾಮಲ - ಯಮದೇವರ ಹೆಂಡತಿ ಸಂಜ್ಞಾ=ಸೂರ್ಯ ಪತ್ನಿ, ರೋಹಿಣಿ=ಇಂದ್ರನ ಹೆಂಡತಿ, ಘನಪ-ಮೇಘಾಭಿಮಾನಿಯಾದ, ಪರ್ಜನ್ಯ=ಪರ್ಜನ್ಯನೆಂಬ ಸೂರ್ಯ, ಅನಿರುದ್ಧನವನಿತೆ-ಅನಿರುದ್ಧನ ಹೆಂಡತಿಯಾದ, ಬ್ರಹ್ಮಾಂಡಾಭಿಮಾನಿಯಾದ, ವಿರಾಟ್‌ದೇವಿಯರ=ವಿರಾಟ್ ಎಂಬ ಹೆಸರುಳ್ಳ ದೇವಿಯರು, ಇವರುಗಳನ್ನೂ, ಇವರಗಿಂತಲೂ ಕಮ್ಮಿಯಾದ ಕಕ್ಷ್ಯಕ್ಕೆ ಸೇರಿದ, ದೇವಾನನಮುಹಿಳೆ=ದೇವತೆಗಳಿಗೆ ಮುಖನಾದ ಅಗ್ನಿಯ ಹೆಂಡತಿಯಾದ. ಸ್ವಾಹಾಖ್ಯರು-ಸ್ವಾಹಾದೇವಿಯರು, ಇವರನ್ನೂ ನಾನು, ನಲವಿಂದ=ಅತಿ ಕುತೂಹಲದಿಂದ. ನೆನೆವೆ=ಸ್ಮರಿಸುವೆನು. ಭಗವದ್ಗುಣಂಗಳಲಿ ನಿರ್ವಿಘ್ನದಿಂದ, ಆಲೋಚನೆ-ಚಿಂತಿಸುವ ಶಕ್ತಿಯನ್ನು ಕೊಡಲಿ.

ವಿಧಿಪಿತನ ಪಾದಾಂಬುಜಗಳಿಗೆ
ಮಧುಪನಂತೆ ವಿರಾಜಿಪಾ ಮಲ
ಉದಕಗಳಿಗೆ ಸದಾಭಿಮಾನಿ ಎಂದೆನಿಸಿಕೊಂಬ ||
ಬುಧಗೆ ನಾವಂದಿಸುವೆ ಸನ್ಮೋ
ದದಿ ನಿರಂತರ ವಲಿದು ಎಮಗ
ಭ್ಯುದಯ ಪಾಲಿಸಲೆಂದು ಶರಮೋತ್ಸವದಲನುದಿನದಿ ||೩೯||

ಪದ್ಯಾರ್ಥ.—ವಿಧಿಪಿತನ=ಬ್ರಹ್ಮದೇವರ ತಂದೆಯಾದ ಪರಮಾತ್ಮನ ಪಾದಾಂಬುಜಗಳಿಗೆ, ಮಧುಪನಂತೆ=ಭ್ರಮರದಂತೆ, ವಿರಾಜಿಪ=ಶೋಭಿಸುವ, ಅಮಲ=ನಿರ್ಮಲವಾದ, ಉದಕಗಳಿಗೆ, ಸದಾ ಅಭಿಮಾನಿ ಎಂದೆನಿಸಿಕೊಂಬ, ಬುಧಗೆ=ಬುಧನಿಗೆ, ಎಮಗೆ=ನಮಗೆ, ನಿರಂತರ ಒಲಿದು=ನಿತ್ಯದಲ್ಲೂ ಪ್ರೀತನಾಗಿ, ಅಭ್ಯುದಯ=ಭಕ್ತಿ ವೃದ್ಧಿ ಮೊದಲಾದವುಗಳನ್ನು ಪಾಲಿಸಲೆಂದು, ಅನುದಿನದಿ=ಪ್ರತಿ ದಿವಸದಲ್ಲೂ, ಪರಮೋತ್ಸಹದಲಿ=ಪರಮ ಉತ್ಸಾಹದಿಂದಲೂ, ಸನ್ಮೋದದಿ-ಸಂತೋಷದಿಂದಲೂ, ನಾವಂದಿಸುವೆ-ನಾನು ನಮಸ್ಕಾರ ಮಾಡುವೆನು.

ತಾತ್ಪರ್ಯ.—ಭ್ರಮರವು ಹೇಗೆ ಕಮಲದಲ್ಲಿ ಲೀನವಾಗುವದೋ, ಹಾಗೆ ಪರಮಾತ್ಮನ ಪಾದಕಮಲಗಳಲ್ಲಿ ಶೋಭಿಸುವ ಮನಸ್ಸುಳ್ಳ ಉದಕಾಭಿಮಾನಿಯಾದ ಬುಧನಿಗೆ ನಮಸ್ಕಾರ ಮಾಡುವೆನು. ಅವನು ನಿತ್ಯದಲ್ಲೂ ನಮಗೊಲಿದು ಜ್ಞಾನ ಭಕ್ತಿ ಮೊದಲಾದವುಗಳ ವೃದ್ಧಿಯನ್ನು ಪಾಲಿಸಲಿ.

ಅವತಾರಿಕೆ.—ದೇವಕೀ ಯಶೋದೆಯನ್ನು ಪ್ರಾರ್ಥಿಸುತ್ತಾರೆ.—

**ಶ್ರೀವಿರಿಂಚಾದ್ಯರ ಮನಕೆ ನಿಲು**
**ಕಾವಕಾಲಕು ಜನನರಹಿತನ**
**ತಾವಲಿಸಿ ಮಗನೆಂದು ಮುದ್ದಿಸಿ ಲೀಲೆಗಳನೊಳ್ಪ ||**
**ದೇವಕಿಗೆ ವಂದಿಪ ಯಶೋದಾ**
**ದೇವಿಗಾನಮಿಸುವೆನು ಬಿಡದೆ ಕೃ**
**ಪಾವಲೋಕನದಿಂದ ಸಲಹುವದೆಮ್ಮ ಸಂತತಿಯ ||೪೦||**

ಪದ್ಯಾರ್ಥ.—ಶ್ರೀ=ರಮಾದೇವಿಯರು, ವಿರಿಂಚಾದ್ಯರ-ಬ್ರಹ್ಮದೇವರು ಮೊದಲಾದ ದೇವತೆಗಳ, ಮನಕೆ=ಮನಸ್ಸಿಗೆ, ನಿಲಕ - ನಿಲುಕದಹಾಗೆ ದೂರವಿರುವ, ಆವಕಾಲಕೆ=ಯಾವ ಕಾಲದಲ್ಲೂ, ಜನನರಹಿತನ=ಹುಟ್ಟುವಿಕೆ ಇಲ್ಲದವನಾದ ಶ್ರೀಹರಿಯನ್ನು, ತಾವಲಿಸಿ-ಮೆಚ್ಚುವಂತೆ ಮಾಡಿಕೊಂಡು, ಮಗನೆಂದು ಮುದ್ದಿಸಿ, ಲೀಲೆಗಳ=ಬಾಲಲೀಲೆಗಳನ್ನು, ನೋಳ್ಪ-ಕೊಡುವ ದೇವಕಿಗೆ ವಂದಿಪೆ, ಯಶೋದಾದೇವಿಗೆ, ಆಗಮಿಸುವೆನು=ಚೆನ್ನಾಗಿ ನಮಸ್ಕಾರಮಾಡುವೆನು. ಎಮ್ಮ ಸಂತತಿಯ=ನಮ್ಮ ವಂಶವನ್ನು, ಕೃಪಾವಲೋಕನದಿಂದ - ಕರುಣಾ ದೃಷ್ಟಿಯಿಂದ ನೋಡಿ, ಬಿಡದೆ ಸಲಹುವದು

ತಾತ್ಪರ್ಯ.—ಶ್ರೀಪರಮಾತ್ಮನು ರಮಾಬ್ರಹ್ಮಾದಿಗಳಿಗ ಮನಸ್ಸಿಗೂ ಸಹ ಅತಿದೂರನು, ಎಂದಿಗೂ ಜನನವಿಲ್ಲದವನು, ಅಂತಹವನನ್ನು ಒಲಿಸಿ ತನ್ನ ಪುತ್ರನನ್ನಾಗಿ ಮಾಡಿಕೊಂಡು ಮುದ್ದಿಸಿ ಬಾಲಲೀಲೆಗಳನ್ನು ನೋಡಿ ಆನಂದಪಡುತ್ತಿರುವ ದೇವಕಿಯನ್ನೂ, ಯಶೋದೆಯನ್ನೂ, ನಮಸ್ಕರಿಸುವೆನು. ಅವರು ನಮ್ಮ ಸಂತತಿಯವರನ್ನೂ ಕೃಪಾಕಟಾಕ್ಷದಿಂದ ನೋಡಿ ಸಲಹಲಿ,

ಅವತಾರಿಕೆ.—ಅಶ್ವಿನೀದೇವತೆಗಳ ಹೆಂಡತಿಯಾದ ಉಷಾದೇವಿಯನ್ನು ಪ್ರಾರ್ಥಿಸುತ್ತಾರೆ.—

**ಪಾಮರರ ಪವಿತ್ರಗೈಸುವ**
**ಶ್ರೀಮುಕುಂದನ ಪರಮಮಂಗಳ**
**ನಾಮಗಳಿಗಭಿಮಾನಿಯಾದ ಉಷಾದೇವಿಯರು ||**
**ಭೂಮಿಯೊಳಗುಳ್ಳಖಿಳ ಸಜ್ಜನ**
**ರಾಮಯಾದಿಗಳಳಿದು ಸಲಹಲಿ**
**ಆ ಮರುತ್ತನ ಮನೆಯವೈದ್ಯರ ರಮಣಿ ಪ್ರತಿದಿನದಿ ||೪೧||**

ಪದ್ಯಾರ್ಥ.—ಪಾಮರರಪವಿತ್ರಗೈಸುವ = ಪಾಮರರನ್ನು ಪವಿತ್ರರನ್ನಾಗಿ ಮಾಡುವ, ಶ್ರೀಮುಕುಂದನ. ಪರಮಮಂಗಳ ನಾಮಗಳಿಗೆ ಅಭಿಮಾನಿಯಾದ, ಆ ಮರುತ್ತನ ಮನೆಯ–ದೇವೇಂದ್ರನ ವಾಸಸ್ಥಾನವಾದ ಸ್ವರ್ಗದ, ವೈದ್ಯರ–ವೈದ್ಯರಾದ ಅಶ್ವಿನೀದೇವತೆಗಳ, ರಮಣಿ=ಹೆಂಡತಿಯಾದ ಉಷಾಖ್ಯದೇವಿಯರು, ಭೂಮಿಯೊಳಗುಳ್ಳ, ಅಖಿಳಸಜ್ಜನರ, ಆ ಮಯಾದಿಗಳ=ಎಲ್ಲಾವಿಧವಾದ ರೋಗಗಳನ್ನೂ, ಅಳಿದು=ಪರಿಹರಿಸಿ, ಸಲಹಲಿ

ತಾತ್ಪರ್ಯ.—ಪತಿತರಾದ ಜನರನ್ನು ಪವಿತ್ರರನ್ನಾಗಿ ಮಾಡುವ ಪರಮ ಮಂಗಳಕರವಾದ ರಾಮ ಕೃಷ್ಣಾದಿ ಭಗವನ್ನಾಮಗಳಿಗಭಿಮಾನಿಯಾದ, ದೇವ ವೈದ್ಯರಾದ ಅಶ್ವಿನೀದೇವತೆಗಳ ಹೆಂಡತಿಯಾದ ಉಷಾದೇವಿಯರು ಸಕಲ ಸಜ್ಜನರ ರೋಗಾದಿಗಳನ್ನು ಪರಿಹರಿಸಿ ಪಾಲಿಸಲಿ.

ಅವತಾರಿಕೆ,—ಈ ಭೂಮಿಗೆ ಅಭಿಮಾನಿಯರಾದ ಧರಾದೇವಿಯರನ್ನು ಪ್ರಾರ್ಥಿಸುತ್ತಾರೆ.—

ಪುರುಟಲೋಚನ ನಿನ್ನ ಕದ್ದೊ
ಯ್ದಿರಲು ಪ್ರಾರ್ಥಿಸೆ ದೇವತೆಗಳು
ತ್ತರವ ಲಾಲಿಸಿತಂದ ವರಾಹರೂಪ ತಾನಾಗೀ ||
ಧರಣಿ ಜನನಿತ್ವತ್ಪದಾಬ್ಜಕೆ
ಎರಗಿ ಬಿನ್ನೈಸುವೆನು ಪಾದ
ಸ್ಪರುಶ ಮೊದಲಾದಖಿಳದೋಷಗಳೆಣಿಸದಿರು ಎಂದು ||೪೨||

ಪದ್ಯಾರ್ಥ.—ಧರಣಿಜನನಿ-ಎಲೌ ಭೂಮಿ ತಾಯಿಯೇ ! ಪುರುಟಲೋಚನ=ಹಿರಣ್ಯಾಕ್ಷನು, ನಿನ್ನ=ನಿನ್ನನ್ನು ಕದ್ದೊಯ್ದಿರಲು, ಸಮುದ್ರದೊಳಗೆ ತೆಗೆದುಕೊಂಡುಹೋಗಿರಲು, ದೇವತೆಗಳು ಪ್ರಾರ್ಥಿಸೆ, ಉತ್ತರವ ಲಾಲಿಸಿ=ಅವರ ಪ್ರಾರ್ಥನೆಯನ್ನು ಲಾಲಿಸಿ, ತಾನು=ಶ್ರೀಹರಿಯು ವರಾಹರೂಪನಾಗಿ ತಂದ=ಮೇಲಕ್ಕೆ ತಂದನು ತ್ವತ್ಪದಾಬ್ಜಕೆ-ಇಂತಹಾ ನಿನ್ನಯ ಪಾದಾರವಿಂದಗಳಿಗೆ ಎರಗಿ=ನಮಸ್ಕರಿಸಿ ಪಾದಸ್ಪರ್ಶ ಮೊದಲಾದ ಅಖಿಳ ದೋಷಗಳ ಎಣಿಸದಿರು ಎಂದು ಬಿನ್ನೈಸುವೆನು.

ತಾತ್ಪರ್ಯ.—ಎಲೌ ಭೂಮಿ ತಾಯೇ ! ಹಿರಣ್ಯಾಕ್ಷನು ನಿನ್ನನ್ನಪಹರಿಸಿ ಸಮುದ್ರದೊಳಗೆ ಸೇರಿರಲು ಬ್ರಹ್ಮಾದಿಗಳಿಂದ ಪ್ರಾರ್ಥಿತನಾಗಿ ಶ್ರೀಹರಿಯು ವರಾಹ ರೂಪದಿಂದ ಹಿರಣ್ಯಾಕ್ಷನನ್ನು ಸಂಹರಿಸಿ ನಿನ್ನನ್ನು ಮೇಲಕ್ಕೆ ಸ್ಥಾಪಿಸಿದನು- ಇಂತಹಾ ನಿನ್ನ ಪಾದಕಮಲಗಳಿಗೆರಗುವೆನು. ನನ್ನ ಪಾದ ಸ್ಪರ್ಶಾದಿ ದೋಷವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು. " ಸಮುದ್ರವಸನೇದೇವಿ ಪರ್ವತಸ್ತನಮಂಡಿತೆ " ಎಂಬ ಶ್ಲೋಕದರ್ಥವನ್ನು ಸೂಚಿಸುವುದು.

ಅವತಾರಿಕೆ.—ಮತ್ತೂ ಭೂಮಿದೇವಿಯನ್ನೇ ಪ್ರಾರ್ಥಿಸುತ್ತಾರೆ.—

ವನಧಿವಸನೆವರಾದ್ರಿನಿಚಯ
ಸ್ತನ ವಿರಾಜಿತೆ ಚೇತನಾ ಚೇ
ತನ ವಿಧಾರಕೆ ಗಂಧರಸರೂಪಾದಿ ಗುಣವಪ್ರಷೆ ||
ಮುನಿಕುಲೋತ್ತಮ ಕಶ್ಯಪನ ನಿಜ
ತನುಜೆ ನಿನಗಾನಮಿಪೆ ಎನ್ನವ
ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ ||೪೩||

ಪದ್ಯಾರ್ಥ.—ವನಧಿವಸನೆ=ಸಮುದ್ರವೇ ವಸ್ತ್ರವಾಗುಳ್ಳ, ವರಾದ್ರಿ ನಿಚಯಸ್ತನವಿರಾಜಿತೆ=ಪರ್ವತ ಶ್ರೇಷ್ಠಗಳ ಸಮೂಹವೇ ಸ್ತನವಾಗಿ ಶೋಭಿಸುವ, ಚೇತನಾಚೇತನವಿಧಾರಕೆ=ಜಡಚೇತನಗಳನ್ನು ಧರಿಸಿರುವವಳೇ ! ಗಂಧ, ರಸ, ರೂಪಾದಿ=ರೂಪ ಮೊದಲಾದ, ಗುಣವಪುಷೆ=ಗುಣ ಸ್ವರೂಪಳೇ ! ಮುನಿಕುಲೋತ್ತಮ=ಋಷಿ ಕುಲ ಶ್ರೇಷ್ಠರಾದ, ಕಶ್ಯಪನ=ಕಶ್ಯಪ ಋಷಿಗಳ, ನಿಜತನುಜೆ=ನಿಜ ಕುವರಿಯೇ ! ಪರಮಾತ್ಮನ = ವರಾಹರೂಪಿಯಾದ ಶ್ರೀಪರಮಾತ್ಮನ, ಅರ್ಧಾಂಗಿ=ಭಾರ್ಯಳೇ ! ನಿನಗೆ ಆ ನಮಿಪೆ-ಚೆನ್ನಾಗಿ ನಮಸ್ಕರಿಸುವೆನು. ಎನ್ನವಗುಣಗಳೆಣಿಸದೆ, ಪಾಲಿಸುವದು.

ತಾತ್ಪರ್ಯ.—ಸಮುದ್ರವೇ ವಸ್ತ್ರವಾಗುಳ್ಳವಳೂ, ಪರ್ವತವೆಂಬ ಸ್ತನದಿಂದ ಶೋಭಿಸುವವಳು. ಜಡಚೇತನಾತ್ಮಕ ಸಕಲ ಪ್ರಾಣಿಗಳನ್ನು ಧರಿಸಿರುವವಳು. ಪೃಥ್ವೀ ಗುಣವು ಗಂಧ; ಮಿಕ್ಕ ರಸ ರೂಪಾದಿ ಗುಣಗಳು ಅಪ್ರಧಾನವಾಗಿರುವವು. ಇಂತಹಾ ಗುಣಾತ್ಮಕಳು. ಕಶ್ಯಪರ ನಿಜ ಕುವರಿ. " ಕ್ಷೋಣೀಜ್ಯಾ ಕಾಶ್ಯಪೀಕ್ಷಿತಿಃ " ಎಂಬ ಅಮರ ವಾಕ್ಯದಿಂದ ಕಶ್ಯಪರ ಮಗಳು ಈ ಭೂದೇವಿ ಎಂದು ಸಿದ್ಧವಾಗುವದು. ಶ್ರೀದೇವಿ, ಭೂದೇವಿ, ದುರ್ಗಾದೇವಿಯರೆಂಬ ಮೂವರಲ್ಲಿ ಸೇರಿದ ಭೂದೇವಿಯು ಈ ಭೂಮಿಯಲ್ಲ. ಆ ಭೂದೇವಿಯರು ಸಾಕ್ಷಾದ್ರಮಾ ರೂಪವು. ಈಕೆ ಕಾಶ್ಯಪಿ ಎಂದು ಕಶ್ಯಪರ ಮಗಳಾಗಿ ಜನಿಸಿ ಧರಾ, ಧರಿತ್ರೀ ಇತ್ಯಾದಿ ನಾಮಗಳಿಂದ ಈ ಪಾಂಚಭೂತಿಕ ಸಂಬಂಧವಾದ, ಜಡವಾದ ಈ ಭೂಮಿಗೆ ಅಭಿಮಾನಿಯು. ಅವಾಂತರಾಭಿಮಾನಿಯು ಶನೈಶ್ಚರನು. ಆದ್ದರಿಂದ ತತ್ವನ್ಯಾಸದಲ್ಲಿ " ವರಾಯಪೃಥಿವ್ಯಾತ್ಮನೆ ಶನೈಶ್ಚರ ಧರಾಯೈನಮಃ " ಎಂದು ಹೇಳಿರುವರು. ಈ ಧರಾದೇವಿಯೇ ಅಂಗಾರಕನಿಗೂ, ನರಕಾಸುರನಿಗೂ ತಾಯಿಯಾದ ವರಾಹದೇವರ ಹೆಂಡತಿ. ಲಕ್ಷ್ಮೀ ಸ್ವರೂಪರಾದ ಭೂದೇವಿಯರ ಸನ್ನಿಧಾನ ಮಾತ್ರ ಈಕೆಯಲ್ಲಿ ಉಂಟೆಂದು ತಾತ್ಪರ್ಯ. ಎಲೌ ಭೂ ತಾಯೇ ನಿನಗೆ ವಂದಿಸುವೆನು. ನನ್ನ ಅವಗುಣಗಳನ್ನೆಣಿಸದೆ ನನ್ನನ್ನು ಸಲಹು.

ಅವತಾರಿಕೆ.—ಭೂಮಿಯ ಅವಾಂತರಾಭಿಮಾನಿ ಶನೈಶ್ಚರನನ್ನು ಪ್ರಾರ್ಥಿಸುತ್ತಾರೆ.

**ಹರಿಗುರುಗಳರ್ಚಿಸದ ಪಾಪಾ**
**ತ್ಮರನ ಶಿಕ್ಷಿಸಲೋಸುಗ ಶನೈ**
**ಶ್ಚರನೆನಿಸಿ ದುಷ್ಫಲಗಳೀವ ನಿರಂತರವು ಬಿಡದೆ ।**
**ತರಣಿನಂದನ ನಿನ್ನ ಪಾದಾಂ**
**ಬುರುಹಗಳಿಗಾನಮಿಪೆ ಬಹುದು**
**ಸ್ತರಭವಾರ್ಣವ ಮಗ್ನನಾದೆನ್ನುದ್ಧರಿಸಬೇಕು ॥೪೪॥**

ಪದ್ಯಾರ್ಥ.—ಹರಿಗುರುಗಳ, ಅರ್ಚಿಸದ=ಪೂಜಿಸದ, ಪಾಪಾತ್ಮರನ, ಶಿಕ್ಷಿಸಲೋಸುಗ=ದಂಡಿಸುವದಕ್ಕಾಗಿ, ಶನೈಶ್ಚರನೆನಿಸಿ, ದುಷ್ಫಲಗಳೀವ=ಪಾಪ ಕರ್ಮದ ಫಲವಾದ ಕಷ್ಟಗಳನ್ನು ಕೊಡುತ್ತಿರುವ, ತರಣಿನಂದನ-ಎಲೈ ಸೂರ್ಯಪುತ್ರನೇ ! ನಿರಂತರವು. ಬಿಡದೆ, ನಿನ್ನ, ಪಾದಾಂಬುರುಹಗಳಿಗೆ- ಪಾದಕಮಲಗಳಿಗೆ, ಆನಮಿಪೆ-ನಮಸ್ಕರಿಸುವೆನು. ಬಹುದುಸ್ತರ=ದಾಟಲು ಬಹುಕಷ್ಟಸಾಧ್ಯವಾದ, ಭವಾರ್ಣವ=ಸಂಸಾರ ಸಮುದ್ರದಲ್ಲಿ ಮಗ್ನನಾದ-ಮುಣುಗಿರುವ, ಎನ್ನ - ನನ್ನನ್ನು, ಉದ್ಧರಿಸಬೇಕು.

ತಾತ್ಪರ್ಯ.—ಹರಿ ಗುರುಗಳನ್ನು ಪೂಜಿಸದಿರುವ ಪಾಪಿಗಳನ್ನು ದಂಡಿಸುವದಕ್ಕಾಗಿ ಶನೈಶ್ಚರನೆಂಬ ಹೆಸರಿನಿಂದ ಸೂರ್ಯ ಪುತ್ರನಾಗಿ, ಜನಿಸಿ ಪಾಪಿಗಳನ್ನು ಪೀಡಿಸುತ್ತಿರುವ ಎಲೈ ಸೂರ್ಯ ನಂದನ ! ನಿನ್ನ ಪಾದಾಂಬುಜಗಳಿಗೆ ನಮಸ್ಕರಿಸುವೆನು. ದಾಟಲಶಕ್ಯವಾದ ಈ ಸಂಸಾರ ಸಮುದ್ರದಲ್ಲಿ ಮಗ್ನನಾದ ನನ್ನನ್ನುದ್ಧರಿಸು.

ಅವತಾರಿಕೆ.— ಕರ್ಮಾಭಿಮಾನಿಯಾದ ಪುಷ್ಕರನನ್ನು ಪ್ರಾರ್ಥಿಸುತ್ತಾರೆ

**ನಿರತಿಶಯ ಸುಜ್ಞಾನಪೂರ್ವಕ**
**ವಿರಚಿಸುವ ನಿಷ್ಕಾಮ್ಯ ಕರ್ಮಗ**
**ಳರಿತು ತತ್ತತ್ಕಾಲದಲಿ ತಜ್ಜನ್ಯ ಫಲರಸವ ।**
**ಹರಿಯನೇಮದಲುಣಿಸಿ ಬಹುಜೀ**
**ವರಿಗೆ ಕರ್ಮಪನೆನಿಪ ಗುರು ಪು**
**ಷ್ಕರನು ಸತ್ಕ್ರಿಯಂಗಳಲಿ ನಿರ್ವಿಘ್ನತೆಯ ಕೊಡಲಿ ॥೪೫॥**

ಪದ್ಯಾರ್ಥ.—ನಿರತಿಶಯ=ಸಾಮಾನ್ಯ ಜೀವರಿಗೆ, ಬಹು ಅತಿಶಯವಾದ, ಸುಜ್ಞಾನಪೂರ್ವಕ-ಉತ್ತಮವಾದ ತಿಳಿವಳಿಕೆಯಿಂದ, ವಿರಚಿಸುವ ಮಾಡುವ, ನಿಷ್ಕಾಮ್ಯ ಕರ್ಮಗಳ=ಫಲಾಪೇಕ್ಷೆ ಇಲ್ಲದೆ ಭಗವತ್ಪ್ರೀತಿಗಾಗಿ ಮಾ

ಡುವ ಕರ್ಮಗಳನ್ನು, ಅರಿತು=ತಿಳಿದು, ತತ್ತತ್ಕಾಲದಲಿ=ಆಯಾ ಕಾಲಗಳಲ್ಲಿ ತಜ್ಜನ್ಯಫಲರಸವ=ಆ ನಿಷ್ಕಾಮ ಕರ್ಮಗಳ ಫಲದ ರಸರೂಪವಾದ ಸುಖಾದಿಗಳನ್ನು, ಬಹು ಜೀವರಿಗೆ, ಹರಿಯ ನೇಮದಲಿ=ಹರಿಯ ಸಂಕಲ್ಪದಿಂದ ಅವನ ಪ್ರೇರಣೆಯಂತೆ, ಉಣಿಸಿ-ಅನುಭವಕ್ಕೆ ತಂದುಕೊಟ್ಟು, ಕರ್ಮಪನೆನಿಪ=ಕರ್ಮಾಭಿಮಾನಿ ಎನಿಸುವ, ಗುರು=ತಾರತಮ್ಯದ ರೀತಿಯಾಗಿ ಗುರುವೆನಿಸುವ, ಪುಷ್ಕರನು, ಸತ್ಕ್ರಿಯಂಗಳಲಿ-ಭಗವದ್ವಿಷಯಕವಾದ ಕರ್ಮಗಳನ್ನು ಮಾಡುವ ಸಂದರ್ಭಗಳಲ್ಲಿ, ನಿರ್ವಿಘ್ನತೆಯನ್ನು ಕೊಡಲಿ.

ತಾತ್ಪರ್ಯ.—ಜ್ಞಾನಪೂರ್ವಕವಾಗಿ ಮಾಡುವ ಕರ್ಮಗಳೆಲ್ಲವೂ ಭಗವತ್ಪ್ರೀತಿಯಾಗಲೆಂದು ತಿಳಿದು, ಅವುಗಳನ್ನು ಮಾಡುತ್ತಾ ಅದರಿಂದ ತಾನು ಯಾವ ವಿಧವಾದ ಫಲವನ್ನ ಅಪೇಕ್ಷಿಸದೆ ಇದ್ದರೆ ಅಂತಹ ಕರ್ಮಗಳು ನಿಷ್ಕಾಮ ಕರ್ಮಗಳೆನಿಸುವವು. ಹಾಗೆ ಮಾಡುವ ಜೀವರ ಕರ್ಮಗಳಿಗೆ ಸಾಕ್ಷಿ ಭೂತನಾಗಿದ್ದು ಯಾವಯಾವ ಕಾಲದಲ್ಲಿ ಯಾವ ಕರ್ಮವನ್ನು ಮಾಡುವರೋ ಆ ಕರ್ಮಕ್ಕೆ ತಕ್ಕ ಫಲದ ರಸ ರೂಪವಾದ ಸುಖವನ್ನು ಭಗವತ್ಪ್ರೇರಣೆಯಿಂದ ಅನೇಕ ಜೀವರಿಗೆ ಉಣಿಸುವ ಕರ್ಮಪನೆನಿಸಿದ ಪುಷ್ಕರನು ನಾವು ಮಾಡುವ ಸತ್ಕ್ರಿಯಂಗಳಿಗೆ ನಿರ್ವಿಘ್ನತೆಯನ್ನು ಕೊಡಲಿ.

ಅವತಾರಿಕೆ.—ಆಜಾನಜ ದೇವತೆಗಳನ್ನು ಪ್ರಾರ್ಥಿಸುತ್ತಾರೆ.

ಶ್ರೀನಿವಾಸನ ಪರಮ ಕಾರು
ಣ್ಯಾನಿವಾಸಸ್ಥಾನರೆನಿಪ ಕೃ
ಶಾನುಜರು ಸಹಸ್ರಷೋಡಶ ಶತರು ಶ್ರೀಕೃಷ್ಣ ।
ಮಾನಿನಿಯರೆಪ್ಪತ್ತು ಯಕ್ಷರು
ದಾನವರು ಮೂವತ್ತು ಚಾರಣ
ಜಾನಜಾಮರರಪ್ಸರರು ಗಂಧರ್ವರಿಗೆ ನಮಿಪೆ ॥೪೬॥

ಪದ್ಯಾರ್ಥ.—ಶ್ರೀನಿವಾಸನ, ಪರಮಕಾರುಣ್ಯಾದಿವಾಸಸ್ಥಾನರೆನಿಪ=ಪರಮಕಾರುಣ್ಯಕ್ಕೆ ಪಾತ್ರರೆನಿಸುವ, ಕೃಶಾನುಜರು=ಅಗ್ನಿದೇವರ ಮಕ್ಕಳಾದ ಸಹಸ್ರಷೋಡಶಶತರು=೧೬ ಸಹಸ್ರದ ೧೦೦ ಮಂದಿ, ಶ್ರೀಕೃಷ್ಣಮಾನಿನಿಯರು=ಶ್ರೀಕೃಷ್ಣನ ಹೆಂಡರುಗಳು, ಯಕ್ಷರು=ಎಪ್ಪತ್ತು ಜನರು, ದಾನವರು-ಮೂವತ್ತು, ಚಾರಣರು, ಇವರೆಲ್ಲ ಆಜಾನಜರಿಗೆ ಸಮರೆನಿಸುವರು.

ಅಜಾನಜರೆಂದರೆ—" ಅನಾಖ್ಯಾತಾದೇವತಾಸ್ತು ಜಾತಾ ದೇವಕುಲೇಚ ಯಾಃ " ಎಂಬ ತೈತ್ತರೀಯ ಭಾಷ್ಯದ ವಾಕ್ಯದಿಂದ, ದೇವತಾ ಕುಲದಲ್ಲಿ ಹುಟ್ಟಿ, ಅಪ್ರಸಿದ್ಧರಾಗಿರುವವರೆಂದರ್ಥ. ಅವರಲ್ಲಿ ಶೇರಿದವರು ಕೆಲವು ಅಪ್ಸರರು, ಗಂಧರ್ವರು ಇರುವರು, ಇವರಿಗೆ ನಮಿಪೆ=ನಮಸ್ಕಾರ ಮಾಡುವೆನು

ಅವತಾರಿಕೆ.—ಅಜಾನಜರಿಗೆ ಶೇರಿದವರನ್ನೇ ೨ ಪದ್ಯಗಳಿಂದ ಸ್ತುತಿಸುತ್ತಾರೆ.

**ಆ ಯಮುನೆಯೊಳು ಸಾದರದಿ ಕಾ**
**ತ್ಯಾಯನೀವ್ರತಧರಿಸಿ ಕೆಲರು ದ**
**ರಾಯುಧನೆ ಪತಿ ಎನಿಸಿ ಕೆಲವರು ಜಾರತನದಲ್ಲಿ ||**
**ವಾಯುಪಿತನೊಲಿಸಿದರು ಈರ್ಬಗೆ**
**ತೋಯಜಾಕ್ಷಿಯರವರ ಪಾದಕೆ**
**ನಾ ಎರಗುವೆ ಮನೋರಥಂಗಳ ಸಲಿಸಲನುದಿನವು ||೪೭||**

ಪದ್ಯಾರ್ಥ.—ಆ, ಯಮುನೆಯೊಳು-ಯಮುನಾ ನದಿಯಲ್ಲಿ, ಸಾದರದಿ-ಆದರದಿಂದ, ಕಾತ್ಯಾಯನೀವ್ರತಧರಿಸಿ = ಕಾತ್ಯಾಯನೀ ವ್ರತವನ್ನು ಮಾಡಿ, ಕೆಲರು=ಕೆಲವು ಗೋಪಿಕಾ ಸ್ತ್ರೀಯರು ( ವಿವಾಹವಿಲ್ಲದವರು ), ಧರಾಯುಧನೆ=ಶಂಖಪಾಣಿಯಾದ ಶ್ರೀಕೃಷ್ಣನೇ, ಪತಿಯೆನಿಸಿ=ಶ್ರೀಕೃಷ್ಣನನ್ನೇ ಪತಿಯನ್ನಾಗಿ ಮಾಡಿಕೊಂಡರು. ಕೆಲವರು-ಜಾರತನದಲ್ಲಿ, ವಾಯುಪಿತನ, ವಾಯುದೇವರ ತಂದೆಯಾದ ಶ್ರೀಪರಮಾತ್ಮನನ್ನು ಒಲಿಸಿದರು. ಈರ್ಬಗೆ=ಈ ಎರಡು ಬಗೆಯಾದ, ಅಂದರೆ, ಜಾರತನದಲ್ಲಿ ಪರಮಾತ್ಮನನ್ನು ಮೆಚ್ಚಿಸಿದ ಪೂರ್ವದ ಅಪ್ಸರಸ್ತ್ರೀಯರಾದ ಗೋಪಿಕಾ ಸ್ತ್ರೀಯರು, ಶ್ರೀಕೃಷ್ಣನ ಹೆಂಡರೆಂದೆನಿಸಿದ ಗೋಪಿಕಾ ಸ್ತ್ರೀಯರು, ಹೀಗೆ ಎರಡು ಬಗೆಯಾದ, ತೋಯಜಾಕ್ಷಿಯರ-ಕಮಲಾಕ್ಷಿಯರ ಪಾದಕೆ, ನಾ ಎರಗುವೆ, ಅನುದಿನವು=ಪ್ರತಿ ದಿವಸವೂ, ಮನೋರಥಂಗಳ-ನಮ್ಮ ಇಷ್ಟಾರ್ಥಗಳನ್ನು ಸಲಿಸಲಿ=ಪೂರೈಸಲಿ.

ತಾತ್ಪರ್ಯ.—ಅಜಾನಜರಲ್ಲಿ ಶೇರಿದ ಕೆಲವು ಅಪ್ಸರರು, ತಪಸ್ಸು ಮಾಡಿ ಪರಮಾತ್ಮನ ಅಂಗಸಂಗವನ್ನು ಹೊಂದುವ ವರವನ್ನು ಪಡೆದು, ಗೋಪಿಯರಾಗಿ ಹುಟ್ಟಿ, ಕಾತ್ಯಾಯನೀವ್ರತವನ್ನು ಯಮುನಾತೀರದಲ್ಲಾಚರಿಸಿ

ಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ, ಕೆಲವರು ಪತ್ನಿಯರಾದರು. ಅಂದರೆ ಮದುವೆಯಾಗದ ಗೋಪಿಯರು ಶ್ರೀಕೃಷ್ಣನೇ ಪತಿಯಾಗಬೇಕೆಂದು ಉಪಾಸನೆ ಮಾಡಿದರು. ಮದುವೆಯಾದವರು ಶ್ರೀಕೃಷ್ಣನನ್ನು ಜಾರನೆಂದುಪಾಸನೆಮಾಡಿದರೆಂಬ ತಾತ್ಪರ್ಯ. ಹೀಗೆ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದ ಈರ್ಬಗೆಯಾದ ಗೋಪಿಯರಿಗೂ ನಾನು ನಮಸ್ಕರಿಸುವೆನು. ಅವರು ನಮ್ಮ ಮನೋರಥಗಳನ್ನು ಪೂರೈಸಲಿ.

ಕಿನ್ನರರು ಗುಹ್ಯಕರು ರಾಕ್ಷಸ
ಪನ್ನಗರು ಪಿತರುಗಳು ಸಿದ್ಧರು
ಸನ್ನುತಾಜಾನಜರು ಸಮರಿವರಮರಯೋನಿಜರು ।
ಇನ್ನಿವರಗಣವೆಂತು ಬಣ್ಣಿಸ
ಲೆನ್ನಳವೆ ಕರುಣದಲಿ ಪರಮಾ
ಪನ್ನ ಜನರಿಗೆ ಕೊಡಲಿ ಸನ್ಮುದ ಸುಪ್ರತಾಪವನು ॥೪೫॥

ಪದ್ಯಾರ್ಥ.—ಕಿನ್ನರರು, ಗುಹ್ಯಕರು, ರಾಕ್ಷಸರು, ಪನ್ನಗರು=ಸರ್ಪಗಳು, ಪಿತೃಗಳು, ಸಿದ್ಧರು, ಇವರೆಲ್ಲರೂ, ಸನ್ನುತ=ಚೆನ್ನಾಗಿ ನಮಸ್ಕಾರ ಮಾಡಿಸಿಕೊಳ್ಳಲ್ಪಡುವ, ಆಜಾನಜರು=ಆಜಾನಜರೆಂಬ ಅಮರಯೋನಿಜರು, ಇವರು ಸಮರು=ಇವರೆಲ್ಲರೂ ಸಮರು, ಅಂದರೆ ಇವರೂ ಆಜಾನಜರಿಗೆ ಸೇರಿದವರೆಂದರ್ಥ, ಇನ್ನು ಇವರಗಣವಎಂತಬಣ್ಣಿಸಲಿ=ಎಷ್ಟೆಂದು ವರ್ಣಿಸುವೆ? ಎನ್ನಳವೆ=ಬಣ್ಣಿಸಲು ನನ್ನಿಂದ ಸಾಧ್ಯವೆ? ಅಸಾಧ್ಯವೆಂದು ತಾತ್ಪರ್ಯ. ಇವರೆಲ್ಲರೂ ಪರಮಾಪನ್ನರಿಗೆ=ಕೇವಲ ಶರಣಾಗತರಾದ ಜನರಿಗೆ, ಸನ್ಮುದ=ಉತ್ತಮಾನಂದವನ್ನು, ಸುಪ್ರತಾಪವನೂ=ಒಳ್ಳೇ ಕೀರ್ತಿಯನ್ನು ಕೊಡಲಿ.

ಅವತಾರಿಕೆ.—ಶತೋನ ಶತಕೋಟಿ ಋಷಿಗಳನ್ನೂ ಪಿತೃಗಳನ್ನೂ ಪ್ರಾರ್ಥಿಸುತ್ತಾರೆ.—

ನೂರುಮುನಿಗಳನುಳಿದು ಮೇಲಣ
ನೂರುಕೋಟಿ ತಪೋಧನರ ಪ
ದಾರವಿಂದಕೆ ಮುಗಿವೆ ಕರಗಳನುದ್ಧರಿಸಲೆಂದು ।
ಮೂರುಸಪ್ತಶತಾಹ್ವಯರ ತೊರ
ದೀ ಋಷಿಗಳಿಗನಂತರದಲಿಹ
ಭೂರಿಪಿತೃಗಳು ಕೊಡಲಿ ನಮಗೆ ಸದಾ ಸುಮಂಗಳವ ॥೪೬॥

ಪದ್ಯಾರ್ಥ.—ಮೇಲಣ=ಕರ್ಮದೇವತೆಗಳ ಕಕ್ಷ್ಯಾಕ್ಕೆ ಶೇರಿದ, ನೂರುಮುನಿಗಳನುಳಿದು-ನೂರು ಋಷಿಗಳನ್ನು ಬಿಟ್ಟು, ನೂರುಕೋಟಿತಪೋಧನರ=ನೂರು ಕಮ್ಮಿ ನೂರುಕೋಟಿ ಸಂಖ್ಯಾಕರಾದ ತಪಸ್ಸೇಧನವಾಗುಳ್ಳ ಋಷಿಗಳ, ಪದಾರವಿಂದಕೆ=ಪಾದಾರವಿಂದಗಳಿಗೆ, ಉದ್ಧರಿಸಲೆಂದು=ನಮ್ಮನ್ನು ಉದ್ಧಾರಮಾಡಲೆಂದು, ಕರಗಳನ್ನು ಮುಗಿವೆ=ನಮಸ್ಕರಿಸುವೆನು. ಮೂರು ಸಪ್ತಶತಾಹ್ವಯರತೊರದು=೩+೭=೧೦, ಮೂರು ಮತ್ತು ಸಪ್ತ-ಏಳು ಮೂರು ಕೂಡಿದರೆ ಹತ್ತು, ಶತಾಹ್ವಯರ=ನೂರು=ನೂರು ಋಷಿಗಳು ಇವರನ್ನು ತೊರೆದು ಅಂದರೆ ಮೇಲೆ ಉತ್ತಮ ಕಕ್ಷ್ಯಾಕ್ಕೆ ಶೇರಿದ, ಬ್ರಹ್ಮದೇವರ ಮಕ್ಕಳಾದ ಮರೀಚಿ ಮೊದಲಾದ ಏಳು ಋಷಿಗಳು, ಭೃಗುಋಷಿಗಳು, ನಾರದರು, ವಿಶ್ವಾಮಿತ್ರರು ಅಂತು ೧೦ ಜನರು, ಕರ್ಮದೇವತೆಗಳಲ್ಲಿ ಶೇರಿದವರು ನೂರು ಋಷಿಗಳು ಅಂತು ನೂರು ಜನರನ್ನು ಬಿಟ್ಟು, ಈ ಋಷಿಗಳು=ಶತೋನಶತಕೋಟಿ ಋಷಿಗಳು, ಇವರನಂತರದಲ್ಲಿ ಭೂರಿಪಿತೃಗಳು ಇಹರು. ಅವರು ನಮಗೆ ಸದಾ ಸುಮಂಗಳವ ಕೊಡಲಿ.

ತಾತ್ಪರ್ಯ.—ಒಟ್ಟು ಋಷಿಗಳು ನೂರುಕೋಟಿ ಸಂಖ್ಯಾವುಳ್ಳವರು ಅವರಲ್ಲಿ ಪ್ರಸಿದ್ಧರಾದ ಗೋತ್ರಕರ್ತರಾದ ವಿಶ್ವಾಮಿತ್ರ, ವಶಿಷ್ಠ, ಭೃಗು ಮೊದಲಾದ ವಂಶದಲ್ಲಿ ಹುಟ್ಟಿ, ಭಾರ್ಗವ, ಕೌಶಿಕ, ವಿಶ್ವಾಮಿತ್ರ, ಕಾಶ್ಯಪ ಮೊದಲಾದ ಗೋತ್ರಕರ್ತರಾದ ಕುಲಋಷಿಗಳು ೮೦ ಋಷಿಗಳು ಮಿಕ್ಕ ಅಪ್ರಸಿದ್ಧರಲ್ಲೂ ಇಂದ್ರಪ್ರಮತಿ, ಇಧ್ಮಬಾಹು ಎಂಬಿವೇ ಮೊದಲಾದ ಹೆಸರುಳ್ಳ ಋಷಿಗಳು ೨೦ ಜನರು ಅಂತು ನೂರು ಋಷಿಗಳು. ಇದಲ್ಲದೆ ಭೃಗುಋಷಿಗಳು, ನಾರದರು, ವಿಶ್ವಾಮಿತ್ರರು, ಇವರು ಮೂವರು, ಮರೀಚಿ, ಅತ್ರಿ ಮೊದಲಾದ ಬ್ರಹ್ಮದೇವರ ಮಕ್ಕಳು ಏಳುಮಂದಿ ಅಂತು ಇವರು ೧೧೦ ಋಷಿಗಳು, ಆದ್ದರಿಂದ ದಾಸಾರ್ಯರು ಮೂರು ಸಪ್ತಶತಾಹ್ವಯಂ ತೊರದು=೩+೭+೧೦೦=೧೧೦ ಮಂದಿಯರನ್ನು ಬಿಟ್ಟು ಅಂದರೆ ನೂರುಕೋಟಿಯಲ್ಲಿ ನೂರ ಹತ್ತು ಮಂದಿಯರನ್ನು ಬಿಟ್ಟು ಮಿಕ್ಕ ಋಷಿಗಳು ಆಜಾನಜರಿಗಿಂತಲೂ ಕಮ್ಮಿಯೆನಿಸುವರು. ಅವರಿಗಿಂತಲೂ ಭೂರಿಪಿತೃಗಣರು ಕಮ್ಮಿ ಎನಿಸುವರೆಂಬ ತಾತ್ಪರ್ಯ. ಇವರುಗಳಿಗೆ ನಮಸ್ಕರಿಸುವೆನು. ಸದಾ ನಮಗೆ ಮಂಗಳವನ್ನು ಕೊಡಲಿ.

ಅವತಾರಿಕೆ.—ದೇವಗಂಧರ್ವರನ್ನು ಪ್ರಾರ್ಥಿಸುತ್ತಾರೆ.—

ಪಾವನಕೆ ಪಾವನವೆನಿಸುವ ರ
ಮಾ ವಿನೋದನ ಗುಣಗಣಂಗಳ
ಸಾವಧಾನದಲೇಕಮಾನಸರಾಗಿ ಸುಸ್ವರದಿ ।
ಆ ವಿಬುಧಪತಿ ಸಭೆಯೊಳಗೆ ನಾ
ನಾ ವಿಲಾಸದಿ ಪಾಡಿ ಸುಖಿಸುವ
ದೇವಗಂಧರ್ವರು ಕೊಡಲಿ ಎಮಗಖಿಳ ಪುರುಷಾರ್ಥ ॥೩೦॥

ಪದ್ಯಾರ್ಥ.— ಪಾವನಕೆಪಾವನವೆನಿಸುವ=ಪವಿತ್ರ ವಸ್ತುವನ್ನು ಪವಿತ್ರವನ್ನಾಗಿ ಮಾಡುವನೆಂದೆನಿಸುವ, ರಮಾವಿನೋದನ=ರಮಾದೇವಿಯರ, ವಿನೋದಕ್ಕೆ ಆಸ್ಪದವಾದ ಅಂದರೆ ರಮಾಪತಿಯಾದ ಶ್ರೀಹರಿಯ, ಗುಣಗಣಂಗಳ, ಸಾವಧಾನದಲಿ=ಅರ್ಥಾನುಸಂಧಾನುಪೂರ್ವಕವಾಗಿ, ಏಕಮಾನಸರಾಗಿ=ಏಕಾಗ್ರಚಿತ್ತದಿಂದ, ಸುಸ್ವರದಿ, ಆ ವಿಬುಧಪತಿ=ದೇವೇಂದ್ರನ ಸಭೊಯೋಳಗೆ, ನಾನಾವಿಲಾಸದಿ-ನಾನಾ ವಿಧವಾದ ಹಾವಭಾವವಿಲಾಸಗಳಿಂದ ಪಾಡಿಸುಖಿಸುವ ದೇವಗಂಧರ್ವರು, ಎಮಗೆ=ನಮಗೆ ಅಖಿಳ ಪುರುಷಾರ್ಥವನ್ನು ಕೊಡಲಿ.

ತಾತ್ಪರ್ಯ—ಇಂದ್ರನ ಸಭೆಯುಲ್ಲಿ ಪರಮಾತ್ಮನ ಗುಣಗಣಂಗಳನ್ನು ಅರ್ಥಜ್ಞಾನಪೂರ್ವಕ ಏಕಾಗ್ರಚಿತ್ತರಾಗಿ ಸುಸ್ವರದಿಂದಲೂ, ಹಾವಭಾವ ವಿಲಾಸ ಪ್ರದರ್ಶನಪೂರ್ವಕವಾಗಿ ಪಾಡಿ ಆನಂದಪಡುತ್ತಿರುವ ದೇವಗಂಧರ್ವರು ನಮಗೆ ಸಕಲ ಪುರುಷಾರ್ಥಗಳನ್ನು ಕೊಡಲಿ.

ಅವತಾರಿಕೆ.—ಮನುಷ್ಯಗಂಧರ್ವರನ್ನು ರಾಜರುಗಳನ್ನು ನಮಿಸುತ್ತಾರೆ.—

ಭುವನಪಾವನನೆನಿಪ ಲಕ್ಷ್ಮೀ
ಧವನಮಂಗಳ ದಿವ್ಯನಾಮ
ಸ್ತವನಗೈವ ಮನುಷ್ಯಗಂಧರ್ವರಿಗೆ ವಂದಿಸುವೆ ।
ಪ್ರವರಭೂಭುಜರುಳಿದು ಮಧ್ಯಮ
ಕುವಲಯಪರೆಂದೆನಿಸಿಕೊಂಬರ
ದಿವಸದಿವಸಗಳಲ್ಲಿ ನೆನೆವೆನುಕರಣಶುದ್ಧಿಯಲಿ ॥೩೧॥

ಪದ್ಯಾರ್ಥ.—ಭವನಪಾವನನೆನಿಪ-ಲೋಕಪವಿತ್ರನೆಂದು ಪ್ರಖ್ಯಾತನಾದ, ಲಕ್ಷ್ಮೀಧವನ - ಲಕ್ಷ್ಮೀಪತಿಯ, ಮಂಗಳ = ಮಂಗಳಕರವಾದ

ದಿವ್ಯನಾಮ=ದೇವತೆಗಳು, ಸ್ಮರಿಸಲು ಯೋಗ್ಯವಾದ ಭಗನನ್ನಾಮಗಳನ್ನು ಸ್ಮರಿಸುತ್ತಾ, ಸ್ತವನಗೈವ-ಸ್ತೋತ್ರಮಾಡುತ್ತಿರುವ, ಮನುಷ್ಯಗಂಧರ್ವರಿಗೆ ವಂದಿಸುವೆ, ಪ್ರವರಭೂಭುಜರುಳಿದು=ಪೃಥು ಭಗೀರಥ ಮೊದಲಾದ ಹಿಂದೆ ಹೇಳಿದ ಪ್ರಧಾನರಾಜರನ್ನು ಬಿಟ್ಟು ಉಳಿದ ಮಧ್ಯಮರಾದ, ಕುವಲಯಪರೆಂದೆನಿಸಿಕೊಂಬರ-ಭೂಮಿಪಾಲಕರೆಂದೆನಿಸಿಕೊಂಬ ರಾಜರುಗಳನ್ನು ದಿವಸದಿವಸಗಳಲ್ಲಿ-ಪ್ರತಿದಿವಸದಲ್ಲೂ, ಕರಣಶುದ್ಧಿಯಲಿ=ಅಂತಃಕರಣಶುದ್ಧಿಯಿಂದ, ನೆನೆವೆನು=ಸ್ಮರಿಸುವೆನು.

ತಾತ್ಪರ್ಯ.—ಲೋಕಮಂಗಳನಾದ ಶ್ರೀರಮಾಪತಿಯ ಮಂಗಳಕರವಾದ ದಿವ್ಯನಾಮ ಸ್ಮರಣೆ, ಅವರ ಸ್ತೋತ್ರ ಇವುಗಳನ್ನು ಸದಾ ಮಾಡುತ್ತಿರುವ ಮನುಷ್ಯಗಂಧರ್ವರಿಗೆ ನಮಸ್ಕರಿಸುವೆನು. ಹಿಂದೆ ಹೇಳಿದ ಕರ್ಮದೇವತೆಗಳ ಕಕ್ಷಕ್ಕೆ ಸೇರಿದ ಗಯ, ನಹುಷ ಮೊದಲಾದ ಪ್ರಧಾನರಾಜರನ್ನು ಬಿಟ್ಟು ಉಳಿದ ಮಧ್ಯಮರಾದವರುಗಳನ್ನು ಸದಾ ಸ್ಮರಿಸುವೆನು.

ಅವತಾರಿಕೆ.—ಮನುಷ್ಯೋತ್ತಮರನ್ನು ವಂದಿಸುತ್ತಾರೆ.—

ಶ್ರೀಮುಕುಂದನಮೂರ್ತಿಗಳ ಸೌ
ದಾಮಿನಿಯ ಓಲ್ ಹೃದಯವಾರಿಜ
ವ್ಯೋಮಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ ||
ಆ ಮನುಷ್ಯೋತ್ತಮರಪದಯುಗ
ತಾಮರಸಗಳಿಗೆರಗುವೆ ಸದಾ
ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತಜನತತಿಯ ||೩೨||

ಪದ್ಯಾರ್ಥ.-ಶ್ರೀಮುಕುಂದನ-ಮೋಕ್ಷಪ್ರದನಾದ ಶ್ರೀಹರಿಯ, ಮೂರ್ತಿಗಳ=ರಾಮಕೃಷ್ಣಾದಿ ಮೂರ್ತಿಗಳನ್ನು, ಸೌದಾಮಿನಿಯ ವೋಲ್=ಮಿಂಚಿನಂತೆ, ಹೃದಯವಾರಿಜವ್ಯೋಮಮಂಡಲಮಧ್ಯದಲಿ-ಹೃದಯಕಮಲದ ಆಕಾಶಮಂಡಲ ಮಧ್ಯದಲ್ಲಿ ಕಾಣುತಲಿ, ಮೋದಿಸುವ-ಆನಂದಪಡುತ್ತಿರುವ ಆ ಮನುಷ್ಯೋತ್ತಮರ, ಪದಯುಗತಾಮರಸಗಳಿಗೆ=ಪಾದದ್ವಂದ್ವ ಕಮಲಗಳಿಗೆ ಸದಾ, ಎರಗುವೆ=ನಮಸ್ಕಾರ ಮಾಡುವರು. ಪ್ರಣತಜನತತಿಯು=ನಮಸ್ಕರಿಸುವ ಜನಸಮೂಹವನ್ನು ಕಾಮಿತಾರ್ಥಗಳಿತ್ತು ಸಲಹಲಿ.

ತಾತ್ಪರ್ಯ.—ಹೃದಯಾಕಾಶಮಂಡಲದಲ್ಲಿ ಮಿಂಚಿನಂತೆ ಶೋಭಿಸುವ ಭಗವಂತನಮೂರ್ತಿಯನ್ನು ಕಾಣುತ್ತಾ ಆನಂದಪಡುತ್ತಿರುವ ಮನುಷ್ಯೋತ್ತಮರ ಪಾದಪದ್ಮಂಗಳಿಗೆ ನಮಸ್ಕರಿಸುವೆನು. ಅವರು ಸದಾ ಕಾಮಿತಾರ್ಥವನ್ನು ಇತ್ತು ಸಲಹಲಿ.

ಅವತಾರಿಕೆ.—ಮಧ್ವಮತಾವಲಂಬಿಗಳಾದ ಭಗವದ್ಭಕ್ತರನ್ನು ವಂದಿಸುತ್ತಾರೆ.—

**ಈ ಮಹೀಮಂಡಲದೊಳಿಹ ಗುರು**
**ಶ್ರೀಮದಾಚಾರ್ಯರ ಮತಾನುಗ**
**ರಾ ಮಹಾವೈಷ್ಣವರ ವಿಷ್ಣುಪದಾಬ್ಜ ಮಧುಕರರ ||**
**ಸ್ತೋಮ-ಕಾನಮಿಸುವೆನವರವರ**
**ನಾಮಗಳ ಪೇಳಳವೆ ಬಹುವಿಧ**
**ಯಾಮಯಾಮಂಗಳಲಿ ಬೋಧಿಸಲೆನಗೆ ಸನ್ಮತಿಯ ||೩೩||**

ಪದ್ಯಾರ್ಥ.—ಈ ಮಹೀಮಂಡಲದೊಳು-ಈ ಭೂಮಂಡಲದೊಳಗೆ ಇಹ=ಇರುವ, ಗುರು-ಜಗದ್ಗುರುವಾದ, ಶ್ರೀಮದಾಚಾರ್ಯರ, ಮತಾನುಗರಾದ, ವಿಷ್ಣುಪಾದಾಬ್ಜಮಧುಕರರ=ಪರಮಾತ್ಮನ ಪಾದಕಮಲದಲ್ಲಿ ಭ್ರಮರದಂತಿರುವ, ಆ ಮಹಾವೈಷ್ಣವರ, ಸ್ತೋಮ.ಕೆ=ಸಮೂಹಕ್ಕೆ, ಆನಮಿಸುವೆನು, ಅವರವರ, ನಾಮಗಳನು, ಪೇಳಲಳವೆ=ಹೇಳಲು ಸಾಧ್ಯವೆ ಬಹುವಿಧ-ಅನೇಕ ವಿಧರಾಗಿರುವರು. ಅವರೆಲ್ಲರೂ ಯಾಮಯಾಮಂಗಳಲಿ=ಪ್ರತಿ ಮೂರು ಘಂಟೆಗಳಿಗೊಮ್ಮೆ ಎನಗೆ ಸನ್ಮತಿಯ ಬೋಧಿಸಲಿ.

ತಾತ್ಪರ್ಯ.—ಈ ಭೂಮಿಯಲ್ಲಿರುವ ಶ್ರೀಮನ್ಮಧ್ವಮತಾವಲಂಬಿಗಳಾದ ಪರಮಾತ್ಮನ ಪಾದಕಮಲದಲ್ಲಿ ಭ್ರಮರದಂತಿರುವ ಮಹಾವೈಷ್ಣವರು ಬಹು ಜನರು. ಅವರವರ ಹೆಸರು ಹೇಳಲು ಯಾರಿಗೆ ಸಾಧ್ಯ? ಸಕಲ ಸದ್ವೈಷ್ಣವರಿಗೂ ವಂದಿಸುವೆನು. ಅವರು ಪ್ರತಿಯಾಮದಲ್ಲೂ ನನಗೆ ಸನ್ಮತಿಯನ್ನು ಬೋಧಿಸಲಿ.

ಅವತಾರಿಕೆ.—ತಾರತಮ್ಯರೂಪವಾದ ಈ ಸಂಧಿಯನ್ನು ಪಠಿಸುವವರಿಗೆ ಆಗುವ ಫಲವನ್ನು ಮುಂದಿನ ೨ ಪದ್ಯಗಳಿಂದ ಹೇಳಿರುತ್ತಾರೆ.—

ಮಾರನೈಯನ ಕರುಣಪಾರಾ
ವಾರ ಮುಖ್ಯಸುಪಾತ್ರರೆನಿಪ ಸ
ರೋರುಹಾಸನ ವಾಣಿರುದ್ರೇಂದ್ರಾದಿ ಸುರನಿಕರ ॥
ತಾರತಮ್ಯಾತ್ಮಕ ಸುಪದ್ಯಗ
ಳಾರು ಪಠಿಸುವರಾಜನರಿಗೆ ರ
ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ॥೩೪॥

ಪದ್ಯಾರ್ಥ.—ಮಾರನೈಯನ=ಮನ್ಮಥನ ತಂದೆಯಾದ ಶ್ರೀಹರಿಯು ಕರುಣ=ದಯೆ ಎಂಬ, ಪಾರಾವಾರ-ಸಮುದ್ರಕ್ಕೆ, ಮುಖ್ಯಸುಪಾತ್ರರೆನಿಪ =ಮುಖ್ಯವಾದ ಉತ್ತಮ ಪಾತ್ರರೆನಿಸುವ, ಸರೋರುಹಾಸನ=ಬ್ರಹ್ಮದೇವರು, ವಾಣಿ-ಸರಸ್ವತೀದೇವಿಯರು, ರುದ್ರಇಂದ್ರಾದಿ-ಇಂದ್ರ ಮೊದಲಾದ, ಸುರನಿಕರ=ದೇವತಾ ಸಮೂಹಗಳ, ತಾರತಮ್ಯಾತ್ಮಕ=ತಾರತಮ್ಯ ಸ್ವರೂಪವಾದ, ಸುಪದ್ಯಗಳ=ಈ ಉತ್ತಮ ಪದ್ಯಗಳನ್ನು, ಆರುಪಠಿಸುವರೋ ಆ ಜನರಿಗೆ, ರಮಾರಮಣನು, ಸರ್ವಕಾಲದಲಿ, ಈಪ್ಸಿತ-ಮನೋಭೀಷ್ಟವನ್ನು ಪೂರೈಸಲಿ.

ತಾತ್ಪರ್ಯ.—ಈ ಸಂಧಿಯಲ್ಲಿ ಕೇವಲ ಪರಮಾತ್ಮನ ಕರುಣಾಕಟಾಕ್ಷಕ್ಕೆ ಮುಖ್ಯ ಪಾತ್ರರಾದ ಬ್ರಹ್ಮ ರುದ್ರಾದಿ ದೇವತೆಗಳ ತಾರತಮ್ಯವನ್ನು ಹೇಳಿರುತ್ತದೆ. ಇಂತಹಾ ಸಂಧಿಯನ್ನು ಆರು ಶ್ರವಣ ಪಠಣಾದಿಗಳನ್ನು ಮಾಡುವರೋ ಅವರ ಮನೋಭೀಷ್ಟವನ್ನು ಶ್ರೀಹರಿಯು ಸರ್ವದಾ ಪೂರೈಸುವನು.

ಮೂರುಕಾಲಗಳಲಿ ಸ್ತುತಿಸೆ ಶ
ರೀರ ವಾಙ್ಮನ ಶುದ್ಧಿಮಾಳ್ಪದು
ದೂರಗೈಸುವದಖಿಳ ಪಾಪ ಸಮೂಹ ಪ್ರತಿದಿನವು ॥
ಚೋರ ಭಯ ರಾಜಭಯ ನಕ್ರ ಚ
ಮೂರು ಶಸ್ತ್ರ ಜಲಾಗ್ನಿ ಭೂತವು
ಘೋರಗಜ್ವರ ನರಕಭಯ ಸಂಭವಿಸದೆಂದೆಂದು ॥೩೫॥

ಪದ್ಯಾರ್ಥ.—ಮೂರುಕಾಲಗಳಲ್ಲಿ = ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ, ಸ್ತುತಿಸಿ=ಸ್ತೋತ್ರಮಾಡಲು, ಶರೀರವಾಙ್ಮನ ಶುದ್ಧಿಮಾಳ್ಪದು=ದೇಹವನ್ನೂ, ಮನಸ್ಸನ್ನೂ, ವಾಕ್ಯವನ್ನೂ, ಶುದ್ಧಿಮಾಡುವದು

ಅಖಿಳಪಾಪ ಸಮೂಹಗಳನ್ನು, ಪ್ರತಿದಿನವೂ, ದೂರಗೈಸುವದು=ದೂರ ಮಾಡುವದು, ಚೋರಭಯ, ರಾಜಭಯ, ನಕ್ರ=ಮೊಸಳೆ ಮೊದಲಾದ ವುಗಳ ಭಯ, ಚಮೂ ಅಂದರೆ ಸಾಮಾನ್ಯವಾಗಿ ಸೈನ್ಯಗಳಿಗೆ ಹೆಸರು. ಪ್ರಕೃತದಲ್ಲಿ ನಕ್ರಚಮೂ ಎನ್ನುವದರಿಂದ ಮೊಸಳೆ ಅದರಂತೆ ನೀರಿನೊಳಗೆ ವಾಸಮಾಡುವ ಮೀನು, ತಿಮಿಂಗಲಾದಿಗಳ ಸಮೂಹವೆಂದು ತಾತ್ಪರ್ಯ ಅವುಗಳ ಭಯವಾಗಲಿ, ಉರುಶಸ್ತ್ರ-ಬಲವಾದ ಶಸ್ತ್ರಗಳೆಂದರೆ ಆಯುಧ ಗಳ ಭಲವಾಗಲಿ, ಜಲ, ಅಗ್ನಿ, ಇವುಗಳ ಭಯವಾಗಲಿ, ಭೂತಗಳು, ಮಹೋರಗ=ದೊಡ್ಡ ಸರ್ಪಗಳು, ಜ್ವರಭಯ, ನರಕಭಯ ಮೊದಲಾದ ಯಾವ ವಿಧವಾದ ಭಯವು ಎಂದೆಂದೂ ಸಂಭವಿಸದು.

ಅವತಾರಿಕೆ:—ಗ್ರಂಥವನ್ನೂ, ಸಂಧಿಯನ್ನೂ ಮುಗಿಸುತ್ತಾ ಉಪಾಸ್ಯಮೂರ್ತಿಯೂ ಬಿಂಬರೂಪಿಯೂ ಆದ ಪರಮಾತ್ಮನನ್ನು ಪ್ರಾರ್ಥಿಸುತ್ತಾರೆ:—

ಜಯಜಯತು ತ್ರಿಜಗದ್ವಿಲಕ್ಷಣ
ಜಯಜಯತು ಜಗದೇಕಕಾರಣ
ಜಯಜಯತು ಜಾನಕಿರಮಣ ನಿರ್ಗತ ಜರಾಮರಣ ।
ಜಯಜಯತು ಜಾಹ್ನವಿಜನಕ ಜಯ
ಜಯತು ದೈತ್ಯಕುಲಾಂತಕ ಭವಾ
ಮಯಹರ ಜಗನ್ನಾಥವಿಠಲ ಪಾಹಿಮಾಂ ಸತತ ॥೩೩॥

ಪದ್ಯಾರ್ಥ.—ತ್ರಿಜಗದ್ವಿಲಕ್ಷಣ=ಮೂರು ಲೋಕದ ಪ್ರಾಣಿಗಳಿಂದ ಲಕ್ಷಣನು, ಭಿನ್ನನೆಂದರ್ಥ. ಇಂತಹಾ ಸ್ವಾಮಿಯು, ಜಯಜಯತು=ಜಯಶೀಲನಾಗಲಿ ಅಂದರೆ ತನ್ನ ಜಯವನ್ನು ಲೋಕದಲ್ಲಿ ಪ್ರದರ್ಶಿಸಲೆಂದರ್ಥ ಹಾಗಿಲ್ಲದಿದ್ದರೆ ನಿತ್ಯ ಜಯಶೀಲನಾದ ಪರಮಾತ್ಮನಿಗೆ ಜಯವಾಗಲಿ ಎಂಬ ಆಶೀರ್ವಚನ ರೂಪವು ಕೂಡುವುದಿಲ್ಲ. ಜಯವನ್ನು ತೋರಿಸೆಂದು ಪ್ರಾರ್ಥನೆ ಎಂದು ತಿಳಿಯಬೇಕು. ಜಗದೇಕಕಾರಣನು=ಪ್ರಪಂಚಕ್ಕೆ ಮುಖ್ಯ ಕಾರಣನು- ಜಯಜಯತು, ಜಾನಕಿರಮಣ=ಸೀತಾಕಾಂತನು, ಜಯ ಜಯ ನಿರ್ಗತಜರಾಮರಣ=ಜರಾಮರಣವಿಲ್ಲದವನು, ಜಾಹ್ನವಿ=ಗಂಗೆಯ ಜನಕ=ತಂದೆಗೆ ಜಯವಾಗಲಿ ಜಯವಾಗಲಿ, ದೈತ್ಯಕುಲಾಂತಕ-ಆ ಕ. ಲಕ್ಕೆ

ಮೃತ್ಯುವಾಗಿರುವವನು, ನಿನಗೆ ಜಯವಾಗಲಿ ಜಯವಾಗಲಿ! ಭವಾಮಯಹರ=ಸಂಸಾರವೆಂಬ ರೋಗವನ್ನು ಪರಿಹರಿಸುವ, ಎಲೈ ಜಗನ್ನಾಥ ವಿಠಲ! ಸತತ=ಸರ್ವಕಾಲದಲ್ಲೂ, ಮಾಂಪಾಹಿ=ನನ್ನನ್ನು ರಕ್ಷಿಸು.

ಎಂಬಲ್ಲಿಗೆ ಭಾವಪ್ರಕಾಶಿಕೆಯಲ್ಲಿ ೩೨ ನೆಯ ದೇವತಾ ತಾರತಮ್ಯ ಸ್ತೋತ್ರ ಸಂಧಿಯು ಸಮಾಪ್ತವಾದುದು.

ಶ್ರೀಜಗನ್ನಾಥದಾಸರಾಯ ಕೃತ ಹರಿಕಥಾಮೃತಸಾರವು
ಸಮಾಪ್ತವಾದುದು.



ಯಸ್ಸರ್ವ ಗುಣಸಂಪೂರ್ಣಸ್ಸರ್ವ ದೋಷ ವಿವರ್ಜಿತಃ ||
ಪ್ರಿಯತಾಂ ಪ್ರೀತ ಏವಾಲಂ ವಿಷ್ಣುರ್ಮೇ ಪರಮಃ ಸುಹೃತ್ ||
ಪ್ರಮೋದಾಬ್ದೇ ಮಾಘಕೃಷ್ಣೇ ಮಾಧವಸ್ಯ ದಿನೇ ಶುಭೇ ||
ಭಾವಪ್ರಕಾಶಿಕಾ ಚೇಯಂಲಿಖಿತಾ ಪೂರ್ಣತಾಮಗಾತ್ ||
ಪದ್ಮನಾಭೇನ ದಾಸೇನ ರಚಿತಾಹರ್ಯನುಗ್ರಹಾತ್ ||
ಗುರೋರನುಗ್ರಹಾಚ್ಚೈವ ಪ್ರಿಯತಾಂ ಕಮಲಾಪತಿಃ ||

ಇತಿ ಶ್ರೀಜಗನ್ನಾಥ ದಾಸಾರ್ಯ ಕೃತ ಹರಿಕಥಾಮೃತಸಾರಸ್ಯ
ಶ್ರೀಸುಬ್ಬರಾಯದಾಸಾರ್ಯ ಶಿಷ್ಯೇಣ ಪದ್ಮನಾಭದಾಸೇನ
ರಚಿತಾ ಭಾವಪ್ರಕಾಶಿಕಾ ಸಮಾಪ್ತಾ

|| ಶ್ರೀಕೃಷ್ಣಾರ್ಪಣಮಸ್ತು ||

